ಡಾ. ವಿಜಯಾ ಸುಬ್ಬರಾಜ್ ಅವರ
ಸಮಗ್ರ ಕಾದಂಬರಿಗಳು

# ಕಾದಂಬರಿ ಲೋಕ

ಗಾಜು ಮತ್ತು ವಜ್ರದ ನಡುವೆ
ಅಜಗಜಾಂತರ ವ್ಯತ್ಯಾಸವಿದೆ.
ಆದರೆ ನೋಡುವುದಕ್ಕೆ ಎರಡೂ
ಒಂದೇ ಎಂಬಂತೆ ಕಾಣಿಸುತ್ತದೆ.
ಎರಡೂ ಗಾಜಿನ ತುಂಡುಗಳೆಂಬ
ಭಾವನೆ ಬರುತ್ತದೆ.

ಡಾ. ವಿಜಯಾ ಸುಬ್ಬರಾಜ್ ಅವರ ಸಮಗ್ರ ಕಾದಂಬರಿಗಳು

# ಕಾದಂಬರಿ ಲೋಕ

ಡಾ. ವಿಜಯಾ ಸುಬ್ಬರಾಜ್

ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಬೆಂಗಳೂರು

**KADAMBARI LOKA**

By:
**Dr. Vijaya Subbaraj**
# 51, Hamsi, 1-A Cross
35th Main, Banagirinagara
Banashankari 3rd Stage
Bangalore - 560085
Phone : 080-26793219

Published by
**Kanva Publications Pvt Ltd.**
"Kaala Kanasu", No.894
1 st Main, Nisarga Badavane
Chandra Layout
Bengaluru - 560 072
Ph : 080 - 23426778
E-mail : giriraju@kanvaprakashana.com
web : www.kanvaprakashana.com

**Publisher: M.R.Giriraju**
M : 98450 52481



First Impression : 2011
Price : Rs.400/-
Pages : XIV+642=656
ISBN : 978-81-921226-0-1

Paper Used : 70 GSM Maplitho
Book Size : Demy 1/8
Cover page Art : ***Vishwanath Shettigar***

Printed At
**Annapoorna Printers and Publishers**
No. 132, III Main, 6th Cross
II Phase, Manjunatha Nagar
Bangalore - 10

# ಅರ್ಪಣೆ

ಸಾಹಿತ್ಯಲೋಕದ ಸಮಸ್ತ
ಚೇತನಗಳಿಗೆ
ಕೃತಿ ಹೊರಬರಲು ಸ್ಫೂರ್ತಿ
ನೀಡಿದ ನನ್ನೆಲ್ಲ
ಆತ್ಮೀಯರಿಗೆ

# ಮೊದಲ ಮಾತಾಗಿ ಒಂದಷ್ಟು ವಿಚಾರಗಳು

ಈಗ ಹೊರಬರುತ್ತಿರುವ 'ಕಾದಂಬರಿ ಲೋಕ' ನನ್ನ ಈವರೆಗಿನ ಐದು ಕಾದಂಬರಿಗಳ (ಅನುವಾದವೂ ಸೇರಿದಂತೆ) ಒಂದು ಸಮಗ್ರ ಸಂಪುಟ. ಈ ಸಂಪುಟದಲ್ಲಿ ಸೇರಿರುವ ಕಾದಂಬರಿಗಳ ಹಿಂದೆ ಪ್ರತ್ಯಕ್ಷ ಅನುಭವಕ್ಕೆ ಬಂದ ವಾಸ್ತವ ಸಂಗತಿಗಳು ಮತ್ತು ನನ್ನ ಮೆಚ್ಚಿಗೆಯ ಮನಃಸ್ಥಿತಿಗಳು ಉಂಟುಮಾಡಿರುವ ಒತ್ತಡಗಳು ಕೆಲಸಮಾಡಿವೆ. ಮೊದಲ ಮೂರು ಕಾದಂಬರಿಗಳು, ನನ್ನನ್ನು ಪ್ರಭಾವಿಸಿದ, ಬೆರಗಿಗೆ ಈಡು ಮಾಡಿದ ಪ್ರಶ್ನೆಗಳಿಗೆ, ಚಿಂತನೆಗೆ, ಜಿಜ್ಞಾಸೆಗೆ ದೂಡಿದ ವ್ಯಕ್ತಿಗಳು, ಘಟನೆಗಳು ಕಲ್ಪನೆಯ ಆವರಣದೊಳಗೆ ವಿಸ್ತೃತವಾಗಿ ಹಿಗ್ಗಿ, ಕಥಾವಸ್ತುವಾಗಿ ಕಾದಂಬರಿ ಸ್ವರೂಪವನ್ನು ಪಡೆದಿವೆ. ಮೂವತ್ತು ವರ್ಷಗಳ ಹಿಂದೆ ಬರೆದ ಈ ಕಾದಂಬರಿಗಳು ಬಹುಶಃ ಇವತ್ತಿನ ಸಂದರ್ಭದಲ್ಲಿ ಕೆಲವರಿಗೆ ಅಪ್ರಸ್ತುತವೂ ಹಳೇಕಾಲದ ಕತೆಯಾಗಿಯೂ ಅನಿಸಬಹುದಾದರೂ ನನ್ನ ದೃಷ್ಟಿಯಲ್ಲಿ ವಿಶೇಷವಾಗಿ ನನ್ನ ಎರಡು ಕಾದಂಬರಿಗಳು 'ಹರಿದತ್ತ ಹರಿವ ಚಿತ್ತ', 'ಬುವಿಯಿಂದ ಬಾನಿಗೆ' ಕಾದಂಬರಿಯ ವಸ್ತು, ವಿವರಗಳು, ಈಗ ದೂರದರ್ಶನದ ಚಾನೆಲ್ ಒಂದರಲ್ಲಿ ಬರುತ್ತಿರುವ 'ಹೀಗೂ ಉಂಟೆ' ಕಾರ್ಯಕ್ರಮದಲ್ಲಿ ಕಾಣಿಸಿಕೊಳ್ಳುತ್ತಿರುವ, ನಂಬಲಾಗದ ವಿಸ್ಮಯಕಾರಿ ಘಟನೆಗಳು. ವ್ಯಕ್ತಿಗಳು, ಪವಾಡಗಳು – ಇವುಗಳಿಗಿಂತ ಭಿನ್ನವಾಗೇನೂ ಅನಿಸುವುದಿಲ್ಲ. ಹಾಗೆ ನೋಡಿದರೆ ನನ್ನ ಈ ಎರಡೂ ಕಾದಂಬರಿಗಳ ನಾಯಕ 'ಶಂಕರ' ಬದುಕಿದ್ದಾಗ ಯಾರಿಗೂ ಏನೂ ಪವಾಡಗಳನ್ನು ಪ್ರದರ್ಶಿಸಿದ್ದಿಲ್ಲ. ಗುರೂಜಿ ಎಂದಾಗಲೀ, ಸ್ವಾಮಿಗಳು ಎಂದಾಗಲೀ, ಬಾಬಾ ಎಂದಾಗಲೀ ತನ್ನನ್ನು ಬಿಂಬಿಸಿಕೊಂಡದ್ದಿಲ್ಲ. ಆದರೆ ಅವನ ಸಾವಿನ ನಂತರ ಸಂಭವಿಸಿದ ಘಟನೆಗಳು ಪವಾಡ ಸದೃಶವಾದದ್ದೇ ನನ್ನನ್ನು ಅತ್ಯಂತ ವಿಸ್ಮಯಕ್ಕೆ, ಚಿಂತನೆಗೆ ದೂಡಿದ್ದು! – ಎಂದರೆ ಅತಿಶಯೋಕ್ತಿಯಲ್ಲ.

ಕರ್ನಾಟಕ, ಆಂಧ್ರದ ಗಡಿಯಲ್ಲಿನ ಬೀರಂಗಿ ಕೊತ್ತಕೋಟ ಎಂಬುದೊಂದು ಕುಗ್ರಾಮ. ಆ ಕುಗ್ರಾಮಕ್ಕೆ ಸೊಸೆಯಾಗಿ ಹೋದದ್ದು ಒಂದು ವಿಸ್ಮಯವೂ ಹೌದು; ವಿಪರ್ಯಾಸವೂ ಹೌದು. ಯಾವುದೇ ವಾಹನ ಸೌಕರ್ಯವಿಲ್ಲದ, ಶಾಲಾ ಕಾಲೇಜುಗಳಿಲ್ಲದ, ಹಾಲು ಹೈನಿಗೂ ಬರವಾದ ಇಂತಹ ಊರಿನಲ್ಲಿ ಮರಣೋತ್ತರ

ಪವಾಡ ಪುರುಷನಾದ 'ಶಂಕರ' ನನ್ನಲ್ಲಿ ಹಲವು ಪ್ರಶ್ನೆಗಳ ಬಿರುಗಾಳಿಯನ್ನು ಎಬ್ಬಿಸಿದ.

ಮದುವೆಯಾಗಿ, ಹೊಸದಾಗಿ ಅತ್ತೆ ಮನೆಗೆ ಹೋಗಿದ್ದಾಗ, ಸ್ವತಃ ಕೈಯಾರೆ ಈ ವ್ಯಕ್ತಿಗೆ ಊಟ ನೀಡಿದ್ದಿದೆ; ಕೊಳಕು ಕೊಳಕು ಬಟ್ಟೆ ಧರಿಸಿ ಅಸಂಬದ್ಧವಾಗಿ ಮಾತನಾಡಿದ್ದನ್ನು ಕೇಳಿದ್ದಿದೆ. ಇಂತಹ ಒಬ್ಬ ಉಂಡಾಡಿ, ಊರಿನವರ ಕೃಪಾ ಭಿಕ್ಷೆಯಿಂದ ಜೀವಂತವಾಗಿದ್ದ, ಸೌಮ್ಯ ಮನಸ್ಸಿನ ಸ್ನೇಹಪರ, ನಿರುಪದ್ರವಿ ವ್ಯಕ್ತಿ, ಎರಡು ತಿಂಗಳ ನಂತರ ಇಲ್ಲವಾದದ್ದು. ಮತ್ತೆ ಎರಡನೇ ಬಾರಿ ಊರಿಗೆ ಭೇಟಿ ಕೊಟ್ಟಾಗ, ಆ ಕುಗ್ರಾಮದ ಚಹರೆಯೇ ಬದಲಾದದ್ದು, ಅವನ ಸಮಾಧಿ ಒಂದು ಗುಡಿಯಾಗಿ ರೂಪಾಂತರಗೊಂಡದ್ದು, ಆ ಪರಿಸರವೆಲ್ಲ ಸಂತೆ ಪೇಟೆಯಾಗಿ ಮಾರ್ಪಾಡಾದದ್ದು, ಸರ್ಕಾರಿ ಬಸ್ಸುಗಳ ಓಡಾಟ ಶುರುವಾದದ್ದು ಅವನ ಮಹಿಮೆಗೆ ಸಂಬಂಧಿಸಿದ ನೂರಾರು ಕತೆಗಳು ಹುಟ್ಟಿಕೊಂಡದ್ದು, ತಿರುಪತಿ ತಿಮ್ಮಪ್ಪನ ಕಾಣಿಕೆಗೆ ಸಮಾನವಾಗಿ, ಕೆಲವೊಮ್ಮೆ ಅದನ್ನೂ ಮೀರುವಷ್ಟು ಕಾಣಿಕೆ ಪ್ರಮಾಣ, ರಾಶಿ ರಾಶಿ ಹಣ!....... ಹೀಗೆ ಎಷ್ಟೊಂದು ವಿಚಿತ್ರ ಸಂಗತಿಗಳು ಪವಾಡದಂತೆ ನಡೆದು ಹೋದ್ದು, ನನ್ನನ್ನು ದಿಗ್ಭ್ರಮೆಗೆ ಒಳಪಡಿಸಿತೆಂದರೆ ಅತಿಶಯೋಕ್ತಿಯೆಂದು ಖಂಡಿತ ಭಾವಿಸಬಾರದು.

ಹಿಂದು ಮುಂದುಗಳು ತಿಳಿಯದ ಒಬ್ಬ ಅಪರಿಚಿತ ಅನಾಥವ್ಯಕ್ತಿ ಆ ಊರಿನೊಂದಿಗೆ, ಊರಿನ ಜನಮಾನಸದೊಂದಿಗೆ ಬೆರೆತು ಬದುಕಿದ್ದೂ ಕೂಡಾ ಅಚ್ಚರಿಯ ಸಂಗತಿಯೇ!

ಬದುಕಿದ್ದಾಗ ಎಂದೋ ಒಮ್ಮೊಮ್ಮೆ ಹುಕಿ ಬಂದಾಗ, ಯಾವುದೋ ಒಂದು ಅಂತಃಶಕ್ತಿಯ ಪ್ರೇರಣೆಯಿಂದ, ಪ್ರತ್ಯಕ್ಷವಾಗಿ ತಾನು ಕಂಡಂತೆ ವಿವರಿಸಿ ಹೇಳುತ್ತಿದ್ದ ಮಾತುಗಳು, ಭವಿಷ್ಯವಾಣಿಯಂತೆ ನುಡಿಯುತ್ತಿದ್ದಂತಹವು ಕೇಳುಗರಿಗೆ ತೀರಾ ತೀರಾ ಅಸಂಬದ್ಧ ಮತ್ತು ಅರ್ಥಹೀನ ಎನಿಸುತ್ತಿದ್ದಂತಹವು, ಅವನ ಸಾವಿನ ನಂತರ ಸತ್ಯವಾಗಿ ಸಾಬೀತುಗೊಂಡವು; ಸಾಕಾರ ಪಡೆದವು. ಇವೆಲ್ಲ ಪವಾಡ ಸದೃಶವಾಗಿ ಸಂಭವಿಸುತ್ತಿದ್ದಂತೆಯೇ ರಾಷ್ಟ್ರಾದ್ಯಂತ ಈ ಹುಚ್ಚು ಶಂಕರನ ಮಹಿಮೆ ವ್ಯಾಪಿಸಿ ಬಿಟ್ಟಿತು. ಲಕ್ಷಾಂತರ ಸಂಖ್ಯೆಯಲ್ಲಿ ಭಕ್ತಾದಿಗಳ ಜಾತ್ರೆ ಸೇರತೊಡಗಿತು. ವಿಶೇಷವಾಗಿ ಬಸ್ಸುಗಳನ್ನು ರಾಷ್ಟ್ರದ ಎಲ್ಲ ರಾಜ್ಯಗಳಿಂದ ವ್ಯವಸ್ಥೆ ಮಾಡಲಾಗಿತ್ತು. ಹರಕೆಗಳು ಸಫಲಗೊಂಡವು; ಅಪರಿಹಾರ್ಯ ರೋಗಗಳು ವಾಸಿಯಾದವು; ಭೂತ ಪ್ರೇತ ಪೀಡಿತರಿಗೆ ಅವುಗಳ ಕಾಟದಿಂದ ಮುಕ್ತಿ ದೊರೆಯಿತು; ಜನ ಮರುಳೋ ಜಾತ್ರೆ ಮರುಳೋ ಎಂಬಂತಾಯಿತು. ಭೂತ ಚೇಷ್ಟೆಯಿಂದ ಭಯಂಕರವಾಗಿ ವರ್ತಿಸುತ್ತಿದ್ದವರು ತಮ್ಮರಿವಿಲ್ಲದಂತೆ ಮರಹತ್ತಿ ಕುಳಿತವರು ಭೂತಕಾಟದಿಂದ ಬಿಡುಗಡೆ ಹೊಂದಿದ ಕೂಡಲೇ, ತಾವು ಮರ ಹತ್ತಿದ್ದು ಹೇಗೆಂದು ಅಚ್ಚರಿ ಪಟ್ಟದ್ದೇ ಅಲ್ಲದೆ ಇಳಿಸಲು ಬೇಡಿಕೊಳ್ಳುತ್ತಿದ್ದರು! ವಿಚಿತ್ರ ರೀತಿಯ ವರ್ತನೆಗಳು; ಭಜನೆಗಳು; ಆವಾಹನೆಗೆ ಒಳಗಾದವರಿಂದ ಭವಿಷ್ಯವಾಣಿ!!

ನಂಬಲಾಗದ ಅಸಂಖ್ಯ ಸಂಗತಿಗಳ ಗೂಡಾದ ಆ ಊರು, ಆ ಶಂಕರ ಕಲಾವಿದರನ್ನು, ಚಿತ್ರನಿರ್ಮಾಪಕರನ್ನು ಎಳೆದು ತರುವಂತಾಯಿತೆಂದರೆ, ಅನೂಹ್ಯ ಅಮೂರ್ತ ಶಕ್ತಿಗಳ ಮಹಿಮೆಯ ಬಗೆಗೆ ನಂಬಿಕೆ ಬೇಕೇ ಬೇಡವೇ ಎನ್ನುವುದೇ ನನ್ನನ್ನು ಬಹುವಾಗಿ ಕಾಡಿತು. ಪ್ರಶ್ನೆಗೆ ಉತ್ತರ ಬಹುಶಃ ಸಿಗಲಾರದೇನೋ ಎನಿಸಿತು. ಪ್ರತ್ಯಕ್ಷವಾಗಿ ನನ್ನ ಕಣ್ಣಮುಂದೆಯೇ ಇಷ್ಟೆಲ್ಲ ನಡೆಯುತ್ತಿದ್ದಾಗ, ನನ್ನ ಸೃಜನಶೀಲ ಮನಸ್ಸು ನೆಮ್ಮದಿಯಿಂದ ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ. ವಾಸ್ತವದ ಸುತ್ತ ವದಂತಿಗಳನ್ನು ಆಧರಿಸಿ, ವಿಸ್ತೃತವಾದ ಕಲ್ಪನೆಯ ಜಾಲವನ್ನು ಹೆಣೆದು ಅದಕ್ಕೊಂದು ಕಾದಂಬರಿ ರೂಪಕೊಟ್ಟೆ. ಎಪ್ಪತ್ತೊಂಬತ್ತರಲ್ಲಿ ನನ್ನ ಸಹೋದ್ಯೋಗಿ ಮಿತ್ರ ಅರಳು ಮಲ್ಲಿಗೆ ಪಾರ್ಥಸಾರಥಿ ಪುಟಸಂಖ್ಯೆ ಹೆಚ್ಚಾದ ಕಾರಣ, ಮೊದಲರ್ಧವನ್ನು 'ಸೌರಭಸೇತು' ಹೆಸರಿನಲ್ಲಿ ಪ್ರಕಟಿಸಿದ. ನಂತರ ಎಷ್ಟೋ ಕಾಲದ ಅಂತರದ ನಂತರ ಉಳಿದರ್ಧವನ್ನು ಹೇಮಂತಸಾಹಿತ್ಯ ಪ್ರಕಾಶನದ ವೆಂಕಟೇಶ್ ಅವರು 'ಬುವಿಯಿಂದ ಬಾನಿಗೆ' ಹೆಸರಿನಲ್ಲಿ ಪ್ರಕಟಿಸಿ ಕಾದಂಬರಿಗೊಂದು ಪೂರ್ಣತೆಯನ್ನು ಕಲ್ಪಿಸಿದರು.

ಅದಕ್ಕೂ ಮೊದಲು ಬಂದ 'ತಪ್ಪಿದ ಹೆಜ್ಜೆಗಳು' ಮತ್ತೊಂದು ರೀತಿಯಲ್ಲಿ ಕಾಡಿದ ಹೆಣ್ಣಿನ ಕತೆಯಾಗಿದೆ. ಸಂಪ್ರದಾಯದ ಚೌಕಟ್ಟಿನಲ್ಲಿ ಪಾತಿವ್ರತ್ಯದ ಬಂಧನದಲ್ಲಿ, ಗೃಹಿಣೀ ಗೃಹ ಮುಚ್ಯತೆ ಎಂಬಂತೆ ಬಾಳಬೇಕೆಂದು ನಿರೀಕ್ಷಿಸುವ ಸಮಾಜದ ಮಧ್ಯೆ, ಪ್ರೀತಿ, ಪ್ರೇಮಗಳ ಬೆನ್ನಿಗೆ ಬಿದ್ದು, ಮನೆಯಿಂದ ಓಡಿ ಹೋಗಿ, ಮದುವೆಯಾದ ಹೆಣ್ಣೊಬ್ಬಳು, ಕ್ರಮೇಣ ಗಂಡನ ಕೆಟ್ಟ ಚಟಗಳಿಂದಾಗಿ ಮತ್ತು ತನ್ನದೇ ವೈಯಕ್ತಿಕ ದೌರ್ಬಲ್ಯಗಳಿಂದಾಗಿ, ನೈತಿಕತೆ, ಸಂಬಂಧಗಳನ್ನು ಬದಿಗಿಕ್ಕಿ ತನ್ನ ಐಷಾರಾಮಿ ಬದುಕಿನ ಮೋಹದಿಂದಾಗಿ ವಿಲಾಸ ಪ್ರೀತಿಯಿಂದಾಗಿ ಗಂಡುಗಳನ್ನು ಕೇವಲ ತನ್ನ ಆಸೆ ಆಕಾಂಕ್ಷೆಗಳ ಪೂರೈಕೆಗಾಗಿ ಮಾತ್ರ ಬಳಸಿಕೊಳ್ಳುವ ಸಾಧನಗಳಾಗಿ ಭಾವಿಸುವ ರಭಸದಲ್ಲಿ ಮುಗ್ಧ ಗಂಡಸೊಬ್ಬನ (ಗಂಡನ ಸಂಬಂಧಿಯೂ ಆದ) ಕುಟುಂಬದಲ್ಲಿನ ಶಾಂತಿ, ಸಮಾಧಾನಗಳನ್ನು ಕದಡುವುದೇ ಅಲ್ಲದೆ ಕಡೆಗೆ ತಾನೇ ತನ್ನ ವಿಕ್ಷುಬ್ಧ, ಅಸಹಾಯಕ ಸ್ಥಿತಿಗೆ ಹೇಸಿ ಆತ್ಮಹತ್ಯೆಗೆ ಒಳಗಾಗುವ ದುರಂತದ ಕತೆಯಾಗಿದೆ.

ಈ ಕತೆಯೂ ಕೂಡಾ ನನಗೆ ತೀರಾ ಹತ್ತಿರವಾಗಿದ್ದವರ ಬದುಕಿನಲ್ಲಿ ಸಂಭವಿಸಿದ ಘಟನೆಗಳ ವಾಸ್ತವದ ಚಿತ್ರಣವೇ ಆಗಿದೆ.

ಈ 'ಕಾದಂಬರಿ ಲೋಕ'ದ ಉಳಿದೆರಡು ಕಾದಂಬರಿಗಳು ಅನುವಾದಿತ ಕೃತಿಗಳಾಗಿವೆ. ಒಂದು ಚೀನಿ ಭಾಷೆಯಿಂದ ಮತ್ತೊಂದು ಹಿಂದಿ ಭಾಷೆಯಿಂದ. ಈ ಎರಡೂ ಕಾದಂಬರಿಗಳು ಆಯಾ ಭಾಷಾ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಕೃತಿಗಳಾಗಿವೆ. ಅಲ್ಲದೆ ಎರಡೂ ಕಾದಂಬರಿಗಳ ವಸ್ತು ತೀರಾ ವಿಶಿಷ್ಟವೂ ವಿಭಿನ್ನವೂ ಆಗಿದ್ದು ನನ್ನನ್ನು ಬಹುವಾಗಿ ಆಕರ್ಷಿಸಿದ ಕಾರಣ ಕನ್ನಡಕ್ಕೆ ತರುವ ಪ್ರಯತ್ನ ಮಾಡಿದ್ದೇನೆ.

'ನಡುವಯಸ್ಸಿನಲ್ಲಿ' ಕಾದಂಬರಿಯ ಲೇಖಕಿ ಷೆನ್‌ರೊಂಗ್ ಚೀನಿ ಸಾಹಿತ್ಯದ ಅತ್ಯಂತ ಮಹತ್ವದ ಲೇಖಕಿ. ಅವಳ ಈ ಕೃತಿ ಎಷ್ಟು ಜನಪ್ರಿಯವಾಗಿದೆಯೆಂದರೆ, ಪ್ರಕಟವಾಗುತ್ತಿದ್ದಂತೆಯೇ ೩ ಮಿಲಿಯ (ಮಿಲಿಯನ್) ಪ್ರತಿಗಳು ಮಾರಾಟವಾಗಿವೆ. ಅಲ್ಲದೆ ಈ ಕಾದಂಬರಿ ಆಧರಿಸಿ ಒಂದು ಚಲನಚಿತ್ರವೂ ಕೂಡಾ ಆಗಿದೆ.

ಇಲ್ಲಿನ ಕಥಾನಾಯಕಿ ಡಾ.ಲೂ ನಿಷ್ಠಾವಂತ ವೈದ್ಯೆ. ಅತ್ಯಂತ ಸಮರ್ಥ ಕಣ್ಣಿನ ಸರ್ಜನ್. ಬಿಡುವಿಲ್ಲದ ದುಡಿತ. ಅವಳ ಸೇವಾಬದ್ಧತೆ, ರೋಗಿಗಳ ಬಗ್ಗೆ ತೋರುತ್ತಿದ್ದ ಕಾಳಜಿ, ಪ್ರೀತಿಗಳು, ಸರ್ಜರಿ ಕ್ರಿಯೆಯಲ್ಲಿ ತೋರುತ್ತಿದ್ದ ನೈಪುಣ್ಯತೆ, ಕರ್ತವ್ಯ ನಿಷ್ಠೆಗಳಿಂದಾಗಿ ಕುಟುಂಬದ ಬಗ್ಗೆ, ಗಂಡ ಮಕ್ಕಳ ಬಗ್ಗೆ ಗಮನ ಕೊಡಲಾಗದಿದ್ದುದಕ್ಕಾಗಿ ಅವಳು ಮಾನಸಿಕ ಯಾತನೆಯನ್ನು ಅನುಭವಿಸುತ್ತಾಳೆ. ಗಂಡನ ಸಹಕಾರವೆಷ್ಟೇ ಇದ್ದರೂ, ತಾನು ಸರಿಯಾಗಿ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಲಾಗುತ್ತಿಲ್ಲವೆಂಬ ಕೊರಗು ದೈಹಿಕವಾಗಿಯೂ ಅವಳನ್ನು ಜರ್ಝರಿತಳನ್ನಾಗಿ ಮಾಡುತ್ತದೆ. ಆದರೂ ಕುಟುಂಬ, ಕರ್ತವ್ಯಗಳ ಹೊರೆಯನ್ನು ತೂಗಿಸಿಕೊಂಡು ಮುಂದುವರೆದು ಒಬ್ಬ ಸಮರ್ಥ ಸರ್ಜನ್ ಎಂದು ಖ್ಯಾತಿಗಳಿಸುತ್ತಾಳೆ. ಈ ಕಾದಂಬರಿಯ ಮೂಲಕವೇ ಒಂದು ಹೆಣ್ಣಿನ ಸಂದಿಗ್ಧಗಳು, ಸಂಕಟಗಳು, ಹೋರಾಟಗಳು, ಸಾಂಸ್ಕೃತಿಕ ತಲ್ಲಣಗಳು, ಚೀನೀ ಸಮಾಜದಲ್ಲಿ ಹೆಣ್ಣಿನ ಸ್ಥಿತಿಗತಿಗಳು, ಅವಳ ಬಗೆಗಿನ ಪುರುಷ ಧೋರಣೆಗಳು ಹೇಗಿದ್ದುವೆಂಬುದರ ಸ್ಪಷ್ಟ ಚಿತ್ರಣ ಮೂಡುತ್ತದೆ. ಈ ಕಾರಣಕ್ಕಾಗಿಯೇ ನಾನು ಇದನ್ನು ಅನುವಾದಿಸಿ, ಕನ್ನಡ ಕಾದಂಬರಿ ಜಗತ್ತಿಗೆ ನೀಡಿದ್ದೇನೆ.

ಕಡೆಯದಾದ 'ಶಾಲ್ಮಲಿ' ಹಿಂದಿ ಸಾಹಿತ್ಯದಲ್ಲಿ, ಅದರಲ್ಲೂ ಮಹಿಳಾ ಸಾಹಿತ್ಯ ಸಂದರ್ಭದಲ್ಲಿ ಅತ್ಯಂತ ಮಹತ್ವದ ಲೇಖಕಿಯೆಂದು ಗುರುತಿಸಿಕೊಂಡಿರುವ ನಾಸಿರಾಶರ್ಮಾರ ಮೂಲ ಕಾದಂಬರಿ 'ಶಾಲ್ಮಲಿ'ಯ ಅನುವಾದವಾಗಿದೆ. 'ಸ್ತ್ರೀವಾದಿ' ಚಿಂತನೆಗಳ ಹಿನ್ನೆಲೆಯಲ್ಲಿ ಇದೊಂದು ಮಹತ್ವದ ಕೃತಿಯಾಗಿದೆ. ಸ್ತ್ರೀ ಚಿಂತಕರು ಬಯಸುವ ಸ್ತ್ರೀ ಸ್ವಾತಂತ್ರ್ಯ, ತಮ್ಮದೇ ಆದ ಅನನ್ಯತೆ, ಬೌದ್ಧಿಕ ಮಾನಸಿಕ ವಿಕಾಸಗಳ ಅನಿವಾರ್ಯತೆಯನ್ನು ಎತ್ತಿ ಹಿಡಿಯುತ್ತಲೇ ಗಂಡು-ಹೆಣ್ಣಿನ ನಡುವಿನ ಸಂಬಂಧಗಳ ಸೂಕ್ಷ್ಮ ವಿಶ್ಲೇಷಣೆಗೆ ತೊಡಗುವ ಕಾದಂಬರಿ ನಾಯಕಿ 'ಶಾಲ್ಮಲಿ' ಕುಟುಂಬದಲ್ಲಿ ಗಂಡ-ಹೆಂಡತಿಯ ನಡುವಿನ ವಿರಸ, ಸಂಘರ್ಷಗಳಿಗೆ, ವಿಚ್ಛೇದನವನ್ನು ಪರಿಹಾರವಾಗಿ ಸೂಚಿಸದೆ, ಸಂಬಂಧಗಳನ್ನು ಹೇಗೆ ಮುಂದುವರೆಸಿಕೊಂಡು ಹೋಗಲು ಸಾಧ್ಯವಿದೆ ಎಂಬುದನ್ನು ಸೂಕ್ಷ್ಮವಾಗಿ ಹೇಳುತ್ತಾರೆ.

"ಗಂಡು-ಹೆಣ್ಣಿನ ನಡುವಿನ ಘರ್ಷಣೆಗೆ ಅವರಲ್ಲಿನ ವ್ಯತ್ಯಾಸಗಳೇ ಕಾರಣ. ಆದರೆ ಈ ಬಗೆಯ ಘರ್ಷಣೆ ಗಂಡು-ಹೆಣ್ಣಿಗಷ್ಟೇ ಸೀಮಿತವಾಗದೆ ಅದರ ಆಚೆಗೂ ವಿಸ್ತರಿಸುತ್ತದೆ. ಮನುಷ್ಯ ಸ್ವಭಾವದಲ್ಲಿನ ಒಳಿತು ಕೆಡುಕುಗಳ ನಡುವಿನ ಘರ್ಷಣೆಯಾಗಿಯೂ ಪರಿಣಮಿಸುತ್ತದೆ. ಗಾಜು ಮತ್ತು ವಜ್ರದ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಆದರೆ ನೋಡುವುದಕ್ಕೆ

ಎರಡೂ ಒಂದೇ ಎಂಬಂತೆ ಕಾಣಿಸುತ್ತವೆ. ಎರಡೂ ಗಾಜಿನ ತುಂಡುಗಳೆಂಬ ಭಾವನೆ ಬರುತ್ತದೆ. ಮನುಷ್ಯ ಕೋಟಿಯ ಸ್ವಭಾವ ಮತ್ತು ಮನುಷ್ಯ ಪ್ರಮಾಣದಲ್ಲಿ ಪರಸ್ಪರ ಭಿನ್ನತೆಗಳಿರುತ್ತವೆ. ಕೇವಲ ಹೆಣ್ಣು-ಗಂಡುಗಳ ಪ್ರಶ್ನೆಗೆ ಸೀಮಿತವಾದುದಲ್ಲ. ಶೋಷಣೆ, ಅತ್ಯಾಚಾರಗಳು ಜಾತಿ, ವರ್ಗಗಳಲ್ಲಿನ ವ್ಯತ್ಯಾಸಗಳಲ್ಲೂ ಅಡಕವಾಗಿವೆ. ಹೆಣ್ಣೇ ಹೆಣ್ಣಿನ ಮೇಲೆ ಅತ್ಯಾಚಾರ ನಡೆಸಬಹುದು, ಶೋಷಣೆ ಮಾಡಬಹುದು. ಹಾಗೆಯೇ ಒಳಗಾಗಲೂಬಹುದು. ಆದರೆ ಇಂತಹ ಸನ್ನಿವೇಶಗಳು ಅಪರೂಪವಾಗಿ ಕಣ್ಣಿಗೆ ಬೀಳುತ್ತವೆ. ಯಾಕೆಂದರೆ ಅವಳ ಕೈಗೆ ಅಧಿಕಾರ ಬರುವುದೇ ಎಂದೋ ಒಮ್ಮೊಮ್ಮೆ!"

-ಎಂಬುದು ಅವಳ ನಿಲುವು. ಈ ನಿಲುವು 'ಸ್ತ್ರೀವಾದಿ' ವ್ಯಾಖ್ಯಾನಕ್ಕೆ ಒಂದು ಹೊಸ ಪರಿಭಾಷೆಯಾಗಿ ಕಾಣಿಸುತ್ತದೆ. ಇಂತಹ ರೀತಿಯಲ್ಲಿ ಸ್ತ್ರೀ ಸಿದ್ಧಾಂತಗಳಿಗೆ ಹೊಸ ಹೊಸ ರೂಪ, ಪರಿಭಾಷೆಗಳು ಈ ಕಾದಂಬರಿಯ ಮೂಲಕ ಸಾಧ್ಯವಾಗಿದೆ ಎನ್ನುವುದು ನನ್ನ ನಂಬಿಕೆಯಾಗಿದೆ.

ಹೀಗೆ ಈ ಐದೂ ಕಾದಂಬರಿಗಳು ಒಂದೊಂದು ರೀತಿಯಿಂದ ಭಿನ್ನವೆನಿಸಿವೆ, ವಿಶಿಷ್ಟವೆನಿಸಿವೆ ಎನ್ನುವುದು ನನ್ನ ಭಾವನೆ. ಇಂತಹ ಭಾವನೆಯೊಂದಿಗೆ ಈಗಾಗಲೇ ವಿಪುಲ ಸಂಖ್ಯೆಯಲ್ಲಿ ಲಭ್ಯವಿರುವ ಮಹತ್ವದ ಕಾದಂಬರಿಗಳ ಸಾಲಿನಲ್ಲಿ ನನ್ನದೊಂದು ಪುಟ್ಟ ಸೇರ್ಪಡೆಯಾಗಿ 'ಕಾದಂಬರಿ ಲೋಕ' ನಿಮ್ಮ ಮುಂದಿದೆ. ಇದಕ್ಕೆ ಕಾರಣ ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್‌ನ ಎಂ.ಆರ್.ಗಿರಿರಾಜು ಅವರು. ಅತ್ಯಂತ ಸ್ನೇಹಶೀಲ, ವಿನಯವಂತ, ಗುಣಕ್ಕೆ ಮಹತ್ವ ಕೊಡುವ ಇವರು ಪ್ರೀತಿಯಿಂದ ಈ ಕೃತಿಯನ್ನು ಪ್ರಕಟಿಸಲು ಮುಂದಾದದ್ದು ನನಗೆ ತುಂಬ ಸಂತೋಷವೆನಿಸಿದೆ. ನನ್ನ ಸಮಗ್ರ ಸಾಹಿತ್ಯ ಮಾಲಿಕೆಯಲ್ಲಿ ಇದನ್ನು ತಂದಿರುವುದಕ್ಕೆ ನಾನು ಅವರಿಗೆ ಆಭಾರಿಯಾಗಿದ್ದೇನೆ. ಅಲ್ಲದೆ ಅಚ್ಚುಕಟ್ಟಾಗಿ, ಯಾವುದೇ ಅಕ್ಷರದೋಷಗಳಿಗೆ ಎಡೆಯಾಗದಂತೆ ಡಿಟಿಪಿ ಮಾಡಿಕೊಟ್ಟಿರುವ ಶ್ರೀಮತಿ ಸೌಮ್ಯಳಿಗೂ ನಾನು ಕೃತಜ್ಞಳಾಗಿದ್ದೇನೆ.

**ಡಾ. ವಿಜಯಾ ಸುಬ್ಬರಾಜ್**

# ಕಾದಂಬರಿ ಲೋಕದೊಳಗೆ.........

**'ಹೊ**ನ್ನ ಹೊನ್ನ' ಎಂದು ಹತ್ತು ಸಲ ತನಗೆ ತಾನೇ ಹೇಳಿಕೊಂಡು ಮುಗುಳ್ನಕ್ಕಳು ಜಾನಕಿ. ಎಷ್ಟು ಮುದ್ದಾದ ಹೆಸರು! ಈ ಸಲ ಬಂದಾಗ ಪಾರ್ವತಿಯಿಂದ ಅವನ ಪರಿಚಯ ಮಾಡಿಕೋಬೇಕು. ಊರಿಗೆ ಊರೇ ಅವನನ್ನು ಹೊಗಳುತ್ತಿದೆ. ಅಬ್ಬ! ಹೆಸರಿಗೆ ತಕ್ಕಂತೆ ಬಂಗಾರದ ಬಣ್ಣದ ಮೈ, ಗುಂಗುರು ಬಳ್ಳಿ ಕೂದಲು, ಮತ್ತೇರಿಸುವ ಕುಡಿ ಮೀಸೆ, ಕಚ್ಚೆ ಪಂಚೆ ಕಟ್ಟಿ ಮೇಲೆ ಜುಬ್ಬ ತೊಟ್ಟು ನಿಂತಿದ್ದ ಅವನ ಠೀವಿ ಎಷ್ಟು ಚೆನ್ನಾಗಿತ್ತು. ಜಾತ್ರೆಗೆ ಬಂದ ಅಷ್ಟೂ ಜನರಲ್ಲಿ ಹೊಡೆದೆದ್ದು ಕಾಣ್ತಿದ್ದ... ನಿಜವಾಗಿ ಪಾರ್ವತಿ ಅದೃಷ್ಟವಂತೆ. ಅವನಿಗೆ ಅವಳನ್ನು ತಂದುಕೊಳ್ಳುತ್ತಾರೆ ಅನ್ನೋ ಪುಕಾರು!- ಈ ಆಲೋಚನೆ ಬರುತ್ತಿದ್ದಂತೆ ಜಾನಕಿಯ ಮನಸ್ಸಿನಲ್ಲಿ ಅಸೂಯೆ ಮೂಡಿತು. ಪಾರ್ವತಿಗಿಂತ ನಾನು ಚೆನ್ನಾಗಿಲ್ಲವೇ? ಎಂದು ಪ್ರಶ್ನಿಸಿಕೊಳ್ಳುತ್ತಲೇ ಎದ್ದು ಗೋಡೆ ಬಳಿ ಇಟ್ಟಿದ್ದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಹೆಮ್ಮೆಯಿಂದ, ಎದೆಯ ಮೇಲೆ ಬಿದ್ದಿದ್ದ ಜಡೆಯನ್ನು 'ರೊಯ್ಯೆಂದು' ಹಿಂದಕ್ಕೆ ಎಸೆದಳು.

ತಾಯಿ ತಂದೆಯರ ನಿಷ್ಠುರ ನಿರ್ಬಂಧದಲ್ಲಿ ಬೆಳೆದ ಜಾನಕಿಗೆ ಅಕಸ್ಮಾತ್ತಾಗಿ ಜಾತ್ರೆಯಲ್ಲಿ 'ಹೊನ್ನ' ಕಣ್ಣಿಗೆ ಬಿದ್ದ. ಕಣ್ಣು ಮಿಂಚಿತು. ದೇವರ ಮೇಲೆ ನೆಡಬೇಕಾದ ದೃಷ್ಟಿ ಗುಂಪಿನಲ್ಲಿ ಮುಂದಿದ್ದು ಪೂಜಾರಪ್ಪ ನೀಡಿದ ಪ್ರಸಾದಕ್ಕೆ ಕೈಯೊಡ್ಡಿದ ಹೊನ್ನನಲ್ಲಿ ನೆಟ್ಟಿತು. ತೇರು ಸರಿದಂತೆ ಜನ ಸರಿಯಲು, ಜಾನಕಿ ನಿಂತೇ ಇದ್ದಳು. ಜತೆಗಿದ್ದ ಗೆಳತಿ ಪಾರ್ವತಿ ರಟ್ಟೆ ಹಿಡಿದು ಜಾನಕಿಯನ್ನು ಎಳೆದು ಎಚ್ಚರಿಸಿದಳು. 'ಏನೇ ಅದು ಮೈಮೇಲೆ ಪ್ರಜ್ಞೆಯಿಲ್ಲದೆ ಹಾಗೆ ಮಿಕಿ ಮಿಕಿ ನೋಡ್ತಾ ಇದ್ದದ್ದು?' ಎಂದು ಅರ್ಧ ಸಿಟ್ಟು ಅರ್ಧ ನಗುವಿನಲ್ಲಿ ಕೇಳಿದ ಪಾರ್ವತಿಗೆ, ಪಾರ್ವತಿ ಅಲ್ನೋಡು, ಅಲ್ಲಿ ದೇವರಿಗೆ ತೀರ ಹತ್ತಿರದಲ್ಲಿ ಜುಬ್ಬ ತೊಟ್ಟು ನಿಂತಿರುವ ಆ ವ್ಯಕ್ತಿ. ಆತ ಯಾರೇ? ಊರಿಗೆ ಹೊಸಬರ ತರಹ ಇದ್ದಾರೆ– ಎಂದಳು.

ಪಾರ್ವತಿ ಸುತ್ತಲೂ ನೋಡಿ ಹೊಸಬರು ಯಾರೂ ಕಾಣದೆ, ಯಾರೂ ಇಲ್ವಲ್ಲೇ, ನಿನಗೇನಾದರೂ ಬುದ್ಧಿಗಿದ್ಧಿ ಕೆಟ್ಟಿದೆಯಾ ಹೇಗೆ?– ಎಂದಳು.

'ಸರಿ ನೀನೊಬ್ಬ ಕುರುಡಿ. ಎದುರಿಗಿರುವುದೇ ಕಾಣೋಲ್ಲ. ಇನ್ನು ದೂರದ್ದು ಹೇಗೆ ಕಾಣುತ್ತೆ? ನನ್ನ ಬೆರಳನೇರಕ್ಕೆ ನೋಡು, ಎಂದು ಬೆರಳು ಮಾಡಿ ತೋರಿಸಿದಳು. ಆ ವ್ಯಕ್ತಿಯನ್ನು ನೋಡಿದ ಕೂಡಲೇ ಬಿದ್ದು ಬಿದ್ದು ನಗತೊಡಗಿದಳು. ಜಾನಕಿ ಬೆಪ್ಪಾದಳು. ಏನೇ... ಏನಾಯ್ತೆ? ಹುಚ್ಚಿ ಹಾಗೆ ನಗ್ತಾ ಇದ್ದೀ? ಎಂದದ್ದಕ್ಕೆ ಪಾರ್ವತಿ ನೀನು, ಊರಿಗೆ ಹೊಸಬರು ಅಂದೆಯಲ್ಲ ಅದಕ್ಕೆ ನಗು ಬಂತು. ಅವನು... ಅವನು ನನ್ನ ಸೋದರಮಾವನ ಮಗ ಹೊನ್ನ, ಪಟ್ಟಣದಲ್ಲಿದ್ದು ಬಿ.ಎ. ಪಾಸ್ ಮಾಡಿದ್ದಾನೆ... ಆಮೇಲೆ... ಆಮೇಲೆ ಎಂದು ಮುಂದೆ ಹೇಳಲು ನಾಚಿದಳು. ಜಾನಕಿಗೆ ಆ ನಾಚಿಕೆಯ ಅರ್ಥವೇನೋ ತಿಳಿಯಲಿಲ್ಲ. ಹಾಗ್ಯಾಕೆ ನಾಚ್ಕೋತೀ ಹೇಳೇ ಪರವಾಗಿಲ್ಲ ಅಂದಳು. 'ಉಹುಂ' ನಾನು ಹೇಳೊಲ್ಲ– ಎಂದು ತಲೆಯಾಡಿಸಿದಳು.

ಏನೇ ಪಾರ್ವತಿ, ನಿನ್ನ ಗೆಳತಿ ಹತ್ತಿರ ಕೂಡ ನಾಚಿಕೇನಾ? ಹೋಗಲಿ ಬಿಡು ನಿನಗೆ ಇಷ್ಟವಿಲ್ಲದಿದ್ದರೆ ಹೇಳಬೇಡ. ನಿನ್ನ ಗುಟ್ಟನ್ನು ನೀನೇ ಇಟ್ಕೋ–ಎಂದು ಮುನಿದಳು.

'ನೀ ಯಾರಿಗೂ ಹೇಳೊಲ್ಲ ತಾನೇ'? ಎಂದು ನಂಬಿಸುವಂತೆ ಹೇಳಿದಳು.

'ನನ್ನ ಮದುವೆ ಅವನೊಟ್ಟಿಗೆ ಮಾಡ್ಬೇಕಂತ ಮಾತಾಗಿದೆ– ಎಂದು ಪಿಸುದನಿಯಲ್ಲಿ ನುಡಿದಳು. 'ಹೌದೇನೇ! ಎಷ್ಟು ಅದೃಷ್ಟವಂತೆ ಕಣೇ ನೀನು'– ಎಂದು ಕಣ್ಣರಳಿಸಿ ಹೇಳಿದಳು. ಎದೆಯಲ್ಲಿ ಆಗಲೇ ಸಣ್ಣಗೆ ನೋವು ಕಾಣಿಸಿತು.

ಇವರು ಮಾತಿನಲ್ಲಿರಬೇಕಾದರೆ ಮನೆಯವರು ಮುಂದೆ ಸಾಗಿದ್ದರು. ಇವರಿಬ್ಬರೂ ಕಾಣದ್ದಕ್ಕಾಗಿ ಪಾರ್ವತಿಯ ತಂದೆ ಪಾರ್ವತಿಯ ಹೆಸರು ಹಿಡಿದು ಕೂಗಿ ಗುಂಪನ್ನು ಸೀಳಿಕೊಂಡು ಬಂದರು. ಇವರಿನ್ನೂ ಅಲ್ಲೇ ಇದ್ದದ್ದು ನೋಡಿ ಬೈದು ಜತೆಗೆ ಹೊರಡಿಸಿಕೊಂಡು ಹೊರಟರು.

ಮನೆ ಸೇರಿದಾಗಿನಿಂದ ಜಾನಕಿಯ ತಲೆಯಲ್ಲಿ ಹೊನ್ನನ ಯೋಚನೆಯೊಂದರ ವಿನಹ ಬೇರೇನೂ ಉಳಿಯುತ್ತಿರಲಿಲ್ಲ. ಎದ್ದರೆ ಕೂತರೆ ಹೊನ್ನನ ಕನಸು, ಹೊನ್ನನೊಂದಿಗೆ ಹೊನ್ನಿನ ಬದುಕನ್ನು ಕಲ್ಪಿಸಿಕೊಂಡು ಹಿಗ್ಗುತ್ತಿದ್ದಳು. ಅವಳಿಗೆ ಪಾರ್ವತಿಯ ಕಹಿ ನೆನಪು ಅಪ್ಪಳಿಸಿ ವಿಷಾದದಲ್ಲಿ ಉಳಿಯುತ್ತಿದ್ದಳು.

ಒಂದು ಸಲ ಅವಕಾಶ ಸಿಕ್ಕರೆ ಹೊನ್ನನಲ್ಲಿ ಮಾತನಾಡಲು?– ಎಂದು ಕೊಳ್ಳುತ್ತಿದ್ದಳು. ಹೊನ್ನನ ಪರಿಚಯವಾಗಬೇಕಾದರೆ ಪಾರ್ವತಿಯೇ ಪರಿಚಯ ಮಾಡಿಸಬೇಕು. ಆದರೆ ಅವಳೇಕೆ ಮಾಡುತ್ತಾಳೆ? ಅವಳಿಗೆ ಭಯ. ಎಲ್ಲಿ ಹೊನ್ನ ಕೈಜಾರಿ ಹೋಗುತ್ತಾನೋ ಎಂದು ಅವಳೇ ಎಷ್ಟೋ ಸಲ ಹೇಳಲಿಲ್ಲವೇ, 'ಏ ಜಾನಕಿ ನಾನು ಗಂಡಸಾಗಿದ್ದರೆ ನಿನ್ನನ್ನು ಎಂದೋ ಹಾರಿಸಿಕೊಂಡು ಹೋಗ್ಬಿಡ್ತಿದ್ದೆ. ಎಷ್ಟು ಚೆನ್ನಾಗಿದ್ದೀಯೇ! ನಿನ್ನ ನೋಡಿದ ಗಂಡಸು ಯಾವನೂ ನಿನಗೆ ಸೋಲದೆ ಇರೋಕೆ ಸಾಧ್ಯವಿಲ್ಲ. ಅವನ ಕತೇ ಹರ! ಹರ!– ಎಂದು ನಕ್ಕು ಅವಳ ಕೆನ್ನೆ ಚಿವುಟಿದ್ದಳು.

* * *

ಯೋಚಿಸಿದಷ್ಟೂ ಪಾರ್ವತಿ ತನಗೆ ಕಂಟಕವೆನಿಸಿದಳು. ಹೊನ್ನನ ಬಗ್ಗೆ ತನ್ನ ಮನದಾಳದ ಆಸೆ ತಿಳಿದರೆ ಖಂಡಿತ ತನ್ನನ್ನು ಹತ್ತಿರ ಸುಳಿಯ ಬಿಡುವುದಿಲ್ಲ. ಎಷ್ಟೇ ಸ್ನೇಹವಿದ್ದರೂ ತಾನು ಪ್ರೀತಿಸುವವನನ್ನು ಇನ್ನೊಬ್ಬರು ಪ್ರೀತಿಸುವುದು ವಾಸನೆ ಹತ್ತಿದರೆ ಸಾಕು ಹೆಣ್ಣೆದೆ ಅಸೂಯೆಯ ಹೆಡೆ ಬಿಚ್ಚುತ್ತದೆ. ಅವಳ ಕಣ್ಣು ತಪ್ಪಿಸಿ ಹೊನ್ನನನ್ನು ಸೆಳೆದುಕೊಳ್ಳಬೇಕೆಂದು ನಿರ್ಧರಿಸಿದ್ದು, ಮತ್ತೆ ಒಂದು ದಿನ ಸಂಜೆ... ಎಂದುಕೊಳ್ಳುತ್ತಿದ್ದಂತೆ, ಆ ಹಳೆಯ ಘಟನೆಯ ನೆನಪು ಸುರುಳಿ ಬಿಚ್ಚಿಕೊಂಡಿತು. ಅಪ್ಪನ ಹೊಲಕ್ಕೆ ಹೋಗಬೇಕಾದರೆ ಕೆರೆ ದಂಡೆಯೇರಿ ನಡೆದು ಆಚೆ ಕಡೆ ಹೋಗಬೇಕಾಗಿತ್ತು. ಮಧ್ಯಾಹ್ನದ ಊಟವನ್ನು ಕೊಡಲು ತಾನೇ ಹೊರಟಳು. ಉಮಾ ಹೊರಗಿದ್ದಳು. ಅಮ್ಮನ ಅಸ್ವಸ್ಥತೆ ಇತ್ತೀಚೆಗೆ ಹೆಚ್ಚಾಗಿತ್ತು. ಅದಕ್ಕೇ ಆಕೆ ನಡೆಯುವ ತ್ರಾಣವಿಲ್ಲದೆ ಮಗಳನ್ನೇ ಬುತ್ತಿಕೊಟ್ಟು ಬರಲು ಕಳುಹಿಸಿದಳು. ಜಾನಕಿ ಖುಷಿಯಿಂದಲೇ ಒಪ್ಪಿಕೊಂಡಳು. ಹೊನ್ನನ ಕನಸು ಕಾಣುವುದಕ್ಕೆ ಇದಕ್ಕಿಂತ ಏಕಾಂತ ಇರಲಾರದೆಂದು ಊಹಿಸಿ ಬುತ್ತಿ ಹೊತ್ತು ಹೊರಟಳು. ವಿಪರೀತ ಬಿಸಿಲು. ಆ ಬಿಸಿಲಿನ ಝಳಕ್ಕೆ ಮುಖವೆಲ್ಲ ಚುರುಗುಟ್ಟುತ್ತಿತ್ತು. ತಲೆ ಬೆಂದ ಕಾವಲಿಯಂತಾಗಿತ್ತು. ಕಾಲಿಗೆ ಚಪ್ಪಲಿ ಇಲ್ಲದೆ ನಡೆದದ್ದರಿಂದ ಕಾಲು ಬೆಂಕಿಯ ಮೇಲಿಟ್ಟಂತಾಗಿತ್ತು. ಆದರೆ ಜಾನಕಿಗೆ ಹೊನ್ನನ ತಂಪು ನೆನಪುಗಳಲ್ಲಿ ಇದಾವುದರ ಪರಿವೆಯೂ ಇಲ್ಲದೆ ಒಂದೇ ಸಮನೆ ನಡೆದಿದ್ದಳು. ಕೆರೆಯಲ್ಲಿನ ನೀರಿನ ಹರವಿನತ್ತ ಒಮ್ಮೆ ದೃಷ್ಟಿ ಹಾಯಿಸಿದಳು. ಈಗ ಈ ಬಿಸಿಲಲ್ಲಿ ನೀರಿಗಿಳಿದರೆ ಎಷ್ಟು ಹಿತ! ಎಂದುಕೊಂಡಳು. ಅಷ್ಟರಲ್ಲಿ ದೂರದಿಂದ ಕಪ್ಪಗಿನ ವಸ್ತುವೊಂದು ತೇಲಿಬರುತ್ತಿರುವಂತೆನಿಸಿತು. ಕುತೂಹಲ ಹೆಚ್ಚಿ ಹೆಜ್ಜೆ ನಿಧಾನ ಮಾಡಿದಳು. ಬರಬರುತ್ತಾ ಆ ವಸ್ತು ತೀರಾ ಹತ್ತಿರವಾಯಿತು. ನೋಡಿದರೆ ಅದು

ವಸ್ತುವಲ್ಲ. ಯಾರದೋ ತಲೆ! ದಂಡೆ ಸಮೀಪಿಸಿದಾಗ ಆಶ್ಚರ್ಯವಾಯಿತು. ಅದು ಹೊನ್ನನ ತಲೆಯಾಗಿತ್ತು. ಸೊಂಟದವರೆವಿಗೂ ಮೇಲೆ ಬಂದ. 'ಅರೇ ಜಾನಕಿ! ಏನಾಶ್ಚರ್ಯ ಈ ಉರಿ ಬಿಸಿಲಲ್ಲಿ ಯಾವ ದಂಡೆಯಾತ್ರೆಗೆ ಹೊರಟಿದ್ದಿ ಮಾರಾಯ್ತಿ?'– ಸಲುಗೆಯಿಂದ ಮಾತು ಹೊರಟಿತು. ಜಾನಕಿ ಮೂಕಳಾದಳು. ಸಂತೋಷ ಸಂಭ್ರಮಗಳಿಂದ ಕಣ್ಣರಳಿಸಿ ನೋಡುತ್ತಾ ನಿಂತಳು. ಇದು ಒಳ್ಳೇ ಅವಕಾಶ. ಈಗಲೇ ಹೊನ್ನನನ್ನು ಕೇಳಿಬಿಡಬೇಕು. ಒಂಟಿಯಾಗಿ ಹೊನ್ನ ಸಿಗಲಾರ. ಈ ಅವಕಾಶ ಕಳೆದರೆ ಮತ್ತೆ ಪಾರ್ವತಿಯ ಕೈ ಬಂದಿಯಾದಾನು. ಹೊನ್ನ ಅವಳಿಗೆ ಸಿಗಬಾರದು. ಸಿಗಲೇಬಾರದು ಎಂದು ದ್ರೋಹಿ ಮನಸ್ಸು ಯೋಚಿಸುತ್ತಿತ್ತು.

ಅಷ್ಟು ಹೊತ್ತಿಗೆ ಹೊನ್ನ ದಂಡೆಯೇರಿ ಅವಳ ಸಮೀಪಕ್ಕೆ ಬಂದಿದ್ದ ಅವನ ಮೈಯಿಂದ ನೀರು ತೊಟ್ಟಿಕ್ಕುತ್ತಿತ್ತು. ಅರೆ ನಗ್ನ ಹೊನ್ನನ ಮೈ ಬಿಸಿಲಿಗೆ ಮತ್ತಷ್ಟು ಹೊಳೆಯುತ್ತಿತ್ತು. ಜಾನಕಿಯ ಎದೆಯ ಪ್ರೀತಿ ಉಕ್ಕಿ ಹರಿಯಿತು. ಆದರೆ ಮನಸ್ಸು ಜೋಗ್ ಜಲಪಾತದ ರಭಸದಲ್ಲಿ ತುಯ್ದಾಡಿತು. ಅವನು ಕೈ ಚಾಚಿ ಕರೆದಪ್ಪಬಾರದೇ?– ಎಂದು ಹಂಬಲಿಸುತ್ತಿತ್ತು. ಆದರೆ ಸಭ್ಯತೆ ತನ್ನನ್ನು ಅಡ್ಡಗಟ್ಟುತ್ತಿತ್ತು.

ಹೊನ್ನ ನೋಡಿದಷ್ಟೂ ನೋಡಿದ. ಚಿತ್ರ ಪ್ರತಿಮೆಯಂತೆ ಕದಲದೆ ನಿಂತ ಅವಳ ಬೆನ್ನ ಮೇಲೆ ಕೈಯಾಡಿಸಿ ಭುಜದ ಮೇಲೆ ಕೈಯಿಟ್ಟು ಅಲುಗಿಸಿದ. ಜಗ್ಗನೆ ಒಡಲಲ್ಲಿ ವಿದ್ಯುತ್ ಹರಿದಂತಾಯಿತು. ಕಣ್ಣಲ್ಲಿ ನೂರು ಬಲ್ಬುಗಳು ಹೊತ್ತಿಕೊಂಡಂತಾಯಿತು. 'ಹೊನ್ನ' ಎಂದು ನೋವಿನಿಂದ ನರಳಿದಳು. ಹೊನ್ನನಿಗೆ ಗಾಭರಿಯಾಯಿತು. ತನ್ನಿಂದೇನಾಯಿತೋ ಎಂದು ಹೆದರಿದ. 'ಏನಾಯ್ತು ಜಾನಕಿ?– ಇಷ್ಟು ಹೊತ್ತಲ್ಲಿ, ಯಾರೂ ಇಲ್ಲದ ವೇಳೇಲಿ, ಮಟ ಮಟ ಮಧ್ಯಾಹ್ನ ಕೆರೆ ಕಡೆಯಾಕೆ ಬಂದೆ?– ಎಂದ ಆತ್ಮೀಯ ದನಿಯಲ್ಲಿ.

'ಅಪ್ಪನಿಗೆ ಊಟ ಕೊಡಲು'– ಎಂದು ತೊದಲುತ್ತಲೇ ಹೇಳಿದಳು.

'ನಾನು ಬೇಕಾದರೆ ಕೊಟ್ಟು ಬರ್ತೇನೆ, ನೀನು ಮನೆಗೆ ಹೋಗು'– ಎಂದ.

'ಬೇಡಾ ನಾನೇ ಕೊಡ್ತೀನಿ' ಎಂದಳು.

'ಜಾನಕಿ ಇವತ್ತಿನ ನಿನ್ನ ರೀತಿ ಯಾಕೋ ಒಂದು ಥರಾ ಇದೆ. ಮೈ ಹುಷಾರಿಲ್ಲವೇ?'– ಎಂದ. ಹೊನ್ನ... ಹೊನ್ನ... ಎಂದು ಮಾತು ಪೂರ್ತಿಯಾಗುವ ಮುನ್ನವೇ ಕಣ್ತುಂಬಿ ಬಂತು. ಮುಂದೆ ಮಾತಾಡದಾದಳು. ಹೊನ್ನ ಮಾತು ತೆಗೆದ– ಅಂದ ಹಾಗೆ ಪಾರು... ಎನ್ನುತ್ತಿದ್ದಂತೆ ಜಾನಕಿ 'ಹಂ' ಎಂದು ಹೌಹಾರಿದಳು. ಪಾರ್ವತಿಯ ಹೆಸರು ಕೇಳಿದ ಕೂಡಲೇ ಅವಳ ಕಣ್ಣುಗಳಲ್ಲಿನ ಮಾರ್ದವತೆ ಕರ್ಕಶವಾಯಿತು. ಕಂಬನಿಯ ಕೊಡಗಳಾಗಿದ್ದ ಅವು ಈಗ ಬೆಂಕಿಯ ಕುಂಡಗಳಾದವು. ಹೊನ್ನ ಗಮನಿಸಿದ. ಅವನಿಗೆ ತಲೆ ಬುಡ ಅರ್ಥವಾಗಲಿಲ್ಲ. ಪಾರ್ವತಿಯ ಹೆಸರು ಸರ್ಪರೋಷವನ್ನು ಕೆರಳಿಸಿದ್ದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಮುಂದೆ

ಪ್ರಶ್ನಿಸಿ ಕೆಣಕುವುದು ಸರಿಯಲ್ಲ ಮೆಲ್ಲ ಮೆಲ್ಲನೆ ಹತ್ತಿರ ಬಂದು ಸ್ವಲ್ಪ ಸ್ವಲ್ಪವಾಗಿ ಅವಳನ್ನು ಆಕ್ರಮಿಸತೊಡಗಿದ. ತೋಳಬೇಲಿಯೊಳಗೆ ಭದ್ರವಾದ ಮೇಲೆ ತುಟಿಗೊಂದು ಮುತ್ತು ಕೊಟ್ಟ. ಜಾನಕಿ ಮಾಂತ್ರಿಕನ ಮೋಡಿಗೆ ಸಿಕ್ಕ ಮುಗ್ಧ ಮಗುವಿನಂತಾದಳು. ಪುಂಗಿಯ ನಾದದ ಮೋಹಕ್ಕೆ ಸಿಕ್ಕಿ ಹಾವಂತೆ ತೆಪ್ಪಗಾದಳು. ಇಬ್ಬರ ದೇಹಗಳಲ್ಲಿ ಕಾವೇರಿತು. ಮೈಮರೆತು ಹೊನ್ನ ಜಾನಕಿಯ ಕಿವಿಯಲ್ಲಿ ಪಿಸುಗುಟ್ಟಿದ. 'ಜಾನಿ ನೀನು ನನ್ನ ರಾಣಿ, ನಿನ್ನ ಬಲೆಗೆ ಸಿಕ್ಕಿ ತಪ್ಪಿಸಿಕೊಳ್ಳಲಾಗದ ಹುಳುವಾಗಿದ್ದೇನೆ. ನನ್ನನ್ನು ನೀನು ಪ್ರೀತಿಸುತ್ತೀಯಾ! ಎಂದು ಕೇಳಿದ. ಜಾನಕಿಗೆ ಸ್ವರ್ಗವೇ ಭೂಮಿಗಿಳಿದಂತಾಯಿತು. ಬಿಸಿಲೂ ಬೆಳದಿಂಗಳಾಯಿತು. ಮನಸ್ಸು ಗರ್ವದಿಂದ ಗರಿಗೆದರಿತು. ಪಾರ್ವತಿಯ ಮೇಲೆ ದಿಗ್ವಿಜಯ ಸಾಧಿಸಿದಷ್ಟು ಹೆಮ್ಮೆಯೆನಿಸಿತು.

ಇನ್ನು ಹೊನ್ನ ತನ್ನವನೆಂದು ಆ ಕೂಡಲೇ ನಿರ್ಧರಿಸಿದಳು. ಗಂಟೆಗಳೇ ಕಳೆದು ಹೋಗಿದ್ದವು. ಈ ಪ್ರಣಯಿಗಳ ಪ್ರಪಂಚಕ್ಕೆ ಹೊತ್ತು ಗೊತ್ತುಗಳ ನಿರ್ಬಂಧವಿದ್ದಂತೆ ಕಾಣಿಸಲಿಲ್ಲ. ತಂದೆಗೆ ತಂದ ಊಟದ ವಿಷಯವೇ ಮರೆತು ಹೋಯಿತು.

ಅಪ್ಪ ಊಟ ಬಾರದಿದ್ದನ್ನು ನೋಡಿ ಹಸಿದು ಕಂಗಾಲಾಗಿ ಸಿಟ್ಟಿಗೆದ್ದು ಮನೆಗೆ ಹೋಗಿ ಇವರಿಗೆಲ್ಲಾ ಛಡಾಳಿಸಬೇಕೆಂದು ಕೆಲಸವನ್ನು ನಿಲ್ಲಿಸಿ ಎತ್ತುಗಳನ್ನು ಬಿಚ್ಚಿ ಮರದ ನೆರಳಲ್ಲಿ ಕಟ್ಟಿ ಮನೆಯತ್ತ ಹೊರಟು ಬಂದಿದ್ದ. ಹತ್ತಿರ ಬಂದವನು ದಂಡೆಯ ಮೇಲೆ ಯಾರೋ ಗಂಡು ಹೆಣ್ಣುಗಳು ನಿಂತ ಭಂಗಿ ಬೇಸರ ತರಿಸಿ ಅವರನ್ನು ಎಚ್ಚರಿಸಲು ಚಪ್ಪಾಳೆ ತಟ್ಟಿದ.

ಬೆಚ್ಚಿಬಿದ್ದ ಹೊನ್ನ ಜಾನಕಿಯರು ಅಪ್ಪುಗೆಯಿಂದ ಬಿಡಿಸಿಕೊಂಡು ಬೇರೆ ಬೇರೆಯಾದರು. ಜಾನಕಿಗೆ ದೂರದಿಂದಲೇ ತಂದೆಯ ಗುರುತು ಹತ್ತಿತ್ತು. 'ಹೊನ್ನ ಅಪ್ಪ... ಅಪ್ಪ... ಓಡಿ ಹೋಗು' ಎಂದು ಹೇಳಿ ತಾನೂ ಓಡಿದಳು. ಆ ಹುಡುಗಿ ಓಡುವುದನ್ನು ನೋಡಿ ಅಪ್ಪನಿಗೆ ಅನುಮಾನವಾಗಿ ಹತ್ತಿರದ ದಾರಿಯಿಂದ ಓಡುವ ಜಾನಕಿಯನ್ನು ಹಿಂಬಾಲಿಸಿದ. ಅವನಿಗೆ ಮಗಳೆಂದು ತಿಳಿಯಲಿಲ್ಲ. ಸೋತ ಕಾಲುಗಳು ತುಂಬಾ ದೂರ ಜಾನಕಿಯನ್ನು ಕರೆದೊಯ್ಯಲಿಲ್ಲ. 'ಅಪ್ಪ' ಹತ್ತಿರವಾದ. ಥಟ್ಟನೆ ಹಿಂದಿನಿಂದ ಜಡೆಗೆ ಕೈ ಹಾಕಿ ಜಗ್ಗಿ ನಿಲ್ಲಿಸಿದ. ಬೆದರು ಕಂಗಳಿಂದ ತಿರುಗಿ ನೋಡಿದಳು.

ಅಯ್ಯೋ ದರಿದ್ರ ಮುಂಡೇದೆ, ನೀನೇನಾ ಈ ಹಾಳು ಕೆಲಸ ಮಾಡ್ತಿದ್ದದ್ದು. ಎಷ್ಟಂತು ದೊಡ್ಡರೋಗ, ಬೀದಿ ಬೇವಾರ್ಸಿಗಳನ್ನೆಲ್ಲ ತಬ್ಬುಕೋತೀಯೇನೆ? ನಡಿ ಮನೆಗೆ ಸೂಳೆ ಮುಂಡೇದೆ, ಕಾಲು ಮುರಿದು ಕೈಗೆ ಕೊಟ್ಟರೆ ಹಾದಿಗೆ ಬರ್‍ತಿ. ನಮ್ಮ ಮರ್ಯಾದೇನ ಬೀದಿಪಾಲು ಮಾಡೋಕೆ ಹೊರಟ್ಯಾ?– ಎಂದು ದರದರ ದನಗಳನ್ನು ಎಳೆಯುವುದಕ್ಕಿಂತ ರಭಸವಾಗಿ ಎಳೆದು ನಡೆದ ಮನೆಯತ್ತ. ಮನೆ ಸೇರುತ್ತಲೇ ಹೆಂಡತಿಯನ್ನು ಕೂಗಿ ಅವಳ ಕಡೆಗೆ ಕೆಡವಿದ. ಅವಳಿಗೆ ಏನೂ ಅರ್ಥವಾಗದೆ ನಿಂತದ್ದನ್ನು ನೋಡಿದ ರೋಷದಿಂದಲೇ ಅವಳು ಮಾಡಿದ ಕೆಲಸವನ್ನು ವಿವರಿಸಿದ.

ತಿಂಗಳಾದರೂ ಸುಧಾರಿಸಿಕೊಳ್ಳದಷ್ಟು ಭಯಂಕರವಾದ ಏಟುಗಳು, ಮೈ ತುಂಬಾ ಬಾಸುಂಡೆ... ನೆನೆಸಿಕೊಂಡಷ್ಟೂ ಮೈಯೆಲ್ಲಾ ಕಂಪಿಸುತ್ತಿತುತ.

* * *

ಮಗಳ ನಡತೆ ತಾಯಿಯನ್ನು ಮತ್ತಷ್ಟು ಕುಗ್ಗಿಸಿತ್ತು. ಗಂಡನನ್ನು ಆದಷ್ಟು ಬೇಗ ಜಾನಕಿಗೆ ವರನನ್ನು ಗೊತ್ತು ಮಾಡಲು ಅಂಗಲಾಚಿದಳು. ಮಾನಗೆಟ್ಟ ಮುಂಡೆಗೆ ಮಗನ್ನ ಕೊಡೋ ಮಹಾತಾಯಿ ಯಾರಿರ್‍ತಾರೆ ಹೇಳು?- ಎಂದು ಎಷ್ಟೋ ಸಲ ಕೋಪದಿಂದ ನುಡಿದಿದ್ದರೂ ಹೆಂಡತಿಯ ಒತ್ತಾಯಕ್ಕೆ ಜಾನಕಿಯ ಮದುವೆಯ ಪ್ರಯತ್ನಗಳನ್ನು ನಡೆಸಿದ. ಜಾನಕಿಗೆ ಹೊನ್ನನ ಹೊರತು ಬೇರಾರನ್ನೂ ಮದುವೆಯಾಗ ಬಾರದೆಂಬ ಹಟ ಮತ್ತಷ್ಟು ಬಲವಾಯಿತು. ಬಂದ ಯಾವೊಂದು ಗಂಡನ್ನೂ ಒಪ್ಪಲಿಲ್ಲ. ಮದುವೆಯೇ ಬೇಡವೆಂದು ಹಟ ಹಿಡಿದಳು.

'ಅಪ್ಪ'ನಿಗೆ 'ಅಮ್ಮ'ನಿಗೆ ಬೇಸರವೆನಿಸಿತು. ತಂದೆಗೆ ಸಿಟ್ಟು ನೆತ್ತಿಗೇರಿತು. ಇನ್ನೊಂದು ತಿಂಗಳಲ್ಲಿ ನಿನ್ನ ಮದುವೆ ಮುಗಿಸಿಯೇ ತೀರುತ್ತೇನೆಂದು ಛಲ ಹಿಡಿದ. ಜಾನಕಿಗೆ ಅಪ್ಪನ ಸಿಟ್ಟು ಎಂತಹುದೆಂಬುದು ತಿಳಿದಿತ್ತು. ಅಂದುಕೊಂಡದ್ದನ್ನು ಮಾಡಿಯೇ ತೀರುತ್ತಾನೆ. ಇದರಿಂದ ಪಾರಾಗುವುದು ಹೇಗೆಂದು ಯೋಚಿಸಿ ಏನೂ ಹೊಳೆಯದಾದಾಗ ಸಾಯಲು ನಿರ್ಧರಿಸಿದಳು. ಹೊನ್ನನಿಗೆ ಈ ವಿಚಾರ ತಿಳಿಸಿದರೆ ಏನಾದರೂ ಮಾಡಿಯಾನು, ಆದರೆ ತಿಳಿಸುವುದು ಹೇಗೆ? ಹೊನ್ನ ಮತ್ತೆ ಪಟ್ಟಣಕ್ಕೆ ಹೋಗುತ್ತಾನೆ ಅನ್ನೋ ಸುದ್ದಿ ಬೇರೆ ಅವಳಿಗೆ ಸಿಡಿಲೆರಗಿದಂತಾಗಿತ್ತು. ಪಾರ್ವತಿಗೆ ಇರುವ ವಿಷಯ ತಿಳಿಸಿ, ಅವಳನ್ನೇ ಆಶ್ರಯಿಸಲೇ?- ಎಂದು ಯೋಚಿಸಿದಳು.

ತಕ್ಷಣ ಹುಣಸೇ ಮರದ ಕೆಳಗೆ ನೆಲದಲ್ಲಿ ಪತ್ರಗಳನ್ನು ಮುಚ್ಚಿಟ್ಟು ವ್ಯವಹಾರ ನಡೆಸುತ್ತಿದ್ದುದು ನೆನಪಿಗೆ ಬಂತು. ಏನಾದರೂ ಸುದ್ದಿಗಾಗಿ ಅಲ್ಲಿ ತಡಕಾಡುವುದು ಅವರಿಬ್ಬರಿಗೆ ಅಭ್ಯಾಸವಾಗಿತ್ತು. ಪತ್ರವ್ಯವಹಾರ ಇಲ್ಲಿಂದಲೇ ನಡೆಸುತ್ತಿದ್ದುದು. ಆದರೆ ಅದೂ ಈಗ ಅಸಾಧ್ಯವೆನಿಸಿತ್ತು.

ಹೊನ್ನನಿಗೂ ಜಾನಕಿಯನ್ನು ಕಾಣದೆ ಬೇಸರವೆನಿಸಿತ್ತು. ಪಾರ್ವತಿಯ ಮನೆಗೆ ಹೋದರೆ ಸುದ್ದಿ ತಿಳಿದೀತೆಂದು ಹೊರಟ.

ಪಾರ್ವತಿಗೆ ಹೊನ್ನ ಇಷ್ಟು ದಿವಸಗಳ ಮೇಲೆ ಬಂದದ್ದು ಒಂದು ಕಡೆ ಖುಷಿ. ಇನ್ನೊಂದು ಕಡೆ ನಾಚಿಕೆ. ಬಂದವನೇ ಜಾನಕಿಯ ಬಗ್ಗೆ ವಿಚಾರಿಸಿದ. ಪಾರ್ವತಿಗೆ ವಿಚಿತ್ರವೆನಿಸಿತು. ಎದುರಿಗಿರುವ ತನ್ನನ್ನು ವಿಚಾರಿಸುವುದಕ್ಕೆ ಮೊದಲು ಜಾನಕಿಯನ್ನು ವಿಚಾರಿಸುತ್ತಿದ್ದಾನೆ. ಸ್ವಲ್ಪ ಅಸಮಾಧಾನವಿದ್ದರೂ ಹತ್ತಿಕ್ಕಿಕೊಂಡು, 'ಈಗವಳು ಈ ಕಡೆ ಬರೋದೇ ಇಲ್ಲ- ಅವರ ಮನೆಯಲ್ಲಿ ಅವಳನ್ನು ಹೊಸ್ತಿಲಾಚೆ ಬಿಡೊಲ್ಲ. ನಿಂಗೊತ್ತ ಹೊನ್ನ, ಜಾನಕಿ ಎಂತಹ ಕೆಟ್ಟಕೆಲಸ ಮಾಡಿದ್ದಾಳೆ?... ಎಂದು ಆಶ್ಚರ್ಯದಿಂದ ಪ್ರಶ್ನಿಸಿ ಇಡೀ ಕತೆಯನ್ನು ಪ್ರಾರಂಭಿಸಿ ವಿವರಿಸಿದಳು. ಹೊನ್ನ ಮಾತ್ರ ನಗುತ್ತಲೇ

ಇದ್ದ, ಈ ಕತೆ ಹಳೆಯದು. ಕಥಾನಾಯಕ ತಾನೇ ಆಗಿರುವಾಗ ಅವನಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಹೊನ್ನ ಸುಮ್ಮನಿದ್ದುದು ನೋಡಿ ಪಾರ್ವತಿಗೆ ರೇಗಿತು.

ಮಾನಗೆಟ್ಟವಳನ್ನು ಯಾರು ಮದುವೆಯಾಗ್ತಾರೆ ಹೊನ್ನ, ಏನೋ ತಿಳಿದವಳಂತೆ ಹೇಳಿದಳು. 'ನಾನು' ಎಂದ ಹೊನ್ನ.

ಏನು! ನೀನಾ! ನಿನಗೇನು ತಲೆ ಕೆಟ್ಟಿದೆಯಾ? ಎಂದಳು. 'ಪಾರ್ವತಿ ನಾನು ಹೇಳೋ ಮಾತನ್ನು ಸಮಾಧಾನವಾಗಿ ಕೇಳಿದರೆ ನನ್ನ ಮನಸ್ಸಿನಲ್ಲಿ ಇರುವುದನ್ನೆಲ್ಲ ಹೇಳ್ತೀನಿ. ಆದರೆ ಅದನ್ನು ನೀನು ಯಾರಿಗೂ ಹೇಳಬೇಡ' ಎಂದು ಅವಳಿಂದ ಭಾಷೆ ತೆಗೆದುಕೊಂಡ.

ಪಾರ್ವತಿ ಸಮಾಧಾನವಾಗಿ ಎಲ್ಲವನ್ನೂ ಕೇಳಿದಳು. ಜಾನಕಿಯ ದ್ರೋಹ ಅವಳೆದೆಯಲ್ಲಿ ನೂರಾರು ಕುಲುಮೆಗಳನ್ನು ಹೊತ್ತಿಸಿದರೂ, ಹೊನ್ನನ ಪ್ರೀತಿಯೂ ಅವಳ ಮೇಲೆ ಇದೆಯೆಂದರಿತ ಅವಳ ಹೆಣ್ಣು ಹೃದಯ ತುಟಿ ಕಚ್ಚಿ ಸೋಲನ್ನಪ್ಪಿ ಸುಮ್ಮನಾಯಿತು.

ಹೇಗಾದರೂ ಮಾಡಿ ಜಾನಕಿಯನ್ನು ಹೊರಗೆ ಬರುವಂತೆ ಮಾಡು ಪಾರೂ, ನಾನು ನಿನ್ನನ್ನು ಏನೂ ಕೇಳಲಿಲ್ಲ. ಇದೊಂದು ಸಹಾಯ ಮಾಡು. ಜಾನಕೀನ ನಾನು ತುಂಬಾ ಪ್ರೀತಿಸ್ತೀನಿ, ದಯವಿಟ್ಟು ಏನಾದರೂ ಒಂದು ವ್ಯವಸ್ಥೆ ಮಾಡು.

ಪಾರ್ವತಿ ಗಂಭೀರವಾಗಿ ಯೋಚಿಸಿದಳು. ಹೊನ್ನ ತನಗೆ ಮೀಸಲು ವ್ಯಕ್ತಿ. ಆದರೆ ಈಗ ತನಗೆ ತನ್ನ ಭವಿಷ್ಯವನ್ನು ಕೆಡವಿ ಗೆಳತಿಯ ಭವಿಷ್ಯವನ್ನು ನಿರ್ಮಿಸಬೇಕಾಗಿದೆ. ಏನೂ ಹೇಳಲು ತೋಚಲಿಲ್ಲ. ಹೊನ್ನ ತುಂಬಾ ಒಳ್ಳೆಯವನು. ನೋಡೋಕೆ ಚೆಲುವ ನಿಜ. ಆದರೆ .ಎಟುಕದ ದ್ರಾಕ್ಷಿ ಗೊಂಚಲಾಗಿದ್ದಾನೆ. ಜಾನಕಿಯೇ ಅದೃಷ್ಟವಂತೆ! ದೀರ್ಘ ನಿಟ್ಟುಸಿರು ಬಿಟ್ಟಳು.

ಹೊನ್ನ ಪಾರ್ವತಿಯತ್ತ ದೈನ್ಯವಾಗಿ ನೋಡಿದ, ಪಾರ್ವತಿಯ ಮನಸ್ಸು ಕರಗಿತು.

ಒಳಗಿಂದ ಪಾರ್ವತಿಯ ತಾಯಿ ಕೇಳಿದಳು. 'ಯಾರೇ ಅದು ಮಾತಾಡ್ತಿರೋದು? ಎಂದು.

'ಹೊನ್ನ ಭಾವ ಅಮ್ಮ' ಎಂದು ಉತ್ತರಿಸಿ, ಹೊನ್ನನತ್ತ ತಿರುಗಿ 'ಆಯ್ತು, ಶನಿವಾರ ಕೆಂಪಮ್ಮನ ಕೆರೆಯ ಹತ್ತಿರದ ದಿಣ್ಣೆ ಬಳಿಗೆ ಬರೋ ಹಾಗೆ ಮಾಡ್ತೀನಿ. ಸಂಜೆ ನಾಲ್ಕು ಗಂಟೆಗೆ ನೀನು ಬಂದ್ಬಿಡು ಅಲ್ಲಿಗೆ'– ಎಂದು ಆತುರವಾಗಿ ಎದ್ದು, ಇರು ಹೊನ್ನ ಕಾಫಿಯಾದರೂ ಕುಡಿದು ಹೋಗುವಿಯಂತೆ– ಎಂದಳು.

ಬೇಡ ಪಾರ್ವತಿ, ನನಗೆ ಮನಸ್ಸು ಸರಿಯಿಲ್ಲ. ಇನ್ನೊಮ್ಮೆ ಎಂದಾದರೂ ಬಂದಾಗ ಕುಡಿದರಾಯ್ತು. ನಾನಿನ್ನು ಬರ್ತೇನೆ– ಎಂದು ಹೇಳುತ್ತಲೇ ಸರಸರ ನಡೆದ.

* * *

ಜಾನಕಿಗೆ ಒಂದೊಂದು ಕ್ಷಣ ಕಳೆಯುವುದೂ ಒಂದೊಂದು ಯುಗವಾಯಿತು. ಮೇಲೆ ಮೇಲೆ ಗಂಡುಗಳು ಬಂದು ಅವಳನ್ನು ನೋಡಿ ಹೋಗುತ್ತಿದ್ದರು. ಒಂದಿಬ್ಬರಿಂದ ಒಪ್ಪಿಗೆಯ ಸೂಚನೆಯೂ ಸಿಕ್ಕಿ ಮದುವೆಯ ಪ್ರಯತ್ನದ ಒತ್ತಡ ದಟ್ಟವಾಯಿತು. ಅಪ್ಪ ಅಮ್ಮನನ್ನು ಎದುರಿಸಲೇ ಬೇಕಾದ ಗಳಿಗೆ ಬಂದೇ ಬಂದಂತೆನಿಸಿದರೂ ಅವರನ್ನು ಮುಖಾಮುಖಿಯಾಗಿ ಎದುರಿಸುವ ಧೈರ್ಯವಿರಲಿಲ್ಲ. ಒಬ್ಬಳೇ ಮುಳು ಮುಳು ಅತ್ತಳು. 'ದೇವರೇ ದಾರಿ ತೋರಿಸೆಂದು ಅಸಹಾಯಕವಾಗಿ ಅಂಗಲಾಚಿದಳು. ಆದರೂ ದಾರಿ ಕಾಣಲಿಲ್ಲ. ತಂಗಿಯ ಕಾವಲು, ಅಪ್ಪನ ಕಾವಲು, ಸರ್ಪಕಾವಲಿಗಿಂತ ಬಲವಾಗಿತ್ತು ಮತ್ತು ಭಯಂಕರವಾಗಿತ್ತು.

ಸಂಜೆಗೆ ಪಾರ್ವತಿ ಬಂದಳು. ಅವಳನ್ನು ಮುಖಕೊಟ್ಟು ಮಾತಾಡಿಸುವ ಧೈರ್ಯ ಬರಲಿಲ್ಲ. ಒಳಗೊಳಗೆ ತಾನು ಮಾಡುತ್ತಿರುವ ದ್ರೋಹದ ನೆನಪು ಕಾಡುತ್ತಿತ್ತು.

ಜಾನಕಿಯ ಅನ್ಯಮನಸ್ಕತೆಯನ್ನು ನೋಡಿ ಪಾರ್ವತಿಯೇ ಮಾತಿಗೆ ಮುಂದಾಗಿ, ಕಿವಿಯಲ್ಲಿ ಗುಟ್ಟಾಗಿ ಹೊನ್ನನ ಮಾತನ್ನು ತಿಳಿಸಿದಳು. ಕ್ಷಣ ಕಾಲ ಸಂತೋಷದಿಂದ ಮುಖ ಬೆಳಗಿದರೂ ಮರುಗಳಿಗೆ ಮೋಡದ ಛಾಯೆ ಆವರಿಸಿತು. ಪಾರ್ವತಿಗೆ ಅರ್ಥವಾಯಿತು. ಅವಳೇ ದಾರಿ ಸೂಚಿಸಿದಳು.

ಜಾನಕಿಯ ಮನಸ್ಸಿಗೆ ಸ್ವಲ್ಪ ನೆಮ್ಮದಿಯೆನಿಸಿತು. ಪಾರ್ವತಿಯ ಬಗೆಗಿನ ತಪ್ಪು ಕಲ್ಪನೆ ಕರಗಿತು. ತಾನೇನೋ ಅವಳ ಬಗ್ಗೆ ಅಭಿಪ್ರಾಯ ಪಟ್ಟಿದ್ದಳು. ಆದರೆ ಪಾರ್ವತಿಗೆ ದಕ್ಕಬೇಕಾದ ಹೊನ್ನನನ್ನು ತನಗೆ ಧಾರಾಳವಾಗಿ ಬಿಟ್ಟುಕೊಡುವುದು ಹೇಗೆ? ಏಕೆ ಎಂದು ಮಾತ್ರ ಅವಳ ಬುದ್ಧಿಗೆ ಹೊಳೆಯಲಿಲ್ಲ.

ಸದ್ಯಕ್ಕೆ ಯಾವುದೋ ದಾರಿ ತೋರಿಸುತ್ತಿದ್ದಾಳಲ್ಲ ಎನಿಸಿ, ಅವಳ ಹೃದಯ ಕೃತಜ್ಞತೆಯಿಂದ ತುಂಬಿಹೋಯಿತು.

ನೀನಂದಂತೆ ನಿಮ್ಮ ಮನೆಗೆ ಆ ದಿನ ಬರುತ್ತೇನೆ ಪಾರೂ, ನಿನ್ನ ಉಪಕಾರ ಜನ್ಮ ಜನ್ಮದಲ್ಲೂ ಮರೆಯುವುದಿಲ್ಲ ಎಂದು ಅವಳೆರಡೂ ಕೈಗಳನ್ನು ಹಿಡಿದುಕೊಂಡು ಮುತ್ತಿಟ್ಟಳು.

* * *

ಜಾನಕಿ ಹೊನ್ನರು ಓಡಿ ಹೋಗಿರುವುದು ಊರಿಗೆಲ್ಲಾ ಟಾಂ ಟಾಂ ಆಯಿತು. ಇಬ್ಬರೂ ಒಟ್ಟಿಗೆ ಇಲ್ಲವಾದ್ದರಿಂದ ಜನರ ನಾಲಿಗೆಗಳು ಹೊರಳಾಡಿ ಸುದ್ದಿಗಳ ಚಿತ್ತಾರಗಳನ್ನು ಬಿಡಿಸಿದವು. ಜಾನಕಿಯ ತಾಯಿ ತಂದೆಗಂತೂ ಊರಲ್ಲಿ ಮುಖ ಎತ್ತಿಕೊಂಡು ತಿರುಗಾಡಲು ಆಗಲಿಲ್ಲ. ಹಾಳು ಮುಂಡೆ ಮತ್ತೆ ಬರದೆ ನೆಗೆದು ಬಿದ್ದರೆ ಚೆನ್ನ–ಎಂದು ಬಯಸಿತು ತಂದೆಯ ಮನಸ್ಸು. ಆದರೆ ತಾಯಿಯ ಹೃದಯ ಅಷ್ಟು ನಿಷ್ಠುರವಾಗಲು ಸಾಧ್ಯವಾಗಲಿಲ್ಲ. ಒಂದು ಕಡೆ ಅವಮಾನದ ಉಮ್ಮಳ;

ಮತ್ತೊಂದು ಕಡೆ ಮಗಳ ಅಗಲಿಕೆಯ ವೇದನೆ– ಈ ಎರಡರ ನಡುವೆ ಹರಿದು ಹಂಚಿ ಹೋಗಿದ್ದಳು. ದಿನಗಳ ಮೇಲೆ ದಿನಗಳು ಉರುಳಿದವು. ಇವಳಿಂದಾಗಿ ಕಿರಿಯಳ ಮದುವೆಯೂ ಆಗುವಂತಿಲ್ಲ. ಜಾನಕಿಯ ತಂದೆಯಂತೂ, ಎಂದಿಗೆ ಅವಳು ಬಂದರೂ ಜೀವಂತವಾಗಿ ಉಳಿಸುವುದೇ ಇಲ್ಲ ಎಂದು ನಿರ್ಧರಿಸಿದ. ತಾಯಿಗೆ ಪಾರ್ಶ್ವ ವಾಯುವಿನಿಂದ ಪೂರ್ತಿಯಾಗಿ ದೇಹದ ಒಂದು ಭಾಗ ಜಡವಾಯಿತು. ಮಗಳ ಚಿಂತೆ ಬೇರೆ ಭೂತದಂತೆ ಕಾಡುತ್ತಲೇ ಇತ್ತು. 'ದೇವರೇ ನನ್ನ ಮಗಳು ಎಲ್ಲಿಯೇ ಇರಲಿ, ಸುಖವಾಗಿಡು ತಂದೆ'–ಎಂದು ಆರ್ತವಾಗಿ ಹಾರೈಸುತ್ತಿತ್ತು, ಅವಳ ಮನಸ್ಸು.

ಸುಮಾರು ಎರಡು ತಿಂಗಳು ಕಳೆದಿರಬಹುದು. ರಾತ್ರಿ ೧೦ಕ್ಕಿಂತ ಹೆಚ್ಚು ಹೊತ್ತಾಗಿದೆ. ತಾಯಿಯ ದೇಹ ದೌರ್ಬಲ್ಯದಿಂದಾಗಿ, ತಂದೆ ಕಿರಿಮಗಳಿಬ್ಬರೇ ಕೆಲಸ ಮಾಡಬೇಕಾಗಿದೆ. ಮೊದಲಿನ ಸಂತೋಷ, ಕಳೆ ಸತ್ತ ಶವದಂತಿದೆ. ಹಾಸಿಗೆ ಹಿಡಿದ ಹೆಂಡತಿಗೆ ಒಂದು ಬಟ್ಟಲಲ್ಲಿ ಹಾಲು ತುಂದು ಕುಡಿಸಿ, ಮಲಗಿಸಿ ಮೈ ತುಂಬಾ ಕಂಬಳಿ ಹೊದ್ದಿಸಿ ಮಲಗಲು ಹೋದ. ಇದ್ದಕ್ಕಿದ್ದಂತೆ ಬೆಚ್ಚುವ ಗುಡುಗು, ಸಿಡಿಲಿನ ಆರ್ಭಟ ಪಟಪಟನೆ ಹನಿದದ್ದು ಕೇಳಿಸಿತು. ಥುತ್ ಇದೊಂದು ದರಿದ್ರ ಮಳೆ. ನಿದ್ರೆ ತುಂಬ ಬಂದಿರೋವಾಗ ಈ ಹಾಳು ಮಳೆ ಈಗಲೇ ಬರಬೇಕೇ? ಎಂದು ಗೊಣಗುತ್ತಲೇ ಎದ್ದು ಮಡದಿ ಮಲಗಿರುವ ಕೊಠಡಿಗೆ ನಡೆದ. ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದಂತಾಯಿತು. ಮಲಗಿದ್ದ ಉಮ ಕನಸು ಕಂಡವಳಂತೆ ಬೆಚ್ಚಿ ಎದ್ದು ಕುಳಿತಳು. ಮತ್ತೆ ಸಪ್ಪಳ! ಬಾಗಿಲು ಬಡಿಯುತ್ತಿದ್ದುದು. ಅವಳಿಗೆ ಒಬ್ಬಳೇ ಎದ್ದು ಬಾಗಿಲು ತೆಗೆಯಲು ಭಯವಾಯಿತು. ಅಪ್ಪನನ್ನು ಕೂಗಿದಳು. ಇವಳ ಕೂಗನ್ನು ಕೇಳಿ ಅಲ್ಲಿಂದಲೇ ಕಿರುಚಾಡಿದ. ಯಾಕೆ ಹಾಗೆ ಬಡ್ಕೊತೀಯ? ಬಿದ್ಕೋಬಾರದೆ? ಎಂದ ಸಿಡಿಮಿಡಿಗೊಳ್ಳುತ್ತಾ. ಉಮ ಇನ್ನು ಅಪ್ಪನಿಗೆ ಹೇಳಿ ಪ್ರಯೋಜನವಿಲ್ಲೆಂದೆನಿಸಿ ತಾನೇ ಎದ್ದು ಹೋಗಿ ಭಯದಿಂದಲೇ ಬಾಗಿಲು ತೆಗೆಯಲು ಪ್ರಯತ್ನಿಸಿದಳು. ಹೊರಗಿನಿಂದ 'ಅಮ್ಮ ಅಮ್ಮ' ಎನ್ನುವ ಕೂಗು ಕೇಳಿಸಿತು. ಬಾಗಿಲಿಗೆ ಕಿವಿಗೊಟ್ಟು ಆಲಿಸಿದಳು. ಅಕ್ಕನ ಧ್ವನಿಯಿದ್ದಂತೆನಿಸಿತು. ಮೆಲ್ಲನೆ ಅಗುಳಿ ಸರಿಸಿದಳು. ತೊಯ್ದು ಮುದ್ದೆ ಮುದ್ದೆಯಾಗಿ ಛಳಿಯಿಂದ ನಡುಗುತ್ತಾ ನಿಂತಿದ್ದಾಳೆ. 'ಅಪ್ಪ ಅಕ್ಕ ಬಂದಿದ್ದಾಳೆ' ಎಂದು ಒಂದೇ ಉಸಿರಿಗೆ ತಂದೆಯ ಬಳಿಗೆ ನಡೆದಳು. 'ಅಕ್ಕ' ಎನ್ನುವ ಶಬ್ದ ಕಿವಿಯ ಮೇಲೆ ಬಿದ್ದದ್ದೇ ಸೆಟೆದು ನಿಂತ. ಕೆಂಪು ಕಿಡಿ ಹಾರಿತು ಕಂಗಳಿಂದ. ಕಟಕಟನೆ ಹಲ್ಲು ಕಡಿದ. ಈ ಕ್ಷಣದಲ್ಲಿಯೇ ಅವಳನ್ನು ಮುಗಿಸಬೇಕೆನ್ನುವ ನಿರ್ಧಾರದಿಂದ ದಡದಡನೆ ನಡೆದ. ತಂದೆಯ ಅವತಾರವನ್ನು ನೋಡಿ ಮತ್ತಷ್ಟು ಕಂಪಿಸಿದಳು. ಮಾತಿಲ್ಲದೆ ಥಟ್ಟನೆ ಮುಂದಲೆ ಹಿಡಿದು ಒಳಕ್ಕೆಳೆದುಕೊಂಡ. ದೊಪ್ಪೆಂದು ಬಾಗಿಲು ಹಾಕಿದ. ಉಮಾಳ ಕಣ್ಣಲ್ಲಿ ನೀರೂರಿತು. ಅಪ್ಪ ಅಕ್ಕನನ್ನು ಕೊಂದೇ ಬಿಡುತ್ತಾನೆಂದು ಭಯವಾಯಿತು. ಒಂದು ಸಲ ಬಲವಾಗಿ ಹಿಂಬದಿಯಿಂದ ಒದ್ದ. ಮುಗ್ಗರಿಸಿದಳು

ಜಾನಕಿ. 'ಅಯ್ಯೋ ಅಮ್ಮಾ' ಎಂದು ನರಳಿದಳು. ಈ ಗದ್ದಲಕ್ಕೆ ಮಲಗಿದ್ದ ಜಾನಕಿಯ ತಾಯಿಗೆ ಎಚ್ಚರವಾಯಿತು. 'ಯಾರೂಂದ್ರೆ, ನಮ್ಮ ಜಾನಿ ಬಂದಿದ್ದಾಳಾ? ಇಲ್ಲಿಗೆ ಕಳಿಸೀಂದ್ರೆ..' ನರಳುತ್ತಲೇ ಹೇಳಿದಳು.

ಹೂಂ ಬಂದಿದ್ದಾಳೆ ನಿನ್ನ ಕುಲಪುತ್ರಿ, ಸೂಳೆ ಮುಂಡೇದು. ಹಾದರ ಮಾಡಿ, ನಾಚಿಕೆಯಿಲ್ಲದೆ ಬಂದಿದ್ದಾಳೆ. ಕಣ್ತುಂಬ ನೋಡಿ ಸಂತೋಷ ಪಡಿ. ಬೇಗ ಬಂದು ನೋಡ್ಬಿಡು. ಇಲ್ಲ ಅವಳ ಹೆಣ ಬೀಳುತ್ತೆ ಎಂದ ಗಟ್ಟಿಯಾಗಿ.

ಅವಳಿಗೆ ಪರಿಸ್ಥಿತಿಯ ಗಂಭೀರತೆಯ ಅರಿವಾಯಿತು. ಏಳಲು ಪ್ರಯತ್ನಿಸಿ ಬಿದ್ದಳು. ಆದರೂ ಮತ್ತೊಮ್ಮೆ ಪ್ರಯತ್ನ ಪೂರ್ವಕವಾಗಿ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ನಡುಗುವ ಕಾಲುಗಳನ್ನು ಎಳೆದುಕೊಳ್ಳುತ್ತಾ ಹಜಾರಕ್ಕೆ ಬಂದಳು. ಅವಳನ್ನು ಒಂದು ನಿಮಿಷ ಬಿಡೀಂದ್ರೆ ನಾನೊಂದು ಸಲ ಮಾತಾಡಸಿಬಿಡ್ತೀನಿ. ಆಮೇಲೆ ಮಾತಾಡೋ ಅದೃಷ್ಟ ಇರುತ್ತೋ ಇಲ್ವೊ?– ಅಂಗಲಾಚಿ ಕೇಳಿದಳು.

'ನೀನ್ಯಾಕೆ ಸಾಯೋಕೆ ಬಂದೆ. ಬಿದ್ಕೊಂಡಿದ್ರೆ ಆಗ್ತಿರ್ಲಿಲ್ವೆ? ಈ ದರಿದ್ರ ಮುಂಡೆ ಮುಖ ನೋಡಿ ಸಾಯ್ಬೇಕಂತ ಮಾಡಿದ್ದೀಯಾ ಏನು?' ಅಬ್ಬರಿಸಿ ಕೇಳಿದ.

ದಯಾರ್ದ್ರ ಕಣ್ಣುಗಳಿಂದ ಗಂಡನ ಕಡೆ ನೋಡಿದಳು. ಸಿಟ್ಟಿನ ಭೂತವಾಗಿದ್ದ ಗಂಡನ ಹೃದಯವೂ ಆ ನೋಟದಿಂದ ಕರಗಿತು. ಮೆದುವಾಗಿ ಹೇಳಿದ.

ಇಂತಹ ಮಗಳ ಬಗ್ಗೆ ನಿನ್ನ ಪ್ರೀತಿ ಇನ್ನೂ ಇದೆಯೇನೇ? ನಮ್ಮನ್ನು ಲೆಕ್ಕಿಸದೆ ಮಾನಗೆಟ್ಟು ಓಡಿ ಹೋದವಳನ್ನು ಮಗಳೂಂತ ಕರೆಯುವ ಮನಸ್ಸು ನಿನಗೆ ಬಂತಾದರೂ ಹೇಗೆ? ಹೆಚ್ಚು ಹೊತ್ತು ನಿಲ್ಲಲಾಗದೆ ಅವಳು ಅಲ್ಲಿಯೇ ಇದ್ದ ಕುರ್ಚಿಯಲ್ಲಿ ಕುಕ್ಕರಿಸಿದಳು. 'ಹೆತ್ತ ಕರುಳಿನ ಸೆಳೆತ ನಿಮಗೆ ಹೇಗೆ ಅರ್ಥವಾಗುತ್ತೆ? ತಪ್ಪು ಮಾಡಿದಳು ನಿಜ. ಆದರೆ ಹಾಗೇ ನಮ್ಮ ಮಗಳಾಗಿರೋದು ನಿಜವಲ್ಲವೇ? ಅವಳನ್ನು ಹೊಡೆದು ಸಾಯಿಸುವ ಮಾತ್ರಕ್ಕೆ ಅಂಟಿಬಂದ ಅಪಕೀರ್ತಿ ಹೋಗುತ್ತೆಯೇ? ಬಿಟ್ಟು ಬಿಡಿ ಅವಳ ತಪ್ಪಿಗೆ ಅವಳೇ ಜವಾಬ್ದಾರಿ'– ಎಂದಳು ಇಷ್ಟು ಮಾತಾಡುವ ತಾಕತ್ತು ಅವಳಿಗೆ ಹೇಗೆ ಬಂತೆಂದು ಗಂಡ ಯೋಚಿಸಿದ.

ಹೆಂಡತಿಯ ಮಾತುಗಳು ಮತ್ತೊಮ್ಮೆ ಪ್ರತಿಧ್ವನಿಸಿದವು. ದೂರದಲ್ಲಿ ನಡುಗುತ್ತಾ ಬಿಕ್ಕಿ ಬಿಕ್ಕಿ ಅಳುತ್ತಾ ನಿಂತ ಮಗಳನ್ನೂ ನೋಡಿದ. ಒಂದು ಕ್ಷಣ ಯಾವುದನ್ನೂ ನಿರ್ಧರಿಸಲಾರದೆ ಹೋದ.

'ಜಾನಕಿ' ಪ್ರೀತಿಯಿಂದ ತಾಯಿ ಕರೆಯುತ್ತಿದ್ದಾರೆ. ತಂದೆಯ ಹೆದರಿಕೆಯಿಂದ ಒಂದು ಹೆಜ್ಜೆ ಮುಂದಿಡಲಿಲ್ಲ. ಇನ್ನೂ ಛಳಿಯಿಂದ ನಡುಗುತ್ತಿರುವ ಮಗಳು! ಭೀತಿಯಿಂದ ಅವಾಕ್ಕಾಗಿ ನಿಂತ ಕಿರಿಮಗಳು!! ದೈನ್ಯತೆಯಿಂದ ಮಗಳತ್ತ 'ಬಾ' ಎಂದ ಕೈಚಾಚಿರುವ ಹೆಂಡತಿ–ಪರಿವೀಕ್ಷಿಸಿದ್ದ ನಿಶ್ಚಲವಾದ ಈ ದೃಶ್ಯವನ್ನು. ನಂತರ

'ಜಾನಕಿ ಮೊದಲು ಬಟ್ಟೆ ಬದಲಾಯಿಸಿ ಬಾ' ಎಂದು ದೃಢ ಸ್ವರದಲ್ಲಿ ಆಜ್ಞಾಪಿಸಿದ. ಸಂಶಯದಿಂದಲೇ ತಂದೆಯ ಮುಖ ನೋಡಿದಳು. 'ಹುಂ ನಿನಗೇ ಹೇಳಿದ್ದು ಬಟ್ಟೆ ಬದಲಾಯಿಸಿ ಬಾ' ಎಂದು ಅಬ್ಬರಿಸಿದ. ಒಂದೇ ನೆಗೆತಕ್ಕೆ ಬದುಕಿದೆಯಾ ಬಡಜೀವ ಎಂದುಕೊಂಡು ಒಳಗೆ ಹೋದಳು. ತಂಗಿ ಅವಳನ್ನು ಅನುಸರಿಸಿದಳು. ಈ ಕ್ಷಣ ತಪ್ಪಿದರೆ ಇನ್ನು ಪಾರಾದಂತೆ ಎನಿಸಿತು. ಹೆಂಡತಿಯತ್ತ ತಿರುಗಿದ. ವಿಪರೀತ ಉಬ್ಬಸದಿಂದ ಕಷ್ಟಪಡುತ್ತಿದ್ದಾಳೆ. ಕೈ ಆಸರೆ ಕೊಟ್ಟು ನಡೆಸಿಕೊಂಡು ಕೋಣೆಯೊಳಕ್ಕೆ ಕರೆತಂದ. ಇನ್ನೂ ಮಳೆ ಬೀಳುತ್ತಲೇ ಇದೆ. ನಿಲ್ಲುವ ಹಾಗೆಯೇ ಕಾಣುವುದಿಲ್ಲ. ತೇಲುಗಣ್ಣು ಹಾಕುತ್ತಿದ್ದ ಹೆಂಡತಿ, ಗಂಡನ ಕಡೆ ನೋಡಿ, ಅವರಿಬ್ಬರನ್ನೂ ಕರೆಯಿರಿ. ನಾನು... ನಾನು ಇನ್ನು ಹೆಚ್ಚು ಹೊತ್ತು ಉಳಿಯುವುದಿಲ್ಲ... ಎಂದು ಪಿಸುದನಿಯಲ್ಲಿ ಹೇಳಿದರು. ಆ ಕಟುಕನ ಕಣ್ಣಲ್ಲೂ ನೀರು ಸುರಿಯಿತು. ಇಷ್ಟು ಹೊತ್ತೂ ದೆವ್ವದಂತೆ ವರ್ತಿಸಿದ್ದಕ್ಕೆ ಅವನಿಗೇ ಅಸಹ್ಯವೆನಿಸಿತು. ಅಲ್ಲಿಂದೆದ್ದು ಮಕ್ಕಳನ್ನು ಕರೆಯಲು ಒಳಕೋಣೆಯತ್ತ ನಡೆದ. ನಿಮಿಷದೊಳಗಾಗಿ ಅವರನ್ನು ಕರೆದುಕೊಂಡು ಬಂದು ಹೆಂಡತಿಯ ಹಾಸಿಗೆಯ ಪಕ್ಕದಲ್ಲಿ ನಿಂತ.

ಅಮ್ಮ ಅಮ್ಮ ಎಂದು ಅಳುತ್ತಲೇ ಹತ್ತಿರ ಹೋದಳು ಜಾನಕಿ, ಕಣ್ಣು ತೆರೆದು ನೋಡಿದ ತಾಯಿಯನ್ನು ಕಂಡು ಮತ್ತಷ್ಟು ಬಿಕ್ಕಿ ಬಿಕ್ಕಿ ಅಳಲು ಮೊದಲು ಮಾಡಿದಳು. ನನ್ನನ್ನು ಕ್ಷಮಿಸಿ ಬಿಡಮ್ಮ. ನಾನು ಮಾಡಿದ್ದು ಎಷ್ಟು ಭಯಂಕರವಾದ ತಪ್ಪೂಂತ ಈಗ ತಿಳೀತಿದೆ. ಇನ್ನೆಂದಿಗೂ ಇಂತಹ ಸಾಹಸಕ್ಕೆ ಹೋಗೊಲ್ಲ. ನನ್ನ ಮಾತನ್ನು ನಂಬು ಎಂದು ಒಂದೇ ಸಮನೆ ಗೋಗರೆದಳು. ಚೈತನ್ಯವಿಲ್ಲದ ತಾಯಿ ಸುಮ್ಮನೆ ಜಾನಕಿಯನ್ನು ಹತ್ತಿರ ಬರುವಂತೆ ಸನ್ನೆ ಮಾಡಿದಳು. ಜಾನಕಿ ಕಣ್ಣೊರೆಸಿಕೊಂಡು ತಾಯಿಯ ಬಳಿಗೆ ಬಂದಳು. ಮೆಲ್ಲನೆ ತನ್ನ ಕೈಯನ್ನು ಅವಳ ತಲೆಯ ಮೇಲಿರಿಸಿ ನೇವರಿಸಿದಳು. ಆ ತಾಯಿಯ ಕೈಯ ಸ್ಪರ್ಶ ಮಾತ್ರದಿಂದಲೇ ಅಷ್ಟೊಂದು ತಂಪಿನ ಅನುಭವವಾಯಿತು ಜಾನಕಿಗೆ. ಇಷ್ಟು ಮೃದು ಸ್ವಭಾವದ ತಾಯಿಯ ಎದೆಗೆ ಶೂಲದಂತಿರುವ ಕೆಲಸವನ್ನೇಕೆ ಮಾಡಿದೆನೋ ಎಂದು ಜಾನಕಿಯ ಹೃದಯ ಪರಿತಪಿಸಿತು. ಮತ್ತೆ ಕಣ್ಣೀರು ಒತ್ತರಿಸಿ ಬಂತು. ತಾಯಿಯ ಕಣ್ಣಿಗೆ ಮಗಳ ಕಣ್ಣಿಂದ ಬರುವ ಕಂಬನಿ ಕಾಣದೆ ಇರಲಿಲ್ಲ. ಪಿಸುದನಿಯಲ್ಲಿಯೇ ಹೇಳಿದಳು. ಜಾನೀ, ನಾನಿನ್ನು ಹೆಚ್ಚು ಕಾಲ ಉಳಿಯಲಾರೆ. ನೀನೇ ನನ್ನ ಸ್ಥಾನದಲ್ಲಿದ್ದು ತಂಗಿಯ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ಮನೆಯ ಮರ್ಯಾದೆ ನಿನ್ನ ಕೈಲಿದೆ. ನಿನಗೆ ತೋಚಿದಂತೆ ನೋಡಿಕೋ. ನೀನೇನೂ ಚಿಕ್ಕವಳಲ್ಲ. ಮನುಷ್ಯ ಮರ್ಯಾದೆ ಕೆಟ್ಟನೆಂದರೆ ಬದುಕೇ ಹಾಳಾಗುವುದು. ಅದರಲ್ಲಿಯೂ ಹೆಣ್ಣಿನ ಬಾಳು ಸಾಣೆ ಹಿಡಿದ ಕತ್ತಿಯ ತುದಿಯ ಮೇಲೆ ನಡೆಯುವಂಥಾದ್ದು. ಒಂದಿಷ್ಟು ತಪ್ಪಿದರೂ ಪರಿಣಾಮ ಕ್ರೂರವಾಗಿರುತ್ತೆ. ಇನ್ನೇನು ಹೇಳುವುದಕ್ಕೆ ನನಗಿಷ್ಟವಿಲ್ಲ. ಮುಂಗೋಪಿ ತಂದೆಯ ಆಶ್ರಯದಲ್ಲಿ ಹೇಗೆ ಬದುಕುತ್ತೀರೋ? ಮಾತಿಗೆ ಮೊದಲು ಸಿಟ್ಟು ಸೆಡವುಗಳ ಅಬ್ಬರವಿದ್ದರೂ ಅವರ

ಹೃದಯ ಬೆಣ್ಣೆಯಂತೆ. ಜಾನಕಿ ನಿಮ್ಮಪ್ಪನ ಸಿಟ್ಟು ನಿನಗೆ ಬೇಸರ ತರಿಸಿರಬಹುದಾದರೂ ಅದಕ್ಕೆ ಕಾರಣ ಏನೂಂತ ಆಲೋಚಿಸಿದರೆ ನಿನಗೇ ತಿಳಿಯುತ್ತೆ. ಮಾನಕ್ಕೆ ಸಾಯುವವರು ನಿಮ್ಮ ತಂದೆ. ಬೆಳೆದ ಹೆಣ್ಣು ಮಕ್ಕಳಾದ ನೀವು ನಿಮ್ಮ ಜವಾಬ್ದಾರಿ ಗಮನಿಸಿ ತಂದೆಯೊಂದಿಗೆ ಹೇಗೆ ನಡೆದುಕೊಳ್ಳಬೇಕೋ ಯೋಚಿಸಿ, ಅವರ ಮನಸ್ಸು ನೋಯಿಸುವ ಕೆಲಸ ಮಾಡಬೇಡಿ. ಹೆಣ್ಣು ಒಮ್ಮೆ ಹಾದಿ ತಪ್ಪಿದರೆ ಜನ ಮತ್ತೆ ಅವಳನ್ನು ಶುದ್ಧಳೂಂತ ಸ್ವೀಕರಿಸೊಲ್ಲ... ನೆನಪಿಟ್ಟುಕೋ ಜಾನಕೀ... ನೀನೇ ಈ ಮನೆಗೆ ಹಿರಿಯಳು, ನನಗೆ... ನನಗೆ ನಿಮ್ಮ ಮದುವೆ ನೋಡಬೇಕಂತ ಆಸೆ. ಆದರೆ ಹಾಳು ಈ ಖಾಯಿಲೆ ಕಿತ್ತು ತಿನ್ನುತ್ತಾ ಇದೆ... ನನಗೇನೂ ಬದುಕೋ ಆಸೆ ಇಲ್ಲ... ಎಂದು ಹೇಳುತ್ತಿದ್ದಂತೆ ಉಸಿರಿನ ವೇಗ ಕಡಿಮೆಯಾಯಿತು. ಜಾನಕಿಗೆ ಭಯವಾಯಿತು. ಉಮಾ ಅಪ್ಪನನ್ನು ಕರಿಯೇ... ಎಂದು ಹೇಳಿ 'ಅಮ್ಮ ಅಮ್ಮ' ಎಂದು ಗಟ್ಟಿಯಾಗಿ ಅಲುಗಾಡಿಸಿದಳು. ಉಸಿರಾಟ ಕೇಳಿಸದಷ್ಟು ಕ್ಷೀಣವಾಯಿತು

ಗಾಬರಿಗೊಂಡ ಜಾನಕಿಯ ತಂದೆ ಏದುಸಿರುಬಿಡುತ್ತ ಹೆಂಡತಿಯ ಬಳಿ ಬಂದ. ಆದರೆ ಅಷ್ಟು ಹೊತ್ತಿಗೆ ಅವಳ ಉಸಿರಾಟ ಪೂರ್ತಿಯಾಗಿ ನಿಂತು ಹೋಗಿತ್ತು. ಹೆಂಡತಿಯ ಮುಖದ ಮೇಲಿನ ಗಂಭೀರ ಸೌಮ್ಯತೆಯನ್ನೊಮ್ಮೆ ನೋಡಿದ. ಅಳುತ್ತಾ ನಿಂತ ಮಕ್ಕಳನ್ನೊಮ್ಮೆ ನೋಡಿದ. ಆತನ ಕಣ್ಣುಗಳಿಂದ ಉದುರಿದ ಕಂಬನಿಗಳನ್ನು ಜಾನಕಿ ಗಮನಿಸಲೇ ಇಲ್ಲ. ಆದರೆ ತಾನೇ ತಾಯಿಯ ಸಾವಿಗೆ ಕಾರಣಳಾದೆನೇನೋ ಎನ್ನುವ 'ಪಾಪಪ್ರಜ್ಞೆ' ಅವಳಲ್ಲಿ ಎಚ್ಚತ್ತು ತಂದೆಯತ್ತ ಮುಖಕೊಟ್ಟು ನೋಡುವುದೂ ತೀರಾ ನಾಚಿಕೆಯೆನಿಸಿತು. ನಾನ್ಯಾಕೆ ಇಂಥ ಕೆಲಸಕ್ಕೆ ಸಾಹಸ ಮಾಡಿದೆ?- ಎಂದು ಮನಸ್ಸು ಪ್ರಶ್ನಿಸುವಂತಾದರೂ ಹೊನ್ನನೊಂದಿಗಿನ ಅನುಭವಗಳಿಗೆ ಸಾವಿರ ಸ್ವರ್ಗಗಳನ್ನಾದರೂ ಧಿಕ್ಕರಿಸಿ ಬಿಡಬಹುದೆನಿಸಿತು. ಮತ್ತೆ ಒತ್ತರಿಸಿ ಬಂದ ಹೊನ್ನನ ನೆನಪುಗಳನ್ನು ಕೊಡವಿ ಚಿರನಿದ್ರೆಯಲ್ಲಿ ಮಲಗಿದ್ದ ತಾಯಿಯತ್ತ ದೀನವದನಳಾಗಿ ನೋಡಿ ಒಂದು ದೀರ್ಘ ನಿಟ್ಟುಸಿರುಬಿಟ್ಟಳು. ತಂದೆಗೆ ಆ ನಿಟ್ಟುಸಿರಿನ ಅರ್ಥವಾಗಿರಬೇಕು. ಅವಳತ್ತ ಕಣ್ಣು ಹಾಯಿಸಿ ತನ್ನ ದೃಷ್ಟಿಯನ್ನು ಮಗಳ ಮೇಲೆ ಕೀಲಿಸಿದ.

* * *

ಜಾನಕಿಗೆ ತಾಯಿ ಸಾಯುವಾಗ ಹೇಳುತ್ತಿದ್ದ ಮಾತುಗಳು ನೆನಪಿನಲ್ಲೇನೋ ಉಳಿದವು. ಆದರೆ ತಾನು ಮಾಡಿದ ತಪ್ಪಿನ ಪರಿಣಾಮ ಈಗಾಗಲೇ ಅವಳನ್ನು ಮುತ್ತಿಬಿಟ್ಟಿದೆ. ಹೊನ್ನನ ಪ್ರತೀಕವಾಗಿ ಒಂದು ಕುಡಿಗೆ ತಾನು ಪೋಷಕಳಾಗಿದ್ದಾಳೆ.

ತಂದೆಗೆ ತಿಳಿದರೆ ಖಂಡಿತವಾಗಿಯೂ ಸಿಗಿದು ತೋರಣವನ್ನು ಕಟ್ಟಿಬಿಡುತ್ತಾನೆ. ಏನು ಮಾಡಲೂ ತೋಚಲಿಲ್ಲ. ಜಾನಕಿ ತಂಗಿಯ ಜೊತೆ ಹೇಳಿಕೊಂಡು ಅತ್ತಳು. ಕೆರೆಯೋ ಬಾವಿಯೋ ನೋಡಿಕೊಳ್ಳುವೆನೆಂದು ಹಟ ಹಿಡಿದಳು. ಆದರೆ ತಂಗಿ,

ಅಕ್ಕನಿಗೆ ಸಮಾಧಾನ ಮಾಡಿದಳು– 'ಲೇ ಅಕ್ಕ ಈಗ ನಿನಗೆ ಉಳಿದಿರೋದು ಒಂದೇ ದಾರಿ. ಅಪ್ಪ ಹೇಗಿದ್ದರೂ ನಿನಗೆ ಮದುವೆಗೆ ನೋಡ್ತಿದ್ದಾರೆ. ಯಾವುದಾದರೂ ಬರಲಿ, ನೀನು ಬೇಡಾಂತ ಹೇಳಬೇಡ. ಒಪ್ಪಿಕೊಂಡು ಬಿಡು. ತಡ ಮಾಡಿದಷ್ಟೂ ನಿನಗೇ ಅಪಾಯ'– ಎಂದು.

ತಂಗಿಯ ಮಾತುಗಳನ್ನು ಕೇಳಿದ ಜಾನಕಿಗೆ ಕೂಡಲೇ ನಿರ್ಧರಿಸಲು ಆಗಲಿಲ್ಲ. ಈ ಮಾತಿನಲ್ಲಿ ತಂಗಿಯ ಸ್ವಾರ್ಥವಿದೆಯೇ?–ಎಂದು ಆಲೋಚಿಸಿದಳು. ಮರು ಗಳಿಗೆಯೇ, ಇಲ್ಲಿ ಅವಳ ಸ್ವಾರ್ಥದ ಪ್ರಶ್ನೆಯೇ ಇಲ್ಲ. ನನ್ನ ಸಂಕಟಕ್ಕೊಂದು ದಾರಿ ಸೂಚಿಸಿದಳು... ಅವಳು ಹೇಳುವ ಮಾತೇ ಸರಿಯಿರಬಹುದು. ಬಸಿರನ್ನು ಬೆಳೆಸಿಕೊಂಡಿರುವ ನನ್ನಂಥವಳಿಗೆ ಮದುವೆಯಾದರೂ ಸಾಧ್ಯವಿದೆಯೇ? ಹಾಳು ವಯಸ್ಸಿನ ಹಸಿವು ಹೆಜ್ಜೆ ತಪ್ಪಿಸಿ, ಮಣ್ಣು ಮುಕ್ಕಿಸುತ್ತದೆ. ನನ್ನ ವಿಚಾರವಾಗಿ ತಾಯಿಯ ಹೃದಯ ಎಷ್ಟು ಕುಂದಿದ್ದಿರಬೇಕು?– ಎಂಬ ಯೋಚನೆ ಬಂದಂತೆ ಮನಸ್ಸಿಗೆ ನೋವಾಯಿತು. ಅನಾಯಾಸವಾಗಿ ಎರಡು ಹನಿಗಳು ಉದುರಿದುವು.

ಅಕ್ಕನ ಕಣ್ಣಲ್ಲಿ ನೀರು ಬಂದದ್ದನ್ನು ಗಮನಿಸಿದ ತಂಗಿ, ಯಾಕಕ್ಕ ಅಳ್ತೀ ಆದದ್ದು ಆಗಿ ಹೋಯಿತು. ಸುಮ್ಮನೆ ನೆನಪಿಸಿಕೊಳ್ಳುವುದರಿಂದ ಬರುವ ಉಪಯೋಗವೇನು ಹೇಳು?

ಉಮಾ ನಾನೆಷ್ಟು ಕೆಟ್ಟವಳಿರಬೇಡ? ತಾಯಿಯ ಮನಸ್ಸು ಎಷ್ಟೊಂದು ನೋವಾಗಿರಬೇಡ, ನನ್ನ ನಡತೆಯಿಂದ?

ಆಗ ತಪ್ಪು ಮಾಡಿದ್ದನ್ನು ಯೋಚಿಸಿ ನರಳುವುದಕ್ಕಿಂತ ಈಗ ತಿದ್ದಿ ಕೊಳ್ಳಬಹುದಲ್ಲಕ್ಕ? ನಾನು ಹೇಳಿದಂತೆ ಮಾಡು... ಮೊನ್ನೆ ಅಪ್ಪ ಹೇಳಿದ್ರು, ಪಕ್ಕದೂರಿನ ಶ್ರೀಮಂತರೊಬ್ಬರು ವಧುವಿಗಾಗಿ ಹುಡುಕ್ತಾ ಇದ್ರಂತೆ. ಗರಡಿ ಮನೆ ಸುಬ್ಬ ಅಪ್ಪನ ಗೆಳೆಯ. ಅವನು ಅವರನ್ನ ಅಪ್ಪನಿಗೆ ಪರಿಚಯ ಮಾಡಿಸಿದನಂತೆ ಅವರು ಹುಡುಗೀನ ನೋಡೋಕೆ ಯಾವಾಗ ಬರೋಣ ಅಂತ ಕೇಳಿದ್ದಕ್ಕೆ ಅಪ್ಪ ಮನೆಯಲ್ಲಿ ವಿಚಾರಿಸಿ ಹೇಳ್ತೀನಿ–ಅಂದರಂತೆ. ನಿಶ್ಚಲಳಾಗಿ ಕೇಳುತ್ತಿದ್ದ ಜಾನಕಿಗೆ ಕುತೂಹಲ ಹೆಚ್ಚಾಯಿತು. ತಂಗಿಯಿಂದ ಇನ್ನಷ್ಟು ವಿವರ ತಿಳಿಯಬಹುದೇನೋ ಎನಿಸಿತು.

'ಉಮಾ, ಅದಕ್ಕೆ ಅಪ್ಪ ನಿನ್ಹತ್ರ ಬಂದು ಏನಾದರೂ ಕೇಳಿದರಾ?'

'ಹುಂ! ನಿಮ್ಮಕ್ಕನಿಗೆ ಈ ವಿಷಯ ತಿಳಿಸಿ, ವಧು ಪರೀಕ್ಷೆಗೆ ರೆಡಿಯಾಗಿರಲು ಹೇಳೂಂತ ಹೇಳಿದರು.

ಜಾನಕಿಗೆ ತೀರಾ ಕಸಿವಿಸಿಯೆನಿಸಿತು. ದೊಡ್ಡವಳಾದ ತಾನಿರಬೇಕಾದರೆ ತನ್ನ ಸ್ವಂತಕ್ಕೆ ಸಂಬಂಧಿಸಿದ ವಿಷಯಗಳನ್ನು ತಂಗಿಯೊಂದಿಗೆ ಹೇಳಿದ್ದಾರೆ. ತಂದೆಯೊಂದಿಗೆ ತನ್ನ ವಿಚಾರವಾಗಿ ಒಳ್ಳೆಯ ಅಭಿಪ್ರಾಯವಿಲ್ಲ. ನನ್ನನ್ನು ಕಂಡರೆ ಅವರಿಗೆ ಅಸಹ್ಯವಿರಬೇಕು.

ಮಗಳು ಎನ್ನುವ ಕಾರಣಕ್ಕಾಗಿ ಮದುವೆಯ ಹೊಣೆಗಾರಿಕೆಯನ್ನು ಕರ್ತವ್ಯದ ದೃಷ್ಟಿಯಿಂದ ಹೊತ್ತಿದ್ದಾರೆಯೇ ಹೊರತು, ತನ್ನ ವಿಚಾರವಾಗಿ ಪ್ರೀತಿ ವಾತ್ಸಲ್ಯಗಳಿಲ್ಲ ಎಂಬ ಆಲೋಚನೆ ಅವಳಿಗೆ ಹೊಳೆದು, ಎದೆಯಾಳದಲ್ಲಿ ಹುದುಗಿ ಮರೆತಿದ್ದ ತನ್ನ ಪಾಪ ಪ್ರಜ್ಞೆ ಜಾಗೃತವಾಯಿತು. ಉಮಾ ಅಪನಿಗೆ ಆತ್ಮೀಯಳು. ತನ್ನ ಮುಂದೆ ಅವಳ ದೊಡ್ಡಸ್ತಿಕೆ ಅವಮಾನಕರವೆನಿಸಿತು. ಆದರೆ ಸ್ವಯಂಕೃತಾಪರಾಧ ತನ್ನದೇ ಇರುವಾಗ ಅಪ್ಪನೆದುರು ಯಾವ ಮುಖವಿಟ್ಟುಕೊಂಡು ಎದುರಿಸಿಯಾಳು? ಉಕ್ಕಿ ಬಂದ ಅಳುವನ್ನು ನುಂಗಿಕೊಂಡು ನುಡಿದಳು.

ಉಮಾ ನನ್ನಿಂದ ನಿಮಗೆ ತುಂಬಾ ತೊಂದರೆಯಾಗಿದೆ. ನನ್ನ ನಡತೆಯಿಂದಾಗಿ ನಿಮಗೆ ಕೆಟ್ಟ ಹೆಸರು ಬಂದು ನಿನ್ನ ಮದುವೆಗೆ ಅಡ್ಡಿಯಾಗಿದೆ, ಇಲ್ಲ ಉಮಾ ಖಂಡಿತ ನಿನ್ನ ದಾರಿಗೆ ಅಡ್ಡಲಾಗಿರೊಲ್ಲ. ಎಲ್ಲಾದರು ದೂರ ಹೊರಟು ಹೋಗ್ತೀನಿ. ನಿಮ್ಮ ನೆರಳಿಂದ ದೂರದೂರಕ್ಕೆ ಹೋಗ್ತೀನಿ ಎಂದು ತುಟಿ ಕಚ್ಚಿಕೊಂಡಳು. ಉಮಾಗೆ ನಿಜವಾಗಿಯೂ ಅಕ್ಕನ ಎದೆ ಬೆಂದಿದೆಯೆನಿಸಿತು. ಜೊತೆಗೆ ಅವಳ ಮಾತಿನ ಧಾಟಿ ಭೀತಿಯನ್ನೂ ಹುಟ್ಟಿಸಿತು.

ನಿನಗೇನು ಹುಚ್ಚು ಹಿಡಿದಿದೆಯಾಕ್ಕ? ಸುಮ್ಮನೆ ಪ್ರಾಣ ತೆಗೆದುಕೊಂಡರೆ ಬಂದ ಹೆಸರು ಹೋಗುತ್ತದೆಯೇ... ತಲೆ ಕೆಡಿಸಿಕೊಂಡು ಇಂಥ ಸಾಹಸಕ್ಕೆ ಕೈ ಹಾಕಬೇಡ. ನಾಳಿದ್ದು ಗುರುವಾರ ವರನ ಕಡೆಯವರು ಬರ್ತಾರಂತೆ, ನೋಡಿ ನಿನ್ನ ಮನಸ್ಸಿಗೆ ಒಪ್ಪಿದರೆ ಮದುವೆ ಮಾಡಿಕೊಂಡು ಬಿಡು– ಎಂದು ದೊಡ್ಡವರಂತೆ ಉಪದೇಶ ಮಾಡಿದಳು. ನನ್ನ ಕಣ್ಣು ತಪ್ಪಿಸಿ ಪ್ರಾಣ ಗೀಣ ಕಳೆದುಕೊಳ್ಳುವ ವಿಚಾರ ಮಾಡಿದರೆ ನನ್ನಾಣೆ ನೋಡು ಎಂದು ಹೆದರಿಸಿದಳು.

ಜಾನಕಿ ಯಾವುದನ್ನೂ ನಿರ್ಧರಿಸದಾದಳು. ತಾಯಿಯಿಲ್ಲದ ತನ್ನ ತಂಗಿಗೆ ತಾನೇ ಆಶ್ರಯ. ಇನ್ನೂ ಚಿಕ್ಕವಳು ತಾನು ಪ್ರಾಣ ಕಳೆದುಕೊಂಡರೆ ಅವಳು ಅವಿವೇಕದಿಂದ ಪ್ರಾಣಾಪಾಯಕ್ಕೆ ಒಳಗಾದರೆ? ಎಂದು ಮನಸ್ಸು ಯೋಚಿಸಿ ಹಿಂಜರಿದರೆ ಮರ್ಯಾದೆಯಿಲ್ಲದ ಬಾಳನ್ನು ಹೊತ್ತು ಬಾಳುವುದಕ್ಕಿಂತ ನೀನು ಸಾಯುವುದು ಮೇಲೆಂದು ಮತ್ತೊಂದು ಮನಸ್ಸು ಪಿಸುಗುಟ್ಟಿತು.

ಬಹಳ ಹೊತ್ತು ತಲೆ ಚಟಗುಟ್ಟಿತು. ಅನಿರ್ಧರಿತ ಭಾವನೆಗಳ ತಾಕಲಾಟದಿಂದ ಮೈ ಕಾವೇರಿತು. ಕಣ್ಣು ಕತ್ತಲಿಟ್ಟಿತು. ಉಮಾ ಎಂದು ತಂಗಿಯನ್ನು ಕೂಗಿದಳು.

ಅಕ್ಕನ ಕೂಗಿಗೆ 'ಉಮಾ'ಳಿಗೆ ಗಾಭರಿಯಾಯಿತು. ಓಡಿ ಬಂದು ಅಕ್ಕನನ್ನು ಹಿಡಿದಳು. 'ಯಾಕಕ್ಕಾ, ಮೈಸರಿಯಿಲ್ಲವೇ?' ಎಂದು ಪ್ರಶ್ನಿಸಿದ್ದಕ್ಕೆ ಮೈ ಸರಿಯಿಲ್ಲದೇನು ಉಮಾ? ನನ್ನ ಮನಸು 'ಗೊಂದಲಪ್ರದ'ವಾಗಿ ಬದುಕಿನ ಆಸೆ, ಸಾವಿನ ನಿರ್ಧಾರಗಳ ಘರ್ಷಣೆ ದುರ್ಬಲವಾಗಿಸುತ್ತಿದೆ. ನೀನೇ ಹೇಳು ಉಮಾ ನಾನ್ಯಾಕೆ ಬದುಕಬೇಕು?... ನೀನು ನನಗಿಂತ ಚಿಕ್ಕವಳಾದರೂ ತಾಯಿಯಂತೆ ಭಾವಿಸುತ್ತೇನೆ. ಈ ಪಾಪಿ ಹೃದಯಕ್ಕೆ

ನೆಮ್ಮದಿಯಿರಲಾರದು. ನಾನು ಸಾಯುತ್ತೇನೆ– ಎಂದು ಒಂದೇ ಸಮನೆ ಹೇಳಿ ಹೇಳಿ ಅತ್ತಳು.

ಅಕ್ಕನ ಮಾನಸಿಕ ಯಾತನೆ ಉಮಾಳಿಗೆ ಅರ್ಥವಾಯಿತು. ಆದರೆ ಅದನ್ನು ಹೇಗೆ ಪರಿಹರಿಸಬೇಕೆಂಬುದು ಮಾತ್ರ ತಿಳಿಯಲಿಲ್ಲ. ಸಮಾಧಾನವಾಗಿಯೇ ಹೇಳಿದಳು. ದಯವಿಟ್ಟು ಸುಮ್ಮನಿರಕ್ಕ. ನೀನು ಮಾಡಿದ್ದು ಯಾರೂ ಮಾಡದಿರುವ ಮಹಾಪರಾಧವೇನೂ ಅಲ್ಲ. ಅವನು ಮೋಸಗಾರ. ಅವನ ಮಾತಿಗೆ ನೀನು ಬಲಿಬಿದ್ದೆ ಅಷ್ಟೆ. ಈಗಲೂ ಅವನು ಸಿಕ್ಕರೆ ಛೀಮಾರಿ ಹಾಕಿ, ಮುಖದ ನೀರಿಳಿಸಿ ಬರ್ತೀನಿ. ಓದಿದವನು ಸುಸಂಸ್ಕೃತ ಅಂತ ಎಲ್ಲರೂ ಹೊಗಳ್ತಾ ಇದ್ದರು. ಅವನ ಬಣ್ಣ ಈಗ ಗೊತ್ತಾಯ್ತಲ್ಲ. ಈ ಊರಿಗೆ ಬಂದರೆ ಊರಿನವರೇ ಪೂಜೆ ಮಾಡ್ತಾರೆ ಸರಿಯಾಗಿ, ಅವರಪ್ಪ, ಅಮ್ಮನಿಗೆ ಈಗಲೇ ಮಗನ ಸಾಹಸದಿಂದ ತಲೆ ಎತ್ತಿ ತಿರುಗುವುದಕ್ಕೆ ಆಗ್ತಾ ಇಲ್ಲ– ಎಂದು ಸಿಡಿಸಿಡಿಯಿಂದ ಹೇಳಿದಳು.

ಜಾನಕಿಗೆ ಹೊನ್ನ ಕೆಟ್ಟವನೆಂದು ಈಗಲೂ ನಂಬಲು ಆಗುತ್ತಿಲ್ಲ. ಬಹುಶಃ ಬರಬಹುದೇನೋ? ನಾನು ಆತುರ ಪಟ್ಟು ಬಂದು ಬಿಟ್ಟಿರುವುದಾದರೆ? ಎಂದೇ ಯೋಚಿಸಿತು ಅವಳ ಮನಸ್ಸು.

ಹೊನ್ನನನ್ನು ಬೈಯ್ಯಬೇಡ ಉಮಾ, ಪಾಪ ಅವನಿಗೆ ಏನಾಗಿದೆಯೋ ಏನೊ? ಎಂದು ಹೆಂಗರುಳಿನ ಮಾಮೂಲು ರೀತಿಯಲ್ಲಿ ಮಾತನಾಡಿದಳು.

ಸರಿ ಸರಿ ಬರ್ತಾನೇಂತ ಕಾದಿದ್ದು ಬರುವ ಅವಕಾಶ ಒದ್ದುಕೊಂಡು ಸಾಯಬೇಡಕ್ಕ– ನಿನ್ನ ನಡತೆಯಿಂದ ಅಪ್ಪನ ಎದೆ ಒಡೆದು ಹೋಗಿದೆ. ಈಗಾಗಲೇ ಊರಿಗೆಲ್ಲಾ ಗೊತ್ತಾಗಿದೆ. ಊರಾಚೆಯವರಿಗೂ ತಿಳಿದರೆ ಇನ್ನು ಮುಂದೆ ನಮ್ಮ ಮನೆಯೊಂದಿಗೆ ಸಂಬಂಧವೇ ಬೇಡವೆನ್ನುತ್ತಾರೆ. ನಾನು ಹೇಳ್ತೀನಿಂತ ಬೇರೆಯಾಗಿ ಭಾವಿಸಬೇಡ. ಅಕ್ಕ ನಾನೂ ಬಾಳಬೇಕಾಗಿದೆ ಅಲ್ವೆ? ಅಪ್ಪನೇ ನನ್ನೊಟ್ಟಿಗೆ ಯಾವಾಗಲೂ ಇರ್ತಾನೆಯೇ, ನನ್ನ ಭವಿಷ್ಯದ ಯೋಚನೆ ಮಾಡು. ನಾಳೆ ಯಾರಿಗಾದರೂ ತಿಳಿದರೆ ನನ್ನನ್ನು ಬೇಡವೆಂದಾರು. ನನ್ನ ನಡತೆಯನ್ನೂ ಶಂಕಿಸಿಯಾರು... ದೊಡ್ಡವಳಾದ ನೀನುಳಿದು ನಾನು ಮದುವೆಯಾಗುವುದು ಸಾಧ್ಯವೇ ಇಲ್ಲ– ನಿರಾಸೆಯ ದನಿಯಿತ್ತು ಮಾತಿನಲ್ಲಿ.

ಜಾನಕಿಗೆ ಅವಳ ಮಾತಿನ ವಾಸನೆಯ ಜಾಡು ಹತ್ತಿತ್ತು. ತಂಗಿಗೂ ತನ್ನ ವಿಚಾರವಾಗಿ ಅಂತರಂಗದಲ್ಲಿ ಒಳ್ಳೆಯ ಅಭಿಪ್ರಾಯವಿಲ್ಲ. ಸಣ್ಣ ತಪ್ಪೊಂದು ತನ್ನ ಮತ್ತು ತನ್ನವರ ನಡುವೆ ಎಷ್ಟಗಲದ ಅಂತರವನ್ನು ಕೊರೆದಿದೆ. ನಿಜವಾಗಿ ತಂಗಿಗೆ ತನ್ನ ಯೋಗಕ್ಷೇಮ ಬೇಕಿಲ್ಲ. ಅವಳ ಭವಿಷ್ಯಕ್ಕೆ ಅಡ್ಡಿಯಾಗಿರುವ ನಾನು ಅವಳ ಹಾದಿಯಿಂದ ಸರಿದರೆ ಸಾಕು. ನನ್ನ ಮದುವೆಯ ಆತುರಕ್ಕೆ ಅವಳ ಸ್ವಾರ್ಥವೇ ಕಾರಣ... ನಿಜ ತಾನಿದ್ದು ಅವರನ್ನೇಕೆ ಹಾಳುಗೆಡವಬೇಕು. ಎಂಥವನೇ ಬರಲಿ ನಾನು ಮದುವೆಯಾಗುತ್ತೇನೆ. ಸಾವು ಬದುಕುಗಳು ನನ್ನ ಕೈಲಿಲ್ಲ. ನನ್ನ ವಿರೋಧ,

ಪ್ರತಿಭಟನೆಗಳೇನಿದ್ದರೂ ರೆಕ್ಕೆ ಕತ್ತರಿಸಿಕೊಂಡ ಹಕ್ಕಿಯ ಹಾರುವಿಕೆಯಷ್ಟೇ!... ಯೋಚಿಸಿದಷ್ಟೂ ಜಾನಕಿಗೆ ದಾರಿ ಕತ್ತಲಾಗುತ್ತಿತ್ತು. ತನ್ನ ಮೇಲೆ ತನ್ನವರ ಮೇಲೆ ಜಿಗುಪ್ಸೆಯೆನಿಸಿತು. ಮಂಕು ಹಿಡಿದ ಮನಸ್ಸು ಚಟುವಟಿಕೆಯನ್ನು ಕಡಿಯಿತು.

ಬೇಸರ ಆಕಳಿಕೆ, ತಂಗಿಯ ಮಾತುಗಳು– ಅಪ್ಪನ ರೀತಿ, ಅಮ್ಮನ ದೈನ್ಯ ಮುಖ, ಯಾವುದೂ ಅವಳಿಗೆ ಹಿಡಿಸಿ ಬರಲಿಲ್ಲ. 'ತಥ್' ಎಂದುಕೊಂಡಳು. ಕೂಡಲೇ ಅವಳಿಗೆ ತನ್ನಲ್ಲಿ ಬೆಳೆಯುತ್ತಿರುವ ಕುಡಿಯ ನೆನಪಾಯಿತು. ಸಣ್ಣಗೆ ನಡುಕ ಹುಟ್ಟಿತು. ಎದೆ ಹೊಡೆದುಕೊಂಡಿತು. ಮುಖದ ಮೇಲೆ ಬೆವರಿನ ಹನಿಗಳು. ತಂಗಿಗೆ ಇದು ಗಮನಕ್ಕೆ ಬಂದಿರಬಹುದೇ– ಎಂದು ಭೀತಳಾಗಿ ಚಿಂತಿಸಿದಳು. ಇದಕ್ಕೇನಾದರೂ ದಾರಿ ನೋಡಬೇಕು... ಆದರೆ ಮನಸ್ಸು ಒಪ್ಪಲಿಲ್ಲ. ಹೊನ್ನನ ನೆನಪು ತನಗೆ ಬೇಕಾಗಿದೆ. ಜೀವನದಂತರದಲ್ಲಿಯೂ ಅವನನ್ನು ಮರೆಯಲು ಸಾಧ್ಯವಿಲ್ಲ. ತನ್ನ ಕೈ ಹಿಡಿಯುವವನು ಎಂಥವನೋ... ಇದು ಉಳಿಯಲೇಬೇಕು. ಕ್ಷಣದ ಅನುಭವವಾದರೂ ಇಬ್ಬರ 'ಪ್ರೇಮ ಸ್ಮಾರಕ'– ಎಂದುಕೊಂಡು ಏನನ್ನೋ ನಿರ್ಧರಿಸಿದವಳಂತೆ ಎದ್ದಳು.

ಹೊಲಿಯುತ್ತಿದ್ದ ಉಮಾ ಅಕ್ಕ ಎದ್ದು ಹೋದುದನ್ನು ನೋಡಿದಳು. ಭಾವ ಶೂನ್ಯ ದೃಷ್ಟಿಯನ್ನು ಅತ್ತ ಒಂದೆರಡು ಕ್ಷಣ ನೆಟ್ಟಳು. ಕೈ ಯಾಂತ್ರಿಕವಾಗಿ ಹೊಲಿಗೆ ಕೆಲಸವನ್ನು ಮಾಡುತ್ತಿತ್ತು.

ಉಮಾ ಹೇಳಿದಂತೆ ಗುರುವಾರ ವರನ ಕಡೆಯವರು ಬಂದೇ ಬಂದರು. ಜಾನಕಿಯನ್ನು ನೋಡಿದ ಕೂಡಲೇ ಮಹಾಲಕ್ಷ್ಮಿಯಂತಿದ್ದಾಳೆಂದು ಹೊಗಳಿದರು. ಜಾನಕಿಯ ಅಪ್ಪನಿಗೆ, ಹೆಚ್ಚಾಗಿ 'ತಂಗಿ' ಉಮಾಳಿಗೆ ಖುಷಿಯೋ ಖುಷಿ. ಅಕ್ಕನಿಗೆ ದೊರೆತ ಗಂಡ ಹೇಗಿದ್ದಾನೆಂಬ ವಿಚಾರಕ್ಕಿಂತ ಅಕ್ಕನಿಗೂ ಒಬ್ಬ ಸಿಕ್ಕನಲ್ಲ–ಎನ್ನುವುದೇ ಸಮಾಧಾನ, ಅಪ್ಪನಿಗಂತೂ 'ಈ ದರಿದ್ರಕ್ಕೊಂದು ದಾರಿಯಾಯ್ತಲ್ಲ'– ಅನ್ನೋ ಮನೋಭಾವ, ಇನ್ನು ಉಳಿದದ್ದು ಜಾನಕಿ, ಅವಳಿಗೆ ನಿಮಿತ್ತ ಮಾತ್ರಕ್ಕೆ ಗಂಡ ಬೇಕಾಗಿದ್ದ. ಹೊನ್ನನ ಕುಡಿಗೊಂದು ಹೆಸರು ಹೇಳಿಕೊಳ್ಳಲು ಆಶ್ರಯವಷ್ಟೇ ಬೇಕಾಗಿತ್ತು. ಎರಡನೇ ಮದುವೆ! ಆದರೇನು? ಎರಡನೆಯದೇ ಅಲ್ಲವೆ!– ಎಂದು ನಕ್ಕಳು. ಸ್ವಲ್ಪ ಹೆಚ್ಚಿಗೆ ವಯಸ್ಸಾಗಿತ್ತು. ಆಗಲೇ ಸುಕ್ಕಿನ ತೆರೆಗಳು! ಜಾನಕಿ ಸ್ವಾಗತಿಸಿದಳು ಅಂಥವನನ್ನೂ!!

ಸರಳವಾದ ಮದುವೆ. ಅವಾಂತರವಿಲ್ಲದೆ ಜಾನಕಿಯ ತಪ್ಪು ನಡತೆ ವರನ ಕಡೆಯವರ ಕಿವಿಗೆ ಬೀಳದೆ ನಡೆದು ಹೋಯಿತು.

ಜಾನಕಿ ನೋಡಿದಳು, ಲೆಕ್ಕ ಹಾಕಿದಳು. ತಂಗಿಯ ಆ ಕಣ್ಣೀರಲ್ಲಿ ಎಷ್ಟು ನಿಜ, ಎಷ್ಟು ಸುಳ್ಳು– ಎಂದು. ಕಂಬನಿಯಾಚೆಗಿನ ಅವಳ ಅಂತರ್ಯವನ್ನು ತಿಳಿಯಲೆತ್ನಿಸಿದಳು. ಆದರೆ ಇದು ಸಾಧ್ಯವಾಗಲಿಲ್ಲ.

ಜಾನಕಿಗೆ ಭಾರೀ ಶ್ರೀಮಂತ ಗಂಡ. ಬಾಜಾ ಬಜಂತ್ರಿಗಳ ಹಿನ್ನೆಲೆಯಲ್ಲಿ ಅವಳೆದೆಯಾಳದ ನೋವಿನ ಹಾಡು ಕೇಳಿಸಲಿಲ್ಲ. ಕಲ್ಪನೆಯಲ್ಲಿನ ಹೊನ್ನನಿಂದಾಗಿ

ಮುಖದ ಮೇಲೆ ಒಂದು ಕ್ಷಣ ಮಂದಹಾಸದ ಮಿಂಚು ಮೂಡಿ ಮರೆಯಾಯಿತು. ಪಕ್ಕದಲ್ಲಿ ಅದ್ದೂರಿಯಾಗಿ ಕೂತಿದ್ದ ಗಂಡ ಹಲ್ಲು ಕಿಸಿದು ಪಕ್ಕಕ್ಕೆ ತಿರುಗಿ ಹೆಂಡತಿಯನ್ನು ನೋಡಿದ. ಜಾನಕಿಗೆ ಯಕೋ ಅಸಹ್ಯವೆನಿಸಿತು. ಮುಖ ಪಕ್ಕಕ್ಕೆ ತಿರುಗಿಸಿದಳು. ಆ ಮೊದ್ದು ಗಂಡನಿಗೆ ಅದು ಹೆಂಡತಿಯ ನಾಚಿಕೆ ಎಂದು ಮಾತ್ರವೇ ಅರ್ಥವಾಯಿತು.

ಬೇಗ ಹೊರಡುವಂತೆ ಆತುರ ಪಡಿಸಿದರು. ಪ್ರತಿಷ್ಠೆಯ ಪ್ರದರ್ಶನಕ್ಕೆ ಕಾರೇ ಬಂದಿತ್ತು ಇವರನ್ನು ಕರೆದೊಯ್ಯಲು. ಗಂಡ ರತಿಯಂತಿರುವ ಹೆಂಡತಿ ಸಿಕ್ಕಿದ್ದಾಳೆಂಬ ಭಾವನೆಯಿಂದ ಸ್ವಲ್ಪ ಚೆಲ್ಲು ಚೆಲ್ಲಾಗಿ ಆಡಿದ. ಜನ ಮುಸಿ ಮುಸಿ ನಕ್ಕರು. 'ಈ ಮುದುಕನಿಗೆ ಎಲ್ಲಿಲ್ಲದ ರಸಿಕತನ. ಅಬ್ಬಾ! ನೋಡು ಹೆಂಡತಿಯ ಹಿಂದು ಹಿಂದು ಸೆರಗು ಹಿಡಿದು ತಿರುಗುತ್ತಾನೆ' ಎಂದು ವ್ಯಂಗ್ಯವಾಗಿ ಅಣಕಿಸಿದ್ದುಂಟು. ಮತ್ತೆ ಕೆಲವರು ಪರವಾಗಿಲ್ಲ. ಅವಳ ಅದೃಷ್ಟ! ಅಂಗೈಯಲ್ಲಿಟ್ಟುಕೊಂಡೇ ಹೆಂಡತೀನ ಸಾಕ್ತಾನೆ' ಎಂದು ಅಸೂಯೆಯಿಂದ ಮಾತಾಡಿದ್ದುಂಟು.

ಸರಿ ಸರಿ ಈ ಮುದುಕನ್ನ ಕಟ್ಟಿಕೊಂಡು ಏನು ಸುಖ ಪಡೋದು? ಅವನಲ್ಲಿ ಹಣ ಇದ್ದರೆ ಆಯ್ತೇ?– ಎಂದು ವೇದಾಂತ ಹಾಡಿದರು.

'ಲೇ ಸುಮ್ನಿರ್ರೆ, ಹುಣಸೇ ಹಣ್ಣು ಹಳೇದಾದಷ್ಟೂ ರುಚಿ ಜಾಸ್ತಿ. ಮೊದಲನೇ ಹೆಂಡತೀಲಿ ಅನುಭವ ಪಡೆದಿದ್ದಾನೆ. ಅದರಿಂದ ರುಚಿ ಸತ್ತಿಲ್ಲ. ಬಲದಲಾಗಿ ರುಚಿ ಮತ್ತಷ್ಟು ಪುಷ್ಠಿಯಾಗಿದೆ' ಎಂದರು. ಇಬ್ಬರಿಗೂ ಸರಿ ಹೋಯ್ತು ಬಿಡು. ಅವನೂ ಕಂಡವ್ನು, ಅವಳೂ ಕಂಡವ್ಳು, ಜೋಡಿ ಅಚ್ಚುಕಟ್ಟಾಗಿ ಹೊಂದಿದೆ. ದೂರದಿಂದ ಯಾರೋ ಒಡಕು ಮಾತಾಡಿದರು ಒಗಟಿನಂತಿರುವ ಈ ಮಾತು ಎಲ್ಲರ ಕಿವಿಗಳನ್ನೂ ಚುರುಕುಗೊಳಿಸಿತು. ಸರಕ್ಕನೆ ಮಾತು ಬಂದತ್ತ ತಿರುಗಿದರು.

ಅಷ್ಟರಲ್ಲಿ ಮೆರವಣಿಗೆ ಮುಂದುವರೆಯಿತು. ಜನ ಚದುರಿ ಕೆಲವರು ಹಿಂಬಾಲಿಸಿದರು. ಉಮಾ ತೀರ ಹತ್ತಿರದಲ್ಲಿ ನಿಂತಿದ್ದಳು, ಅವಳ ಕಣ್ಣು ಹನಿಸಿತು. ಜಾನಕಿಯ ಕಣ್ಣಲ್ಲೂ ನೀರು ಬಂತು.

ಹೋಗಿ ಬರ್ತೇನೆ ಉಮಾ– ನಿನ್ನ ಮದುವೆಗೆ ಮರೀಬೇಡ– ಎಂದು ಎಚ್ಚರಿಸಿದಳು.

ಇಲ್ಲಕ್ಕ ಖಂಡಿತ ಮರೆಯುವುದಿಲ್ಲ. ನೀನು ತಾನೇ ನನ್ನ ತಾಯಿಯ ಸ್ಥಾನದಲ್ಲಿರೋದು. ನೀನಿಲ್ಲದೆ ಹೇಗೆ ತಾನೆ ನನ್ನ ಮದುವೆ ನಡೆಯುತ್ತೆ. ಆಗಾಗ ಬಂದು ಹೋಗ್ತಿರಕ್ಕ– ಎಂದು ಹೇಳಿ ಬಿಕ್ಕಿ ಬಿಕ್ಕಿ ಅತ್ತಳು.

ಇವರಿಬ್ಬರ ಮಾತು ನಡೆಯುವಾಗ ಜಾನಕಿಯ ಗಂಡ ಮತ್ತಾರೊಂದಿಗೋ ಮಾತನಾಡುತ್ತಿದ್ದ ಇದ್ದಕ್ಕಿದ್ದಂತೆಯೇ ಹೆಂಡತಿಯ ನೆನಪು ಬಂದು ಅಸಮಾಧಾನವಾಯಿತು– ಎಷ್ಟು ಹೊತ್ತಾದರೂ ಅವಳ ಪುರಾಣ ಮುಗಿಯುವಂತಿಲ್ಲ. ಅವಳತ್ತ ತಿರುಗಿ, ಮೆಲ್ಲಗೆ ತಿವಿದ. ಅವನ ಸ್ಪರ್ಶದಿಂದ ಬೆಚ್ಚಿದಳು. ಆದರೆ ಕೂಡಲೇ ಎಚ್ಚತ್ತುಕೊಂಡು, ಮತ್ತೊಮ್ಮೆ ಜಾನಕಿ ತಂಗಿಗೆ ಬರುತ್ತೇನೆಂದು ಹೇಳಿದಳು.

ನಿಧಾನವಾಗಿ ಕಾರು ಸಾಗಿತು. ಗೆಳತಿ ಪಾರ್ವತಿಯ ಮನೆಯ ಮುಂದೆಯೇ ಹಾದುಹೋಯಿತು. ಆದರೆ ಪಾರ್ವತಿ ಹೊರಗೆ ಬರಲಿಲ್ಲ. ತನಗೆ ಸೇರಬೇಕಿದ್ದ ಹೊನ್ನನನ್ನು ಅವಳೇ ಎಬ್ಬಿಸಿಕೊಂಡು ಹೋಗಿರಬೇಕೆಂದಿನಿಸಿ ಅವಳೊಡನೆ ಮಾತು ಬಿಟ್ಟಿದ್ದಳು. ಅಷ್ಟೇ ಅಲ್ಲದೆ ಪಾರ್ವತಿಯ ತಂದೆ ತಾಯಿಯರು, ಜಾನಕಿಯ ನಡತೆಗೆ ಹೇಸಿ, ಅವಳ ಜೊತೆ ಸೇರಿದರೆ ಯಾರಾದರೂ ಹೆಣ್ಣು ಮಕ್ಕಳು ಕೆಡುತ್ತಾರೆಂದು ಅಭಿಪ್ರಾಯ ತಳೆದು ಮಗಳಾದ ಪಾರ್ವತಿಯನ್ನು ನಿರ್ಬಂಧದಲ್ಲಿರಿಸಿದರು. ಹೊನ್ನ ತನ್ನ ಸ್ವತ್ತೆಂದು ಭಾವಿಸಿದ್ದ ಅವಳಿಗೆ ಗೆಳತಿಯ ದ್ರೋಹ, ಸೇಡನ್ನು ಕೆರಳಿಸಿತ್ತು. ಅವನೊಡನೆ ಪರಿಚಯಿಸುವಾಗ, ಪರಿಣಾಮವನ್ನು ನಿರೀಕ್ಷಿಸಿಯೇ ಇರಲಿಲ್ಲ. ಆದರೆ ಜಾನಕಿ ತಾನೂ ಗಿಟ್ಟಿಸಿಕೊಳ್ಳದೆ, ತನಗೂ ದಕ್ಕದಂತೆ ಮಾಡಿದ್ದಾಳೆಂದೇ ಪಾರ್ವತಿಯ ಅಭಿಪ್ರಾಯ. ಅವಳನ್ನು ನೋಡಲೇಬಾರದೆಂದು ಕೊಂಡಳು. ಆದರೂ ಕಿವಿಗಡಚಿಕ್ಕುವ ಬಾಜಾ ಭಜಂತ್ರಿಗಳ ಅಬ್ಬರಕ್ಕೆ ಕಿವುಡಾಗಿರಲು ಸಾಧ್ಯವಾಗಲಿಲ್ಲ. ಮೆಲ್ಲನೆ ಕಿಟಕಿ ಬಾಗಿಲು ತೆರೆದು ಕುತೂಹಲದಿಂದ ಕಣ್ಣು ಹಾಯಿಸಿದಳು.

ಪಾರ್ವತಿಯ ತಾಯಿ ಅಸಮಾಧಾನದಿಂದ ಗುಡುಗಿದಳು. ‘ಆ ಹಾಳು ಮುಂಡೇನ ಅದೇನು ನೋಡ್ತೀಯ? ಸೂಳೆಮುಂಡೆ, ಒಬ್ಬನನ್ನು ಹಾಳು ಮಾಡಿದ್ದು ಸಾಲದಾಗಿ ಈಗ ಇವನ ಮನೆ ಹಾಳ್ಮಾಡೋಕೆ ಹೊರಟವ್ಳೆ. ಇವನ ಜೊತೆ ಅದೇನು ಸಂಸಾರ ಮಾಡ್ತಾಳೆ. ಅಷ್ಟು ಚೆನ್ನಾಗಿರುವವಳು ಇಂಥಾವ್ನ ಒಪ್ಪಿರೋದಕ್ಕೆ ಏನೋ ಮಸಲತ್ತಿದೆ, ಮುದುಕನನ್ನು ಬೇಗ ಗೊಟಕ್ಕೆನಿಸಿಬಿಟ್ಟು ಮೋಜು ಮಾಡೊಕ್ಕೆ ಹೋಗವ್ಳೆ– ಎಂದು ಒಂದೇ ಸಮನೆ ಬಾಯಿಗೆ ಬಂದಂತೆ ಒದರಿದಳು.

ಕಿಟಕಿಯಾಚೆ ನೋಡತ್ತಿದ್ದ ಪಾರ್ವತಿಗೆ, ತಾಯಿ ಮಾತು ಕೇಳಿಸಿತು, ಜಾನಕಿ ಕೆಟ್ಟವಳಿರಬಹುದು. ಆದರೆ ತಾಯಿಯ ಬೈಗುಳ ಸ್ವಲ್ಪ ಅತಿಯಾಯಿತು ಎನಿಸಿ ನೋವಾಯಿತು. ಈಗ ತಾನೇ ಮದುವೆಯಾಗಿ ಹಸುರಾಗಿ ಬಾಳಲು ಹೋಗುತ್ತಿರುವಾಗ, ಅವಳ ಗಂಡನ ಸಾವಿನ ಮಾತು, ತೀರಾ ಕೆಡುಕೆನಿಸಿತು. ಸುಮ್ಮನಿದ್ದರೆ ಅಮ್ಮ ಮತ್ತೆ ಮಾತು ಮುಂದುವರೆಸುತ್ತಾಳೆಂದು ತಿಳಿದು, ಸ್ವಲ್ಪ ಸುಮ್ಮನಿರಮ್ಮ, ಬೈಯುವುದಕ್ಕೂ ಒಂದು ಮಿತಿ ಇದೆ. ಅವಳದೇ ತಪ್ಪು ಅಂತ ಹೇಗೆ ತಾನೇ ಹೇಳ್ತಿ? ಇಬ್ಬರೂ ಸೇರಿರುವಾಗ ಒಬ್ಬರನ್ನೇ ಯಾಕೆ ಬೈಯುತ್ತೀ? ಹೊನ್ನಂದೆ ತಪ್ಪಿದ್ದರೆ?... ಎಂದು ಪ್ರಶ್ನಿಸಿದಳು.

ಹೌದೌದು, ಕೂತ್ಕೊಳ್ಳೆ ಸುಮ್ನೆ. ಬಾಳ ಕಂಡವ್ಳಂತೆ ಮಾತಾಡ್ತಿ. ಹೊನ್ನನ್ನ ಹುಟ್ಟಿದಾಗಿನಿಂದ ನೋಡಿದ್ದೀನಿ... ಈ ಹಾಳು ಬೇವಾರ್ಸಿಣೇ ಅವನ ತಲೆ ಕೆಡಿಸಿದ್ದಾಳೆ. ಅದರಲ್ಲಿ ಸಂಶಯಾನೇ ಇಲ್ಲ? ನಿರ್ಧಾರದ ಧ್ವನಿಯಲ್ಲಿ ಹೇಳಿದಳು.

ಅಮ್ಮನ ಬಳಿ ಇನ್ನು ಚರ್ಚಿಸಿ ಪ್ರಯೋಜನವಿಲ್ಲವೆಂದೆನಿಸಿ ಸುಮ್ಮನಾದಳು. ಮೆರವಣಿಗೆ ಹಾದು ಹೋಯಿತು. ಕಣ್ಣು ಮಂಜಾಯಿತು, ಬಾಗಿಲು ಮುಚ್ಚಿ ತಿರುಗಿ

ನಿಂತು ಗಟ್ಟಿಯಾಗಿ ಎದೆಯನ್ನು ಅದುಮಿಟ್ಟು ಕೊಂಡಳು. ಜಾನಕಿಯನ್ನು ಬೇಡಿನಿಂತ ಹೊನ್ನನ ದೀನ ಮುಖ ಕಣ್ಣೆದುರಿಗೆ ಬಂದು ನಿಂತುದು ಹಿಂಸೆಯಾಗಿ ಕಣ್ಣು ಬಿಟ್ಟಳು. ಅವಳಿಗೆ ಕನಸುಗಳೇ ಭೀತಿಗಳಾದವು!

* * *

ಮೂರು ಹೊತ್ತು ಗಂಡನಿಗೆ ಜಾನಕಿಯ ಜೊತೆ ಬೇಕೆನಿಸುತ್ತಿತ್ತು. ಆದರೆ ಜಾನಕಿಗೆ ಗಂಡನೆಂದರೆ ಅಸಹ್ಯ. ಅವನೊಂದಿಗೆ ಮಲಗುವುದೆಂದರೇನೇ ಹಿಂಸೆಯಾಗುತ್ತಿತ್ತು. ರಾತ್ರಿಗಳೆಲ್ಲಾ ಮುಳ್ಳುಗಳಾಗಿದ್ದವು. ಕತ್ತಲಲ್ಲಿ ಮೈ ಮರೆತು ಗಂಡನ ಜಾಗದಲ್ಲಿ ಹೊನ್ನನನ್ನು ಕಲ್ಪಿಸಿಕೊಳ್ಳುತ್ತಿದ್ದಳು. ಅಕಸ್ಮಾತ್ತಾಗಿ ನೆನಪು ಮರೆತು ಗಂಡನ ಮೇಲೆ ಕೈ ಹಾಕಿದರೆ, ಸುಕ್ಕು ತೆರೆಗಳು ಸ್ಪರ್ಶಕ್ಕೆ ಸಿಕ್ಕಿದರೆ, ಕೆಂಡ ತುಳಿದವಳಂತಾಗುತ್ತಿದ್ದಳು. ಅವಳಿಗೆ ಅವನ ಪ್ರೀತಿ ಸ್ನೇಹಗಳು ಸಹಿಸಲಾರದ ಹಿಂಸೆಗಳಾಗಿದ್ದವು. ಇವನ ಕಾಟ ತಪ್ಪಿದರೆ ಸಾಕೆನಿಸುವಂತಾಗುತ್ತಿತ್ತು.

ಮಾಡುವುದಕ್ಕೆ ಕೆಲಸವಿಲ್ಲ. ತಿಜೋರಿ ತುಂಬ ಹಣವಿದೆ. ವೇಳೆ ಕಳೆಯುವುದಕ್ಕೆ ಈ ಹೆಂಡತಿಯೊಬ್ಬಳೇ. ಸ್ನೇಹಿತರ ಮನೆಗೆ ಹೋಗುವುದನ್ನು ಸಂಪೂರ್ಣವಾಗಿ ನಿಲ್ಲಿಸಿ ಬಿಟ್ಟಿದ್ದ. ಬೆಳಗಾಗೆದ್ದರೆ ರಾತ್ರಿ ನಿದ್ದೆ ಬರುವವರೆಗೂ ಗಂಡನ ಕಾಟದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅವಳ ಹೆಜ್ಜೆ ಹೆಜ್ಜೆಗೆ ಅಡ್ಡ ಬಂದು ಪೀಡಿಸುತ್ತಿದ್ದ. ಅವನ ಪ್ರೀತಿ ಹೆಚ್ಚಿದಷ್ಟೂ ಜಾನಕಿಯ ನೋವು ಹೆಚ್ಚಾಗುತ್ತಿತ್ತು. ಅವನು ಹತ್ತಿರ ಬಂದಷ್ಟು ಹೊನ್ನನ ಅಂತರದ ನೆನಪು ಸೀಳುತ್ತಿತ್ತು. ಹೊಸ ಯೌವನದ ಹೊನ್ನನ ನೆನಪೊಂದು ಕಡೆ, ಮುದಿಗಂಡನ ಒತ್ತರಿಸುವ ಪ್ರೀತಿಯೊಂದು ಕಡೆ ಅವಳನ್ನು ಸೆಳೆಯುತ್ತಿತ್ತು. ಬತ್ತಿದ ಹೊನಲಾಳದಲ್ಲಿ ಹಸಿ ಯೌವನದ ಸೆಲೆಯಿತ್ತು; ಸುಕ್ಕಿದ ಒಡಲೊಳಗೆ ಸೊಕ್ಕಿನ ಕಾಮವಿತ್ತು.

ಹಿಂಸೆ ಅತಿಯಾದಾಗ ಅವನನ್ನು ಮುಗಿಸಿಬಿಡಲೇ ಎಂದು ಯೋಚಿಸುತ್ತಿದ್ದಳು. ಹೊಟ್ಟೆಯಲ್ಲಿನ ಜೀವಕ್ಕೆ ಈ ಮುದಿ ಅಪ್ಪನ ಹೆಸರಂಟಿಸುವುದು ವಾಕರಿಕೆ ಬರಿಸುತ್ತಿತ್ತು. ಆದರೂ ಸಹಿಸಿದಳು. ದಿನಗಳಿಗಾಗಿ, ಕ್ಷಣಗಳಿಗಾಗಿ ಕಾದಳು.

ಹತ್ತಿಕ್ಕಿದರೂ ಅಸಹ್ಯ, ಅವಳ ರೀತಿಯಲ್ಲಿ ವ್ಯಕ್ತವಾಗುತ್ತಿತ್ತು. ಕಾಮುಕನಂತೆ ಕಾದು ಬೀಳುತ್ತಿದ್ದ. ಗಂಡನ ಆಕ್ರಮಣದಲ್ಲಿ ಅಸಹಾಯಕ ಎದುರಾಳಿಯಂತೆ ಚಡಪಡಿಸಿದಳು. ಕೊನೆಗೆ ಉಪಾಯಾಂತರದಿಂದ ಗರ್ಭದ ಕೂಸಿಗೆ ಅಪಾಯವಾದೀತೆಂಬ ಹೆದರಿಕೆಯಿಂದ ಅವನನ್ನು ನಿವಾರಿಸಿದಳು. ಆಕ್ರಮಣವನ್ನು ಅಣಚಿದಳು.

ಮುದುಕ ಬೆಪ್ಪನಂತೆ ಒಪ್ಪಿದ. ಹೊರಬರುವ ಕೂಸಿಗಾಗಿ ಕಾದ. ಜಾನಕಿ ನಿರಾಳವಾಗಿ ಉಸಿರಾಡಿದಳು. ಬಸಿರ ಬಳ್ಳಿಯ ಮೊಗ್ಗನ್ನು ಊಹಿಸಿಕೊಂಡು ಹಿಗ್ಗಿದಳು. ಖಂಡಿತ

ಹೆಣ್ಣು ಮಗುವಾದರೆ ಅವಳನ್ನು ರಾಜಕುಮಾರಿಯಾಗಿ ಬೆಳೆಸಬೇಕೆಂದುಕೊಂಡಳು. ಅವಳಿಗಾಗಿ ಭವಿಷ್ಯವನ್ನು ನಿರ್ಧರಿಸಿಕೊಳ್ಳುತ್ತಿದ್ದಳು.

ನೆಲ ಸಿದ್ಧವಾಯಿತು. ಬಿತ್ತಿದ ಬೀಜ ಮೊಳಕೆಯೊಡೆಯಿತು. ಹೊರಗಿನ ಆಕಾಶ, ಬಯಲುಗಳ ಹೊಗರು ಹಿಡಿದ ಆ ಕುಡಿ ಮೆದುವಾಗಿ ತೊನೆದಾಡಿತು. ಮೆಲ್ಲನೆ ನಕ್ಕಿತು.

ನೆನ್ನೆಯಿಂದ ಕವಿದ ಕತ್ತಲು ಸರಿದು ತಿಳಿಬೆಳಕು ಮೂಡಿತು. ಅದರೊಂದಿಗೆ ಮೂಲದ ಮರದ ನೆನಪು ಸುರಳಿ ಸುರಳಿಯಾಗಿ ಬಿಚ್ಚಿಕೊಂಡಿತು.

ತಳವಂಟಿದ ಕಡಲುಕ್ಕಿ ಕರೆದಾಟಿ ಹರಿಯಿತು. ಉಲ್ಲಾಸದ ಪರಿಸರದಲ್ಲಿ ಮುದುಕ, ಮುದಿಗೂಬೆಯಂತೆ ಕಂಡ. ಅವನ ಹದ್ದು ಕಣ್ಣಿಂದ, ಬೇಸರದ ಬಂಧನದಿಂದ ಬಿಡಿಸಿಕೊಂಡು ಓಡಲು ಮನಸ್ಸು ರೆಕ್ಕೆ ಬಿಚ್ಚಿ ಫಡಫಡ ಹೊಡೆದುಕೊಂಡಿತು.

* * *

ವಿಜಯದ ನಗೆ ತುಟಿಯ ಮೇಲೆ ತೊನೆದಾಡಿತು. ಬಿಗುವು ಸಡಿಲಿ ಮಂದಾರ ಸೌರಭದ ಮಂದಗಾಳಿಯ ಹಿತ ಎದೆ ತಟ್ಟಿತು.

'ಜಾನಕಿ ಯಾರಿಗೂ ತಿಳಿಯದಂತೆ ಮುದುಕನನ್ನು ನಿವಾರಿಸಿದ್ದಳು. ಅಬ್ಬ ಎಷ್ಟು ನಿರ್ದಯಿ!– ಎಂದು ಆಗೊಮ್ಮೆ ಈಗೊಮ್ಮೆ ಅನಿಸಿದರೂ ಅವನ ರಾಕ್ಷಸ ಕಾಮದ ಹಸಿವು ಅವಳನ್ನು ಮುಳ್ಳು ಹಂದಿಯನ್ನಾಗಿಸುತ್ತಿತ್ತು. ಹೊರಗಿನ ಜನಕ್ಕೆ ನಗು. ಪುಂಡರು, ಪೋಲಿಗಳ ಬಾಯಿಗೆ ಅವಳು ಹುರಿಗಾಳು. ಹೊರಗೆ ಹೋದರೆ ಸಾಕು, ಜಾನಕಿಯ ಪ್ರಾಮಾಣಿಕತನವನ್ನು ಶಂಕಿಸಿ ನಾಲಗೆಗಳು ಲೊಳ ಲೊಳ ಹೊರಳುತ್ತಿದ್ದವು. ಈ ಮುದುಕನ್ನ ಕಟ್ಕೊಳ್ಳೋಕೆ ಅವಳೇನು ಮಂಕೆ? ಹೆಸರಿಗೊಬ್ಬ, ಖುಷಿಗೊಬ್ಬ! ಮೇಲೆ ನೋಡಿದರೆ ಮಹಾ ಪತಿವ್ರತೆ!... ಚು! ಚು! ಚು!... ನಮ್ಮ ಹೆಣ್ಮಕ್ಕಳ ಆದರ್ಶ ಸತಿ!– ಎಂದು ವ್ಯಂಗ್ಯವಾಗಿ ಅನ್ನುತ್ತಿದ್ದಂತವರಿಗೆ, ಮಗಳನ್ನು ನೋಡಿದ ಮೇಲೆ ಮತ್ತಷ್ಟು ಬಲವಾದ ಮಾಹಿತಿ ದೊರೆತಂತಾಯಿತು.

ಈಗ ಹೆಸರಿಗೂ ಗಂಡನಿಲ್ಲದಾದಾಗ ಮಾತು ಹರಿಹಾಯುತ್ತಿತ್ತು. ಜಾನಕಿಗೆ ಜನರ ಈ ವರ್ತನೆ ಅರ್ಥವೇ ಆಗುತ್ತಿರಲಿಲ್ಲ. ಅವಳಿಗೆ ಉಳಿದಿದ್ದ ಆಸೆಯೊಂದೇ! ಕಣ್ಣು ಕುಕ್ಕುವ ಮಗಳನ್ನು ರಾಜಕುಮಾರನಂಥವನಿಗೆ ಕೊಡಬೇಕೆಂದು. ಆದರೆ ಜನ ಬಿಡಲಿಲ್ಲ. ಅವರಾಡುವ ಮಾತುಗಳು ರಾತ್ರಿ ಹಗಲೂ ಕಾಡುವ ಭೂತಗಳಾದವು. ಒಮ್ಮೊಮ್ಮೆ ರೋಸಿಹೋಗಿ ಅವರಂದಂತೆ ತಾನಾಗಬಾರದೇಕೆ? ಎಂದು ಯೋಚಿಸಿದಳು. ಮನಸ್ಸು ಅಳುಕಿತು. ಅವನೇನಾದರೂ ದೆವ್ವವಾಗಿ ಕಾಡಿದರೆ ಎನಿಸಿದರೂ ಅತೃಪ್ತವಾಗಿ ಮನಸಿನಾಳದಲ್ಲಿ ಉಳಿದು ಹೋದ ಕಾಮನೆಗಳು ಕೆರಳುತ್ತಿದ್ದವು. ಆಗ ಗಟ್ಟಿಯಾಗಿ ಹಲ್ಲು ಕಚ್ಚಿಕೊಂಡು ತನ್ನನ್ನೇ ತನ್ನ ಅಯೋಗ್ಯ ವಿಚಾರಗಳಿಗಾಗಿ ಹಳಿದುಕೊಳ್ಳುತ್ತಿದ್ದಳು.

ಕೆಲವೊಮ್ಮೆ ವ್ಯಂಗ್ಯವಾಗಿ ನಕ್ಕುಬಿಡುತ್ತಿದ್ದಳು. ದಿನಗಳೊಂದಿಗೆ ಅವಳೊಡಲ, ಅವಳ ಮನದ ಕಾವು ಇಳಿದು ಕೇವಲ ತಂಪು ಉಳಿಯಿತು.

ಒಂಟಿಯಾಗಿದ್ದಾಗ, ಮಗಳು ಮುಗ್ಧವಾಗಿ ನಕ್ಕು ಅಮ್ಮ, ಅಪ್ಪ ಎಲ್ಲಿ ಎಂದು ಕೇಳಿದಾಗ ಮುದುಕನ-ಹೊನ್ನನ ನೆನಪು ಒಡೆದು ನಿಲ್ಲುತ್ತಿತ್ತು. ಮುದುಕನ ನೆನಪಿಗೆ ಕಣ್ಣು ಮುಚ್ಚಿಕೊಳ್ಳುವ ಅವಳು ಹೊನ್ನನ ಕಲ್ಪನೆಗೆ ಕಣ್ಣು ತೆರೆದು ಹರ್ಷಿಸುತ್ತಿದ್ದಳು. ಒಬ್ಬನ ನೆನಪಿನಿಂದ ನೆಮ್ಮದಿ, ಮತ್ತೊಬ್ಬನ ನೆನಪಿನಿಂದ ನೋವು.

ಈ ಊರೇ ಬೇಡವೆನಿಸಿತು. ಬೇರೆಲ್ಲಾದರೂ ಹೋಗಿದ್ದರೆ, ಕಾಡುವ ನೆನಪುಗಳು ಸಾಯಬಹುದೆಂದು ಭಾವಿಸಿದಳು.

ಗಂಡನ ಆಸ್ತಿ ಕರಗಿತ್ತು. ಉಳಿದದ್ದನ್ನು ಗಂಟು ಕಟ್ಟಿಕೊಂಡು ಮಗಳೊಂದಿಗೆ ಕನ್ನೂರಿನಿಂದ ಸುಮಾರು ನೂರು ಮೈಲಿಗಳ ದೂರದ ಒಂದು ಹಳ್ಳಿಯಲ್ಲಿ ನೆಲೆಸಿದಳು.

* * *

ಅಪ್ಪನ ಸಾವು, ತಂಗಿಯ ಮದುವೆ ಸುದ್ದಿಗಳಷ್ಟೇ ಮುಟ್ಟಿದವು. ಮನಸ್ಸು ಕಹಿ ಯೋಚನೆಗಳಿಂದ ನಿಷ್ಠುರವಾಗಿತ್ತು. ತಂಗಿಯಾಗಲೀ, ಅಪ್ಪನಾಗಲೀ ಬಂಧುತ್ವದ ಸೆಳೆತದಿಂದ ದೂರವಾಗಿದ್ದರು. ಒಂದು ಸಣ್ಣ ತಪ್ಪಿಗೆ ಇಷ್ಟೊಂದು ಸಾಧಿಸುವ ಜನರ ಸಹವಾಸವೇ ಬೇಡವೆನಿಸಿ, ಬಸವನ ಹುಳುವಿನ ಬದುಕನ್ನು ಬದುಕಲು ನಿರ್ಧರಿಸಿದಳು.

ಮಗಳು ಬೆಳೆದಂತೆ ಬೇರೊಂದು ತೆರನಾದ ಯೋಚನೆಗಳು ಅವಳನ್ನು ಕಾಡಿದವು. ಪ್ರಯತ್ನಿಸಿದಷ್ಟೂ, ಹರಡುವ ಪರಿಮಳದಂತೆ ರತ್ನಳ ರೂಪ ಊರಿನ ಜನರ ಕಣ್ಣು ಕುಕ್ಕಿತು.

ಬಂದ ಹೊಸದರಲ್ಲಿ ಯಾರ ಪರಿಚಯವೂ ಇಲ್ಲದೆ ಅಸಹಾಯಕತೆಯ ಅನುಭವವಾಗಿತ್ತು. ಜೊತೆಗೆ ಕೇವಲ ತಾನು, ಮಗಳು ಮಾತ್ರ ಬಂದು ನೆಲಸಿದ್ದಕ್ಕೆ ಜನ ಅನುಮಾನದ ಕಣ್ಣುಗಳಿಂದ-ಕುತೂಹಲದ ಮನಸ್ಸಿನಿಂದ ನೋಡಿದರು. ರಾತ್ರಿ, ಹಗಲು ಪಿಸಪಿಸ ಗುಸಗುಸ ಧ್ವನಿಗಳೇ ಬಂದು ಅಪ್ಪಳಿಸಿ, ಭೀತಿಗೊಳಿಸುತ್ತಿದ್ದವು. ಪ್ರತಿಯೊಂದು ಕೆಲಸಕ್ಕೂ ಜಾನಕಿಯೇ ಹೊರಗೆ ಹೋಗಬೇಕಾಗಿತ್ತು. ಹೋದಾಗ ಹಾದಿಯಲ್ಲಿ ಸಿಳ್ಳೆ ಹಾಕುವ ಸಿಳ್ಳೇ ಖ್ಯಾತರು. ಜೊಲ್ಲು ಸುರಿಸಿ ಚಪ್ಪರಿಸುವ ಗೌಡ, ಭಟ್ಟರು. ಹಸಿದ ಕಂಗಳಿಂದ ನೋಡುವ ಅಂಗಡಿಯ ಶೆಟ್ಟರು- ಇವರನ್ನೆಲ್ಲಾ ನೋಡುತ್ತಿದ್ದಂತೆ ಒಳಗೆ ರೋಷ ಹೊತ್ತಿಕೊಳ್ಳುತ್ತಿತ್ತು. ಆದರೆ ವಿವಶತೆ, ಸಿಂಬಿ ಸುತ್ತಿಕೊಂಡು ನೆಲದೊಳಗೆಲ್ಲೋ ಮರೆಯಾಗಬೇಕೆನಿಸುವಂತೆ ಮಾಡುತ್ತಿತ್ತು.

ಮೈ ತುಂಬಾ ಸೆರಗು ಹೊದ್ದು, ತಲೆ ಬಗ್ಗಿಸಿ ತನ್ನ ಪಾಡಿಗೆ ತಾನು ಇದನ್ನೆಲ್ಲಾ ನಿರ್ಲಕ್ಷಿಸಿ ನಡೆಯುವುದನ್ನು ಅಭ್ಯಾಸ ಮಾಡಿಕೊಂಡಳು.

ಕಾಲ ಕಳೆದಂತೆ ಜನರ ರೀತಿಯೇ ಬದಲಾಯಿತು. ಒಮ್ಮೆ ಕೃಷ್ಣ ಭಟ್ಟರು ಹೆಣ್ಣಿನ ಅಸಹಾಯಕತೆಯನ್ನು ಅರಿತೋ ಏನೋ, ಜಾನಕಿಯ ಮನೆಯ ಕಡೆ ಹೆಜ್ಜೆ ಹಾಕಿದರು.

ಒಳಗೆ ಅಕ್ಕಿಯಾರಿಸುತ್ತಾ ಕುಳಿತ ಜಾನಕಿಗೆ, ಭಟ್ಟರು ತನ್ನ ಮನೆಯತ್ತಲೇ ಬರುತ್ತಿರುವುದನ್ನು ನೋಡಿದಳು. ಆಶ್ಚರ್ಯವಾಯಿತು. ಒಳಗೆ ಬರಬಹುದೆಂದೆನಿಸಿ ಅಕ್ಕಿಯನ್ನು ಬೇಗ ಬೇಗನೆ ಮೊರಕ್ಕೆ ತುಂಬಿಸಿ, ಎತ್ತಿಡಲು ಒಳಗೆ ನಡೆದಳು.

ಭಟ್ಟರು ಹೊಸ್ತಿಲಲ್ಲಿ ನಿಂತು,. 'ಯಾರಿದ್ದಾರೆ ಒಳಗೆ'– ಎಂದು ಕೂಗಿ ಕರೆದರು. ಜಾನಕಿ ಸೆರಗಿನಂಚಿಗೆ ಕೈಯೊರೆಸಿಕೊಳ್ಳುತ್ತಾ ಬಂದವಳೇ, ಹೊರಗೆ ನಿಂತ ಭಟ್ಟರನ್ನು 'ಬನ್ನಿ ಒಳಗೆ'– ಎಂದು ಆದರದಿಂದ ಕರೆದು ಒಂದು ಮಣೆ ಹಾಕಿದಳು. ಚಾಪೆ ಹಾಕಿದರೆ ಮೈಲಿಗೆಯಾದೀತೆಂದು, ಹಾಕಿದ ಮಣೆಯತ್ತ ತೋರಿಸುತ್ತ, 'ಕುಳಿತುಕೊಳ್ಳಿ' ಎಂದಳು.

ಭಟ್ಟರು ತಮ್ಮ ಜೋಲು ಹೊಟ್ಟೆ ಅಲಗುವಂತೆ ನಗುತ್ತಾ 'ಆಯ್ತಾಯ್ತು'– ಎಂದು ಹೇಳುತ್ತಾ ಕುಳಿತರು. ಜಾನಕಿ ದೂರದಲ್ಲಿ ಗೋಡೆಗೆ ಬೆನ್ನು ಕೊಟ್ಟು ನಿಂತಳು. ಏನು ಮಾತಾಡಬೇಕೆಂದು ಅನುಮಾನಿಸುತ್ತಾ ನಿಂತಳು. ಭಟ್ಟರು ಪೀಠದ ಮೇಲೆ ಆಸೀನರಾದ ಮೇಲೆ ಮನೆಯನ್ನೆಲ್ಲಾ ಕಣ್ಣಾಡಿಸಿ ನೋಡಿದರು. ಒಂದೊಂದು ವಸ್ತುವನ್ನೂ ಪರಿಶೀಲಿಸಿದರು. ಇದ್ದುದರಲ್ಲಿ ಸಾಕಷ್ಟು ಸಿರಿವಂತರೆಂದೇ ನಿರ್ಧರಿಸಿದರು.

ಯಾರಿಂದಲೂ ಮಾತು ಹೊರಡಲಿಲ್ಲ. ಜಾರಿದ ಕನ್ನಡಕದೊಳಗಿಂದ ಜಾನಕಿಯತ್ತ ಒಮ್ಮೆ ದೃಷ್ಟಿ ಹರಿಸಿದರು. ಜಾನಕಿಗೆ ತೀರಾ ಸಂಕೋಚವೆನಿಸಿತು. ಆದರೆ ತೋರಿಸಿಕೊಳ್ಳದೆ, ಅವನ ದೃಷ್ಟಿಯನ್ನು ತಿರುಗಿಸಬೇಕೆಂದು, 'ದೊಡ್ಡವರು ಈ ಬಡವರ ಮನೆಗೆ ಬಂದುದಕ್ಕೆ ಕಾರಣವೇನೋ ತಿಳಿಯಲಿಲ್ಲ. ಏನಾದರೂ ಆಗಬೇಕಿತ್ತು?' ಎಂದು ಪ್ರಶ್ನಿಸಿದಳು.

ಅದಕ್ಕೆ ಭಟ್ಟರು ಹ್ಹ! ಹ್ಹ! ಹ್ಹ! ಎಂದು ದೊಡ್ಡದಾಗಿ, ಹಳಸಿದ ಹಲ್ಲುಗಳು ಕಾಣುವಂತೆ ಕಿಸಿದರು. 'ಏನೂ ಇಲ್ಲ ಈ ಊರಿಗೆ ಹೊಸದಾಗಿ ಬಂದಿದ್ದೀರಿ, ನಿಮಗೆ ಯಾರ ಪರಿಚಯವೂ ಇರುವುದಿಲ್ಲ. ಪಾಪ! ಒಬ್ಬರೇ ಇರ್ತಿದ್ದೀರಿ. ಏನಾದರೂ ಸಹಾಯ ಬೇಕಿದ್ದರೆ ಹೇಳಿ ಹೋಗೋಣಾಂತ ಬಂದೆ. ನನ್ನ ಹೆಂಡತಿ ಹೇಳ್ತಾನೇ ಇದ್ಲು. 'ಪಾಪ ಒಂಟಿ ಹೆಂಗಸು ಹೇಗೋ ಏನೋ. ಈ ಊರಿನ ಪುಂಡರ ಕೈಗೆ ಸಿಕ್ಕರೆ ಬಾಳ ಕಷ್ಟವಾಗುತ್ತೆ. ಹೋಗಿ ಮಾತಾಡಿಸಿ ಬನ್ನಿ'– ಅಂತ ಎಂದ ಮತ್ತೊಮ್ಮೆ ನಕ್ಕ.

ಜಾನಕಿ ಭಟ್ಟರ ಮಾತು ಕೇಳಿ ಕರಗಿ ಹೋದಳು. ಅವರ ಮಾತಿನಾಳದ ಸುಳಿವು ಹತ್ತಲಿಲ್ಲ. ಇಂತಹ ದರಿದ್ರ ಸ್ಥಿತಿಯಲ್ಲೂ ಒಬ್ಬರಾದರೂ ಸಹಕರಿಸುವಂಥವರು ಇದ್ದಾರಲ್ಲ!– ತನ್ನ' ಅದೃಷ್ಟ!– ಎಂದುಕೊಂಡಳು. ಹೃದಯ ತುಂಬಿ ಬಂತು. ಅವಳ ಕಣ್ಣಲ್ಲಿ ಕೃತಜ್ಞತೆ ಮಿಂಚಿತು.

'ತುಂಬಾ ಸಂತೋಷ ಅಯ್ಯನೋರೆ,' ನಿಮ್ಮಂತಹ ಸುಜನರು ಈ ಕೊಂಪೆಯಲ್ಲಿ ಇದ್ದಾರಲ್ಲ! ನನಗೇನೋ ತುಂಬಾ ಭಯವೇ ಆಗಿತ್ತು. ಈ ಲೋಕದಲ್ಲಿ ಅಸಹಾಯಕರನ್ನು ನೋಡಿ ಕನಿಕರ ಪಡುವ ಜನರೇ ಇಲ್ಲ. ಒಳ್ಳೆಯವರು ಮರ್ಯಾದೆಯಾಗಿ ಬದುಕೋಕೆ ಸಾಧ್ಯವೇ ಇಲ್ಲ'- ಎಂದು ಅನುಭವದಂತೆ ಮಾತನಾಡಿದಳು.

ಭಟ್ಟರಿಗೆ ತಮ್ಮ ಮಾತಿನ ಪ್ರಭಾವ ಚೆನ್ನಾಗಿ ಆಗಿದೆ ಎನಿಸಿತು. ಲೋಕಕ್ಕೆ, ಜನಕ್ಕೆ ಹೆದರಿದರೆ ಆಯಿತೇ? ನಿಮಗೆ ಭಯವೇನೂ ಬೇಡ. ನಮ್ಮೂರಿನವರಿಗೆ ಬುದ್ಧಿ ಹೇಳ್ತೇನೆ. ಈ ಊರಿಗೆ ಬಂದು ನೆಲಸಿದ ಮೇಲೆ ನೀವೂ ಈ ಊರಿಗೆ ಸೇರಿದವರೇ ಆಗ್ತೀರಿ. ನೀವು ಯಾವುದಕ್ಕೂ ಚಿಂತೆ ಮಾಡಬೇಡಿ. ಏನೇ ಸಹಾಯ ಬೇಕಿದ್ದರೂ ಹೇಳಿ ಕಳುಹಿಸಿ. ನಮ್ಮ ಮನೆಯೇನೂ ದೂರವಿಲ್ಲ. ಒಂದೆರಡು ಕೂಗಿನ ದೂರವಷ್ಟೇ- ಎಂದವರು ಭರವಸೆ ತುಂಬುವ ದನಿಯಲ್ಲಿ.

ಜಾನಕಿಗೆ ಭಟ್ಟರ ವಿಚಾರವಾಗಿ ಗೌರವ ಮೂಡಿತು. ತಪ್ಪು ತಿಳಿದು ಕೊಂಡೆ. ಎಲ್ಲರನ್ನೂ ಕೆಟ್ಟವರೆಂದೇ ಪಟ್ಟಿ ಅಂಟಿಸಿಬಿಟ್ಟೆ. ಸಂದೇಹಿಸಿ ನೋಡಿದ್ದು, ಕದ್ದು ಮನೆಯತ್ತ ಇಣುಕಿದ್ದು, ಮನೆಯಿಂದ ಹೊರಟಾಗ ಮೂಗಿನ ಮೇಲೆ ಬೆರಳಿಟ್ಟುಕೊಂಡು ಗುಸಗುಸ ಮಾತಾಡಿಕೊಂಡದ್ದು ನೆನಪಿಗೆ ಬಂದಾಗ, ಕಾಲು ಕಂಪಿಸಿದವು. ಇಲ್ಲ... ಇಲ್ಲ... ಈ ಜನ ತನ್ನನ್ನು ಸ್ವೀಕರಿಸೊಲ್ಲ. ನಾನು ಮಾಡಿದ ಕೆಲಸ, ನನ್ನ ಪೂರ್ವೇತಿಹಾಸ ಇವರಿಗೆ ಗೊತ್ತಾಗಿದೆಯೇ- ಎಂದು ಅನುಮಾನಿಸಿದಳು. ಮೈ ಬೆವರಿತು. ಹಣೆಯ ಮೇಲೆ ಭೀತಿಯಿಂದಾಗಿ ಬೆವರು ಹನಿಗಳು ಮೂಡಿದವು.

ಭಟ್ಟರು ಅದನ್ನು ಗಮನಿಸಿದರು. ಯಾಕಮ್ಮ ಮೈ ಹುಷಾರಿಲ್ಲವೇ? ಎಂದು ವಿಚಾರಿಸಿದರು.

ಭಟ್ಟರ ಮಾತಿಗೆ ತಲೆ ಅಲ್ಲಾಡಿಸಿ, 'ಇಲ್ಲ... ಇಲ್ಲ... ಚೆನ್ನಾಗಿಯೇ ಇದ್ದೇನೆ. ಸುಮ್ಮನೆ ಸುಸ್ತಾದಂತೆ ಎನಿಸಿತು. ನೀವೇನಾದರೂ ಕುಡಿಯಲು ತೆಗೆದುಕೊಳ್ಳುತ್ತೀರಾ?- ಎಂದು ಕೇಳಿದಳು.

'ನನಗೇನೋ ಏನೂ ಬೇಕಿಲ್ಲ, ಆದರೆ ತಮ್ಮ ಮನಸ್ಸಿಗೆ ನೋವಾಗಬಾರದಲ್ಲ!... ಸರಿ ಒಂದು ಲೋಟ ನಿಂಬೆ ಪಾನಕವಿದ್ದರೆ ಕೊಡಿ'- ಎಂದರು.

ಜಾನಕಿ 'ಒಂದು ನಿಮಿಷ ಬಂದು ಬಿಟ್ಟೆ'- ಎಂದು ಹೇಳಿ ಒಳಗೆ ಹೋದಳು. ಅಷ್ಟರಲ್ಲಿ ಮಲಗಿದ್ದ ರತ್ನ ಎದ್ದು, 'ಅಮ್ಮ, ಅಮ್ಮ' ಎಂದು ಅಳತೊಡಗಿದಳು. ಭಟ್ಟರು ಕಣ್ಣಗಲಿಸಿ ಅತ್ತ ನೋಡಿದರು. ಅಬ್ಬ! ಎಷ್ಟು ಮುದ್ದಾದ ಮಗು!- ಎಂದು ಕೊಂಡರು. ಅಳುತ್ತಿದ್ದ ಮಗುವಿನತ್ತ ಕೈ ಚಾಚಿ ಬಾ ಮರಿ ನನ್ನತ್ರ ಎಂದು ಕರೆದರು. ಆದರೆ ಮಗು ಆ ವಿಕಾರ ಮೂತಿಯನ್ನು ನೋಡಿ ಮುಖ ತಿರುಗಿಸಿ ಮತ್ತಷ್ಟು ಜೋರಾಗಿ ಅತ್ತಳು. ಜಾನಕಿ ಆತುರಾತುರವಾಗಿ ಬಂದು ಕೈಲಿ ಹಿಡಿದಿದ್ದ ಕಂಚಿನ ಲೋಟವನ್ನು ಭಟ್ಟರ

ಮುಂದಿಟ್ಟು, ರತ್ನಳ ಕಡೆ ನಡೆದಳು. ಅಮ್ಮನನ್ನು ನೋಡುತ್ತಿದ್ದಂತೆ ಅಳು ನಿಂತು ಹೋಯಿತು. ಜಾನಕಿ ಮಗಳನ್ನು ಬಾಚಿ ತಬ್ಬಿದಳು. ಅದೊಂದೇ ಅವಳಿಗೆ ಆಧಾರ, ಜೀವನಕ್ಕೆ ಸ್ಫೂರ್ತಿ, ರತ್ನಳನ್ನು ನಡೆಸಿಕೊಂಡು ಭಟ್ಟರಿದ್ದಲ್ಲಿಗೆ ಕರೆತಂದಳು. 'ಕ್ಷಮಿಸಿ ನಿಮ್ಮನ್ನು ಗಮನಿಸಲು ಆಗಲಿಲ್ಲ'– ಎಂದಳು. 'ಪರವಾಗಿಲ್ಲ ಬಿಡಮ್ಮ... ಅಂದಂಗೆ ನಿಮ್ಮ ಮಗಳ ಹೆಸರೇನೆಂದೆ!..'

'ರತ್ನಮಾಲಾ'– ಅಂತ ಹೆಮ್ಮೆಯಿಂದ ಹೇಳಿದಳು.

"ರೂಪಕ್ಕೆ ತಕ್ಕ ಹೆಸರು. ಸೊಗಸಾಗಿದೆ, ಎನ್ನುತ್ತಾ ಬಾ ಮಗು ನಂಜೊತೆ, ನಮ್ಮ ಮನೆ ತುಂಬಾ ಮಕ್ಕಳಿದ್ದಾರೆ ಅವರ ಜೊತೆ ಆಡಿಕೊಳ್ಳಬಹುದು, ಇಲ್ಲಿ ನಿನ್ನೊಬ್ಬಿಗೇ ಬೇಸರವಾಗೊದಿಲ್ವಾ"– ಎಂದು ಉದ್ದ ಭಾಷಣದಂತೆ ಮಾತಾಡಿದರು. ರತ್ನಳಿಗೆ ನಿಜವಾಗಿಯೂ ಬೇಸರ ಬಂತು. ಅವಳಮ್ಮನತ್ತ ತಿರುಗಿ, 'ನಾನೋಗಲ್ಲಮ್ಮ ಈ ತಾತನ ಮನೆಗೆ, ನಂಗೆ ಭಯ ಆಗುತ್ತೆ'– ಎಂದು ಅಳಲು ಶುರು ಮಾಡಿದಳು. ಜಾನಕಿ ಸಮಾಧಾನ ಮಾಡಿದಳು. ಇಲ್ಲ ಹೋಗ್ಬೇಡ ಬಿಡು ರತ್ನ ನಿನ್ನನ್ನೇನೂ ಬಲವಂತ ಮಾಡೋಲ್ಲ. ಈ ತಾತ ತುಂಬಾ ಒಳ್ಳೇವ್ರು. ನಿಂಗೊತ್ತಿಲ್ಲ ಅಂದಳು.

ಭಟ್ಟರಿಗೆ ತಾತನೆಂದು ಸಂಭೋದಿಸಿದ್ದನ್ನು ಕೇಳಿ ಅವಮಾನವಾಯಿತು. ಮುಖ ಚಿಕ್ಕದು ಮಾಡಿಕೊಂಡು ರತ್ನಮ್ಮ, ಹಂಗೆಲ್ಲಾ ನನ್ನನ್ನು 'ತಾತ' ಅಂತ ಕರೀಬೇಡ, 'ಮಾಮಾ' ಅನ್ನು ಎಂದು ತಿದ್ದಿದರು. ರತ್ನ ಮಾತ್ರ ತನ್ನ ಪಟ್ಟನ್ನು ಬಿಡುವಂತೆನಿಸಲಿಲ್ಲ. ಉಹುಂ! ನೀನು ತಾತ ಮಾಮನಲ್ಲ... ಎಂದು ಹಟದ ಧ್ವನಿಯಲ್ಲಿ ಹೇಳಿದಳು. ಜಾನಕಿಗೆ ಕಸಿವಿಸಿಯಾಯಿತು. ಮಗಳ ಮಾತನ್ನೇ ಸಮರ್ಥಿಸದಿದ್ದರೆ ಅವಳ ರಂಪು ತಡೆಯಲು ಸಾಧ್ಯವಾಗುತ್ತಿರಲಿಲ್ಲ. ಅದಕ್ಕೆಂದೇ ಹೋಗಲಿ ಬಿಡು, ನೀನು ಹೇಳಿದ ಹಾಗೆ ಇವರು ತಾತಾನೇ'– ಆಯ್ತಲ್ಲ– ಎಂದದ್ದಕ್ಕೆ ಆ ಪುಟ್ಟ ಮುಖದಲ್ಲಿ ವಿಜಯದ ಗರ್ವ ಮಿಂಚಿತು.

ಭಟ್ಟರೂ ಮಗುವಿನ ಭಾವನೆಯನ್ನು ಗಮನಿಸಿ ಒಳಗೇ ನಕ್ಕರು. 'ಗತ್ತಿನ ಹುಡುಗಿ' ಎಂದುಕೊಂಡರು.

ಜಾನಕಿಗೆ ಮಾಡಲು ಕೈ ತುಂಬಾ ಕೆಲಸವಿತ್ತು. ಭಟ್ಟರು ಎದ್ದು ಹೋಗುವ ಸೂಚನೆಯೇ ಕಾಣಲಿಲ್ಲ. ಜಾನಕಿಗೆ ಕಸಿವಿಸಿಯಾಯಿತು. ಹಿಂದು ಮುಂದು ನೋಡಿದಳು. ಮಗಳು ತನ್ನನ್ನಪ್ಪಿ ನಿಂತಿದ್ದಳು. ಜಾನಕಿ ಮಗಳನ್ನು ಹೊರಗೆ ಆಡಿಕೊಳ್ಳಲು ಕಳಿಸಿದಳು. ಭಟ್ಟರ ಮುಖವನ್ನು ನೋಡಿದಳು. ಅವರು ಏನೇನೋ ಲೆಕ್ಕಾಚಾರ ಹಾಕುತ್ತಿರುವಂತೆ ತೋರಿತು. ಇನ್ನು ಎಷ್ಟು ಹೊತ್ತಂತ ಮಾತಿಲ್ಲದೆ, ಕೆಲಸವಿಲ್ಲದೆ ಕೂರುವುದು? ಎಂದುಕೊಂಡು ಮತ್ತೆ ಎದ್ದು ಒಳಗೆ ನಡೆದಳು.

ಭಟ್ಟರು ಅದನ್ನು ಗಮನಿಸಿ– ಏನಮ್ಮಾ ಒಂದ್ನಿಮಿಷ ಇರ್ತೀಯಾ ಎಂದರು. ಹೊರಟು ನಿಂತವಳು ಹಾಗೇ ಹಿಂದಿರುಗಿದಳು.

ಭಟ್ಟರ ವಿಚಾರ ಜಾನಕಿಗ ಗೊತ್ತಾಗಿರಲಿಲ್ಲ. ಅವರ ತಲೆಯಲ್ಲಿ ಸುಳಿಯುತ್ತಿರುವ ಆಲೋಚನೆಗಳೇನೆಂದು ತಿಳಿಯದಿದ್ದ ಅವಳಿಗೆ, ಈತ ತನ್ನಿಂದ ಏನನ್ನು ಬಯಸುತ್ತಾನೆ? ಅಪರಿಚಿತರಾದರು ಎಷ್ಟೊಂದು ಸಲುಗೆಯಿಂದ ಮಾತಾಡುತ್ತಿದ್ದಾರೆ. ನಿಜ ಆದರೆ ಹೆಂಗಸೊಬ್ಬಳೇ ಮನೆಯಲ್ಲಿರುವಾಗ ಇಷ್ಟು ಹೊತ್ತು ಕೂತಿದ್ದರೆ ಹೊರಗಿನ ಜನ ಏನೆಂದು ತಿಳಿದಾರು, ಹೋಗುವಂತೆಯೇ ಕಾಣುವುದಿಲ್ಲವಲ್ಲ... ಇನ್ನೇನಾದರೂ ವಿವರಗಳನ್ನು ತನ್ನಿಂದ ಬಯಸುತ್ತಿದ್ದಾನೆಯೇ– ಎಂದು ಚಿಂತಿಸಿದಳು.

ಭಟ್ಟರು ಅನುಮಾನಿಸುತ್ತಲೇ ಕೇಳಿದರು, ಏನಮ್ಮ ನಿಮ್ಮನ್ನೊಂದು ಮಾತು ಕೇಳಿದರೆ ತಪ್ಪಾಗಿ ತಿಳಿಯೋಲ್ಲ ತಾನೇ?

ಕೇಳಿ ಭಟ್ಟರೇ ಪರವಾಗಿಲ್ಲ. ಅನಾಥರಂತೆ ಈ ಊರಿಗೆ ಬಂದ ಇಷ್ಟು ದಿವಸದ ಮೇಲೆ ತಮ್ಮಂತಹವರೊಬ್ಬರು ನಮ್ಮ ಹಿತೈಷಿಗಳಾಗಿ ಬಂದು ವಿಚಾರಿಸುತ್ತಿರುವಾಗ, ತಪ್ಪಾಗಿ ಏಕೆ ತಿಳಿಯಬೇಕು?– ಎಂದಳು.

ಭಟ್ಟರು ಸ್ವಲ್ಪ ಧೈರ್ಯ ತಂದುಕೊಂಡರು. ಈ ಭರವಸೆಯಿಂದ ಹೊದ್ದುಕೊಂಡಿದ್ದ ಶಲ್ಲೆಯನ್ನು ಸರಿಪಡಿಸಿಕೊಂಡರು. ಭುಜದ ಮೇಲಿಂದ ಬೀಳುತ್ತಿದ್ದ ಜನಿವಾರಕ್ಕೆ ಕೈ ಹಾಕಿ ಸರಿಪಡಿಸಿಕೊಂಡರು. ತುಟಿಗಳ ಮೆಲೆ ನಗುವನ್ನು ತಂದುಕೊಂಡು ಕೇಳಿದರು–

"ಅಲ್ಲಮ್ಮಾ ನೀವು ಬಂದಾಗಿನಿಂದ ಒಂಟಿಯಾಗಿಯೇ ಇದ್ದೀರಿ, ನಿಮ್ಮ ನೆಂಟರು, ಪಂಟರುಗಳಾಗಲೀ, ನಿಮ್ಮ ಮನೆಯವರಾಗಲೀ ಕಾಣ್ತಿಲ್ಲವಲ್ಲ? ತುಂಬಾ ದಿವಸದಿಂದ ಯೋಚ್ನೆ ಮಾಡಿದ್ದೆ. ನಿಮ್ಮನ್ನು ವಿಚಾರಿಸಿಕೊಳ್ಳಬೇಕು ಎಂದು. ಆದರೆ ಒಂಟಿ ಹೆಂಗಸು, ಹೋದರೆ ಏನಂದುಕೊಳ್ಳುತ್ತಾರೋ ಎಂದು ಸುಮ್ಮನಿದ್ದೆ. ಇವತ್ತು ನನ್ನ ಹೆಂಡತಿ ಒತ್ತಾಯ ಮಾಡಿ ಕಳಿಸಿದಳು... ನಿಮ್ಮ ಹೆಸರು ಕೂಡ ಏನೂಂತ ಗೊತ್ತಾಗಲಿಲ್ಲ.

ಜಾನಕಿ ದೀರ್ಘವಾಗಿ ನಿಟ್ಟುಸಿರುಬಿಟ್ಟಳು. ಭಟ್ಟರು ಕನ್ನಡಕವನ್ನು ಸರಿಪಡಿಸಿಕೊಂಡು ಕುತೂಹಲದಿಂದ ಕಣ್ಣೆತ್ತಿ ನೋಡಿ ಉತ್ತರಕ್ಕಾಗಿ ನಿರೀಕ್ಷಿಸಿದರು. ಜಾನಕಿಗೆ ತನ್ನ ಕತೆ ಹೇಳಬೇಕೋ– ಬೇಡವೋ ಎನಿಸಿತು. ತುಂಬಾ ಯೋಚಿಸಿದ ಮೇಲೆ, ನಿಜವಾದ ಸಂಗತಿಗಳನ್ನು ಮುಚ್ಚಿಟ್ಟು, ತಾಯಿಯ ಸಾವು, ತಂದೆಯ ಅನ್ಯಮನಸ್ಕತೆ, ಮುದುಕನೊಂದಿಗೆ ತನ್ನ ಮದುವೆ, ಗಂಡನ ಬೇನೆಗಳ ವಿಚಾರ, ಅವನ ಸಾವು– ಹೀಗೆ ಕೆಲವು ವಿವರಗಳನ್ನು ಮಾತ್ರ ಕೊಟ್ಟಳು. ಭಟ್ಟರು ಸಂತಾಪ ಸೂಚಿಸುವಂತೆ ಚು! ಚು! ಚು! ಎಂದರು. 'ನಿನ್ನಂತಹ ಹೆಣ್ಣಿಗೆ ಭಾಳು ಅನ್ಯಾಯ ಆಯ್ತಮ್ಮ. ಆ ಮುದುಕನ ಜೊತೆಗೆ ಏನು ತಾನೇ ಬಾಳ್ವೆ ಮಾಡಿರೋದಕ್ಕೆ ಸಾಧ್ಯ? ದೇವರಿಗೆ ಅದಕ್ಕೆ ಬುದ್ಧಿ ಇಲ್ಲಾ ಅನ್ನೋದು. ಎಂಥೆಂಥವರಿಗೆ ಎಂಥೆಂಥ ಜೋಡಿ ಹೊಂದಿಸಬೇಕನ್ನೋ ಪ್ರಜ್ಞೆ ಇಲ್ಲ... ಆದರೇನಂತೆ, ಮನುಷ್ಯ ಮನಸ್ಸು ಮಾಡಿದರೆ ದೇವರ ಅನ್ಯಾಯವನ್ನು ತಿದ್ದಿಕೋಬಹುದು'– ಅಂದರು.

ಭಟ್ಟರ ಮಾತು ಜಾನಕಿಗೆ ಅರ್ಥವಾಗಲಿಲ್ಲ. ಅವರ ಸಂತಾಪ ಸೂಚನೆಯಿಂದ ಮನಸ್ಸಿಗೆ ಅಷ್ಟಾಗಿ ನೆಮ್ಮದಿ ಸಿಕ್ಕಂತಾಗಲಿಲ್ಲ. ಹೌದು ದೇವರು ನನಗೆ ಅನ್ಯಾಯ ಮಾಡಿದ್ದ. ಕೊಟ್ಟಿದ್ದ ವರವನ್ನು ಕಿತ್ತುಕೊಂಡಿದ್ದ. ಒಂದೊಂದು ಸಲ ಅವಳಿಗೂ ದೇವರ ಮೇಲೆ ಸೇಡು ಮೂಡುತ್ತಿತ್ತು. ಹೊನ್ನನನ್ನು ಹೊಂದಿಕೊಂಡ ಜೀವಕ್ಕೆ ಆ ಮುದಿ ಗಂಡನ ಸಹವಾಸ ಅಸಹ್ಯ ವೇದನೆಯಾಗಿತ್ತು. ಆದರೆ ಈಗ ದೇವರೆಂದರೆ ಒಳಗೊಳಗೇ ಭಯ ಪಡುತ್ತಿದ್ದಳು. ದೇವರಿರುವುದು ಖಚಿತವಲ್ಲದಿದ್ದರೂ ಮನಸ್ಸೇಕೋ ಇದೆಯೆಂಬ ಕಲ್ಪನೆಗೆ ಹೆದರುತ್ತಿತ್ತು. ಗಂಡನಿಗೆ ಮಾಡಿದ ಮೋಸದ ಪ್ರಜ್ಞೆ ಅವಳನ್ನು ಕ್ಷಣಕ್ಷಣಕ್ಕೂ ಇರಿಯುತ್ತಿತ್ತು. ಸೀತೆ, ಸಾವಿತ್ರಿಯರ ಕಥೆ ಕೇಳುವ ಮನಸ್ಸಿಗೆ ಅಷ್ಟೊಂದು ಧೈರ್ಯ ಬಂದದ್ದು ಅವಳಿಗೇ ಆಶ್ಚರ್ಯವಾಗಿತ್ತು. ಹೊನ್ನನಿಗೆ ಹುಟ್ಟಿದ ಮಗುವಿಗೆ ಬೇರೆಯವರು ಅಪ್ಪನಾಗುವುದು ಅವಳಿಗೆ ಬೇಡದ್ದಾಗಿತ್ತು. ಜೊತೆಗೆ ಅವನ ಕಾಮುಕತನ ಮೈಮೇಲೆ ಬಿಸಿನೀರು ಬಿದ್ದು ಬೊಬ್ಬೆಗಳಾಗುವ ಅನುಭವವನ್ನೇ ತರುತ್ತಿತ್ತು. ಸುಮಾರು ಹದಿನೈದು ದಿನ ವಿಚಾರಗಳ ತೂಗುಯ್ಯಾಲೆಯಲ್ಲಿ 'ಜೀಕು ಜೀಕೆಂದು' ತೂಗಿ ನಿರ್ಧಾರಕ್ಕೆ ಬಂದಿದ್ದಳು.

ಭಟ್ಟರು ಹೇಳುವಂತೆ ಅನ್ಯಾಯವನ್ನು ತಿದ್ದಿಕೊಳ್ಳಬಹುದಾದ ಹಾದಿ ಯಾವುದೋ ಜಾನಕಿಗೆ ಥಟ್ಟನೆ ಹೊಳೆಯಲಿಲ್ಲ, ಆದರೆ 'ನಿನ್ನಂಥ ಹೆಣ್ಣಿಗೆ' ಎಂದು ಒತ್ತಿ ಹೇಳಿದ ಮಾತು ಕೇಳಿ ಮನಸ್ಸು ಅನಾಯಾಸವಾಗಿ ಅರಳಿತು. ಭಟ್ಟರ ಮಾತಿಗೆ ಉತ್ತರ ಕೊಡುವಾಗ ಮಾತ್ರ ಮನಸ್ಸಿನ ಸಂತೋಷವನ್ನು ತೋರಿಸಿಕೊಳ್ಳದೆ ನಿರ್ವೇಗದಿಂದ ಉತ್ತರಿಸಿದಳು.

'ಏನು ಅನ್ಯಾಯವೋ ಏನೋ, ನಾವೆಲ್ಲಾ ಅವನಾಟದ ಕಾಯಿಗಳು. ನಡೆಸಿದಂತೆ ನಡೆಯಬೇಕಾದ್ದು ಅಷ್ಟೆ. ನನಗೆಲ್ಲಾ ಉಳಿದಿರುವ ಆಸೆಯೆಂದರೆ ನನ್ನ ಮಗಳು ರತ್ನಳನ್ನು ಚೆನ್ನಾಗಿ ಬುದ್ಧಿಯಿಂದ ಬೆಳೆಸಿ, ಒಳ್ಳೇ ಕಡೆ ನೋಡಿ ಮದುವೆ ಮಾಡಿದರೆ ಸಾಕು. ನಮಗಿನ್ನು ಉಳಿದಿರುವ ಬದುಕೇನಿದ್ದರೂ, ರಾಮ, ಕೃಷ್ಣರಲ್ಲಿ ಪುರಾಣ ಪುಣ್ಯಕತೆಗಳಲ್ಲಿ ಎಂದು ಜಾನಕಿ ಹೇಳುವಾಗ ಭಟ್ಟರು ನಿಬ್ಬೆರಗಾಗಿ ಕೇಳಿದರು. ತಾತನಿಂದ, ಅಪ್ಪನಿಂದ ತಾವು ಕಲಿತ ವೇದಾಂತ ಓದಿಗೆ ಮಾತ್ರವೇ ಇದ್ದು, ಈಗ ಆಚರಣೆಯಲ್ಲಿ ಒಂದಿಷ್ಟೂ ಉಳಿಯದಂತೆ ಆಗಿತ್ತು. ಇವಳ ಮುಂದೆ ಬೇಕಾದಷ್ಟು ಬದುಕಿದೆ. ಸಂಯಮಿ ಗಂಡಸರನ್ನೂ ಕೆಣಕಿ ಕೆರಳಿಸುವ ಸೌಂದರ್ಯವಿದೆ. ವಯಸ್ಸಿದೆ. ಆದರೆ ಅವಳಾಡುವ ವೇದಾಂತದ ಮಾತಿನಲ್ಲಿ ಎಷ್ಟು ನಿರಾಸೆ, ಎಷ್ಟು ನಿರಾಸಕ್ತಿ ತುಂಬಿದೆ! ಆಶ್ಚರ್ಯವಾಯಿತು.

ತಮಗೆ ಐವತ್ತರ ಹತ್ತಿರ ವಯಸ್ಸಾಗಿದ್ದರೂ, ಇನ್ನೂ ಜೀವನದಲ್ಲಿ ಆಸಕ್ತಿ ಕುಂದಿಲ್ಲ. ಹೆಣ್ಣಿನಲ್ಲಿ ರುಚಿ ಹಳಸಿಲ್ಲ. ಆಕಾಂಕ್ಷೆಗಳು ದಣಿದಿಲ್ಲ. ಅಂಥಾದ್ದರಲ್ಲಿ ಮೂವತ್ತು ಇಲ್ಲದ ಇವಳಿಗೇಕೆ ಈ 'ವೇದಾಂತ' ಎನಿಸಿತು. ಜಾನಕಿಯಂತಹ ಹೆಣ್ಣಿನ ಯೌವನ,

ರೂಪ, ಕಾಡ ಬೆಳ್ದಿಂಗಳಂತೆ ಹಾಳಾಗುವುದನ್ನು ಯಾಕೋ ಭಟ್ಟರ ಮನಸ್ಸು ಒಪ್ಪಲಿಲ್ಲ. ಒಳಗೊಳಗೇ ಜೊಲ್ಲು ಕಾರುತ್ತಿತ್ತು.

'ಎಂಥಾ ಮಾತಾಡ್ತೀ ಬಿಡು ಜಾನಕಮ್ಮ' ನಿನಗೇನು ಅಂಥ ವಯಸ್ಸಾಗಿರೋದು, ಯಾರು ಬೇಕಾದರೂ ಮೇಲೆ ಬಿದ್ದು ಬರ್ತಾರೆ. ನನ್ನನ್ನು ನೋಡಿ ನೀವು ಹಳೆಯ ಕಾಲದವರು, ಗೊಡ್ಡು ವೈದಿಕ ಅಂತ ಭಾವಿಸಬೇಡಿ.ಈ ಜನಿವಾರ ಈ ಜುಟ್ಟು ಇರೋದು, ನನ್ನ ಪ್ರಗತಿಪರ ವಿಚಾರಗಳನ್ನು ಅರ್ಥ ಮಾಡಿಕೊಳ್ಳಲಾಗದ ಜನರಿಗೋಸ್ಕರ. ಹೀಗೆ ಹೋದರೇನೇ ಅವರಿಗೆ ನನ್ನಲ್ಲಿ ಗೌರವ. ಅಲ್ಲದೆ ಅಪ್ಪ ಸಾಯುವಾಗ ನನ್ನ ಕೈ ಹಿಡಿದು 'ಲೋ ಕೃಷ್ಣ ಸಾಯುವ ನಿನ್ನ ಅಪ್ಪನ ಆಸೆಯೊಂದು ತೀರಿಸೋ, ನನಗೆ ನಿನ್ನಿಂದ ಏನೂ ಉಪಕಾರವಾಗದಿದ್ದರೂ ಚಿಂತೆಯಿಲ್ಲ, ಜನಿವಾರ ಜುಟ್ಟುಗಳನ್ನು ಉಳಿಸಿಕೊಂಡು ಸಂಪ್ರದಾಯವನ್ನು ಕಾಪಾಡು, ಜಪ ತಪ ನಿನ್ನಿಂದ ಖಂಡಿತ ಆಗೊಲ್ಲ. ಆದರೆ ಬ್ರಾಹ್ಮಣನಾಗಿ ಹುಟ್ಟಿರೋದಕ್ಕೆ ಈ ಜನಿವಾರ ಮಾತ್ರ ಬಿಡಬೇಡ, ನಿನ್ನಪ್ಪ ಅಮ್ಮರ ಆತ್ಮಕ್ಕೆ ಶಾಂತಿ ಸಿಗೋಲ್ಲ. ನೀ ಹಾಕುವ ಪಿಂಡಕ್ಕೆ, ನೀ ಬಿಡುವ ತರ್ಪಣಕ್ಕೆ ಏನೂ ಸಾರ್ಥಕತೆ ಬರೊಲ್ಲ'– ಎಂದು ಬಿಕ್ಕಿ ಬಿಕ್ಕಿ ಅತ್ತು ಕಣ್ಮುಚ್ಚಿದರು. ಅದಕ್ಕಾಗಿ ಇವತ್ತಿಗೂ ನಮ್ಮಪ್ಪನ ಮಾತು ಉಳಿಸಬೇಕಂತಲೇ ಇವುಗಳನ್ನು ಉಳಿಸಿಕೊಂಡಿದ್ದೇನೆ. ಆದರೆ ನನ್ನ ವಿಚಾರಗಳು ಮಾತ್ರ ಇತ್ತೀಚಿನವು. ಮನುಷ್ಯನ ಬದುಕಿಗೆ ಒಳ್ಳೆಯದಾಗುವ, ಒಂದು ನೊಂದ ಜೀವಕ್ಕೆ ಸಮಾಧಾನವಾಗುವ ವಿಚಾರಗಳನ್ನು ಮಾತ್ರ ನಾನು ನಂಬುತ್ತೇನೆ. ನನಗೆ ಎಲ್ಲಕ್ಕಿಂತಾ ಬದುಕು ಮುಖ್ಯ. ಅದಕ್ಕೆ ನಿಮಗೂ ಹೇಳ್ತಾ ಇದ್ದೀನಿ, ಯೋಚ್ನೆ ಮಾಡಿ. ಈ ವಯಸ್ಸಿನಲ್ಲಿ ನಿಮ್ಮ ಈ ನಿಲುವು ಸರಿಯಾದ್ದಲ್ಲಾಂತ ಅನಿಸುತ್ತೆ... ಬರ್ತೀನಿ ಎಂದು ಹೇಳಿ ಎದ್ದರು.

ಜಾನಕಿ ಮೌನವಾಗಿ ತಲೆಯಾಡಿಸಿದಳು. ಭಟ್ಟರು ಹೊರಡುವಾಗ ಬಿಡುವಾದಾಗ ಮನೆಕಡೆ ಬನ್ನಿ, ಅಲ್ದೇ ನಿಮಗೇನಾದರೂ ಸಹಾಯ ಬೇಕಾದರೆ ಹೇಳಿ ಕಳುಹಿಸಿ– ಎಂದು ಹೇಳಿ ಹೊರಟರು. ಹೊಸ್ತಿಲು ದಾಟುವಾಗ ಭಟ್ಟರು ಮತ್ತೊಮ್ಮೆ ಅವಳನ್ನು ನೋಡಬೇಕೆನಿಸಿ ತಿರುಗಿದರು, ಮುಸಿನಕ್ಕರು. ಜಾನಕಿಗೆ ಒಂದು ಥರಾ ಎನಿಸಿತು.

ಈ ಮನುಷ್ಯ ಬಂದು ಏನೆಲ್ಲಾ ಮಾತನಾಡಿ ಹೋದ! ಎಂದುಕೊಂಡಳು. ತಲೆ ಸುತ್ತಿ ಬಂದಂತಾಯಿತು. ಈತನ ಮನಸ್ಸಿನ ಒಳಗು ತಿಳಿಯುವವರೆಗೂ ಸ್ವಲ್ಪ ಎಚ್ಚರಿಕೆಯಿಂದ ಇರಬೇಕೆನಿಸಿತು.

ಕೆಲಸದ ನೆನಪಾಯಿತು. ಇಡೀ ದಿನ ಹಾಳು. 'ಈ ಬ್ರಾಹ್ಮಣನನ್ನು ನೋಡಿ' ಎಂದುಕೊಂಡು ನಿಂತಲ್ಲಿಂದ ಕದಲಿದಳು.

ಅಷ್ಟರಲ್ಲಿ 'ರತ್ನ' ಅಳುತ್ತಾ ಓಡಿ ಬಂದಳು. ಮಗಳ ಅಳು ಕೇಳಿ ಎದೆ ಝುಲ್ಲೆಂದಿತ್ತು. 'ಏನಾಯಿತು ರತ್ನ' ಎಂದು ಕೇಳುತ್ತಾ ಹಿಂದಿರುಗಿದಳು. ಅಳುತ್ತಲೇ ಮಂಡಿಯನ್ನು ತೋರಿದಳು. ಆಡುವಾಗ ಬಿದ್ದು ಮಂಡಿಯೆಲ್ಲಾ ತರಚಿಕೊಂಡು ಗಾಯವಾಗಿ ರಕ್ತ

ಅಣ್ಣ ತಮ್ಮಂದಿರಿಬ್ಬರೂ ತಾಯಿಯಲ್ಲಿ ತುಂಬಾ ವಾತ್ಸಲ್ಯದಿಂದಲೇ ಇದ್ದರು. ಊರಾಚೆ ಇದ್ದರೂ ರಜೆ ಸಿಕ್ಕಿದಾಗಲೆಲ್ಲಾ ಬಂದು ತಾಯಿಯನ್ನು ವಿಚಾರಿಸಿಕೊಂಡು ಹೋಗುತ್ತಿದ್ದರು. ಬರುವಾಗಲೆಲ್ಲಾ ಬುಟ್ಟಿ ತುಂಬಾ ಹಣ್ಣು ಕಾಯಿಗಳನ್ನು ತಂದು ತಾಯಿಯನ್ನು ಕೂರಿಸಿಕೊಂಡು ಬಲವಂತದಿಂದ ತಾವೇ ಅವಳಿಗೆ ಹಣ್ಣುಗಳನ್ನು ತಿನ್ನಿಸುತ್ತಿದ್ದರು. ರಾಮಕ್ಕನಿಗೆ ಈ ಇಬ್ಬರೂ ಮಕ್ಕಳ ಎಣೆಯಿಲ್ಲದ ಪ್ರೀತಿಯನ್ನು ಭರಿಸುವುದು ಅಸಾಧ್ಯವೆನಿಸಿತ್ತು. ಈ ಪ್ರೀತಿಯ ಒತ್ತಡದಿಂದ ಗಂಟಲು ತುಂಬಿ ಬಂತು. ಒತ್ತರಿಸಿ ಬಂದ ಸಂತೋಷ ಕಂಬನಿ ಕಣ್ಣು ಮಂಜಾಗಿಸಿತ್ತು. ಎರಡೂ ಕೈಗಳಿಂದ ಇಬ್ಬರನ್ನೂ ಬರಸೆಳೆದು ಬಿಗಿದಪ್ಪಿದಳು.

ಇನ್ನೊಮ್ಮೆ, ವಯಸ್ಸಿನ ಪರಿಣಾಮದಿಂದಾಗಿ ಸ್ವಲ್ಪ ನಿಶ್ಯಕ್ತಿ ತಲೆದೋರಿ ಎರಡು ದಿನ ಮಲಗಿ ಬಿಟ್ಟಳು. ತಾಯಿಗೆ ಏನೋ ಗಂಭೀರವಾದ ಖಾಯಿಲೆಯೆಂಬಂತೆ ಹೆದರಿ, ಪಟ್ಟಣದಿಂದ ದೊಡ್ಡ ಡಾಕ್ಟರನ್ನೇ ಕರತಂದು ಚಿಕಿತ್ಸೆ ನಡೆಸಿದ್ದೇ ಅಲ್ಲದೆ, ಇಬ್ಬರೂ ಸರದಿಯಂತೆ ರಾತ್ರಿ ಹಗಲೂ, ಅವಳ ಶುಶ್ರೂಶೆ ಮಾಡಿದಾಗ ರಾಮಕ್ಕ ಮಕ್ಕಳ ಮುಗ್ಧತನಕ್ಕೆ ತನ್ನಲ್ಲಿನ ಅತೀವ ಪ್ರೀತಿಗೆ ನಕ್ಕು ಬುದ್ಧಿ ಹೇಳಿದ್ದಳು. ನೆನೆಸಿಕೊಂಡಂತೆಲ್ಲಾ ಇಂಥ ರಸ ಸನ್ನಿವೇಶಗಳು ಕಣ್ಮುಂದೆ ಬಂದು ನಿಂತಂತಾಗಿ ಅವಳ ಕಣ್ಣು ತೋಯುತ್ತಿತ್ತು.

ಈಗ ಅನಿವಾರ್ಯವಾಗಿ ರಾಮಕ್ಕ ಮಕ್ಕಳಿಂದ ದೂರವಿದ್ದಳು. ಅದು ಅವಳು ಅಂದುಕೊಂಡಂತೆ ಮಕ್ಕಳನ್ನು ಬಿಟ್ಟಿರುವುದು ಅಷ್ಟು ಸುಲಭವಾಗಲಿಲ್ಲ. ಸದಾ ಅವರ ಚಿಂತೆ, ಅವರಿಗೆ ಮದುವೆಯಾಗಿದ್ದರೆ, ಅವರ ಕ್ಷೇಮದ ಬಗ್ಗೆ ತಲೆ ಕೆಡಿಸಿಕೊಳ್ಳ ಬೇಕಾದ್ದಿರಲಿಲ್ಲ. ಹೇಗಾದರೂ ಈ ವರ್ಷ ಮಕ್ಕಳನ್ನು ಮದುವೆಯಾಗಲು ಒತ್ತಾಯಿಸಲೇಬೇಕೆಂದು ನಿರ್ಧರಿಸಿ ಅವರು ರಜೆಯಲ್ಲಿ ಬರುವುದನ್ನು ಕಾದು ಕುಳಿತಳು. ಊರಿನ ಹಿರಿಯರಿಗೆಲ್ಲಾ ಒಳ್ಳೇ ಹೆಣ್ಣುಗಳಿದ್ದರೆ ತಿಳಿಸೆಂದು ಹೇಳಿದಳು. ಅವರೂ ಸಹ ಏನು ರಾಮಕ್ಕ, ನಿನ್ನ ಅದೃಷ್ಟವೇ ಅದೃಷ್ಟ. ಒಟ್ಟೊಟ್ಟಿಗೆ ಇಬ್ಬರು ಸೊಸೆಯರು ಬರ್ತಾರೆ. ನಿನ್ನನ್ನು ಗದ್ದುಗೆ ಮೇಲೆ ಕೂರಿಸಿ ನಿನ್ನ ಸೇವೆ ಮಾಡ್ತಾರೆ. ಇಬ್ಬರು ಮಕ್ಕಳು, ಇಬ್ಬರು ಸೊಸೆಯರು; ಪರವಾಗಿಲ್ಲ ಮಹಾರಾಣಿ ಹಾಗೆ ನಿನ್ನ ಜೀವನ ಕಳೆಯುತ್ತೆ ಬಿಡು'– ಎಂದು ನಗೆ ಮಾತಾಡಿ, ಅವಳ ಮಕ್ಕಳಿಗೆ ಹೆಣ್ಣು ಮಕ್ಕಳನ್ನು ಹುಡುಕ ತೊಡಗಿದ್ದರು. ಶ್ರೀನಿವಾಸ ಜೋಯಿಸ ನಾಲ್ಕೈದು ಜಾತಕಗಳನ್ನೇನೋ ತಂದು ತೋರಿಸಿ ವಿವರಗಳನ್ನು ಕೊಟ್ಟ, ಆದರೆ ಮುದುಕಿಗೆ ಯಾವುವೂ ಹಿಡಿಸಲಿಲ್ಲ.

ನೋಡು ಸೀನಣ್ಣ, ದೇವರು ಹೊಟ್ಟೆ ತುಂಬಾ ತಿನ್ನೋಕೆ ಕೊಟ್ಟಿದ್ದಾನೆ. ನನ್ಮಕ್ಕಳು ಕೈ ತುಂಬಾ ಸಂಪಾದಿಸ್ತಾರೆ. ಅದಕ್ಕೇ ಶ್ರೀಮಂತರ ಮನೆ ಹುಡುಗಿಯರು ನಮಗೆ ಬೇಡವೇ ಬೇಡ. ಅವರು ಕೊಡುವ ಹಣ ನಮಗೆ ಶಾಶ್ವತವಲ್ಲ. ಯಾರಾದರೂ ಬಡವರ ಮನೆ ಹೆಣ್ಣು ಮಕ್ಕಳನ್ನು ನೋಡು, ನೋಡುವುದಕ್ಕೆ ಲಕ್ಷಣವಾಗಿದ್ದು,

ಸರಿಯಾಗಿ ಸಂಸಾರ ನಡೆಸಿಕೊಂಡು ಹೋಗಿ, ಏನೋ ಮನಸ್ಸು ಬಂದಾಗ ಈ ಮುದುಕಿಗೆ ಒಂದೆರಡು ತುತ್ತು ಅನ್ನ ಹಾಕಿ ಆದರಿಸೋ ಗುಣವಿದ್ದರೆ ಸಾಕು. ನೀನು ಹೇಳುವಂತಹ ಜಾಗದ ಹೆಣ್ಮಕ್ಕಳು ಬೇಡ– ಅಂತ ಖಡಾ ಖಂಡಿತವಾಗಿ ಹೇಳಿಬಿಟ್ಟಿದ್ದಳು. ಪಾಪ ಶ್ರೀನಿವಾಸ ಜೋಯಿಸ ಪೆಚ್ಚುಮೋರೆ ಹಾಕಿಕೊಂಡು ಅಲ್ಲಿಂದ ಕಾಲ್ತೆಗೆದಿದ್ದ.

ಮುದುಕಿ ಆಸೆಯಂತೆ ಒಂದೆರಡು ಒಳ್ಳೇ ಸಂಬಂಧ ಬಂದವು. ಇಬ್ಬರ ಮನೆಯುವರೂ ಬಂದು ವಿಚಾರಿಸಿಕೊಂಡು ಹೋದರು. ಮುದುಕಿಯೇ ಹುಡುಗಿಯರನ್ನು ನೋಡಿ 'ಪಾಸು' ಮಾಡಿದಳು.

ಜೋಯಿಸರ ಕೈಯಲ್ಲಿ ಇಬ್ಬರು ಮಕ್ಕಳಿಗೂ ಕೂಡಲೇ ಬರಬೇಕೆಂದು ತಂತಿ ಕೊಡಿಸಿದಳು. ದಾಮೋದರ ಜಗನ್ನಾಥರು– ಏನೋ ಎಂಬ ಗಾಭರಿಯಿಂದ ಎದ್ದು ಬಿದ್ದು ಬಂದರು. ಬಂದವರು ತಾಯಿಯ ಕಾರುಬಾರನ್ನು ನೋಡಿ ಸ್ತಂಭಿಸಿ ಹೋದರು. ಈ ತಾಯಿಗೆ ಸ್ವಲ್ಪವೂ ಬುದ್ಧಿಯಿಲ್ಲ. ಮದುವೆಯ ವಿಚಾರದಲ್ಲೂ ಇಷ್ಟೊಂದು ಸ್ವಾತಂತ್ರ್ಯ ವಹಿಸುವುದೇ? ನಮಗೆ ಬೇಕಾದವರನ್ನು ಆರಿಸಿಕೊಳ್ಳುವ ಹಕ್ಕೂ ನಮಗಿಲ್ಲದಂತೆ ಮಾಡಿ ಬಿಟ್ಟಿದ್ದಾಳೆಂದು ಸ್ವಲ್ಪ ಸಿಟ್ಟಾದರು. ಆದರೂ ಏನೂ ಮಾಡುವಂತಿರಲಿಲ್ಲ.

ಮಾರನೆಯ ದಿನ ಹುಡುಗಿಯರ ತಂದೆ ತಾಯಂದಿರು ತಮ್ಮ ಮಕ್ಕಳೊಂದಿಗೆ ಬಂದೇ ಬಂದರು. ಪರಸ್ಪರ ಸಂದರ್ಶನಗಳಾದವು. ಮುದುಕಿಗೆ ಒಳಗೇ ಹೆಮ್ಮೆ. ಈ ಇಬ್ಬರು ಹುಡುಗಿಯರ ತಾಯ್ತಂದೆಗಳಿಗೂ ಇವರಿಬ್ಬರೂ ಹಿಡಿಸಿದರು. ತುಂಬಾ ಸಂತೋಷವಾಯಿತು. ಕೂಡಲೇ ಮದುವೆ ನಿಶ್ಚಯವಾಗಲೆಂದು ಒತ್ತಾಯಿಸಿದರು.

ದಾಮೋದರ, ಜಗನ್ನಾಥ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಏನು ಹೇಳಬೇಕೋ ತಿಳಿಯಲಿಲ್ಲ. ಜಗನ್ನಾಥ ಈಗಲೇ ತನಗೆ ಮದುವೆ ಬೇಡವೆಂದು ಹೇಳಿದ. ದಾಮೋದರ ಮೌನ ತಳೆದ. ರಾಮಕ್ಕ ಮತ್ತೆ ಮತ್ತೆ ಒತ್ತಾಯಿಸಿದ್ದಕ್ಕೆ ದಾಮೋದರನೇನೋ, 'ನಿನ್ನಿಷ್ಟ ಅಮ್ಮ ನಿನಗೆ ಸಂತೋಷವಾಗುವುದಾದರೆ ನನ್ನ ಅಭ್ಯಂತರವಿಲ್ಲ'– ಎಂದ. ಆದರೆ ಜಗನ್ನಾಥ ಮಾತ್ರ ತನಗೆ ಈಗಲೇ ಮದುವೆ ಬೇಡವೇ ಬೇಡವೆಂದು ಹಟ ಹಿಡಿದ. ರಾಮಕ್ಕನ ಕಣ್ಣು ಹನಿಸಿತು. ಮಗನನ್ನು ಮಂಜು ಕಣ್ಣುಗಳಿಂದ ನೋಡಿ ನಡುಗುವ ದನಿಯಲ್ಲಿ ಹೇಳಿದಳು. 'ಜಗ್ಗು ಯಾಕೋ ಹಟ ಸಾಧಿಸ್ತಿಯಾ? ತಾಯಿಯೆಂದರೆ ಬಾಯಿ ಬಾಯಿ ಬಿಡುತ್ತಿದ್ದ ನಿನಗೆ ಈಗ ಮಾತ್ರ ಅಸಡ್ಡೆಯಾಯಿತಾ? ಇಬ್ಬರು ಸೊಸೆಯರನ್ನೂ ಕಣ್ತುಂಬ ನೋಡಿ ಒಂದೆರಡು ದಿನ ಜೀವವಿಟ್ಟುಕೊಂಡು ಬದುಕಬೇಕೆಂದುಕೊಂಡು ಆಶಿಸಿದ್ದೆ. ಆದರೆ ನಿನ್ನ ಇಚ್ಛೆಯೇ ಬೇರೆ ಇದ್ದಂತಿದೆ. ಈಗ ಬಂದವರ ಮುಂದೆ ನನ್ನ ಮಾನ ಹೋಗುತ್ತೆ. ಹೋಗಲಿ ಬಿಡು ಜಗ್ಗು. ನಿನ್ನ ತಾಯಿಯಾಗಿದ್ದಕ್ಕೆ ನಿನ್ನ ಕ್ಷೇಮದ ವಿಚಾರವಾಗಿಯೂ ಆಲೋಚಿಸುವ ಹಕ್ಕು ಕೂಡ ನನಗಿಲ್ಲದೆ ಹೋಯಿತು. ಹೇಗಿದ್ದರೂ ನನ್ನ ಕಾಲ ಮುಗೀತಾ ಬಂತು. ವರ್ಷವೋ, ತಿಂಗಳೋ, ದಿನಗಳೋ! ನಿನ್ನಿಷ್ಟದಂತೆಯೇ ಆಗಲಿ... ಆದರೆ ಬಂದವರ

ಮುಂದೆ ಈಗ ನಿರಾಕರಣೆಯ ಮಾತನಾಡುವುದು ಸ್ವಲ್ಪ ಅಪಮಾನವಾದೀತು... ಬೆಳೆದವನು ನೀನು. ನಿನಗೆ ಬುದ್ಧಿ ಹೇಳುವಷ್ಟು ಶಕ್ತಿ ನನಗಿಲ್ಲ' ಎಂದು ಹೇಳುತ್ತಿದ್ದಂತೆ ಸುಕ್ಕುಗಟ್ಟಿದ್ದ ಕೆನ್ನೆಗಳ ಮೇಲಿಂದ ದಿಣ್ಣೆಗಳನ್ನು ದಾಟಿ ಹರಿವ ಹೊನಲಿನಂತೆ ಕಂಬನಿಧಾರೆ ತಡೆದು ತಡೆದು ಬಿತ್ತು. ಸೀರೆಯ ಸೆರಗಿನ ತದಿಯಿಂದ ಕಣ್ಣೊರೆಸಿಕೊಂಡಳು.

ಅಲ್ಲಿ ನಿಲ್ಲಲು ಇಚ್ಛಿಸದೆ ನಡೆದಳು. ಜಗನ್ನಾಥನ ಮನಸ್ಸಿಗೆ ತುಂಬಾ ನೋವಾಯಿತು. ತಾಯಿಯ ಮನಸ್ಸನ್ನು ನೋಯಿಸುವ ಉದ್ದೇಶವೇ ಅವನದಾಗಿರಲಿಲ್ಲ. ಆದರೆ ಈಗ ಯಾಕೋ ಈಗಲೇ ಈ ಮದುವೆಯ ಹೊರೆ ಬೇಡವೆನಿಸಿತ್ತು. ಹುಡುಗಿಯನ್ನು ನೋಡಿದ, ಲಕ್ಷಣವಾಗಿಯೇ ಇದ್ದಳು. ಆ ಕಾರಣದಿಂದಲೂ ಅವನು ಮದುವೆಯನ್ನು ತಿರಸ್ಕರಿಸುವಂತಿರಲಿಲ್ಲ. ಅದಕ್ಕಾಗಿಯೇ ಕಾರಣವೇನೂ ಇಲ್ಲದೆ ಮೊಂಡುತನದಿಂದ ಮದುವೆ ಬೇಡವೆಂದ.

ತಾಯಿಯ ಬಗ್ಗೆ ಅವನಿಗೆ ಗೌರವವಿದೆ, ಪ್ರೀತಿಯಿದೆ. ಏನನ್ನು ಬೇಕಾದರೂ ಸಹಿಸಿಯಾನು. ಆದರೆ ತಾಯಿಯ ಕಣ್ಣೊಸರುವುದನ್ನು ಮಾತ್ರ ಸಹಿಸಲಾರದವನಾಗಿದ್ದನು. ಈಗ ನೋಡಿದರೆ ತಾಯಿ ತೀರಾ ನೊಂದಿದ್ದಾಳೆ. ಅವಳ ಮಾತನ್ನು ಒಪ್ಪಿಕೊಳ್ಳಬೇಕೋ ಬೇಡವೋ ಎಂದು ತುಂಬಾ ಆಲೋಚಿಸಿ ನಿರ್ಧಾರಕ್ಕೆ ಬಂದ. ತಾಯಿಯ ಮಾತನ್ನು ಮನ್ನಿಸುವುದೆಂದುಕೊಂಡ.

ಈ ಎಲ್ಲ ವ್ಯವಹಾರವನ್ನೂ ಮೂಕಳಂತೆ ಗಮನಿಸಿದ ಜಲಜಾಕ್ಷಿಯ ಎದೆಯಾಳದಿಂದ ಒಂದು ದೊಡ್ಡ ನಿಟ್ಟುಸಿರು ಹೊರಟಿತು. ಆದರೆ ಆ ನಿಟ್ಟುಸಿರು ಗಮನಿಸುವವರಾಗಲೀ, ಅದನ್ನು ಅರ್ಥೈಸುವವರಾಗಲಿ ಅಲ್ಲಿರಲಿಲ್ಲ. ಬಂದವರ ಆತಿಥ್ಯದ ಕೆಲಸದ ಮೇಲೆ ಮಾತ್ರ ಚುರುಕಾಗಿ ಓಡಾಡುತ್ತಿದ್ದಳು.

ಮುದುಕಿಯ ಮನಸ್ಸು ಗಾಳಿಗಿಂತ ಹಗುರವಾಗೆನಿಸಿತು. ದಾಮೋದರ ಜಗನ್ನಾಥರು ಮಾತ್ರ ನಿರ್ಭಾವದಿಂದಲೇ ತಮ್ಮ ಮದುವೆಯ ನಿಶ್ಚಯವನ್ನು ಸ್ವೀಕರಿಸಿದರು.

ಮುದುಕಿ ಹೊತ್ತ ಆಸೆಗಳೆಲ್ಲ ಕುಸಿದಿದ್ದವು. ಹಾಲಿನಂತಹ ಮಕ್ಕಳ ಮನಸ್ಸು ಗಂಜಿಗಿಂತ ಅಸಹ್ಯವಾಗಿತ್ತು. ಅವರ ಪ್ರೀತಿಯ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹಾಕುವವರು ಈಗ ಹೆತ್ತವಳನ್ನು ವಿಚಾರಿಸಿಕೊಳ್ಳುವಷ್ಟು ವ್ಯವದಾನವಿಲ್ಲದ ನಿರ್ಲಕ್ಷ್ಯ! ಮಕ್ಕಳು, ಮಕ್ಕಳು– ಎಂದು ಮಮಕಾರದಿಂದ ಬಡಿದುಕೊಂಡ ಅವಳಿಗೆ ಆ ಮಕ್ಕಳೇ ದೂರವಾದರು. 'ಮದುವೆ' ಎನ್ನುವುದು ಮನುಷ್ಯನನ್ನು ಇಷ್ಟೊಂದು ಸ್ವಾರ್ಥಿಯನ್ನಾಗಿ ಮಾಡುತ್ತದೆಯೇ!– ಎಂದು ರಾಮಕ್ಕ ಆಲೋಚಿಸಿದಳು.

ಮಕ್ಕಳು ಬರುವುದೇ ತೀರಾ ಅಪರೂಪವಾಯಿತು. ಅವರು ಹೃದಯಕ್ಕೆ ಹತ್ತಿರವಿದ್ದಾಗ ಒಂಟಿಯಾಗಿದ್ದರೂ ಒಂಟಿತನದಲ್ಲಿದ್ದಂತೆನಿಸಲಿಲ್ಲ. ಆದರೆ ಅವರು ದೂರ ಹೋದಾಗಿನಿಂದ, ಮನಸ್ಸಿನಿಂದ ಸರಿದಾಗಿನಿಂದ, ಏಕಾಕಿತನ ಭೀಕರವೆನಿಸುತ್ತಿತ್ತು.

ಕೊರಗಿ ಕೊರಗಿ ಕರಗುತ್ತಿದ್ದಳು. ಪಕ್ಕದ ಮನೆಯ ವೇಣುವಿನ ಕೈಯಿಂದ ಮೇಲೆ ಮೇಲೆ ಪತ್ರ ಬರೆಸಿದರೂ, ನಿರ್ಲಕ್ಷ್ಯವೇ ಅವರ ಉತ್ತರವಾಯಿತು.

ಕೃಷ್ಣ ಜೋಯಿಸ, ಗೌಡ, ಶ್ರೀನಿವಾಸ ಶಾಸ್ತ್ರಿ ಮುದುಕಿಯಲ್ಲಿಗೆ ಆಗಾಗ ಬಂದು ಸಮಾಧಾನ ಹೇಳಿ ಹೋಗುತ್ತಿದ್ದರು. ಆದರೂ ಹೆತ್ತ ಕರುಳಿನ ನೋವು ಇದರಿಂದ ಸುಲಭವಾಗಿ ಮಾಯವಾಗಲಿಲ್ಲ. ತಾನೇ ಒಮ್ಮೆ ಅವರಲ್ಲಿಗೆ ಹೋಗಿ ಬರಬೇಕೆಂದು ಕೊಂಡಳು. ಹೇಗಿದ್ದರೂ ಜಲಜ ಜೊತೆಗಿರುತ್ತಾಳೆ ಎಂದುಕೊಂಡು ಒಂದು ದಿನ ಅವರಿಗೆ ಪೂರ್ವ ಸೂಚನೆ ಕೊಡದೆ ಹೊರಟೇಬಿಟ್ಟಳು.

ಆಕಸ್ಮಿಕವಾಗಿ ಬಂದ ತಾಯಿಯನ್ನು ನೋಡಿ ದಾಮೋದರನಿಗೆ ಆಶ್ಚರ್ಯವಾಯಿತು. ಜೊತೆಗೆ ಅವಳಲ್ಲಿಗೆ ಬಂದದ್ದರಿಂದ ಅಷ್ಟೇನೂ ಸಂತೋಷವಾದಂತೆ ಕಾಣಿಸಲಿಲ್ಲ, ಆದರೂ ಬರಮಾಡಿಕೊಂಡ. ಮುದುಕಿ ರಾಮಕ್ಕ ತಾನೇ, ತನ್ನ ಮನೆ ಎಂಬ ಸ್ವಾತಂತ್ರ್ಯದಿಂದ ಒಳನುಗ್ಗಿ ಕೆಲಸಕ್ಕೆ ಕೈ ಹಾಕಿದಳು. ಜಲಜ, "ಅಜ್ಜಿ ನೀವು ಮಾಡೋದು ಬೇಡ, ನಾನೇ ಮಾಡ್ತೇನೆ" ಎಂದು ಒಳಗೆ ಹೋದಳು. ಆದರೆ ದಾಮೋದರನ ಹೆಂಡತಿ ಮಾರಿಯಂತೆ ಹಾರಿಬಿದ್ದು, ಅವರನ್ನು ಹೀನಾಮಾನವಾಗಿ ಬೈದಳು. "ಭಿಕಾರಿಗಳಂತೆ ಬಂದು ಠಾಣೆ ಹೂಡಬೇಕೆಂದು ಆಲೋಚಿಸಿದ್ದೀರಾ?" ಎಂದು ಆರೋಪಿಸಿದಳು. ಮುದುಕಿ ವ್ಯಂಗ್ಯವಾಗಿ ನಕ್ಕಳು. 'ಮಗ ರಕ್ತ ಹಂಚಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದ ನನ್ನ ಕರುಳ ಪ್ರೀತಿಯ ಬೆಲೆಯೂ ನಿನಗೆ ಅರ್ಥವಾಗಲಿಲ್ಲವಾ? ಹೋಗಲಿ ಬಿಡು, ಬಂದದ್ದಾಯಿತು ನೋಡಿದ್ದಾಯಿತು. ಇನ್ನು ಹೊರಟು ಹೋಗ್ತೀನಿ' ಎಂದಾಗಲೂ ದಾಮೋದರ ಚಕಾರವೆತ್ತಲಿಲ್ಲ. ಅಸಹಾಯಕನಂತೆ ಹೆಂಡತಿಯತ್ತ ನೋಡಿದಾಗ, 'ಹೋಗಲಿ ಬಿಡೀಂದ್ರೆ, ನಾವಿಬ್ಬರೂ ಸುಖವಾಗಿರೋದನ್ನ ನೋಡೋಕೆ ಆಗಲಿಲ್ಲ. ಅದಕ್ಕೇ ಈ ಮುದುಕಿವೊಬ್ಬಳು ಬಂದಿದ್ದಾಳೆ' ಎಂದು ಅಸಡ್ಡೆಯ ಧ್ವನಿಯಲ್ಲಿ. ದಾಮೋದರನ ಪುರುಷತ್ವ ಕೆರಳಿತು. 'ಬಾಯ್ಮುಚ್ಚು ಪದ್ಮ'– ಎಂದು ಅಬ್ಬರಿಸಿದ. 'ಹಾಂ, ನನ್ನನ್ನು ಬಾಯ್ಮುಚ್ಚು ಅನ್ನುವಷ್ಟು ಪೌರುಷ ಬಂತೇ ಇವತ್ತು ನಿಮಗೆ? ಇವಳು ಬಂದದ್ದೇ ನೀವು ಇಷ್ಟೊಂದು ಬದಲಾದರೆ, ಇನ್ನು ಇವಳು ಇಲ್ಲೇ ಉಳಿದರೆ ಕೊನೆಗೆ ನನ್ನನ್ನು ಸಾಯಿಸುವಷ್ಟು ಧೈರ್ಯವೂ ಬಂದೇ ಬರುತ್ತೆ. ನೀವು, ನಿಮ್ಮಮ್ಮ, ಈ ಗತಿಕೆಟ್ಟವಳು ಎಲ್ಲಾರೂ ಇದ್ದು ಮೆರೀರಿ'– ಎಂದು ಗಳಗಳನೆ ಅತ್ತು ಕೋಣೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡಳು.

ಮುದುಕಿ ಪ್ರತಿಮೆಯಂತೆ ಅವಾಕ್ಕಾಗಿ ನಿಂತಳು. ಜಲಜಳ ಕಣ್ಣಲ್ಲಿ ಭೀತಿಯ ಛಾಯೆ ಹರಡಿತು. ಛೆ! ಛೆ! ಓದಿದವರು ಸುಸಂಸ್ಕೃತರು ಎಂದುಕೊಂಡಿದ್ದರೆ, ಇವರು ಇಷ್ಟು ನೀಚಸ್ವಭಾವದವರೇ? ಅಜ್ಜಿ ಮನಸ್ಸು ಎಷ್ಟು ದೊಡ್ಡದು. ಆಕೆಯ ಪ್ರೀತಿಗೆ ಖಂಡಿತ ಇವರು ಯೋಗ್ಯರಲ್ಲ– ಎಂದು ಕೊಂಡಳು. ಮೂಕಳಾಗಿ ನಿಂತ ಮುದುಕಿಗೆ ಜಲಜ, 'ಅಜ್ಜಿ ಇನ್ನು ಇಲ್ಲಿ ನಿಲ್ಲೋದು ಬೇಡ. ಹೊರಟು ಹೋಗೋಣ' ಎಂದು

ಎಚ್ಚರಿಸಿದಳು. ಕಣ್ತುಂಬ ಮಗನನ್ನು ನೋಡಿದಳು. ಪುಟ್ಟ ಟ್ರಂಕನ್ನು ಎತ್ತಿ ಕಂಕುಳಿಗಿರಿಸಿ ಕೊಂಡು ಹೊರಟೇ ಬಿಟ್ಟಳು. ಜಲಜ ಮುದುಕಿಯ ಹೆಜ್ಜೆ ವೇಗಕ್ಕೆ ತಡವರಿಸಿದಳು.

ಮಕ್ಕಳನ್ನು ನೆನೆಸಿಕೊಳ್ಳುವುದಕ್ಕೆ ಅಂದೇ ಕೊನೆಯಾಯಿತು.

* * *

ಊರ ಮಂದಿಗೆಲ್ಲಾ ಹಿರಿಯಳಾದ ರಾಮಕ್ಕನ ಮಾತೆಂದರೆ ಜನಕ್ಕೆ ಗೌರವ, ಜೊತೆಗೆ ಆ ಊರಿನವರು ನಯ ಭಯಗಳಿಂದ ನಡೆದುಕೊಳ್ಳುತ್ತಿದ್ದುದೂ ಅವಳ ಕಾರಣದಿಂದಲೇ. ಜೊತೆಗೆ ತಪ್ಪಿದ್ದವರನ್ನು ಕರೆದು ಮುಂದೆ ನೀರಿಳಿಸುತ್ತಿದ್ದಳು. ಆ ಅಧಿಕಾರ ಅವಳಿಗಿತ್ತು.

ಕೃಷ್ಣ ಜೋಯಿಸರ ರೀತಿ ಮಾತ್ರ ಸುಧಾರಿಸಲೇ ಇಲ್ಲ. ವೈದಿಕ ಕುಲದಲ್ಲಿ ಹುಟ್ಟಿ ಮಡಿ, ಮಂತ್ರ, ಹೋಮ, ಜಪ ತಪಗಳೆಂಬ ಪರಿಸರದಲ್ಲಿ ಬೆಳೆದು ಬಂದರೂ ಅವನ ಬುದ್ಧಿ ಮಾತ್ರ ಸುಧಾರಿಸಲೇ ಇಲ್ಲ. ಊರೊಳಗೆ, ಊರ ಹೊರಗೆ ಅವನ ಕುಟುಂಬಗಳಿದ್ದವು. ಮನೆಯಲ್ಲಿ ಹೆಂಡತಿಗೆ ಸದಾ ಸೊಂಟ ನೋವು, ನರಳಾಟ. ಇವನ ರಸ ರುಚಿಗಳಿಗೆ ಅವಳ ಕಾಯಿಲೆ ಅಡ್ಡಿಯಾಯಿತು. ಮಕ್ಕಳನ್ನು ಹೆತ್ತು ಹೆತ್ತು ಸಾಕಾಗಿ ಹೋದ ಅವಳಿಗೆ, ಗಂಡನೆಂದರೆ ಬೇಸರ ಬರಿಸುತ್ತಿತ್ತು. ಜೊತೆಗೆ ಈ ಸೊಂಟ ನೋವು ಅವಳಗೆ ಒಂದು ರೀತಿಯಲ್ಲಿ ವರವೇ ಆಯಿತು.

ಭೀಮಪ್ಪ ಪಂಡಿತರಿಂದ ಔಷಧಿ ಚಿಕಿತ್ಸೆ ನಡೆಯಿತು. ತುಂಬಾ ಹೆರಿಗೆಗಳಿಂದ ಹೀಗಾಗಿದೆ ಎಂದು ಅವರು ಕಾರಣ ತಿಳಿಸಿ ಇನ್ನು ಮುಂದೆ ಸ್ವಲ್ಪ ಜಾಗರೂಕತೆ ವಹಿಸಬೇಕೆಂದು ಎಚ್ಚರಿಸಿದ್ದರು. ಅಂದಿನಿಂದ ಕೃಷ್ಣ ಜೋಯಿಸರು ಮಡದಿಯಲ್ಲಿ ಉದಾಸೀನರಾದರು. ಆದರೆ ಹೊರಗೆ ನಿರಾತಂಕವಾಗಿ ಬೇಡರ ಮಲ್ಲಿ, ಗಾಣಿಗರ ಲಕ್ಷ್ಮಿ ಜೊತೆಗೆ ಸಂಸಾರ ನಡೆಸಿದರು.

ರಾಮಕ್ಕ, ಜೋಯಿಸನ ರೀತಿಗೆ ಬೇಸರಗೊಂಡು ಒಂದು ದಿವಸ ಛೀಮಾರಿ ಹಾಕಿದಳು. ಮನೆಯಲ್ಲಿ ಹೆಂಡತಿ ಸಾಯ್ತಾ ಬಿದ್ದಿದ್ರೆ, ಹೊರಗೆ ನೀನು ಹೀಗೆಲ್ಲಾ ನಡ್ಕೊಂಡ್ರೆ ಹೇಗೋ ಜೋಯಿಸ? ನೀನು ಮಾಡೋದು ನ್ಯಾಯಾನಾ? ಮನೆ ತುಂಬಾ ಮಕ್ಕಳಿದ್ದಾರೆ. ವಯಸ್ಸಿಗೆ ಬಂದ ಹುಡುಗೀರಿದ್ದಾರೆ. ನಿನಗೆ ನಾಚಿಕೆಯಾಗೋಲ್ವೆ?– ಎಂದು ಚೆನ್ನಾಗಿ ಬೈದು ಬುದ್ಧಿವಾದ ಹೇಳಿದ್ದಳು. ಜೋಯಿಸ ಎದುರು ಮಾತನಾಡದೆ ಸುಮ್ಮನೆ ತಲೆ ಬಗ್ಗಿಸಿಕೊಂಡು ಎದ್ದು ನಡೆದ.

ಸ್ವಲ್ಪ ದಿವಸ ಸುಧಾರಿಸಿದಂತೆ ಕಂಡರೂ ಅದು ನಿಜವಿರಲಿಲ್ಲ. ಊರ ಜನರ ಕಣ್ಣಿಗೆ ಮಣ್ಣೆರಚುವುದಕ್ಕೆ ಮಾತ್ರವೇ ಹಾಗೆ ವರ್ತಿಸಿರಬೇಕೆಂದೆನಿಸಿತು.

ಜಾನಕಿ ಊರಿಗೆ ಬಂದಾಗಿನಿಂದ ಜೋಯಿಸ ಒಂದು ಕಣ್ಣು ಅವಳ ಮೇಲೆ ಇಟ್ಟೇ ಇದ್ದ. ಅವಕಾಶಕ್ಕಾಗಿ ಕಾಯುತ್ತಿದ್ದ. ಯಾವ ನರಪಿಳ್ಳೆಯೂ ಆ ಮನೆಗೆ

ಹೋಗದಿದ್ದುದನ್ನು ಗಮನಿಸಿದ ಜೋಯಿಸ ಆ ಮನೆಯೊಂದಿಗೆ ಸ್ನೇಹ ಬೆಳೆಸಬೇಕೆಂದು ಯೋಚಿಸಿದ. ಯೋಚನೆಗೆ ಸರಿಯಾದ ಯೋಜನೆಯ ಹಿನ್ನೆಲೆಯನ್ನು ನಿರ್ಮಿಸಿಕೊಂಡು ಬಂದಿದ್ದನು.

* * *

ರಾಮಕ್ಕ, ಜೋಯಿಸ ಆ ಮನೆ ಹೊಕ್ಕದ್ದನ್ನು ತನ್ನ ಹದ್ದುಗಣ್ಣಿನಿಂದ ನೋಡಿದಳು. ಅವಳಿಗೆ ಜಾನಕಿಯ ಬಗ್ಗೆ ಕನಿಕರವೆನಿಸಿತು. ಗಂಡನ ಆಶ್ರಯವಿಲ್ಲದೆ ಒಂಟಿಯಾಗಿ ಬದುಕುತ್ತಿರುವ, ಅವಳ ಬಗ್ಗೆ ಅನುಕಂಪದ ಜೊತೆಗೆ ಕುತೂಹಲವೂ ಮೂಡಿತು. ಒಂದೆರಡು ಸಲ ಹೋಗಿ ಕ್ಷೇಮ ಸಮಾಚಾರ ವಿಚಾರಿಸಿದ್ದಳು. ಜೋಯಿಸ ಜಾನಕಿಯ ಮನೆಗೆ ಹೋಗುವುದಕ್ಕೆ ಒಂದೆರಡು ದಿನ ಮುಂಚೆ ರಾಮಕ್ಕ ಹೋಗಿ ಒಂದಿಷ್ಟು ತಿಂಡಿಕೊಟ್ಟು ಬಂದಿದ್ದಳು. ರತ್ನಳಿಗೆ ರಾಮಕ್ಕಜ್ಜಿ ಅತಿ ಪ್ರೀತಿಯಾಗಿ ಬಿಟ್ಟಿದ್ದಳು. ತನ್ನ ಮನೆ ಬೇಸರವಾದರೆ ರಾಮಕ್ಕಜ್ಜಿಯ ಮನೆಗೆ ಓಡಿ ಬರುತ್ತಿದ್ದಳು. ಅವಳಿಂದ ಕತೆ, ಹಾಡು ಹೇಳಿಸಿ ಖುಷಿ ಪಡುತ್ತಿದ್ದಳು. ಒಂದು ದಿನ ರತ್ನ ಅಜ್ಜಿಯನ್ನು ಹುಡುಕಿಕೊಂಡು ಬಂದಳು. ಅಜ್ಜಿ ಲಡ್ಡು ಮಾಡುತ್ತಿದ್ದಳು. ಬೆಲ್ಲದ ಪಾಕದ ವಾಸನೆಗೆ ರತ್ನಳ ಮೂಗರಳಿತು. ಅಜ್ಜಿ, ಅಜ್ಜಿ ಎಂದು ಕೂಗುತ್ತಾ ನೇರವಾಗಿ ಅಡುಗೆ ಮನೆಗೆ ಹೋದಳು.

ರಾಮಕ್ಕ 'ಮಣ ಮಣ' ಎಂದುಕೊಳ್ಳುತ್ತಾ ಉಂಡೆ ಕಟ್ಟುತ್ತಿದ್ದಳು. ರತ್ನ ಹೋದವಳೇ, ನಗುತ್ತಾ 'ಏನಜ್ಜಿ ನಂಗೆ ಕೊಡ್ದೇನೆ ನೀ ತಿಂತಿಯಾ ಉಂಡೇನ'– ಎಂದಳು. ಅಜ್ಜಿ ಹಲ್ಲಿಲ್ಲದ ಬಾಯನ್ನು ಅಗಲಿಸಿ ನಕ್ಕು, ನಿಂಗೆ ಕೊಡದೆ ನಾನು ಹೇಗೆ ತಿನ್ನಲಿ? ನಿನ್ನಂಥ ಜಾಣ ಮರಿಗೆ ಖಂಡಿತ ಕೊಡ್ತೀನಿ ಎಂದು ಭರವಸೆ ನೀಡುತ್ತಿದ್ದಂತೆ ರತ್ನಳ ಮುಖ ಅರಳಿತು. ಉಟ್ಟ ಲಂಗವನ್ನು ಮಡಚಿ ಕುಳಿತುಕೊಂಡಳು. ಅಜ್ಜಿ ಅವಳ ಕೈಗೆ ಲಡ್ಡುಗೆಯೊಂದನ್ನು ಕೊಟ್ಟಳು. ಕಚ್ಚಿ ಕಚ್ಚಿ ಮೆಲ್ಲುತ್ತಾ ಇದ್ದ ರತ್ನಳನ್ನೇ ನೆಟ್ಟ ಕಣ್ಣುಗಳಿಂದ ನೋಡುತ್ತಿದ್ದ ಮುದುಕಿ, 'ಮರಿ ನಿಮ್ಮನೆಗೆ ಆ ಜೋಯಿಸ ಬಂದಿದ್ದನೇನು?' ಎಂದು ನೇರವಾಗಿ ಕೇಳಿದಳು.

ಯಾರು?... ಆ ಕೊಳಕು ಹಲ್ಲಿನ ತಾತಾ ಏನು? ಎಂದು ಅಸಹ್ಯ ಪಟ್ಟುಕೊಂಡಂತೆ ಕಂಡಳು. 'ಹೂಂ! ಅವರೇ' ಎಂದಳು ಮುದುಕಿ, ರತ್ನ, ಯಾಕೆ ಅಜ್ಜಿ ಈ ಪ್ರಶ್ನೆ ಕೇಳಿದಳೆಂದು ಅರ್ಥವಾಗದೆ ಮಿಕ ಮಿಕ ನೋಡಿದಳು. ಆಮೇಲೆ ಮೆಲ್ಲನೆ ಉಸಿರಿದಳು. 'ಅಜ್ಜಿ ಅವರ್ನ ಕಂಡರೆ ನಂಗಾಗೋಲ್ಲ. ಒಂದು ಥರಾ ನೋಡ್ತಾರೆ. ಅಲ್ವೇನಜ್ಜಿ'– ಎಂದು ಹೇಳಿದಳು. ಅವಳ ಮುಗ್ಧವಾದ ಮಾತಿಗೆ ನಕ್ಕು, ಹಾಗೆಲ್ಲಾ ಹೇಳಬಾರದು ಮರಿ, ಅವರು ತುಂಬಾ ಒಳ್ಳೇವರು. ದೊಡ್ಡವರನ್ನು ಕೆಟ್ಟೋರಂತ ಹೇಳಬಾರದು ತಿಳೀತ?... ಸಂಜೆ ಅಮ್ಮನ್ನ ಸ್ವಲ್ಪ ಕರೆದೇಂತ ಹೇಳ್ತೀಯ?– ಎಂದಳು. 'ಓ ಅದಕ್ಕೇನು? ಈಗಲೇ ಹೋಗಿ ಕರೆದು ಬರಲಾ'– ಎಂದಳು. 'ಬೇಡ ಈಗ ನಂಗೆ ಕೆಲಸ ಇದೆ.

ಸಂಜೆಗೆ ನೀನೂ ಅಮ್ಮನೊಟ್ಟಿಗೆ ಬಾ'-ಎಂದು ಹೇಳಿದ್ದಕ್ಕೆ, ಅವಳಿಗೆ ತನಗೂ ಆಹ್ವಾನ ಸಿಕ್ಕಿದ್ದು ಹೆಮ್ಮೆಯೆನಿಸಿತು.

ರತ್ನಳಿಗೆ ಲಡ್ಡು ತಿಂದಾಗಿತ್ತು. ಮನೆಗೆಂದು ಹೊರಟು ನಿಂತಳು. ಜಲಜಾ ಒಳಗೆ ಕಸೂತಿ ಕೆಲಸದಲ್ಲಿ ತೊಡಗಿದ್ದಳು. ರತ್ನ ಹೋಗುವಾಗ 'ಜಲಜತ್ತೆ'ಯನ್ನು ಮಾತಾಡಿಸಿಯೇ ಹೋಗುತ್ತಿದ್ದಳು. ಎದ್ದವಳೇ ಜಲಜಳ ಬಳಿಗೆ ಹೋಗಿ ನಿಂತು ಕಣ್ಣರಳಿಸಿ ಅವಳ ಕಸೂತಿ ಬಿಡಿಸಿದ ಹೂಗಳನ್ನೇ ನೋಡುತ್ತಿದ್ದಳು. ಅವಳಿಗೂ ಆಸೆಯಾಯಿತು. 'ಜಲಜತ್ತೆ, ನೀವು ಎಷ್ಟು ಚೆಂದ ಹೂ ಬಿಡಿಸುತ್ತಿದ್ದೀರಿ. ನಂಗೂ ಹಾಕಿ ಕೊಡ್ತೀರಾ?- ಎಂದಳು.

ಹೂಂ ಕಣೆ ನಾಳೆ ಬಂದಾಗ ನಿನ್ನ ಲಂಗವನ್ನು ತಂದುಕೊಡು. ಅದರ ಮೇಲೆ ಪುಟಾಣಿ ಬೊಂಬೆಗಳನ್ನು ಬಿಡಿಸಿ ಕೊಡ್ತೀನಿ ಎಂದಳು.

ಜಲಜಳ ಭರವಸೆ, ಅವಳಲ್ಲಿ ಒಡೆದ ಆಸೆಯನ್ನು ತಣಿಸಿತು. 'ನಂಗೆ ಮರೀದೆ ಹಾಕ್ಕೊಡಬೇಕು' ಎಂದು ಕೇಳಿ ಖಚಿತ ಪಡಿಸಿಕೊಳ್ಳುತ್ತಾ ಹೊರಟಳು.

* * *

ರಾಮಕ್ಕಜ್ಜಿಯಿಂದ ಕೃಷ್ಣಾ ಜೋಯಿಸರ ವಿಚಾರ ತಿಳಿದ ಮೇಲೆ ಜಾನಕಿ ಅವರೊಂದಿಗೆ ಮಾತಾಡಬೇಕಾದರೆ ಬಹಳ ಎಚ್ಚರಿಕೆಯಿಂದ ಇರುತ್ತಿದ್ದಳು. ಆತ ಸಲುಗೆಯಿಂದ ನಡೆದುಕೊಳ್ಳಲು ಯತ್ನಿಸಿದಷ್ಟೂ ಜಾನಕಿ ಬಿಗುಮಾನದಿಂದಲೇ ವರ್ತಿಸಿದಳು. ಜೋಯಿಸನ ಉತ್ಸಾಹ ಇದರಿಂದ ತಣ್ಣಗಾಗಿತ್ತು. ಮನಸ್ಸಿನಲ್ಲಿ ಆಸೆಗಳು ಕೆರಳಿದರೂ, ಉದ್ಧಟನಾಗಿ ವರ್ತಿಸುವ ಧೈರ್ಯ ಅವನಿಗಾಗುತ್ತಿರಲಿಲ್ಲ. ರಾಮಕ್ಕನ ಭೀತಿ ಅವನಿಗಿದ್ದೇ ಇತ್ತು. ರತ್ನಳ ಮೂಲಕ ಸಲುಗೆ ಪಡೆಯೋಣವೆಂದರೆ, ಮೊದಲಿನಿಂದಲೂ ಅವಳಿಗೆ ಜೋಯಿಸನೆಂದರೆ ಜಿಗುಪ್ಸೆ, ಹತ್ತಿರ ಎಳೆದುಕೊಂಡರೆ, 'ಗಬ್ಬು ವಾಸನೆಯ ತಾತ ಬಿಡ್ತೀಯೋ ಇಲ್ವೊ? ಎಂದು ಹಂಗಿಸುತ್ತಿದ್ದಳು. ಎಲ್ಲಾ ದಾರಿಗಳು ಬಂದಾಗಿದ್ದುದರಿಂದ ಜಾನಕಿಯನ್ನು ನೋಡಿ ತೃಪ್ತಿಪಡಬೇಕಾಗಿತ್ತು.

ದಿನ ಕಳೆದಂತೆ ರತ್ನ ದೊಡ್ಡವಳಾಗುತ್ತಿದ್ದಳು. ಊರ ಮುಂದಿನ ಶಾಲೆಗೆ ಸೇರಿದಳು. ಶ್ರೀನಿವಾಸರ ಮಗ ಶೇಖರ ರತ್ನಳ ಓರಗೆಯವನು. ಶೇಖರನೆಂದರೆ ಅವಳಿಗೆ ಪ್ರಾಣ. ಶಾಲೆಗೆ ಹೋಗುವುದು, ಆಟ ಆಡುವುದೂ ಒಟ್ಟಿಗೆ. ಮುಕ್ಕಾಲು ಮೂರು ಪಾಲು ಶೇಖರ ಜಾನಕಿಯ ಮನೆಯಲ್ಲಿ ಇರುತ್ತಿದ್ದ. ಜಾನಕಿಯೂ ತನ್ನ ಮಗಳೊಂದಿಗೆ ಸರಿಸಮಾನವಾಗಿ ಅವನನ್ನು ಕಾಣುತ್ತಿದ್ದಳು.

ರತ್ನಳದು ಸ್ವಲ್ಪ ಸ್ವಚ್ಛಂದದ ಸ್ವಭಾವ. ಶಾಲೆಯ ಹುಡುಗರ ಜೊತೆಗೂ ಸ್ವಲ್ಪ ಸ್ವಲ್ಪ ಚೆಲ್ಲಾಗಿ ಆಡುತ್ತಿದ್ದಳು. ಎಲ್ಲರೊಂದಿಗೆ ಸಲುಗೆಯಿಂದ ಇರುವುದು ಶೇಖರನಿಗೆ ಹಿಡಿಸುತ್ತಿರಲಿಲ್ಲ. ಅವನನ್ನು ಬಿಟ್ಟರೆ ಬೇರೆಯವರೊಂದಿಗೆ ಅವಳು ಸೇರುವುದನ್ನು ನೋಡಿದರೆ ಇವನಿಗೆ ಅಸೂಯೆ. ಮನೆಗೆ ಬಂದ ಕೂಡಲೇ ರತ್ನಳ ವ್ಯವಹಾರವನ್ನು

ಚಾಚೂ ತಪ್ಪದೆ ಒಪ್ಪಿಸಿ ಬಿಡುತ್ತಿದ್ದ. ಜಾನಕಿಗೆ ಮಗಳ ಜಾಡು ಸರಿಯಾದ್ದಲ್ಲವೆನಿಸಿತು. ಹೀಗೆಯೇ ಬಿಟ್ಟರೆ ಈ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಂಡಾಳೆಂದು ಹೆದರಿ ಒಂದು ದಿನ ಶಾಲೆಯಿಂದ ಬರುತ್ತಿದ್ದಂತೆ, ರತ್ನ ಬಾ ಇಲ್ಲಿ! ಎಂದು ಕರೆದಳು. ರತ್ನಳಿಗೆ ತಾಯಿ ಕರೆದದ್ದು ಆಶ್ಚರ್ಯವೆನಿಸಿತು. ಮೆಲ್ಲಗೆ ಬಂದಳು.

'ಕರೆದೆಯಾಮ್ಮ?'– ಎಂದು ಕೇಳಿದಳು.

'ಹೂಂ, ನಿನಗೆ ನಾನೊಂದು ಮಾತು ಹೇಳ್ತೀನಿ, ನೀ ಕೇಳ್ಬೇಕು; ತಿಳೀತಾ?'

'ಅದೇನು ಹೇಳಮ್ಮ' ಧೈರ್ಯವಾಗಿ ಉತ್ತರಿಸಿದಳು.

'ಶಾಲೇಲಿ ಹುಡುಗರ ಜೊತೆಗೆಲ್ಲಾ ಸಲುಗೆಯಿಂದ ಇರ್ತೀಯಂತೆ. ಅವರ ಜೊತೆ ತೋಟಕ್ಕೆಲ್ಲಾ ಹೋಗ್ತಿದ್ದೀಂತ ತಿಳೀತು, ನಿಜ ತಾನೇ?' ಎಂದು ಪ್ರಶ್ನಿಸಿದಳು.

ರತ್ನಳಿಗೆ ಅನ್ನಿಸಿತು. ಯಾವತ್ತೂ ಕೇಳದ ಪ್ರಶ್ನೆ ಇವತ್ತು ತಾಯಿ ಕೇಳುತ್ತಿದ್ದಾಳೆಂದರೆ, ಯಾರೋ ಚಾಡಿ ಹೇಳಿರಬೇಕು... ಯಾರಿರಬಹುದು ಎಂದು ಯೋಚಿಸಿದಳು. ಕೂಡಲೇ ಅವಳಿಗೆ ಇದೆಲ್ಲಾ ಶೇಖರನ ಕಿತಾಪತಿ ಎನಿಸಿತು. ಹೌದು, ಅವತ್ತು ಅವನ ಮಾತು ಕೇಳದೆ ಅವನನ್ನು ಬಿಟ್ಟು ಹೊರಟಿದ್ದೆ. ಅದೇ ಹೊಟ್ಟೆಕಿಚ್ಚಿಂದ ಅಮ್ಮನಿಗೆ ಏನೇನೋ ಹೇಳಿ ತಲೆ ಕೆಡಿಸಿದ್ದಾನೆ. ಇರಲಿ ಇವನಿಗೆ ಮಾಡ್ತೀನಿ ಎಂದುಕೊಂಡಳು.

'ಯಾಕೆ ಸುಮ್ನೆ ನಿಂತಿದ್ದೀ? ಹೇಳ್ತಿಯೋ ಇಲ್ವೋ?' ಎಂದು ಗದರಿಸಿದಳು.

ಸಪ್ಪೆ ಮೋರೆ ಹಾಕಿಕೊಂಡು, ತಪ್ಪಾಯ್ತಮ್ಮ ಇನ್ನೊಂದ್ಸಲ ಹೋಗೋಲ್ಲ ಎಂದಳು.

ಜಾನಕಿಗೆ ಅಷ್ಟೇ ಸಾಕಾಗಿತ್ತು. ತನ್ನ ಬದುಕಿನಿಂದ ಬೆದರಿದ ಅವಳಿಗೆ ಮಗಳೂ ತಪ್ಪು ಹೆಜ್ಜೆ ಇಡುವುದು ಭಯಂಕರವೆನಿಸಿತು. ಮಗಳನ್ನು ನಿರ್ಬಂಧದಲ್ಲಿ ಇಡಬೇಕು. ಇಲ್ಲವಾದರೆ ಇವಳ ಚೆಲ್ಲು ಸ್ವಭಾವವನ್ನು ದುರುಪಯೋಗ ಪಡಿಸಿಕೊಂಡು ಹಾಳು ಮಾಡುವಂತಹ ಜನ ಬೇಕಾದಷ್ಟು ಇರುತ್ತಾರೆ. ಈ ಹಳ್ಳಿಯಲ್ಲಿ ಮೊದಲೇ ಕೆಲವು ಪುಂಡ ಹುಡುಗರು ತುಡುಗು ದನಗಳಂತೆ ಹೊಂಚಿ ಕಾದಿರ್ತಾರೆ. ರಾಮಕ್ಕಜ್ಜಿ ಆ ಹಳ್ಳಿಯಲ್ಲಿನ ಎಷ್ಟೋ ಕತೆಗಳನ್ನು ಹೇಳಿದ್ದಳು... ಒಂದು ಕ್ಷಣ ನಡುಗಿದಳು.

ಈಗೇನೋ ತಪ್ಪೆಂದು ಒಪ್ಪಿಕೊಂಡಳು. ಆದರೆ ವಯಸ್ಸಿನ ಪ್ರಭಾವದಿಂದ ತನ್ನ ಮಾತನ್ನು ಮರೆತೂ ಎಡವಬಹುದು. ಗಂಡಸಿಲ್ಲದ ತನಗೆ ವಯಸ್ಸಿಗೆ ಬರುತ್ತಿರುವ ಹೆಣ್ಣು ಮಗಳ ಜವಾಬ್ದಾರಿ ತುಂಬಾ ದೊಡ್ಡದು ಎಂದುಕೊಂಡಳು.

ಇನ್ನೂ ಎದುರಿಗೆ ಯೋಚಿಸುತ್ತಾ ನಿಂತಿದ್ದ ಅವಳಿಗೆ, ರತ್ನಳ ಚೆಲುವು ಕಣ್ಣಿಗೆ ಹೊಡೆದಂತೆ ಕಂಡಳು. ಅವಳ ಅಂಗಾಂಗಗಳು ಆಗತಾನೇ ಅರಳುತ್ತಿದ್ದವು. ಅದಕ್ಕೇ ಅವಕ್ಕೆ ಹೊಸ ಚೆಲುವು! ಎಂದುಕೊಂಡಳು.

* * *

ಜಾನಕಿಯ ಅಂಗಳದಲ್ಲಿ ಅರಳಿದ ಹೂವಿನ ಕಂಪು ಊರಿಗೆಲ್ಲಾ ಹೊಡೆಯಿತು. ಪತಂಗಗಳಂತೆ ಗಂಡು ಹುಡುಗರು ಆ ಹಾದಿಯಲ್ಲಿ ಸುಳಿದಾಗಲೆಲ್ಲಾ ಚಪ್ಪರಿಸಿ ನಡೆಯುತ್ತಿದ್ದರು. ಎಷ್ಟು ನಿರ್ಬಂಧಿಸಿದರೂ ಗಂಡಸಿಲ್ಲದ ಈ ಮನೆಯ ಕೆಲಸಕ್ಕೆ ಒಂದಲ್ಲ ಒಂದು ಸಲ ರತ್ನಳನ್ನು ಕಳುಹಿಸಲೇಬೇಕಾದ ಸಂದರ್ಭ ಬರುತ್ತಿತ್ತು. ನೀರಿಗೆಂದೋ, ಗುಡಿಗೆಂದೋ, ಜಾತ್ರೆಗೆಂದೋ ಹೊರಡುತ್ತಿದ್ದ ಅವಳನ್ನು ಊರ ಯುವಕರು ಹಸಿದ ಕಣ್ಣುಗಳಿಂದ ನೋಡುತ್ತಿದ್ದರು. ಕೆಲವೊಮ್ಮೆ ಕೀಟಲೆ ಮಾಡುತ್ತಿದ್ದರು. ಅವಳಿಗೇನೋ ಅದು ಹಿತವೇ. ಆ ತಂಡಕ್ಕೆಲ್ಲಾ ರಾಮಯ್ಯಂಗಾರ್ರ ಮಗ ಸೀನುವೇ ಮುಖಂಡ. ಅಪ್ಪ ಸಂಪಾದಿಸಿದ ಆಸ್ತಿ ಇದ್ದು ತಿಂದು ತಿರುಗುವುದಕ್ಕೆ ಅನುಕೂಲವಾಗಿತ್ತು ಸೀನುವಿಗೆ.

ಜಾನಕಿ ಇದ್ದ ಕೇರಿಯಾಚೆ ರಾಮಯ್ಯಂಗಾರರ ಮಹಡಿ ಮನೆ. ಊರಿಗೇ ಪ್ರತಿಷ್ಠಿತ ವ್ಯಕ್ತಿಯಾಗಿ ಬಾಳುತ್ತಿದ್ದ ಆ ದಂಪತಿಗಳಿಗೆ ಶ್ರೀನಿವಾಸ ಅಪ್ಪಿ ತಪ್ಪಿ ಮಗನಾಗಿ ಹುಟ್ಟಿದ್ದ. ಅಯ್ಯಂಗಾರರು ಮಗನು ಓದಿ ಬುದ್ಧಿವಂತನಾಗಿ ಅವನು ಬದುಕುವುದಕ್ಕೆ ಯೋಗ್ಯನಾದರೆ ಸಾಕೆಂದು ಹಾರೈಸುತ್ತಿದ್ದರು.

ಊರಿನ ಓದು ಮುಗಿದ ಮೇಲೆ ಬೆಂಗಳೂರಿಗೆ ಕಳುಹಿಸಿ ಕಾಲೇಜು ಓದಿಸೋಣವೆಂದು ಕೊಂಡರೆ ಅಲ್ಲಿನ ಓದನ್ನೇ ಮುಗಿಸಲಾರದವನಾಗಿದ್ದ. ಹುಡುಗಿಯರನ್ನು ಮಾತ್ರ ಅನಾಯಾಸವಾಗಿ ಗೆಲ್ಲುತ್ತಿದ್ದ.

ರತ್ನಳನ್ನು ಒಂದೆರಡು ಸಂದರ್ಭಗಳಲ್ಲಿ ನೋಡಿದ್ದ. ಊರಿನ ಬಸಪ್ಪಗೌಡರ ಮಗನ ಮದುವೆಯಲ್ಲಿ ರತ್ನಳನ್ನು ಹೇಗೋ ಕಂಡು, ಪ್ರೇಮದ ಮಾತನ್ನಾಡಿದ. ರತ್ನಳಿಗೂ ಅವನು ತುಂಬಾ ಹಿಡಿಸಿದ. ಸೀನುವನ್ನು ತಡೆಯಲು ಯಾರಿಗೂ ಸಾಧ್ಯವಿಲ್ಲವಾದರೂ, ರತ್ನಳಿಗೆ ಜಾನಕಿಯ ನಿರ್ಬಂಧ ಪ್ರಾಣಹಿಂಸೆಯಾಗಿತ್ತು. ಅವಳ ಕಣ್ಣು ತಪ್ಪಿಸಿ ಬರುವುದು ತೀರಾ ಅಸಾಧ್ಯದ ಕೆಲಸ. ಇಬ್ಬರೂ ಭೇಟಿಯಾಗುವುದಕ್ಕೆ ಅವಕಾಶಗಳನ್ನು ಕುರಿತು ಯೋಚಿಸತೊಡಗಿದರು ಸೀನು ಹೇಗಾದರೂ ಮಾಡಿ ತಿಮ್ಮರಾಯನ ಕೆರೆಯಾಚೆಯ ಬನದಲ್ಲಿರುವ ದೊಡ್ಡ ಆಲದ ಬಳಿ ಬಂದು ಕಾಣಲೇಬೇಕೆಂದು ಹೇಳಿದ ರತ್ನಳಿಗೆ ದಿಕ್ಕೇ ತೋಚಲಿಲ್ಲ. ಎರಡು ಮೂರು ದಿನಗಳು ತಾಯಿಯ ಕಣ್ಣಿಗೆ ಮಣ್ಣೆರಚಿ ಹೋಗುವುದು ಹೇಗೆಂದು ತಲೆಕೆಡಿಸಿಕೊಂಡಳು. ಕೊನೆಗೆ ಒಂದು ಉಪಾಯ ಹೊಳೆಯಿತು. ಮಾರನೇ ದಿನ ಹಾಲು ಕೊಡಲು ಬಂದ ದೇವುನನ್ನು ಮಾತನಾಡಿಸಿದಳು. ರತ್ನ ಆ ದಿನ ಅವನೊಂದಿಗೆ ಆತ್ಮೀಯವಾಗಿ ಮಾತನಾಡಿದ್ದಕ್ಕೆ ಅವನಿಗೆ ಹೆಮ್ಮೆಯೆನಿಸಿತು. ದೇವು ಸಂಜೆ ಬಿಡುವು ಮಾಡಿಕೊಂಡು ಸ್ವಲ್ಪ ನಮ್ಮ ಮನೆ ಕಡೆ ಬರ್ತೀಯಾ? ಎಂದು ಕೇಳಿದ್ದಕ್ಕೆ ಕೂಡಲೇ ಖುಷಿಯಾಗಿ ಬರುತ್ತೇನೆಂದು ಒಪ್ಪಿಕೊಂಡ ದೇವು.

ಅವನು ಸಂಜೆ ಬಂದಾಗ ಪುಸಲಾಯಿಸಿ, ಅವನನ್ನು ಒಲಿಸಿಕೊಂಡು, ಇನ್ನು ಮೇಲೆ ತಾನು ಕೊಡುವ ಪತ್ರಗಳನ್ನು ಶ್ರೀನಿವಾಸನಿಗೆ ತಲುಪಿಸಬೇಕೆಂದೂ ಒಪ್ಪಿಸಿದಳು. ಪ್ರತಿಸಲ ಉತ್ತರ ತಂದಾಗಲೂ ಒಂದು ನಾಲ್ಕಾಣೆ ಕೊಡುವುದೆಂದು ತೀರ್ಮಾನವಾಯಿತು.

ದೇವೂಗೆ ಬೇಕಾದ್ದು ಸಂಪಾದನೆ. ಕಷ್ಟವಲ್ಲದ ಈ ಕೆಲಸಕ್ಕೆ ಪಾವಲಿ ಸಿಕ್ಕುವುದೆಂದು ಹಿರಿ ಹಿರಿ ಹಿಗ್ಗಿದ. ರತ್ನಳಿಗೆ ಸಮಸ್ಯೆ ಪರಿಹಾರವಾಯಿತು.

ದೇವೂನ ಮೂಲಕ ಪತ್ರವ್ಯವಹಾರ ಅವರ ನಡುವೆ ಪ್ರಾರಂಭವಾಯಿತು. ಜಾನಕಿಗೆ ಒಂದು ದಿನ ದೇವೂನ ಜೊತೆ ಗುಡಿಗೆ ಹೋಗಿ ಬರುವುದಾಗಿ ಹೇಳಿ ಹಣ್ಣು ಕಾಯಿಗಳನ್ನು ತೆಗೆದುಕೊಂಡು ಮೆಲ್ಲನೆ ಅಲ್ಲಿಂದ ಜಾರಿದಳು. ಎಷ್ಟು ಹೊತ್ತಾದರೂ ಗುಡಿ ಬರಲೇ ಇಲ್ಲ. 'ಅಕ್ಕ ಇನ್ನೂ ಎಷ್ಟು ದೂರ ಹೋಗಬೇಕು ಗುಡಿಗೆ?' ಎಂದ ದೇವೂನನ್ನು ಸುಮ್ಮನಿರಲು ಹೇಳಿದಳು ರತ್ನ.

ಸಂಜೆ ಸರಿದು ಕತ್ತಲು ಹಬ್ಬುತ್ತಿತ್ತು. ಎದೆ ಡವಡವಗುಟ್ಟಿತು. ಅಕಸ್ಮಾತ್ತಾಗಿ ಸೀನು ಇಲ್ಲದೇ ಹೋದರೆ? ಎಂದು ಆಲೋಚಿಸಿದಳು. ದೇವೂನತ್ತ ತಿರುಗಿ, 'ಲೋ ದೇವು, ನಿನ್ನೆ ನಾನು ಕೊಟ್ಟ ಪತ್ರ ವನ್ನು ಸೀನಣ್ಣನಿಗೆ ತಲುಪಿಸಿದೆಯಾ ಹೇಗೆ?' ಎಂದಳು. ಖಂಡಿತವಾಗಿ ನಾನು ಕೊಟ್ಟಿಟ್ಟೆ ಅಕ್ಕ'– ಎಂದ ಭರವಸೆಯ ಧ್ವನಿಯಲ್ಲಿ.

ಅದನ್ನು ಕೊಟ್ಟಿದ್ದಕ್ಕೆ ಏನಂದ? ಎಂಬ ಪ್ರಶ್ನೆಗೆ ದೇವೂ ನಾಚಿದ. ಯಾಕೋ ಹೇಳೋ ಏನಾಯ್ತೂಂತ? ಎಂದು ಬಲವಂತ ಪಡಿಸಿದ್ದಕ್ಕೆ, 'ಕಾಗದ ಕೊಟ್ಟ ಕೂಡಲೇ ಬಿಚ್ಚಿ ಓದಿ ಅದಕ್ಕೆ ಮುತ್ತು ಕೊಟ್ಟು ನಕ್ಕು, ಅಕ್ಕನಿಗೆ ಆಗ್ಬೌದು' ಅಂತ ಹೇಳು ಅಂದ್ರು ಎಂದ.

ರತ್ನ ನಿಟ್ಟುಸಿರೊಂದನ್ನು ಬಿಟ್ಟಳು. ಇವಳು ಹೋಗುತ್ತಿದ್ದಂತೆ ದೂರದಲ್ಲಿ ಆಕೃತಿಯೊಂದು ಕಣ್ಣಿಗೆ ಬಿತ್ತು. ಅದು ಬಹುಶಃ ಸೀನುವೇ ಇರಬೇಕೆಂದುಕೊಂಡಳು. ಅದು ನಿಜವೇ ಆಗಿತ್ತು.

ಸೀನುವಿನ ಮುಖ ಅರಳಿತು. 'ಬಂದೆಯಾ ರತ್ನ' ನೀನು ಬರ್ತೀಯೋ ಇಲ್ವೋ? ಅಂದುಕೊಂಡಿದ್ದೆ. ಸದ್ಯ ಬಂದೆಯಲ್ಲ– ಎಂದು ನಿರಾಳವಾಗಿ ಉಸಿರಾಡಿದ. 'ಸೀನ ನನ್ನನ್ನು ಇಲ್ಲಿಗೆ ಏಕೆ ಬಾ ಎಂದು ಕರೆದೇ ಅನೋದನ್ನು ಮೊದಲು ಹೇಳು. ನನಗೆ ಭಯವಾಗ್ತಿದೆ, ನಾನು ಹೋಗ್ಬೇಕು' ಎಂದು ನೇರವಾಗಿ ವಿಷಯಕ್ಕೆ ಬಂದಳು.

ದೇವೂ ಇಬ್ಬರನ್ನೂ ದುರುಗುಟ್ಟಿಕೊಂಡು ನೋಡುತ್ತಿದ್ದ. ಸೀನನಿಗೆ ಹೇಳಬೇಕೆನ್ನುವ ವಿಷಯಾನ ಹೇಳೋಕೆ ಸಂಕೋಚವಾಯಿತು. ಈ ಹಾಳು ದೇವೂ ಇಬ್ಬರ ಮಧ್ಯದಲ್ಲಿ ಬಂದು ತೊಂದರೆ ಕೊಡ್ತಿದ್ದಾನೆ. ಹೇಗಾದರೂ ಮಾಡಿ ಇವನನ್ನು ಸಾಗಿಸಬೇಕು ಇಲ್ಲಿಂದ ಎಂದುಕೊಂಡ. ರತ್ನಳ ಕೈಯಲ್ಲಿ ಹಣ್ಣು ಕಾಯಿ ಕರ್ಪೂರ ಇದ್ದುದನ್ನು ಗಮನಿಸಿದ.

ಇದೇನು ದೇವಿಯವರು ಪೂಜೆಗೋಸ್ಕರ ಬಂದ ಹಾಗಿದೆಯಲ್ಲ?– ಅಂದ. ಹೂಂ! ಮೊದಲ ಸಲವೇ ದೇವ್ರನ್ನ ಒಬ್ಬಳೇ ಭೇಟಿಯಾಗ್ತಿರೋದು. ಅದಕ್ಕಾಗಿಯೇ ಪೂಜೆ ಮಾಡೋಣಾಂತ ತಂದಿದ್ದೀನಿ ಎಂದು ನಕ್ಕಳು. ಆ ನಗು ಅಲ್ಲೆಲ್ಲಾ ಬೆಳಕನ್ನು ಚೆಲ್ಲಿದಂತೆನಿಸಿತು. ಸೀನೂಗೆ ಒಂದು ಉಪಾಯ ಹೊಳೀತು. ದೇವೂನ ಕರೆದು, ಆ ಆಲದ ಮರದಿಂದ ಒಂದು ನೂರು ಹೆಜ್ಜೆ ದೂರದಲ್ಲಿರುವ ಹನುಮಂತರಾಯನ ಗುಡಿಗೆ ಹೋಗಿ ಪೂಜೆ ಮಾಡಿಕೊಂಡು ಬಾರೋ ದೇವು! ಎಂದು ಅವನ ಕೈಗೆ ಆ ತಟ್ಟೆ ಕೊಟ್ಟು ಕಳುಹಿಸಿದ. ದೇವು, ನಂಗೆ ಭಯವಾಗುತ್ತೆ, ನೀವಿಲ್ಲೇ ಇರಬೇಕು– ಎಂದು ಭರವಸೆ ಪಡೆದು ಹೊರಟ, ಶಿಳ್ಳೆ ಹಾಕುತ್ತಾ.

ಸೀನು, ದೇವೂ ಹೋದದ್ದೇ ರತ್ನಳ ಹತ್ತಿರ ಸರಿದ. ಎಳೆದು ಬಿಗಿದು ಅಪ್ಪಿದ. ರತ್ನ ಕೊಸರಾಡಿದಳು. ಸೀನು ಬಿಡಲಿಲ್ಲ. ಲೊಚ ಲೊಚ ಮುದ್ದಿಸಿದ. ಛಿ! ಛಿ– ಎಂದು ಅವನಿಂದ ಕೊಡವಿಕೊಂಡು ಓಡಿದಳು. ರತ್ನ ಬೇಡ, ಓಡಬೇಡ, ನನ್ನ ಮಾತು ಕೇಳು– ಎಂದು ಅರಚಿದ. ರತ್ನ ನಿಂತಳು. 'ಬೇಗ ಹೇಳ್ತಿಯೋ ಇಲ್ಲ ನಾನು ಹೊರಟು ಹೋಗಲೋ' ಬೆದರಿಸಿದಳು.

'ಆಯ್ತು ಹತ್ತಿರ ಬಾ' ಎಂದ, ರತ್ನ ಬಂದಳು. ಇಬ್ಬರೂ ಆ ಬಂಡೆ ಕಲ್ಲಿನ ಮೇಲೆ ಕುಳಿತರು. 'ನಾನೆಂದರೆ ನಿಜವಾಗಿ ನಿನಗೆ ಪ್ರೀತಿಯಿದೆಯಾ ರತ್ನ'– ಎಂದು ಕೇಳಿದ.

'ಇದೆಂತಹ ಮಾತು, ಪ್ರೀತಿ ಇಲ್ದಿದ್ರೆ, ನಿನ್ನ ಹತ್ರ ಬರ್ತಿದ್ನಾ?' ಎಂದು ಮರು ಪ್ರಶ್ನಿಸಿದಳು. 'ಹಾಗಾದ್ರೆ ನಾವಿಬ್ಬರು ಮದುವೆಯಾಗಬೇಕು. ಇಬ್ಬರೂ ಬೆಂಗಳೂರಿಗೆ ಹೋಗಿ ಮನೆ ಮಾಡೋಣ. ನಾನು ಯಾವುದಾದ್ರೂ ಕೆಲಸ ನೋಡ್ತೀನಿ. ನಮ್ಮ ಜೀವನಾನ ಹೇಗಾದರೂ ನಡೆಸಿಕೊಳ್ಳಬಹುದು. ನೋಡು ನಿನಗೆ ಧೈರ್ಯವಿದ್ದರೆ ಮನೆಬಿಟ್ಟು ಬಾ, ಓಡಿ ಹೋಗೋಣ' ಎಂದ.

ರತ್ನಳಿಗೆ ಕೂಡಲೇ ಉತ್ತರಿಸಲು ಆಗಲಿಲ್ಲ. ಒಂದೆರಡು ದಿನ ಯೋಚಿಸಲು ಅವಕಾಶವನ್ನು ಕೊಡಬೇಕೆಂದು ಕೇಳಿದಳು.

ಯಾವುದಕ್ಕೂ ನೀನು ಕೂಡಲೇ ತಿಳಿಸಬೇಕು, ಬೆಂಗಳೂರಿನ ಜೀವನ ಎಷ್ಟು ಚೆನ್ನಾಗಿರುತ್ತೆ ಗೊತ್ತಾ? ಗೊಂಬೆಥರ ಇರೋ ನೀನು ಬೆಂಗಳೂರಿಗೆ ಬಂದರೆ, ರಾಣಿ ಹಾಗೆ ನೋಡಿಕೊಳ್ತೀನಿ. ಸಿನೀಮಾ, ಪಾರ್ಕು, ಹೋಟೆಲ್ ಓಹ್. ಅವೆಲ್ಲಾ ನೆನಸಿಕೊಂಡರೆ ಈ ಹಳ್ಳಿಕೊಂಪೇಲಿ ಹೇಗಾದರೂ ಬದುಕುತ್ತಿದ್ದೇವೋ' ಎಂದು ಯೋಚಿಸಬೇಕಾಗುತ್ತೆ ಎಂದ.

ರತ್ನಳಿಗೆ ಮೊದಲಿನಿಂದಲೂ ಬೆಂಗಳೂರಿನ ಬಗ್ಗೆ ವ್ಯಾಮೋಹ. ಬೆಂಗಳೂರಿನ ಬಗ್ಗೆ ತುಂಬಾ ಕೇಳಿದ್ದಳು. ಅಲ್ಲಿನ ಹುಡುಗ ಹುಡುಗೀರು ಎಷ್ಟೊಂದು ಸ್ವಚ್ಛಂದವಾಗಿ

ತಿರುಗಾಡ್ತಾರಂತೆ; ಹುಡುಗೀರೆಲ್ಲಾ ತುಂಬಾ ಪ್ಯಾಶನ್ ಮಾಡ್ತಾರಂತೆ ಎಂದು ಏನೇನೋ ಕೇಳಿದ್ದಳು. ಬೆಂಗಳೂರಿನ ವಾಸ, ಅವಳಿಗೆ ಮತ್ತೊಂದು ಪ್ರಲೋಭನೆಯಾಯಿತು. ಅವಳು ಹಳ್ಳಿ ಪರಿಸರದಲ್ಲಿದ್ದರೂ ಅಮಾಯಕಳಾಗಿರಲಿಲ್ಲ. ಹೇಗೊ ಏನೋ ಅವಳ ವಿಚಾರಗಳೆಲ್ಲಾ ಮುಂದುವರೆದವುಗಳಾಗಿದ್ದವು..........ಯೋಚಿಸಿದಳು. ಸೀನುವಿನ ಮುಖದತ್ತ ನೋಡಿದಳು. ಸೀನು ಮುಗುಳ್ನಗುತ್ತಿದ್ದ. ಮನಸ್ಸಿನಲ್ಲಿ ಈ ಪಾತರಗಿತ್ತಿ ಬಿದ್ದೇ ಬೀಳುತ್ತಾಳೆಂದು ಭಾವಿಸಿದ. 'ಏನ್ಹೇಳ್ತೀಯಾ ರತ್ನ'–ಎಂದ, ನಾಳೆ ಮಧ್ಯಾಹ್ನ ಇದೇ ಜಾಗದಲ್ಲಿ ಭೇಟಿಯಾಗೋಣ ಸೀನು. ಈಗಲೇ ಯಾವುದೂ ನಿರ್ಧರಿಸೋದು ಬೇಡ.

'ನಿನ್ನಿಷ್ಟ, ನಾನಂತೂ ಇನ್ನೊಂದೆರಡು ದಿನಕ್ಕೆ ಬೆಂಗಳೂರಿಗೆ ಹೊರಟು ಹೋಗ್ತೇನೆ. ನೀನು ಒಪ್ಪಲಿಲ್ಲವೆಂದರೆ, ಅಲ್ಲೇ ಯಾವುದಾದರೊಂದು ಹುಡುಗೀನ ಮದುವೆಯಾಗಬೇಕಾಗುತ್ತೆ. ನೋಡು ಸರಿಯಾಗಿ ಯೋಚ್ನೆ ಮಾಡು? ಎನ್ನುತ್ತಿರುವಂತೆಯೇ, ದೇವು, 'ರತ್ನಕ್ಕಾ ಹೊರಡೋಣ, ತುಂಬಾ ಹೊತ್ತಾಯ್ತು' ಎಂದ. ಪರಸ್ಪರ ಸನ್ನೆಯಿಂದ ಏನನ್ನೊ ಮಾತನಾಡಿಕೊಂಡರು. ಸೀನು ದೇವೂನನ್ನು ಕರೆದು, ದೇವು ನಾವಿಬ್ಬರೂ ಇಲ್ಲಿ ಸೇರಿದ್ದು, ಯಾರಿಗೂ ಹೇಳಬೇಡ. ನೀನು ತುಂಬಾ ಜಾಣ, ನಿಂಗೆ ನಾನು ಬೆಂಗಳೂರಿನಿಂದ ಚಾಕಲೇಟ್ ಡಬ್ಬ ತಂದುಕೊಡ್ತೇನೆ, ತಿಳೀತಾ?...........ಈಗ ಇದನ್ನು ತಗೋ' ಎಂಟಾಣಿ ಬಿಲ್ಲೆಯನ್ನು ಅವನ ಕೈಗೆ ಕೊಟ್ಟು ನಿನಗೇನು ಬೇಕೋ ಇದರಿಂದ ಕೊಂಡ್ಕೊ' ಎಂದು ಅವನ ಕೈ ಮೇಲಿಟ್ಟ, ದೇವೂಗೆ ಮಾತೇ ಹೊರಡದಷ್ಟು ಸಂತೋಷ ತುಂಬಿ ಬಂತು. ಕೃತಜ್ಞತೆಯಿಂದ ಸೀನುವಿನ ಕಡೆ ನೋಡಿದ.

ಅಕ್ಕನನ್ನು ಭದ್ರವಾಗಿ ಮನೆ ತಲುಪಿಸು ಎಂದದ್ದಕ್ಕೆ ದೇವೂ ಆಗಲಿ ಎಂಬಂತೆ ತಲೆದೂಗಿದ. ಸೀನು, ರತ್ನ, ದೇವೂ ಹೋಗುವುದನ್ನೇ ನೋಡುತ್ತಿದ್ದು, ಅವನು ಕಣ್ಮರೆಯಾದ ಕೂಡಲೇ ಅವನೂ ಬಲಗಡೆ ಹೆಜ್ಜೆ ಹಾಕಿದ.

* * *

ಜಾನಕಿ ರತ್ನ ಹೋಗಿ ತುಂಬಾ ಹೊತ್ತಾಯಿತೆಂದು ಹೆದರಿ ಅವಳಿಗಾಗಿ ಬೀದಿ ಬಾಗಿಲಲ್ಲೇ ಕಾದಿದ್ದಳು. ದೂರದಿಂದಲೇ ರತ್ನ, ದೇವೂ ಬರುವುದನ್ನು ನೋಡಿ ಒಳಗೆ ಹೋದಳು.

ರತ್ನ ಪ್ರವೇಶಿಸುತ್ತಿದ್ದಂತೆಯೇ, ಜಾನಕಿ ಪ್ರಶ್ನಿಸಿದಳು. 'ಇಷ್ಟು ಹೊತ್ತಾ ಗುಡಿಗೆ ಹೋಗಿ ಬರೋದು ರತ್ನ?' ಎಂದಳು.

ದೇವು ರತ್ನಳ ಮುಖ ನೋಡಿ, ಪೂಜೆಯ ತಟ್ಟೆಯನ್ನು ಅಲ್ಲಿಯೇ ಇದ್ದ ಒಂದು ಸಣ್ಣ ಮೇಜಿನ ಮೇಲಿಟ್ಟು ನುಸುಳಿದ. ರತ್ನ ಭಯದಿಂದಲೇ ತಡವರಿಸುತ್ತ,

ಇಲ್ಲಮ್ಮಾ ಈಗ ತಾನೇ ಹೂಬಿಡುತಿದ್ದ ಅವರೆ ಕಡಲೆ ಹೊಲಗಳು ನೋಡೋಕೆ ತುಂಬಾ ಚೆನ್ನಾಗಿದ್ದವು. ಹಾಗೇ ಸುತ್ತಾಡಿ ಬರೋಣವೆಂದು ಅನಿಸಿತು. ಅದಕ್ಕೇ ಗುಡಿಯಿಂದ ಬರುವಾಗ ಅಲ್ಲಿ ಸುತ್ತಾಡಿಕೊಂಡು ಬಂದ್ವಿ, ತುಂಬಾ ಚೆನ್ನಾಗಿತ್ತು. ಅಲ್ವೇನೋ ದೇವು? ಎಂದು ಅವನನ್ನು ತನ್ನ ಮಾತಿನ ಸಮರ್ಥನೆಗೆಂಬಂತೆ ಕೇಳಿದಳು.

'ಇನ್ಮೇಲೆ ಹೀಗೆಲ್ಲಾ ಒಬ್ಬಳೇ ಹೊತ್ತು ಗಿತ್ತು ಮಾಡಿಕೊಂಡು ಬರಬಾರದು ತಿಳೀತಾ?' ಎಂದದ್ದಕ್ಕೆ ಆಗಲಿ ಎನ್ನುವಂತೆ ತಲೆಯಾಡಿಸಿ ಒಳಗೆ ಹೋದಳು.

ಜಾನಕಿಗೆ ಮಗಳಲ್ಲಿ ಏನೋ ಪರಿವರ್ತನೆಯಾಗುತ್ತಿದೆ ಎಂದು ಇತ್ತೀಚೆಗೆ ಅನಿಸತೊಡಗಿತ್ತು. ಅವಳು ಮೈನೆರೆದಾಗ ಊರಿಗೆ ಊರನ್ನೇ ಕರೆದು, ರತ್ನಳಿಗೆ ವೇಷಹಾಕಿಸಿ ಆರತಿ ಮಾಡಿದ್ದಳು. ಆ ಅಲಂಕಾರದಲ್ಲಿ ಮಗಳ ರೂಪವನ್ನು ಕಂಡು ಅಪ್ರತಿಭಳಾಗಿದ್ದಳು. 'ನನ್ನ ಮಗಳು ಅಬ್ಬ! ಎಷ್ಟು ಚೆಲುವೆ' ಎಂದುಕೊಂಡು ದೃಷ್ಟಿಯಾದೀತೆಂದು ನಟಿಕೆ ಮುರಿದಿದ್ದಳು. ಇಂತಹ ಮಗಳನ್ನು ವರಿಸುವುದಕ್ಕೆ ಖಂಡಿತ ರಾಜಕುಮಾರನೇ ಬರುತ್ತಾನೆಂದು ಅಂದುಕೊಂಡಿದ್ದರೆ ಆಶ್ಚರ್ಯ ಪಡಬೇಕಾದ್ದಿಲ್ಲ.

ಊರಿನ ಮಂದಿಯೆಲ್ಲಾ ಮಗಳ ರೂಪವನ್ನು ಹೊಗಳಿದಾಗ ಹೆಮ್ಮೆ ಅಷ್ಟಿಷ್ಟಲ್ಲ. 'ಹಾಳು ಮುಂಡೇದು ಕಣ್ಣು ಕುಕ್ಕುವ ರೂಪ. 'ಅದು ಯಾವ ದೇವರು ಸೃಷ್ಟಿಸಿದನೋ' ಎಂದು ಅಂದುಕೊಂಡವರುಂಟು. ಜಾನಕಿ ಆ ದಿನದ ಸಡಗರವೆಲ್ಲಾ ಮುಗಿದ ಮೇಲೆ ಎಷ್ಟೋ ಬಾರಿ ದೃಷ್ಟಿ ತೆಗೆದಳು. ರತ್ನಳೆಂದರೆ ಪ್ರಾಣಬಿಡುತ್ತಿದ್ದ ರಾಮಕ್ಕಜ್ಜಿ ಇಲ್ಲದ್ದು ಜಾನಕಿಗೆ ನೋವೆನಿಸಿತು. ಜಲಜ ಮಾತ್ರ ಒಬ್ಬಳೇ ಅಜ್ಜಿಯ ವಾರಸುದಾರಳಾಗಿ ಮನೆಯಲ್ಲಿದ್ದಳು. ಅವಳು ಬಂದಾಗಲೂ ಅದೇ ಮಾತನ್ನೇ ಆಡಿದಳು.

ಮಗಳ ಮೇಲೆ ಪ್ರಾಣ ಹೊತ್ತುಕೊಂಡಿದ್ದ ಜಾನಕಿಗೆ ಅವಳ ವಿಚಾರದಲ್ಲಿ ಇಲ್ಲದ ಸಂಶಯ, ಭೀತಿ. ತನ್ನ ಆಸೆಗಳನ್ನೆಲ್ಲಾ ಎಲ್ಲಿ ಮಣ್ಣುಪಾಲು ಮಾಡುತ್ತಾಳೋ ಎನ್ನುವ ಕಳವಳ, ಅದಕ್ಕೆ ಎಲ್ಲಿಗಾದರೂ ಹೋದರೆ ಬರುವುದು ಒಂದಿಷ್ಟು ತಡವಾದರೂ ಚಡಪಡಿಸುತ್ತಿದ್ದಳು.

ಈಗ ತಡ ಮಾಡಿ ಬಂದದ್ದು ಅವಳಲ್ಲಿ ಸಂಶಯವನ್ನು ಬಿತ್ತಿದರೂ ವಯಸ್ಸಿಗೆ ಬಂದವಳೊಂದಿಗೆ ಘರ್ಷಣೆ ಕೂಡದು' ಎಂದು ಸಮಾಧಾನಕರವಾಗಿಯೇ ಎಚ್ಚರಿಕೆ ನೀಡಿದಳು.

* * *

ರತ್ನಳ ಮನಸ್ಸಿಗೆ ಏನೇನೋ ವಿಚಾರಗಳು ಬರುತ್ತಿದ್ದುವು. ಏನೇನೋ ಬೇಕೆನಿಸುತ್ತಿದ್ದವು. ತೀರದ ಹಸಿವಿನ ಬಾಧೆ, ಅವ್ಯಕ್ತ ಆಸೆಗಳ ದಾಂಧಲೆ, ಸೀನುವಿನ ಪರಿಚಯವಾದಾಗಿನಿಂದಲೂ ಮನೆಯಲ್ಲಿ ಅವಳು ಮಾತಾಡುವುದೇ ಅಪರೂಪ.

ತುಂಬಾ ವಿಧೇಯಳಂತೆ ಕಾಣುತ್ತಿದ್ದ ಅವಳಿಂದ ಏನಾದರೂ ಕೇಳಿದರೆ, ಅಸಮಾಧಾನದ ಉತ್ತರ ಇಲ್ಲವೇ ಸಿಡುಕಿನ ಮಾತು ಮಾತ್ರ ಬರುತ್ತಿತ್ತು. ತಾನಾಯಿತು ತನ್ನ ಕೋಣೆಯಾಯಿತು. ಒಂಟಿತನ ಅತಿ ಪ್ರಿಯವಾಯಿತು. ಯಾವಾಗಲೂ ಏನೋ ಯೋಚನೆ, ಯೋಚನೆ ಹೊರತು ಬೇರಾವುದಕ್ಕೂ ಅವಳಿಗೆ ಬಿಡುವಿಲ್ಲದಂತೆ ಕಾಣಿಸುತ್ತಿತ್ತು. ನರನರವೆಲ್ಲಾ 'ಸೀನು ಸೀನು' ಎಂದು ಪ್ರತಿಧ್ವನಿಸುತ್ತಿತ್ತು.

ಸೀನು, ಬೆಂಗಳೂರಿನ, ಮದುವೆಯ ಪ್ರಸ್ತಾಪ ಮಾಡಿದಾಗಿನಿಂದ ಅವಳ ಮನಸ್ಸು ಮತ್ತಷ್ಟು ಕಹಿಯಾಯಿತು. ಅನಿರ್ಧಾರದ ತೂಗುಯ್ಯಾಲೆಯಲ್ಲಿ ಜೀಕಿತು ಮನಸ್ಸು. ಊರಿನ ಹೆದರಿಕೆ, ಅಮ್ಮನ ಬೆದರಿಕೆ-ಯಾವುದೂ ನಿರ್ಧರಿಸಲಾಗಲಿಲ್ಲ.

ಜಾನಕಿಯು ಸರ್ಪಗಾವಲನ್ನೂ ತಪ್ಪಿಸಿಕೊಂಡು ರತ್ನ ಸೀನುವನ್ನು ಭೇಟಿಯಾಗಿದ್ದಳು. ಸೀನುವಿನಿಂದ ಪ್ರತಿಸಲವೂ ಒಂದೆರಡು ದಿನದ ಅವಕಾಶವನ್ನು ಕೇಳಿ ಮರಳುತ್ತಿದ್ದಳು.

ಸೀನುವಿನಿಂದ ಪಡೆದ ಅನುಭವಗಳೇ ಅವಳ ವೇದನೆಯ ಮುಲಾಮು. ಈಗ ಸೀನು ಮತ್ತೆ ಮತ್ತೆ ಬೇಕೆನಿಸಿದ. ಅವನ ಮುಂದೆ ಉಳಿದೆಲ್ಲವೂ ಅರ್ಥಹೀನವೆನಿಸಿತು. ಆದರೆ ಅದನ್ನು ಪೂರ್ತಿಯಾಗಿ ತನ್ನದಾಗಿಸಿಕೊಳ್ಳಲು ಧೈರ್ಯ ಸಾಲದಾಗಿತ್ತು. ಬರೀ ಯೋಚನೆಗಳಿಗಷ್ಟೇ ಹೊಂದಿಕೊಂಡಳು. ತಮ್ಮ ಗುಟ್ಟುರಟ್ಟಾಗುವುದಿಲ್ಲವೆಂದು ಭಾವಿಸಿಕೊಂಡಿದ್ದರೂ, ಊರಿಗೆಲ್ಲಾ ಕಥೆ ಢಾಣಾಂಡಂಗೂರವಾಗ ತೊಡಗಿತ್ತು.

ತಮ್ಮ ಕೈಯಿಂದ ತಪ್ಪಿಹೋದ ಬೇಟೆ ಸೀನುವಿನ ಕೈಗೆ ಬಿದ್ದದ್ದು ಚಂದ್ರು, ಪುಟ್ಟ, ಕಿಟ್ಟಿ, ಗೌಡ ಇವರಿಗೆ ಅಸೂಯೆಯೆನಿಸಿತು. ಊರ ತುಂಬೆಲ್ಲಾ ಕತೆಗಳು ಹರಡಿದವು. ಊರಿನ ಮರ ಮರದ ಕಾಂಡದ ಮೇಲೆ, ದಾರಿಬದಿಯ ಕಲ್ಲುಬಂಡೆಗಳ ಮೇಲೆ ಇವರ ಹೆಸರುಗಳು ಕುಣಿದಾಡಿದವು.

ಜಾನಕಿಗೆ ಆಕಾಶವೇ ಕಳಚಿಬಿದ್ದಂತಾಯಿತು ಈ ಹಾಳು ಮುಂಡೇಗೇನು ಬಂತು ಕೇಡು? ನಾನೆಷ್ಟು ಮರ್ಯಾದೆಯಾಗಿ ಉಳಿಯಬೇಕೆಂದುಕೊಂಡರೂ ಈ ದರಿದ್ರದವಳು ಹಾಳುಗೆಡವಿದಳಲ್ಲಾ, ನನ್ನ ಬದುಕಿನ ಮಚ್ಚೆ ತಿಳಿಯಬಾರದೆಂದು, ಎಷ್ಟು ಮುಚ್ಚು ಮರೆಯಿಂದ ಉಳಿದರೂ ಇವಳಿಂದ ನನ್ನಾಸೆಗಳೆಲ್ಲ ನೆಲಕುಸಿದುವಲ್ಲ-ಎಂದುಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಅವಳ ನರನರವೆಲ್ಲಾ ರೋಷದಿಂದ ಕುದಿಯಿತು. ಇವಳನ್ನ ಸಿಗಿದು ತೋರಣ ಕಟ್ಟಬೇಕೆಂಬ ಹಟದಿಂದ ಎದ್ದು ರತ್ನಳ ಕೋಣೆಗೆ ಹೋದಳು. ರತ್ನಳಿಗೂ, ತಾಯಿಗೆ ತಮ್ಮ ವಿಚಾರ ತಿಳಿದು ಹೋಗಿರುವುದು ಗೊತ್ತಾಗಿ, ಬೆಕ್ಕಿನಂತೆ ಮೂಲೆ ಸೇರಿ ಕುಳಿತಿದ್ದಳು. ತಾಯಿಯ ರೌದ್ರ ವೇಶದ ಮುಖವನ್ನು ನೋಡಿ ನಡುಗಿದಳು. ಜಾನಕಿ ಬಂದವಳೇ ರತ್ನಳ ಮೇಲೆ ಹಾರಿ ಮುಂದಲೆ ಹಿಡಿದು ಎಳೆದು ತಂದಳು.

ರಂಡೆ ನಿನಗೇನೇ ಆಗಿತ್ತು. ಅವನ ಜೊತೆ ಹೋಗೋಕೆ? ಮಾನ ಮೂರು ಕಾಸಿಗೆ ಮಾರಿಬಿಟ್ಟೆಯಲ್ಲೇ, ಹೆಣ್ಣು ಹೆಂಗಸು, ಒಬ್ಬಳೇ ಇರುವಳು. ನಾಲ್ಕು ಜನರ ಎದುರು ಮರ್ಯಾದೆಯಿಂದ ಬಾಳಬೇಕಂತ ಎಷ್ಟೆಲ್ಲಾ ಪ್ರಯತ್ನ ಪಟ್ಟೆ. ಮುಳ್ಳು ಕಣ್ಣುಗಳಿಂದ ನೋಡಿದ ಈ ಜನರ ಮಧ್ಯೆ ಸೈಯ್ಯೆನಿಸಿ ಬಾಳಿದ ನನಗೆ ಎಂಥ ಕೆಟ್ಟ ಹೆಸರು ತಂದೆಯಲ್ಲೇ ಎಂದು ತಲೆ ಚಚ್ಚಿಕೊಂಡು, ತಗೋ ನನ್ನ ಪ್ರಾಣ ತೆಗೆದು ನಿನ್ನ ಖುಷಿಯಂತೆ ನೀನಿರು" ಎನ್ನುತ್ತಾ ರತ್ನಳ ಕೈಗಳನ್ನು ತನ್ನ ಕುತ್ತಿಗೆಯ ಸುತ್ತ ಹಿಡಿದಳು.

ರತ್ನ ಏನೂ ಮಾತನಾಡದಿದ್ದರೂ ಅವಳಿಗೆ ತಾಯಿಯ ರೀತಿ ಅಸಹ್ಯವೆನಿಸಿತು. ಏನೋ ಪ್ರಪಂಚ ಮುಳುಗಿ ಹೋದವರಂತೆ ಅಳುತ್ತಿರುವ ತಾಯಿಯನ್ನು ಕಂಡಾಗ ಕನಿಕರವೆನಿಸುವುದಕ್ಕಿಂತ ಅಸಹ್ಯವೆನಿಸಿತು. ದರಿದ್ರ ಕೊಂಪೆಯಲ್ಲಿ ತಾನು, ತಾಯಿಯಲ್ಲದೆ ಬೇರೆಯಾರೂ ಇಲ್ಲದೆ ಬೇಸರವೆನಿಸುವ ಕೊಂಪೆಯಲ್ಲಿ ತಾನು, ತಾಯಿಯಲ್ಲದೆ ಬೇರೆ ಯಾರೂ ಇಲ್ಲದೆ ಬೇಸರವೆನಿಸುವ ಬದುಕಿನಿಂದ ಬೇರೆಯಾದಂತಹ ಅನುಭವ! ಸ್ನೇಹ ಬಯಸಿದ್ದು ಇಷ್ಟೊಂದು ಅಪರಾಧವೇ ಎಂದು ಆಲೋಚಿಸಿದಾಗ ಅವಳಿಗೆ ಏನೂ ಹೊಳೆಯಲಿಲ್ಲ. ಛಿ! ದೂರ ಓಡಿ ಹೋಗಬೇಕು ಯಾರಿಗೆ ಏನಾದರೆ ನನಗೇನು? ಎಂದುಕೊಂಡಳು ನಿಷ್ಠುರವಾಗಿ.

ಇಷ್ಟೆಲ್ಲಾ ತಾನು ಹಾರಾಡಿದರೂ, ಕದಲದೆ ನಿಶ್ಚಲವಾಗಿ ನಿಂತಿದ್ದ ಮಗಳನ್ನು ನೋಡಿ ಜಾನಕಿಗೆ ಆಶ್ಚರ್ಯವಾಯಿತು. ಕರೆಗಟ್ಟಿದ ಕೆನ್ನೆಯನ್ನು ಒರೆಸಿಕೊಂಡಳು. ಮರುಗಳಿಗೆಯೇ ತನ್ನ ಬಾಯಿಂದ ಹೊರಟ ಮಾತುಗಳು ಹೇಸಿಗೆಯೆನಿಸಿತು. ಏನು ರತ್ನ ಊರೆಲ್ಲಾ ಹೀಗೆ ಬಾಯಿಗೆ ಬಂದಂತೆ ಮಾತಾಡಿಕೊಳ್ಳುತ್ತಿದ್ದರೆ, ನೀನು ಮಾತ್ರ ಕಂಬದ ಹಾಗೆ ನಿಂತು ಬಿಟ್ಟೆಯಲ್ಲೇ?' ಎಂದಳು. ಸ್ವಲ್ಪ ಮೆದುವಾಗಿ. ರತ್ನಳಿಂದ ಮತ್ತೆಯೂ ಮಾತು ಹೊರಡಲಿಲ್ಲ. ಜಾನಕಿಯೇ ಮಾತು ಮುಂದುವರೆಸಿದಳು. ಮೊದಲೇ ಆ ಸೀನ ಪುಂಡರ ಜೊತೆ ಅಲೀತಿರ್‍ತಾನೆ. ಓದು ಗೀದು ಇಲ್ದೆ, ಸಂಪಾದನೆ ಮಾಡಿ ಬದುಕೊ ಯೋಗ್ಯತೆ ಇಲ್ದೆ ನಿಷ್ಪ್ರಯೋಜಕವಾಗಿ ತಿರಗ್ತಿರ್‍ತಾನೆ. ಅವನ ಜೊತೆ ಸ್ನೇಹ ಬೆಳೆಸಿದ್ರೆ ಏನೂಂತ ಹೇಳ್ಬೇಕು?.....ರತ್ನ ಬೇಡ ರತ್ನ–ನಿನ್ನ ಮೇಲೆ ಆಸೆ ಹೊತ್ತು ಬದುಕಿದ್ದೀನಿ, "ನಿನ್ನನ್ನು ರಾಜಕುಮಾರನಂತವನಿಗೆ ಕೊಟ್ಟು ಮದ್ವೆ ಮಾಡಿ ಕಣ್ತುಂಬ ನೋಡಬೇಕೆಂದು ಉಸಿರು ಬಿಗಿ ಹಿಡಿದಿದ್ದೀನಿ. ನಿನ್ನೊಬ್ಬ ಜವಾಬ್ದಾರಿ ನನಗಿಲ್ಲದೇ ಹೋಗಿದ್ದರೆ ಎಂದೋ ಸಾಯುತ್ತಿದ್ದೆ. ಜೀವನದಲ್ಲಿ ಸುಖ ಕಾಣದೆ–ನಿನ್ನಲ್ಲಿ ಶಾಂತಿ ಪಡೀತಿದ್ದೆ. ಈಗ ಅದನ್ನೂ ಬೇಡಾಂತ ಕಸೀತಿದ್ದೀಯಾ" ಎಂದು ಅಂಗಲಾಚಿದಳು.

ರತ್ನಳಿಗೆ ತಾಯಿಯ ಮಾತುಗಳನ್ನು ಕೇಳಿ ಕರಗಿ, ಎಲ್ಲಿ ಮನಸ್ಸು ಬದಲಾಗುತ್ತದೆಯೋ ಎಂದು ಹೆದರಿಕೆಯಾಯಿತು, ಸೀನು ಕಣ್ಮುಂದೆ ಬಂದ ಮರುಗಳಿಗೆಯೇ ತಾಯಿ, ಅವಳ ಪ್ರೀತಿಯ ಪ್ರಾರ್ಥನೆ–ಎಲ್ಲವೂ ಗಾಳಿಗೆ ಹಾರಿಹೋಯಿತು.

ತಾಯಿ ಮಕ್ಕಳು ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ಮಗಳು ತನ್ನ ಮಾತನ್ನು ಕೇಳಬಹುದು. ಸಮಾಧಾನದ ಉತ್ತರವೇನಾದರೂ ಬರಬಹುದೆಂದು ಕಿವಿ ನಿಮಿರಿಸಿ ನಿಂತಿದ್ದ ಅವಳ ಕಿವಿಗೆ 'ಜಾನಕಕ್ಕಾ ಇದ್ದೀರ ಮನೇಲಿ?' ಎಂದು ಕೂಗಿ ಕೇಳಿದ ಜಲಜಳ ಧ್ವನಿ ಮಾತ್ರವೇ ಬಿತ್ತು, ಜಾನಕಿ ಸಾವರಿಸಿಕೊಂಡು ಜಲಜಳನ್ನು ಎದುರುಗೊಳ್ಳಲು ಬಂದಳು. 'ಸದ್ಯ ಬಂದ ಪೀಡೆ ತೊಲಗಿತಲ್ಲ' ಎಂದುಕೊಂಡಳು ರತ್ನ.

ರಾಮಯ್ಯಂಗಾರ್ರಿಗೆ ಶ್ರೀನಿವಾಸನದೇ ದೊಡ್ಡ ಚಿಂತೆಯಾಯಿತು. ಊರಿನಲ್ಲಿ ಮರ್ಯಾದೆಯ ವ್ಯಕ್ತಿ ಎನಿಸಿಕೊಂಡು ಬಾಳಿದರು. ಹತ್ತು ಮಂದಿಗೆ ಬೇಕಾದವರಾಗಿ ಅವರ ಕಷ್ಟ ಸುಖಗಳಿಗೆ ಆಸರೆಯಾಗಿ 'ಉದಾರ ವ್ಯಕ್ತಿ' ಎಂದು ಕರೆಸಿಕೊಂಡಿದ್ದರು. ಇದ್ದ ಇಬ್ಬರು ಹೆಣ್ಣು ಮಕ್ಕಳಿಗೆ ಮದುವೆಯಾಗಿತ್ತು, ಶ್ರೀನಿವಾಸ ಚಿಕ್ಕವ. ಅವನೊಬ್ಬನೇ ಗಂಡು ಮಗ. ಅವನಿಂದ ತಮ್ಮ ಉದ್ಧಾರವಾಗಬೇಕೆಂದು ನಿರೀಕ್ಷಿಸಿದ ಅವರಿಗೆ, ಮಗನ ರೀತಿ ನೋವನ್ನು ತರಿಸಿತ್ತು, ಬೈದರೂ ಇಲ್ಲ, ಹೊಡೆದರೂ ಇಲ್ಲ. ತನ್ನ ವಕ್ರ ಬುದ್ಧಿಯನ್ನೂ ಪುಂಡುತನವನ್ನೂ ಬಿಡಲಿಲ್ಲ. ಶಾಲೆಗೆಂದು ಹೋಗುವುದು ಊರೆಲ್ಲಾ ತಿರುಗಿ ವಾಪಸ್ಸು ಬರುವುದಷ್ಟೇ ಕೆಲಸವಾಗಿತ್ತು. ಮೇಷು, ಅವನ ತಂದೆಗೆ ದೂರಿತ್ತರು. ಪ್ರಯೋಜನವಾಗಲಿಲ್ಲ. ರಾಮಯ್ಯಂಗಾರ್ರು ಅವನ ಹಣೇಲಿ ಬರೆದಿದ್ದಂತಾಗಲಿ' ಎಂದು ಬಿಟ್ಟು ಸಮಾಧಾನ ತಂದುಕೊಳ್ಳಲು ಪ್ರಯತ್ನಿಸಿದರು. ಆದರೆ ಮಡದಿ ಆಲಮೇಲಮ್ಮ ಮಾತ್ರ ಕೊರಗಿ ಕೊರಗಿ ಕಡ್ಡಿಯಂತಾದಳು.

ರತ್ನ-ಶ್ರೀನಿವಾಸರ ವಿಚಾರ ಪುಕಾರಾಗಿದ್ದರೂ ಕೇಳಿಕೊಂಡು ಸುಮ್ಮನಿದ್ದರು. ಬುದ್ಧಿ ಹೇಳುವ ಧೈರ್ಯವಾಗಲೀ, ಹೇಳಿದರೆ ಕೇಳುವನೆಂಬ ಭರವಸೆಯಾಗಲೀ ಇಲ್ಲದೆ-ಆ ವಿಚಾರವನ್ನು ಕೇಳಿಯೂ ಕೇಳಿದಂತೆ ಇದ್ದರು. ಅಕ್ಕ ಪಕ್ಕದವರು ಬಂದು 'ಏನು ಅಯ್ನೋರೆ ನಿಮ್ಮಗನ ಇಸಯ ಕೇಳದ್ರಾ?' ಎಂದು ವಿಚಾರಿಸಿದರೆ, ಇದೋ ನೀವು ಹೇಳಿದ ಮೇಲಕೆ ಕೇಳ್ತಾ ಇದ್ದೀನಿ, ಅಷ್ಟೇ! ಅದಕ್ಕಿಂತ ಹೆಚ್ಚು ಗೊತ್ತಿಲ್ಲಾ. ಗೊತ್ತಾಗೋದು ನನಗೆ ಬೇಡ. ನನ್ನ ಮಗನಾಗಿ ಹುಟ್ಟಿದ್ದಷ್ಟೇ ಅವನ ತಪ್ಪು! ನನಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ಅದಕ್ಕೆ ಆ ವಿಚಾರ ದಯವಿಟ್ಟು ಇಲ್ಲಿ ಎತ್ತಬೇಡಿ. ಎಂದು ಮುಂದೆ ಬೆಳೆಯ ಬಹುದಾದ ಮಾತಿನ ಸರಣಿಯನ್ನು ಅಲ್ಲಿಗೇ ಕತ್ತರಿಸುತ್ತಿದ್ದರು.

ಇವರಿಬ್ಬರ ವಿಚಾರವನ್ನು ಗಾಳಿಯೂ ಪಿಸುಗುಟ್ಟುವಷ್ಟು ಬಹಿರಂಗವಾಯಿತು. ಶ್ರೀನಿವಾಸ ರತ್ನರು ನಾಲ್ಕೈದು ದಿವಸ ಭೇಟಿಯಾಗಲೇ ಇಲ್ಲ.

ವಾತಾವರಣ ತಿಳಿಯಾಯಿತೆಂದು ಕೊಂಡಳು ಜಾನಕಿ. ರೆಪ್ಪೆಯಂತೆ ರತ್ನಳನ್ನು ಹಗಲು ರಾತ್ರಿ ಕಾದಳು. ರತ್ನಳೂ ಬಹಳ ವಿಧೇಯಳಂತೆ ಕಂಡಳು. ದೇವೂ ಮಾತ್ರ ಇವರಿಬ್ಬರ ಪತ್ರವಾಹಕನಾಗಿದ್ದ.

ಜಾನಕಿಯ ಸರ್ಪಕಾವಲಿನಿಂದಲೂ ತಪ್ಪಿಸಿಕೊಂಡು, ಒಂದುದಿನ ಇದ್ದಕ್ಕಿದ್ದಂತೆ ರತ್ನ ಮನೆಯಿಂದ ಕಣ್ಮರೆಯಾದಳು. ಶ್ರೀನಿವಾಸನೂ ಕಾಣಲಿಲ್ಲ.

ಜಾನಕಿಯ ತಲೆ ಸುತ್ತಿತು. ಜಗತ್ತೇ ಕತ್ತಲ ವೃತ್ತವೆನಿಸಿತು. ಮೂಕವಾಗಿ ಅತ್ತಳು. ಯಾರಿಗಾಗಿಯೂ ಇನ್ನೂ ಬದುಕಬೇಕಾದ್ದಿಲ್ಲವೆನಿಸಿ ಆತ್ಮಹತ್ಯೆಯ ಯೋಚನೆಯ ಬೆನ್ನು ಹತ್ತಿದಳು.

ಮಗನ ನಡತೆ ತಿಳಿದೇ ಇದ್ದ ವಿಷಯವಾದ್ದರಿಂದ ರಾಮಯ್ಯಂಗಾರರಿಗೆ ಈ ಸುದ್ದಿ ಭಯಂಕರವಾಗಿ ಎನಿಸಲಿಲ್ಲ. ಆದರೆ ತಮ್ಮ ಮಗನಿಂದ ಅಸಹಾಯಕ ಕುಟುಂಬಕ್ಕೆ ಸಿಡಿಲೆರಗಿದಂತಾಯಿತಲ್ಲ ಎಂದು ನೊಂದರು. ಆ ಹೆಣ್ಣು ಜೀವ ಪಾಪ! ಎಷ್ಟು ಘಾಸಿಗೊಂಡಿರಬೇಕು. ಹೋಗಿ ಒಂದೆರಡು ಸಮಾಧಾನದ ಮಾತುಗಳನ್ನು ಹೇಳಿ ಬರೋಣವೆಂದು, ಮಡದಿಗೆ ತಿಳಿಸಿ ಹೊರಟರು.

ಜಾನಕಿಯ ಅಳಲಿನ ಆಳವನ್ನು ಅರಿತಿದ್ದ ಅವರಿಗೆ 'ಹಾಗೆ ತಾನೇ ಈ ಜೀವಕ್ಕೆ ಸಮಾಧಾನ ಹೇಳುವುದು?' ಎನಿಸಿತು. ದಾರಿಯುದ್ದಕ್ಕೂ ಏನು ಹೇಳಬೇಕೆಂದು ಯೋಚಿಸುತ್ತಲೇ ನಡೆದು ಬಂದಿದ್ದರು. ಆದರೂ ಒಂದು ಮಾತೂ ಅವರ ಬುದ್ಧಿಗ ಹೊಳೆಯಲಿಲ್ಲ. ಮಟ, ಮಟ ಮಧ್ಯಾಹ್ನದ ಉರಿಬಿಸಿಲಿನ ತಾಪ ಹೊರಗಡೆಯಾದರೆ ಒಳಗೆವೇದನೆಯ ಉರಿ ದಹಿಸುತ್ತಿತ್ತು. ಸೋತ ಕಾಲುಗಳು ಹೆಜ್ಜೆ ಇಟ್ಟಂತಗೆ ನಡುಗುತ್ತಿದ್ದವು. ಮುತ್ತಿನಂತೆ ಮೂಡುತ್ತಿದ್ದ ಬೆವರಿನ ಹನಿಗಳನ್ನು ಹೊದ್ದ ಶಲ್ಲೆಯಿಂದ ಒರೆಸಿಕೊಳ್ಳುತ್ತಲೇ ಇದ್ದರು. ಬಿಸಿಲಿನ ಝಳಕ್ಕೆ ತಲೆ ಸುಡುತ್ತಿದ್ದ.

ಜಾನಕಿಯ ಮನೆಯನ್ನು ಭಾರವಾದ ಹೆಜ್ಜೆಯಿಂದಲೇ ಸಮೀಪಿಸಿದರು. ಮೆಲ್ಲನೆ ಬಾಗಿಲು ಬಡಿದರು. ಜಾನಕಿಯ ಬದಲಿಗೆ ಜಲಜ ಬಂದಳು. ಬಾಗಿಲು ತೆಗೆಯುತ್ತಿದ್ದಂತೆ ಕೇಳಿದಳು. 'ಜಾನಕಮ್ಮ ಒಳಗೆ ಇದ್ದಾರೆಯೇ?' ಎಂದು. 'ಇದ್ದಾರೆ ಬನ್ನಿ ಕೂತ್ಕೊಳ್ಳಿ'– ಎಂದು ಹೇಳಿ ಜಾನಕಿಗೆ ತಿಳಿಸಲು ಒಳಗೆ ಬಂದಳು. ಭಾರವಾದ ಕಣ್ಣುಗಳಿಂದ ಜಾನಕಿ ಯಾರೆಂದು ಪ್ರಶ್ನಿಸಿದಳು.

ಆಚಾರ್ರು, ಶ್ರೀನಿವಾಸನ ತಂದೆ. 'ಬಂದಿದ್ದಾರೆ'–ಎಂದಳು. ಜಾನಕಿಗೆ ಅವರನ್ನು ಕಾಣುವುದು ಇಷ್ಟವಿಲ್ಲವಾಗಿದ್ದರೂ, ದೊಡ್ಡವರು ಬಂದಾಗ ಹಾಗೆಯೇ ಕಳುಹಿಸುವುದು ಸರಿಯಲ್ಲವೆಂದು, ಸೆರಗಿನಿಂದ ಮುಖ ಒರೆಸಿಕೊಂಡು ಬಂದಳು. ಜಾನಕಿ ಬರುತ್ತಿದ್ದಂತೆ ಅಯ್ಯಂಗಾರ್ರು ಎದ್ದು ನಿಲ್ಲುತ್ತಾ ಕೈಜೋಡಿಸಿ, ಮಾತಾಡುವುದಕ್ಕೆ ಮುಂಚೆ 'ನನ್ನನ್ನು ಕ್ಷಮಿಸಿ ಬಿಡಿ ಜಾನಕಮ್ಮ ಎಂದರು. ಛೆ! ಛೆ! ನಿಮ್ಮನ್ನು ಕ್ಷಮಿಸುವುದಕ್ಕೆ ನಾನೆಷ್ಟರವಳು ಆಚಾರ್ರೆ? ಬೇಡಿ ಬೇಡಿ ಹಾಗೆಲ್ಲಾ ಕೈ ಮುಗಿಯುವುದು ಶ್ರೇಯಸ್ಸಲ್ಲ' ಎಂದಳು.

ಇಲ್ಲಮ್ಮ, ಅಂಥ ನೀಚ ಮಗನಿಗೆ ತಂದೆಯಾದದ್ದಕ್ಕೆ ನಾನೇನು ಮಾಡಿದರೂ ಸಾಕಾಗುವುದಿಲ್ಲ. ಅವನಿಂದ ಬರುವ ಪಾಪ ಸಾವಿರ ಸಲ ತೊಳೆದರು ಹೋಗುವುದಿಲ್ಲ.

ನನ್ನ ಮಗನಿಂದಾಗಿ 'ನೀವು ಕಷ್ಟಪಡುವ ಸಂದರ್ಭ ಬಂತು ಅದಕ್ಕಾಗಿ ನಿಮ್ಮಲ್ಲಿ ನಾನು ಕ್ಷಮೆ ಬೇಡ್ತೇನೆ ಎಂದರು.

ಆಚಾರ್‍ರೆ, ಎರಡೂ ಕೈ ಸೇರಿದರೆ ಚಪ್ಪಾಳೆ. ಒಬ್ಬರಿಂದ ಆಗುವುದಕ್ಕೆ ಸಾಧ್ಯವಾಗುವುದಿಲ್ಲ. ನನ್ನ ಮಗಳೂ ಅದರಲ್ಲಿ ತಪ್ಪಿತಸ್ಥಳೇ. ಸುಮ್ಮನ್ನೆ ನೀವೇಕೆ ಬೇಸರಿಸಿಕೊಳ್ತೀರಿ. ಎಲ್ಲಾ ನಮ್ಮ ನಮ್ಮ ಕರ್ಮ ಎಂದಳು ವ್ಯಥೆಯಿಂದ.

ಅಯ್ಯಂಗಾರ್‍ರು ಯೋಚಿಸಿ, 'ಒಂದು ಮಾತು ಹೇಳ್ತೀನಿ ಜಾನಕಮ್ಮ ಹೇಗಿದ್ದರೂ ಅವರು ಸರಿಹೋಗುವವರಲ್ಲ. ಒಂದು ಸಲ ಹೆಜ್ಜೆ ತಪ್ಪಿದ್ದಾರೆ. ಬಾಳಾದರೂ ಶಾಶ್ವತವಾಗಿ ಉಳಿಯಬೇಕು. ಮದುವೆ ಮಾಡಿಕೊಂಡು ಎಲ್ಲಾದರೂ ಸುಖವಾಗಿರಲಿ. ಆದರೆ ಅದಕ್ಕೆ ಮುಂಚೆ ಜನರ ಬಾಯಿ ಮುಚ್ಚಿಸಲು ನಾವೇ ನಿಂತು ಅವರ ಮದುವೆ ಮುಗಿಸಬೇಕು. ಅವರು ಎಲ್ಲಿದ್ದಾರೋ ಹುಡುಕಿ ಕರೆಸಿ, ಮದುವೆ ಮಾಡೋಣ. 'ಬೇರೆ ಮಾರ್ಗವೇ ಇಲ್ಲದಿದ್ದಾಗ ಇದೊಂದೇ ದಾರಿ ಉಳಿದಿರೋದು.' ಎಂದರು.

ಜಾನಕಿ ಯೋಚಿಸಿದಳು ಆಚಾರ್‍ರೆ ನೀವು–ನಾವು..........ಜಾತಿ..........? ಎಂದು ಅನುಮಾನಿಸುತ್ತಲೇ ಹೇಳುತ್ತಿರುವಷ್ಟರಲ್ಲಿ ಅಯ್ಯಂಗಾರರು ನಕ್ಕು ಹೇಳಿದರು. ಇನ್ನೇನು ಉಳಿದಿದೆ ಜಾತಿ? ನನ್ನ ಮಗನಂಥವನು ಇದ್ದರೆ ಎಲ್ಲಾದರೆ ಸಮನ್ವಯವೂ ಆಗಿ ಬಿಡುತ್ತೆ. 'ಜಾತಿ' ಮನೆ ಹಾಳಾಯ್ತು. ಅವರು ನೀತಿಯಿಂದ ಬಾಳಿದರೆ ಸಾಕಾಗಿದೆಎಂದರು ವ್ಯಂಗ್ಯವಾಗಿ.

ಜಾನಕಿಗೆ ಅದೇ ಸರಿಯೆನಿಸಿತು. ಅಯ್ಯಂಗಾರ್‍ರು ಮತ್ತೆ ಬರುವುದಾಗಿ ತಿಳಿಸಿ ಹೊಟರು.

* * *

ಶ್ರೀನಿವಾಸ ಕೆಲಸಕ್ಕಾಗಿ ನಾಯಿಯಂತೆ ಅಲೆದಾಡಿದ. ಎಲ್ಲಿಯೂ ಕೆಲ್ಸ ಸಿಗಲಿಲ್ಲ. ಜಾನಕಿ ಮಗಳಿಗೆ ಒಡವೆ ಹಾಕಿದ್ದಳು. ಅಯ್ಯಂಗಾರ್‍ರೂ ಸೊಸೆಗೆ ಒಂದು ಚಿನ್ನದ ಸರವನ್ನೂ, ಸ್ವಲ್ಪ ಹಣವನ್ನೂ ಕೊಟ್ಟಿದ್ದರು. ಶ್ರೀನಿವಾಸನಿಗೆ ಕೆಲಸ ಸಿಗುವವರೆಗೆ ಅವುಗಳನ್ನು ಅಡವಿಟ್ಟು ತಂದ ಹಣದಿಂದ ತಿನ್ನುವುದಾಗಿತ್ತು. ದಿನ ಬೆಳಗಾದರೆ ಕೆಲಸದ ಬೇಟೆಗೆ ಹೊರಟು ಬಳಲಿ ಸುಸ್ತಾಗಿ ಮನೆ ಸೇರುತ್ತಿದ್ದ. ರತ್ನಳಿಗೆ ಕೆಲಸ ಸಿಕ್ಕುವುದೋ ಇಲ್ಲವೋ ಎಂದು ಭಯವಾಯಿತು. ಅಮ್ಮನ ಬಳಿಗೆ ಹೋಗಿ ಬಿಡಲೇ ಎನಿಸಿತು. ಆದರೆ ಯಾವ ಮುಖವಿಟ್ಟುಕೊಂಡು ಹೋಗುವುದು? ಎಂದು ಚಿಂತಿಸಿದಳು.

ಶ್ರೀನಿವಾಸನ ಒಂದಿಬ್ಬರು ಗೆಳೆಯರಿದ್ದರು. ಜೊತೆಗೆ ದೂರದ ಬಂಧುಗಳೂ ಕೆಲವರಿದ್ದರು. ಆದರೆ ಯಾರಿದ್ದರೇನು? ಸಹಾಯಕ್ಕಂತೂ ಬರುವವರಿಲ್ಲ. ಅದಕ್ಕೇ ಶ್ರೀನಿವಾಸನಿಗೆ ಅಲೆಯುವುದಷ್ಟೇ ಉಳಿಯಿತು. ಛಲದಿಂದ ಶ್ರೀನಿವಾಸ ಕೆಲಸಕ್ಕೆ ತಿರುಗುತ್ತಲೇ ಇದ್ದ. ಮೊನ್ನೆ ಗೆಳೆಯನೊಬ್ಬ ಸಿಕ್ಕಿ ಅವನ ಕಥೆ ಕೇಳಿ ಕನಿಕರದಿಂದ

ಥಿಯೇಟರ್ ಮ್ಯಾನೇಜರೊಬ್ಬರಿಗೆ ಪರಿಚಯ ಮಾಡಿಸಿದ. ತನಗೆ ತುಂಬಾ ಕೆಲಸದ ಅವಶ್ಯಕತೆಯಿದೆಯೆಂದು ತಿಳಿಸಿದಾಗ, ಆ ಮ್ಯಾನೇಜರ್ ದೊಡ್ಡ ಮನಸ್ಸು ಮಾಡಿ ಒಂದು ಸಣ್ಣ ಕೆಲಸ ಕೊಟ್ಟ, ಸಿನಿಮಾ ಟಿಕೇಟು ಮಾರುವ ಕೆಲಸ. ಮುನ್ನೂರು ರೂಪಾಯಿ ಸಂಬಳವೆಂದು ಹೇಳಿದಾಗ 'ಶ್ರೀನಿವಾಸನಿಗೆ ತನ್ನ ಯೋಗ್ಯತೆಗೆ ಅದು ಹೆಚ್ಚೆಂದೇ ಎನಿಸಿತು. ಗೆಳೆಯನಿಗೆ ಯಜಮಾನನಿಗೆ ಧನ್ಯವಾದ ಹೇಳಿ ಖುಷಿಯಿಂದ ಮನೆಗೆ ಮರಳಿದ.

ರತ್ನಳಿಗೆ ಸಂತೋಷವೋ ಸಂತೋಷ. ಎಲ್ಲಾ ಸುಖಗಳನ್ನೂ ಒಟ್ಟಿಗೇ ಕಾಣಬೇಕೆಂದು ಬಯಸಿದಳು. ಆದರೆ ಅವನಿಗೆ ಬರುವ ಸಂಬಳ ಅವಳ ಆಸೆ ಪೂರೈಕೆಗಳಿಗೆ ಸಾಕಾಗುತ್ತಿರಲಿಲ್ಲ. ಹೊಟ್ಟೆಬಟ್ಟೆಗಷ್ಟೇ ಸಾಲುತ್ತಿತ್ತು.

ಹೊಸದರಲ್ಲಿ ಶ್ರೀನಿವಾಸ ರತ್ನಳನ್ನು ಕರೆದುಕೊಂಡು ಊರೆಲ್ಲಾ ಸುತ್ತಿಸಿದ. ರತ್ನಳಿಗೂ ಸ್ವರ್ಗ ಸಿಕ್ಕಷ್ಟು ಆನಂದ. ಶ್ರೀನಿವಾಸನನ್ನು ಕೊಂಡಾಡಿದಳು. ಭಾನುವಾರ ಬಂತೆಂದರೆ ಸಾಕು ಇಬ್ಬರಿಗೂ ಸುತ್ತುವುದೇ ಕೆಲಸ.

ರತ್ನಳಿಗೆ ಈ ಮಧ್ಯೆ ಫ್ಯಾಶನ್ ಭೂತ ಹಿಡಿದಿತ್ತು. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವೆಂಬಂತೆ' ದಿನಕ್ಕೊಂದು ಹೊಸ ಸೀರೆ, ತುಟಿಗೆ ಬಣ್ಣ ತೋಳಿಲ್ಲದ ರವಿಕೆಯ ಅಲಂಕಾರ ರತ್ನಳಿಗೆ ಮಾಮೂಲಾಯಿತು. ಶ್ರೀನಿವಾಸ ಬೇಡವೆನ್ನಲಿಲ್ಲ.

ಹೆಂಡತಿಯ ಅಲಂಕಾರ ಅವನಿಗೂ ಪ್ರಿಯವಾಯಿತು. ಆದರೆ ಅವಳ ಬಯಕೆ ಪೂರೈಸುವುದು ಮಾತ್ರ ಅವನಿಗೆ ಕಷ್ಟವೆನಿಸುತ್ತಿತ್ತು.

ಅವನಿಗೆ ಕೆಲಸದ ಹೊರೆಯೂ ಹೆಚ್ಚಾಗಿತ್ತು. ಬೆಳಿಗ್ಗೆ ಒಂಬತ್ತು ಗಂಟೆಗೆ ಹೋದರೆ ಬರುವುದು ರಾತ್ರಿ ಯಾವಾಗಲೊ! ರತ್ನ ಅವನಿಗಾಗಿ ಮೊದಮೊದಲು ನಿರೀಕ್ಷಿಸಿ ಕಾಯುತ್ತಿದ್ದಳು. ಆದರೆ ಈಗೀಗ ಕಾಯುವುದನ್ನು ಬಿಟ್ಟಳು, ತನ್ನ ಪಾಡಿಗೆ ತಾನು ಉಂಡು ಮಲಗಿ ಬಿಡುತ್ತಿದ್ದಳು.

ಶ್ರೀನಿವಾಸ ಹೊತ್ತು ಮೀರಿ ಬರುತ್ತಿದ್ದ. ಚೆನ್ನಾಗಿ ಕುಡಿದು ಬರುತ್ತಿದ್ದ. ಅವಳನ್ನು ಸಹಿಸುವುದು ಅವಳಿಗೆ ಅಸಹ್ಯವೆನಿಸಿತು. ಒಂದೆರಡು ಬಾರಿ ಬೈದಳು. ಶ್ರೀನಿವಾಸ ಅವಳನ್ನು ಮುದ್ದು ಮಾಡಿ ಒಲಿಸಿಕೊಂಡ. ಬರು ಬರುತ್ತಾ ಮನೆಗೂ ಬಾಟ್ಲಿಗಳನ್ನು ತಂದು ಕುಡಿಯುತ್ತಿದ್ದ. ತಮಾಷೆಗೆಂದು ರತ್ನಳಿಗೂ ಕುಡಿಯಲು ಹೇಳಿದ. ಆದರೆ ರತ್ನ ನಿರಾಕರಿಸಿಬಿಟ್ಟಳು. ಶ್ರೀನಿವಾಸನಿಗೆ ಏನೋ ಮೋಜು. ಶ್ರೀಮಂತರ ಮನೆಯ ಹೆಂಗಸರು ಕ್ಲಬ್ಬುಗಳಿಗೆ ಬಂದು ಕುಡಿಯುವುದನ್ನು ಗೆಳೆಯರ ಜೊತೆಗೆ ಹೋದಾಗ ಎಷ್ಟೊ ಸಲ ನೋಡಿದ್ದ. ಹೆಂಗಸರೂ ಕುಡಿಯುವುದರಲ್ಲಿ ತಪ್ಪಿಲ್ಲವೇನೋ ಎಂದುಕೊಂಡಿದ್ದ.

ಇವರಿಬ್ಬರ ದುಂದುಗಾರಿಕೆಯಿಂದ ಮನೆ ನಡೆಯುವುದು ಕಷ್ಟವಾಗಿತ್ತು. ಇವನಿಗೆ ಕುಡಿತಕ್ಕೆ, ಅವಳಿಗೆ ಅಲಂಕಾರಕ್ಕೆ ಹಣಬೇಕಿತ್ತು, ಬರುವ ಸಂಬಳದಿಂದ ಇಷ್ಟೆಲ್ಲಾ

ನಿರ್ವಹಿಸಲು ಆಗದೆ ಹೋದಾಗ ಬೇರೆ ಹವ್ಯಾಸಗಳಿಗೆ ಇಳಿದ. ಇಸ್ಪೀಟಾಡುವುದನ್ನು, ಜೂಜಾಡುವುದನ್ನೂ ಕಲಿತ ಇದರಿಂದ ಸಂಪಾದನೆ ಸ್ವಲ್ಪ ಸ್ವಲ್ಪ ಏರಿತು. ರತ್ನಳು ನಿರಾತಂಕವಾಗಿ ಆಸೆಗಳನ್ನು ಪೂರೈಸಿಕೊಂಡಳು.

* * *

ಮದುವೆಯಾದ ಎರಡು ವರ್ಷದ ಮೇಲೆ ವೀಣಾ ಹುಟ್ಟಿದಳು. ಮಗು ಹುಟ್ಟಿದ್ದು ರತ್ನಳಿಗೇನೂ ಹಿಗ್ಗಾಗಲಿಲ್ಲ. ತನ್ನ ಸ್ವಚ್ಛಂದ ಬದುಕಿಗೆ ಎಲ್ಲಿ ಅಡ್ಡಿಯಾಗುವುದೋ ಎಂದು ಮಾತ್ರ ಚಿಂತಿಸಿದಳು. ಹಾಗೆಂದು ಮಗುವನ್ನೇನೂ ತಿರಸ್ಕರಿಸಲಿಲ್ಲ. ಹೆರಿಗೆಗೆ ಸ್ವತಃ ರತ್ನಳ ಅಮ್ಮನೇ ಬಂದಿದ್ದಳು. ಮಗಳ ಸಂಸಾರವನ್ನು ಗಮನಿಸಿದಳು. ಗಂಡ ಹೆಂಡಿರಿಬ್ಬರೂ ಬದುಕನ್ನು ಗಂಭೀರವಾಗಿ ತೆಗೆದುಕೊಂಡಂತೆ ಕಾಣಲಿಲ್ಲ.

ಹಣವಿದ್ದಾಗ ಉಢಾಯಿಸುವುದು, ಇಲ್ಲವಾದಾಗ ಉಪವಾಸವಿರುವುದು ಇದು ಅವಳ ರೀತಿಯ ಬದುಕಾಗಿತ್ತು. ಜಾನಕಿಗೆ ತಡೆಯಲಾಗದೆ ಹೇಳಿದಳು.

ಏನಮ್ಮ ರತ್ನ ಇಷ್ಟು ದುಂದಾಗಿ ಬಾಳಿದರೆ, ನಾಳಿನ ಯೋಚನೆ ಏನಾಗಬೇಕು? ಮಕ್ಕಳು ಮರಿಗಳಿಗೆ ಏನಾದರೂ ಉಳಿಸಬೇಡವೇ ಎಂದು ಕೇಳಿದ್ದಕ್ಕೆ ಉಡಾಫೆ ನಗು ನಕ್ಕು, 'ಅಯ್ಯೋ ಹೋಗಮ್ಮ ನಾಳಿನ ಚಿಂತೆ ನಮಗ್ಯಾಕೆ? ಹೊಟ್ಟೆ ತುಂಬಾ ಇವತ್ತು ಸಿಕ್ಕಿದರೆ ಸಾಕು' ಎಂದು ಹೇಳಿ ಮಾತನ್ನೇ ಎಗರಿಸಿದ್ದಳು.

ಜಾನಕಿಗೆ ಇವಳ ಬುದ್ಧಿಯೇ ಅರ್ಥವಾಗದೆ ಸೋತಿದ್ದಳು. ಶ್ರೀನಿವಾಸನದೂ ಇದೇ ದಾರಿಯಾಗಿತ್ತು. ಇವರಿಗೆ ಹೇಳಿ ಪ್ರಯೋಜನವಿಲ್ಲೆಂದು ಮನಗಂಡಿದ್ದ ಜಾನಕಿ ಸುಮ್ಮನಾಗಿದ್ದಳು. ಬುದ ಕೆಲಸ ಮುಗಿದದ್ದೇ ಎಷ್ಟು ಹೇಳಿದರೂ ಅಲ್ಲಿ ಇಲ್ಲದೆ ತನ್ನೂರಿಗೆ ಹೊರಟುಹೋದಳು.

* * *

ಒಂದು ದಿನ ಶ್ರೀನಿವಾಸ ಕಂಠ ಪೂರ್ತಿ ಕುಡಿದು ಥಿಯೇಟರಿನಲ್ಲಿ ಷೋ ಮುಗಿದು ಎಲ್ಲರೂ ಮನೆಗೆ ಹೊರಟರೂ ಇವರು ಅಲ್ಲೇ ಬಿದ್ದುಕೊಂಡಿದ್ದ. ಒಂದು ಸಲ ಎಲ್ಲವನ್ನೂ ಪರೀಕ್ಷಿಸಲು ಬಂದ ವಾಚ್‌ಮನ್ ಇವನನ್ನು ನೋಡಿದ. ಮ್ಯಾನೇಜರಿಗೆ ತಿಳಿಸಿದ. ಮೇನೇಜರ್ ಅಲ್ಲಿಗೆ ಬಂದು ಬಿದ್ದಿದ್ದ ಅವನನ್ನು ಕಾರೊಳಗಿರಿಸಿಕೊಂಡು, ಅವನ ಮನೆ ಕಡೆ ಕಾರು ನಡೆಸಿದ. ರತ್ನಳಿಗೆ ಇನ್ನೂ ನಿದ್ದೆ ಹತ್ತಿರಲಿಲ್ಲ. ಶ್ರೀನಿವಾಸನ ನಿರೀಕ್ಷೆಯಲ್ಲಿದ್ದು ಏನ್ನೋ ಯೋಚಿಸುತ್ತಿದ್ದಳು.

ಬಾಗಿಲು ಬಡಿದ ಶಬ್ಧವಾಯಿತು. ಅಸ್ತವ್ಯಸ್ಥವಾಗಿದ್ದ ಸೀರೆಯನ್ನೂ ಸರಿಪಡಿಸಿಕೊಳ್ಳದೆ ಆತುರವಾಗಿ ಎದ್ದು ಬಂದು ಬಾಗಿಲು ತೆರೆದಳು. ಗಂಡನನ್ನು ನಿರೀಕ್ಷಿಸಿದ ರತ್ನಳಿಗೆ ಬೇರೆ ಯಾರೋ ಅಲ್ಲಿ ನಿಂತಿರುವುದನ್ನು ಕಂಡು ಗಾಭರಿಯಾಯಿತು. ಸೀರೆಯ ಸೆರಗನ್ನೆಳೆದು ಮೈತುಂಬಾ ಹೊದ್ದುಕೊಂಡಳು. 'ಯಾರು ನೀವು'! ಎಂದು ನಡುಗುವ

ದನಿಯಲ್ಲಿ ಕೇಳಿದಳು. ಅವಳ ಮುಖದಲ್ಲಿನ ಗಾಭರಿಯನ್ನು ಗಮನಿಸಿದ ಮ್ಯಾನೇಜರ್ 'ಗಾಭರಿಪಡಬೇಡ', ನಾನು ಶ್ರೀನಿವಾಸನ ಮ್ಯಾನೇಜರ್, ನಿಮ್ಮ ಯಜಮಾನರು ಕುಡಿದು ಬಿದ್ದುಬಿಟ್ಟಿದ್ದರು. ಅದಕ್ಕೆ ನಾನೇ ಮನೆಗೆ ತಲುಪಿಸಿ ಹೋಗೋಣವೆಂದು ಕರೆದು ತಂದೆ. ಸ್ವಲ್ಪ ನನ್ನ ಜತೆಗೆ ಬಂದರೆ, ಕಾರಲ್ಲಿರೋ ನಿಮ್ಮ ಯಜಮಾನರ್ನ್ನು ಕರೆದುತರಬಹುದು. ರತ್ನ ಆತನನ್ನು ಹಿಂಬಾಲಿಸಿದಳು. ಇಬ್ಬರೂ ಕಾರಿನ ಬಳಿಗೆ ಬಂದು ಬಾಗಿಲು ತೆಗೆದು ಶ್ರೀನಿವಾಸನನ್ನು ರೆಟ್ಟೆ ಹಿಡಿದು ಎಬ್ಬಿಸಿದರು. ಇಬ್ಬರ ಭುಜಗಳ ಮೇಲೂ ಕೈಗಳನ್ನೂರಿ ತೂರಾಡುತ್ತಿದ್ದ ಶ್ರೀನಿವಾಸನನ್ನು ನಡೆಸಿಕೊಂಡು ಕರೆತಂದು ಹಾಸಿಗೆ ಮೇಲೆ ಮಲಗಿಸಿದರು.

ಮ್ಯಾನೇಜರ್ ಮುಗುಳ್ನಗುತ್ತಾ ಬರುತ್ತೇನೆಂದು ಹೇಳಿದ. ರತ್ನ ಕೈಜೋಡಿಸಿ ಕೃತಜ್ಞತೆ ಅರ್ಪಿಸಿದಳು. ಪ್ರಜ್ಞೆಯಿಲ್ಲದೆ ಬಿದ್ದಿದ್ದ ಗಂಡನ ಕಡೆ ನೋಡಿ ನಿಟ್ಟುಸಿರುಬಿಟ್ಟು, ದೀಪವಾರಿಸಿ ಮಲಗಿದಳು.

* * *

ಶ್ರೀನಿವಾಸನ ವ್ಯವಹಾರಗಳು ವಿಪರೀತವಾದವು. ಪ್ರತಿದಿನ ಕುಡಿದು ಮನೆಗೆ ಬರುವುದು ಮಾಮೂಲಾಯಿತು. ಅವನ ಜೂಜಾಟಕ್ಕೆ, ಕುಡಿತಕ್ಕೆ ಮನೆಯಲ್ಲಿನ ಒಂದೊಂದು ವಸ್ತುವೂ ಮಾರಾಟವಾಯಿತು. ರತ್ನ ಇದೆಲ್ಲವನ್ನೂ ತೀರಾ ಮಾಮೂಲಿ ಎಂಬಂತೆ ಭಾವಿಸಿದಳು. ಶ್ರೀನಿವಾಸನ ಲಂಗು ಲಗಾಮಿಲ್ಲದ ವ್ಯವಹಾರಗಳಿಗೆ ರತ್ನಳ ನಿರ್ಲಕ್ಷ್ಯ ಪುಷ್ಠಿ ಕೊಟ್ಟಂತಾಯಿತು.

ದಿನಾ ಶ್ರೀನಿವಾಸನ ಗೆಳೆಯರು ಯಾರಾದರೂ ಬಂದೇ ಬರುತ್ತಿದ್ದರು. ರತ್ನಳಿಗೆ ಅವರೆಲ್ಲರ ಪರಿಚಯವಾಗಿತ್ತು ರತ್ನಳಿಗೆ ಶ್ರೀನಿವಾಸನ ಗೆಳೆಯರಲ್ಲಿ ವಿಠಲ, ನಾರಾಯಣ, ಪೀಟರ್, ವೇಣು ಮುಖ್ಯರಾಗಿದ್ದರು.

ರತ್ನಳು ಒಬ್ಬಳೇ ಇದ್ದಾಗ ಮನಸ್ಸು ಅನಾಯಾಸವಾಗಿ ಇವರತ್ತ ಹರಿಯುತ್ತಿತ್ತು. ವಿಠಲನ ರೂಪ, ನಾರಾಯಣನ ಶ್ರೀಮಂತಿಕೆ, ಪೀಟರ್‌ನ ಹಾಸ್ಯ ಪ್ರವೃತ್ತಿ, ವೇಣುವಿನ ಸೌಜನ್ಯ-ರತ್ನಳನ್ನು ಆಕರ್ಷಿಸಿತ್ತು. ಎಲ್ಲರೂ ತನ್ನನ್ನು ಹೊಗಳಿದ್ದರು. ಅವರ ಹೊಗಳಿಕೆಯಿಂದ ಇವಳಿಗೆ ಹೆಮ್ಮೆಯೆನಿಸಿತ್ತು. ಅಂದು ಒಂದು ದಿನ-ಭಾನುವಾರ ಶ್ರೀನಿವಾಸನಿಗೆ ಕೆಲಸವಿರಲಿಲ್ಲ. ಆ ದಿನವಾದರೂ ಗೆಳೆಯರನ್ನು ಕರೆದು ಹಬ್ಬ ಮಾಡಬೇಕೆಂದುಕೊಂಡು ಶ್ರೀನಿವಾಸ ಪೇಟೆಯ ಕಡೆ ಹೋಗಿ ಬರುವುದಾಗಿ ಹೇಳಿ ಹೊರಟ. ಎಣ್ಣೆ ಸ್ನಾನ ಮಾಡಬೇಕೆಂದುಕೊಂಡು, ತಲೆಗೆ ಎಣ್ಣೆ ಒತ್ತಿಕೊಂಡಳು. ಅವಳ ಮನಸ್ಸಿಗೆ ತುಂಬಿದ ಉಲ್ಲಾಸವೆನಿಸಿ, ಯಾವುದೋ ಚಿತ್ರಗೀತೆಯನ್ನು ಗುಣಗುಣಿಸುತ್ತಿದ್ದಳು. ಯಾರೂ ಮನೆಯಲ್ಲಿ ಇಲ್ಲದ್ದರಿಂದ-ನಿಸ್ಸಂಕೋಚವಾಗಿ ಮನೆಯಲ್ಲೆಲ್ಲಾ ತಿರುಗಾಡಿ ವಸ್ತುಗಳನ್ನೆಲ್ಲಾ ಓರಣವಾಗಿ ಜೋಡಿಸಿಡುತ್ತಿದ್ದಳು. ಅಲ್ಲೇ ಬದಿಯಲ್ಲಿ ಮಂಚದ ಮೇಲೆ ಮೂರುವರ್ಷದ ವೀಣಾ ಆಟದ ಸಾಮಾನುಗಳನ್ನು

ಸುರುವಿಕೊಂಡು ತನ್ನ ಪಾಡಿಗೆ ತಾನು ಆಡಿಕೊಳ್ಳುತ್ತಿದ್ದಳು, ಎಲ್ಲಾ ಶುಭ್ರಗೊಳಿಸಿ ನೀರೆರೆದುಕೊಳ್ಳೋಣವೆಂದುಕೊಂಡಿದ್ದಳು. ಅಡಿಗೆಯ ಅವಸರವಿರಲಿಲ್ಲ. ಮಧ್ಯಾಹ್ನ ಒಂದಿಷ್ಟು ಅನ್ನಸಾರು ಮಾಡಿದರಾಗುತ್ತಿತ್ತು. ಗೆಳೆಯನನ್ನು ಪಾರ್ಟಿಗೆ ಕರೆದಿರುವುದು ಸಂಜೆಗೆ, ಅವರೆಲ್ಲಾ ಸಂಜೆ ನಾಲ್ಕಕ್ಕೆ ಬರ್ತಾರೆ. ಅಷ್ಟು ಹೊತ್ತಿಗೆ ಎಲ್ಲ ಮಾಡಿದರೆ ಸರಿಯಾದೀತೆಂದು ಕೊಂಡಿದ್ದಳು.

ಯಾರೋ ಬಾಗಿಲು ತಟ್ಟಿದರು, ಶ್ರೀನಿವಾಸನೇ ಬಂದಿರಬೇಕೆಂದು ತಿಳಿದು ಇದೇಕೆ ಇಷ್ಟು ಬೇಗ ಬಂದು ಬಿಟ್ಟಿದ್ದಾರೆ. ಕೊಂಡದ್ದೆಲ್ಲಾ ಮುಗಿಯಿತೋ ಏನೋ ಅಂದುಕೊಂಡಳು. ಸರಿ ತೆಗೆಯೋಣವೆಂದು ಬಾಗಿಲ ಬಳಿ ಹೋಗಿ, ಖಚಿತ ಪಡಿಸಿಕೊಳ್ಳುವುದಕ್ಕಾಗಿ 'ಯಾರು?' ಎಂದಳು–ಒಳಗಿನಿಂದಲೇ. ನಾನು ಪೀಟರ್, ಶೀನಿ ಮನೇಲಿಲ್ವೇನು ಅತ್ತಿಗೆ?' – ಎಂದು ಕೇಳಿದ. ರತ್ನ ಯೋಚಿಸಿದಳು ಇಲ್ಲವೆಂದು ಕಳಿಸಿಬಿಡಲೇ, ಇಲ್ಲ ಬರುವವರೆಗೆ ಬಂದು ಕೂರಲು ಹೇಳಲೇ'–ಎಂದು, ಪೀಟರ್ ಶ್ರೀನಿವಾಸನ ಆಪ್ತಗೆಳೆಯ. ಈ ಮನೆಯೊಂದಿಗೆ ಬಹಳ ಸಲುಗೆ ಇಷ್ಟು ಸಲ ಮಾಮೂಲಾಗಿ ಬರೋ ವ್ಯಕ್ತಿ ಬಗ್ಗೆ ಭಯ ಯಾಕೆ? ಅವರಿಲ್ಲದಿದ್ದರೆ ಏನಂತೆ?......ಒಳಗೆ ಬಂದು ಕೂತಿರಲಿ.........ಬಾಗಿಲು ತೆಗೆಯದಿದ್ದರೆ ಏನಂದುಕೊಂಡಾರು?–ಎಂದು ಯೋಚಿಸುವಷ್ಟರಲ್ಲಿ ಮತ್ತೆ 'ಏನತ್ತಿಗೆ ಒಳಗೆ ಬನ್ನಿ ಅಂತ ಹೇಳೂಲ್ವೆ?' – ಎಂದು ಹಂಗಿಸಿದ ಹೊರಗಡೆಯಿಂದ. ತೆಗೆಯಲು ಚಿಲಕದ ಮೇಲೆ ಕೈಯಿಟ್ಟಾಗರವಿಕೆಯಿಲ್ಲದ ನಗ್ನತೋಳು ಕಂಡುಬಂದು, ಬೆಚ್ಚಿ ರವಿಕೆಯಿಲ್ಲದ್ದನ್ನು ನೆನೆಸಿಕೊಂಡು, ಒಂದ್ನಿಮಿಷ ಬಂದೆ ಇರಿ–ಎಂದು ಹೇಳಿ ಒಳಗೋಡಿ ರವಿಕೆತೊಟ್ಟು ಬಂದಳು, ನಂತರ ಚಿಲಕ ತೆಗೆದಳು.

ಒಳಗೆ ಬರುತ್ತಿದ್ದಂತೆ 'ಬಂದಿರೋ ಅತಿಥಿಗಳನ್ನು ಇಷ್ಟು ಹೊತ್ತಾ ಹೊರಗೆ ನಿಲ್ಲಿಸೋದು?–ಈಡಿಯಟ್, ಬಾ ಅಂತ ಕರೆದುಬಿಟ್ಟು ಅವನೇ ಮನೇಲಿಲ್ಲಾ?' ಆಕ್ಷೇಪಿಸಿದ ಪೀಟರ್.

'ಕ್ಷಮಿಸಿ ನಿಮ್ಮನ್ನು ಬರ ಹೇಳಿದ್ದು ಸಂಜೆಗೆ, ಈಗಲ್ವಲ್ಲ?' ಎಂದಳು. 'ಪೀಟರ್ ಹಾಂ ಏನಂದಿರಿ? ಸಂಜೆಗೇಂದ್ರ?' – ಓಹ್ ವೆರಿ ಸಾರಿ–ಹಾಗಾದ್ರೆ ಹೊರಟು ಹೋಗ್ತೀನಿ. ಅವನಿಗೆ ಹೇಳಿಬಿಡಿ' ಎಂದು ಎದ್ದ. 'ಬೇಡಿ ಕೂತ್ಕೊಳ್ಳಿ ಈಗ್ಲೇ ಬಂದು ಬಿಡ್ತಾರೆ, ಇಲ್ಲೇ ಮಾರ್ಕೆಟ್ಟಿಗೆ ಹೋಗಿದ್ದಾರೆ. ಅಲ್ಲಿವರೆಗೆ ನಾನೇನು ತಪಸ್ಸು ಮಾಡಬೇಕಾಗಿದೆಯೇ?.....ಏನೋ ಒಂದಿಷ್ಟು ನಿಮ್ಮ ಬಂಗಾರದ ಕೈಗಳಿಂದ ಒಂದು ಲೋಟ ವೈನ್..........ಸಾರಿ ಸಾರಿ, ಬ್ರೈನ್ ರಿಫ್ರೆಷಿಂಗ್ ಟಾನಿಕ್ ಕೊಟ್ಟರೆ ನಿಮ್ಮ ಹೆಸರು ಹೇಳಿಕೊಳ್ತಾ ಹೀರಿಬಿಡ್ತೀನಿ ಎಂದು ನಕ್ಕ.

ರತ್ನಳೂ ನಗುತ್ತಾ, ನೀವು ಏನು ಕೇಳಿದ್ರಿ ಅಂತ ನಂಗೆ ಅರ್ಥವಾಗಲಿಲ್ಲ ದಯವಿಟ್ಟು ಬೇಗ ಹೇಳಿ ನನಗೆ ಕೆಲಸ ಇದೆ ಎಂದಳು.

ಐಮೀನ್ ಕಾಫಿ.........ಕಷಾಯ. ಈಗಲಾದರೂ ಅರ್ಥವಾಯಿತಾ? 'ಹೂಂ ಅರ್ಥವಾಯಿತು'-ಎಂದು ಹೇಳಿ ಅಲ್ಲಿಂದ ಅಡುಗೆ ಮನೆ ಕಡೆ ಹೋದಳು. ಪೀಟರ್ ಎದ್ದು ಮಂಚದ ಬಳಿ ಹೋಗಿ, ವೀಣಾಳ ಜತೆ ಆಡತೊಡಗಿದ. ಓ ಲಿಟಲ್ ಡಾರ್ಲಿಂಗ್, ನನ್ನ ಮುದ್ದು ಹೇರ್‌ಲಿಂಗ್' ನಿಮ್ಮಮ್ಮ ಕೊಡೋ ಕಾಫೀನ ನಾವಿಬ್ಬರೂ ಸೇರಿ ಹೀರೋಣ, ಓಕೆ. ಎಂದು ಅವಳನ್ನು ಹತ್ತಿರ ಎಳೆದು ಮುದ್ದಿಸಿದ. ಪೀಟರ್‌ನ ಮೀಸೆ ವೀಣಾಳ ಕೆನ್ನೆಗೆ ಕಚಗುಳಿ ಇಟ್ಟಂತಾಗಿ ಕಿಲ ಕಿಲ ನಕ್ಕಳು. ಪುಟ್ಟ ಕೈಗಳನ್ನು ಅವನ ಮೀಸೆಯ ಮೇಲೆ ಆಡಿಸಿದಳು. ಎಷ್ಟು ಧೈರ್ಯ! ನನ್ನ ಮೀಸೆಗೆ ಕೈ ಹಾಕಿ ಕೆಣಕ್ತಿದೀಯಾ ಮರಿ ಸಿಂಹಿಣಿ'-ಎಂದು ನಾಟಕದಲ್ಲಿನಂತೆ ಸಂಭಾಷಣೆ ಮಾಡಿ ಹೂಂಕರಿಸಿದ.

ತುಂಬ ಚೆನ್ನಾಗಿದೆ ನಿಮ್ಮಾಟ.........ಕಾಫಿ ತಗೊಳ್ಳಿ ಎಂದು ಅವಳು ಕೈ ಚಾಚಿ ಕೊಡುವಷ್ಟರಲ್ಲಿ ವೀಣಾಳ ಕೈ ತಗುಲಿ ಬಿಸಿ ಕಾಫಿ ಚೆಲ್ಲಿತು-ವೀಣಾಳ ಕಾಲ ಮೇಲೆ ಸ್ವಲ್ಪ ಬಿದ್ದುದಕ್ಕೆ ಚಿಟ್ಟನೆ ಚೀರಿದಳು. ರತ್ನ ಆತುರವಾಗಿ ಅವಳನ್ನು ಎತ್ತಿಕೊಳ್ಳುವಷ್ಟರಲ್ಲಿ ಪೀಟರ್‌ನೂ ಬಗ್ಗಿದ. ಇಬ್ಬರ ಕೈಗಳೂ, ಭುಜಗಳೂ ತಾಕಿದವು. ಇಬ್ಬರಲ್ಲೂ ವಿದ್ಯುತ್ ಹರಿಯಿತು, ಕಣ್ಣುಗಳು ಒಂದಾದವು. ಪೀಟರ್ ಕ್ಷಮಿಸಿ ಎಂದೇನೋ ಹೇಳಿದ. ರತ್ನ ಸ್ವೀಕರಿಸಿದೆನೆಂಬಂತೆ ಮುಗುಳ್ನಕ್ಕಳು. ಆ ಮುಗುಳ್ನಗೆಯಲ್ಲಿ ರತ್ನ ತುಂಬಾ ಆಕರ್ಷಕವಾಗಿ ಕಂಡಳು. ಪೀಟರ್ ಹಿಂಬಾಲಿಸಿದ. ರತ್ನ ಮಗಳಕಾಲಿಗೆ ಕಾಫಿ ಬಿದ್ದ ಜಾಗಕ್ಕೆ ಬರ್ನಾಲ್ ಹಚ್ಚಿದಳು. 'ಹೇಗಿದೆ ಮಗೂಗೆ'-ಎಂದು ಕೇಳುತ್ತಾ ಪೀಟರ್ ಅವಳ ಪಕ್ಕಕ್ಕೆ ಬಂದ. ಮತ್ತೊಮ್ಮೆ ಅವಳ ಸ್ಪರ್ಷವನ್ನು ಪಡೆದ. ಒಳಗೆ ಖುಷಿ ಪಟ್ಟ. ಮಾರ್ಕೆಟ್ಟಿಗೆ ಹೋದ ಶ್ರೀನಿವಾಸ ಬಂದ. ಹೊತ್ತಿಗೆ ಮುಂಚೆಯೇ ಪ್ರತ್ಯಕ್ಷನಾಗಿದ್ದ ಪೀಟರ್‌ನನ್ನು ನೋಡಿ ಆಶ್ಚರ್ಯವಾಯಿತು. ಇದೇನೋ ಈಗಲೇ ವಕ್ರಿಸಿ ಬಿಟ್ಟೆ?" ಎಂದು ಶ್ರೀನಿವಾಸ ಕೇಳಿದ್ದಕ್ಕೆ. 'ಮರೆತು ಬಿಟ್ಟು, ಈಗಲೇ ಅಂತ ಬಂದು ಬಿಟ್ಟೆ ಕಣೋ, ನೀನು ಹೋಗು ಅಂದ್ರೆ ಹೊರಟು ಹೋಗ್ತೀನಿ ಎಂದ.

ಛೆ! ಛೆ! ನಿನಗೆ ಹಾಗಂತ ಹೇಳಿಲ್ಲ. ಇಲ್ಲಿ ಬಂದಿದ್ದೀಯಾ, ಹೇಗಿದ್ದರೂ ಪೂರ್ತಿ ಇದ್ದು ಬಿಟ್ಟು ಹೋಗು ಎಂದ. ರತ್ನಳ ಕಡೆ ತಿರುಗಿ, ರತ್ನ ಈ ಬಕಾಸುರನಿಗೂ ಸೇರಿಸ್ಕಿ ಅಡುಗೆ ಮಾಡು ಇಲ್ಲೇ ಇವನು ಕವಳಕ್ಕಿರ್‍ತಾನೆ' ಎಂದ. ರತ್ನ ಆಗಲೆಂದು ತಲೆಯಾಡಿಸಿ, ವೀಣಾಳನ್ನು ಅವನ ಬಳಿ ಬಿಟ್ಟು ಸ್ನಾನ ಮಾಡಿ ಬರುವುದಾಗಿ ಹೇಳಿ ಹೊರಟಳು. ವೀಣಾ ಅಳು ನಿಲ್ಲಿಸಿದ್ದಳು. ತಂದೆಯ ಹತ್ತಿರ ಕುಳಿತು ಆಡತೊಡಗಿದಳು. ಪೀಟರ್ ಹೇಳಿದ 'ಲೋ ಸೀನು, ಬೋರ್ ಆಗುತ್ತೆ ಅಡುಗೆ ಆಗೋ ತನಕ ಏನ್ಮಾಡಬೇಕೋ ಒಂದಾಟ ಆಡೋಣ ಬಾ' ಎಂದ. 'ಓ ನಾನೇನೋ ರೆಡಿ' ಎಂದ.

ಆಟಕ್ಕೆ ಸಿದ್ಧವಾದರು. ಪೀಟರ್‌ನ ಜೇಬಿನಲ್ಲೇ ಇಸ್ಪೀಟ್ ಎಲೆಗಳಿದ್ದವು. ಸರಸರ ಸಜ್ಜಾದರು. ನೋಡನೋಡುತ್ತಿದ್ದಂತೆ, ಇಬ್ಬರಲ್ಲೂ ಹುರುಪೇರಿತು. ಸ್ಪರ್ಧೆಯಿಂದ

ಆಡಿದರು. ಶ್ರೀನಿವಾಸನದೇ ಪ್ರತಿ ಆಟದಲ್ಲೂ ಮೇಲುಗೈ. ಪೀಟರ್ ಒಂದೊಂದಾಗಿ ಐವತ್ತು ರೂಪಾಯಿಗಳನ್ನು ಸೋತ. ಆಟ ಸಾಕೆಂದ.

ರತ್ನಳ ಸ್ನಾನ ಮುಗಿದಿತ್ತು. ಬೇಗ ಅಡುಗೆಗೆ ಸಿದ್ಧ ಮಾಡಿದ್ದಳು. ಆಟ ಮುಗಿಸಿ ಇಬ್ಬರೂ ಹರಟೆಗೆ ಇಳಿದಿದ್ದರು. ಫ್ರೆಂಡ್ಸ್ ಬಗ್ಗೆ ತಮ್ಮ ಕೆಲಸದ ಬಗ್ಗೆ ಮಾತಾಡಿದರು. ಸಿಲ್ಲಿ ಜೋಕ್ಸ್ ಹೇಳಿಕೊಂಡರು. ಕೆಟ್ಟದ್ದಾಗಿ ಇಬ್ಬರೂ ನಕ್ಕರು.

ರತ್ನಳಿಗೆ ಬೇಸರ ಬರತೊಡಗಿತು. ದರಿದ್ರದವರು ಬೆಳಿಗ್ಗೇನೇ ವಕ್ರಿಸಿ ಬಿಟ್ಟರು' ಎಂದುಕೊಂಡಳು.

ಇದ್ದಕ್ಕಿದ್ದಂತೆ ಮಾತು ತನ್ನತ್ತ ತಿರುಗಿತ್ತು. 'ಲೋ ಸೀನು, ನೀನು ನಿಜವಾಗಿಯೂ ಅದೃಷ್ಟವಂತ ಕಣೋ, ಎಂತಹ ಬ್ಯೂಟಿಫುಲ್ ವೈಫ್ ಸಿಕ್ಕಿದ್ದಾಳೆ' ಎಂದು ಬೆನ್ನು ತಟ್ಟಿದ. ಶ್ರೀನಿವಾಸನಿಗೆ ಗರ್ವವೆನಿಸಿತು. ರತ್ನಳ ಕಿವಿಗೂ ಬಿದ್ದು ಮುಖವೆಲ್ಲಾ ಕೆಂಪಾಯಿತು. 'ತನ್ನಲ್ಲಿ ಅಷ್ಟೊಂದು ಸೌಂದರ್ಯವಿದೆಯೇ? ಎಂದು ಪ್ರಶ್ನಿಸಿಕೊಂಡಳು. ಹೆಮ್ಮೆಯಿಂದ..........ಹೌದು ಅದಕ್ಕೇ ಇರಬೇಕು ಇವರೆಲ್ಲಾ ಸ್ನೇಹಿತನನ್ನು ನೋಡುವ ನೆಪದಲ್ಲಿ ಮನೆ ಸುತ್ತಾ ಹೀಗೆ ಸಾಯೋದು ಎಂದುಕೊಂಡಳು.

ಅಡಿಗೆ ಮುಗಿಸಿ ಬೇಗ ಇವರನ್ನು ಊಟಕ್ಕೆ ಎಬ್ಬಿಸಿದಳು. 'ಇನ್ನು ಸಂಜೆಗೆಲ್ಲಾ ಸಿದ್ಧವಾಗಬೇಕು. ಈ ಊಟದ ಕಾರ್ಯಕ್ರಮ ಮುಗಿದರೆ, ಅರ್ಧ ಕೆಲಸ ತೀರಿದ ಹಾಗೆ' ಎಂದುಕೊಂಡು ಆತುರಪಡಿಸಿದಳು.

ಪೀಟರ್, ಸೀನು ಊಟಕ್ಕೆಂದು ಎದ್ದು ಕೈಕಾಲು ತೊಳೆಯಲು ಹೋದರು.

* * *

ಸಂಜೆಗೆ ಗೆಳೆಯರೆಲ್ಲಾ ಬಂದರು. ತಿಂಡಿ ಕಾಫಿ ಆಯಿತು. ಅವರೆಲ್ಲಾ ವೀಣಾಗೆ ರತ್ನಾಗೆ ಉಡುಗೊರೆ ತಂದಿದ್ದರು. ರತ್ನ ಉಡುಗೊರೆ ಕೊಡುವ ಸಂದರ್ಭವೇನೂ ಇಲ್ಲದ್ದರಿಂದ ತನಗೆ ಬೇಡವೆಂದಳು. ಅವರೆಲ್ಲಾ ಬಲವಂತಪಡಿಸಿದರು. 'ನೀವು ಸುಮ್ಮನೆ ಕಾರಣವಿಲ್ಲದೆ ಪಾರ್ಟಿಗೆ ಕರೆದಿರುವಾಗ, ನಾವು ಸುಮ್ಮನೆ ಪ್ರೀತಿಗೋಸ್ಕರ ಕೊಡೋದನ್ನು ನೀವ್ಯಾಕೆ ಬೇಡಾಂತೀರಿ! ತಗೊಳ್ಳಿ' ಎಂದು ಒತ್ತಾಯಿಸಿದರು. ಶ್ರೀನಿವಾಸನೂ 'ಪರವಾಗಿಲ್ಲ ತೆಗೆದಿಡುವ ರತ್ನ' ಎಲ್ಲಾ ನಮ್ಮವರು ತಾನೇ!' ಎಂದ. ರತ್ನ ಏನೂ ಕೇಳದೆ ಅವುಗಳನ್ನು ತೆಗೆದಿರಿಸಿದಳು.

ಎಲ್ಲಾ ಮುಗಿಯುವ ಹೊತ್ತಿಗೆ ಏಳು ಗಂಟೆ ಆಗಿತ್ತು. ಮತ್ತೆ ಅವರೆಲ್ಲಾ ಸೇರಿ ಒಂದೆಲೆಯಾಟ ಆಡಿದರು. ಶ್ರೀನಿವಾಸ ಮನೆಯಲ್ಲೇ ಬಾಟಲಿಗಳನ್ನು ತಂದಿರಿಸಿದ್ದ. ಗೆಳೆಯರಿಗೆ ಅದರ ಮೇಲೆ ಕಣ್ಣು, ಒತ್ತಾಯಿಸಿ ಒಂದೊಂದು ಪೆಗ್ ಹಾಕಿದರು. ರತ್ನಳಿಗೆ ಈ ಕುಡಿತದ ವಾಸನೆ ಹೊಂದಿ ಹೋಗಿತ್ತು. ಶ್ರೀನಿವಾಸ ಸ್ವಲ್ಪ ಅಭ್ಯಾಸವೂ ಮಾಡಿಸಿದ್ದ. ಎಂದೋ ಒಪ್ಪಿ ಬಲವಂತಕ್ಕೆ ಸ್ವಲ್ಪ ಕುಡಿಯುತ್ತಿದ್ದಳು. ಈ ದಿನ ಶ್ರೀನಿವಾಸ

ರತ್ನಳನ್ನು ಕರೆದ. ಸ್ನೇಹಿತರೂ ಕಂಪನಿ ಕೊಡಬೇಕೆಂದು ಬಲವಂತ ಪಡಿಸಿದರು. ಶ್ರೀನಿವಾಸನೂ ರತ್ನಳ ಕೈಹಿಡಿದು ಎಳೆದು ಕೂರಿಸಿದ.

ಗೆಳೆಯರೆಲ್ಲಾ ಮುಗ್ಧರಾಗಿ ನೋಡಿದರು. ತುಟಿಯ ರಂಗಿನಲ್ಲಿ ತೀಡಿದ ಹುಬ್ಬಿನಲ್ಲಿ ಹಚ್ಚಿದ ಕಾಡಿಗೆಯಲ್ಲಿ, ಹಣೆಯ ತಿಲಕದಲ್ಲಿ, ತೋಳಿಲ್ಲದ ರವಿಕೆಯಲ್ಲಿ, ಪಾರದರ್ಶಕವಾದ ಆಕರ್ಷಕ ನೀಲಿ ಸೀರೆಯಲ್ಲಿ ದೇವತೆಯಂತೆ ಕಂಡಳು. ನೋಡಿದಷ್ಟೂ ನೋಡುತ್ತಲೇ ಇದ್ದರು, ಎಡೆ ಎಡೆಯಲ್ಲೂ ಚಿಮ್ಮುವ ಸೌಂದರ್ಯವನ್ನು ಹೀರಿ ಕುಡಿಯುವಂತೆ ನೆಟ್ಟ ಕಣ್ಣುಗಳಿಂದ ನೋಡಿದರು. ಶ್ರೀನಿವಾಸ ಗೆಳೆಯರ ರೀತಿಯನ್ನು ಗಮನಿಸಿದ: ನಕ್ಕ. ಒಟ್ಟಿಗೆ ಅವರೆಲ್ಲಾ ಬಾಯಿ ಬಿಟ್ಟರು, 'ಮಾರ್ವೆಲೆಸ್!' ಎಂದು.

ರತ್ನಳಿಗೆ ಇದೆಲ್ಲಾ ನೆನಪಿಗೆ ಬಂತು. ಅಬ್ಬಬ್ಬ!ಎಷ್ಟು ಹೊಗಳಿದರು ಇವರು– ಎಂದುಕೊಂಡಳು. ಗೆಳೆಯರೊಂದಿಗೆ ಸಲುಗೆಯಿಂದ ಇರಲು ಶ್ರೀನಿವಾಸನೇ ಪ್ರೋತ್ಸಾಹಿಸುತ್ತಿದ್ದ. ಮೊದಲಿಗೆ ಹಿಂಜರಿದರೂ ನಂತರ ರತ್ನಳು ಫ್ರೀಯಾಗಿ ಅವರೊಂದಿಗೆ ವರ್ತಿಸುತ್ತಿದ್ದಳು. ಇದು ಅವಳಿಗೆ ಅನುಕೂಲವೇ ಆಯಿತು. ಏನಾದರೊಂದು ಉಡುಗೊರೆ ತಂದೇ ತರುತ್ತಿದ್ದರು. ಸೀರೆ, ಒಡವೆ ಶೇಖರವಾಗ ತೊಡಗಿದವು. ಅವುಗಳ ಹಿನ್ನೆಲೆಯ ದುರುದ್ದೇಶ ಅಷ್ಟಾಗಿ ರತ್ನಳಿಗೆ ತಿಳಿಯುತ್ತಿರಲಿಲ್ಲ. ಶ್ರೀನಿವಾಸನಿಗೆ ಬರುವ ಸಂಬಳ ಕಡಿಮೆಯಾದರೂ ಈ ಗೆಳೆಯರಿಂದ ಹಣ ಪಡೆಯುತ್ತಿದ್ದ. ಅವರು ರತ್ನಳಿಗಾಗಿ ಶ್ರೀನಿವಾಸನಿಗೆ ಸಹಾಯ ಮಾಡುತ್ತಿದ್ದರು. ಶ್ರೀನಿವಾಸನ ದೃಷ್ಟಿಯಲ್ಲಿ ಅವರೆಲ್ಲಾ ತುಂಬಾ ಒಳ್ಳೆಯವರು. ಅದಕ್ಕಾಗಿಯೇ ಹೆಂಡತಿಯ ಜೊತೆಗಿನ ಅವರ ಸಲುಗೆಗೆ ಅಡ್ಡಿ ಹೇಳುತ್ತಿರಲಿಲ್ಲ. ಅದರ ಪರಿಣಾಮದ ಕಲ್ಪನೆ ಅವನಿಗಿಲ್ಲವಾಯಿತು.

ರತ್ನಳ ಮನಸ್ಸೂ ಬದಲಾಯಿಸಿತು. ಶ್ರೀನಿವಾಸನ ಬಗ್ಗೆ ಅಸಡ್ಡೆ ಮೂಡಿತು. ತನ್ನಿಂದಲೇ ಹಣ ಕೇಳುತ್ತಿದ್ದ ಶ್ರೀನಿವಾಸನ ಬಗ್ಗೆ ಅಸಹ್ಯವೆನಿಸಿತು. ಒಡವೆ ವಸ್ತುಗಳನ್ನೂ ಗಿರವಿಯಿಟ್ಟು ಹಣ ತಂದು ಜೂಜಿಗೋ, ಕುಡಿತಕ್ಕೋ ಸುರಿದು ಬರುತ್ತಿದ್ದ. ಅವನ ಮುಂದೆ ಗೆಳೆಯರೇ ವಾಸಿ ಎನಿಸಿತು. ಇತ್ತೀಚೆಗೆ ಶ್ರೀನಿವಾಸನ ನಡತೆಯೂ ಕ್ರೂರವಾಗಿತ್ತು. ಕುಡಿತಕ್ಕೆ ಹಣ ಸಿಕ್ಕದಾದಾಗ ಸಿಟ್ಟಿನಿಂದ ರತ್ನಳನ್ನು ಹೊಡೆಯಲು ಆರಂಭಿಸಿದ್ದ. ರತ್ನ ಪ್ರತಿಭಟಿಸಿದಳು. ಬೈದಳು, ಮೋಸಗಾರ, ವಂಚಕ – ಎಂದು ಬಾಯಿಗೆ ಬಂದಂತೆ ಬೈದು, ಅಂದು ಬಾಯಿ ತೀಟೆ ತೀರಿಸಿಕೊಂಡಳು.

ದಿನ ದಿನಕ್ಕೆ ವಿರಸ ಹೆಚ್ಚಾಯಿತು. ಶ್ರೀನಿವಾಸನನ್ನು ನಿರ್ಲಕ್ಷಿಸಿ ಅವನ ಗೆಳೆಯರ ಜೊತೆಗೆ ಸ್ವೇಚ್ಛೆಯಾಗಿ ತಿರುಗಾಡಿದಳು. ಅವರೊಡನೆ ತಿರುಗಾಡುವುದರ ಲಾಭ ಕಂಡುಕೊಂಡಳು. ಅವಳ ಸ್ನೇಹಕ್ಕಾಗಿ ಹಾತೊರೆಯುತ್ತಿದ್ದ ಅವರೂ ಅವಳ ಸಲುಗೆಯ ಉಪಯೋಗ ಪಡೆದರು.

ಅಕ್ಕ ಪಕ್ಕದವರಿಗೆ ಅನುಮಾನವಾಯಿತು. ಇವಳ ಷೋಕಿಗೆ, ತಿರುಗಾಟಕ್ಕೆ ಹಣದ ಕೊರತೆ ಬರಲಿಲ್ಲ. ಶ್ರೀನಿವಾಸ ಅವಳ ದರಬಾರನ್ನು, ಹದ್ದು ಮೀರಿದ

ರೀತಿಯನ್ನು ನೋಡಿದ, ಆದರೆ ಅಸಹಾಯಕತೆಯಲ್ಲಿದ್ದ. ಅವನಿಗೆ ಅವಳನ್ನು ಬೈದು ಹೇಳುವ ಧೈರ್ಯವಿರಲಿಲ್ಲ. ಬದಲಾಗಿ ಅವಳ ಮನ ಒಲಿಸಿಕೊಂಡರೆ ಒಳ್ಳೆಯದೆಂದು ಯೋಚಿಸಿದ. ರತ್ನಳಿಗೆ ಕೂಡಲೇ ಸೋಲುವ ಮನಸ್ಸಾಗಲಿಲ್ಲ. ಆದರೆ ಮದುವೆಯಾದವಳ ಸ್ವಚ್ಛಂದ ರೀತಿಯನ್ನು ಯಾವ ಗಂಡನು ತಾನೇ ಸಹಿಸಿಯಾನು, ಜನ ಅವನನ್ನು ಬಿಟ್ಟರೆ ಆಡಿಕೊಳ್ಳಬಹುದು ಎಂದು ದುರಾಲೋಚನೆಯ ದೂರಾಲೋಚನೆ ಮಾಡಿ ಗಂಡನ ಮಾತಿಗೆ ಬಿದ್ದಂತೆ ನಟಿಸಿದಳು. ಶ್ರೀನಿವಾಸನಿಗೂ ಅಷ್ಟೇ ಬೇಕಾಗಿತ್ತು. ಮನೆ ಅವರಿಬ್ಬರಿಗೆ ರಾತ್ರಿಯ ವಿಶ್ರಾಂತಿಗೆ ಮಾತ್ರವೇ ಅವಶ್ಯಕವಾಗಿತ್ತು. ಇವರಿಬ್ಬರ ಸ್ವೇಚ್ಛೆಯ ಬದುಕಿನಲ್ಲಿ ವೀಣಾ ಬೇಡದ ವಸ್ತುವಾಗಿದ್ದಳು. ವಿಧಿಯಿಲ್ಲದೆ ಅವಳನ್ನು ಸಹಿಸಿಕೊಳ್ಳಬೇಕಾಗಿತು.

ಪೀಟರ್‌ನ ಜೊತೆಗೆ ನಂದಿಗೆ ಹೊರಟಾಗ ಶ್ರೀನಿವಾಸನೇ ಮುಂದೆ ನಿಂತು ಅವರಿಬ್ಬರನ್ನೂ ಕಳಿಸಿಕೊಟ್ಟ. ವೀಣಾ ಶ್ರೀನಿವಾಸನ ಜತೆಗೇ ಉಳಿದಳು. ತಾಯಿಯೊಂದಿಗೆ ತಾನೂ ಬರುತ್ತೇನೆಂದು ಹಟ ಮಾಡಲಿಲ್ಲ. ರತ್ನ ವೀಣಾಳ ಕೆನ್ನೆ ಚಿವುಟಿ, ಹೋಗಿ ಬರ್‍ಲಾ ಮರಿ? ನೀನು ಅಪ್ಪನ ಜೊತೆ ಜಾಣ ಮಗುವಿನಂತೆ ಇರ್‍ತಿಯಾ? ಎಂದು ಕೇಳಿದ್ದಕ್ಕೆ, ವೀಣಾ ಮುಖವನ್ನು ಗಂಟು ಹಾಕಿಕೊಂಡು ಸುಮ್ಮನೆ ನಿಂತಳೇ ಹೊರತಾಗಿ ಏನನ್ನೂ ಹೇಳಲಿಲ್ಲ. ಶ್ರೀನಿವಾಸನಿಗೆ ಮತ್ತು ವೀಣಾಗೆ ಕೈಬೀಸಿ ಹೋಗಿ ಬರುತ್ತೇನೆಂದು ಹೇಳಿ ಹೊರಟಳು.

* * *

ಶ್ರೀನಿವಾಸನ ಕುಡಿತ ಹೆಚ್ಚಾಯಿತು. ಹೊತ್ತಲ್ಲದ ಹೊತ್ತಲ್ಲಿಯೂ ಕುಡಿದು ಬರುತ್ತಿದ್ದ. ರತ್ನ ಅದನ್ನು ವಿರೋಧಿಸುತ್ತಿದ್ದಳು. ದಿನ ನಿತ್ಯ ಏನೋ ಒಂದು ಕಾರಣಕ್ಕಾಗಿ ಕಚ್ಚಾಟ. ಬೆಪ್ಪು ಕಣ್ಣುಗಳಿಂದ ನೋಡುತ್ತಿದ್ದ ವೀಣಾಳ ಪುಟ್ಟ ಮನಸ್ಸಿನಲ್ಲಿ ಅಪ್ಪ ಅಮ್ಮನ ವಿಚಾರವಾಗಿ ಕೋಲಾಹಲ. ಆ ಮುಗ್ಧ ಬುದ್ದಿಗೆ ಏನೂ ಅರ್ಥವಾಗುತ್ತಿರಲಿಲ್ಲ.

ಒಂದು ರಾತ್ರಿ ಶ್ರೀನಿವಾಸ ಒಂದೂವರೆ ಗಂಟೆಗೆ ಬಂದು ಡಬಡಬ ಬಾಗಿಲು ತಟ್ಟಿದ. ವೀಣಾ ರತ್ನಳಿಗೆ ಹೊಂದಿಕೊಂಡಂತೆ ಮಲಗಿದ್ದಳು. ಆ ಬಡಿತದ ಸದ್ದಿಗೆ ಬೆಚ್ಚಿಬಿದ್ದು 'ಅಮ್ಮ'-ಎಂದು ಕಿರುಚಿಕೊಂಡಳು. ನೈಟ್ ಗೌನ್ ಹಾಕಿಕೊಂಡು ಮಲಗಿದ್ದ ರತ್ನ ಎದ್ದು 'ಯಾರದು' ಎಂದು ಗದ್ದರಿಸಿ ಬಾಗಿಲು ತೆಗೆದಳು. ಶ್ರೀನಿವಾಸ ದಿಢೀರ ಎಂದು ಬಿದ್ದ. ಅವನ ಹಿಂದೆ ಇನ್ನೊಬ್ಬ ವ್ಯಕ್ತಿಯಿದ್ದ. ತೂರಾಡುತ್ತಲೇ ಹೇಳಿದ-ರತ್ನ ಡಾರ್ಲಿಂಗ್ ಇವರು ನನ್ನ ಫ್ರೆಂಡ್ ಸೋಮಣ್ಣ. ತುಂಬಾ ಶ್ರೀಮಂತರು ಈ ದಿನ ಸಿಕ್ಕಿದರು. ಮನೆಗೆ ಬಾ ಎಂದು ಕರ್‍ಕೊಂಡು ಬಂದೆ. ತುಂಬಾ ಒಳ್ಳೇವ್ರು ಡಾರ್ಲಿಂಗ್, ನಿನ್ನ ಹೆಂಡತಿಯನ್ನು ಪರಿಚಯ ಮಾಡಿಸೊಲ್ವೇನೋ ಅಂತ ಕೇಳಿದರು. ಅದಕ್ಕೆ ಈಗಲೇ ಬಾ ಅಂತ ಕರ್‍ಕೊಂಡು ಬಂದೆ. ಬಾ ಕೂತ್ಕೋ. ಸ್ವಲ್ಪ ಮಾತಾಡಿಸು-ಎಂದು ಅಲ್ಲಿಯೇ ಕುರ್ಚಿಯಲ್ಲಿ ಕುಸಿದ.

ರತ್ನಳ ಕಣ್ಣುಗಳು ಕೆಂಪಾಗ ತೊಡಗಿದವು. ಕಟಕಟನೆ ಹಲ್ಲು ಕಡಿದು ನಿಮಗೇನು ತಲೆಯಿದೆಯಾ? ಹೊತ್ತಿಲ್ಲದ ಹೊತ್ನಲ್ಲಿ ಕಂಡಕಂಡವರನ್ನೆಲ್ಲ ಕರೆತಂದು ನಂಗೆ ಅವಮಾನ ಮಾಡ್ತೀರಾ? ನಿಮಗೆ ಬುದ್ದಿ ಇಲ್ಲಾಂದ್ರೆ ಬರೋ ನಿಮ್ಮ ಗೆಳೆಯರಿಗೂ ಬುದ್ಧಿ ಇರೋದು ಬೇಡವೇ? ಸ್ನೇಹಿತರ ಹೆಂಡತಿಯ ಪರಿಚಯ ಮಾಡಿಸ್ಕೊಳ್ಳೋಕೆ ಬೇರೆ ಹೊತ್ತಲ್ಲದೆ ಇಂಥಾ ಅಪರಾತ್ರಿನಾ ಬರೋದು? ನೋಡಿದ್ರೆ ಜನಾ ಏನಂದ್ಕೋತಾರೆ.

ಕುಡಿತದ ಅಮಲಿನಲ್ಲಿ ಮೈಮರೆತಿದ್ದ ಶ್ರೀನಿವಾಸ ಜಗ್ಗಂತ ಎದ್ದ. ಒಮ್ಮೆಲೆ ಅಮಲು ಮಾತಿನಿಂದ ಇಳಿದುಹೋಯಿತು. ರತ್ನಳನ್ನು ಕತ್ತರಿಸಿ ಬಿಡುವಂತೆ ಎದ್ದು, ಕೆನ್ನೆಗೆ ಛಳೀರೆಂದು ಒಂದು ಏಟು ಕೊಟ್ಟ. 'ಬಾಯ್ಮುಚ್ಚು ನಾಯಿ' ನಾನು ಕರೆತಂದವ್ರನ್ನ ಹೀಗಾ ಅವಮಾನ ಮಾಡೋದು? ನಿನಗೆ ಇಷ್ಟವಾದರೆ ಊರವರ ಜೊತೆಗೆಲ್ಲಾ ಅಲೀತಿಯೇನೊ? ನನ್ನ ಫ್ರೆಂಡ್ ಪೀಟರ್ ನಿನಗೆ ಬೇಕಾದ, ವೇಣು ಬೇಕಾದ, ನಾಣಿ ಬೇಕಾದ, ಇವನು ಮಾತ್ರ ಬೇಡ ಯಾಕೆ?

ರತ್ನಳಿಗೆ ಏನು ಹೇಳಬೇಕೆಂದು ಹೊಳೆಯಲಿಲ್ಲ. ಆದರೆ ಒಂದೆರಡು ಕ್ಷಣಗಳ ನಂತರ 'ಗಂಡಸಾದ ನಿನಗೆ ಸಾಕುವ ಯೋಗ್ಯತೆ ಇಲ್ದೆ, ಕಂಡವರ ಕಡೆಗೆ ಹೆಂಡ್ತೀನ ಕಳ್ಸಿ, ಹೆಂಡಕ್ಕೆ, ಜೂಜಿಗೆ, ಸೂಳೆಗೇಂತ ಹೆಂಡ್ತಿ ಕೊಡೋ ದುಡ್ನ ತಿನ್ನೋ ನೀನೊಬ್ಬ ಹುಳುವಿಗಿಂತ ಕಡೆ. ನೀನೊಂದು ಕೀಟ, ಸುಖವಾಗಿದ್ದ ನನ್ನನ್ನ ಎಗರಿಸಿಕೊಂಡು ಬಂದು, ಇಲ್ಲಿ ಸಾಯೋ ಹಾಗೆ ಮಾಡ್ತಿರೋ ನೀನು ದೊಡ್ಡದಾಗಿ ಮಾತಾಡ್ತೀಯಾ?'–ಎಂದಳು.

ಹೆಂಡತಿಯ ಏಕವಚನ ಸಂಬೋಧನೆ ಅವನನ್ನು ಸಿಟ್ಟಿಗೆಬ್ಬಿಸಿತು.

ಬಾಯ್ಮುಚ್ಚು ಹಾಳುಮುಂಡೆ, ಊರಲ್ಲಿ ನಿನ್ನ ಬಂಡವಾಳ ಗೊತ್ತಿರಲಿಲ್ವೇ? ಬಾಯಿ ಬಿಟ್ರೆ ಬಣ್ಣಗೇಡು, ನೀನೊಂದು ಬಣ್ಣದ ಚಿಟ್ಟೆ, ನಿನ್ನ ಸುಖಕ್ಕೆ ಯಾರನ್ನು ಬೇಕಾದರೂ ಮುಳುಗಿಸ್ತಿ.........ಹೆಚ್ಚು ಮಾತಾಡಿದರೆ ಹಲ್ಲುದುರಿಸ್ತೇನೆ'–ಎಂದು ಹೆದರಿಸಿದ.

ಈ ಗಲಾಟೆಗೆ ಎದ್ದ ವೀಣಾ ಹೆದರಿದ ಬೆಕ್ಕಿನಂತೆ ರತ್ನಳ ಹಿಂದೆ ಮರೆಯಾಗಿ ನಿಂತಳು. ಬಂದಾತ ಈ ಇಬ್ಬರ ನಡುವೆ ಹೊತ್ತಿಕೊಂಡ ಯುದ್ಧಕ್ಕೆ ಹೆದರಿ, ನೋಡೀಮ್ಮೆ, ಶ್ರೀನಿವಾಸನದೇನೂ ತಪ್ಪಿಲ್ಲ. ನಾನೇ 'ಬರ್ತೀನಿ ಎಂದೆ. ದಯವಿಟ್ಟು ಜಗಳ ಮಾಡಬೇಡಿ, ನೀವು ಬೇಡಾಂದ್ರೆ ಹೊರಟು ಹೋಗ್ತೀನಿ' –ಎಂದು, ಶ್ರೀನಿವಾಸ ಬಾ ಹೋಗೋಣ'–ಎಂದ.

ಶ್ರೀನಿವಾಸ ಆ ವ್ಯಕ್ತಿ ಕರೆದದ್ದಕ್ಕೆ ಪೆಚ್ಚಾದ. ಆ ವ್ಯಕ್ತಿಯಿಂದ ಶ್ರೀನಿವಾಸ ಇನ್ನೂರು ರೂಪಾಯಿ ತೆಗೆದುಕೊಂಡಿದ್ದ. 'ಅಶ್ವಮೇಧ'ಯಾಗದಲ್ಲಿ ನೂರೈವತ್ತು ರೂಪಾಯಿಗಳನ್ನು ಸೋತು, ಐವತ್ತಕ್ಕೆ ಚೆನ್ನಾಗಿ ಕಂಠಪೂರ್ತಿ ಹೀರಿಬಿಟ್ಟಿದ್ದ. ಇನ್ನು ಅವನು ಹಣಕ್ಕೆ ಗಲಾಟೆ ಮಾಡಿಯಾನೆಂದು ಮೆಲ್ಲಗೆ ಒಳ್ಳೆಯ ಮಾತಾಡಿ, ತನ್ನ ಮನೆಗೆ ಕರೆತಂದಿದ್ದ. ತನ್ನ ಹೆಂಡತಿಯ ಪರಿಚಯ ಮಾಡಿಕೊಡಿಸುತ್ತೇನೆಂದು ಅರ್ಥಗರ್ಭಿತವಾಗಿ ಹೇಳಿದ್ದ.

ರತ್ನ ತೀರಾ ಸೋಷಿಯಲ್ಲಾಗಿ ಇರುತ್ತಾಳಾದ ಕಾರಣದಿಂದ ಆತನ ಪರಿಚಯ ಮಾಡಿಸಿದರೆ ಹಣದ ವಿಷಯ ಮರೆತು ಬಿಡುತ್ತಾನೆಂದು ಲೆಕ್ಕಾಚಾರ ಹಾಕಿದ್ದ. ಒಟ್ಟಿನಲ್ಲಿ ಅವನ ಲೆಕ್ಕಾಚಾರವೆಲ್ಲ ತಲೆಕೆಳಗಾಯ್ತು. ಆ ವ್ಯಕ್ತಿ ಕರೆದಾಗ ತೆಪ್ಪಗೆ ಎದ್ದು ನಡೆದ. ಹೋಗುತ್ತ ರತ್ನಳತ್ತ ಕಣ್ಣು ಹಾಯಿಸಿ ನೋಡಿದ.

ರತ್ನ ನಿಟ್ಟುಸಿರುಬಿಟ್ಟಳು. ಅವರ ಹಿಂದೆಯೇ ಹೋಗಿ ಬಾಗಿಲು ಹಾಕಿದಳು. ವೀಣಾಳ ಕಣ್ಣಂಚಿನಲ್ಲಿ ಕಂಬನಿಯ ಮುತ್ತುಗಳಿದ್ದವು. ರತ್ನಳಿಗೆ ಏನೆನಿಸಿತೋ, ವೀಣಾಳನ್ನು ಎಳೆದು ರಭಸವಾಗಿ ಅಪ್ಪಿಕೊಂಡಳು. ವೀಣಾಳಿಗೆ ಅವಳ ರೀತಿಯೇ ವಿಚಿತ್ರವೆನಿಸಿತು. ಬಿಗಿಯಾಗಿ ಅವಳನ್ನಪ್ಪಿಕೊಂಡೇ ಹಾಸಿಗೆಯ ಮೇಲೆ ಮೈಚಾಚಿದಳು. ಈ ಘಟನೆಯಿಂದ ನಿದ್ದೆ ಹಾರಿ ಹೋಗಿತ್ತು. ಎಷ್ಟು ಪ್ರಯತ್ನಿಸಿದರೂ ರೆಪ್ಪೆಗೆ ರೆಪ್ಪೆ ಹತ್ತಲಿಲ್ಲ. ದೀಪವಾರಿಸುವ ಮನಸ್ಸೂ ಆಗಲಿಲ್ಲ. ಯೋಚನೆಯಲ್ಲಿಯೇ ರಾತ್ರಿಯೆಲ್ಲಾ ಕಳೆದುಹೋಗಿತ್ತು. ಇನ್ನೂ ಹಾಸಿಗೆಯಲ್ಲೇ ಬಿದ್ದುಕೊಂಡಿದ್ದ ರತ್ನ ಹಾಲಿನವಳು ಬಂದದ್ದರಿಂದ ಮನಸ್ಸಿಲ್ಲದ ಮನಸ್ಸಿನಿಂದ ಎದ್ದಳು.

ಹಾಲು ತೆಗೆದುಕೊಂಡು ಅಡಿಗೆ ಮನೆಗೆ ಹೋಗುತ್ತಿದ್ದಂತೆ ಶ್ರೀನಿವಾಸ ಸದ್ದು ಮಾಡದೆ ಬೆಕ್ಕಿನಂತೆ ಬಂದ. ಅವನಲ್ಲೀಗ ಸಿಟ್ಟು ಉಳಿದಿರಲಿಲ್ಲ. ರಾತ್ರಿಯ ಘಟನೆಯನ್ನು ಮರೆತಿದ್ದಂತೆ ಅನಿಸಿತು. ವೀಣಾಳ ಪುಟ್ಟ ಎದೆಯಲ್ಲಿ, ರತ್ನಳ ತಲೆಯಲ್ಲಿ ಮಾತ್ರ ಅದು ಆಳವಾಗಿ ಉಳಿದುಹೋಯಿತು.

ಶ್ರೀನಿವಾಸ ಬಂದದ್ದು ರತ್ನಳಿಗೆ ತಿಳಿಯಿತಾದರೂ ಅವನನ್ನೇನೂ ಮಾತನಾಡಿಸಲಿಲ್ಲ. ಅವನ ಪಾಡಿಗೆ ಅವನು, ತನ್ನ ಕೆಲಸಗಳನ್ನು ಮುಗಿಸಿಕೊಂಡು ಹೇಳದೆ ಕೇಳದೆ ಹೊರಟು ಹೋದ. ಇನ್ನೂ ಗಂಟೆ ಎಂಟು ಕೂಡ ಆಗಿರಲಿಲ್ಲ. ತಿಂಡಿಯೇನಾದರೂ ಮಾಡೋಣವೆಂದು ಡಬ್ಬಗಳನ್ನು ತಡಕಾಡಿದಳು. ಎಲ್ಲವೂ ಖಾಲಿ. ಕೈಯಲ್ಲಿ ಕಾಸೂ ಇರಲಿಲ್ಲ. ಶ್ರೀನಿವಾಸನನ್ನು ಕೇಳಿದರೂ ಒಂದೇ ಬಿಟ್ಟರೂ ಒಂದೆ!

ಪೀಟರ್, ವೇಣು, ನಾಣಿ ಯಾರೂ ಬಂದರೂ ಸಲುಗೆಯಿಂದ ಕೇಳಬಹುದಾಗಿತ್ತು. ಆದರೆ ಇತ್ತೀಚೆಗೆ ಅವರು ಬರುವುದು ಅಪರೂಪವಾಗಿ ಹೋಗಿದೆ. ಪೀಟರ್‌ಗೆ ರೂರ್‌ಕೆಲಾದಲ್ಲಿ ಕೆಲಸ ಸಿಕ್ಕಿದೆ. ವೇಣುವಿಗೆ ಮದುವೆ ನಿಶ್ಚಯವಾಗಿದೆ. ನಾಣಿ ಮಾತ್ರ ಯಾವಾಗಲಾದರೊಮ್ಮೆ ಬಂದು ಹೋಗುತ್ತಿದ್ದ.

ಪೀಟರ್‌ಗೆ ಈಗೀಗ ರತ್ನಳಲ್ಲಿ ಬೇಸರ. ಹೋದಾಗಲೆಲ್ಲಾ ಏನಾದರೂ ಅವಳ ಕೋರಿಕೆ ಇದ್ದೇ ಇರುತ್ತದೆ. ಹೋಗುವುದೇ ಬೇಡವೆಂದು ಎಷ್ಟು ಬಾರಿ ನಿರ್ಧರಿಸಿದರೂ ಅವಳ ಆ ನಗೆ, ಕಣ್ಣಿನ ಮಿಂಚು ಅಯಸ್ಕಾಂತದಂತೆ ಸೆಳೆದು ಬಿಡುತ್ತಿತ್ತು. ಆದರೆ ಈಗ ಪೀಟರ್ ಕೇರಳದಲ್ಲಿರೋ ತಂದೆ ತಾಯಿಗಳನ್ನು ನೋಡಿ ಬರೋಣವೆಂದು ಹೊರಟಿದ್ದ. ರತ್ನಳಿಗೆ ಹೋಗುವಾಗ ಹೇಳಿಯೂ ಇರಲಿಲ್ಲ. ಆತುರದಲ್ಲಿ ಇದ್ದಿರಬೇಕೆಂದು ರತ್ನ ಅಸಮಾಧಾನವನ್ನು ಅದುಮಿಟ್ಟುಕೊಂಡಿದ್ದಳು.

ವೇಣುವಿನ ಬಂಧುಗಳು ರತ್ನಳ ಮನೆಯ ಎದುರುಸಾಲಿನಲ್ಲಿ ಒಂದು ಮನೆಯಲ್ಲಿದ್ದರು. ವೇಣು ಪದೇ ಪದೇ ಆ ಮನೆಗೆ ಬರುತ್ತಿದ್ದದನ್ನು ಅವರು ಗಮನಿಸಿದ್ದರಲ್ಲದೆ ಒಂದೆರಡು ಬಾರಿ, ತೀರಾ ಹತ್ತಿರದ ಸಂಬಂಧಿಯಾದ್ದರಿಂದ ಅವನನ್ನು ಮಾತೂ ಆಡಿಸಿದ್ದರು.

ವೇಣುವಿನ ತಂದೆಯನ್ನು ಕಂಡಾಗ ಅವನ ಬಂಧುವೊಬ್ಬರು ರತ್ನಳ ಶ್ರೀನಿವಾಸರ ವಿಚಾರವಾಗಿ ಏನೆಲ್ಲಾ ಹೇಳಿದರು.

ನೋಡಿ ಶ್ರೀಪತಿರಾಯರೇ, ವಯಸ್ಸಿಗೆ ಬಂದ ಹುಡುಗ ಕೆಲಸ ಕಾರ್ಯ ಬಿಟ್ಟು ಇಂಥವರ ಮನೆ ಸುತ್ತುತ್ತಾ ಇದ್ರೆ, ಇಂಥವ್ರ ಸಹವಾಸ ಮಾಡಿದರೆ ಒಳ್ಳೇದಾಗೊಲ್ಲ. ನಾವು ಒಳ್ಳೆಯವರಾದ್ರೂ ಸುಮ್ಮನೆ ಕೆಟ್ಟ ಹೆಸರು ತಗೋಬೇಕಾಗುತ್ತೆ. ಅದೇನು ಗಂಡ ಹೆಂಡಿರೋ ನಂಗಂತೂ ಅರ್ಥವಾಗೊಲ್ಲ. ದಿನಕ್ಕೆ ಹತ್ತು ಜನ ಗಂಡಸರು ಬರ್‍ತಿರ್‍ತಾರೆ ಮನೆಗೆ. ಆ ಮನೆ ಹೆಂಗ್ಸು ಲಂಗು ಲಗಾಮಿಲ್ಲದೆ, ನಾಚಿಕೆ, ಹೇಚಿಕೆಯಿಲ್ಲದೆ ತೀರಾ ಸ್ವೇಚ್ಛೆಯಾಗಿ ನಡ್ಕೋತ್ತಾಳೆ. ಮದುವೆಯಾದವ್ಳಾದ್ರೆ ಹೀಗೆ ಕಂಡವರ ಜೊತೇಲೆಲ್ಲಾ ಅಲೀತಾಳೇನು? ನೀವೇ ಹೇಳಿ? ನಿಮ್ಮ ಮಗನ್ನ ನಾನು ಹತ್ತು ಬಾರಿ ನೋಡ್ತಿರ್ತೀನಿ ತಿಂಗಳಲ್ಲಿ. ಸ್ವಲ್ಪ ಬುದ್ಧಿ ಹೇಳಿ. ಕೆಟ್ಟ ಜನ, ಕೆಟ್ಟ ಸಹವಾಸ. ನಾಳೆ ಏನಾದ್ರೂ ಹೆಚ್ಚು ಕಡಿಮೆಯಾದ್ರೆ ಯಾರು ಜವಾಬ್ದಾರರು! ಎಂದು ಸ್ವಲ್ಪ ಮಸಾಲೆ ಹಚ್ಚಿ ರಸವತ್ತಾಗಿ ಹೇಳಿದ.

ಶ್ರೀಪತಿರಾಯರಿಗೆ ವೇಣುವಿನ ವ್ಯವಹಾರ ತಿಳಿದಿರಲಿಲ್ಲ. ಇತ್ತೀಚೆಗೆ ಅಂಗ್ಡೀಗೇ ಬರ್‍ತಾ ಇರ್‍ಲಿಲ್ಲ. ಹಣ ಸಾಕಷ್ಟು ಇತ್ತು. ಇವನೆಷ್ಟು ತೆಗೆದುಕೊಳ್ತಾ ಇದ್ದಾ ಅನ್ನೋದು ಗೊತ್ತಾಗ್ತಾ ಇರಲಿಲ್ಲ. ತಿನ್ನೋದು, ಅಲೆಯೋದು, ಅಷ್ಟೇ ಗೊತ್ತಿತ್ತು. ಎಲ್ಲಿಗೆ ಹೋಗ್ತಾನೆ ಅನ್ನೋದು ಮಾತ್ರ ಗೊತ್ತಿರಲಿಲ್ಲ. ಈಗ ಅವರ ಬಂಧುಗಳು ಹೇಳಿದ ಮೇಲೆ ಶ್ರೀಪತಿರಾಯರಿಗೆ ವೇಣುವಿನ ಮೇಲೆ ಅನುಮಾನವಾಯಿತು. ಮನೆಯಲ್ಲಿ', ವಯಸ್ಸಿಗೆ ಬಂದಿರೋ ಗಂಡು ಮಗ ಜವಾಬ್ದಾರಿ ಹೊತ್ತಿರೋದು ಬಿಟ್ಟು ಹೀಗೆಲ್ಲಾ ಕೆಟ್ಟವರ ಸಹವಾಸ ಮಾಡ್ತಿರೋದು ತಿಳಿದಾಗ ಮಗನ ಬಗ್ಗೆ ಬೇಸರವಾಯಿತು. ಇದೆಲ್ಲಕ್ಕೂ ತಾಯಿಯ ಮುದ್ದುತನವೇ ಕಾರಣವೆಂದುಕೊಂಡರು.

ವೇಣು ಚಿಕ್ಕವ, ದೊಡ್ಡವ ರಾಘವ. ಅವನು ಮದುವೆಯಾಗಿ ಬೇರೆ ಸಂಸಾರ ಹೂಡಿದ್ದ. ಇದ್ದವನೀಗ ಮನೆಗೆ ವೇಣುವೇ ಹಿರಿಯ. ಅಂಥಾದ್ದರಲ್ಲಿ ಇವನು ಹೀಗಾದರೆ ಹೇಗೆಂದು ಆಲೊಚಿಸಿದರು.

ಮದುವೆ ಮಾಡಿದರೆ ಸ್ವಲ್ಪ ಜವಾಬ್ದಾರಿ ಬಂದೀತೆಂದು ಒಂದು ಒಳ್ಳೆಯ ಸಂಬಂಧ ನೋಡಿ ಮದುವೆ ನಿಶ್ಚಯಿಸಿದರು. ಜೊತೆಗೆ ವೇಣುವಿಗೆ ಆ ಮನೆ ಕಡೆ ಹೋಗಬಾರದೆಂದು ನಿಷ್ಠೂರವಾಗಿ ನುಡಿದಾಗ ವೇಣುವಿಗೆ, ಅಪ್ಪನಿಗೆ ಈ ವಿಚಾರ ತಿಳಿದದ್ದಾದರೂ ಹೇಗೆ? ಎಂಬ ಆಲೋಚನೆ ಬಂದರೂ, ನಂತರ ತಮ್ಮ

ಸಂಬಂಧಿಗಳಾರೋ ಹೇಳಿರಬೇಕೆಂದು ಹೊಳೆಯಿತು. ಅಪ್ಪನನ್ನು ಪ್ರತಿಭಟಿಸುವ ಉದ್ಧಟತನ, ಎದೆಗಾರಿಕೆ ಮಾತ್ರ ವೇಣುವಿನಲ್ಲಿ ಇಲ್ಲದಿದ್ದುದೇ ಒಳ್ಳೆಯ ಗುಣವಾಗಿತ್ತು.

ತಾಯಿಗೂ ವಿಷಯ ತಿಳಿದು ವೇಣುವಿನಲ್ಲಿ ಅತ್ತು ಕೇಳಿಕೊಂಡರು. ವೇಣುವಿಗೆ ಇವರೆಲ್ಲಾ ಇಷ್ಟು ಸಣ್ಣ ವಿಷಯವನ್ನು, ರಾದ್ಧಾಂತ ಮಾಡುತ್ತಿದಾರಲ್ಲ ಎನಿಸಿದರೂ ತಾಯಿಯ ಕಂಬನಿಗೆ ಕರಗಿ ಸುಮ್ಮನಾದ. ಸಂಪೂರ್ಣವಾಗಿ ರತ್ನಳೊಂದಿಗೆ ಸಂಬಂಧ ಕಡಿದುಕೊಳ್ಳಲೂ ಇಷ್ಟವಿಲ್ಲವಾಗಿ ಎಂದೋ ಒಮ್ಮೆ ಹೋಗಿ ಬರುತ್ತಿದ್ದ. ಆಗೆಲ್ಲಾ ರತ್ನಳು ಅಳುವಿನಿಂದಲೇ ವೇಣುವನ್ನು ಮನೆಗೆ ಸರಿಯಾಗಿ ಬರುತ್ತಿಲ್ಲವೆಂದು ದೂರಿದಳು. ತನ್ನ ಮೇಲಿನ ಆಸಕ್ತಿ ಕಡಿಮೆಯಾಗಿರಬೇಕೆಂದು ಸಿಟ್ಟುಗೊಂಡಳು.

ವೇಣು ಸಮಾಧಾನ ಮಾಡಿ ಹೇಗೋ ತಪ್ಪಿಸಿಕೊಂಡು ಮೆಲ್ಲಗೆ ಅಲ್ಲಿಂದ ಜಾರುತ್ತಿದ್ದ. ಮದುವೆ ಹತ್ತಿರ ಬರುತ್ತಿದ್ದಂತೆ ವೇಣುವಿನ ಬರುವಿಕೆ ಕಡಿಮೆಯಾಗುತ್ತಾ ಕೊನೆಗೆ ನಿಂತೇ ಹೋಯಿತು.

ನಾರಾಯಣ ಬಂದರೂ ಪ್ರಯೋಜನವಿಲ್ಲ. ಅವನಿಗೇ ಬದುಕುವುದು ಕಷ್ಟವಾಗಿರುವಾಗ ರತ್ನಳ ಕಷ್ಟವನ್ನು ಪರಿಹರಿಸುವುದು, ಅವಳ ಬಯಕೆ ಪೂರೈಸುವುದು ಸಾಧ್ಯವೇ ಇರಲಿಲ್ಲ. ಅವನು ಆಗಾಗ ಬರುತ್ತಿದ್ದರೂ ರತ್ನಳಿಗೆ ಅವನಲ್ಲಿ ಅಷ್ಟೇನೂ ಆಸಕ್ತಿ ಉಳಿಯಲಿಲ್ಲ.

* * *

ಶ್ರೀನಿವಾಸನಿಗೆ ಕೆಲಸ ಹೋಯಿತು. ಜೊತೆಗೆ ಪೋಲಿಸರು ಅವನನ್ನು ಸ್ಟೇಷನನ್ನಿಗೆ ಎಳೆದೊಯ್ದರು. ಟಿಕೇಟು ಮಾರಾಟದಿಂದ ಬಂದ ಐದು ನೂರು ರೂಪಾಯಿಗಳನ್ನು ಮ್ಯಾನೇಜರನಿಗೆ ಕೊಡುವುದಕ್ಕೆ ಬದಲಾಗಿ ಕಬಳಿಸಿ, ಹಣ ಕಳುವಾಯಿತೆಂದು ಸುಳ್ಳು ಹೇಳಿದ. ಹೆದರಿಸಿ ಬೆದರಿಸಿದರೂ ಶ್ರೀನಿವಾಸ ಹಣ ಕೊಡದೆ ಹೋದಾಗ ಮ್ಯಾನೇಜರ್ ಅವನನ್ನು ಪೋಲಿಸಿಗೆ ಒಪ್ಪಿಸಿದ.

ಇವರ ವ್ಯವಹಾರಗಳಿಂದ ಬೇಸತ್ತ ಮನೆಯ ಮಾಲೀಕರು, ಇಂತಹ ಜನ ಸಂಸಾರಸ್ಥರ ಜೊತೆಗಿದ್ದರೆ ಕೇಡೆಂದು ಭಾವಿಸಿ, ಕೂಡಲೇ ಮನೆ ಖಾಲಿ ಮಾಡಬೇಕೆಂದು ಹೇಳಿದ. ರತ್ನಳಿಗೆ ದಿಕ್ಕು ತೋಚದಂತಾಯಿತು. ಯಾರ ಕಾಲು ಹಿಡಿಯುವುದೆಂದು ಚಿಂತಿಸಿದಳು. ಅವಳ ತಾತ್ಕಾಲಿಕ ಗೆಳೆಯರಾರೂ ಅವಳ ಸಹಾಯಕ್ಕೆ ಬರಲಿಲ್ಲ. ಶ್ರೀನಿವಾಸನ ಮ್ಯಾನೇಜರನ್ನೇ ಕಾಲು ಹಿಡಿಯುವುದೆಂದು ನಿಶ್ಚಯಿಸಿ, ಆತನ ಮನೆಯ ವಿಳಾಸವನ್ನು ಹುಡುಕಿಕೊಂಡು ಹೋದಳು, ಅದೃಷ್ಟಕ್ಕೆ ಆತ ಮನೆಯಲ್ಲೇ ಇದ್ದ. ರತ್ನ ಅವನ ಮುಂದೆ ತೀರಾ ವಿನೀತವಾಗಿ ಶ್ರೀನಿವಾಸನನ್ನು ಬಿಡಿಸಬೇಕೆಂದು ಯಾಚಿಸಿದಳು. ಮ್ಯಾನೇಜರು ರತ್ನಳ ದೈನ್ಯತೆಗೆ ಕರಗಿದ. ಅವಳಿಗೆ ಭರವಸೆ ಕೊಟ್ಟು ಕಳುಹಿಸಿದ, ಮಾರನೆಯ ದಿನವೇ ಶ್ರೀನಿವಾಸ ಪೋಲೀಸ್ ಠಾಣೆಯಿಂದ ಹಿಂದಿರುಗಿದ. ರತ್ನಳ ಮುಂದೆ ಅವನಿಗೆ ತೀರಾ ನಾಚಿಕೆಯೆನಿಸಿತು, 'ಸಣ್ಣವನಂತೆ ಅವಳ ಮುಂದೆ

ಕಾಣುವಂತಾಯಿತಲ್ಲ'–ಎಂದು ಚಿಂತಿಸಿದ. ಅವಳ ಮನಸ್ಸಿನ ಈ ಭಾವನೆ ಹೋಗಬೇಕು, ಎಂದು ಆಲೋಚಿಸಿ 'ರತ್ನ ಖಂಡಿತ ನಾನು ಕಳ್ಳತನ ಮಾಡಲಿಲ್ಲ. ಜೇಬಿನಲ್ಲಿಟ್ಟುಕೊಂಡಿದ್ದೆ. ಅದು ಹೇಗೋ ಕಳುವಾಯಿತು'–ಎಂದು ತಿಳಿಸಿ ಹೇಳಲು ಪ್ರಯತ್ನಿಸಿದ.

'ನಾನು ನಿಮ್ಮನ್ನು ಕಳ್ಳ ಎಂದು ಕರೆಯಲಿಲ್ಲವಲ್ಲ? ನಿಮಗ್ಯಾಕೆ ಆ ಸಂಶಯ. ಅಂತೂ ಬಿಡಿಸಿಕೊಂಡು ಬಂದರಲ್ಲ ಅದೇ ಪುಣ್ಯ'–ಎಂದಳು.

'ನನ್ನನ್ನು ಹೇಗೆ ಬಿಟ್ಟರೊ ನನಗೇ ತಿಳಿಯದು. ಆ ಮೇಲೆ ಮ್ಯಾನೇಜರರು ನಿಜ ತಿಳಿದು ನನ್ನನ್ನು ಬಿಡಿಸಿದ್ರು' –ಎಂದ ಗರ್ವದಿಂದ.

ಹೌದೌದು, ಕಾಲಿಗೆ ಬಿದ್ದು ಕೇಳಿದ್ದಕ್ಕೆ ಬಿಡಲಿಲ್ಲ. ನೀವು ಮಹಾಸಾಚ, ಸತ್ಯ ಹರಿಶ್ಚಂದ್ರನ ವಂಶದವರೂಂತ ಬಿಟ್ಟಿಟ್ಟರು, ಹೌದಲ್ಲ?– ಆ ಧ್ವನಿಯಲ್ಲಿ ಅಣಕವಿತ್ತು.

ರತ್ನಳಿಗೆ ಇತ್ತೀಚೆಗೆ ತೀರಾ ಬೇಸರವೆನಿಸಿತ್ತು. ತೌರಿಗೆ ಹೋಗಿ ಬರೋಣವೆನಿಸಿತು. ತಾಯಿಯನ್ನು ನೋಡಿಯೂ ತುಂಬಾ ದಿನಗಳಾಗಿತ್ತು. ಒಂದೆರಡು ದಿವಸ ಇದ್ದು ಬರೋಣವೆಂದು ಯೋಚಿಸಿ ಶ್ರೀನಿವಾಸನಿಗೆ ಹೇಳಿದಳು.

ಶ್ರೀನಿವಾಸ ಪ್ರತಿ ಹೇಳಲಿಲ್ಲ. ಒಂದು ವಿಧದಲ್ಲಿ ಇದು ಒಳ್ಳೆಯದೇ ಎನಿಸಿತು. ಹೇಗಿದ್ದರೂ ಕೆಲಸ ಹೋಗಿದೆ. ಜೀವನ ನಡೆಸುವುದೂ ಕಷ್ಟವಾಗಿದೆ. ಅವಳು ಹೋದರೆ, ಬರುವಷ್ಟು ಹೊತ್ತಿಗೆ ಯಾವುದಾದ್ರೂ ಕೆಲ್ಸ ಸಿಕ್ಕೀತು ಎಂದು ಲೆಕ್ಕಾಚಾರ ಹಾಕಿದ.

ರತ್ನ ವೀಣಾಳೊಂದಿಗೆ ತೌರಿಗೆ ಹೋದಳು. ಶ್ರೀನಿವಾಸ ಪ್ರತಿನಿತ್ಯ ಕೆಲಸಕ್ಕಾಗಿ ಅಲೆದಾಡಿದ. ಗೆಳೆಯರೊಂದಿಬ್ಬರು ಮತ್ತೆ ಶ್ರೀನಿವಾಸನ ನೆರವಿಗೆ ಬಂದರು. ಜೊತೆಗೆ ಅವನ ದೂರದ ಸಂಬಂಧಿಯೊಬ್ಬ ಸಿಕ್ಕಿದ. ತಂದೆಯ ಕಡೆ ನೆಂಟ ದೂರದ ಸಂಬಂಧದಲ್ಲಿ ಶ್ರೀನಿವಾಸ ಅವನಿಗೆ ಅಣ್ಣನಾಗುತ್ತಾನೆ.

ಹೋಟೆಲೊಂದರಲ್ಲಿ ಕಾಫಿ ಕುಡಿಯುತ್ತಿದ್ದ ಶ್ರೀನಿವಾಸನ ಕಣ್ಣಿಗೆ ಅವನು ಬಿದ್ದ, ಕೂಡಲೇ ಹಲ್ಲು ಕಿಸಿಯುತ್ತಾ ಶ್ರೀನಿವಾಸ, ಏನೋ ವಾಸು ಇಲ್ಲಿ? ಬೆಂಗಳೂರಿಗೆ ಯಾವಾಗ ಬಂದೆ? – ಎಂದು ಕೇಳಿದ, ವಾಸುವಿಗೆ ಶ್ರೀನಿವಾಸನನ್ನು ನೋಡಿ ಸುಮಾರು ವರ್ಷಗಳಾಗಿದ್ದವು. ಕೂಡಲೇ ಪರಿಚಯ ಹತ್ತಲಿಲ್ಲ. ಆಮೇಲೆ ಅವನಿಗೆ ಗುರುತು ಹತ್ತಿತ್ತು. ಓಹ್ ಸೀನಣ್ಣ ಚೆನ್ನಾಗಿದ್ದೀರಾ! ನನಗೆ ಇಲ್ಲೇ ಕೆಲ್ಸ ಆಯ್ತು ಅದಕ್ಕೆ ಇಲ್ಲೇ ಇದ್ದೇನೆ ಎಂದ.

ಚಿಕ್ಕಮ್ಮ, ಚಿಕ್ಕಪ್ಪ, ನಿನ್ನ ತಮ್ಮಂದಿರು ಎಲ್ಲಾ ಚೆನ್ನಾಗಿದ್ದಾರಾ? ಅವರೂ ನಿನ್ನ ಜೊತೇನೇ ಬಂದು ಬಿಟ್ರಾ ಹೇಗೆ?'–ಎಂದು ವಿಚಾರಿಸಿದ.

ಇಲ್ಲಣ್ಣ ನಾನು ಮಾತ್ರ, ಇಲ್ಲೇ ರಾಜಾಜಿನಗರದ ನಾಲ್ಕನೇ ಬ್ಲಾಕಿನಲ್ಲಿ ಒಂದು ಮನೆ ತಗೊಂಡಿದ್ದೀನಿ. ಪ್ರಸ್ತುತ ಇಲ್ಲೇ ಇದ್ದೀನಿ–ಒಬ್ಬನೇ. ಅಪ್ಪನಿಗೆ ವಿಪರೀತ ಖಾಯಿಲೆ. ಅವರನ್ನು ಇಲ್ಲಿಗೆ ತರೋದು ಸಾಧ್ಯವಿಲ್ಲ. ಅಮ್ಮನಿಗೂ ಮೊದಲೇ ಈ ಊರಿಗೆ

ಬರೋದೇ ಇಷ್ಟವಿಲ್ಲ. ಇನ್ನೊಂದಾರು ತಿಂಗಳಿಗೆ ಗೋಪೀನೂ ನಂ ಜೊತೆ ಬಂದು ಇರ್ತಾನೆ. ಅವನಿಗೂ ಇಲ್ಲೇ ಕೆಲ್ಸ ಆಗೋ ಹಾಗಿದೆ. ನಮ್ಮ ಸೋದರ ಮಾವನೇ ಕೊಡಿಸ್ತೀನೀಂತ ಪ್ರಾಮಿಸ್ ಮಾಡಿದ್ದಾರೆ. ಅಂದಹಾಗೆ ನೀವೆಲ್ಲಿ ಕೆಲ್ಸ ಮಾಡ್ತಿದ್ದೀರಿ?– ಎಂದು ಕೇಳಿದ.

ಶ್ರೀನಿವಾಸ ನಿಟ್ಟುಸಿರು ಬಿಟ್ಟು ಎಲ್ಲೂ ಇಲ್ಲ, ಇದೋ ಬೆಳಗಿನಿಂದ ಕೆಲಸಕ್ಕೇಂತಲೇ ಅಲೆದಾಡ್ತಿದ್ದೀನಿ. ಏನೂ ಪ್ರಯೋಜನವಾಗಲಿಲ್ಲ. ನಿಮ್ಮತ್ತಿಗೇನೂ ಊರಲಿಲ್ಲ. ತೌರಿಗೆ ಹೋಗಿದ್ದಾರೆ – ಎಂದ.

ಶ್ರೀನಿವಾಸನ ಕಷ್ಟಕೇಳಿ ವಾಸುವಿನ ಮನಸ್ಸು ಕರಗಿತು. ಮನಸ್ಸಿನಲ್ಲೇ ಪೇಚಾಡಿದ. ಕೆಲಸ ಕೊಡಿಸುವುದು ತನ್ನ ಕೈಯಲ್ಲಿ ಸಾಧ್ಯವಿದ್ದಿದ್ದರೆ–ಎಂದು ಯೋಚಿಸಿದ. ಸ್ವಲ್ಪ ಹೊತ್ತು ಸುಮ್ಮನೆ ಕೂತ. ಅಷ್ಟರಲ್ಲಿ ಬೇರರ್ ಬಿಲ್ಲನ್ನು ತಂದುಕೊಟ್ಟ. ವಾಸುವೇ ಎರಡು ಬಿಲ್ಲುಗಳಿಗೂ ಹಣ ಸಲ್ಲಿಸಿ ಎದ್ದ.

'ತುಂಬಾ ಸಂತೋಷವಾಯ್ತು, ಯಾವಾಗಲಾದರೂ ಮನೆ ಕಡೆ ಬನ್ನಿ'–ಎಂದು ಮನೆಯ ವಿಳಾಸವನ್ನು ಬರೆದುಕೊಟ್ಟ, ಶ್ರೀನಿವಾಸ ಆ ಚೀಟಿಯನ್ನು ತೆಗೆದುಕೊಳ್ಳುತ್ತಾ' ನೀನೂ ಬಾ ವಾಸು, ನಿಮ್ಮತ್ತಿಗೆ ಬರುತ್ತಲೇ ನಿನ್ನನ್ನು ಕರೀತೀನಿ. ತಪ್ಪದೇ ಬರಬೇಕು. ಆಗಾಗ ಬಂದು ಹೋಗ್ತಿದ್ದರೇನೇ ತಿಳಿಯೋದು?......ಬರ್ತೀತಾನೇ' ಎಂದ. ಖಂಡಿತ ಬರ್ತೀನಿ. ಅತ್ತಿಗೆಗೆ ನಮಸ್ಕಾರ ಹೇಳಿ, ನಾನಂತೂ ಅವರನ್ನು ನೋಡಿಯೇ ಇಲ್ಲ. ಈ ಸಲ ಅವಕಾಶ ಸಿಕ್ಕಾಗ ಮಾತ್ರ ತಪ್ಪಿಸಿಕೊಳ್ಳಲ್ಲ – ಎಂದು ಹೇಳುತ್ತಾ ಇಬ್ಬರೂ ಬೇರೆ ಬೇರೆ ದಾರಿ ಹಿಡಿದರು.

ಶ್ರೀನಿವಾಸನಿಗೆ ಮನೆಗೆ ಹೋಗುವ ಮನಸ್ಸಾಗಲಿಲ್ಲ. ರತ್ನಳೂ ಮನೆಯಲ್ಲಿರಲಿಲ್ಲ. ಮಾಡುವುದಕ್ಕೆ ಏನೂ ತೋಚದೆ ಲಾಲ್‌ಬಾಗ್‌ನತ್ತ ನಡೆದ. ಮಧ್ಯಾಹ್ನದ ಹೊತ್ತು ಅಲ್ಲಿಗೆ ಹೋಗಿ ಮಾಡುವುದೇನೂ ಇರಲಿಲ್ಲ–ಆದರೂ ಹೋದ. ಬೇಸಿಗೆ ಕಾಲವಾದ್ದರಿಂದ ಅಲ್ಲಿನ ಮರಗಿಡವೊಂದರಲ್ಲಿಯೂ ಹಸಿರು ಕಾಣುವುದು ಅಪರೂಪವಾಗಿತ್ತು. ತರಗೆಲೆಯನ್ನು ತಲೆ ತುಂಬಾ ಮುಡಿದ, ಮರಗಿಡ-ಳು ಗಾಳಿ ಬೀಸಿದರೆ, ಸರಸರ ತರಗೆಲೆಯನ್ನು ಉದುರಿಸುತ್ತಿತ್ತು. ಅಲ್ಲೊಂದು ಇಲ್ಲೊಂದು ಗತವೈಭವದ ಸ್ಮೃತಿಯನ್ನು ಮಾತ್ರ ಹಸಿಯಾಗಿ ಉಳಿಸಿಕೊಂಡು ಅವುಗಳ ಮೆಲುಕನ್ನೇ ಆಹಾರವಾಗಿಸಿಕೊಂಡು ಬದುಕಿನಿಂತ ಅಸ್ಥಿಪಂಜರದಂತೆ ಕಂಡವು ಮರಗಳು.

ವಿಪರೀತ ಬಿಸಿಲು, ತಣ್ಣನೆಯ ನೆರಳನ್ನು ಹುಡುಕಿಕೊಂಡು ಹೊರಟ ಶ್ರೀನಿವಾಸನಿಗೆ ತೀರಾ ಒಳಭಾಗಕ್ಕೆ ಬಂದಾಗ ಒಂದು ಜಾಗ ಸಿಕ್ಕಿತು. ಬಿಸಿಲನ್ನು ನುಂಗಿಕೊಂಡು ಹೇಗೋ ತನ್ನ ಹಸುರನ್ನು ಉಳಿಸಿಕೊಂಡ ಒಂದಷ್ಟು ಸಾಲುಮರಗಳ ಕೆಳಗೆ ಕಲ್ಲುಬೆಂಚಿನ ಮೇಲೆ ಕುಳಿತ. ಕಣ್ಣು ಎಳೆದಂತಾಯಿತು. ಮೆಲ್ಲಗೆ ಬೆಂಚಿನ ಮೇಲೆಯೇ ಮೈಚಾಚಿದ. ಕೂಡಲೇ ಕನಸುಗಳು ಅವನನ್ನು ಪೂರ್ತಿ ಮರೆಸಿಬಿಟ್ಟವು. ದೊಡ್ಡ ಕೆಲಸ, ಕೈತುಂಬಾ

ಸಂಬಳ, ರಾಣಿಯಂತೆ ರತ್ನ ಪಕ್ಕದಲ್ಲಿದ್ದಾಳೆ. ವೀಣಾ ಪುಟ್ಟ ಯುವರಾಣಿಯಂತೆ ಅಲಂಕರಿಸಿಕೊಂಡಿದ್ದಾಳೆ. ಅದು ಮರೆಯಾಯಿತು. ಮತ್ತೊಂದು ದೊಡ್ಡ ಬಂಗಲೆ, ಕೈತುಂಬಾ ಆಳುಕಾಳು. ತಾನು ಅವರ ಮೇಲೆಲ್ಲಾ ಅಧಿಕಾರ ಚಲಾಯಿಸುತ್ತಿದ್ದಾನೆ. ದೊಡ್ಡ ವ್ಯಕ್ತಿಗಳೆಲ್ಲಾ ತನ್ನ ಗೆಳೆಯರು. ಮೇಜಿನ ಸುತ್ತ ಗೆಳೆಯರ ಗುಂಪು. ಅವರೊಂದಿಗೆ ಎಲೆಯಾಟದಲ್ಲಿ ತಾನು ಮೈ ಮರೆತಿದ್ದಾನೆ. ಕಂಠಪೂರ್ತಿ ಕುಡಿದರೂ, ದಿನಗಟ್ಟಲೇ ಆಡಿದರೂ ತನ್ನನ್ನು ಪ್ರಶ್ನಿಸುವವರಿಲ್ಲ. ತಾನು ಹೊರಟರೆ ದಾರಿಯುದ್ದಕ್ಕೂ ತನಗೆ ಸಲಾಮು ಹೊಡೆಯುವವರೆ! ಅದನ್ನು ನೋಡಿದಾಗ ತನ್ನಲ್ಲೇ ನಕ್ಕ. ಮರದ ಮೇಲಿದ್ದ ಹಕ್ಕಿಯ ಹಿಕ್ಕೆ ತಣ್ಣಗೆ ಅವನ ಮೇಲೆ ಬಿದ್ದು ಎಚ್ಚರವಾಯಿತು. ಕೈ ನೋಡಿಕೊಂಡ. ಗಡಿಯಾರವಿಲ್ಲದ್ದು ನೆನಪಾಯಿತು. ಹದಿನೈದು ದಿನಗಳ ಹಿಂದೆ ಕುದುರೆ ರೇಸಿನಲ್ಲಿ ಸೋತು ಬಂದಿದ್ದ. ಹಣ ಕೊಡಲಾಗದೆ ಕೈಗಡಿಯಾರ ಸುಲಿದು ಕೊಟ್ಟುಬಿಟ್ಟಿದ್ದ. ಎದ್ದು ಮೆಲ್ಲನೆ ಮನೆಯ ಕಡೆ ಹೆಜ್ಜೆ ಹಾಕಿದ. ಹೊಟ್ಟೆ ಮತ್ತೆ ಚುರುಗುಟ್ಟಲಾರಂಭಿಸಿತ್ತು. ಮನೆ ತಲುಪಿದ ಕೂಡಲೆ ಒಂದಿಷ್ಟು ಅನ್ನ ಬೇಯಿಸಿಕೊಂಡು ತಿನ್ನಬೇಕೆಂದುಕೊಂಡ. ಆದರೆ ಅಕ್ಕಿ ಡಬ್ಬ ಖಾಲಿಯಾಗಿತ್ತು. ಒಂದೆರಡು ಲೋಟ ತಣ್ಣೀರು ಕುಡಿದು ತಣ್ಣಗೆ ಮಲಗಿಕೊಂಡ. ನಿದ್ದೆ ಹತ್ತಲಿಲ್ಲ. ಲಾಲ್‌ಬಾಗ್‌ನಲ್ಲಿ ಚೆನ್ನಾಗಿ ನಿದ್ದೆ ಮಾಡಿದ್ದ, ರತ್ನಳ ನೆನಪು ಬಂತು. ಅವಳಿದ್ದರೆ ಒಂದೆರಡು ಕಾಸಾದರೂ ಸಿಗುತ್ತಿತ್ತು. ಸಿಗರೇಟು ಸೇದುವ ಆಸೆಯಾಯಿತು. ಆದರೆ ಜೇಬು ಖಾಲಿ. ಎದ್ದು ಮನೆಯಲ್ಲೆಲ್ಲಾ ತಡಕಾಡಿದ. ಡಬ್ಬಗಳೆಲ್ಲ ಶೋಧಿಸಿದ. ಸಾಸುವೆ ಡಬ್ಬದಲ್ಲಿ ಒಂದೆಂಟಾಣೆ ಸಿಕ್ಕಿತು. ಸದ್ಯಕ್ಕೆ ಅಷ್ಟೇ ಸಾಕೆನಿಸಿತು. ಸಿಗರೇಟು ಕೊಂಡು ತರಬೇಕು. ಮನೆಯ ಹೊರಗೆ ಬಂದ. ಯಾರಾದರೂ ಹುಡುಗರು ಸಿಕ್ಕಾರೇನೋ ಎಂದು ನೋಡಿದ. ಒಂದಿಬ್ಬರು ಹುಡುಗರು ಗೋಲಿ ಆಡುತ್ತಿದ್ದರು. ಅವರನ್ನು ಒಂದೆರಡು ಸಿಗರೇಟು ತರಲು ಹೇಳಿದ. 'ಹಾಗೇ ನೀವು ಇಬ್ಬರೂ ಒಂದೊಂದು ಚಾಕಲೆಟ್ ತೊಗೊಳ್ಳಿ'–ಎಂದು ಹೇಳಿದಾಗಲಂತೂ ಆ ಇಬ್ಬರು ಹುಡುಗರೂ ಖುಷಿಯಿಂದ ಓಡಿದರು.

ಸಿಗರೇಟು ಕುಡಿಯುತ್ತಾ ಗುಂಗುರು ಗುಂಗುರಾಗಿ ಹೊಗೆ ಬಿಡುತ್ತಾ ಶ್ರೀನಿವಾಸ ಯೋಚನೆಗಿಳಿದ. ರತ್ನಳಿಲ್ಲದ್ದು ಬೇಸರವೆನಿಸಿತು. ಹೊರಗಿನವರು ಏನಿದ್ದರೂ ಇಷ್ಟೊಂದು ಖುಷಿ ಕೊಡಲಾರರು. ಅನ್ಯಾಯವಾಗಿ ಅವಳನ್ನು ಬೈದೆ – ಎಂದುಕೊಂಡ. ರತ್ನಳಿಗೆ ಬೇಗ ಬರುವಂತೆ ಪತ್ರ ಬರೆಯಬೇಕು ಎಂದುಕೊಂಡ. ಕೂಡಲೇ ಎದ್ದು ಹಾಳೆಯೊಂದನ್ನು ಹುಡುಕಿ ತಂದು ಸರಸರ ಒಂದೆರಡು ಸಾಲು ಗೀಚಿ ಮಡಚಿ ಜೇಬಿನಲ್ಲಿಟ್ಟುಕೊಂಡ. ಸದ್ಯಕ್ಕೆ ಹೊರಗೆ ಹೋಗುವಂತಿರಲಿಲ್ಲ. ಆತುರವಾಗಿ ಪತ್ರ ಬರೆದರೂ ಅದನ್ನು ಅಂಚೆಗೆ ಹಾಕಲು ಹೋಗಲಿಲ್ಲ. ನಾಳೆ ಬೆಳಿಗ್ಗೆ ಹಾಕಿದರಾಯಿತು ಎಂದುಕೊಂಡ.

* * *

ಶ್ರೀನಿವಾಸನ ಪತ್ರ ತಲುಪಿದ್ದೇ ತಡ ರತ್ನ ಓಡೋಡಿ ಬಂದಳು. ಗಂಡನ ಮೇಲಿನ ಪ್ರೀತಿಯಿಂದೇನೂ ಬರಲಿಲ್ಲ. ಅವಳಿಗೆ ಹಳ್ಳಿಯ ಬದುಕು ಬೇಸರ ಬರಿಸಿತ್ತು. ಜೊತೆಗೆ ಎಲ್ಲಿಯಾದರೂ ಹೊರಗೆ ಹೋದರೆ ಸಾಕು, ಎಲ್ಲರೂ ದುರುಗುಟ್ಟಿ ಇವಳತ್ತ ನೋಡುವವರೇ! ಅವರ ಆ ಚುಚ್ಚುಗಣ್ಣುಗಳನ್ನು ಎದುರಿಸಲು ಆಗಲಿಲ್ಲ.

ತಾಯಿಯೇನೋ ಬಲವಂತ ಮಾಡಿದಳು ಇನ್ನೊಂದೆರಡು ದಿನವಿರುವಂತೆ. ಜಲಜಳ ಒತ್ತಾಯವೂ ಇತ್ತು. ರತ್ನಳ ರೂಪ ಅವಳಲ್ಲಿ ಅಸೂಯೆ ಮೂಡಿಸಿತ್ತು. ಆದರೂ ಅವಳಿಗೂ ಸ್ನೇಹಿತರಿಲ್ಲದ ಬೇಸರ, ಇವಳನ್ನು ಇನ್ನಷ್ಟು ದಿನ ಉಳಿಯುವಂತೆ ಕೇಳಿಕೊಳ್ಳುವ ಹಾಗೆ ಮಾಡಿತ್ತು.

ರತ್ನ ಮಾತ್ರ ಯಾರ ಪ್ರಾರ್ಥನೆಯನ್ನೂ ಮನ್ನಿಸಲಿಲ್ಲ ನೆಟ್ಟಗೆ ಹೊರಟು ಬಂದುಬಿಟ್ಟಳು. ಶ್ರೀನಿವಾಸನಿಗೆ ತುಂಬಾ ಖುಷಿಯಾಯಿತು. ತನ್ನ ಮಾತಿಗೆ ಬೆಲೆಕೊಟ್ಟು ಬಂದಿದ್ದಾಳೆಂದೇ ಭಾವಿಸಿದ. ಉಲ್ಲಾಸದಿಂದಲೇ ಒಂದೆರಡು ದಿನ ಕಳೆದರು. ಶ್ರೀನಿವಾಸ, ವಾಸುವಿನ ಬಗ್ಗೆ ಹೇಳಿದ. ರತ್ನಳಿಗೂ ಶ್ರೀನಿವಾಸನ ವಿವರಣೆಯಿಂದ, ವಾಸುವನ್ನು ನೋಡಬೇಕೆಂಬ ಕುತೂಹಲ ಮೂಡಿತು.

ಒಂದು ದಿನ ಶ್ರೀನಿವಾಸ ವಾಸುವನ್ನು ಮನೆಗೆ ಕರೆತಂದ. ರತ್ನಳಿಗೆ ಅವನ ಪರಿಚಯ ಮಾಡಿಸಿದ. ರತ್ನ ಕಣ್ಣಗಲಿಸಿ ವಾಸುವನ್ನು ನೋಡಿದಳು. ವಾಸು ಸ್ವಲ್ಪ ಸಂಕೋಚ ಸ್ವಭಾವದವ. ಎರಡೂ ಕೈ ಜೋಡಿಸಿ ತಲೆ ಬಗ್ಗಿಸಿ, 'ತುಂಬಾ ಸಂತೋಷವಾಯಿತು ಅತ್ತಿಗೆ ನಿಮ್ಮನ್ನು ನೋಡಿ'–ಎಂದ.

ರತ್ನ ಮುಗುಳುನಗುತ್ತಾ ಹೇಳಿದಳು, ನೋಡಿ ನನಗೂ ಯಾರ ಬಂಧುಗಳ ಪರಿಚಯವೂ ಇಲ್ಲದೆ ಬೇಸರವೆನಿಸಿತ್ತು. ನೀವೊಬ್ಬರು ಸಿಕ್ಕಿದ್ದು ನನಗೆ ತುಂಬಾ ಸಂತೋಷವಾಯಿತು. 'ಆಗಾಗ ಬರುತ್ತಿರಿ' ಎಂದಳು. ವಾಸುವಿಗೆ ಇಷ್ಟೊಂದು ಆತ್ಮೀಯತೆಯಿಂದ ಮಾತಾಡಿಸುವವರೂ ಇದೇ ಮೊದಲು ಎನಿಸಿತು. ಅತ್ತಿಗೆಯ ಮಾತೂ ಚೆಂದ; ಆಕೆಯ ರೂಪವೂ ಚೆಂದ ಎಂದುಕೊಂಡ. ಮಾತು ಮಾತಿನ ಮಧ್ಯೆ ಶ್ರೀನಿವಾಸ ತಾನು ಮನೆ ಖಾಲಿ ಮಾಡಬೇಕಾಗಿದೆಯೆಂದು ತಿಳಿಸಿದ. ವಾಸುವಿಗೆ ನೋವಾಯಿತು ಅವನದು ಹೆಂಗರುಳು. ಯಾರೊಬ್ಬರು ಕಷ್ಟವೆಂದರೂ ತನಗೆ ತನ್ನವರಿಗೆ ಆಗುವ ಕಷ್ಟವನ್ನೂ ಮರೆತು ಇರುವುದನ್ನೆಲ್ಲಾ ಕೊಟ್ಟು ಬಿಡುತ್ತಿದ್ದ. ಶ್ರೀನಿವಾಸ ಮನೆಯ ವಿಚಾರ ಹೇಳಿದಾಗ, ತನ್ನ ಮನೆಯಲ್ಲೇ ಯಾಕಿರಬಾರದು ಇವರು? ಹೇಗಿದ್ದರೂ ಪ್ರಸ್ತುತ ತಾನೊಬ್ಬನೇ! ಬಂದರೆ, ತಮ್ಮ ಒಬ್ಬ. ಅಮ್ಮ ಅಂತೂ ಅಪ್ಪನನ್ನು ಬಿಟ್ಟುಬರುವುದಿಲ್ಲ. ನನ್ನೊಬ್ಬನಿಗೆ ಅಷ್ಟು ಮನೆಯೂ ದೊಡ್ಡದು' ಎಂದು ಯೋಚಿಸಿದ.

ವಾಸುವಿನ ಮುಖವನ್ನು ಕಂಡ ಶ್ರೀನಿವಾಸ 'ಯಾಕೆ ವಾಸು ಇದ್ದಕ್ಕಿದ್ದಂತೆ ಸುಮ್ಮನಾಗಿ ಬಿಟ್ಟೆ? ನಾನು ಹೇಳಿದ್ದು ನಿನ್ನ ಮನಸ್ಸಿಗೆ ಬೇಸರವಾಯಿತೋ ಏನೊ' ಎಂದ.

ಹಾಗೇನಿಲ್ಲ, ನನ್ನದೊಂದು ಆಲೋಚನೆ ಇದೆ........ನೀವು ಅದಕ್ಕೆ ಒಪ್ಪುವುದಾದರೆ ಬಂದಿರುವ ಮನೆ ಸಮಸ್ಯೆ ಪರಿಹಾರವಾಗುತ್ತೆ. ನಾನಿರುವುದು ಒಬ್ಬನೇ, ಅಕಸ್ಮಾತ್ ತಮ್ಮ ಬಂದರೂ ಚಿಂತೆಯಿಲ್ಲ. ನೀವೆಲ್ಲಾ ನನ್ನ ಮನೆಗೇ ಬಂದು ಇರಬಹುದಲ್ಲಾ? ಅಷ್ಟು ದೊಡ್ಡ ಮನೆಗೆ ಒಬ್ಬನೇ ಇದ್ದು ಅಷ್ಟೊಂದು ಬಾಡಿಗೆ ಕೊಟ್ಟು ವ್ಯರ್ಥ ಯಾಕೆ ಮಾಡ್ಬೇಕು. ನಿಮಗೂ ಉಪಯೋಗವಾದರೆ ದುಡ್ಡು ಕೊಟ್ಟಿದ್ದಕ್ಕೂ ಸಾರ್ಥಕವೆನಿಸುತ್ತದೆ' ಎಂದ.

ಕೂಡಲೇ ಶ್ರೀನಿವಾಸನಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ರತ್ನಳೊಂದಿಗೆ ಚರ್ಚಿಸಿದ ಹೊರತು ಯಾವುದನ್ನೂ ಹೇಳುವುದಕ್ಕೆ ಹಿಂಜರಿದ. ಆದರೆ ಶ್ರೀನಿವಾಸನಿಗೇನೋ ವಾಸುವಿನ ಸೂಚನೆ ತೀರಾ ಹಿಡಿಸಿತು. ಜೊತೆಗೆ ಲಾಭದಾಯಕವೆಂದೂ ಅನಿಸಿತು. ರತ್ನಳು ಏನು ಹೇಳುತ್ತಾಳೋ ಅನ್ನುವದಷ್ಟೇ ಸಂಶಯವಿತ್ತು.

ಇಬ್ಬರಿಂದಲೂ ಯಾವೊಂದು ಪ್ರತಿಕ್ರಿಯೆ ಬರದದ್ದನ್ನು ನೋಡಿ, 'ಅತ್ತಿಗೆ ಬೇಕಾದರೆ ಯೋಚನೆ ಮಾಡಿ ಹೇಳಿ. ಈಗಲೇ ಆತುರವೇನಿಲ್ಲ' ಎಂದ ವಾಸು.

ನಿನಗೇನೋ ಆತುರವಿಲ್ಲ ವಾಸು. ಆದರೆ ನಮಗೇನೇ. ಮನೆಯವರ ಕಾಟ ತಡೆಯೋಕಾಗೊಲ್ಲ. ದಿನಕ್ಕೊಂದು ಕೊಂಕು ಮಾತು ಆಡುತ್ತಲೇ ಇರ್ತಾರೆ. ನಾವೇನೋ ಮರ್ಯಾದೆಗೆಟ್ಟ ಜನವಂತೆ, ಇವರು ಮಹಾ ನಾವು ಮರ್ಯಾದೆ ಕಳ್ಕೊಂಡಿದ್ದನ್ನು ನೋಡಿದ್ದಾರೆ? ಒಬ್ಬರ ಹತ್ತಿರ ಸ್ವಲ್ಪ ಫ್ರೀಯಾಗೊ ಮಾತಾಡಿದರೆ ಕಿಟಕಿ, ಬಾಗಿಲುಗಳ ಸಂದಿಯಿಂದ ಕಳ್ಳರ ಹಾಗೆ ಕದ್ದು ನೋಡಿ ಏನೋ ಆಗೋಯ್ತು ಅನ್ನೋ ಹಾಗೆ ಎಗರಾಡ್ತಾರೆ. ತಮ್ಮ ತಪ್ಪು ತಮಗೆ ಗೊತ್ತಾಗೋಲ್ಲ. ಅವರ ಮನೆ ಹೆಣ್ಮಕ್ಕಳು ಕಾಲೇಜಿಗಂತ ಹೋಗಿ ಕಂಡ ಕಂಡ ಹುಡುಗರ ಜೊತೆ ತಿರುಗಾಡಿ ಬರ್ತಾರೆ. ಮನೇಲಿ ಮಹಾ! ಸಾವಿತ್ರಿಯರ ಹಾಗೇ ಇರ್ತಾರೆ. ಥೂ ದರಿದ್ರ ಜನ! ಇಂತಹ ಸಣ್ಣ ಬುದ್ಧಿ ಇರುವವರೊಂದಿಗೆ ಇರೋದಕ್ಕಿಂತ ದೂರವಿದ್ರೆ ವಾಸಿ ಅವರೂನೂ ದಿನ ಬೆಳಗಾದ್ರೆ ಮನೆಬಿಡಿ ಮನೆಬಿಡಿ ಅಂತ ಒಂದೇ ಸಮನೆ ಗಂಟಲು ಹರ್ಕೊತಿದ್ದಾರೆ......ಇನ್ನೇನು ಯೋಚ್ನೆ ಮಾಡೋದಿದೆ ವಾಸು.' ನೀನು ಹೇಳಿದ ಹಾಗೆ ನಿಮ್ಮ ಮನೇಲೆ ಇದ್ಬಿಡ್ತೀವಿ. ನಾವೂ ಸಹ ಬಾಡಿಗೇನ ಹಂಚ್ಕೊತೀವಿ' ಎಂದಳು.

ಅದೆಂಥ ಮಾತು ಅತ್ತಿಗೆ? ಬಾಡಿಗೆ ಹಂಚ್ಕೊಳೋದು? ಅದೊಂದೂ ಬೇಡ. ನಾನೊಬ್ಬನೇ ಇದ್ದರೂ ಬಾಡಿಗೆ ಕೊಡೋದು ಕೊಡಲೇಬೇಕು. ನೀವು ಬಂದಿರೀಂತ ಹೆಚ್ಚೇನೂ ಕೊಡೊಲ್ಲವಲ್ಲ? ಆ ಮಾತೆಲ್ಲಾ ಮಾತಾಡಿದರೆ ಮಾತ್ರ ನನ್ನ ಮನಸ್ಸಿಗೆ ಬೇಸರವಾಗುತ್ತೆ. ದಯಪಿಟ್ಟು ಇನ್ನೊಮ್ಮೆ ಹಾಗೆ ಹೇಳ್ಬೇಡಿ ಎಂದು ಮುಖ ಸಣ್ಣದು ಮಾಡಿದ.

ರತ್ನಳಿಗೂ ಶ್ರೀನಿವಾಸನಿಗೂ ಅಷ್ಟೇ ಸಾಕಾಗಿತ್ತು. ಸಂಪಾದನೆಗೆ ದಾರಿಯಿಲ್ಲದೆ ಸಾಯುತ್ತಿರುವಾಗ ಅನಾಯಾಸವಾಗಿ ದೊರೆತ ವಾಸುವಿನ ಸಹಾಯ ಸ್ವರ್ಗ ಸಿಕ್ಕಷ್ಟೇ ಸಂತೋಷವನ್ನು ತರಿಸಿತ್ತು.

'ಆಯ್ತು ವಾಸು, ನೀ ಹೇಳಿದ್ದೇ ಸಮ, ನಿನ್ನ ಮನಸ್ಸಿಗೆ ಬೇಸರವಾಗುವ ಹಾಗಿದ್ದರೆ ನಾನೇನೂ ಹೇಳೋಲ್ಲ' ಎಂದಳು ರತ್ನ.

ವಾಸುವಿಗೆ ರತ್ನ ಒಪ್ಪಿಕೊಂಡದ್ದೇ ಸಾಕಾಗಿತ್ತು. ಒಂಟಿ ಬದುಕು ಬೇಸರ ತರಿಸಿತ್ತು. ಕೆಲಸದಿಂದ ಬಂದ ಮೇಲೆ ಹೊತ್ತು ಕಳೆಯುವುದೇ ಕಷ್ಟವಾಗಿತ್ತು. ಯಾರೊಂದಿಗೂ ಅಷ್ಟಾಗಿ ಬೆರೆಯುವ ಸ್ವಭಾವವಾಗಿರಲಿಲ್ಲ. ಆದರೆ ಯಾರಾದರೂ ಆತ್ಮೀಯವಾಗಿ ಮಾತಾಡಿಸಿದರೆ ಮಾತ್ರ ನಾಯಿಯಂತೆ ಪ್ರಾಮಾಣಿಕವಾಗಿ ನಂಬುತ್ತಿದ್ದ. ರತ್ನಳ ಪ್ರೀತಿಯ ಮಾತು, ತನ್ನೊಂದಿಗಿನ ಅವಳ ರೀತಿ ವಾಸುವಿನ ಮನಸ್ಸನ್ನು ಅರಳಿಸಿತು. ಆತ್ಮೀಯವಾಗಿ ಮಾತನಾಡುವ, ಸ್ನೇಹದ ಸೊದೆಯನ್ನೇ ಸುರಿಸುವ ಈ ಇಬ್ಬರೂ ವಾಸುವನ್ನು ಮುಗ್ಧಗೊಳಿಸಿದರು. ಬೇಸರದ ಒಂಟಿ ಬದುಕು ಇನ್ನು ತನಗಿರಲಾರದೆಂದುಕೊಂಡ. ಅಲ್ಲಿಂದೆದ್ದು ವಾಸು ಅತ್ತಿಗೆ, ಅಣ್ಣನಿಗೆ ಹೋಗಿ ಬರುತ್ತೇನೆಂದು ಹೇಳಿದ. ರತ್ನ ಊಟ ಮಾಡಿಕೊಂಡು ಹೋಗೆಂದು ಬಲವಂತ ಪಡಿಸಿದರೂ ವಾಸು ಊಟಕ್ಕೆ ನಿಲ್ಲಲಿಲ್ಲ. ನಾಳೆ ಸಂಜೆ ಕೆಲಸದಿಂದ ಬಂದ ಕೂಡಲೇ ಅಲ್ಲಿಗೆ ಬರುವುದಾಗಿಯೂ, ಮನೆಯನ್ನು ತನ್ನ ಮನೆಗೆ ವರ್ಗಾಯಿಸೋಣವೆಂದೂ ಹೇಳಿದ. ರತ್ನ ಮುಗುಳ್ನಗುತ್ತಲೇ ಬೀಳ್ಕೊಟ್ಟಳು.

ವಾಸು ಹಗುರಾದ ಮನಸ್ಸಿನಿಂದ ಹೊರಟ. ಶ್ರೀನಿವಾಸ ರತ್ನಳಿಗಾಗಿ ಕಾದರೂ, ರತ್ನ ಶ್ರೀನಿವಾಸನಿಗಾಗಿ ಕಾಯಲಿಲ್ಲ. ಅವಳೇ ನಿರ್ಧರಿಸಿ ಬಿಟ್ಟಿದ್ದಳು. ಶ್ರೀನಿವಾಸನ ಅಭಿಪ್ರಾಯವೂ ಅದೇ ಇದ್ದುದರಿಂದ-ಮೌನವಾಗಿಯೇ ರತ್ನಳ ನಿರ್ಧಾರಕ್ಕೆ ಸಮ್ಮತಿ ಸೂಚಿಸಿದ್ದ.

ರತ್ನಳಿಗೆ ಒಂದು ದೊಡ್ಡ ಸಮಸ್ಯೆಯೇ ಪರಿಹಾರವಾದಂತಾಯಿತು. ವಾಸುವನ್ನು ನೆನೆಸಿಕೊಂಡಾಗ ಅವನ ಪೆದ್ದುತನಕ್ಕೆ ನಗು ಬಂತು. ಇಂಥವನೊಬ್ಬ ಸಿಕ್ಕಿದರೆ ಸಾಕು ನಾಯಿಯಂತೆ ಹಿಂಬಾಲಿಸಿಕೊಂಡು ಬಿದ್ದಿರುತ್ತಾನೆ ಎನಿಸಿತು.

ಪರವಾಗಿಲ್ಲ ದೇವರು ದಾರಿ ತೋರಿಸಿದ. ಕೈಲಾಗದ, ಸಂಪಾದನೆಗೆ ಯೋಗ್ಯತೆ ಇಲ್ಲದ ಈ ಗಂಡನ ಜೊತೆಗೆ ಸಹಿಸಿ ಬಾಳುವುದಕ್ಕಿಂತಲೂ, ವಾಸುವಿನ ಮನೇಲಿರುವುದು ಮೇಲು-ಅವನೊಂದಿಗೆ ಸ್ನೇಹದಿಂದಿದ್ದರೆ ಆಯ್ತು, ಮನೆಯವನಂತೆ ಜತೆಗಿರುತ್ತಾನೆ. ಅವನಿಗೂ ಆ ಮನೆಯಲ್ಲಿ ಹಿಂದು ಮುಂದು ಯಾರಿದ್ದಾರೆ? ಅವರಮ್ಮ ಇರೋದು ಊರಲ್ಲಿ. ಇಲ್ಲಿಗೆ ಬಂದ ಕಾಲಕ್ಕೆ ನೋಡಿದರಾಯ್ತು. ನಡೆಯೋಷ್ಟು ಕಾಲ ನಡೀಲಿ ಎಂದುಕೊಂಡಳು.

ಇದ್ದಕ್ಕಿದ್ದಂತೆ ರತ್ನಳು ಇಷ್ಟೊಂದು ಆತ್ಮೀಯಳಾಗುವುದರಲ್ಲಿ ಅವಳ ಸ್ವಾರ್ಥವಿತ್ತು. ಬದುಕಿನ ಸುಖವನ್ನಷ್ಟೇ ಬಯಸಿದ ರತ್ನಳಿಗೆ ನೀತಿ-ಅನೀತಿಯ ಬಗ್ಗೆ ಯಾವುದೇ ಬಗೆಯ ಕಾಳಜಿ ಇರಲಿಲ್ಲ. ನಾಲ್ಕು ಜನ ಏನಂದುಕೊಂಡಾರು ಎನ್ನುವ ಪ್ರಜ್ಞೆಯೇ ಅವಳಲ್ಲಿ ಮೂಡುತ್ತಿರಲಿಲ್ಲ. ಒಂದು ದೃಷ್ಟಿಯಿಂದ ಅವಳ ನೈತಿಕತೆಯ ಕ್ರೂರ ಪತನಕ್ಕೆ ವೈಯಕ್ತಿಕವಾಗಿ ಅವಳೆಷ್ಟು ಹೊಣೆಯೋ, ಅವಳ ಕೈ ಹಿಡಿದ ಗಂಡನೂ ಅಷ್ಟೇ ಹೊಣೆಯಾಗಿದ್ದ. ಬದುಕಿನ ಗಂಭೀರತೆಯು ಅವರನ್ನು ಎಂದೂ ಕಾಡಿದ್ದಿಲ್ಲ. ದಿನ ಕಳೆಯುವುದಷ್ಟೇ ಮುಖ್ಯವಾಗಿತ್ತು. ಹೇಗೆ ಕಳೆದರೇನು? ಯಾರಿಂದ ಕಳೆದರೇನು? ಇದರ ಚಿಂತೆ ಅವರಿಗೆ ಬೇಡವಾಗಿತ್ತು.

ವಯಸ್ಸಿನ ಉನ್ಮತ್ತ ಸ್ಥಿತಿಯಲ್ಲಿ, ಮಾದಕ ಕನಸುಗಳಲ್ಲಿ ಮೈಮರೆತು ಹತ್ತಿರವಾಗಿದ್ದ ಶ್ರೀನಿವಾಸ, ರತ್ನರು, ಕಾಲ ಸರಿದಂತೆ ಒಬ್ಬರ ಬಣ್ಣವನ್ನೊಬ್ಬರು ಕಂಡುಕೊಂಡರು. ಶ್ರೀನಿವಾಸನ ಚಾಳಿಗಳಿಗೆ, ಅವನ ವ್ಯವಹಾರ ರೀತಿಗಳಿಗೆ ರೋಸಿ ಹೋಗಿದ್ದ ರತ್ನಳು, ಕೊನೆಗೆ ಅವನ ಪ್ರೋತ್ಸಾಹದಿಂದಲೇ ನೈತಿಕ ಪತನಕ್ಕೆ ಒಪ್ಪಿಕೊಂಡಳು. ಬದುಕುವುದಕ್ಕೆ ದಾರಿ ಕಾಣದಾದಾಗ ಎದುರಿಗೆ ಬಂದ ದಾರಿಯನ್ನೇ ಅಪ್ಪಿಕೊಂಡಳು. ಗಂಭೀರವಾಗಿ, ಮರ್ಯಾದೆ ಮಾನಗಳೇ ಜೀವನದ ಉಸಿರಾಟವಾಗಿ ಉಳ್ಳವರಿಗೆ ಭಯಂಕರ ವಿಕೃತಿಯಾಗಿ ಕಾಣುವ ಹೇಸಿಗೆಯು ಬದುಕಿನೊಂದಿಗೆ ಒಪ್ಪಂದವನ್ನು ಮಾಡಿಕೊಂಡಿದ್ದಳು. ಅದಕ್ಕೆಂದೇ ಶ್ರೀನಿವಾಸನಾಗಲೀ, ರತ್ನಳಿಗಾಗಲೀ ದೇಹ ಸಂಬಂಧಗಳಿಗಿಂತ ಹೃದಯ ಸಂಬಂಧಗಳನ್ನು ಅರ್ಥಮಾಡಿಕೊಳ್ಳುವ ಅಭ್ಯಾಸವೇ ಇಲ್ಲದಂತಾಗಿತ್ತು.

ಪ್ರೀತಿ, ಪ್ರೇಮ, ವಿಶ್ವಾಸಗಳ ಎಡೆಯಲ್ಲಿ ಕೇವಲ ಸ್ವಾರ್ಥವೇ ಎತ್ತರವಾಗಿ ನಿಂತು ಮಿಕ್ಕೆಲ್ಲ ಭಾವನೆಗಳನ್ನು ಕುಬ್ಜವಾಗಿಸಿತ್ತು. ಅದಕ್ಕೇ ವಾಸುವಿನ ಪ್ರಾಮಾಣಿಕತೆ, ವಿಶ್ವಾಸ, ಪ್ರೀತಿಗಳನ್ನು ತಪ್ಪಾಗಿ ಕಲ್ಪಿಸಿಕೊಂಡು ಅವನನ್ನು ತಪ್ಪುದಾರಿಗೆ ಎಳೆವ ಹಾದಿ ಕಾದಳು.

ವಾಸು ಹೋಗುತ್ತಿದ್ದ ದಿಕ್ಕನ್ನೇ ನೋಡುತ್ತಿದ್ದ ರತ್ನಳನ್ನು ಶ್ರೀನಿವಾಸ ಗಮನಿಸಿದ. ವ್ಯಂಗ್ಯವಾಗಿ ನಕ್ಕ. 'ಅವಳ ಗಮನಕ್ಕೆ ಬಿದ್ದ ವಾಸು ಖಂಡಿತ ಅವಳಿಂದ ಬಿಡಿಸಿಕೊಳ್ಳಲಾರ' ಎನಿಸಿತು ಸೀನುವಿಗೆ.

'ರತ್ನ ಅದೇನು ಅವನು ಹೋದ ಕಡೆ ಅಷ್ಟೊಂದು ನೋಡ್ತಿದ್ದಿ ಎಂದ. 'ಏನಿಲ್ಲ ಈ ನಿನ್ನ ಸಂಬಂಧಿ ಇಷ್ಟು ದಿವಸ ಎಲ್ಲಿದ್ದ?-ಅಂತ ಯೋಚಿಸ್ತಿದೀನಿ' ಎಂದಳು.

ಯಾಕೆ? ಅವನು ಅಷ್ಟು ಚೆನ್ನಾಗಿದ್ದಾನಾ? ಸಂಶಯದಿಂದ ಕೇಳಿದ. ಛಿ! ಅಂತಹ ಕೆಟ್ಟ ಮಾತು ಆಡಬೇಡಿ, ಅವನು ನನ್ನ ತಮ್ಮನ ಹಾಗೆ ಎಂದು ಮನಸ್ಸಿನ ಭಾವಕ್ಕೆ ದ್ರೋಹ ಬಗೆದು ಈ ಸಂಬಂಧವನ್ನು ಹೇಳಿದಳು.

ನಾನು ಕೇಳಿದ ಮಾತನ್ನು ತಪ್ಪಾಗಿ ಅರ್ಥ ಮಾಡಿದ್ದಿ, ಒಳ್ಳೆಯವನಾ ಅನ್ನೋ ಅರ್ಥದಲ್ಲಿ ಕೇಳಿದೆ ಅಷ್ಟೇ! 'ಸರಿ ಸರಿ ಯಾವ ಅರ್ಥದಲ್ಲೇ ಕೇಳಿ ಒಟ್ಟಿನಲ್ಲಿ ವಾಸು ತುಂಬಾ ಒಳ್ಳೇವ್ನು' ಎಂದಳು-ನಿರ್ಣಾಯಕ ಧ್ವನಿಯಲ್ಲಿ.

ಅಷ್ಟರಲ್ಲಿ ಆಡಲು ಹೋಗಿದ್ದ ವೀಣಾ 'ಅಮ್ಮ ಹಸಿವಾಗುತ್ತೆ' ಎನ್ನುತ್ತಾ ಓಡಿ ಬಂದಳು. ರತ್ನ ಮಗಳನ್ನು ಅಡುಗೆ ಮನೆಗೆ ಕರೆದೊಯ್ದು ಒಂದಿಷ್ಟು ಹಾಲನ್ನವನ್ನು ಕಲಿಸಿಕೊಟ್ಟಳು. ರತ್ನಳ ಕೈಯಿಂದ ವೀಣಾ ಅನ್ನದ ತಟ್ಟೆಯನ್ನು ತೆಗೆದುಕೊಂಡು ತಿನ್ನಲು ಕೂತಳು. ರತ್ನ ಒಳಗಡೆ ಬೇಸನ್‌ನಲ್ಲಿ ಕೈ ತೊಳೆದು ಹೊರಗೆ ಬಂದಳು.

ಶ್ರೀನಿವಾಸ ಸಿಗರೇಟು ಹಚ್ಚುತ್ತಿದ್ದ. ರತ್ನ ಶ್ರೀನಿವಾಸನಿಗೆ ಮನೆಗೆ ಸಾಮಾನು ತರಲು ಹೇಳಿದ್ದಳು. ಆದರೆ ಜೇಬುಗಳು ಖಾಲಿ ಇದ್ದುದರಿಂದ ತಣ್ಣಗೆ ಮರೆತು ಮನೆಯಲ್ಲಿಯೇ ಕುಳಿತಿದ್ದ. ಶ್ರೀನಿವಾಸನ ನಿಷ್ಪ್ರಯೋಜಕತನ ರತ್ನಳಿಗೆ ಹೇಸಿಗೆ ತರಿಸುತ್ತಿತ್ತು. ಶ್ರೀನಿವಾಸನನ್ನು ಬಿಟ್ಟು ಬಿಡೋಣವೇ ಎನ್ನುವಷ್ಟು ಸಿಟ್ಟು ಬರುತ್ತಿತ್ತು. ಆದರೆ ತಾಯಿಯ ಭೀತಿ ಅವಳನ್ನು ಅಷ್ಟೊಂದು ಮುಂದುವರಿಯುವುದರಿಂದ ತಡೆದಿತ್ತು.

ಈ ಒಂದೆರಡು ತಿಂಗಳಿಂದ ಶ್ರೀನಿವಾಸನ ಗೆಳತಿಯೊಬ್ಬಳು ಹುಟ್ಟಿಕೊಂಡಿದ್ದಳು. ಅದೆಲ್ಲಿ ಪರಿಚಯವಾಗಿತ್ತೋ ಏನೋ, ಶ್ರೀನಿವಾಸನಿಗಾಗಿ ಒಂದೆರಡು ಬಾರಿ ಮನೆಗೆ ಹುಡುಕಿಕೊಂಡು ಬಂದಿದ್ದಳು. ಎರಡು ಸಲವೂ ಶ್ರೀನಿವಾಸ ಮನೇಲಿರಲಿಲ್ಲ. ರತ್ನಳೊಂದಿಗೆ ಆಕೆ ಬಹಳ ಫ್ರೀಯಾಗಿ ಮಾತಾಡಿ ಸ್ನೇಹ ಬೆಳೆಸಿಕೊಂಡಳು. ತುಂಬಾ ಚೆನ್ನಾಗಿ ಹಾಡುತ್ತಿದ್ದಳು. ರತ್ನಳು, ಅವಳ ಸ್ನೇಹವನ್ನು ಸ್ವಾಗತಿಸಿದಳು. ಬಂದಾಗಲೆಲ್ಲಾ ಅವಳಿಂದ ಹಾಡಿಸುತ್ತಿದ್ದಳು. ಮೊದಲಿನಿಂದಲೂ ರತ್ನಳಿಗೆ ಸಿನಿಮಾ ಹುಚ್ಚು ಸ್ವಲ್ಪ. ಗೌರಿಯಿಂದಾಗಿ ಆ ಹುಚ್ಚು ಮತ್ತಷ್ಟು ಹೆಚ್ಚಾಯಿತು. ತನಗೆ ಬೇಕಾದ ಹಾಡುಗಳಿಗಾಗಿ ಪ್ರತಿಯೊಂದು ಸಿನಿಮಾವನ್ನು ತಪ್ಪದೇ ನೋಡುತ್ತಿದ್ದಳು. ರತ್ನಳ ಸ್ನೇಹ ಆದ ಮೇಲೆ ಅವಳನ್ನೂ ಎಳೆದೊಯ್ಯುತ್ತಿದ್ದಳು. ಸಿನಿಮಾ, ಹೋಟೆಲು ಪ್ರಲೋಭನಕ್ಕೆ ಸಿಕ್ಕಿ ರತ್ನ, ಶ್ರೀನಿವಾಸನ ಮತ್ತು ಗೌರಿ ಸಂಬಂಧಕ್ಕೆ ಅಡ್ಡಿ ಹೇಳಲಿಲ್ಲ.

ರತ್ನಳಿಗೆ ಗೌರಿಯ ವಿಚಾರದಲ್ಲಿ ಒಂದೆರಡು ವಿಷಯಗಳಲ್ಲಿ ಅಸೂಯೆ. ಗೌರಿ ಎಸ್.ಎಸ್.ಎಲ್.ಸಿ.ಯವರೆಗೆ ಓದಿದ್ದಳು. ಇಂಗ್ಲೀಷ್ ಓದುವುದಕ್ಕೆ ಬರೆಯುವುದಕ್ಕೆ ಬರುತ್ತಿತ್ತು. ಹರುಕು ಮುರುಕಾಗಿ ಮಾತೂ ಆಡುತ್ತಿದ್ದಳು. ಗೌರಿ, ತಾನೂ ಶ್ರೀನಿವಾಸ ಇರುವಾಗ ಅವರಿಬ್ಬರೂ ಇಂಗ್ಲೀಷ್‌ನಲ್ಲಿ ಹರುಕು ಮುರುಕಾಗಿ ಮಾತನಾಡಿಕೊಂಡರೆ ರತ್ನಳಿಗೆ ತಿಳಿಯುತ್ತಿರಲಿಲ್ಲ. ಆದರೆ ಸ್ನೇಹ ಕೊಟ್ಟ ಅವಳಲ್ಲಿ ಸಂಶಯವನ್ನು ತಳೆಯುವುದು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಒಂದೇ ಒಂದು ದಾರಿಯೆಂದರೆ ಅವಳಿಂದ 'ತಾನೂ ಇಂಗ್ಲೀಷ್ ಹೇಳಿಸಿಕೊಳ್ಳುವುದು' ಎಂದು ಆಲೋಚಿಸಿದಳು. ಅದರಂತೆ ಅವಳಲ್ಲಿ ಇಂಗ್ಲೀಷ್ ಪಾಠವನ್ನೂ ಪ್ರಾರಂಭಿಸಿದ್ದಳು.

ಗೌರಿ, ಶ್ರೀನಿವಾಸ, ರತ್ನ ಮೂವರೂ ಹತ್ತಿರವಾದರು. ಏನೇ ಮಾಡಲಿ, ಎಲ್ಲಿಗೇ ಹೋಗಲಿ ಸುಮಾರು ಬಾರಿ ಮೂವರೂ ಒಟ್ಟಿಗೇ ಇರುತ್ತಿದ್ದರು. ರತ್ನಳ ಎದುರು ಶ್ರೀನಿವಾಸ ಸಾಚಾ ಆಗಿ ವರ್ತಿಸಿದರೂ ಕೂಡ, ಅವಳಿಲ್ಲದಾಗ ಮಾತ್ರ ಗೌರಿಯನ್ನು ಹಸಿದ ಕಂಗಳಿಂದ ವೀಕ್ಷಿಸಿ ಹೀರಿ ಬಿಡುತ್ತಿದ್ದ. ಅವಕಾಶ ಸಿಕ್ಕರೆ ಸಾಕು ಅವಳ ಕೈಯ್ಯನ್ನು ಹಿಸುಕಿ ಮೆಚ್ಚುಗೆ ತೋರಿಸುತ್ತಿದ್ದ. ಮೈ ಸವರಿಕೊಂಡು ನಡೆವಾಗ ಗೌರಿಗೆ

ಅದೊಂದು ರೀತಿಯ ಪುಲಕ. ಗೌರಿಗೆ ಶ್ರೀನಿವಾಸನಲ್ಲಿ ನಿಜವಾಗಿಯೂ ಪ್ರೀತಿಯೆನ್ನುವುದು ಇಲ್ಲವಾದರೂ ಅವನ ಸ್ಪರ್ಶ ಮಾತ್ರ ಬಯಸುತ್ತಿದ್ದಳು.

ರತ್ನಳ ಗೆಳೆತನವಾದ ಮೇಲಂತೂ ಅವಳಿಗೆ ಅವನ ಸಹವಾಸ ಮತ್ತಷ್ಟು ಸುಲಭವಾಗಿತ್ತು. ಹೊತ್ತು ಮೀರಿ ಮನೆಯಲ್ಲಿ ನಿಲ್ಲುತ್ತಿದ್ದಳು. ಎಷ್ಟೋ ಸಲ ರಾತ್ರಿಯೂ ಉಳಿದು ಬಿಡುತ್ತಿದ್ದಳು, ರತ್ನಳ ಬಲವಂತಕ್ಕೆ.

ನಾಳೆ ಸಂಜೆಗೆ ಮನೆ ಖಾಲಿ ಆದರೆ, ಗೌರಿಗೆ ತಿಳಿಸುವುದು ಹೇಗೆಂದು ಯೋಚಿಸಿದಳು. ಸುಮಾರು ತಿಂಗಳಿಂದ ಗೌರಿಯನ್ನು ಕಂಡಿರಲಿಲ್ಲ. ತಾನಿಲ್ಲದಾಗ ಏನಾದರೂ ಬಂದಿದ್ದಳೇ ಎಂದು ಯೋಚಿಸಿ ಕೇಳಿದರೆ, ಶ್ರೀನಿವಾಸ ಬರಲಿಲ್ಲವೆಂದು ತಲೆಯಾಡಿಸಿದ.

ಶ್ರೀನಿವಾಸ ಸುಳ್ಳು ಹೇಳಿದ್ದ. ಗೌರಿ ಬಂದು ಎರಡು ದಿನ ಮನೆಯಲ್ಲಿ ಉಳಿದಿದ್ದಳು. ಆ ವಿಚಾರವನ್ನೇ ಹೇಳಲಿಲ್ಲ. ಒಮ್ಮೆ ಎಲ್ಲಿಯಾದರೂ ತಿಳಿದೀತು–ಎಂದು ಭಯವಿದ್ದರೂ ವಿಧಿಯಿಲ್ಲದೆ ಸುಮ್ಮನಾಗಿದ್ದ. ರತ್ನಳು ಈ ಪ್ರಶ್ನೆ ಕೇಳಿದಾಗ ಅವಳಿಗೆ ಅವಳು (ಗೌರಿ) ಬಂದ ವಿಷಯ ತಿಳಿದಿಲ್ಲವೆಂದುಕೊಂಡ. ಅಕಸ್ಮಾತ್ ತಿಳಿದರೂ ಶ್ರೀನಿವಾಸನಿಗೆ ಭಯಪಡಬೇಕಾದ ಅವಶ್ಯಕತೆಯಿರಲಿಲ್ಲ.

ಮನೆಯ ವ್ಯವಸ್ಥೆಯಾದರೂ, ಕೆಲಸದ ವ್ಯವಸ್ಥೆಯಾಗಿರಲಿಲ್ಲ. ಅವನಿಗೆ ಅದೊಂದು ಬೇಸರವೆನಿಸಿತು. 'ರತ್ನ ನಾಳೇ ಬೆಳಗ್ಗೇನೇ ಸಾಮಾನೆಲ್ಲಾ ತೆಗೆದಿಡು. ಸಂಜೆ ವಾಸು ಬಂದ ಕೂಡಲೇ ಸಾಗಿಸಬೇಕಾಗುವುದು'–ಎಂದ.

ಆಯ್ತು, ನೀನು ಈಗ ಹೋಗಿ ಒಂದು ಸ್ವಲ್ಪ ಅಕ್ಕಿ ಬೇಳೇನ ತಗೊಂಡು ಬರ್ಲೇ ಬೇಕು. ಇಲ್ಲಾಂದ್ರೆ ನಾಳೆಗೆ ಉಪವಾಸಾನೇ ಎಂದಳು.

ಶ್ರೀನಿವಾಸ ಅವಳ ಮುಖ ನೋಡಿದ. ರತ್ನಳಿಗೆ ಅರ್ಥವಾಯಿತು. 'ಹೂಂ' ಗೊತ್ತಿರೋದೇ! ಯಾವತ್ತು ನಿನಗೆ ಮನೆಗೆ ಸಾಮಾನು ತಂದು ಹಾಕೋ ಯೋಗ್ಯತೆಯಿದೆ?–ಎಂದು ಹೇಳುತ್ತಾ ಒಳಗಿನಿಂದ ಐದು ರೂಪಾಯಿ ನೋಟೊಂದನ್ನು ತಂದು ಅವನ ಕೈಗೆ ಕುಕ್ಕಿದಳು.

ನರ ಸತ್ತವನಂತೆ ಶ್ರೀನಿವಾಸ ಪೆಚ್ಚು ಮುಖ ಹಾಕಿಕೊಂಡು ಐದು ರೂಪಾಯಿ ನೋಟನ್ನು ಗಟ್ಟಿಯಾಗಿ ಹಿಡಿದು ನಿಂತ. ರತ್ನ ಅಷ್ಟರಲ್ಲಿ ಚೀಲ ತಂದು ಎಸೆದಳು. ಊಟ ಮಾಡಿ ಎದ್ದ ವೀಣಾ ತಂದೆಯ ಜೊತೆ ತಾನೂ ಹೋಗುತ್ತೇನೆಂದು ಹಟ ಹಿಡಿದಾಗ, ರತ್ನ ಕೆನ್ನೆಗೆ ಥಳಿಸಿ ಪಕ್ಕಕ್ಕೆಳೆದು ಕೂರಿಸಿದಳು.

ಶ್ರೀನಿವಾಸ ಹಿಂತಿರುಗಿ ನೋಡದೆ ಆಚೆ ಕಡೆ ನಡೆದ.

* * *

ರತ್ನಳಿಗೆ ವಾಸುವಿನ ಮನೆ ತುಂಬಾ ಹಿಡಿಸಿತು. ಹೇಳಿಕೊಳ್ಳುವಷ್ಟು ದೊಡ್ಡದಲ್ಲದಿದ್ದರೂ ಅಷ್ಟೇನೂ ಚಿಕ್ಕದಲ್ಲ. ಎರಡು ಕೊಠಡಿ ಒಂದು ವರಾಂಡ ಒಂದು ಹಜಾರ ಮನೆಯ ಮುಂದೆ ಪುಟ್ಟ ಕಂಪೌಂಡು. ಅದರಲ್ಲಿ ಒಂದೆರಡು ಹೂವಿನ ಗಿಡಗಳಿದ್ದವು.

ರತ್ನ ಜಾಣ್ಮೆಯಿಂದ ಮನೆಯನ್ನೆಲ್ಲಾ ಓರಣಗೊಳಿಸಿದಳು. ವಾಸು ಒಂಟಿಯಾಗಿದ್ದರೂ ಸಾಕಷ್ಟು ಮನೆಗೆ ಬೇಕಾದ ವಸ್ತುಗಳನ್ನೆಲ್ಲಾ ಸಂಗ್ರಹಿಸಿದ್ದ. ಆ ಮನೆಯಲ್ಲಿ ಯಾವುದಕ್ಕೂ ಕೊರತೆಯೆನಿಸಲಿಲ್ಲ. ರತ್ನಳು ವಾಸುವಿನ ಬಗ್ಗೆ ಯೋಚಿಸಿದಷ್ಟೂ ತೀರಾ ಆಳಕ್ಕಿಳಿಯುತ್ತಿದ್ದಳು. ಶ್ರೀನಿವಾಸನೊಂದಿಗೆ ವಾಸುವನ್ನು ಹೋಲಿಸಿ ನೋಡುತ್ತಿದ್ದಳು. ಎಷ್ಟು ಅದೃಷ್ಟ ಮಾಡಿರಬೇಕು ವಾಸುವಿನಂಥವನ ಕೈ ಹಿಡಿಯಬೇಕಾದರೆ!' ಎಂದುಕೊಂಡಳು. ಆದರೇನು ವಾಸುವನ್ನು ಬಿಡಲೇ ಬಾರದು, ವಾಸು ನನಗಾಗಿ ಎನ್ನುವಂತೆ ನನ್ನಲ್ಲಿ ಉಳಿಯಬೇಕು. ಖಂಡಿತ ಅವನನ್ನು ನನ್ನಿಂದ ದೂರ ಸಿಡಿಯಲು ಅವಕಾಶ ಕೊಡಬಾರದು ಎಂದೇ ಯೋಚಿಸುತ್ತಿತ್ತು ರತ್ನಳ ಮನಸ್ಸು.

ಶ್ರೀನಿವಾಸನ ಕುಟುಂಬ ವಾಸು ಮನೆ ಸೇರಿ ಚೆನ್ನಾಗಿ ಬೇರು ಬಿಟ್ಟಿತು. ವಾಸುವಿಗೆ ಮನೆ ತುಂಬಿದ ಹಾಗೆ ಅನಿಸಿತು. ದಣಿದು ಮನೆಗೆ ಬರುತ್ತಿದ್ದಂತೆ ರತ್ನಳ ಮಂದಹಾಸದ ಸ್ವಾಗತ. ಒಳಗೆ ಹೆಜ್ಜೆಯಿಡುತ್ತಿದ್ದಂತೆ ರತ್ನ ಬಿಸಿ ಬಿಸಿ ಕಾಫಿ ಗ್ಲಾಸ್ ಹಿಡಿದು ವಾಸುವಿನ ಮುಂದೆ ನಿಲ್ಲುತ್ತಿದ್ದಳು. ವಾಸುವಿಗೆ ಈಗ ಬದುಕು ಹಾಯೆನಿಸಿತು. ಬರುತ್ತಿದ್ದಂತೆ ಇಷ್ಟೊಂದು ಉಪಚಾರ ಮಾಡಿ ಪ್ರೀತಿಯಿಂದ ಆದರಿಸುವಂಥವರು ಮೊಟ್ಟ ಮೊದಲಿಗೆ ಜೀವನದಲ್ಲಿ ಕಾಣುತ್ತಿದ್ದಂತೆನಿಸಿತು.

ರತ್ನಳ ಆದರ, ಉಪಚಾರ, ತನ್ನೊಂದಿಗಿನ ಸಲುಗೆ ವರ್ತನೆ ವಾಸುವನ್ನು ತೀರಾ ಮಂತ್ರ ಮುಗ್ಧನನ್ನಾಗಿಸಿತ್ತು. ರತ್ನಳೆಂದರೆ ತನಗರಿವಿಲ್ಲದಂತೆ ಯಾಕೋ ಕರಗಿ ಮೇಣವಾಗುತ್ತಿದ್ದ. ರತ್ನಳ ಸನಿಹಕ್ಕೆ, ಅವಳೊಂದಿಗೆ ಮಾತಾಡುವುದಕ್ಕೆ ಹಲುಬಿ ಕಾಯುತ್ತಿದ್ದ. ಅವಕಾಶ ಸಿಕ್ಕರೆ ಸಾಕು, ಅತ್ತಿಗೆ ಎಂದು ಅವಳ ಹಿಂದು ಮುಂದು ಮೋಡಿಗೆ ಬಿದ್ದ ಮರುಳನಂತೆ ತಿರುಗುತ್ತಿದ್ದ.

ರತ್ನಳಿಗೂ ಅಷ್ಟೇ ಸಾಕಾಗಿತ್ತು. ತಾನೂ ಎಷ್ಟೆಲ್ಲಾ ರೀತಿಯಿಂದ ಸಾಧ್ಯವೋ ಅಷ್ಟೆಲ್ಲಾ ಅವನನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿದ್ದಳು. ವಾಸು ತನಗೆ ಸೋಲಬೇಕು, ತನಗಾಗಿ ಬದುಕಬೇಕು ಅವನ ಬದುಕಿಗೆ ತನ್ನಿಂದಲೇ ಅಸ್ತಿತ್ವ ದೊರೆಯಬೇಕು ಎನ್ನುವ ಕೆಟ್ಟ ಛಲದ ಮನೋಭಾವವನ್ನು ಬೆಳೆಸಿಕೊಂಡಳು. ವಾಸು ತನಗಿಂತ ಚಿಕ್ಕವ ಆದರೇನು? ಬದುಕಿನಲ್ಲಿ ಯಾವೊಂದು ಆಕರ್ಷಣೆಯೂ ಇಲ್ಲದಿರುವಾಗ, ಬದುಕುವ ಆಸರೆಯನ್ನು ಚಿಗುರಿಸುವ ಚೈತನ್ಯವುಳ್ಳ ಯಾವುದಾದರೂ ಆಯಿತು ಎಂದುಕೊಂಡಳು.

ರತ್ನಳಂತೆ ವೀಣಾಳೂ ವಾಸುವಿಗೆ ಅಂಟಿಕೊಂಡಳು. ಬರುತ್ತಿದ್ದಂತೆ ಅವನ ಕತ್ತು ಬಳಸಿ ಅವನನ್ನು ಸುತ್ತಿ ಕೊಳ್ಳುತ್ತಿದ್ದಳು. 'ಮಾಮ ನನಗೇನು ತಂದೆ?' ಎಂದು ಮುದ್ದಾಗಿ ಕೇಳುವ ವೀಣಾಳ ಮಾತು ಹೃದಯವನ್ನು ಮಿಡಿಯುತ್ತಿತ್ತು. ಪ್ರತಿದಿನವೂ ವೀಣಾಳಿಗಾಗಿ ಏನಾದರೂ ತರುತ್ತಿದ್ದ. ಚಾಕಲೇಟ್, ಬಿಸ್ಕತ್ತು, ಆಟದ ಸಾಮಾನು, ಕೆಲವೊಮ್ಮೆ ಅವಳಿಗೆ ಒಪ್ಪುವ ಫ್ರಾಕು-ಹೀಗೆಷ್ಟೋ!

ಶ್ರೀನಿವಾಸನಿಗೆ ಮಾತ್ರ ರತ್ನ ವಾಸೂರ ಸಲಿಗೆ ಅಸೂಯೆ ತರುತ್ತಿತ್ತು. ಆದರೆ ಕೆಲಸವಿಲ್ಲದ ಶ್ರೀನಿವಾಸ ಹಲ್ಲುಕಿತ್ತ ಹಾವಿನಂತಾಗಿದ್ದ. ಕೆಲಸ ಹುಡುಕುವುದು ಆಯಿತೇ ವಿನಾ ಕೆಲಸ ಸಿಕ್ಕಿದ್ದು ಮಾತ್ರ ಇಲ್ಲ. ದಂಡ ಪಿಂಡಕ್ಕೆ ಹಾಜರಾಗುತ್ತಿದ್ದ. ಇಸ್ಪೀಟಾಟದಿಂದ ಬರುವ ಸಂಪಾದನೆ ಅವನ ಚಿಲ್ಲರೆ ಖರ್ಚಿಗೆ ಸಾಕಾಗುತ್ತಿತ್ತು. ಇನ್ನು ಮನೆಗೆ ಕೊಡುವುದಕ್ಕೆ ಉಳಿಯುವುದು ಬರಿ ಸೊನ್ನೆ. ನಿಶ್ಚಿಂತನಾಗಿ ಇರುತ್ತಿದ್ದ. ಸ್ವತಂತ್ರವಾಗಿ ಬಾಳಬಹುದಾಗಿದ್ದ ವಾಸು ತಾನಾಗಿ ಸಂಸಾರದ ಹೊರೆ ಕಟ್ಟಿಕೊಂಡಿದ್ದ. ಅದು ಅವನಿಗೆ ಭಾರದಂತೇನೂ ಭಾಸವಾಗಲಿಲ್ಲ. ಅತ್ತಿಗೆ ನಗುನಗುತ್ತಾ ಇದ್ದರೆ ಸಾಕು. ತನಗೇನೂ ಯೋಚನೆಯಿಲ್ಲ ಎಂದುಕೊಳ್ಳತೊಡಗಿದ.

ರತ್ನ ಶ್ರೀನಿವಾಸರು ಮನೆಗೆ ಬಂದ ಮೇಲೆ ವಾಸುವಿಗೆ ತನ್ನ ಸ್ವಂತ ಮನೆಯ ಕಡೆ ಯೋಚನೆ ಕರಗತೊಡಗಿತು. ತಂದೆಯ ಖಾಯಿಲೆಯ ವಿಚಾರವನ್ನು ಪೂರ್ತಿಯಾಗಿ ಮರೆತ. ಮನೆಗೆ ತಿಂಗಳಿಗೊಂದಿಷ್ಟು ಹಣ ಕಳಿಸುತ್ತಿದ್ದ. ಇವರೆಲ್ಲಾ ಬಂದ ಮೇಲೆ ಮೂರು ನಾಲ್ಕು ತಿಂಗಳು ತಪ್ಪದೆ ಕಳುಹಿಸಿದ. ಆದರೆ ಅವನಿಗೆ ಹಣದ ಅಭಾವದ ಅರಿವಾಗತೊಡಗಿತು. ಮುಂದಿನ ತಿಂಗಳು ಕಳುಹಿಸಿದರಾಯಿತೆಂದು ಸುಮ್ಮನಾದ. ಆದರೆ ಅದರ ಸಾಧ್ಯತೆ ದೂರ ಉಳಿಯಿತು. ಹೆಚ್ಚಿನ ಖರ್ಚಿನ ಕಾರಣ ತಿಳಿದರೂ ಅದರ ಬಗ್ಗೆ ಅಷ್ಟಾಗಿ ತಲೆ ಕೆಡಿಸಿಕೊಳ್ಳಲಿಲ್ಲ.

* * *

ಶನಿವಾರ ಮಧ್ಯಾಹ್ನ ವಾಸು ಮನೆಗೆ ಬಂದು ಬಿಟ್ಟ. ರತ್ನ ಇನ್ನೂ ಅಡಿಗೆಯ ಕೆಲಸದಲ್ಲಿ ತೊಡಗಿದ್ದಳು. ವಾಸು ಬಂದದ್ದಕ್ಕೆ ಗಾಭರಿಯಿಂದ ಎದ್ದು ಬಂದಳು. ವಾಸುವಿನ ಕಣ್ಣೆಲ್ಲಾ ಕೆಂಪಾಗಿತ್ತು. 'ಮುಖ ಬಾಡಿತ್ತು. ತೀರಾ ಬಳಲಿದಂತೆ ಕಾಣುತ್ತಿದ್ದ. ರತ್ನ ಬಂದವಳೇ ವಿಚಾರಿಸಿದಳು.

'ಯಾಕೆ ವಾಸು ಮೈ ಹುಷಾರಿಲ್ವೆ?'

'ಹೂಂ: ಯಾಕೋ ತುಂಬಾ ತಲೆ ನೋಯ್ತಿದೆ. ಅದಕ್ಕೆ ಬಂದು ಬಿಟ್ಟೆ!'

ಏನಾದರೂ ತಗೊಳ್ತೀಯಾ ವಾಸು? ಬಿಸಿ ಕಾಫಿ ಮಾಡಿಕೊಡಲೇ?

ಏನೂ ಬೇಡ ಅತ್ತಿಗೆ. ಸ್ವಲ್ಪ ಹೊತ್ತು ಮಲಗಿದರೆ ಎಲ್ಲಾ ಸರಿ ಹೋಗುತ್ತೆ ಎಂದು ಹೇಳುತ್ತಾ ತನ್ನ ಕೋಣೆ ಸೇರಿ ಮಂಚದ ಮೇಲೆ ಮೈ ಚಾಚಿದ. ರತ್ನ ಹಿಂಬಾಲಿಸುತ್ತಲೇ

ನಡೆದಳು. ವಾಸು ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡ. ರತ್ನಳಿಗೆ ಅವನ ನೋವಿನ ತೀವ್ರತೆ ಅರ್ಥವಾಯಿತು. ಅವನನ್ನು ಕೇಳುವ ಗೋಜಿಗೆ ಹೋಗದೆ, ಒಳಗೆ ಹೋಗಿ ಒಂದು ಲೋಟ ಬಿಸಿ ಕಾಫಿ ತಂದು ಕುಡಿಯಲು ಬಲವಂತ ಪಡಿಸಿದಳು. ಅವಳ ಒತ್ತಾಯಕ್ಕೆ ಮುಗ್ಧ ಮಗುವಿನಂತೆ ಕಾಫಿ ಕುಡಿದ. ಲೋಟವನ್ನು ಒಳಗಿರಿಸಿ ಒಂದು ಅಮೃಂತಾಂಜನವನ್ನು ಕೈಗೆ ಹಚ್ಚಿಕೊಂಡು, 'ವಾಸು'-ಎಂದು ಮೆಲ್ಲಗೆ ಕರೆದಳು. ಕಣ್ಣು ಮುಚ್ಚಿಕೊಂಡು ತಲೆಯನ್ನು ಬಿಗಿ ಹಿಡಿದಿದ್ದ ಕೈ ಸಡಿಲಿಸಿ ಕಣ್ಣು ಬಿಟ್ಟು ನೋಡಿದ. ರತ್ನಳು ಅಮೃತಾಂಜನ ಹಚ್ಚುತ್ತೇನೆಂದು ಕೇಳುತ್ತಿರುವಂತೆ ಎನಿಸಿತು. ವಾಸುವಿಗೆ ಬಾಯಿ ಬಿಡಲಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ. 'ಕೊಡಿ ಅತ್ತಿಗೆ ನಾನೇ ಹಚ್ಚಿಕೊಳ್ತೇನೆ'-ಎಂದ.

ರತ್ನ ಮುಖ ಸಣ್ಣದು ಮಾಡಿಕೊಂಡು. 'ಯಾಕೆ ವಾಸು, ನಾನು ಹಚ್ಚಬಾರದೇನು- ಎಂದಳು. ವಾಸುವಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಸುಮ್ಮನೆ ಪಿಳಿ ಪಿಳಿ ಕಣ್ಣುಬಿಟ್ಟು ನೋಡಿ ಹೇಳಿದ. ನೀವು ಹಚ್ಚಬಾರದೆಂದೇನೂ ಅಲ್ಲ ವೃಥಾ ನಿಮಗ್ಯಾಕೆ ಶ್ರಮ ಅಂತ......ಅಷ್ಟೇ ಎಂದು ತಡವರಿಸುತ್ತ ಹೇಳಿದ.

'ಪರವಾಗಿಲ್ಲ ಶ್ರಮ ಗಿಮದ ಚಿಂತೆ ಬಿಡು, ನಿನ್ನ ಮನಸ್ಸಿಗೆ ಬೇಸರ ಆಗದಿದ್ದರೆ ಸರಿ' ಎಂದು ಹೇಳುತ್ತಾ ಅವನ ಹಣೆಗೆ ಅಮೃತಾಂಜನ ಹಚ್ಚಿದಳು. ಅವಳ ಬೆರಳು ಸ್ಪರ್ಶವಾಗುತ್ತಿದ್ದಂತೆ, ವಾಸುವಿಗೆ ಏನೋ ಹೊಸ ಅನುಭವ! ಮೈಯ್ಯಲ್ಲಿ ವಿದ್ಯುತ್ ಹರಿಯಿತು. ಮನಸ್ಸಿಗೆ ಕಚಗುಳಿ ಇಟ್ಟಂತಾಯಿತು. ಸಿಡಿಯುವ ನೋವನ್ನೂ ಹತ್ತಿಕ್ಕಿದ ಹಿತವಾದ ಅನುಭವದ ಡಿಗ್ರಿಯೇರುತ್ತಿದ್ದಂತೆ ನೆಮ್ಮದಿಯಿಂದ ಕಣ್ಣು ಮುಚ್ಚಿದ. ಅತ್ತಿಗೆಯ ಕೈಗಳಲ್ಲಿ ಮಾಂತ್ರಿಕ ಗುಣವಿರಬಹುದೇ ಎಂದು ಆಲೋಚಿಸಿದ.

ರತ್ನಳೂ ಹಾಗೇ ಕನಸಿಗಿಳಿದಳು. ಇಬ್ಬರ ಆಲೋಚನೆಗಳ ದಿಕ್ಕೇ ಬೇರೆ ಬೇರೆಯಾಯಿತ್ತು. ಆ ಕೈಗಳಲ್ಲಿ ವಾಸುವಿಗೆ ವಾತ್ಸಲ್ಯದ ರೇಖೆಗಳಿರಬಹುದೇನೋ ಎನಿಸಿತು. ತಾಯಿಯೂ ತನಗೆ ಇಲ್ಲಿಯವರೆಗೆ ಇಂತಹ ಅನುಭವವನ್ನು ನೀಡಿರಲಿಲ್ಲ ಎಂದುಕೊಂಡು ಹಿತವಾದ ಆ ಸ್ಪರ್ಶದಲ್ಲಿ ಪ್ರೀತಿ, ವಾತ್ಸಲ್ಯ, ಮಮತೆಗಳನ್ನು ಕಂಡ ಕಾಣುತ್ತಲೇ ಕಣ್ಣು ಮುಚ್ಚಿದ. ರತ್ನಳಿಗೆ ಆದ ಅನುಭವವೇ ಬೇರೆಯಾಗಿತ್ತು. ಅವಳ ಮನಸ್ಸಿನ ಸುಪ್ತವಾದ ಆಸೆಗಳು ಅರಳಿದವು. ಹಾಗೇ ಅವನಿಗೊಂದು ಮುತ್ತು ಕೊಡೋಣವೆನಿಸಿತು. ಆದರೆ, ಆದರೆ........ಯಾವುದೋ ಸೌಜನ್ಯ ಮರುಕಳಿಸಿ, ತುಡಿಯುವ ತುಟಿಗಳನ್ನು ತಡೆದಳು. ವಾಸುವನ್ನು ಬೆಚ್ಚಿಸಬಹುದು; ಗಾಭರಿಯಿಂದ ಚೀರಬಹುದು; ಅಸಹ್ಯ ಪಟ್ಟುಕೊಳ್ಳಬಹುದು. ಬೇಸರಗೊಂಡು ಬಿಟ್ಟು ಹೋಗಬಹುದು ಎಂದು ಒಂದು ಮನಸ್ಸು ಆಲೋಚಿಸಿದರೆ, ಮರುಗಳಿಗೆಯೇ ಅವನೇನು ಗಂಡಸಲ್ಲವೇ. ಹೆಣ್ಣು ಕೊಡುವ ಪ್ರೀತಿಗೆ ಸ್ಪಂದಿಸಲಾರದಷ್ಟು ಅಸಹಾಯಕನೇ?-ಎಂದು ಪಿಸುಗುಟ್ಟಿತು. ರತ್ನಳ ಮನಸ್ಸು ಒಂದೆರಡು ಕ್ಷಣ ಭಾವನೆಗಳ ಯುದ್ಧ ಭೂಮಿಯಾಯಿತು. ಇನ್ನೂ ಅಲ್ಲಿಯೇ ಕೂತರೆ ಖಂಡಿತ ಆವೇಶಕ್ಕೆ ಒಳಗಾದೇನೆಂಬ ಪ್ರಜ್ಞೆ ಜಾಗ್ರತವಾಗಿ ಅಲ್ಲಿಂದೆದ್ದಳು.

ರತ್ನ ಅಲ್ಲಿಂದ ಏಳುವುದಕ್ಕೂ, ಶ್ರೀನಿವಾಸ ಬರುವುದಕ್ಕೂ ಸರಿ ಹೋಯಿತು. ಶ್ರೀನಿವಾಸನ ಆಕಸ್ಮಿಕ ಪ್ರವೇಶದಿಂದ ರತ್ನ ಸ್ವಲ್ಪ ತಡ ಬಡಿಸಿದಳು. ಆಲೋಚನೆಗಳು ದಿಕ್ಕಾಪಾಲಾಗಿ ಹೋದವು.

ರತ್ನ ಸಂತೋಷದ ಸುದ್ದಿ ಗೊತ್ತಾ?......ನನಗೆ ಕೆಲಸ ಸಿಕ್ಕಿದೆ'–ಎಂದ. ರತ್ನ ತಣ್ಣಗೆ ಸುದ್ದಿಯನ್ನು ಕೇಳಿದಳು. ಈಗ ಅವನ ಸಂತೋಷವನ್ನು ಹಂಚಿಕೊಳ್ಳುವ ಮನಃಸ್ಥಿತಿಯಲ್ಲಿ ಅವಳಿರಲಿಲ್ಲ. ಶ್ರೀನಿವಾಸನಿಗೆ ರತ್ನಳ ರೀತಿ ಬೇಸರ ಬರಿಸಿತು. ಇವಳಿಗೆ ಆ ವಾಸು ಭೂತ ಹಿಡಿದಿರಬೇಕು' ಅದಕ್ಕೆ ಅವಳಿಗೆ ಗಂಡನ ಸಂತೋಷವೂ ಬೇಡವಾಗಿದೆ ಎಂದು ಸಿಡಿಮಿಡಿಗೊಂಡು ಇನ್ನು ಅವಳಿಗೆ ಹೇಳಿ ಪ್ರಯೋಜನವಿಲ್ಲವೆಂದು ತನ್ನ ಕೋಣೆಯತ್ತ ನಡೆದ. ನಡೆಯುವಾಗ ವಾಸುವಿನ ಕೋಣೆಯನ್ನು ಹಾದು ಹೋಗಬೇಕಾದ್ದರಿಂದ ಅನಿವಾರ್ಯವಾಗಿ ಮುಸುಕೆಳೆದು ಮಲಗಿದ್ದ ವಾಸು ಕಣ್ಣಿಗೆ ಬಿದ್ದ. ಆದರೆ ಅಷ್ಟು ಹೊತ್ತಿಗೆ ವಾಸು ಯಾಕೆ ಬಂದಿರಬಹುದು ಎಂದು ಆಶ್ಚರ್ಯದಿಂದ ರತ್ನಳನ್ನು, ಇದೇನು ವಾಸೂನ ಮಲಗಿರೋದು? ಎಂದು ಪ್ರಶ್ನಿಸಿದ.

ರತ್ನ ಹೂಂ ಗುಟ್ಟಿದಳು.

'ಅದ್ಯಾಕೆ ಇಷ್ಟು ಬೇಗ ಬಂದಿದ್ದಾನೆ ಇವತ್ತು? ಮತ್ತೊಂದು ಪ್ರಶ್ನೆ. ರತ್ನಳಿಗೆ, ಇವನ ಪ್ರಶ್ನೆಗಳಿಗೆ ಉತ್ತರ ಹೇಳುವ ತಾಳ್ಮೆಯಿರಲಿಲ್ಲವಾದರೂ ಸಿಡಿಮಿಡಿಗೊಳ್ಳುತ್ತಲೇ ಯಾಕೇಂದ್ರೆ?.......ತಲೆನೋವು ಬಂತಂತೆ ಬಂದ.

'ಯಾಕೆ ಬರಬಾರದಿತ್ತೇನು?' ಎಂದು ಪ್ರಶ್ನಿಸಿದಳು.

ಬಂದಿದ್ದೇಕಂತ ಕೇಳಿದೆನೇ ಹೊರತಾಗಿ, ಬರಬಾರದಿತ್ತು ಅಂತ ಹೇಳಿದೆನೆ?– ಕಟುವಾಗಿ ಕೇಳಿದ.

'ಸರಿ ಸರಿ ನಿಮ್ಮ ಹತ್ರ ವಾದ ಮಾಡೋಕೆ ನನಗೆ ಪುರುಸೊತ್ತಿಲ್ಲ'......ಎನ್ನುತ್ತಲೇ ಒಳಗೆ ಹೋದಳು.

ಶ್ರೀನಿವಾಸ ಅಸಮಾಧಾನದಿಂದೆದ್ದು ಕೈಲಿದ್ದ ನ್ಯೂಸ್ ಪೇಪರನ್ನು 'ರಪ್' ಅಂತ ಬಡಿದ. ಒಳಗೊಳಗೇ ಮನಸ್ಸು ಕುದಿಯಿತು. ರತ್ನಳ ನಡತೆಗೆ ತಾನೇ ಕಾರಣ. ಕಂಡ ಕಂಡ ಗೆಳೆಯರನ್ನು ಕರೆದು ತಂದು ಪರಿಚಯ ಮಾಡಿಸಿ, ಅವಳ ಸ್ವಚ್ಛಂದ ನಡೆವಳಿಕೆಗೆ ದಾರಿ ಮಾಡಿಕೊಟ್ಟವನೇ ನಾನು. ನಿಜ, ನನಗ್ಯಾಕೆ ಹಾಗೆನ್ನಿಸಿತೋ ತಿಳಿಯಲಿಲ್ಲ. ತನ್ನ ಹೆಂಡತಿ ಬೇರೆಯವರೊಂದಿಗೆ ಅಷ್ಟು ಸಲುಗೆಯಿಂದಿರುವುದನ್ನು ನೋಡಿಯೂ ಸುಮ್ಮನಿದ್ದುದು ತನ್ನ ಷಂಡತನ. ಇವತ್ತು ಅವಳಿಗೆ ನಾನು ಬೇಕಿಲ್ಲ. ಯಾರನ್ನಾದರೂ ಆಕರ್ಷಿಸಿ ಬಾಳಬಲ್ಲೆನೆಂಬ ದುರಹಂಕಾರ ತಲೆಗೆ ಹತ್ತಿದೆ. ಸಂಪಾದನೆ ಇಲ್ಲದ್ದಕ್ಕಾಗಿ ತಾನು ಅವಳನ್ನು ತಪ್ಪುದಾರಿಗೆ ಹಚ್ಚಿದೆನೇ? –ಎಂದು ಆಲೋಚಿಸಿದ.

ಶ್ರೀನಿವಾಸನ ಮನಸ್ಸು ಅಳುಕಿತು. ತಾನು ಹಾಳಾದ್ದೇ ಅಲ್ಲದೆ ಪ್ರಪಂಚ ಜ್ಞಾನವೇ ಇಲ್ಲದ ಈ ಮುಗ್ಧ ವಾಸುವನ್ನು ಹಾಳುದಾರಿಗೆ ಎಳೆದಿದ್ದೇನೆಯೆ?–ಎಂದು ಪ್ರಶ್ನಿಸಿಕೊಂಡ. ಮಾತಿನ ಮೇಲೆ ಮನುಷ್ಯರನ್ನು ನಂಬುವ ಹುಂಬ ವಾಸು. ಅಂಥವನನ್ನು ಇವಳು ದುರುಪಯೋಗ ಪಡಿಸಿಕೊಂಡರೆ?....ಒಂದೊಂದೇ ಕೆಟ್ಟ ವಿಚಾರ ಅವನ ತಲೆಯಲ್ಲಿ ಸುಳಿದು ಹೋಯ್ತು.

ವಿಚಾರ ಮಾಡಿದಷ್ಟೂ ತಲೆ ಸಿಡಿಯುತ್ತಿತ್ತು. ಪರಿಸ್ಥಿತಿ ಎಲ್ಲಿಯವರೆಗೆ ಹೋಗುತ್ತೆ, ಕಾದು ನೋಡೋಣವೆಂದುಕೊಂಡು ಸುಮ್ಮನಾದ.

ಅಡಿಗೆಯಾಗಿದೆಯಾ ರತ್ನ ಎಂದು ಪ್ರಶ್ನಿಸಿದ.

'ಹೂಂ ಆಗದೆ ಏನು? ತಂದು ಹಾಕಿದ್ರಲ್ಲ ಸಾಮಾನು, ಮಾಡಿ ಬಡಿಸೋದಕ್ಕೆ?' ವ್ಯಂಗ್ಯವಾಗಿ ನುಡಿದಳು. ಮೊದಲೇ ಕದಡಿದ ಮನಸ್ಸಾದ್ದರಿಂದ ಈ ವ್ಯಂಗ್ಯ ಕೂಡಲೇ ಶ್ರೀನಿವಾಸನನ್ನು ಕೆಣಕಿತು. 'ರತ್ನ' ಎಂದು ಅಬ್ಬರಿಸಿದ. ಯಾಕೆ ಹಾಗೆ ಹೊಡ್ಕೋತೀರಿ, ಏನೋ ಆದವರ ಹಾಗೆ. ಹೆಂಡತಿಯಿಂದ ಸಂಪಾದನೆಯಿಲ್ಲ. ಸಿಟ್ಟು ಬರದೆ ಏನಾಗುತ್ತೆ?'

'ಬಾಯ್ಮುಚ್ಚು, ಏನೋ ಕೆಲ್ಸ ಕಳ್ಕೊಂಡು ಒಂದೆರಡು ದಿವ್ಸ ಇದ್ದೆ. ಆದ ಮಾತ್ರಕ್ಕೆ ಸಂಪಾದಿಸಲೇ ಇಲ್ಲ ಅಲ್ವಾ? ಹೌದೌದು, ನಿನ್ನ ಸೂಳೆಗಾರಿಕೆಯಿಂದ ನನ್ನನ್ನು ಬದುಕಿಸಿದಿ ಅಲ್ವಾ?

ಛಿ! ಮಾತನಾಡಬೇಡಿ. ಸಂಪಾದಿಸಿದ್ರಿ ನೀವು. ಇಟ್ಟಿದ್ದು ಯಾವುದಕ್ಕೆ? ಕುಡಿಯೋದಕ್ಕೆ ಜೂಜಾಡೋದಕ್ಕೆ..... ಪೀಟರ್, ವೇಣು, ನಾಗರಾಜ ಇವರು ನನಗೆ ಕೊಟ್ಟ ಹಣದಿಂದ ಅಲ್ವೇ ನೀವು ಉಂಡದ್ದು.?' 'ಹದ್ದು ಮೀರಿ ಮಾತನಾಡಬೇಡ. ನಿನ್ನ ಜಾತೀನೇ ಅಂತಾದ್ದು. ಊರಲ್ಲೆಲ್ಲಾ ನಿನ್ನ ವಿಚಾರ ಗೊತ್ತಿದ್ದದ್ದೇ. ಕಲಿತ ಬುದ್ಧಿ ಎಲ್ಲಿ ಬಿಡ್ತೀಯ? ಹೊನ್ನನ ಜತೆ ಮಲಗಿದ್ದು, ಕಿಟ್ಟನ್ನ ಪುಸಲಾಯಿಸಿದ್ದು–ನನಗೆಲ್ಲಾ ಗೊತ್ತಿದೆ. ನೀನೂ ನಿಮ್ಮಮ್ಮ–ಎಲ್ಲಾ ಅಂಥಾವರೇ? ನಿರ್ಧಾರವಾಗಿ ಹೇಳಿದ.

'ಶ್ರೀನಿವಾಸ ನಮ್ಮಮ್ಮನ ವಿಚಾರ ತೆಗೀಬೇಡ. ನೀನೆಷ್ಟೋ ನಿನ್ನ ಪಾಡೆಷ್ಟೊ ನೋಡಿಕೊ' ಎಂದು ಗಟ್ಟಿಯಾಗಿ ಕೂಗಿದಳು.

ಈ ಇಬ್ಬರ ಮಾತಿನ ಚಕಮಕಿಯ ಸದ್ದು ವಾಸುವನ್ನು ಎಚ್ಚರಿಸಿತು. ಇದೇನು ಗಲಭೆ ಮನೇಲಿ' ಎಂದು ಕೊಂಡು ಹಾಸಿಗೆ ಬಿಟ್ಟು ಎದ್ದು ಬಂದ. ವಾಸು ಬರುವುದನ್ನೇ ನೋಡಿದ ರತ್ನ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ವಾಸುವಿಗೆ ಏನೊಂದೂ ಅರ್ಥವಾಗಲಿಲ್ಲ. ಶ್ರೀನಿವಾಸ ಒಂದು ಕಡೆ ಬುಸುಗುಟ್ಟಿಕೊಂಡು ನಿಂತಿದ್ದಾನೆ. ರತ್ನ ಅಡುಗೆ ಮನೆಯಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ.

'ಏನಣ್ಣಾ ಇದೆಲ್ಲಾ ರಂಪು? ಅತ್ತಿಗೆ ಕಣ್ಣಲ್ಲಿ ನೀರೇಕೆ?' ಎಂದ.

'ನಿಮ್ಮ ಅತ್ತಿಗೇನ ಕೇಳು. ಎಲ್ಲಾ ಹೇಳ್ತಾಳೆ' ನಾನು ಹೊರಟೆ'–ಎಂದು ಮನೆಯಿಂದ ಸರಸರನೆ ಹೊರಗೆ ನಡೆದ. ವಾಸು ಅಣ್ಣನನ್ನು ತಡೆಯಲೆತ್ನಿಸಿದ. ಆದರೆ ಅವನು ನಿಲ್ಲಲಿಲ್ಲ. ವಾಸು ಹತಾಶನಾಗಿ ಹಿಂತಿರುಗಿದ.

ಅಡುಗೆ ಮನೆಗೆ ಹೋಗಿ ಅತ್ತಿಗೆಯನ್ನು ವಿಚಾರಿಸಿದ. ಅವಳು ಶ್ರೀನಿವಾಸ ತನ್ನನ್ನು 'ಸೂಳೆಗೀಳೆ' ಅಂತ ಬೈದನೆಂದು ಬಣ್ಣಕಟ್ಟಿ ಹೇಳಿದಳು. ಶ್ರೀನಿವಾಸನದೇ ಎಲ್ಲವೂ ತಪ್ಪು ಎನ್ನುವಂತೆ ಕತೆ ಕಟ್ಟಿ ಹೇಳಿ, ತನ್ನ ಬಗ್ಗೆ ವಾಸುವಿನ ಮನಸ್ಸಿನಲ್ಲಿ ಮತ್ತಷ್ಟು ಕನಿಕರ ಮೂಡುವಂತೆ ಮಾಡಿದಳು.

'ಸುಮ್ಮನಿರಿ ಅತ್ತಿಗೆ, ಏನೋ ವಿಷಗಳಿಗೆ ಮಾತಿಗೆ ಮಾತು ಬಂದಿದೆ ಅಷ್ಟೇ. ಅದನ್ನು ಮನಸ್ಸಿಗೆ ಹಚ್ಚಿಕೊಂಡು ಬೇಜಾರಾಗಬೇಡಿ. ಅಣ್ಣ ಬೇಕಂತ ಬೈದಿರಲಾರರು. ಏನೋ ಬೇಸರವಾಗಿದ್ದಿರಬೇಕು. ನೀವು ಅತ್ತರೆ ನನ್ನ ಕರುಳು ಕಿವುಚಿದಂತಾಗುತ್ತದೆ, ನನಗಾಗಿ ಸುಮ್ಮನಿರಿ' ಎಂದ.

ರತ್ನ ವಿಧೇಯಳಂತೆ ಅವನ ಮಾತು ಕೇಳಿ ಎದ್ದು ಕಣ್ಣೊರಸಿಕೊಂಡಳು. ಮುಖ ತೊಳೆಯಲು ಬಚ್ಚಲು ಮನೆಯ ಕಡೆ ಹೋದಳು.

ಅಷ್ಟರಲ್ಲಿ ವೀಣಾಳನ್ನು ಆಯಾ ಕರೆದುಕೊಂಡು ಬಂದಳು. ಸ್ಕೂಲಿನಿಂದ ಬಿಡುಗಡೆ ಹೊಂದಿ ಬಂದ ವೀಣಾಗೆ ಎದುರಲ್ಲೇ ವಾಸು ಇದ್ದದ್ದು ನೋಡಿ 'ಕೆನೆಯುವಷ್ಟು ಖುಷಿಯಾಯಿತು'. 'ಮಾಮಾ ನಾಳೆ ಶಾಲೆಗೆ ರಜಾ' ಎಂದಳು. ವಾಸು ಅವಳನ್ನು ಬಾಚಿ ತಬ್ಬಿ 'ಹೌದಾ ಮರಿ? ನಂಗೂ ನಾಳೆ ರಜ. ನಿನ್ನನ್ನು ಕಬ್ಬನ್ ಪಾರ್ಕಿಗೆ ಕರೆದೊಯ್ಯುತ್ತೇನೆ, ಆಯ್ತಾ?' ಎಂದ ನಗುತ್ತಾ.

'ನಿಜವಾಗಿಯೂ?' ಕಣ್ಣರಳಿಸಿ ಕೇಳಿದಳು ವೀಣಾ.

'ಹೂಂ, ಖಂಡಿತವಾಗಿ' ಎಂದ.

ಅಮ್ಮನನ್ನು ಹುಡುಕಿಕೊಂಡು ಒಳಗೆ ಓಡಿದಳು.

ಮಾರನೇ ದಿನ ಭಾನುವಾರ. ಎಲ್ಲರೂ ತಿರುಗಾಡಲು ಹೋಗೋಣವೆಂದು ವಾಸುವೇ ನಿರ್ದೇಶಿಸಿದ. ಶ್ರೀನಿವಾಸ ತಾನು ಮಾತ್ರ ಬರುವುದಿಲ್ಲವೆಂದ. 'ನೀವೆಲ್ಲ ಹೋಗಿ ಬನ್ನಿ, ನನಗೆ ಯಾಕೋ ಮೈ ಸರಿಯಿಲ್ಲ ನಾನು ಮನೆಯಲ್ಲೇ ಇರುತ್ತೇನೆ' ಎಂದ.

ಹಿಂದಿನ ದಿವಸ ಶ್ರೀನಿವಾಸ ಸಾಕಷ್ಟು ರಾತ್ರಿಯಾದ ಮೇಲೆ ಮರಳಿದ್ದ. ವಾಸುವೇ ಎದ್ದು ಬಾಗಿಲು ತೆರೆದಿದ್ದ. ಶ್ರೀನಿವಾಸನ ರೀತಿಯಿಂದಲೇ ಅವನು ಕುಡಿದು ಬಂದದ್ದು ತಿಳಿಯಿತು. ವಾಸು ಮೂಗು ಮುಚ್ಚಿಕೊಂಡನೇ ಹೊರತಾಗಿ ಏನನ್ನೂ ಹೇಳಲಿಲ್ಲ. ಈಗ ಮನೆಯಲ್ಲೇ ಉಳಿಯುತ್ತೇನೆಂದಾಗ ಬಲವಂತ ಪಡಿಸಲಿಲ್ಲ. ರತ್ನಳಿಗಂತೂ ಶ್ರೀನಿವಾಸ ಎಲ್ಲಿ ಬರುತ್ತೇನೆಂದು ಹೇಳುವನೋ ಎನ್ನುವ ಭೀತಿ ಇದ್ದೇ ಇತ್ತು. ಈಗ

ತಾನು ಬರುವುದಿಲ್ಲವೆಂದಾಗ ರತ್ನ ನೆಮ್ಮದಿಯ ಉಸಿರುಬಿಟ್ಟಳು. ವೀಣಾಳಿಗಂತೂ ಎಲ್ಲಿಲ್ಲದ ಸಂಭ್ರಮ. ರತ್ನ ಹೇಳಿದ್ದನ್ನೆಲ್ಲಾ ಜಾಣೆಯ ಹಾಗೆ ಕೇಳಿ ರೆಡಿಯಾದಳು.

ರತ್ನ ಆ ದಿನ ವಿಶೇಷ ಆಸಕ್ತಿಯಿಂದ ಸಿಂಗರಿಸಿಕೊಂಡಳು. ವಾಸು ತಂದುಕೊಟ್ಟಿದ್ದ ಹಳದಿಬಣ್ಣದ ಸೀರೆಯುಟ್ಟಳು. ತೋಳಿಲ್ಲದ ರವಿಕೆ ಧರಿಸಿದಳು. ಹುಬ್ಬು ಎಸಳಿನಂತೆ ತೀಡಿಕೊಂಡಳು. ತುಟಿಗಷ್ಟು ರಂಗು ಹಚ್ಚಿದಳು. ಹಣೆಗೆ ಸಣ್ಣದಾಗಿ ತಿಲಕವಿಟ್ಟಳು. ಬೇಗಬೇಗನೆ ರೆಡಿಯಾಗಿ ಚಪ್ಪಲಿ ಮೆಟ್ಟಿಕೊಂಡು, ವೀಣಾಳ ಕೈ ಹಿಡಿದು ಹೊರಟು ನಿಂತು, 'ವಾಸು ಆಯ್ತಾ? ಇನ್ನು ಹೊರಡೋಣವೇ?' ಎಂದು ಆತುರಪಡಿಸಿದಳು. ವಾಸು 'ಇಗೋಬಂದೆ, ಒಂದು ನಿಮಿಷ' ಎಂದು ಹೇಳಿ ಹೊರಟು ಬಂದ. 'ಹೋಗಿಬರುತ್ತೇವೆ ಅಣ್ಣ'-ಎಂದ. ರತ್ನ ಔಪಚಾರಿಕವಾಗಿ 'ಹೋಗಿ ಬರ್ತೀವೀಂದ್ರೆ'. ಎಂದಷ್ಟೇ ಹೇಳಿದಳು. ಶ್ರೀನಿವಾಸ ಉತ್ತರಿಸಲಿಲ್ಲ. ಆದರೆ ರತ್ನಳ ಅಲಂಕಾರವನ್ನು ಒಂದು ಕ್ಷಣ ಬೆರಗುಗಣ್ಣುಗಳಿಂದ, ಅಸೂಯೆಯಿಂದ ಮತ್ತೊಂದು ಕ್ಷಣ ನೋಡಿದ.

ರತ್ನ, ವಾಸು, ವೀಣಾ ಬಿಸಿಲಿನ ಝಳವಿದ್ದರೂ ಮನಸ್ಸಿನ ಉಲ್ಲಾಸದಲ್ಲಿ ಮರೆತು ನಡೆದರು. ವಾಸು ರತ್ನಳನ್ನೇ ಕುರಿತು ಯೋಚಿಸುತ್ತಿದ್ದ. ಅಬ್ಬ! ಅತ್ತಿಗೆ ಎಷ್ಟು ಚೆನ್ನಾಗಿದ್ದಾರೆ! ಎಂದು ಉದ್ಗರಿಸಿದ. ನೋಡಿದಷ್ಟೂ ಮತ್ತೆಮತ್ತೆ ನೋಡಬೇಕೆನಿಸಿತು. ಆದರೆ ಮನಸ್ಸಿನ ಸಂಕೋಚ ಅವನನ್ನು ಮೂಕನಾಗಿಸಿತ್ತು. ರತ್ನಳ ಉಲ್ಲಾಸ, ಸಂಭ್ರಮಕ್ಕೆ ಕೊನೆಯಿಲ್ಲವಾಯಿತು. ತನ್ನ ರೂಪಿನ ಬಗ್ಗೆ ತೀರದ ಹೆಮ್ಮೆಯೆನಿಸಿತು. ಹೊರಡುವುದಕ್ಕೆ ಮುಂಚೆ ಕನ್ನಡಿಯಲ್ಲಿ ನೋಡಿಕೊಂಡಾಗ ತನ್ನ ರೂಪ, ತನಗೇ ಮೋಹಿಸುವಂತೆ ಆಯಿತು. ಅದಕ್ಕಾಗಿಯೇ ಗಂಡುಗಳು ಕೀಟಗಳಂತೆ ತನ್ನ ಬಲೆಗೆ ಬೀಳುತ್ತಾರೆ. ತನ್ನ ಜೊತೆ ಮಾತಾಡಲು ಬಾಯಿ ಬಿಡುತ್ತಾರೆ ಎಂದುಕೊಂಡಳು.

ಸ್ವಲ್ಪ ದೂರ ನಡೆದು ಆಟೋ ಹತ್ತಿದರು. ರತ್ನ ಹೇಳಿದಳು. 'ವಾಸು ಕಬ್ಬನ್ ಪಾರ್ಕಿಗೆ ಬೇಡ, ಲಾಲ್‌ಬಾಗ್‌ಗೇ ಹೋಗೋಣ' ಎಂದಳು. ವಾಸುಗೆ ಅತ್ತಿಗೆಯ ಆಸೆಯನ್ನು ನಿರಾಕರಿಸುವ ಮನಸ್ಸಾಗಲಿಲ್ಲ. ವೀಣಾಳಿಗೆ 'ಕಬ್ಬನ್ ಪಾರ್ಕ್' ಎಂದು ಹೇಳಿದ್ದ. ಮಕ್ಕಳಿಗೆ ಬೇಕಾದ ಆಕರ್ಷಣೆ ಇದ್ದುದು ಅಲ್ಲಿ. ಆದರೆ ಅತ್ತಿಗೆ 'ಬೇರೆಡೆಗೆನ್ನುತ್ತಾರೆ'. ವೀಣಾಳನ್ನು ಬೇಕಾದರೆ ಮುಂದಿನವಾರ ಕರೆದೊಯ್ದರಾಯಿತು. ಇವತ್ತು ಅತ್ತಿಗೆಯ ಆಸೆಯೇ ಪೂರ್ತಿಯಾಗಲಿ'-ಎಂದು ಯೋಚಿಸಿ ಆಟೋದವನಿಗೆ 'ಲಾಲ್‌ಬಾಗ್'ಗೆ ಎಂದ.

ಸಂಜೆಯವರೆಗೆ ಸುತ್ತಾಡಿದರು. ಮನತುಂಬಾ ಮಾತಾಡಿದರು. ರತ್ನ, ಶ್ರೀನಿವಾಸನ, ತನ್ನ ಕಥೆ ಹೇಳಿದಳು. ಹೆಂಡತಿಯನ್ನು ಸಾಕಲಾರದೆ ಹಿಂಸಿಸುವುದನ್ನು ತಿಳಿಸಿದಳು, 'ವಾಸು ನೀನಿಲ್ಲದಿದ್ದರೆ ನನಗೆ ಬದುಕುವ ಆಸೆ ಸಾಯುತ್ತಿತ್ತು. ನಿಮ್ಮಣ್ಣನೊಂದಿಗಿನ ಬಾಳು ಭಯಂಕರವೆನಿಸುತ್ತಿತ್ತು. ಸದಾ ಕುಡಿತ, ಜೂಜು, ಇಸ್ಪೀಟನ್ನು ಬಿಟ್ಟರೆ ಬಹುಶಃ ನಿಮ್ಮಣ್ಣ ಇನ್ನೇನೂ ಕಂಡಿರಲಾರ, ಹೆಂಡತಿ, ಮಗಳು ಇದ್ದಾರೆನ್ನುವ ಪ್ರಜ್ಞೆಯಿಲ್ಲ.

ಅವರನ್ನು ಸಾಕಿ, ಅವರ ಅವಶ್ಯಕತೆಗಳನ್ನು ಪೂರೈಸಬೇಕೆನ್ನುವ ಬುದ್ಧಿಯಿಲ್ಲ. ಅಂತೂ ಇಬ್ಬರೂ ಬದುಕಿದ್ದೇವೆ. ಎಂತಹ ಬದುಕೆನ್ನುವುದು ಮಾತ್ರ ಯಾರೂ ತಿಳಿಯುವುದು ಬೇಡ. ಮದುವೆಗೆ ಮುಂಚೆ ಆಸೆಗಳನ್ನೆಲ್ಲಾ ಹೊತ್ತು ತಂದಿದ್ದೆ. ಆದರೆ ಅವೆಲ್ಲಾ ಈಗ ಚೆಲ್ಲಾಪಿಲ್ಲಿಯಾಗಿವೆ. ಬಯಸಿದ ಸೀರೆ ಕೊಳ್ಳುವ ಹಾಗಿಲ್ಲ, ಮಗುವಿಗೊಂದು ಬಟ್ಟೆ ಕೊಳ್ಳುವ ಹಾಗಿಲ್ಲ. ವೀಣಾಳ ಶಾಲೆಗೆ ಫೀಸು ಕಟ್ಟುವುದಕ್ಕೂ ಗತಿಯಿಲ್ಲ. ಇಂಥಾದ್ದರಲ್ಲಿ ಹೇಗೆ ತಾನೇ ನಾನು ಬದುಕಿರಲು ಸಾಧ್ಯವಾಸು? ನೀನೇ ಹೇಳು?.....ಈ ತಂಪು ಹೊತ್ತಲ್ಲಿ ಇದನ್ನೆಲ್ಲಾ ಹೇಳಿ ನಿನ್ನ ಮನಸ್ಸಿಗೆ ನೋವುಂಟು ಮಾಡುತ್ತಿದ್ದೇನೆ ಕ್ಷಮಿಸು. ನನಗೆ ಆತ್ಮೀಯರು ಯಾರೂ ಇಲ್ಲದ್ದಕ್ಕಾಗಿ ನಿನ್ನಲ್ಲಿ ನಾನು ಇಷ್ಟು ಸಲುಗೆಯಿಂದ ಎಲ್ಲವನ್ನೂ ಹೇಳಿಕೊಳ್ಳುತ್ತಿದ್ದೀನಿ ಅಷ್ಟೆ. ನಿನ್ನನ್ನು ನೋಯಿಸುವ ಉದ್ದೇಶವಿಲ್ಲ' ಎಂದಳು.

ವಾಸುವಿಗೆ ಅತ್ತಿಗೆಯ ಬಾಳಿನ ವಿಚಾರ ತಿಳಿದು ತೀರಾ ಕೆಡುಕೆನಿಸಿತು. ಅವಳ ನೋವಿಗೆ ಕಾರಣನಾದ ಶ್ರೀನಿವಾಸನ ಬಗ್ಗೆ ಸಿಟ್ಟು ಬಂತು. ಛೆ! ಛೆ ಒಳ್ಳೆ ಅತ್ತಿಗೆ, ಇವಳಿಗೆ ಇಷ್ಟು ಕಷ್ಟ ಬರುವುದು ತೀರಾ ಅನ್ಯಾಯ–ಎಂದಾಲೋಚಿಸಿದ. ಅತ್ತಿಗೆಯನ್ನು ಸಮಾಧಾನ ಮಾಡಬೇಕಾಗಿತ್ತು ಮೆಲ್ಲನೆ ನುಡಿದ.

'ನೀವು ಬೇಸರ ಪಡಬೇಡಿ ಅತ್ತಿಗೆ. ನನಗ್ಯಾರಿದಾರೆ ಹೇಳಿ? ನಿಮಗೇನಾದರೂ ಬೇಕೆನಿಸಿದರೆ ನೀವು ನನ್ನಲ್ಲಿ ಕೇಳಿ. ಸಂಕೋಚ ಪಟ್ಟು ಕೊಳ್ಳಬೇಡಿ. ನೀವೇನೂ ಬೇರೆಯವರಲ್ಲವಲ್ಲ?'.... ಎಂದ.

ಅದು ಹೇಗೆ ಸಾಧ್ಯ? ನಿನಗೂ ಅಮ್ಮ ಅಪ್ಪ, ತಮ್ಮ ತಂಗಿ ಎಲ್ಲಾ ಇರುವಾಗ ನಿನ್ನಿಂದ ನಾವು ಸಹಾಯ ನಿರೀಕ್ಷಿಸುವುದು ಬಹಳ ತಪ್ಪಾಗುತ್ತೆ ವಾಸು.

'ನಿಮಗ್ಯಾಕೆ ಆ ವಿಚಾರ, ಯಾರಿಗೂ ಅನ್ಯಾಯವಾಗದ ಹಾಗೆ ನಾನು ನೋಡ್ಕೊಳ್ತೇನೆ?' ಎಂದು ಭರವಸೆ ನೀಡಿದ.

ರತ್ನಳ ಮುಖ ಮಿಂಚಿತು. 'ನಿನ್ನ ಉಪಕಾರವನ್ನು ಖಂಡಿತ ಮರೆಯುವುದಿಲ್ಲ ವಾಸು. ಯಾವುದೋ ಜನ್ಮದ ಋಣ ಅಂತ ಕಾಣುತ್ತೆ ನೀನು ಇಲ್ಲಿಗೆ ಬಂದದ್ದು– ಎಂದಳು ನಸುನಗುತ್ತಾ.

ವಾಸು, ರತ್ನ ಇಷ್ಟು ಬೇಗ ಸಮಾಧಾನ ಹೊಂದಿ ನಕ್ಕದ್ದನ್ನು ಕಂಡು ಹಿಗ್ಗಿದ. ಸಂಜೆ ಬಾಡುವಂತಿತ್ತು. ದೂರದಲ್ಲಿ ವೀಣಾ ಜಿಂಕೆಗಳಿಗೆ ಹುಲ್ಲು ತಿನ್ನಿಸುತ್ತಾ, ಕೇಕೆ ಹಾಕುತ್ತಾ, ನಗುತ್ತಾ ಮೈ ಮರೆತಿದ್ದಳು. ವಾಸುವಿಗೆ ಹೋಗೋಣವೆನಿಸಿತ್ತು. ರತ್ನಳಿಗೆ ಮನೆ ಸೇರುವುದೇ ಬೇಡವಾಗಿತ್ತು. ವಾಸು ಹೊರಡೋಣವೆಂದಾಗ ಒಲ್ಲದ ಮನಸ್ಸಿನಿಂದ ಎದ್ದಳು. ವೀಣಾಳನ್ನು ಕೂಗಿ ಕರೆದಳು. ಅವಳು ಆಟದಲ್ಲಿದ್ದುದರಿಂದ ರತ್ನಳ ಕೂಗು ಕಿವಿಯ ಮೇಲೆ ಬಿದ್ದಂತಾಗಲಿಲ್ಲ. ಮತ್ತೊಮ್ಮೆ ವಾಸು, ರತ್ನ ಇಬ್ಬರೂ ಒಟ್ಟಿಗೆ ಕರೆದರು. ವೀಣಾ ಬಂದು ಯಾಕೆಂದು ಕೇಳಿದಳು. ಹೋಗೋಣವೆಂದಾಗ ಸೊಟ್ಟ ಮೋರೆಯಿಟ್ಟಳು. 'ಹೂಂ' ಎಂದು ಮುಖ ಊದಿಸಿಕೊಂಡೇ ಜೊತೆಗೆ ನಡೆದಳು.

ಇಷ್ಟು ಹೊತ್ತೂ ಆಟದಲ್ಲಿ ಮೈಮರೆತಿದ್ದ ವೀಣಾಳಿಗೆ, ಇದ್ದಕ್ಕಿದ್ದಂತೆ ಈಗ ಹೊಟ್ಟೆ ಚುರುಗುಟ್ಟಿತು. 'ಮಾಮ' ಹಸಿವಾಗ್ತಿದೆ ಎಂದಳು ವಾಸು ದಾರಿಯಲ್ಲಿ ಹೋಟೆಲೊಂದಕ್ಕೆ ಕರೆದೊಯ್ದು ಕಂಠಪೂರ್ತಿ ತಿನ್ನಿಸಿದ. 'ಎಷ್ಟು ದಿವ್ಸದ ಮೇಲೆ ಹೋಟೆಲು ಮುಖ ಕಂಡದ್ದೊ!' ಎನಿಸಿತು ರತ್ನಳಿಗೆ.

ಅಂತೂ ಸುಮಾರು ಏಳು ಗಂಟೆಗೆ ಮನೆ ಸೇರಿದರು. ಶ್ರೀನಿವಾಸ ಮನೆ ಬೀಗ ಹಾಕಿಕೊಂಡು ಪಕ್ಕದ ಮನೆಯವರಿಗೆ ಬೀಗದ ಕೈ ಕೊಟ್ಟು ಎಲ್ಲಿಯೋ ಹೋಗಿದ್ದ. ಮನೆಗೆ ಬಂದಾಗ, ಮನೆಯ ಬಾಗಿಲಿಗೆ ಬೀಗ ನೋಡಿ ಗಾಭರಿಯಾದರೂ ಪಕ್ಕದ ಮನೆಯಲ್ಲಿ ವಿಚಾರಿಸಿದ್ದಕ್ಕೆ ಸ್ವಲ್ಪ ಸಮಾಧಾನವಾಯಿತು. ಎಲ್ಲರೂ ತುಂಬಾ ದಣಿದಿದ್ದರು. ರತ್ನಳಿಗೆ ಮತ್ತೆ ಅಡಿಗೆಗೆ ಕೂರುವುದೆಂದರೆ ತಲೆ ನೋವೆನಿಸಿತು. ಬಂದದ್ದೇ ಕುರ್ಚಿಯೊಂದರಲ್ಲಿ ಕುಕ್ಕರಿಸಿ ಮೈ ಚಾಚಿದಳು. ವಾಸುವಿಗೆ ಅತ್ತಿಗೆಯ ದಣಿವು ಅರ್ಥವಾಯಿತು. ಕೋಣೆಗೆ ಹೋಗಿ ಬಟ್ಟೆ ಬದಲಾಯಿಸಿ ಬಂದ. ಇನ್ನೂ ರತ್ನ ಕುರ್ಚಿಯಲ್ಲಿ ಕೂತೇ ಇದ್ದಳು. ವೀಣಾ ಮಂಚ ಹತ್ತಿ ಮಲಗಿದಳು. ವಾಸುವೇ ರತ್ನಳನ್ನು 'ಅತ್ತಿಗೆ ನೀವು ವಿಶ್ರಾಂತಿ ತೆಗೆದುಕೊಳ್ಳಿ, ನಾನೇ ಇವತ್ತಿನ ಅಡಿಗೆ ಮಾಡಿ ಬಿಡ್ತೀನಿ. ಇಷ್ಟು ದಿವ್ಸ ನನ್ನ ಕೈರುಚಿ ನೋಡಿರಲಿಲ್ಲ. ಈಗ ನೋಡುವಿರಂತೆ' ಎಂದ ನಗುತ್ತಾ. ರತ್ನಳಿಗೆ ಈಗ ಅಡಿಗೆ, ಊಟದ ಬಗ್ಗೆ ತಲೆ ಕೆಡಿಸಿಕೊಳ್ಳುವ ಮನಸ್ಸಿರಲಿಲ್ಲ. ಹಾಯಾಗಿ ಮಲಗಿದರೆ ಸಾಕೆನಿಸಿತ್ತು.

'ವಾಸು ನನಗೇನೂ ಊಟಗೀಟ ಬೇಕಿಲ್ಲ. ನಿನಗೆ ಮಾತ್ರವೇ ಮಾಡಿಕೊಂಡರಾಯಿತು. ನಿಮ್ಮಣ್ಣ ಮನೆಗೆ ಸೇರುವುದು ಯಾವಾಗಲೋ ನಡು ರಾತ್ರಿಗೆ, ಇಲ್ಲ ಬೆಳಗಿನ ಜಾವಕ್ಕೆ' ಎಂದಳು.

'ನನಗೇನೂ ಬೇಕಿಲ್ಲ ಅತ್ತಿಗೆ. ತಿಂದದ್ದು ಈಗಲೇ ಗಂಟಲು ದಾಟಿ ಬರುವ ಹಾಗಿದೆ'–ಎಂದ 'ಹಾಗಾದರೆ ಅಡಿಗೆ ಪ್ರೋಗ್ರಾಂ ಕ್ಯಾನ್ಸಲಾ'–ಎಂದು ನಕ್ಕಳು. ವಾಸುವಿಗೂ ಅಷ್ಟೇ ಸಾಕಾಗಿತ್ತು. 'ಅದೇ ಸರಿ ಅತ್ತಿಗೆ' ಎಂದು ಮತ್ತೆ ತನ್ನ ಕೋಣೆಯತ್ತ ನಡೆದ.

* * *

ವಾಸು ಸಂಪೂರ್ಣವಾಗಿ ರತ್ನಳ ವಶವಾಗಿ ಹೋಗಿದ್ದ. ಬರುವ ಸಂಬಳವೆಲ್ಲಾ ಅವಳ ಆಸೆಗಳ ಪೂರೈಕೆಗೇ ಸಾಲುತ್ತಿರಲಿಲ್ಲ. ಶ್ರೀನಿವಾಸ ರತ್ನಳ ಸಂಬಂಧ, ಅವರ ನಡವಳಿಕೆ ಅರ್ಥವೇ ಆಗುತ್ತಿರಲಿಲ್ಲ. ಒಮ್ಮೆ ಇಬ್ಬರೂ ಒಬ್ಬರನ್ನೊಬ್ಬರು ದ್ವೇಷಿಸುವಂತೆನಿಸಿದರೆ ಮತ್ತೊಮ್ಮೆ ಇಬ್ಬರೂ ಒಟ್ಟಿಗೆ ವಾಸುವನ್ನು ಸುಲಿಯುವುದರಲ್ಲಿ ಸಹಕರಿಸುತ್ತಿದ್ದಂತೆನಿಸಿತು. ರತ್ನಳ ಸೀರೆಗಳಿಗೆ, ಅಲಂಕಾರ ಸಾಮಗ್ರಿಗಳಿಗೆ, ವೀಣಾಳ ಬಟ್ಟೆ ಬರೆಗೆ, ಅವಳ ಸ್ಕೂಲ್ ಫೀಸ್‌ಗೆ, ಸಾಲದ್ದಕ್ಕೆ ಶ್ರೀನಿವಾಸನ ಕುಡಿತಕ್ಕೆ ಜೂಜಿಗೆ ಹಣ ಸರಬರಾಜು ಮಾಡುವಷ್ಟರಲ್ಲಿ ವಾಸುವಿಗೆ ಸಾಕು ಸಾಕಾಗಿ ಹೋಗಿತ್ತು. ಹಣದ ಮುಗ್ಗಟ್ಟನ್ನು ಅನುಭವಿಸಿದರೂ ಅವರು ಕೇಳಿದ್ದು ಇಲ್ಲವೆನ್ನುವುದು ವಿಷಾದಕರವೆಂದೇ

ಭಾವಿಸಿದ್ದ. ಮನೆಗೆ ಬೇಕಾದ ಸಾಮಾನು ಸರಂಜಾಮುಗಳಿಗೂ ವಾಸುವಿನ ಹಣವೇ ಬೇಕಾಗುತ್ತಿತ್ತು.

ಇಷ್ಟೆಲ್ಲಾ ಕಷ್ಟವಾದರೂ ವಾಸುವಿಗೆ, 'ರತ್ನಳು ತನ್ನ ವಿಚಾರದಲ್ಲಿ ತೋರುವ ಪ್ರೀತಿ, ವಾತ್ಸಲ್ಯ ಆದರಗಳಿಗೆ ತಾನು ಮಾಡುವುದು ಅಲ್ಪವೆನಿಸುತ್ತಿತ್ತು. ಇವರನ್ನು ನೋಡಿಕೊಳ್ಳುವುದರಲ್ಲಿ ಮನೆಯನ್ನೇ ಮರೆತ. ತಾಯಿ, ತಂದೆಯ ವಿಚಾರವಾಗಿ ಬರೆದು ಔಷಧಿ ಆರೈಕೆಗಾಗಿ ಸ್ವಲ್ಪ ಹಣ ಬೇಕೆಂದು ಬರೆದರೂ ವಾಸು ಅದನ್ನು ನಿರ್ಲಕ್ಷಿಸಿದ. ತಂದೆಯ ಸ್ಥಿತಿ ಗಂಭೀರವೆಂದಾಗಲೂ ನೋಡಲು ಹೋಗಲಿಲ್ಲ. 'ಅತ್ತಿಗೆಗೆ ಇತ್ತೀಚೆಗೆ ಮೈಗೆ ಸರಿಯಿರಲಿಲ್ಲವಾದ್ದರಿಂದ ಅವಳಿಗ ತೊಂದರೆಯಾದೀತೆಂದು ಹೆದರಿ ತಂದೆಯ ಖಾಯಿಲೆಯನ್ನೂ ಮರೆತ.

'ವಾಸುವಿನ ತಾಯಿಗೆ ಬೇಸರವಾಯಿತು. ವಾಸುವಿನ ಇಷ್ಟೊಂದು ನಿರ್ಲಕ್ಷ್ಯಕ್ಕೆ ಆಕೆ ಕಾರಣವನ್ನು ಊಹಿಸದಾದಳು. ಯೋಗ್ಯಮಗನೆಂದು ನಂಬಿಕೊಂಡಿದ್ದ ಆಕೆಯ ಕಣ್ಣು ಹನಿಗೂಡಿತು. ದೇವರೇ ಗಂಡನ ಪರಿಸ್ಥಿತಿ ಹೀಗಿರುವಾಗ ಏನಾದರೂ ಹೆಚ್ಚುಕಮ್ಮಿಯಾದರೆ ಗತಿಯೇನೆಂದು ಗಾಭರಿಯಾದರು. ಕಾದು ಕಾದು ಕಾಗದವನ್ನು ಕಾಣದೆ ಕಂದಿ ಹೋದರು. ತಂಗಿ ಲಕ್ಷ್ಮಿಗಂತೂ ತಾಯಿಗೆ ಸಮಾಧಾನ ಹೇಳುವುದೇ ಕಷ್ಟವಾಯಿತು. ಸಿಟ್ಟುಗೊಂಡು ಅಣ್ಣನಿಗೆ ಸರಿಯಾಗಿ ಬುದ್ಧಿ ಹೇಳಬೇಕೆಂದುಕೊಂಡಳು. ಆದರೆ ಅವನನ್ನು ಕರೆಸುವುದಾದರೂ ಹೇಗೆ? ಬರೆಯುವ ಕಾಗದಗಳಿಗೆ ಉತ್ತರವಿಲ್ಲ ಯೋಚಿಸಿ ಕೊನೆಗೆ ಮುರಳಿಯನ್ನು ವಾಸುವಿನ ಬಳಿಗೆ ಕಳುಹಿಸಿದರು. ತಮ್ಮನ ಬರವಿನಿಂದ ವಾಸುವಿಗೆ ಬೇಸರವಾಯಿತೇ ವಿನಹ ಸಂತೋಷವಾಗಲಿಲ್ಲ. ಮುರಳಿಯಂತೂ 'ಅಮ್ಮನನ್ನು ನೋಡಲು ಊರಿಗೆ ಬರಲೇಬೇಕಂತೆ' ಎಂದು ಒತ್ತಾಯಪಡಿಸಿದಾಗ ವಿಧಿಯಿಲ್ಲದೆ ಹೋಗಬೇಕೆಂದುಕೊಂಡ. ಆದರೆ ಅತ್ತಿಗೆಯ ನೆನಪು ಮತ್ತೆ ಅವನ ಮನಸ್ಸನ್ನು ಸಡಿಲಿಸಿತು. ವಾಸು ಮುರಳಿಗೆ ಹೇಳಿದ. 'ಮುರುಳಿ ನೀನು, ನಾನು ಬರುವವರೆಗೂ ಇಲ್ಲೇ ಇರು, ಅತ್ತಿಗೆಗೆ ಸ್ವಲ್ಪ ಸಹಾಯವಾಗುತ್ತೆ'– ಎಂದು. ಮುರುಳಿಗೆ ಸಂತೋಷವಾಗಲಿಲ್ಲ. ಆದರೆ ಅಣ್ಣ ಹೇಳಿದ್ದಕ್ಕೆ ಪ್ರತಿ ಹೇಳುವಂತಿರಲಿಲ್ಲ. ಬಾಯಿ ಮುಚ್ಚಿಕೊಂಡು ಅಣ್ಣನ ಮಾತಿಗೆ ಒಪ್ಪಿಕೊಂಡ.

ಅಂತೂ ಇಂತೂ ಸಾಹಸ ಮಾಡಿ ಹಳ್ಳಿಗೆ ಹೊರಟ. ಅಲ್ಲಿನ ಪರಿಸ್ಥಿತಿಯನ್ನು ನೋಡಿ ಕರುಳು ಹಿಂಡಿದಂತಾಯಿತು. ತಾಯಿ ಅಸ್ಥಿಪಂಜರವಾಗಿದ್ದಾರೆ. ತಂಗಿ ವಯಸ್ಸಿನಲ್ಲಿ ತುಂಬಿಕೊಂಡು ಇರಬೇಕಾಗಿದ್ದವಳು ಚೆನ್ನಾಗಿ ಸೊರಗಿ ಬತ್ತಿದ್ದಾಳೆ. ತಂದೆಯಲ್ಲಿ ಉಸಿರಾಟದ ಚಲನೆ ಹೊರಟು ಬೇರಾವ ಚಲನೆಯೂ ಇಲ್ಲದೆ ನಿಶ್ಶೇಷವಾಗಿ ಬಿದ್ದಿದ್ದಾರೆ. ಈ ಬಾರಿ ಸರಿಯಾಗಿ ಮಳೆ ಬೆಳೆಯಾಗದೆ, ನೊಡಿಕೊಳ್ಳುವವರಿಲ್ಲದೆ ಕಣಜಗಳೆಲ್ಲಾ ಖಾಲಿಯಾಗಿವೆ. ತನ್ನಿಂದ ಊರಿಗೆ ಬರುತ್ತಿದ್ದ ಹಣವೂ ಇರಲಿಲ್ಲ. ಇವರು ಇಷ್ಟು ದಿವಸ ಹೇಗಪ್ಪಾ ಬದುಕಿದರು?–ಎಂದು ಚಿಂತೆಯಿಂದ ಆಲೋಚಿಸುವಂತಾಯಿತು.

'ಅಮ್ಮ' ಎಂದು ಮೆಲ್ಲನೆ ಕೂಗಿದ.

ತಾಯಿಗೆ ಮಗನ ಮೇಲೆ ಸಿಟ್ಟು, ತಮ್ಮ ಸಾವು ನೋವಿನ ಚಿಂತೆಯೂ ಇಲ್ಲದೆ, ಬರೆದ ಪತ್ರಗಳಿಗೆ ಉತ್ತರವೂ ಇಲ್ಲದೆ ನಿರ್ಲಕ್ಷ್ಯ ಮನೋಭಾವದಿಂದ ಇದ್ದ ಮಗನನ್ನು ನೋಡಲೇಬಾರದೆಂದುಕೊಂಡಿದ್ದರೂ ಹೃದಯ ಕೇಳದೆ ಮುರುಳಿಯ ಕೈಯಲ್ಲಿ ಕರೆ ಕಳುಹಿಸಿದ್ದು ನಿಜವಾದರೂ, ಈಗ ಅವನೇ ಮಾತಾಡಿಸ ಬಂದಾಗ ಅದುಮಿಟ್ಟುಕೊಂಡಿದ್ದ ನೋವು ಸಿಟ್ಟಿನಲ್ಲಿ ಕಾಣಿಸಿಕೊಂಡಿತ್ತು. ಮಾತನಾಡಿಸಿದರೆ ಎಲ್ಲಿ ಮೃದುವಾಗಿ ಬಿಟ್ಟು ಅವನ ತಪ್ಪು ಅವನಿಗರ್ಥವಾಗದೆ ಹೋಗುತ್ತದೆಯೋ ಎಂದು ಹೆದರಿ ಸುಮ್ಮನಿದ್ದರು. ವಾಸುವಿಗೆ ತಾಯಿಂದ ಉತ್ತರ ಬರದಿದ್ದುದು ತೀರಾ ಕೆಡುಕೆನಿಸಿದರೂ, ಬಲವಂತದಿಂದ ಮಾತಾಡಿಸಿದರೆ ಎದೆಯ ಸಿಟ್ಟು ಸಿಡಿಯಬಹುದು. ನಾಳೆ ಮಾತನಾಡಿಸಿದರಾಯಿತು. ಅಷ್ಟು ಹೊತ್ತಿಗೆ ಅವರ ಕೋಪದ ಕಾವಾರಿ ತಣ್ಣಗಾಗಿರುತ್ತದೆ', ಎಂದುಕೊಂಡು ತನ್ನ ಪಾಡಿಗೆ ತಾನು ಅವಳಿಂದ ದೂರ ಸರಿದ. ಆ ದಿವಸವಿಡೀ ಯಾರೂ ಮಾತಾಡಿಸಲಿಲ್ಲ. ಮಾಡಿಟ್ಟ ಅಡಿಗೆಯನ್ನೂ ಮೌನವಾಗಿ ಊಟ ಮಾಡಿ ಎದ್ದು ನಡೆದ. ತಂದೆಯನ್ನು ಮಾತಾಡಿಸುವ ಪ್ರಯತ್ನ ಸೋತಿತು. ತಂದೆಗೆ ಪ್ರಜ್ಞೆಯೇ ಇರಲಿಲ್ಲ. ವಾಸು ಎಷ್ಟು ಪ್ರಯತ್ನಿಸಿದರೂ ಅವನು ಯಾರೆಂದು ತಮಗೆ ಗುರುತು ಹಚ್ಚಲು ಆಗಲಿಲ್ಲ. ಸೆಳೆದು ಹೋಗುತ್ತಿರುವ ಕಣ್ಣುಗಳನ್ನು ಕಷ್ಟಪಟ್ಟು ತೆರೆದು ಶೂನ್ಯದತ್ತ ನೋಡಿ ಮತ್ತೆ ಕಣ್ಣು ಮುಚ್ಚಿದರು. ಇವನಿಗೆ ತಂದೆಯ ಸ್ಥಿತಿ ತಾನು ಊಹಿಸಿದ್ದಕ್ಕಿಂತ ಹೆಚ್ಚು ಗಂಭೀರವಾಗಿದೆಯೆಂದು ಬೋಧೆಯಾಯಿತು.

ಮರುದಿವಸ ಬೆಳಿಗ್ಗೆ ಎದ್ದು ಹೊಲಗಳ ಕಡೆ ಹೋಗಿ ಬಂದ. ಹಸಿರು ಕಡ್ಡಿಯೂ ಕಾಣಿಸಲಿಲ್ಲ. ಭೂಮಿ ಬೆಂದು ಬಾಯಿ ಬಿಟ್ಟಿರುವಂತೆ ಎಲ್ಲೆಲ್ಲೂ ಬಿರುಕುಗಳು. ಒಂದು ಸಲ ಸುತ್ತಿ ಬಂದ. ಊರಿನ ಮಧ್ಯದ ಕೆರೆಯೂ ಬತ್ತಿ ತಳ ಕಟ್ಟಿತ್ತು. ಬತ್ತಿದ ಕೆರೆಯ ದಂಡೆಯ ಮೇಲೆ ಹೆಜ್ಜೆ ಹಾಕುತ್ತಿದ್ದಂತೆ, ತಲೆಯಲ್ಲಿ ನೂರಾರು ಯೋಚನೆಗಳು. ಎಲ್ಲವೂ ಕೆಟ್ಟ ಯೋಚನೆಗಳೇ! ಅಕಸ್ಮಾತ್ ತಂದೆಗೇನಾದರೂ ಆದರೆ ತನ್ನ ಬಾಧ್ಯತೆಯೇನು? ಹೇಗೆ ಈ ಬಾಧ್ಯತೆಯನ್ನು ಪೂರೈಸುವುದು? ಅತ್ತಿಗೆಯ ಗತಿಯೇನು?.... ಎಂದೇ ಯೋಚಿಸಿದ.

ಅತ್ತಿಗೆಯ ಕುಟುಂಬ ಒಂದು ಕಡೆ, ತನ್ನ ಕುಟುಂಬ ಮತ್ತೊಂದು ಕಡೆ ಎರಡರಲ್ಲಿ ಯಾವುದನ್ನು ಆರಿಸಿಕೊಳ್ಳುವುದು?- ಎಂದು ಯಾವುದನ್ನೂ ನಿರ್ಧರಿಸಲಾರದವನಾಗಿದ್ದ. ಈ ಸಮಸ್ಯೆ ನಿರ್ಧರಿಸಲಾಗದ ಸಮಸ್ಯೆಯಾಗಿತ್ತು. ತಾಯಿ ತಂಗಿ ಮುಖ್ಯವೆಂದು ಪಿಸುಗುಟ್ಟಿದರೂ, ಅತ್ತಿಗೆಯ ಆಕರ್ಷಣೆ ಬಿಡಿಸಿಕೊಳ್ಳಲಾಗದ ಸರ್ಪ ಬಂಧವಾಗಿತ್ತು. 'ನಾನೇಕೆ ಹೀಗೆ ಆಕರ್ಷಿತನಾಗುತ್ತಿದ್ದೇನೆಂದು ಪ್ರಶ್ನಿಸಿಕೊಳ್ಳುತ್ತಿದ್ದರೂ ಸಮಾಧಾನ ಮಾತ್ರ ಕೈಗೆಟುಕದ್ದಾಗಿತ್ತು. ವಿಚಾರ ಮಾಡಿದಷ್ಟೂ ತಲೆ ದಿಮ್ಮೆನ್ನುತ್ತಿತ್ತು. ಸೋತಕಾಲನ್ನೆಳೆದುಕೊಂಡು ಮನೆ ಸೇರಿದ. ಅಣ್ಣನ ಮ್ಲಾನ ಮುಖವನ್ನು ಕಂಡ ಲಕ್ಷ್ಮಿ

'ಯಾಕಣ್ಣಾ ಒಂದು ಥರಾ ಇದ್ದೀಯ ಮೈಸರಿಯಿಲ್ಲವೇ' ಎಂದು ಆತಂಕದಿಂದ ಕೇಳಿದಳು. ವಾಸು ಏನಿಲ್ಲವೆಂದು ಹಾರಿಕೆಯ ಮಾತಾಡಿದ. ಆದಷ್ಟು ಬೇಗ ಅಲ್ಲಿಂದ ಹೋದರೆ ಸಾಕೆನಿಸಿತು. ಇಲ್ಲಿರುವುದಕ್ಕೆ ಅವನಿಗೆ ಕಸಿವಿಸಿ. ನಾಳೆ ಖಂಡಿತ ಹೊರಟು ಬಿಡಬೇಕೆಂದುಕೊಂಡ.

ರಾತ್ರಿ ತಂದೆಯ ಸ್ಥಿತಿ ತೀರಾ ಹದಗೆಟ್ಟಿತು. ಹೋಗಿ ಡಾಕ್ಟರನ್ನು ಕರೆತಂದ. ಆದರೆ ಪ್ರಯೋಜನವಾಗಲಿಲ್ಲ. ಒಂದೆರಡು ದಿವಸ್ಕಿಂತ ಹೆಚ್ಚಿಗೆ ಬದುಕುವ ಆಸೆಯಿಲ್ಲವೆಂದು ಡಾಕ್ಟರು ತಿಳಿಸಿದರು. ವಾಸುವಿಗೆ ಮೊದಲೇ ಇರಲು ಮನಸ್ಸಿರಲಿಲ್ಲ. ಈಗ ನೋಡಿದರೆ ಎಷ್ಟು ದಿವಸ ಉಳಿಯಬೇಕಾಗುವುದೊ ಹೇಳುವುದು ಕಷ್ಟವಾಗಿತ್ತು. ವಾಸು ಮೂರು ದಿವಸಕ್ಕೆ ಮಾತ್ರ ರಜೆ ಹೇಳಿಬಂದಿದ್ದ. ಹೋಗಲೇಬೇಕು ನಾಳೆ. ತಾಯಿಗೆ ಹೋಗಲು ವಿಷಯ ತಿಳಿಸಿದಾಗ ಕಣ್ಣೀರು ಸುರಿಸಿ ಒಂದು ವಾರವಾದರೂ ಇರು ವಾಸು, ನೀನು ಹೊರಟು ಹೋದರೆ ಈ ಸಮಯದಲ್ಲಿ ನೋಡಿಕೊಳ್ಳುವ ಗಂಡಸರು ಯಾರಿದ್ದಾರೆ ಹೇಳು?-ಎಂದು ಕೇಳಿಕೊಂಡಳು. ತಾಯಿಯ ಕಣ್ಣೀರು ಕರಗಿಸಿದರೂ, ರಜೆಯ ಕೊರತೆಯಿಂದ ಹೋಗಲೇಬೇಕೆಂದೂ ಮತ್ತೆ ಒಂದೆರಡು ದಿವಸದ ನಂತರ ಬರುವುದಾಗಿಯೂ ಭರವಸೆ ನೀಡಿ, ಅವನೆಂದುಕೊಂಡಂತೆ ಮರುದಿವಸವೇ ಹೊರಟು ಬಿಟ್ಟ. ಲಕ್ಷ್ಮಿ ಹೋಗುವಾಗ ಅಣ್ಣನಿಗೆ ಒಂದೆರಡು ಸೀರೆ ಕಳಿಸಬೇಕೆಂದು ಕೇಳಿಕೊಂಡಳು. ವಾಸು ಕಳುಹಿಸುತ್ತೇನೆಂದು ವಾಗ್ದಾನ ಮಾಡಿ ಹೊರಟ.

ಅಲ್ಲಿಂದ ಹೊರಟದ್ದೇ ಅವನಿಗೆ ನಿರಾಳವೆನಿಸಿತು. ಉಸಿರು ಕಟ್ಟುವ ವಾತಾವರಣದಿಂದ ಹೊರಗಿನ ತಂಪು ಗಾಳಿಗೆ ಸಿಕ್ಕಿ ಮನಸ್ಸಿಗೆ ಹಗುರವೆನಿಸಿತು. ಅತ್ತಿಗೆಯ ನೆನಪು ಅಪ್ಪಳಿಸಿ ಬಂತು. ಪಾಪ! ನನಗೋಸ್ಕರ ಎಷ್ಟು ಎದುರು ನೋಡುತ್ತಿರುತ್ತಾರೋ ಎಂದುಕೊಂಡು ಬೇಗ ಬೇಗನೆ ಹೆಜ್ಜೆ ಹಾಕಿದ.

ಹೋಗಿ ಮನೆ ಸೇರುವಾಗ ಸಂಜೆಯಾಗಿತ್ತು. ಅತ್ತಿಗೆ ಮುರುಳಿ ಜೊತೆಗೆ ಕುಳಿತು ಸಂಭ್ರಮದಿಂದ ಹರಟೆ ಹೊಡೆಯುತ್ತಾ ಕೇರಂ ಆಡುತ್ತಿದ್ದಳು. ಮಧ್ಯೆ ಮಧ್ಯೆ ತಮ್ಮ ಹಾಡಿನ ತುಣುಕುಗಳನ್ನು ಹಾಡಿ ಅತ್ತಿಗೆಯನ್ನು ರಂಜಿಸುತ್ತಿದ್ದ. ರತ್ನಳಿಗೆ ಸಂತೋಷವುಕ್ಕಿ ಮುರುಳಿಯ ಕೆನ್ನೆ ಚಿವುಟಿದಳು. ಆಂ,' ಎಂದು ಮುರುಳಿ ನೋವಿನಿಂದ ನರಳಿದ. 'ಮುರುಳಿ ನೀನೂ ಇಲ್ಲೇ ಬಂದು ಇದ್ದು ಬಿಡು. ನೀನು ಇದ್ದರೆ ಹೊತ್ತು ತುಂಬಾ ಚೆನ್ನಾಗಿ ಕಳೆಯುತ್ತೆ-ಎಂದು ಹೇಳುತ್ತಿದ್ದಂತೆ ವಾಸು ಪ್ರವೇಶಿಸಿದ. ವಾಸುವಿನ ಮುಖ ನೋಡುತ್ತಿದ್ದಂತೆ ಚಂಗನೆ ಎದ್ದಳು ರತ್ನ. ಅಬ್ಬ ವಾಸು; ನೀನು ಹೋಗಿದ್ದು ಮೂರೇ ದಿವ್ಸವಾದರೂ ಮೂರು ತಿಂಗಳಂತೆ ಎನಿಸಿತು. ಸದ್ಯ ಬಂದು ಬಿಟ್ಟೆಯಲ್ಲ? ನೀನೆಲ್ಲಿ ಬರುವುದಿಲ್ಲವೋ ಎಂದು ಹೆದರಿದ್ದೆ. ವೀಣಾಳಿಗೆ ನಿದ್ರೆ ಹೋಗುವುದೇ ಕಷ್ಟವಾಗಿದೆ. 'ಮಾಮ' 'ಮಾಮ' ಅಂತ ಒಂದೇ ಸಮನೆ ರಂಪ ಮಾಡುತ್ತಿದ್ದಾಳೆ ಎಂದು ಬಡ

ಬಡನೆ ಮಾತನಾಡಿದಳು. ಸ್ವಲ್ಪ ಹೊತ್ತು ಸುಮ್ಮನಿದ್ದು ಮೆಲ್ಲನೆ ಬೆನ್ನ ಮೇಲೆ ಕೈ ಸವರಿ, ಇದೇನು ವಾಸು ಎರಡು ದಿವಸದಲ್ಲಿ ಎಷ್ಟು ಸೊರಗಿ ಹೋಗಿದ್ದೀ? ಎಂದು ಆತಂಕದ ಧನಿಯಲ್ಲಿ ವಿಚಾರಿಸಿದಳು.

ವಾಸು ಅವಳ ಪ್ರಶ್ನೆಗಳಿಗೆ ಉತ್ತರಿಸುವ ಸ್ಥಿತಿಯಲ್ಲಿರಲಿಲ್ಲ. ರತ್ನಳ ವಾತ್ಸಲ್ಯದಿಂದ ಕೂಡಿದ ಮುಖ ನೋಡಿದ. ಉತ್ತರಿಸದಿದ್ದರೆ ಬೇಸರವಾಗುತ್ತದೆಂದು ಭಾವಿಸಿ ಅಪ್ಪನ ಮೈ ಸರಿಯಿಲ್ಲ, ತೀರಾ ಗಂಭೀರವಾಗಿದೆ ಅವರ ಸ್ಥಿತಿ. ನನ್ನ ಮನಸ್ಸಿಗೇನೂ ಚೆನ್ನಾಗಿಲ್ಲ ಅತ್ತಿಗೆ' ಎಂದು ಹೇಳಿ ಒಳಗೆ ಹೋದ. ರತ್ನಳಿಗೆ ಅವ್ಯಕ್ತ ಭೀತಿ. 'ವಾಸು ವೇನಾದರೂ ತನ್ನನ್ನು ಬಿಟ್ಟು ಹೊರಟು ಹೋದರೆ?..... ದೇವರೇ ಹಾಗಾಗದಿರಲಿ ಎಂದು ಬೇಡಿಕೊಂಡಳು. ಅವಳ ಅಂಗಾಂಗವೆಲ್ಲವೂ ಕೇವಲ ಸ್ವಾರ್ಥದಿಂದ ತುಂಬಿತ್ತು. ನಿಜವಾಗಿ ವಾಸುವಿನ ಸ್ಥಿತಿಗೆ ತೋರಿಸಬೇಕಾದ ಅನುಕಂಪಕ್ಕಿಂತ ಅವನೆಲ್ಲಿ ಅಪ್ಪ, ಅಮ್ಮ, ತಂಗಿ ಎಂದು ತನ್ನಿಂದ ಓಡಿ ಹೋಗುವನೋ-ಎಂದು ಹೆದರಿಕೆಯಾಯಿತು. ಆದರೆ ಅದರೊಂದಿಗೆ ವಾಸುವಿನ ದೌರ್ಬಲ್ಯದ ನೆನಪಿನಿಂದ ನೆಮ್ಮದಿಯಾಯಿತು. ತನ್ನ ಕಣ್ಣೀರೊಂದೇ ಸಾಕು ಅವನನ್ನು ಕರಗಿಸಲು. ತನಗಾಗಿ ಹಂಬಲಿಸುತ್ತಾನೆ. ತನ್ನ ಆಸೆಗಳನ್ನೆಲ್ಲಾ ತಲೆ ಮೇಲೆ ಹೊತ್ತು ಪೂರೈಸುತ್ತಾನೆ. ಅವನು ಪ್ರೀತಿಗಾಗಿ ಹಸಿದಿದ್ದಾನೆ ಅದನ್ನು ತಾನು ಕೊಡಬಲ್ಲೆ'-ಎಂದು ಭರವಸೆ ಮೂಡುತ್ತದೆ ಅವಳಿಗೆ.

ಮರುದಿವಸವೇ ವಾಸು, ಮುರುಳಿಯನ್ನು ಊರಿಗೆ ಕಳುಹಿಸಿ ಬಿಟ್ಟ. ಆದರೆ ಸೀರೆಗಾಗಿ ತಂಗಿಯ ಬೇಡಿಕೆಯನ್ನು ಹೇಗೆ ಪೂರೈಸುವುದೆಂದು ಯೋಚಿಸಿದ. ಅತ್ತಿಗೆಯನ್ನೇ ಕೇಳಿದರಾಯಿತು. ಮೊದಲ ತಾರೀಖಿಗೆ ತಂದ ಸಂಬಳವನ್ನು ಅವಳ ಕೈಗೆ ಕೊಟ್ಟು ಬಿಡುತ್ತಿದ್ದ. ಬೇಕೆನಿಸಿದಾಗ ತಾನು ಅವಳಿಂದ ಕೇಳಿ ಪಡೆಯುತ್ತಿದ್ದ. ಈಗ ಕೇಳಿದರೆ ತಪ್ಪಾಗಲಾರದೆಂದು ರತ್ನಳನ್ನು ಹಣ ಕೇಳಿದರೆ, ಅಯ್ಯೋ ವಾಸು, ಎಂಥಾ ಕೆಲ್ಸ ಆಗೋಯ್ತು. ಮನೆಗೆ ಬೇಕಾದ ಸಾಮಾನು ತಂದು ಬಿಟ್ಟೆ. ಜೊತೆಗೆ ಮೊನ್ನೆ ಯಾರೋ ಒಂದು ಸೀರೆ ತಂದು ತೋರಿಸಿದರು. ತುಂಬಾ ಚೆನ್ನಾಗಿತ್ತು. ಬಿಡೋಕೇ ಮನಸ್ಸು ಬರಲಿಲ್ಲ. ತೆಗೆದಿರಿಸಿಕೊಂಡೆ. ವೀಣಾಳಿಗೆ ಸ್ಕೂಲಿನಲ್ಲಿ ಏನೋ ಫಂಕ್ಷನ್ ಇದೆಯಂತೆ. ಇಪ್ಪತ್ತೈದು ರೂಪಾಯಿ ಕಳಿಸಬೇಕೆಂತ ಹೇಳಿದರು. ಅವಳಿಗೆ ಕೊಟ್ಟುಬಿಟ್ಟೆ. ಅದಕ್ಕೇ ದುಡ್ಡೇನೂ ಉಳಿಯಲಿಲ್ಲ. ನಿಮ್ಮಣ್ಣ ಬೇರೆ ಸಾಲ ಅಂತ ಐವತ್ತು ರೂಪಾಯಿ ಪೀಡಿಸಿ ಕಿತ್ತುಕೊಂಡು ಹೋದರು ಎಂದು ದೊಡ್ಡದಾಗಿ ವಿವರವನ್ನು ಒಪ್ಪಿಸಿದಳು. ವಾಸುವಿಗೆ ಏನೂ ಹೇಳಲಾಗಲಿಲ್ಲ. 'ಹೋಗಲಿ ಬಿಡಿ ಅತ್ತಿಗೆ' ಎಂದಷ್ಟೇ ನುಡಿದು, ಮುರುಳಿಗೆ 'ಮುರುಳಿ, ಲಕ್ಷ್ಮಿಗೆ ಹೇಳು ಮುಂದಿನ ಸಲ ಬರುವಾಗ ಅವಳಿಗೆ ತಪ್ಪದೆ ಸೀರೆ ತರ್ತೀನಂತ ಹೇಳು' ಎಂದು ಹೇಳಿ ಕಳುಹಿಸಿದ.

ಮುರುಳಿ ಹೊರಟು ಹೋದ.

ವಾಸುವಿನ ಯಾಂತ್ರಿಕ ಬದುಕು ಮೊದಲಾಯಿತು. ರತ್ನಳ ಬೇಡಿಕೆಗಳು ದಿನ ದಿನಕ್ಕೆ ಹೆಚ್ಚಾದವು. ವಾಸುವನ್ನು ಸುಲಿಯುವುದು ಅವಳಿಗೆ ಪರಿಪಾಠವಾಗಿ ಹೋಯ್ತು. ವಾಸುವಿನ ಗಮನಕ್ಕೆ ಬಂದ ಹೊಸ ಸೋಜಿಗದ ಸಂಗತಿಯೇನೆಂದರೆ, ಶ್ರೀನಿವಾಸ ರತ್ನ ಇಬ್ಬರೂ ಈಗ ಹೊಡೆದಾಡುವುದು ಅಪರೂಪವಾಗಿತ್ತು. ಇಬ್ಬರೂ ಆಗಾಗ ಕ್ಲಬ್ಬುಗಳಿಗೂ ಹೋಗುತ್ತಿದ್ದರು. ಅದು ಹೇಗೆ ಶ್ರೀನಿವಾಸನಿಗೆ ಹಣ ಬರುತ್ತಿತ್ತೋ ವಾಸುವಿಗೆ ಅರ್ಥವಾಗಲಿಲ್ಲ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು ಎನ್ನೋ ಹಾಗೆ ಸರಿಯಾಗಿ ಸಂಪಾದನೆ ಇಲ್ಲದಿದ್ದರೂ ಇಬ್ಬರ ದರ್ಬಾರಿಗೆ ಮಿತಿಯಿಲ್ಲವಾಯಿತು.

ರತ್ನ ಸುತ್ತಮುತ್ತಲಿನವರೊಂದಿಗೆ ಚೆನ್ನಾಗಿ ಪರಿಚಯ ಮಾಡಿಕೊಂಡಿದ್ದಳು. ಅವಳ ಜೇನು ಮಾತಿಗೆ ಮರುಳಾಗದವರೇ ಅಪರೂಪವಾಗಿತ್ತು. ಮೂರು ಹೊತ್ತೂ ಮನೆ ಸುತ್ತುವುದೇ ಅವಳಿಗೆ ಚೆನ್ನಾಗಿ ಅಭ್ಯಾಸವಾಗಿ ಹೋಯಿತು. ಸಂಸಾರದ ಕಡೆ ಚಿಂತೆಯಿಲ್ಲ. ವೀಣಾ ತಾಯಿಯ ಜಾಡಿನಲ್ಲೇ ಬೆಳೆಯುತ್ತಿದ್ದಳು. ವಾಸುವಿಗೆ ಇದೆಲ್ಲಾ ಗಮನಕ್ಕೆ ಬರುತ್ತಿದ್ದಂತೆ ಮನಸ್ಸಿಗೆ ಬೇಸರವಾದರೂ ನಿಷ್ಠೂರವಾಗಿ ಅವರೊಂದಿಗಿನ ಸಂಬಂಧವನ್ನು ಕಳಚಿಕೊಳ್ಳಲಾರದವನಾಗಿದ್ದ. ಒಮ್ಮೊಮ್ಮೆ ತಾಯಿತಂದೆಯನ್ನು ಇಲ್ಲಿಗೇ ಕರೆಸಿಕೊಂಡು ಬಿಡೋಣವೆಂದು ಆಲೋಚಿಸುತ್ತಿದ್ದನಾದರೂ ತಂದೆಯನ್ನು ಆ ಸ್ಥಿತಿಯಲ್ಲಿ ಕರೆತರುವುದು ಆಗದ ಮಾತಾಗಿತ್ತು. ಅಲ್ಲದೆ ತಾಯಿಯೂ ತಂದೆ ಅಲ್ಲಿರುವವರೆಗೂ ಇಲ್ಲಿಗೆ ಬರಲು ಒಪ್ಪುವುದಿಲ್ಲ–ಎಂದುಕೊಂಡು ಸುಮ್ಮನಾದ.

ವಾಸು ಬೆಂಗಳೂರಿಗೆ ಹಿಂದಿರುಗಿದ ಒಂದು ವಾರಕ್ಕೆ ಸರಿಯಾಗಿ ವಾಸುವಿನ ತಂದೆ ತೀರಿಕೊಂಡರೆಂಬ ಸುದ್ದಿ ಬಂತು. ವಾಸುವಿಗೆ ಅನಿರೀಕ್ಷಿತ ಸುದ್ದಿ ಎನಿಸಲಿಲ್ಲ. ತಾನಿದ್ದಾಗ ಡಾಕ್ಟರರು ಮೂರು ದಿವಸಕ್ಕಿಂತ ಹೆಚ್ಚು ಬದುಕಲಾರರು ಎಂದಿದ್ದರು. ಆದರೆ ಒಂದು ವಾರ ಬದುಕಿದ್ದರು ಅಷ್ಟೆ. ಕೂಡಲೇ ಮತ್ತೆ ಊರಿಗೆ ಹೋಗಲೇಬೇಕು. ತಂದೆಯ ಕರ್ಮಗಳನ್ನು ಮಾಡುವುದಕ್ಕೆ ಇನ್ನೂ ಮುಂಜಿ ಮಾಡಿಕೊಂಡಿಲ್ಲವಾದರೂ ಅಲ್ಲಿನ ವ್ಯವಸ್ಥೆಯನ್ನಾದರೂ ನೋಡಿಕೊಳ್ಳಲೇಬೇಕಲ್ಲ' ಎಂದುಕೊಂಡು ಕೂಡಲೇ ಹೊರಟ.

ಅಲ್ಲಿಗೆ ಹೋದರೆ ಚಿಕ್ಕಪ್ಪನೇ ತಂದೆಯ ಕರ್ಮಗಳನ್ನೆಲ್ಲಾ ಮಾಡುತ್ತಿದ್ದ. ಗೆಳೆಯನಿಂದ ಒಂದು ಸ್ವಲ್ಪ ಹಣವನ್ನು ತೆಗೆದುಕೊಂಡು ಹೋಗಿ ಅಲ್ಲಿ ಖರ್ಚು ಮಾಡಿದ.

ಚಿಕ್ಕಪ್ಪ ಬಿಡುವಾಗಿ ಕುಳಿತಾಗ, ವಾಸುವನ್ನು ಮುಂದಿನ ವ್ಯವಸ್ಥೆಯ ಬಗ್ಗೆ ವಿಚಾರಿಸಿದರು.

'ಏನೆಂದು ಕೊಂಡಿದ್ದೀಯ ವಾಸು ಮುಂದಕ್ಕೆ?–ಎಂದು ಕೇಳಿದರು.

'ಏನೋ ಏನೂ ತೋಚುತ್ತಿಲ್ಲ ಚಿಕ್ಕಪ್ಪ. ನೀವೇನಾದರೂ ಹೇಳಿ ಹೇಗೆ ಮಾಡಬೇಕಂತ'–ಎಂದು ಕೇಳಿದ.

'ನಾನು ಏನು ಹೇಳೋದು ವಾಸು. ನಿನ್ನದು ಬಾಧ್ಯತೆ ಹೆಚ್ಚಾಯಿತು. ಅಮ್ಮ ತಂಗಿ, ತಮ್ಮ ಇವರನ್ನು ನೀನಿರೋ ಕಡೇನೇ ಕರ್ಕೊಂಡು ಹೋಗು. ನೀನೂ ಒಬ್ಬಂಟಿಗ. ನಿಂಗೆ ಜೊತೆಯಾಗಿರುತ್ತೆ.

'ಅಮ್ಮ ಒಪ್ಪಿದರೆ ನನಗೇನು ಅಭ್ಯಂತರವಿಲ್ಲ, ಆದರೆ ಅವರು ಬರೋಕೆ ಒಪ್ತಾ ಇಲ್ಲ. ಇದೇ ಮನೇಲಿದ್ದು ಸಾಯ್ತಿನಿ ಅಂತಾರೆ'–ಎಂದ.

ಅದೆಲ್ಲಾ ಏನಿಲ್ಲ, ನಾನು ತಿಳಿಸಿ ಹೇಳ್ತೀನಿ. ಹೊಲ ಗದ್ದೆ ಬೇಕಾದರೆ ನಾನು ನೋಡ್ಕೊಂಡಿರ್ತೀನಿ'. ಹೊಲಗದ್ದೆ ಸಮಸ್ಯೆ ಅಷ್ಟು ದೊಡ್ಡದಲ್ಲ ಬಿಡಿ ಚಿಕ್ಕಪ್ಪ. ಅದರ ಬಗ್ಗೆ ನಂಗೇನೂ ಯೋಚ್ನೆ ಇಲ್ಲ. ಆದರೆ ಅಮ್ಮ ತಂಗಿ ತಮ್ಮನ್ನ ಹೇಗೆ ಅಲ್ಲಿಗೆ ಕರ್ಕೊಂಡು ಹೋಗೋದು ಅಂತ ಯೋಚ್ನೆ ಮಾಡ್ತಿದ್ದೀನಿ."'ಅಂದ್ರೆ?' ಯೋಚ್ನೆ ಮಾಡೋದೇನಿದೆ ವಾಸು? ನೀನು ಹೇಗಿದ್ದರೂ ಮನೆ ಮಾಡಿದ್ದಿ ಅಂದೆ. ಇನ್ನು ಕರ್ಕೊಂಡು ಹೋಗೋಕೆ ತೊಂದರೆ ಏನ್ಸಂತು. ಒಬ್ಬನೇ ಕೈಸುಟ್ಟುಕೊಂಡು ಬದುಕುವುದೇಕೆ? ಎಲ್ಲಕ್ಕಿಂತ ಹೆಚ್ಚಾಗಿ ತಾಯಿ ಮಕ್ಕಳು ಒಟ್ಟಿಗೆ ಇದ್ದ ಹಾಗಾಗುತ್ತೆ. ನಿಮ್ಮ ತಾಯಿಗೂ ಚಿಂತೆಯಿರುವುದಿಲ್ಲ, ಮಕ್ಕಳು ಎದುರಿಗಿದ್ದರೆ' ಎಂದು ತಿಳಿಸಿ ಹೇಳಿದರು.

'ಸರಿ ಚಿಕ್ಕಪ್ಪ ನೀವು ಅಮ್ಮನಿಗೆ ತಿಳಿಸಿ ಹೇಳಿ. ನಾನು ಅಲ್ಲಿಗೆ ಹೋದ ಮೇಲೆ ಬೇರೆ ಮನೆ ಮಾಡಿ ಕರ್ಕೊಂಡು ಹೋಗ್ತೀನಿ' ಎಂದ.

'ಬೇರೆ ಮನೆಯಾಕೆ? ಈಗ ನೀನಿರೋ ಮನೆ ಏನಾಗಿದೆ? ಚೆನ್ನಾಗೇ ಇದೆಯಲ್ಲ?– ಎಂದರು ಆಶ್ಚರ್ಯದಿಂದ.

ಚೆನ್ನಾಗಿದೆ, ಆದರೆ ಈಗ ಅದನ್ನು ಶ್ರೀನಿವಾಸನಿಗೆ ಕೊಟ್ಟು ಬಿಟ್ಟಿದ್ದೀನಿ. ನಾನು ಅವನ ಮನೇಲಿದ್ದೀನಿ. ಅಷ್ಟು ದೊಡ್ಡಮನೆ ನನಗ್ಯಾಕೆ ಅಂತ ಕೊಟ್ಟು ಬಿಟ್ಟೆ.'

'ಯಾವ ಶ್ರೀನಿವಾಸನೋ?' ಎಂದು ಪ್ರಶ್ನಿಸಿದರು.

ವಾಸು ಶ್ರೀನಿವಾಸನ ಪರಿಚಯ ಹೇಳಿದ ಮೇಲೆ ಚಿಕ್ಕಪ್ಪನಿಗೆ ತನಗೆ ಗೊತ್ತಿರುವವನೇ ಎನಿಸಿತು. ಸ್ವಲ್ಪ ದೂರದ ಸಂಬಂಧವೂ ಹೌದು. ಅವರ ತಂದೆ ಹಿಂದೆ ಸಿಕ್ಕಿದ್ದಾಗ ಶ್ರೀನಿವಾಸನ ವಿಚಾರ ಹೇಳಿಕೊಂಡು ಅತ್ತಿದ್ದರು. ಅವನನ್ನು ಮಗನೇ ಅಲ್ಲ ಅಂತ ಬಿಟ್ಟು ಬಿಟ್ಟಿದ್ದೀನಿ ಎಂದೂ ಹೇಳಿ ಬಹಳ ವ್ಯಥೆ ಪಟ್ಟಿದ್ದರು. ವಾಸುವಿನ ಚಿಕ್ಕಪ್ಪನಿಗೆ ಶ್ರೀನಿವಾಸನ ವಿಚಾರ ವಾಸುವಿಗಿಂತ ಚೆನ್ನಾಗಿ ಗೊತ್ತಿತ್ತು. ತಮ್ಮೂರಿನ ಹುಡುಗಿಯೊಬ್ಬಳನ್ನು ಹಾರಿಸಿಕೊಂಡು ಹೋಗಿದ್ದಾನೆ, ಎನ್ನುವ ಪುಕಾರು ಬಹಳ ವರ್ಷಗಳ ಹಿಂದೆ ಇವರ ಕಿವಿಗೂ ಬಿದ್ದಿತ್ತು. ಈಗ ನೋಡಿದರೆ ವಾಸು ಅಂಥವರ ಸಹವಾಸದಲ್ಲಿದ್ದಾನೆ. ವಾಸುವಿಗೆ ಕೂಡಲೇ ಅವರ ಸಹವಾಸ ಬಿಡುವಂತೆ ಹೇಳಬೇಕೆಂದು ನಿರ್ಧರಿಸಿದರು.

ವಾಸು ನಾನೊಂದು ಮಾತು ಹೇಳಿದರೆ ನೀನು ತಪ್ಪು ತಿಳಿದುಕೊಳ್ಳೊಲ್ಲ ತಾನೆ?– ಎಂದು ಪೀಠಿಕೆ ಹಾಕಿದರು.

ಹೇಳಿ ಚಿಕ್ಕಪ್ಪ ತಪ್ಪು ತಿಳಿದುಕೊಳ್ಳೋ ಪ್ರಮೇಯವೇ ಇಲ್ಲ. ನೀವು ನನಗಿಂತ ದೊಡ್ಡವರು. ತಂದೆಯ ಸ್ಥಾನದಲ್ಲಿರುವವರು ಅದೇನು ಹೇಳಿ ಪರವಾಗಿಲ್ಲ ಎಂದು ವಿನಯದಿಂದ ನುಡಿದ.

'ನೋಡು ವಾಸು ಶ್ರೀನಿವಾಸನಾಗಲೀ ಅವನ ಕುಟುಂಬದವರಾಗಲೀ ಒಳ್ಳೆಯವರಲ್ಲ. ಕೆಟ್ಟವರ ಸಹವಾಸದಲ್ಲಿದ್ದು ನೀನೂ ಯಾಕೆ ಕೆಟ್ಟ ಹೆಸರು ಹೊತ್ಕೊಳ್ತೀ. ಇಲ್ಲೀವರೆಗೂ ನಮ್ಮ ಕುಟುಂಬ ಮರ್ಯಾದೆಯಿಂದ ಬಾಳಿದೆ. ವಿನಾಕಾರಣ ಕೆಟ್ಟವನಂತ ಹೇಳಿ ಕೊಳ್ಳೋದು ಬೇಡ. ನಾವು ಒಳ್ಳೇವ್ರಾದ್ರು ಸಹವಾಸದಿಂದ ನಮಗೆ ಕೆಟ್ಟ ಹೆಸರು ತಪ್ಪಿದ್ದಲ್ಲ. ಈಚಲು ಮರದ ಕೆಳಗೆ ಕುಳಿತು ಮಜ್ಜಿಗೆ ಕುಡಿದರೂ ಹೆಂಡಾಂತಲೇ ಜನ ಭಾವಿಸೋದು. ನಮ್ಮ ಮಾತನ್ನು ಯಾರೂ ನಂಬೊಲ್ಲ......ನಿಮ್ಮ ತಾಯಿಗೆ ಗೊತ್ತಾದರೆ ಎದೆ ಹೊಡ್ಕೊಂಡು ಸಾಯ್ತಾರೆ. ನನ್ಮಾತು ಕೇಳಿ ಅವರಿಂದ ದೂರ ಹೊರಟು ಬಿಡು,' ಎಂದು ಉಪದೇಶ ನೀಡಿದರು.

ವಾಸುವಿಗೆ ಚಿಕ್ಕಪ್ಪನ ಮಾತುಗಳಲ್ಲಿ ನಂಬಿಕೆ ಬರಲಿಲ್ಲ. ಅತ್ತಿಗೆಯದು ಕೆಟ್ಟ ನಡತೆ ಅಂತ ಅನ್ನಿಸಲಿಲ್ಲ. ತನ್ನನ್ನು ಎಷ್ಟು ಆತ್ಮೀಯವಾಗಿ ಪ್ರೀತಿಸುತ್ತಾಳೆ. ತಾಯಿಗಿಂತ ಹೆಚ್ಚಿನ ವಾತ್ಸಲ್ಯದಿಂದ ಆದರಿಸುತ್ತಾಳೆ. ಅಂಥಾದ್ದರಲ್ಲಿ ಕೆಟ್ಟವರೆಂದು ಹೇಗೆ ತಾನೇ ನಂಬುವುದು? ದೊಡ್ಡವರಿಗೆಲ್ಲಾ ಹಾಗೇನೆ. ಸ್ವಲ್ಪ ಫ್ರೀಯಾಗಿ ಮಾತನಾಡಿದರೂ ಕೆಟ್ಟವರೆಂದು ತೀರ್ಮಾನಿಸಿ ಬಿಡುತ್ತಾರೆ' ಎಂದು ಯೋಚಿಸುತ್ತಿದ್ದ.

'ಯಾಕೆ ವಾಸು ಸುಮ್ಮನಾದೆ ನನ್ನ ಮಾತಿನಲ್ಲಿ ನಂಬಿಕೆ ಬರಲಿಲ್ಲವೇ?'

'ಇಲ್ಲ ಇಲ್ಲ ಹಾಗೇನಿಲ್ಲ ಬೇಗ ಮನೆ ನೋಡಿ ಇವರನ್ನು ಕರೆಸ್ಕೋತೀನಿ ಚಿಕ್ಕಪ್ಪಾ' ಎಂದ.

ಚಿಕ್ಕಪ್ಪನಿಗೆ ಸಂತೋಷವಾಯಿತು. ಊಟಕ್ಕೆ ಹೊತ್ತಾಯಿತೆಂದು ಎಬ್ಬಿಸಿಕೊಂಡು ಹೋದರು. ವಾಸುವಿಗೆ ಮುಂದಿನ ದಾರಿ ಅಸ್ಪಷ್ಟವಾಗಿತ್ತು. ಅಲ್ಲಿವರೆಗೂ ಜವಾಬ್ದಾರಿಯಿಲ್ಲದೆ ಉಂಡಾಡಿಗುಂಡನಾಗಿ ಬದುಕಿದ್ದಾಯಿತು. ಇನ್ನು ಮುಂದೆಯೇ ಕರ್ತವ್ಯಗಳ ಹೊರೆ, ಹೇಗೆ ನಿಭಾಯಿಸಲಾಗುತ್ತೋ ಎಂದು ಹೆದರಿದ.

ತಾಯಿ ತಂಗಿ ತಮ್ಮ ಬಂದು ಬಿಟ್ಟರೆ ಅತ್ತಿಗೆಯಿಂದ ಸಂಪೂರ್ಣವಾಗಿ ದೂರ ಇರಬೇಕಾದೀತು. ಪಾಪ! ಎಷ್ಟು ನೊಂದುಕೊಳ್ಳುತ್ತಾಳೋ ಏನೋ? ಅತ್ತಿಗೆಯ ನಗು ಮುಖ. 'ಸಲುಗೆಯ ಮಾತು'. ಪ್ರೀತಿ ವಾತ್ಸಲ್ಯದ ಉಪಚಾರ ಇನ್ನು ಸಿಗುವುದಿಲ್ಲವೆಂದುಕೊಂಡ. ತಾಯಿ ತಂಗಿಯನ್ನು ಬಿಟ್ಟರೆ ಲೋಕ ನಿಂದಿಸುತ್ತೆ. ಅತ್ತಿಗೆಯನ್ನು ಬಿಟ್ಟರೆ ಮನಸ್ಸು ನಿಂದಿಸುತ್ತೆ. ಯಾರಿಗೆ ಹೆದರುವುದೆಂದು ಚಿಂತಿಸಿದ

ವಾಸು. ಆದರೂ ಕರ್ತವ್ಯದ ಕರೆಗೆ ಓಗೊಡುವುದು ತಪ್ಪಿದ್ದಲ್ಲವೆಂದುಕೊಂಡು ಮನಸ್ಸಿನಲ್ಲೇ ಒಂದು ನಿರ್ಧಾರಕ್ಕೆ ಬಂದ.

ವಾಸುವಿಗೆ ಹತ್ತು ದಿವಸಕ್ಕಿಂತ ಹೆಚ್ಚಾಗಿಯೇ ಉಳಿಯಬೇಕಾಯಿತು. ತಾಯಿ, ತಂಗಿ, ತಮ್ಮನಿಗೆ ಬೇಗನೆ ಅವರನ್ನು ತನ್ನ ಜೊತೆಗೆ ಕರೆಸಿಕೊಳ್ಳುವುದಾಗಿ ಹೇಳಿ ಹೊರಟ. ವಾಸುವಿನ ತಾಯಿ ದೇವಮ್ಮನಿಗೆ, ಗಂಡನನ್ನು ಕಳೆದುಕೊಂಡು ವೈಧವ್ಯದ ಭಯಂಕರ ಬದುಕನ್ನು ಎದುರಿಸಿದರೂ ಒಂದು ವಿಧದಲ್ಲಿ ನಿಶ್ಚಿಂತೆಯೆನಿಸಿತು. ಇತ್ತ ಸಾಯಲೂ ಬದುಕಲೂ ಆಗದೆ ತ್ರಿಶಂಕು ಬದುಕನ್ನು ನರಳುತ್ತಾ ಬದುಕುತ್ತಿರುವ ಗಂಡನ ಜೊತೆಗಿನ ಬಾಳ್ವೆ ಅಸಮಾಧಾನಕರವಾಗಿಯೇ ಇತ್ತು. ಇದ್ದುದರಲ್ಲಿ ದೇವಮ್ಮ ಧೈರ್ಯವಂತೆ. ಸುಮಾರು ವರ್ಷಗಳಿಂದ ನರಳುತ್ತಿದ್ದ ಗಂಡನ ಜೊತೆಗೆ ಹೆಣಗುತ್ತಾ ಮಕ್ಕಳನ್ನು ಅಚ್ಚುಕಟ್ಟಾಗಿ ಬೆಳೆಸಿ ಪೋಷಿಸುವುದು ಸುಲಭದ ಮಾತಾಗಿರಲಿಲ್ಲ. ವಾಸು ಬೆಂಗಳೂರಿಗೆ ಕರೆಯುತ್ತಿದ್ದರೂ ದೇವಮ್ಮನಿಗೆ ಹೋಗುವ ಮನಸ್ಸಿರಲಿಲ್ಲ. ಆದರೆ ಅವನ ಒತ್ತಾಯ ಲಕ್ಷ್ಮಿಯ ಒತ್ತಾಯ ಅರೆ ಮನಸ್ಸಿನ ಒಪ್ಪಿಗೆಯನ್ನು ಅವಳಿಂದ ಹೊರಡಿಸಿತ್ತು.

ವಾಸು ಹೊರಟ. ಅಸ್ಪಷ್ಟವೆಂದುಕೊಂಡಿದ್ದ ಈ ಸ್ಪಷ್ಟ ನಿರ್ಧಾರದ ಸ್ವರೂಪವನ್ನು ಪಡೆದಿತ್ತು. ಮುಂದಿನ ವ್ಯವಸ್ಥೆಯನ್ನು ನೋಡಿಕೊಳ್ಳಬೇಕಿತ್ತು.

ಊರಿಂದ ಹಿಂತಿರುಗಿದ ವಾಸುವಿನಲ್ಲಿ ರತ್ನ ಸಾಕಷ್ಟು ಬದಲಾವಣೆಯನ್ನು ಕಂಡಳು. ವಾಸು ಯಾವುದೋ ಒಂದು ಚಿಂತೆಯಲ್ಲಿ ತೊಡಗಿರುವಂತೆನಿಸಿತ್ತು. ರತ್ನ ಎಷ್ಟು ಪ್ರಯತ್ನಿಸಿದರೂ ಕಾರಣ ಅವನಿಂದ ತಿಳಿಯಲಾಗಲಿಲ್ಲ.

ವಾಸುವಿಗೆ ದಿನಗಳು ಕಳೆದರೂ ಅತ್ತಿಗೆಗೆ ತಾನು ಬೇರೆ ಮನೆ ಮಾಡಿಕೊಂಡು ಹೋಗುವ ವಿಚಾರ ಹೇಳುವುದಕ್ಕೇ ಆಗಲಿಲ್ಲ. ಪ್ರತಿಸಲ ಪ್ರಯತ್ನಿಸಿದಾಗಲೂ ಮಾತುಗಂಟಲಲ್ಲೇ ಉಳಿಯುತ್ತಿತ್ತು. 'ಇದ್ಯಾಕೆ ಹೀಗಾಗುತ್ತದೆ?' ಅವಳಿಗೂ ನನಗೂ ಇರುವ ನಂಟಾದರೂ ಏನು? ತಾಯಿ, ತಂಗಿಗೆ ಕರಗದ ಮನಸ್ಸು ಇವಳನ್ನು ನೋಡುತ್ತಿದ್ದಂತೆ ನೀರಾಗಿ ಹರಿಯುತ್ತದೆ. ಅವಳಿಗೊದಗಬಹುದಾದ ನೋವಿನ ಕಲ್ಪನೆಯೇ ಉರಿಯಾಗಿ ಎದೆ ಸುಡುತ್ತದೆ. ಅವಳ ನಗುವಿನಲ್ಲಿ ನೂರು ಬೆಳದಿಂಗಳು ಕಾಣುತ್ತವೆ. ಅವಳ ಮಾತಿನಲ್ಲಿ ಜೇನು ಕೊಡಗಳೇ ತುಳುಕುತ್ತವೆ. ನಾನೇಕೆ ಸೋಲುತ್ತಿದ್ದೇನೆ? ಇದು ನನ್ನದೇ ಹೃದಯ ದೌರ್ಬಲ್ಯವೇ ಅಥವಾ ಅವಳ ಮುಷ್ಠಿಯ ಬಿಗಿತವೇ? ಎಲ್ಲಿಯೋ ಇದ್ದ ಅಪರಿಚಿತತೆ ಇಷ್ಟೊಂದು ಆಳವಾಗಿ ಆತ್ಮೀಯತೆಯ ಬೇರು ಬಿಟ್ಟಿತೇಕೆ – ಎಂದು ತನ್ನನ್ನೇ ತಿವಿದು ತಿವಿದು ಪ್ರಶ್ನಿಸಿಕೊಳ್ಳುತ್ತಿದ್ದ.

ಹದಿನೈದು ದಿನಗಳವರೆಗೆ ವಾಸುವಿನ ಮನಸ್ಸು ವಿಚಾರಗಳ ಸಂಘರ್ಷ ಭೂಮಿಯಾಯಿತು. ನೆಮ್ಮದಿಯ ನಿದ್ದೆಯನ್ನೇ ಮರೆತಿದ್ದ. ಹೋರಾಟಕ್ಕೆ ವಿರಾಮವಿಲ್ಲವೆನಿಸಿತು. ಹೇಗೆ ಈ ಸಂಕಟದಿಂದ ಪಾರಾಗುವುದೆಂದು ತಲೆ ಚಚ್ಚಿಕೊಂಡ.

ಕೊನೆಗೆ ತನ್ನ ಮನಸ್ಸನ್ನು ತಾನೇ ಸಮಾಧಾನ ಪಡಿಸಿದ. ಅವಳಿಗಾದರೆ ಗಂಡನಿದ್ದಾನೆ, ನೋಡಿಕೊಳ್ಳಲು. ಆದರೆ ತನ್ನ ತಂಗಿ, ತಾಯಿ, ತಮ್ಮನಿಗೆ ತಾನಲ್ಲದೆ ಇನ್ನು ಯಾರು? ಅದೂ ಅಲ್ಲದೆ ಬದುಕಿನ ಮಧ್ಯದಲ್ಲಿ ಬಂದು ಪರಿಚಯ ಸ್ನೇಹಗಳನ್ನು ಗಳಿಸಿಕೊಂಡ ಮಾತ್ರಕ್ಕೆ ತನ್ನ ಜೀವನದಲ್ಲಿ ಅಷ್ಟೊಂದು ಪ್ರಾಧಾನ್ಯತೆಯನ್ನು ಕೊಡುವಷ್ಟು ಸಂಬಂಧವೇನು? ಬದುಕಿನ ಪ್ರವಾಹದ ಮಧ್ಯದಲ್ಲಿ ಬಂದವರು ಮಧ್ಯದಲ್ಲಿ ಉಳಿಯಬೇಕೇ ಹೊರತು ತನ್ನ ತುದಿಯವರೆಗೂ ಬರಬೇಕಾದ ಅವಶ್ಯಕತೆಯಿಲ್ಲ. ಅಲ್ಲದೆ ತನ್ನ ದಾರಿಯನ್ನು ಅವರಿಗಾಗಿ ಬದಲಿಸಬೇಕಿಲ್ಲ–ಎಂದುಕೊಂಡು ತನಗೆ ತಾನೇ ಬುದ್ಧಿ ಹೇಳಿಕೊಂಡ.

ಸರಿ ಅತ್ತಿಗೆಗೆ ತಿಳಿಸಿಬಿಡಬೇಕು' ಎಂದುಕೊಂಡು ಒಂದು ದಿನ ರಾತ್ರಿ ಊಟ ಮುಗಿದ ಮೇಲೆ ವಾಸು ರತ್ನ ಎದುರು ಬದುರಾಗಿ ಕೂತರು. ಶ್ರೀನಿವಾಸ ಮಾಮೂಲಾಗಿ ಬರುವುದೇ ಮಧ್ಯರಾತ್ರಿ ಮೀರಿದ ಮೇಲೆ. ಅದರಲ್ಲೂ ಇತ್ತೀಚೆಗೆ ಅವನ ಬರವೇ ಅನಿರ್ದಿಷ್ಟವಾಗಿತ್ತು. ಮನಸ್ಸಾದರೆ ಬಂದ, ಇಲ್ಲವಾದರೆ ಇಲ್ಲ. ಮನೆ ಅವನಿಗೊಂದು ಧರ್ಮಛತ್ರವಾಗಿತ್ತು. ಬೇಕೆನಿಸಿದಾಗ ಬಂದು ರತ್ನಳ ಸಂಗ ಬಯಸಿ ಕಾಡಿಬೇಡಿ ಪಡೆದು ಮರಳುತ್ತಿದ್ದ. ರತ್ನಳಿಗೂ ಅವನ ಅಸ್ತಿತ್ವವೇ ಲೆಕ್ಕಕ್ಕಿಲ್ಲದಂತಿತ್ತು. ಜೊತೆಗೆ ಇಂತಹ ವಿಷಯಗಳೆಲ್ಲ ಅವಳಿಗೆ ಕ್ಷುಲ್ಲಕವೆನಿಸಿದವು. ತನ್ನ ಸ್ವಚ್ಛಂದತೆಗೆ ಅಡ್ಡ ಬರದಂತೆ ನಿರುಪದ್ರವಿಯಾಗಿ ಇತ್ತೀಚೆಗೆ ಉಳಿದಿದ್ದ. ಶ್ರೀನಿವಾಸನನ್ನು ಮೇಲೆ ಹಾಕಿಕೊಳ್ಳಲೂ ಅವಳು ಬಯಸಲಿಲ್ಲ. ಅವಳಲ್ಲಿ ಸಾಯದ ಬಯಕೆಗಳು ಸಾಂತ್ವನಕ್ಕಾಗಿ ಎದುರು ಕಾಯುತ್ತಿದ್ದವು. ಗಂಡನ, ವಾಸುವಿನ ಕಣ್ಣು ತಪ್ಪಿಸಿ ಗಳಿಸಿಕೊಂಡ ಸ್ನೇಹಿತರಿಗೆ ಲೆಕ್ಕವಿರಲಿಲ್ಲ. ವಾಸುವನ್ನು ಕಂಡರೆ ಯಾಕೋ ಒಂದು ರೀತಿಯ ಭೀತಿ. ಆದರೆ ವಾಸು ಅವಳನ್ನು ಆರಾಧಿಸುತ್ತಿದ್ದ. ತನ್ನ ಅತ್ತಿಗೆ ದೇವರಂತಹ ವ್ಯಕ್ತಿ. ಅಣ್ಣನ ಕಿರುಕುಳ ಸಹಿಸಿಕೊಂಡೂ ಮರ್ಯಾದೆಯಿಂದ ಮನೆಯಲ್ಲಿ ಬಾಳುತ್ತಿದ್ದಾಳೆ ಎಂದುಕೊಂಡಿದ್ದ. ಇದನ್ನೇ ಬಲವಾಗಿ ನಂಬಿಕೊಂಡಿದ್ದ. ಅವಳ ಸಲುಗೆಯನ್ನು ಪ್ರೀತಿ, ವಾತ್ಸಲ್ಯವೆಂದೇ ತರ್ಕಿಸಿದ್ದ. ಇಂತಹುದರಲ್ಲಿ ರತ್ನಳ ಅನೀತಿಯ ಗುಟ್ಟು ರಟ್ಟಾದರೆ, ತನ್ನ ಬಗ್ಗೆ ತಳೆದಿರುವ ಗೌರವವೂ ಉಳಿಯುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅವನಿಂದ ಅವಳಿಗೆ ಬರುತ್ತಿರುವ ಆದಾಯ ತಪ್ಪಿ ಹೋಗುವುದೇನೋ ಎನ್ನುವ ಭಯವೇ ಹೆಚ್ಚಾಗಿತ್ತು. ಅದಕ್ಕೇ ಬುದ್ಧಿವಂತಿಕೆಯಿಂದ ವಾಸು ಬರುವ ವೇಳೆಗೆ ಸರಿಯಾಗಿ ಮನೆಯಲ್ಲಿದ್ದು ಬಿಡುತ್ತಿದ್ದಳು, ರತ್ನ.

ವಾಸು ಮೆಲ್ಲಗೆ ಹೇಳಿದ. 'ಅತ್ತಿಗೆ ನಾನೊಂದು ಮನೆ ನೋಡಿದ್ದೇನೆ. ನನ್ನ ಅಮ್ಮ, ತಂಗಿ ತಮ್ಮ ಎಲ್ಲರೂ ಊರಿಂದ ಬಂದು ಬಿಡುತ್ತಾರೆ. ಅವರ ಜೊತೆ ಇರುತ್ತೇನೆ. ಇನ್ನು ಮೇಲೆ ಈ ಮನೆಯ ಋಣ ತೀರಿತು' ಎಂದ.

ರತ್ನಳು ಹೆದರಿ ನಿರೀಕ್ಷಿಸಿದ್ದಂತೆ ವಾಸುವಿನಿಂದ ಮಾತು ಹೊರಟಿತು. ರತ್ನಳು ಅಚ್ಚರಿ ಪಡದೆ 'ಯಾಕೆ ಬೇರೆ ಮನೆ ಮಾಡಿದೆ ವಾಸು? ಇಲ್ಲೇ ಎಲ್ಲರನ್ನೂ ಕರೆತರಬಹುದಾಗಿತ್ತಲ್ಲ? ಎಂದಳು. ಇಲ್ಲ ಅತ್ತಿಗೆ ಅಮ್ಮನಿಗೆ ಇದೆಲ್ಲ ಸರಿಹೋಗುವುದಿಲ್ಲ. ಸ್ವಲ್ಪ ಮಡಿ, ಆಚಾರ ಹೆಚ್ಚು. ಸುಮ್ಮನೆ ಕಿರಿಕಿರಿ ಮಾಡ್ತಾರೆ. ಅದಕ್ಕೆಂತಲೇ ಬೇರೆ ಮನೆ ನೋಡ್ಬಿಟ್ಟೆ' ಎಂದ.

ರತ್ನಳ ಮುಖ ಬಾಡಿತು. ಕಣ್ಣಲ್ಲಿ ನೀರನ್ನು ತಂದುಕೊಂಡಳು. ಆದರೆ ಆ ಕಂಬನಿಯಲ್ಲಿ ಮೊಸಳೆ ಕಣ್ಣಿರೆಷ್ಟೋ. ನಿಜವಾದ ಕಣ್ಣೀರೆಷ್ಟೋ ತಿಳಿಯುವುದು ಕಷ್ಟವೆನಿಸಿತು. ವಾಸುವಿಗೆ ಹೆಂಗಸರ ಕಣ್ಣಲ್ಲಿ ಅದೂ ಅತ್ತಿಗೆಯ ಕಣ್ಣಲ್ಲಿ ನೀರು ಕಂಡರೆ ಸಾಕು ಹೃದಯ ಇರಿದಂತೆ, ಕರುಳು ಹಿಂಡಿದಂತೆ ಆಗುತ್ತಿತ್ತು. ಆಗಲೇ ಅವನ ಮನಸ್ಸಿಗೆ ಕಸಿವಿಸಿಯಾಯಿತು. ರತ್ನಳಿಗೂ ವಾಸುವಿನ ಮೌನ ಅರ್ಥವಾಯಿತು. ತನ್ನ ಕಣ್ಣೀರು ಮಾಡಬೇಕಾದಷ್ಟು ಪರಿಣಾಮ ಮಾಡಿದೆ ಎಂದುಕೊಂಡಳು. ಆದರೂ ಮನಸ್ಸಿನ ಭಾವನೆಗಳ ಜಾಡು ಹತ್ತದಂತೆ ಸಾವರಿಸಿಕೊಂಡು, 'ನಿನ್ನಿಷ್ಟ ವಾಸು, ನಿನ್ನ ಸುಖವನ್ನು ನಾನೇಕೆ ಬೇಡವೆನ್ನಲಿ. ಏನೋ ನಿನ್ನ ಸಹವಾಸದಲ್ಲಿ ನಿನ್ನ ಸ್ನೇಹದಲ್ಲಿ ನನಗೆ ಬದುಕುವುದಕ್ಕೆ ಆಸೆ ಮೂಡಿಸಿತ್ತು. ನನ್ನವರ ಕಿರುಕುಳ. ಜೀವನದಲ್ಲಿನ ಬೇಸರ ಮರೆತು ಸಂತೋಷದಿಂದ ಬದುಕುವುದು ಸಾಧ್ಯವಾಗಿತ್ತು. ಆದರೆ ಈಗ ನೀನು ನನ್ನನ್ನು ವೀಣಾಳನ್ನು ಬಿಟ್ಟು ಹೋಗ್ತೀನಿ ಎಂದು ಹೇಳಬೇಕಾದರೆ ನಾನು ಹೇಗೆ ಅಡ್ಡಿ ಹೇಳಲಿ. ನಿನ್ನ ಸುಖ ಸಂತೋಷ ತಡೆಯಲು ನಾನು ಯಾರು? ನಾನೇನು ನಿನ್ನ ಸ್ವಂತ ಅತ್ತಿಗೆಯೇ? ಎಂದು ಕಣ್ಣೊರೆಸಿಕೊಂಡಳು.

'ಅತ್ತಿಗೆ ನೀವು ಹಾಗೆಲ್ಲಾ ಮಾತನಾಡಬೇಡಿ, ನನ್ನ ಸ್ವಂತ ಅತ್ತಿಗೆಯಿದ್ದರೂ ನಾನು ಇಷ್ಟೊಂದು ಪ್ರೀತಿಸುವುದು. ಸಾಧ್ಯವಾಗುತ್ತಿರಲಿಲ್ಲ. ಯಾವ ಜನ್ಮದ ಋಣಾನುಬಂಧವೋ ಏನೋ ಆಕಸ್ಮಿಕವಾಗಿ ಪರಿಚಿತರಾದಿವಿ. ಕಳಚಿಕೊಳ್ಳಲಾಗದಷ್ಟು ಬಂಧುತ್ವದೊಂದಿಗೆ ಬೆಸೆದಿವಿ. ನನ್ನ ತಾಯಿ, ತಂಗಿ, ತಮ್ಮನ ವಿಚಾರದಲ್ಲಿ ಯೋಚಿಸಲಾಗದ ಪ್ರೀತಿಯನ್ನು ತಮಗೆ ಕೊಟ್ಟಿದ್ದೀನಿ. ತಮ್ಮ ಬಗ್ಗೆ, ತಮ್ಮ ಬದುಕಿನ ಬಗ್ಗೆ ಚಿಂತಿಸಿದಷ್ಟೂ ನನ್ನವರ ಬಗ್ಗೆ ಚಿಂತಿಸಲಿಲ್ಲ. ಅಷ್ಟಾಗಿ ಹೆಚ್ಚಾಗಿ ಯಾರನ್ನೂ ಹಚ್ಚಿಕೊಳ್ಳದ ನಾನು ನಿಮ್ಮ ವಿಚಾರದಲ್ಲಿ ಸೋತೆ, ನನಗೆ ಹೃದಯವೇ ಇಲ್ಲವೇನೋ ಎಂದುಕೊಳ್ಳುತ್ತಿದ್ದೆ. ನಾನು ನಿಮ್ಮ ಬಗ್ಗೆ ವಹಿಸಿರುವ ಕಳಕಳಿಗೆ ಕಾರಣವೇನೆಂದು ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುವಂತಾಗಿದೆ. ದಯವಿಟ್ಟು 'ಸ್ವಂತ ಅತ್ತಿಗೆ'ಯಲ್ಲ ಎನ್ನುವ ಮಾತನ್ನು ಮತ್ತೆ ಎತ್ತಬೇಡಿ.

'ನಿಜ ವಾಸು, ನಿನ್ನ ಮನಸ್ಸು ನನಗೆ ಅರ್ಥವಾಗಿದೆ. ಅತ್ತಿಗೆ ಬೇರೆಯಲ್ಲ. ತಾಯಿ ಬೇರೆಯಲ್ಲ. ನಿನ್ನನ್ನು ಕಂಡರೆ ಹತ್ತಿಕ್ಕಲಾಗದ ವಾತ್ಸಲ್ಯ. ಈ ಹಾಳು ಭಾವನೆಯ ಸೆಳೆತದಿಂದ ನಾನು ನಿನ್ನ ಮನಸ್ಸನ್ನು ನೋಯಿಸಿದೆ. ನೀನು ಸುಖವಾಗಿರುವುದು

ಮುಖ್ಯ. ನನ್ನಲ್ಲೇ ನೀನುಳಿಯಬೇಕೆಂದರೆ ಅದು ನನ್ನ ಸ್ವಾರ್ಥವಾಗುತ್ತದೆ. ಹಾಗಂತ ಸಂಪೂರ್ಣವಾಗಿ ನಿನ್ನನ್ನು ಮರೆತು ಬಿಟ್ಟಿರಲಾರೆ ವಾಸು, ನಿನ್ನ ಬಡಪಾಯಿ ಅತ್ತಿಗೆಯನ್ನು ಮರೆತು ಬಿಡಬೇಡ. ಅಷ್ಟೇ ನಾನು ಪ್ರಾರ್ಥಿಸುವುದು.

'ಪ್ರಮಾಣ ಮಾಡಿ ಹೇಳುತ್ತೇನೆ. ನೀವು ನನಗೆ ತಾಯಿಗಿಂತ ಹೆಚ್ಚು. ತಾಯಿಯೊಂದಿಗೆ ಇಲ್ಲದ ಸಲುಗೆ ನಿಮ್ಮಲ್ಲಿ ಪಡೆದಿದ್ದೇನೆ. ಅಂದ ಮೇಲೆ ತಾಯಿಯ ಮನೆಯಲ್ಲಿರಬೇಕಾದಷ್ಟೆ ನಿಮ್ಮ ವಿಚಾರದಲ್ಲೂ ನನ್ನ ಕರ್ತವ್ಯವಿರುತ್ತೆ. ನೀವೇನೂ ಸಂಕೋಚವಿಲ್ಲದೆ ನನ್ನಿಂದ ಬೇಕಾದ ಸಹಾಯವನ್ನು ನಿರೀಕ್ಷಿಸಬಹುದು' ಎಂದ ವಿನಯದಿಂದ.

ರತ್ನ ನಿರೀಕ್ಷಿಸಿದ ಪರಿಣಾಮ ವಾಸುವಿನ ಮೇಲೆ ಆಗಿತ್ತು. ಅವನನ್ನು ಅಗಲಿರಬೇಕಾಗಿದೆಯಲ್ಲ' ಎನ್ನುವುದರಲ್ಲಿ ತೋರಿದ ನೋವು, ಸುರಿದ ಕಣ್ಣೀರು ಮುಗ್ಧ ವಾಸುವಿನ ಮೇಲೆ ಮಹಾಸ್ತ್ರಗಳಾಗಿ ಪ್ರಯೋಗವಾದವು. ಬೆಳ್ಳಗಿರುವುದೆಲ್ಲ ಹಾಲೆಂದೇ ನಂಬಿದ ವಾಸು.

ತನ್ನ ಅಗಲಿಕೆಗಾಗಿ ಇಷ್ಟೊಂದು ವ್ಯಥೆ ಪಡುತ್ತಿರುವ ಅತ್ತಿಗೆಯ ಸಂಬಂಧ ಋಣಾನುಬಂಧ. ಜನ್ಮಜನ್ಮದ ನಂಟು. ಬಿಡಿಸಿಕೊಳ್ಳಲಾಗದ ಕಗ್ಗಂಟು.......ಎಂದೆಲ್ಲಾ ಮನಸ್ಸಿನೊಳಗೇ ಲೆಕ್ಕ ಹಾಕಿದ.

ಒಂದು ನೆನಪಿಟ್ಟುಕೋ ವಾಸು. ನಿನ್ನನ್ನು ನೋಡದೆ ಇರುವುದಕ್ಕೆ ನನಗೆ ತುಂಬಾ ಕಷ್ಟವೆನಿಸುತ್ತೆ. ಆಗಾಗ ಬಂದು ಈ ಅತ್ತಿಗೆಯನ್ನು ನೋಡುತ್ತಿರುತ್ತಿ ತಾನೇ?......ಅದೊಂದು ಭರವಸೆ ಸಾಕು' ಎಂದಳು ಮುಖದ ಮೇಲೆ ನಗು ತಂದುಕೊಳ್ಳುತ್ತಾ.

ಇದು ಮತ್ತೊಂದು ಮಮತೆಯ ಕುಣಿಕೆಯಾಗಿತ್ತು.

ಗಂಟೆ ಹನ್ನೆರಡು ಹೊಡೆಯಿತು. ರತ್ನಳು ವಾಸುವಿಗೆ ಹೋಗಿ ಮಲಗಲು ಹೇಳಿದಳು. ವಾಸುವಿಗೆ ನಿದ್ರೆ ಹತ್ತಲಿಲ್ಲ. ತಲೆ ತುಂಬಾ ಯೋಚನೆಗಳು ಆದರೂ ಬೆಳಗ್ಗೆ ಬೇಗ ಎದ್ದು ಕೆಲಸಕ್ಕೆ ಹೋಗಬೇಕಿತ್ತು. ಬಲವಂತವಾಗಿಯಾದರೂ ನಿದ್ದೆ ತಂದುಕೊಳ್ಳಬೇಕು-ಎಂದುಕೊಂಡು ಎದ್ದು ಹೋದ. ಹೋಗುವಾಗ ಅನ್ನಿಸಿತು, 'ಪಾಪ! ಅತ್ತಿಗೆ ಇವತ್ತು ನಿದ್ದೆ ಮಾಡುವುದಿಲ್ಲ' ಎಂದು.

ವಾಸು ಎದ್ದು ಹೋದ ಮೇಲೆ ದೀರ್ಘ ನಿಟ್ಟುಸಿರೊಂದು ಮಾತ್ರ ಕೇಳಿಸಿತು, ವಾಸು ಮನೆ ಬಿಟ್ಟು ಹೋಗುತ್ತಿರುವುದಕ್ಕೆ ಅವಳಿಗೆ ಚಿಂತೆಯಿರಲಿಲ್ಲ. ಅವನು ಹೋದರೆ ಸಂಸಾರ ನಡೆಯುವುದು ಹೇಗೆ? ಅವಳಿಗೆ ಸ್ನೋ, ಪೌಡರ್, ಲಿಪ್‌ಸ್ಟಿಕ್, ಸೆಂಟ್ ಬೇಕು ಬೇಕೆನಿಸಿದಾಗ ಕೊಡಿಸುತ್ತಿದ್ದ. ಇನ್ನು ಮುಂದೆ ಹಣದ ವ್ಯವಸ್ಥೆ ಹೇಗೆಂದು ಚಿಂತೆಯಾಗಿತ್ತು. ವಾಸುವಿದ್ದರೆ ತನ್ನ ಸ್ವಂತ ಅವಶ್ಯಕತೆಗಳನ್ನೂ ಮರೆತು ಅವಳ

ಅವಶ್ಯಕತೆಗಳನ್ನು ಪೂರೈಸುತ್ತಿದ್ದ. ಅಂತಹವರು ಇನ್ನೆಲ್ಲಿಂದ ಬರಬೇಕು? ಯೋಚಿಸಿದಷ್ಟೂ ರತ್ನಳಿಗೆ ಭವಿಷ್ಯ ಭಯಂಕರವೆನಿಸಿತು. ಗಟ್ಟಿಯಾಗಿ ಮುಚ್ಚಿ ಕುರ್ಚಿಯ ಬೆನ್ನ ಮೇಲೆ ತಲೆಯಿಟ್ಟಳು. ರತ್ನಳ ಮನೆಯಿಂದ ತಪ್ಪಿಸಿಕೊಂಡರೂ, ರತ್ನಳಿಂದ ವಾಸುವಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಅವನ ಕಷ್ಟಗಳಿಗೆ ಕೊನೆ ಮೊದಲಿಲ್ಲವಾಯಿತು. ಒಂದರ ಹೊರೆಯನ್ನೇ ಹೊರಲಾಗದ ಎದೆಯ ಮೇಲೆ ಎರಡು ಕುಟುಂಬಗಳ ಹೊರೆ ಬಿತ್ತು. ದಿನ ಬೆಳಗಾದರೆ ಅತ್ತಿಗೆಯ ಗೋಳಿನ ಸುದ್ದಿ ತಲುಪುತ್ತಿತ್ತು. ಮೊದಲಿನ ತಾರೀಖಿಗೆ ಬಂದ ಹಣ ಎರಡು ಕುಟುಂಬಗಳಿಗೆ ಹಂಚಿ ಹೋಗುತ್ತಿತ್ತು. ದೇವಮ್ಮನಿಗೆ ಕುಟುಂಬ ಪೋಷಣೆ ಕಷ್ಟವಾಗುತ್ತಿತ್ತು. ಮಗನನ್ನು ಇನ್ನಷ್ಟು ಹಣ ಕೇಳಿದಳು. ಆದರೆ ವಾಸು ಹೆಚ್ಚು ಹಣ ಕೊಡಲು ಸಾಧ್ಯವಿಲ್ಲವೆಂದ. ವಾಸುವಿನಲ್ಲಿ ಜೀವ ನೆಟ್ಟಿದ್ದ ದೇವಮ್ಮನಿಗೆ ವಾಸುವಿನ ಮನಸ್ಸು ತಿಳಿಯಲಿಲ್ಲ, ಆಕೆಯ ಸಂಬಂಧಿಗಳು ವಾಸುವಿನ ಬಗ್ಗೆ ತುಂಬಾ ಒಳ್ಳೆಯ ಅಭಿಪ್ರಾಯ ಕೊಟ್ಟಿದ್ದರು. ಕೈ ತುಂಬಾ ಸಂಬಳ ಬರುತ್ತದೆಂದು ಅವರಲ್ಲಿ ಹೇಳಿರುವಾಗ, ವಾಸು ಮಾತ್ರ ಕೇಳಿದಾಗಲೆಲ್ಲ 'ನ' ಕಾರದ ಉತ್ತರವನ್ನೇ ಕೊಡುತ್ತಿದ್ದ. ಅವನ ರೀತಿಯಲ್ಲಿ ಬದಲಾವಣೆ ಗಮನಿಸಿದಳು. ಬೆಳಗ್ಗೆ ಹೊರಟರೆ ರಾತ್ರಿ ಮನೆಗೆ ಬರುವುದು ಹತ್ತೋ ಹನ್ನೊಂದೋ, ಊಟ ಮಾಡುವುದೂ ಅಪರೂಪ, ತಾಯಿ ಬಹಳ ಒತ್ತಾಯ ಮಾಡಿದರೆ ನನಗೆ ಗೆಳೆಯರ ಮನೆಯಲ್ಲಿ ಊಟವಾಯಿತು–ಎನ್ನುತ್ತಿದ್ದ. ಮನೆಗೆ ಬಂದರೂ ಮೌನ, ಮನಬಿಚ್ಚಿ ಸಂತೋಷದಿಂದ ಮಾತನಾಡುತ್ತಿದ್ದುದೇ ಇಲ್ಲ. ದೇವಮ್ಮ ಮಾತಿಲ್ಲದೆ, ಮಗನ ರೀತಿಗಾಗಿ ಕೊರಗಿದಳು. ಬೆಂಗಳೂರಿಗೆ ಬಂದು ಅಪರಾಧ ಮಾಡಿದೆನೇನೋ–ಎಂದುಕೊಳ್ಳುತ್ತಿದ್ದಳು. ಇದ್ದ ಆಸ್ತಿಯಲ್ಲಿ ಸ್ವಲ್ಪ ಮಾರಿ ನಾಲ್ಕೈದು ಸಾವಿರ ರೂಪಾಯಿ ಮಗಳ ಮದುವೆಗೆಂದು ಬ್ಯಾಂಕಿನಲ್ಲಿ ಇಟ್ಟಿದ್ದಳು. ವಾಸುವಿನ ತಂಗಿ ಲಕ್ಷ್ಮಿ ಮೂಕಳಂತೆ ಮನೆ ಕೆಲಸ ಮಾಡಿಕೊಂಡು ತಾಯಿಗೆ ಸಮಾಧಾನ ಮಾಡುತ್ತಾ ಇದ್ದು ಬಿಡುತ್ತಿದ್ದಳು. ಮುರುಳಿಗೆ ಹಾಡಿನ ಹುಚ್ಚು, ಗೆಳೆಯರ ಗುಂಪು ಕಟ್ಟಿಕೊಂಡು ಅಲೆಯುವುದು, ಹಸಿವಾದರೆ ಎಲ್ಲೂ ಕವಳ ಸಿಕ್ಕದಿದ್ದರೆ ಊಟಕ್ಕೆ ಬರುತ್ತಿದ್ದ ಮನೆಗೆ.

ವಾಸು, ಮುರುಳಿ, ರತ್ನಳ ಮನೆಗೆ ಪ್ರತಿ ದಿನವೂ ತಪ್ಪದೆ ಭೇಟಿ ಕೊಡುತ್ತಿದ್ದರು. ವಾಸು ನಿರೀಕ್ಷಿಸಿದಂತೆ ಯಾವೊಂದು ಆಘಾತವೂ ರತ್ನಳಿಗೆ ಆದಂತೆ ಇರಲಿಲ್ಲ. ಗೆಲುವಾಗೇ ಇದ್ದಳು. ಮನೆಯಲ್ಲಿ ನಡೆಯಬೇಕಾದ್ದೆಲ್ಲ ನಡೆಯುತ್ತಿತ್ತು. ಊಟ ತಪ್ಪಲಿಲ್ಲ. ಷೋಕಿ ತಪ್ಪಲಿಲ್ಲ. ವಾಸು ಇದ್ದಾಗಿಗಿಂತ ಈಗ ಇನ್ನೂ ಅವಳ ಅಲಂಕಾರ ಪ್ರೀತಿ ಹೆಚ್ಚಾದಂತೆ ಇತ್ತು. ಇತ್ತೀಚೆಗ 'ಕೇಶಾಲಂಕಾರ' ಕೋರ್ಸ್ ಯಾವುದನ್ನೋ ಮಾಡಿದ್ದಳು. ಪ್ರತಿ ದಿನ ಹೆಚ್ಚು ಆಸಕ್ತಿಯಿಂದ, ತನ್ನ ಮೇಲೆ ತಾನು ಪ್ರಯೋಗವನ್ನು ಮಾಡಿಕೊಳ್ಳುತ್ತಿದ್ದಳು. ವಾಸುವಿಗೆ ನೆಮ್ಮದಿಯೆನಿಸಿತು. ಮನೆಯಲ್ಲಿನ ಬೇಸರ ಅತ್ತಿಗೆಯ ಜೊತೆ ಕಳೆಯುವ ಎರಡು ಕ್ಷಣಗಳಲ್ಲಿ ಮರೆಯಾಗುತ್ತಿತ್ತು.

ಶ್ರೀನಿವಾಸನಿಗೆ ವಾಸು ಹೋದದ್ದು ತಿಳಿದು ಸ್ವಲ್ಪ ಸಮಾಧಾನವಾಯಿತು. ಇನ್ನಾದರೂ ರತ್ನಳು ತಾನು ಹೇಳಿದಂತೆ ಕೇಳಿಕೊಂಡು ಬಿದ್ದಿರುತ್ತಾಳೆ ಎಂದು. ಮನೆಗೆ ಈಗೀಗ ಸ್ವಲ್ಪ ಹಣ ಕೊಡುತ್ತಿದ್ದ. ವಾಸು ತನ್ನ ಪ್ರತಿಸ್ಪರ್ಧಿ ಎನಿಸಿತ್ತು. ಅವನಲ್ಲಿ ತೋರುವ ಆದರ, ಪ್ರೀತಿ ತನಗೆ ದೊರೆಯುತ್ತಿರಲಿಲ್ಲ, ಸಂಶಯದ ದೃಷ್ಟಿ ಕೆರಳಿತು. ಅವನ ಮನಸ್ಸು ನರಳಿತು. ರತ್ನಳನ್ನು ಈ ವಿಚಾರವಾಗಿ ಕೇಳಿಯೂ ಬಿಟ್ಟಿದ್ದ. ಅದಕ್ಕೆ ಸರಿಯಾಗಿ ರತ್ನ ದುಡಿದು ತಂದು ಹಾಕುವ ಅವನಿಗೆ ಆದರ ತೋರಿಸದೆ ಗಂಡ ಅಂತ ಅನ್ನಿಸಿಕೊಂಡೂ ಜೂಜು ಕುಡಿತದಲ್ಲಿ ಮುಳುಗಿ ಹೆಂಡತಿ ಮಕ್ಕಳನ್ನು ಮರೆಯುವಂತಹ ನಿನಗೆ ಆದರ ತೋರಿಸಬೇಕೇ ಎಂದು ರೊಯ್ಯನೆ ಉತ್ತರವನ್ನು ಅಪ್ಪಳಿಸಿದಳು. ಅವಳು ನುಡಿದ ಮಾತು, ಕೇಳಿದ ಪ್ರಶ್ನೆ ಶ್ರೀನಿವಾಸನಿಗೆ ಸವಾಲಿನಂತಿತ್ತು. ಆದರೂ ಅಸಹಾಯಕತೆ ಅವನ ಬಾಯಿಯನ್ನು ಕಟ್ಟಿ ಹಾಕಿತ್ತು. ಅದಕ್ಕಾಗಿ ಸಮಯ ಬಂದಾಗ ಇವಳಿಗೆ ಕೈ ತೋರಿಸಬೇಕೆಂದುಕೊಂಡು ಸುಮ್ಮನಿದ್ದ.

* * *

ವಾಸು ಯುಗಾದಿಗಾಗಿ ಸೀರೆ, ಕುಪ್ಪಸದ ಬಟ್ಟೆ, ಎರಡು ಫ್ರಾಕ್ ಮನೆಯಲ್ಲಿರಿಸಿದ. ಕೆಲಸದಿಂದ ಬಂದವನು ದಣಿದಿದ್ದರಿಂದ ಸ್ನಾನ ಮಾಡಿದರೆ ಮೈ ಹಗುರವಾಗುತ್ತದೆಂದೆಣಿಸಿ ಸ್ನಾನದ ಕೋಣೆಗೆ ಹೋದ. ತಂದ ಬಟ್ಟೆಯ ಪಾರ್ಸಲನ್ನು ಮೇಜಿನ ಮೇಲಿಟ್ಟಿದ್ದ. ಲಕ್ಷ್ಮಿ ಕೋಣೆ ಶುಭ್ರಗೊಳಿಸಲು ಬಂದಳು. ಮಂಚದ ಮೇಲೆ ವಾಸುವಿನ ಕೊಳೆ ಬಟ್ಟೆ ರಾಶಿ ರಾಶಿಯಾಗಿ ಬಿದ್ದಿತು. ಓದುತ್ತಿದ್ದ ಪುಸ್ತಕಗಳನ್ನು ಒಂದು ಕಡೆ ಎಸೆದಿದ್ದ. ಲಕ್ಷ್ಮಿ ಅವೆಲ್ಲವನ್ನೂ ಸರಿಮಾಡಿದಳು. ಕೊಳೆ ಬಟ್ಟೆಯನ್ನೆಲ್ಲಾ ತೆಗೆದು ಒಂದು ಬಕೆಟ್ಟಿಗೆ ತುಂಬಿದಳು. ಎಸೆದಿದ್ದ ಪುಸ್ತಕವನ್ನು ಎತ್ತಿ ಕೊಡವಿ ಮೇಜಿನ ಮೇಲಿಡಲು ತಿರುಗಿದಾಗ ಕಣ್ಣಿಗೆ ಅದರ ಮೇಲಿದ್ದ ಪಾರ್ಸೆಲ್ ಕಾಣಿಸಿತು. ಕುತೂಹಲದಿಂದ ಬಿಚ್ಚಿದಳು. ಒಳಗೆ ನೋಡಿದರೆ ಸೀರೆ 'ಕಣ್ಣು ಮಿಂಚಿತು ಅಬ್ಬ! ಎಷ್ಟು ಚನ್ನಾಗಿದೆ? ಅಣ್ಣ ಎಷ್ಟು ಒಳ್ಳೆಯವನು. ನಾನು ಕೇಳದೆಯೇ ಸೀರೆ ತಂದಿದ್ದಾನೆ ನನಗೆ. ಅಮ್ಮನಿಗೆ ಹೇಳಲೇಬೇಕು ಎಂದುಕೊಂಡು ಗುಡಿಸುತ್ತಿದ್ದವಳು ಪೊರಕೆಯನ್ನು ಅಲ್ಲೇ ಎಸೆದು ಅಡಿಗೆ ಕೋಣೆಗೆ ಓಡಿದಳು. ಯಾಕೆ ಹಾಗೆ ಓಡಿ ಬಂದೆ?..... ಏನೇ ಅದು ಕೈಲಿ?–ಎಂದು ಸ್ವಲ್ಪ ಹೊತ್ತಿನ ನಂತರ ಕೇಳಿದರು. 'ಅದೇನಮ್ಮ ಯಾವತ್ತೋ ನಾನು ಸೀರೆ ಬೇಕೂಂತ ಹೇಳಿದ್ದೆ. ಅಣ್ಣ ಅದನ್ನು ನೆನಪಿಟ್ಟುಕೊಂಡು ಕೊಂಡುಕೊಂಡು ಬಂದಿದ್ದಾನೆ. ಹೇಗಿದ್ದರೂ ನಾಳೆ ಹಬ್ಬ ಅಲ್ವಾ? ಅದಕೇಂತಲೇ ಈಗ ತಂದಿದ್ದಾನೆ, ಎಷ್ಟು ಒಳ್ಳೆಯವನಲ್ಲವೇನಮ್ಮ?– ಎಂದು ಮುಗ್ಧವಾಗಿ ಕೇಳಿದಳು.

ಹೂಂ! ಎಂದಷ್ಟೇ ಹೇಳಿ ಅವಳ ಕೈಲಿ ಮಗನಿಗೆಂದು ಕಾಫಿ ತೊಟವನ್ನು ಕೊಟ್ಟು ಕಳುಹಿಸಿದರು. ಮಗಳ ಮಾತಿನಲ್ಲಿ ದೇವಮ್ಮನಿಗೆ ನಂಬಿಕೆ ಬರಲಿಲ್ಲ. ಈಗೊಂದಾರು ತಿಂಗಳಿಂದ ಮಗನನ್ನು ಒಂದೆರಡು ಸೀರೆ ಕೊಡಿಸೆಂದು ಕೇಳುತ್ತಲೇ

ಇದ್ದರಾದರೂ ವಾಸು ಪ್ರತಿಸಲವೂ ಮುಂದಿನ ತಿಂಗಳು, ಮುಂದಿನ ತಿಂಗಳೆಂದು ಮುಂದೂಡುತ್ತಲೇ ಇದಾನೆ. ಈ ಸಲ ಬೋನಸ್ ಬಂದರೆ ಎಲ್ಲರಿಗೂ ಬಟ್ಟೆ ಮತ್ತು ಲಕ್ಷ್ಮಿಗೆ ಮುತ್ತಿನ ವಾಲೆ ಕೊಡಿಸುವುದಾಗಿ ಹೇಳುತ್ತಲೇ ಇದ್ದಾನೆ, ಬೆಂಗಳೂರಿಗೆ ಬಂದ ಮೇಲೆ ಅವನಿಗೆ ನಾಲ್ಕು ಸಲ ಬೋನಸ್ ಬಂದರೂ ಕೊಟ್ಟ ಮಾತನ್ನು ನಡೆಸಿ ಕೊಡಲಿಲ್ಲ. ದೇವಮ್ಮ ಮತ್ತೆ ಕೇಳಲಿಲ್ಲ. ಹರಕು ಸೀರೆಯನ್ನೇ ತೇಪೆ ಹಾಕಿ ಉಟ್ಟುಕೊಂಡಿದ್ದರು. ಈಗ ಲಕ್ಷ್ಮಿ ಹೇಳುವ ಮಾತು ಕೇಳಿದಾಗ ಅವರಿಗೆ ನಂಬಿಕೆಯಾಗಲಿಲ್ಲ. ನಿಜವಾಗಿಯೂ ತಮಗೇ ತಂದಿದ್ದಾದರೆ ಹೇಳುತ್ತಾನೆ, ತಾವೇಕೆ ಪ್ರಶ್ನಿಸಬೇಕು ಎಂದುಕೊಂಡು ಸುಮ್ಮನಾದರು. ಆದರೆ ಲಕ್ಷ್ಮಿಗೆ ತಾಳ್ಮೆಯಿರಲಿಲ್ಲ. ಮೈಯೊರಿಸಿಕೊಳ್ಳುತ್ತಾ ರೂಮಿನತ್ತ ನಡೆದ ವಾಸುವನ್ನು ತಡೆದು, ಲಕ್ಷ್ಮಿ 'ಅಣ್ಣಾ' ಎಂದಳು. ವಾಸು ಲಕ್ಷ್ಮಿಯನ್ನು ನೋಡಿದ. ಅವಳ ಕೈಲಿ ಸೀರೆಯಿತ್ತು. ಕೂಡಲೇ ಅವನಿಗೆ ವಿಷಯ ಏನೂಂತ ಹೊಳೆಯಿತು. 'ಇದನ್ನು ನನಗೇ ಅಲ್ವೇನಣ್ಣ ತಂದಿದ್ದು? ತುಂಬಾ ಚೆನ್ನಾಗಿದೆ, ನನಗೆ ತುಂಬಾ ಹಿಡಿಸಿತು'– ಎಂದು ಬಡಬಡನೆ ಅವನ ಉತ್ತರಕ್ಕೆ ಕಾಯದೆ ಎಲ್ಲವನ್ನೂ ತಾನೇ ಹೇಳಿ ಬಿಟ್ಟಳು. ವಾಸು ನಿರುತ್ತರನಾದ.

ಸೀರೆ ತಂದದ್ದು ರತ್ನಳಿಗೆ ಕೊಡಬೇಕೆಂದು. ಹೋದವಾರ ರತ್ನಳೇ ವಾಸುವಿಗೆ ಹೇಳಿದ್ದಳು. ಪ್ರತಿ ಯುಗಾದಿಗೂ ತಪ್ಪದೆ ಬಟ್ಟೆ ಕೊಳ್ಳುತ್ತಿದ್ದಳೆಂದೂ, ಈ ಸಲ ತನಗಾಗಲೀ, ತನ್ನ ಮಗಳಿಗಾಗಲೀ ಹೊಸ ಬಟ್ಟೆಯ ಯೋಗವಿಲ್ಲವೆಂದು ನೊಂದು ನುಡಿದಿದ್ದಳು. ವಾಸುವಿಗೆ ತೀರಾ ಪಾಪ! ಎನಿಸಿತು. ಎರಡು ಮೂರು ಉಗಾದಿಗಳಿಗೆ ತಾನೇ ತಂದು ಕೊಟ್ಟಿದ್ದ. ಈ ಸಲ ತಪ್ಪಿಸುವುದೇಕೆಂದುಕೊಂಡು ತಂದಿದ್ದ. ಸ್ನಾನ ಮುಗಿಸಿಕೊಂಡು ಹೋಗಿ ಕೊಟ್ಟು ಬರೋಣವೆಂದುಕೊಂಡಿದ್ದ. ಆಗ ನೋಡಿದರೆ ತಂಗಿ, ಸೀರೆ ತನಗೆ ತಂದದ್ದು ಎಂದುಕೊಂಡಿದ್ದಾಳೆ. ಇವಳಿಗೆ ಈ ಸೀರೆ ನಿನಗಲ್ಲ ಬೇರೆ ಯಾರಿಗೋ ತಂದಿರುವುದು' – ಎಂದು ಹೇಗೆ ಹೇಳುವುದು? ಮೊದಲೇ ಅಮ್ಮನಿಗೆ ಸೀರೆ ತಂದು ಕೊಟ್ಟಿಲ್ಲವೆಂದು ಬೇಜಾರಾಗಿದೆ. ಈ ಪರಿಸ್ಥಿತಿಯಿಂದ ಹೇಗೆ ಪಾರಾಗುವುದು? ರತ್ನಳಿಗೆ ತಪ್ಪಿಸಬಹುದಾಗಿತ್ತು. ಆದರೆ ಅವಳಿಗೆ ತಾನು ತಂದುಕೊಡುವುದಾಗಿ ಮಾತು ಬೇರೆ ಕೊಟ್ಟಿದ್ದಾನೆ. ಅದನ್ನು ಮುರಿಯುವುದು ಹೇಗೆ. ಹಣವಿದ್ದರೆ ಇನ್ನೊಂದು ಕೊಂಡು ನಿಭಾಯಿಸಬಹುದಾಗಿತ್ತು. ಆದರೆ ಇದ್ದದ್ದೆಲ್ಲಾ ಮುಗಿದಿದೆ. ಮೊದಲನೇ ತಾರೀಖಿಗೇ ರತ್ನ ಆಫೀಸ್‌ಗೆ ಫೋನ್ ಮಾಡಿ ಮನೆಗೆ ಕರೆಸಿಕೊಂಡು ಸ್ವಲ್ಪ ಹಣವನ್ನು ಕಸಿದುಕೊಂಡಳು. ಸ್ವಲ್ಪ ಹಣವನ್ನು ಸಾಲಕ್ಕಾಗಿ ಕಟ್ಟಿದ. ವೀಣಾಳ ಹುಟ್ಟುಹಬ್ಬಕ್ಕೆ ಕಿವಿಗೆ ಲೋಲಾಕು ಮಾಡಿಸಬೇಕೆಂದು ಹೇಳಿದ್ದಕ್ಕಾಗಿ ಕಿವಿಗೆ ಲೋಲಾಕು ಮಾಡಿಸಿದ್ದ. ಮಿಕ್ಕದ್ದು ಮನೆಗೆ, ತನ್ನ ಖರ್ಚಿಗೆ, ಈಗ ತಂದ ಬಟ್ಟೆಗಳಿಗೆ ಸರಿಹೋಯಿತು. ತಿಂಗಳಿನಲ್ಲಿ ಇನ್ನುಳಿದ ದಿನಗಳು ಶಿವರಾತ್ರಿ! ಇಷ್ಟು ಹೊತ್ತಾದರೂ ಉತ್ತರ ಕೊಡದಿದ್ದ ವಾಸುವನ್ನು ನೋಡಿದ ದೇವಮ್ಮ ಲಕ್ಷ್ಮಿಗೆ ಗದ್ದರಿಸಿ ಹೇಳಿದರು. ಲಕ್ಷ್ಮಿ ಇಡು ಸೀರೇನ, ಯಾರಿಗೇ ತಂದಿರಲಿ, ತೆಗೆದು ಇಟ್ಟುಕೊಂಡರೆ

ಆಯಿತೆ? ಉಗಾದಿಗೆ ನೀನೇನೂ ಬೆತ್ತಲೆ ಇರುವುದಿಲ್ಲ. ನಿನ್ನ ಹತ್ತಿರ ಇರೋವುಗಳಲ್ಲೇ ಹೊಸದೊಂದನ್ನು ಉಡು ಸಾಕು'–ಎಂದರು.

ವಾಸುವಿಗೆ ತಾಯಿಯ ಮಾತು ಚಿವುಟಿದಂತೆನಿಸಿತು. ಸಿಟ್ಟು ಬಂತು. ಅವಳ ವ್ಯಂಗ್ಯಕ್ಕೆ, ಆದರೆ ತಪ್ಪು ತನ್ನದಿರುವಾಗ?.......ಏನಾದರೂ ಸರಿ, ಈ ದರಿದ್ರ ಪರಿಸ್ಥಿತಿಯಿಂದ ತಪ್ಪಿಸಿಕೊಂಡು, ತಾಯಿಯ ದೃಷ್ಟಿಯಲ್ಲಿ ಬೀಳದಿರುವ ಹಾಗೆ ಆದರೆ ಸರಿ'–ಎಂದುಕೊಂಡು ಹೌದು ಲಕ್ಷ್ಮಿ ನಿನಗೇ ತಂದಿರೋದು, ನಿನಗಲ್ಲದೆ ಇನ್ಯಾರಿಗೆ? ನಿನಗೆ ಹೇಳ್ದೆ, ಕೇಳ್ದೆ ತಂದುಕೊಟ್ಟು ನಿನ್ನನ್ನು ತಡಬಡಿಸುವಂತೆ ಮಾಡಬೇಕೆಂದಿದ್ದೆ. ಆದರೆ ಈಗಲೇ ನೀನು ಪತ್ತೆ ಹಚ್ಚಿಬಿಟ್ಟೆ. ಹೋಗಲಿ ಬಿಡು. ನಿನಗೆ ಇಷ್ಟವಾಯ್ತು ತಾನೇ ಎಂದು ಕೇಳಿದ.

ಓ...........ತುಂಬಾನೇ ಚೆನ್ನಾಗಿದೆ......ಇದರ ಜೊತೆಗೆ ಫ್ರಾಕುಗಳಿದ್ದುವಲ್ಲ............ಅವು ಯಾರಿಗಣ್ಣ?' ಎಂದು ಕೇಳಿದಳು.

ಓ ಹಾಳಾದವಳು ಎಲ್ಲಾ ರಟ್ಟು ಮಾಡಿಬಿಟ್ಟಳು ಎಂದು ಗೊಣಗುತ್ತಾ – ನನ್ನ ಫ್ರೆಂಡ್‌ದು. ಇಬ್ಬರೂ ಒಟ್ಟಿಗೆ ತೆಗೆದೆವು. ಅವ್ನು ಹೋಗುವಾಗ ತೆಗೆದುಕೊಳ್ಳೋದು ಮರೆತುಬಿಟ್ಟಿದ್ದಾನೆ' ಎಂದ.

ಲಕ್ಷ್ಮಿ, ದೇವಮ್ಮ ನಂಬಿದರು.

ವಾಸುವಿಗೆ ತಾನು ಸುಳ್ಳನ್ನು ಎಷ್ಟು ನಾಜೂಕಾಗಿ ಹೇಳಿದೆ? ಈ ಜಾಣತನ ತನಗೆ ಹೇಗೆ ಬಂತು?......ಅಂತ ಯೋಚಿಸಿದ. ಒಟ್ನಲ್ಲಿ ತೀರಾ ಅಸಹ್ಯಕರವಾಗಬೇಕಾಗಿದ್ದ ಸೀರೆಯ ಪ್ರಸಂಗ ಅಲ್ಲಿಗೇ ಮುಗಿಯಿತು.

ವಾಸು ಗೆಳೆಯನೊಬ್ಬನ ಬಳಿ ಸಾಲ ಮಾಡಿ ರತ್ನಳಿಗೆ ಸೀರೆ ತಂದುಕೊಟ್ಟ ಹಬ್ಬಕ್ಕಾಗಿ.

* * *

ದೇವಮ್ಮನಿಗೆ ಕ್ರಮೇಣ ವಾಸುವಿಗೆ ರತ್ನಳ ಮನೆಯೊಂದಿಗಿದ್ದ ಸಂಬಂಧದ ಪರಿಚಯವಾಯಿತು. ದೇವಮ್ಮನ ಮೈದುನ ಸೂಕ್ಷ್ಮವಾಗಿ ಮೊದಲೇ ಹೇಳಿದ್ದರು. ಆದರೆ ದೇವಮ್ಮ ಅಷ್ಟಾಗಿ ನೆನಪಿಟ್ಟುಕೊಂಡಿರಲಿಲ್ಲ. ತನ್ನವರ ಬಗ್ಗೆ ವಾಸುವಿನ ನಿರ್ಲಕ್ಷ್ಯಕ್ಕೆ ಕಾರಣವೇನೆಂದು ಯೋಚಿಸಿ, ಯೋಚಿಸಿ ಸೋತಿದ್ದವರಿಗೆ ಸುಳುವು ಹತ್ತಿತು. ವಾಸು ಒಂದೆರಡು ಬಾರಿ ರತ್ನಳ ಕುಟುಂಬವನ್ನು ಊಟಕ್ಕೆಂದು ಕರೆದಿದ್ದ. ದೇವಮ್ಮನಿಗೆ ರತ್ನಳ ಬಗ್ಗೆ ಕೆಟ್ಟ ಅಭಿಪ್ರಾಯವೇನೂ ಮೂಡಲಿಲ್ಲ. ರತ್ನ ತುಂಬಾ ಗಂಭೀರವಾಗಿ, ಮರ್ಯಾದೆಯಾಗಿ ನಡೆದುಕೊಂಡಳು. ಮೈದುನನೆಂದಂತೆ ದೇವಮ್ಮನಿಗೆ ರತ್ನಳು ಕೆಟ್ಟವಳೆನಿಸಲಿಲ್ಲ. ಅದಕ್ಕೇ ಮಗನನ್ನು ನಿರ್ಬಂಧಿಸಲಿಲ್ಲ. ಅವರೂ ರತ್ನ ಒತ್ತಾಯಿಸಿದ್ದಕ್ಕೆ ಒಂದೆರಡು ಬಾರಿ ಹೋಗಿ ಬಂದಿದ್ದರು. ಮುಖ ನೋಡಿ ಮನಸ್ಸನ್ನು

ಅಳೆಯುವುದು ಸಾಧ್ಯವಿರಲಿಲ್ಲ. ವಾಸುವಿಗೆ ತಾಯಿಯ ಪ್ರತಿಕ್ರಿಯೆ ಖುಷಿ ತರಿಸಿತು. ನಿರಾತಂಕವಾಗಿ ಅತ್ತಿಗೆಯ ಮನೆಗೆ ಹೋಗಿ ಬರಬಹುದೆಂದುಕೊಂಡಿದ್ದ.

ದೇವಮ್ಮನಿಗೆ ಕ್ರಮೇಣ ರತ್ನ ಶ್ರೀನಿವಾಸರ ಅನೀತಿಯ ಬದುಕು ತಿಳಿಯಿತು. ದೇವಮ್ಮನ ದೊಡ್ಡಮ್ಮನ ಇಬ್ಬರು ಹೆಣ್ಣುಮಕ್ಕಳು, ಅಣ್ಣನ ಮಕ್ಕಳು ಎಲ್ಲಾ ಇಲ್ಲೇ ಇದ್ದರು. ಅವರಿಗೆ ಶ್ರೀನಿವಾಸನ ತಂದೆಯ ಸಂಬಂಧ. ಹೀಗಾಗಿ ಅವರ ವಿಚಾರ ಎಲ್ಲರಿಗೂ ತಿಳಿದಿತ್ತು. ಯಾರೂ ಶ್ರೀನಿವಾಸನ ಮನೆಗೆ ಹೋಗಿ ಬರುವ ಅಭ್ಯಾಸವಿಟ್ಟುಕೊಂಡಿರಲಿಲ್ಲ. ಶ್ರೀನಿವಾಸನಿಗೂ ಯಾರೂ ಬೇಕಾಗಿರಲಿಲ್ಲ. ಶ್ರೀನಿವಾಸ ಬೇರೆ ಜಾತಿ ಹುಡುಗಿಯನ್ನು ಹಾರಿಸಿಕೊಂಡು ಬಂದು ಬೆಂಗಳೂರಿನಲ್ಲಿ ಮದುವೆಯಾಗಿರುವ ವಿಚಾರ ತಿಳಿಯಿತು. ಜೊತೆಗೆ ಆ ಬೀದಿಯವರೂ ರತ್ನಳ ಬಗ್ಗೆ ಒಳ್ಳೆ ಅಭಿಪ್ರಾಯ ಕೊಡಲಿಲ್ಲ. ಮದುವೆಯಾಗಿದ್ದರೂ ಎಷ್ಟೋ ಜನ ಗಂಡಸರನ್ನ ಬುಟ್ಟಿಗೆ ಹಾಕ್ಕೋತಾಳೆ. ಇಲ್ದೆ ಇದ್ರೆ ಗಂಡನಿಗೆ ಬರೋ ಸಂಬಳದಲ್ಲಿ ಅವರ ಸಂಸಾರ ನಡೆಯೋದು ಹೇಗೆ? ಕುಡಿಯೋಕೆ, ಜೂಜಿಗೆ ಹಣ ಅವನಿಗೆ ಬೇಕು. ಇವಳಿಗೆ ಫ್ಯಾಷನ್ ಮಾಡ್ಕೊಳ್ಳೋಕೆ ಹಣಬೇಕು. ದಿನಕ್ಕೊಂದು ಸೀರೆ, ತುಟಿಗೆ ಬಣ್ಣ–ಇದಕ್ಕೆಲ್ಲಾ ದುಡ್ಡು ಎಲ್ಲಿಂದ ಬರಬೇಕು........ಎಷ್ಟು ಜನ ಹುಡುಗರು ಇವಳ ಮನೆ ಬಾಗಿಲಿಗೆ ಬಂದು ಕೆಟ್ಟು ಹಾಳಾಗಿ ಹೋದರೋ! –ಎಂದೆಲ್ಲಾ ಸ್ವಲ್ಪ ನಿಜವನ್ನು ಸ್ವಲ್ಪ ಸುಳ್ಳನ್ನು ಬಣ್ಣಗಟ್ಟಿ ಹೇಳಿದರು.

ದೇವಮ್ಮನ ಚಿಂತೆ ಚಿತೆಯಾಗಿ ಉರಿಯತೊಡಗಿತು. ಇವಳ ಬಲೆಗೆ ಮಗ ಬಿದ್ದು ಹಾಳಾಗುತ್ತಿರಬೇಕು. ದುಡಿಯುವುದನ್ನೆಲ್ಲಾ ಅವಳಿಗೇ ಹಾಕ್ತಿರಬೇಕು. ಅವನು ತಡವಾಗಿ ಮನೆಗೆ ಬರೋದಕ್ಕೂ ಅವಳೇ ಕಾರಣ ಇರಬೇಕು. ಇನ್ನು ಮುಂದೆ ಅವಳ ಹೊಸ್ತಿಲು ತುಳೀಬಾರದೂಂತ ವಾಸುವಿಗೆ ಹೇಳ್ತೀನಿ. ಇಲ್ಲ, ಇಲ್ಲ.........ಅವನು ನನ್ನಿಂದ ದೂರವಾಗಬಾರದು. ಅವಳ ಮೋಹಿನಿಯಾಟಕ್ಕೆ ಮೋಸ ಹೋಗಬಾರದು. ಸರ್ವನಾಶವಾಗುವುದಕ್ಕೆ ಮುಂಚೆ ಅವನನ್ನು ತಡೆಯಬೇಕು – ಎಂದು ಗಟ್ಟಿಯಾಗಿ ನಿರ್ಧರಿಸಿದಳು.

* * *

ಭಾನುವಾರ ರಜವಿತ್ತು ವಾಸುವಿಗೆ, ಹತ್ತು ಗಂಟೆಯವರೆಗೆ ಮನೆಯಲ್ಲೇ ಇದ್ದ. ಹೊರಗೆ ಸುತ್ತಾಡಿಕೊಂಡು ಗೆಳೆಯರನ್ನು ಮಾತನಾಡಿಸಿಕೊಂಡು, ಹಾಗೆಯೇ ಅತ್ತಿಗೆಯನ್ನು ವಿಚಾರಿಸಿಕೊಂಡು ಬರೋಣವೆಂದು ಹೊರಟ. ಆ ದಿನ ಹಾಳಾದ್ದು ಗೆಳೆಯರಾರೂ ಸಿಕ್ಕಲಿಲ್ಲ. ಅತ್ತಿಗೆಯ ಮನೆಗೆ ಹೋಗೋಣವೆಂದು ಅವಳ ಮನೆಯ ಕಡೆ ಹೋಗುವ ಬಸ್ಸಿಗಾಗಿ ಕಾದ. ಸುಮಾರು ಒಂದು ಗಂಟೆ ಕಾದ ಮೇಲೆ ಬಸ್ಸು ಬಂತು. ಸರಿ ರತ್ನಳ ಮನೆ ಸೇರುವ ಹೊತ್ತಿಗೆ ಸರಿಯಾಗಿ ಹನ್ನೆರಡು ಗಂಟೆಯಾಗಿತ್ತು. ಬಾಗಿಲು ತಟ್ಟಿದ. ಆದರೆ ಬಾಗಿಲ ಚಿಲಕ ಹಾಕಿರಲಿಲ್ಲವಾಗಿ ಬಾಗಿಲು ತಾನಾಗಿಯೇ

ತೆರೆದುಕೊಂಡಿತು. ಮನೆ ನಿರ್ಜನವಾಗಿದೆ. ಬಾಗಿಲ ಚಿಲಕವೂ ಹಾಕದೆ ಇವರೆಲ್ಲ ಎಲ್ಲಿಗೆ ಹೋಗಿರಬೇಕು? – ಎಂದು ಆಲೋಚಿಸುತ್ತಾ ಒಳಗೆ ನಡೆದ. ಅಲ್ಲಿನ ದೃಶ್ಯ ನೋಡಿ ಸ್ತಂಭಿಸಿ ಹೋದ. ರತ್ನ ಮನೋಹರನ ತೆಕ್ಕೆಯಲ್ಲಿ ಹಾಯಾಗಿ ಮಲಗಿದ್ದಾಳೆ. ಮನೋಹರನೇಕೆ ಇಲ್ಲಿಗೆ ಬಂದ?–ಎಂದು ಯೋಚಿಸಿದ.

ಮನೋಹರ ವಾಸುವಿನ ಸಹೋದ್ಯೋಗಿ. ವಾಸುವಿಗೆ ತುಂಬಾ ಗೆಳೆಯ, ಆಗಾಗ ವಾಸು ತನ್ನ ಮನೆಗೆ ಅವನನ್ನು ಕರೆತರುತ್ತಿದ್ದ. ಅವನಿಗೆ ರತ್ನಳ ಪರಿಚಯ ಮಾಡಿಸಿದ್ದ. ಅಷ್ಟೇ ಹೊರತಾಗಿ ಇನ್ನೇನೂ ತಿಳಿದಿಲ್ಲ. ಆದರೆ ಅವರಿಬ್ಬರ ನಡುವೆ ಈ ರೀತಿಯ ಸಂಬಂಧವನ್ನು ಕನಸಿನಲ್ಲಿಯೂ ಊಹಿಸಿರಲಿಲ್ಲ. ತನ್ನ ಮನೆಗೇ ಬಂದು, ತನ್ನವರಿಗೇ ದ್ರೋಹ ಮಾಡ್ತಾನೆಂದು ಭಾವಿಸಿರಲಿಲ್ಲ. ತನಗೆ ಸ್ವಲ್ಪವೂ ಸುಳಿವೂ ತಿಳಿಯದೆ ತನ್ನತ್ತಿಗೆಯ ಮೇಲೆ ಕಣ್ಣು ಹಾಕಿದ್ದಾನೆ. ಖೂಳ, ಹಲ್ಲು ಮುರಿದು ಬಿಡಬೇಕು– ಎಂದುಕೊಂಡ. ಆದರೆ ಬಾಯಿಂದ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನೆ ನಿಂತ. ಇಬ್ಬರೂ ಈ ಪ್ರಪಂಚದಲ್ಲಿರಲಿಲ್ಲ! ತಾನೇ ಎಚ್ಚರಿಸಬೇಕೆಂದುಕೊಂಡು, ಮನೂ! – ಎಂದ ಮೆಲ್ಲಗೆ, ಯಾರ ಕಿವಿಗೂ ಬೀಳಲಿಲ್ಲ. ಬಯಸಿದರೂ ಬಾರದ ಗಡಸುತನ ತಂದುಕೊಂಡು ಅರಚಿದ – 'ಮನೂ' ಎಂದ. ಮನೂ ಬೆಚ್ಚಿಬಿದ್ದು ತಿರುಗಿದ. ರತ್ನಳಿಗೆ 'ಅಪರಾಧಿ' ಸಿಕ್ಕಿ ಬಿದ್ದಂತಾಯಿತು. ಸರಕ್ಕನೆ ಎದ್ದು ಮನೂ ಮತ್ತು ರತ್ನ, 'ವಾಸು ನೀನು ಇಲ್ಲಿ! ಎಂದರು ಆಶ್ಚರ್ಯದಿಂದ.

ವಾಸುವಿಗೆ ಮುಂದೆ ತೀರಾ ಅವಮಾನವಾದಂತಾಯಿತು. ತನ್ನನ್ನು ಮುಗ್ಧನೆಂದೇ ವಾಸುವನ್ನು ನಂಬಿಸಿಕೊಂಡು ಬಂದು ಈಗ ಮುಗ್ಧತೆಯ ಮುಸುಕಿನಲ್ಲಿ ತನ್ನ 'ಧೂರ್ತ'ತನ ಹೊರಬಿದ್ದುದಕ್ಕಾಗಿ ನಾಚಿಕೆಯಾಯಿತು. ವಾಸುವಿಗೆ ಮುಖ ಕೊಟ್ಟು ಮಾತನಾಡಲಾಗಲಿಲ್ಲ ಮನುವಿಗೆ. ವಾಸುವಿನ ಎದೆಯಲ್ಲಿ ಕಾಳ್ಗಿಚ್ಚು ಹೊತ್ತಿ ಉರಿಯಿತು.

ರತ್ನಳ ಪ್ರತಿಕ್ರಿಯೆ ಇದಕ್ಕೆ ತೀರಾ ಭಿನ್ನವಾಗಿತ್ತು. ಅವಳಿಗೆ ನಾಚಿಕೆಯಾಗಲಿಲ್ಲ. ಬದಲಾಗಿ ಹೃದಯ ಬುಸುಗುಟ್ಟಿತು. ತನ್ನ ತಪ್ಪು ಬಯಲಿಗೆ ಬಂದುದಕ್ಕೆ ವಾಸುವಿನ ಮೇಲೆ ಸಿಟ್ಟಾದಳು. ವಾಸು ಕೇಳುವ ಪ್ರಶ್ನೆಗೆ ಉತ್ತರವನ್ನು ಆಲೋಚಿಸತೊಡಗಿದಳು. ವಾಸುವಿಗೆ ಮಾತ್ರ ದುಃಖ ಒತ್ತರಿಸಿ ಬಂತು. ರತ್ನಳನ್ನು ಈ ವ್ಯಕ್ತಿತ್ವದ ಮೂಸೆಯಲ್ಲಿ ನಿರೀಕ್ಷಿಸಿರಲಿಲ್ಲ. ಸೋಷಿಯಲ್ ಅಷ್ಟೆ! ನಿಷ್ಕಲ್ಮಶ ಹೃದಯ. ಪವಿತ್ರಳು, ಸಲುಗೆಯ ಸ್ವಭಾವದವಳು–ಎಂದುಕೊಂಡಿದ್ದ, ಅವನ ಅಭಿಪ್ರಾಯ ತಲೆ ಕೆಳಗಾಗಿತ್ತು. ಅತ್ತಿಗೆಯನ್ನು ತೀವ್ರವಾಗಿ ಪ್ರೀತಿಸಿದಕ್ಕೆ ಅವಳ ಈ ನಡತೆ ವಾಸುವಿಗೆ ಸಿಟ್ಟನ್ನು ಬರಿಸುವುದಕ್ಕಿಂತ ದುಃಖವನ್ನೇ ಬರಿಸಿತ್ತು. ಅತ್ತಿಗೆಯಿಂದ ಈ ರೀತಿಯ ಅನೀತಿಯ ವ್ಯವಹಾರವನ್ನು ನಿರೀಕ್ಷಿಸಿರಲಿಲ್ಲ. ಒಂದು ಕಡೆ ಆಳವಾದ ಪ್ರೀತಿಯಿಂದ ಬೆಸೆದುಕೊಂಡ ಸಂಬಂಧವಾದರೆ ಮತ್ತೊಂದು ಕಡೆ ಸ್ನೇಹದಿಂದ ಸುತ್ತಿಕೊಂಡ ನಂಟು. ಯಾರಿಗೆ ಏನು ಹೇಳುವುದು. ಸುಮ್ಮನೆ ಅಪರಾಧಿಗಳಂತೆ ನಿಂತುಕೊಂಡ ರತ್ನ ಮತ್ತು ಮನುವನ್ನು ನೋಡಿದ.

ಮನೋಹರ ಎಷ್ಟು ಒಳ್ಳೆಯವನು? ಸಹೋದ್ಯೋಗಿಗಳಲ್ಲಿ ಸಲುಗೆಯಿಂದ ಇರಲು ಆರಿಸಿಕೊಂಡ ಸ್ನೇಹಿತ. ತನ್ನ ಕಷ್ಟ ಸುಖಗಳಿಗೆ ಎಷ್ಟೋ ಸಲ ಸಹಾಯ ನೀಡಿದ್ದ. ಮುಗ್ಧ! ಸಹೃದಯಿ, ಸೌಜನ್ಯವುಳ್ಳವನು, ಎಂದೇ ತೀರ್ಮಾನಿಸಿದ್ದ. ಆದರೆ ಈಗ ಛೆ! ಛೆ! ಯೋಚಿಸಲೂ ಅಸಹ್ಯವೆನಿಸಿವುದು- ಎಂದುಕೊಂಡರೂ ಮನೋಹರನನ್ನು ಎದುರಿಗೇ ಛೀಮಾರಿ ಹಾಕೋಣವೇ? ಸಿಲುಬೆಗೇರಿಸೋಣವೇ - ಎಂಬ ಆಲೋಚನೆಗಳೂ ಅಡ್ಡ ಹಾದವು. ಆದರೆ ಸಾವರಿಸಿಕೊಂಡು 'ಮನೂ ನಾಳೆ ನೀನು ನನ್ನನ್ನು ಆಫೀಸಿನಲ್ಲಿ ಕಾಣುತ್ತೀಯಾ?-ಎಂದು ಕೇಳಿದ. ಮನೋಹರನಿಗೆ 'ದಮ್ಮಯ್ಯ' - ಸದ್ಯ ಏನೂ ಬೈಯ್ಯಲಿಲ್ಲವಲ್ಲ!- ಬದುಕಿದೆ- ಎನಿಸಿತು. ಓಹ್! ಎಸ್! - ಎಂದು ತಟಕ್ಕನೆ ಉತ್ತರಿಸಿದ. ಮತ್ತೆ ರತ್ನಳ ಕಡೆ ತಿರುಗಿ 'ಅತ್ತಿಗೆ ನಿಮ್ಮ ಹತ್ತಿರ ಸ್ವಲ್ಪ ಮಾತಾಡುವುದಿದೆ! ಎಂದ. ಮನೋಹರನಿಗೆ ಸೂಕ್ಷ್ಮ ಅರ್ಥವಾಯಿತು ಐಯಾಮ್ ಸಾರಿ ಬರುತ್ತೇನೆ ವಾಸು- ಎಂದವನೇ ಅಲ್ಲಿಂದ ಕಾಲುಕಿತ್ತ.

ರತ್ನಳಿಗಾದ ಅವಮಾನ ನಾಚಿಕೆಯಲ್ಲಿ ಪರಿಸಮಾಪ್ತವಾಗುವುದಕ್ಕೆ ಬದಲಾಗಿ ಸಿಟ್ಟಾಗಿ ತಿರುಗಿತ್ತು. ಸೆಟೆದುಕೊಂಡೇ, ಹೂಂ! ಹೇಳು, ಏನು ಮಾಡೋದಿದೆ-ಅಂತ ಕೇಳಿದಳು. ವಾಸುವಿಗೆ ರತ್ನಳ ಮನದ ನಿಲುವು ಅರ್ಥವಾಯಿತು. ಅವಳಿಗೆ ಹಿಡಿಸದ ಮಾತುಗಳು ಬಂದಾವೆಂದು ಅವಳು ತಿಳಿದಿರಬೇಕು- ಎಂದುಕೊಂಡ. ಅದರೂ ಒಂದು ಬುದ್ಧಿಯ ಮಾತಾದರೂ ಆಡದಿದ್ದರೆ ಮನಸ್ಸು ಚುಚ್ಚುತ್ತಿರುತ್ತದೆ. ಅವಳಿಗೆ ಬುದ್ದಿ ಹೇಳಲು ತಾನೆಷ್ಟರವನು ಎಂದೆನಿಸಿದರೂ, ಹೇಳದಿದ್ದರೆ ಆತ್ಮ ವಂಚನೆಯಾಗುತ್ತದೆ- ಅನಿಸಿ ಮಾತಿಗೆ ಮೊದಲಿಟ್ಟ - 'ಕ್ಷಮಿಸಿ ಅತ್ತಿಗೆ, ನಿಮ್ಮಿಂದ ನಾನು ಈ ರೀತಿಯ ವರ್ತನೆ ನಿರೀಕ್ಷಿಸಿರಲಿಲ್ಲ. ನನ್ನ ಕಲ್ಪನೆಯಲ್ಲಿ ನಿಮಗಿದ್ದ ಸ್ಥಾನ ಬಹುಶಃ ನೀವು ಊಹಿಸಿರಲಾರಿರಿ. ತಾಯಿ, ತಂಗಿಯನ್ನೂ ನಿರ್ಲಕ್ಷಿಸಿ ನಿಮ್ಮ ಸುಖಕ್ಕಾಗಿ ನಾನು ಹೆಣಗಿದೆ. ಯಾವ ಜನ್ಮದ ಋಣಾನುಬಂಧದ ಸೆಳವೋ ಹೀಗೆ ನಾನು ನಿಮ್ಮತ್ತ ದೂಡುತ್ತಿದ್ದೇನೆ ಎಂದುಕೊಂಡಿದ್ದೆ. ನಿಮ್ಮ ಸ್ನೇಹ ಸಲುಗೆಗಳಲ್ಲಿ ತಾಯಿಯಿಂದಲೂ ದೊರೆಯದ ವಾತ್ಸಲ್ಯದ ಎಳೆ ಕಂಡೆ. ನಿಮ್ಮನ್ನು ಗೌರವಿಸಿದೆ. ಪ್ರೀತಿಸಿದೆ, ನನ್ನೆಲ್ಲ ಸ್ನೇಹಿತರ ಪರಿಚಯ ಮಾಡಿಸಿದೆ-ಇಂತಹ ಅತ್ತಿಗೆ ನನಗಿದ್ದಾರೆಂಬ ಹೆಮ್ಮೆಯ ಭಾವನೆಯಿಂದ. ಅಣ್ಣನ ಆ ದುಶ್ಚಟಗಳನ್ನೂ ಕಂಡೂ ಬಾಡದ ನಗುವಿನ ಬದುಕನ್ನು ಬದುಕುತ್ತಿರುವ ನಿಮ್ಮ ಸ್ವಭಾವಕ್ಕೆ ಬೆರಗಾದೆ. ಆದರೆ...... ಆದರೆ ಇಂದು ನನಗೆ ತೀರಾ ಕಸಿವಿಸಿ ಎನಿಸುವಂತೆ ನಡೆದುಕೊಂಡಿರಿ. ನಿಮ್ಮ ಸಲಿಗೆಯ ಅತಿರೇಕ ಈ ಮಟ್ಟದ್ದೆಂದು ನಾನು ಭಾವಿಸಿರಲಿಲ್ಲ....... ಯಾಕತ್ತಿಗೆ ಮನುವನ್ನು ಇಷ್ಟು ದೂರ ಬರಲು ಬಿಟ್ಟಿರಿ? ಕಪಾಳಕ್ಕೆ ಎರಡು ಥಳಿಸಿ ಅಟ್ಟಬಾರದಿತ್ತೆ?-ಎಂದು ಪ್ರಶ್ನಿಸಿದ. ರತ್ನ ಕಣ್ಣಲ್ಲಿ ಸಿಟ್ಟು ತುಂಬಿಕೊಂಡು ಹೇಳಿದಳು- ವಾಸು ಇಷ್ಟು ದಿವಸ ನಿನ್ನ ಮೇಲಿನ ಪ್ರೀತಿಗಾಗಿ, ನೀನು ನನ್ನೊಂದಿಗೆ ಬಳಸಿಕೊಳ್ಳುತ್ತಿರುವ ಸಲುಗೆಯನ್ನು ಕಂಡು ಸುಮ್ಮನಿದ್ದೀನಿ. ಆದರೆ ಅದನ್ನು ದುರುಪಯೋಗಪಡಿಸಿಕೊಳ್ಳಬೇಡ. ಯಾರೊಂದಿಗೆ

ಹೇಗಿರಬೇಕೆಂದು ನನಗೆ ಗೊತ್ತು. ನನ್ನ ವ್ಯವಹಾರಗಳನ್ನು ಕುರಿತು ಪ್ರಶ್ನಿಸುವ ಅಧಿಕಾರ ನಿನಗಿಲ್ಲ. ಮನೂನ ನಾನು ಪ್ರೀತಿಸ್ತೀನಿ. ಅವನೂ ಅಷ್ಟೆ! ನಾವಿಬ್ಬರೂ ಮದುವೆಯಾಗಬೇಕೆಂದು ತೀರ್ಮಾನಿಸಿದ್ದೀವಿ ನಾನು ಮನುಷ್ಯನೊಂದಿಗೆ ಬಾಳಬಲ್ಲೆನೇ ಹೊರತಾಗಿ ಮೃಗಗಳೊಂದಿಗೆ ಬಾಳಲಾರೆ. ನಿಮ್ಮಣ್ಣ ಒಂದು ಪಶು. ಅವನು ನನಗೆ ಬೇಕಿಲ್ಲ. ಕಾನೂನಿನ ಪ್ರಕಾರ ಡೈವೋರ್ಸ್ ಪಡೆದು ನಾವಿಬ್ಬರೂ ಮದುವೆಯಾಗ್ತೀವಿ. ನಿನಗೆ ನನ್ನ ಮಾತಿನಲ್ಲಿ ಅರ್ಥ ಕಂಡರೆ, ಸರಿಯೆನಿಸಿದರೆ, ನಿನ್ನ ಅತ್ತಿಗೆಯ ಸುಖಬೇಕಾದರೆ ನಮ್ಮ ಈ ಪ್ರಯತ್ನಕ್ಕೆ ನೀನೂ ಸಹಕರಿಸು. ಇಲ್ಲವಾದಲ್ಲಿ ನಿನಗೊಂದು ನಮಸ್ಕಾರ ಎಂದು ಹೇಳಿ ಒಳಗೆ ಹೋಗಲು ತಿರುಗಿದಳು. ವಾಸು 'ಅತ್ತಿಗೆ' ಎಂದ, ಪಟಪಟನೆ ಕಂಬನಿಯೆರಡು ಉದುರಿದವು. ರತ್ನ ಹತ್ತಿರ ಬಂದಳು. 'ವಾಸು' ಎಂದು ಮೆಲ್ಲನೆ ಬೆನ್ನ ಮೇಲೆ ಕೈಯಾಡಿಸಿದಳು. ವಾಸುವಿಗೆ ಕಚಗುಳಿಯಿಟ್ಟಂತಾಯಿತು. ಅಂಗಾಂಗಗಳಲ್ಲಿ ಪುಲಕದ ಮೊಗ್ಗುಗಳರಳಿದವು. ಅವರ ಮನಸ್ಸನ್ನು ಕವಿದಿದ್ದ ಕಹಿ ಭಾವನೆಗಳೆಲ್ಲ ಕರಗಿ ಮರೆಯಾದವು.

'ಕ್ಷಮಿಸಿ ಅತ್ತಿಗೆ, ಅನುಭವಿಸುವವರಿಗೇ ಗೊತ್ತು. ಅಣ್ಣನ ದುಶ್ಚಟಗಳಿಗೆ ನೀವು ನಿಮ್ಮ ಬದುಕನ್ನು ಬಲಿಕೊಟ್ಟು ಹಾಳಾಗುವುದು ನನಗೂ ಬೇಕಿಲ್ಲ. ನೀವು ನಗುನಗುತ್ತಾ ಇರುವುದಷ್ಟೇ ನನಗೆ ಬೇಕಾದ್ದು. ಮನುವಿನೊಂದಿಗೆ ಮದುವೆಯಾಗಿ ಸುಖವಾಗಿ ಬಾಳಬಲ್ಲಿರೆನಿಸಿದರೆ ಖಂಡಿತವಾಗಿ ನಾನೂ ಸಹಕರಿಸುತ್ತೇನೆ. ಅವನಿಗೂ ಈ ವಿಷಯದಲ್ಲಿ ತಿಳಿಯ ಹೇಳುತ್ತೇನೆ'– ಎಂದ.

'ವಾಸು ನನ್ನ ನಡತೆ ನಿನಗೆ ಕೆಟ್ಟದೆನಿಸಿರಬಹುದು. ಆದರೆ ಮನಸ್ಸು ಎಷ್ಟು ರೋಸಿ ಹೋದ ಮೇಲೆ ಇಂತಹ ನಿರ್ಧಾರಕ್ಕೆ ಬಂದಿದ್ದೀನಿ ಗೊತ್ತಾ? ನನಗೇನು ಮಾನ ಮರ್ಯಾದೆಯ ಪ್ರಜ್ಞೆ ಇಲ್ಲವೇ. ನನಗೂ ಹೆಣ್ಣು ಮಗಳಿಲ್ಲವೇ? ಆದರೆ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ಹೀಗೆ ಮಾಡ್ತಿದ್ದೀನಿ. ನಾಳೆ ನಾನು ಬದುಕಲು ಯಾರು ಸಹಾಯ ಮಾಡುವರು? ನಿಮ್ಮಣ್ಣ ತರುವ ಹಣ ಎಷ್ಟಂತಲೂ ಗೊತ್ತಿಲ್ಲ. ಬಂದಾಗೆಲ್ಲ ಅವನನ್ನು ಕುಡುಕನಂತೆ ಕಾಣಬೇಕೇ ಹೊರತು ಜವಾಬ್ದಾರಿವುಳ್ಳ ಒಂದು ಮನೆಯ ಯಜಮಾನನಂತೆಯಾಗಲೀ, ಮರ್ಯಾದೆಯ ಗಂಡನಂತೆಯಾಗಲಿ, ವೀಣಾಗೆ ಪ್ರೀತಿಯ ತಂದೆಯಂತಾಗಲಿ ಕಾಣಸಿಗುವುದಿಲ್ಲ. ಸಾಲದ್ದಕ್ಕೆ ಇದ್ದ ಬದ್ದದನ್ನೆಲ್ಲ ಅಡವಿಟ್ಟು ಕೊನೆಗೆ ನನ್ನನ್ನು ಬೇಕಾದರೂ ಅಡವಿಡುವ ಮಟ್ಟಕ್ಕೆ ಬಂದಿದ್ದಾನೆ. ಮೈ ತುಂಬ ಸಾಲ. ಅವನು ಬಂದರೆ ಅವನ ಹಿಂದೆ ಸಾಲಗಾರರ ಹಿಂಡೆ ಬರುತ್ತದೆ. ಹೀಗಿರುವಾಗ ನೀನೇ ಹೇಳು–ನನಗೆ ಆಶ್ರಯಕೊಡುವ, ಕಾಪಾಡುವ, ಪ್ರೀತಿಯಿಂದ ನೋಡುವ ವ್ಯಕ್ತಿ ಸಿಕ್ಕಾಗ ಅದನ್ನು ಬಯಸುವುದರಲ್ಲಿ ತಪ್ಪಿದೆಯೆನ್ನುತ್ತೀಯಾ?– ಎಂದು ಮುಳು ಮುಳು ಅತ್ತಳು.

ವಾಸು ಕರಗುವುದಕ್ಕೆ, ವಾಸು ನಂಬುವುದಕ್ಕೆ, ವಾಸು ಮತ್ತೊಂದು ಅಡಿ ಆಳದ ಕೆಸರಲ್ಲಿ ಹೂತು ಹೋಗುವುದಕ್ಕೆ ಇಷ್ಟೇ ಸಾಕಾಗಿತ್ತು.

ಪ್ಲೀಸ್ ಅತ್ತಿಗೆ, ಒಂದು ತೊಟ್ಟು ಕಣ್ಣೀರು ಬಿದ್ದರೂ ನನ್ನಾಣೆ ಎಂದ.

ರತ್ನ 'ಸೋರ್' ಎಂದು ಮೂಗಳೆದುಕೊಳ್ಳುತ್ತಾ ಸೆರಗಿನ ತುದಿಯಿಂದ ಕಣ್ಣೊರೆಸಿಕೊಂಡಳು. ವಾಸುವೇ ಸಮಾಧಾನದ ದಾಟಿಯಲ್ಲಿ ನುಡಿದ. 'ನಾಳೆ ಯಾರಾದರೂ ಲಾಯರನ್ನು ಹಿಡಿದು ನಿಮ್ಮ ಕೆಲಸ ಮಾಡಿಸುತ್ತೇನೆ. ನಾನೇ ನಿಂತು ನಿಮ್ಮಿಬ್ಬರ ಮದುವೆ ಮಾಡುತ್ತೇನೆ. ಹೆರವರ ಮನೆ ಹೆಣ್ಣು ಮಕ್ಕಳನ್ನು ತಂದು ಹಿಂಸಿಸಿ ಪ್ರಾಣ ತೆಗೆಯುವ ಪಶುತನ ಶ್ರೀನಿವಾಸನಲ್ಲಿದೆ ಎಂದು ಹೇಳಿ ಹೊರಡಲು ತಿರುಗಿದ. ರತ್ನ 'ಇಲ್ಲೇ ಇದ್ದು ರಾತ್ರಿ ಊಟ ಮಾಡಿಕೊಂಡು ಹೋಗು ವಾಸು' ಎಂದು ಹೇಳಿದಳು. ಆದರೆ ವಾಸು 'ಇಲ್ಲ ಅತ್ತಿಗೆ ಈಗ ನಾನು ಹೋಗಬೇಕಾಗಿದೆ. ನಾಳೆ ಯಾವಾಗಲಾದರೂ ಬಂದಾಗ ಊಟ ಮಾಡ್ತೇನೆ. ಈಗ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ'– ಎಂದು ನಡೆದೇ ಬಿಟ್ಟ.

ವಾಸು ಇನ್ನೂ ಬಾಗಿಲು ದಾಟಿರಲಾರ, ರತ್ನಳ ಮುಖದ ಮೇಲಿನ ಮೋಡಗಳು ಚೆದುರಿ ಮುಂಚಿನ ಬೆಳಕಿನ ನಗು ಸುಳಿಯಿತು.

* * *

ಹಿಂದಿನ ದಿನ ರತ್ನಳ ವಿಚಾರದಲ್ಲಿ ಪೂರ್ತಿ ತಲೆಕೆಟ್ಟು ಅಲೆದಾಡಿ ಅಲೆದಾಡಿ ರಾತ್ರಿ ಮನೆ ಸೇರುವ ವೇಳೆಗೆ ಹನ್ನೆರಡು ಗಂಟೆ ದಾಟಿತ್ತು. ಅದಕ್ಕೇ ಈ ದಿನ ಬೆಳಿಗ್ಗೆ ಎಂಟುಗಂಟೆಯಾದರೂ ಎದ್ದೇ ಇರಲಿಲ್ಲ. ಎಚ್ಚರಿಕೆಯಾಗಿದ್ದರೂ ಹಾಸಿಗೆ ಬಿಟ್ಟು ಮೇಲೇಳುವ ಮನಸ್ಸಾಗಲಿಲ್ಲ. ದೇವಮ್ಮ ಅಷ್ಟು ಹೊತ್ತಿಗೇ ಎರಡು ಸಲ ಬಂದು ಅವನು ಇನ್ನೂ ಮಲಗಿದ್ದುದನ್ನು ಗಮನಿಸಿದ ದೇವಮ್ಮನಿಗೆ, 'ಪಾಪ! ಮಲಗಲಿ ಮೈಗೆ ಆಲಸ್ಯವೋ ಏನೋ ಇಷ್ಟು ಹೊತ್ತಾದರೂ ಮಲಗಿದ್ದಾನೆ. ಆಫೀಸಿಗೆ ರಜೆ ಕಳಿಸಿದರಾಯಿತು' ಎಂದೆನಿಸಿತು. ಆದರೆ ಲಕ್ಷ್ಮಿ ಸುಮ್ಮನಿರಲಾರದೆ, ಅಣ್ಣ ಗಂಟೆ ಎಂಟಾಯಿತು. ಆಫೀಸಿಗೆ ಹೋಗಬೇಕಾದ್ದಿಲ್ಲವೇನು?' –ಎಂದು ಗಟ್ಟಿಯಾಗಿ ಕೇಳಿದಳು.

ವಾಸೂಗೆ ಆಫೀಸಿಗೆ ಹೋಗುವ ಮನಸ್ಸೂ ಇರಲಿಲ್ಲ. ಆದರೆ ಕೂಡಲೇ ಅವನಿಗೆ ಮನೂನೊಂದಿಗೆ ಮಾತಾಡಬೇಕಾಗಿದೆಯೆಂದು ನೆನಪಾಯಿತು. ದಿಗ್ಗನೆ ಎದ್ದು ಲಕ್ಷ್ಮೀ, ಒಂದು ಲೋಟ ಬಿಸಿ ಬಿಸಿ ಕಾಫಿ ಕೊಡು ಬೇಗ–ಎಂದು ಅವಳನ್ನು ಕಾಫಿಗಾಗಿ ಆತುರಪಡಿಸಿದ. ಎರಡು ನಿಮಿಷದಲ್ಲಿ ಕಾಫಿ ಲೋಟ ಅವನ ಕೈಗೆ ಬಂತು. ಗುಟುಕರಿಸಿ ಲೋಟವನ್ನು ಮೇಜಿನ ಮೇಲಿಟ್ಟು ಬಚ್ಚಲು ಮನೆ ಕಡೆ ನಡೆದ. ಸ್ನಾನ ಮಾಡಿ ರೆಡಿಯಾಗಿ ಬರುವಷ್ಟು ಹೊತ್ತಿಗೆ ದೇವಮ್ಮ ಮಣೆ ಹಾಕಿ ಊಟ ಬಡಿಸಿದಳು. ಬಂದವನೇ ಬಿಸಿಯಾಗಿದ್ದ ಅನ್ನವನ್ನು ಸಾರಲ್ಲಿ ಕಲೆಸಿಕೊಂಡು ಒಂದೆರಡು ತುತ್ತು ತಿಂದು ಎದ್ದ. ಮಜ್ಜಿಗೆ ಅನ್ನವನ್ನು ಉಣ್ಣುವಷ್ಟು ಸಹನೆಯಿರಲಿಲ್ಲ. ದೇವಮ್ಮ ಒತ್ತಾಯ ಮಾಡಿದರೂ ಕೇಳದೆ ಅರ್ಧಂಬರ್ಧ ಊಟ ಮಾಡಿ ಎದ್ದ. ಎಂದೂ ಇಲ್ಲದ ಆತುರ ಅವನ ಮುಖದಲ್ಲಿತ್ತು. ಪ್ರತಿಯೊಂದು ಕೆಲಸವನ್ನು ಗಡಿಬಿಡಿಯಾಗಿಯೇ ಮಾಡುತ್ತಿದ್ದ

ಅವನ ರೀತಿಗೆ ದೇವಮ್ಮನಿಗೆ ಅಚ್ಚರಿಯಾಯಿತು. ಆಫೀಸಿಗೆ ಹೊತ್ತಾಯಿತೇನೋ ಅಂದರೆ ಮಾಮೂಲು ವೇಳೆಗಿಂತ ಹದಿನೈದು ನಿಮಿಷ ಮುಂದಾಗಿಯೇ ಸಿದ್ಧವಾಗಿ ಹೊರಟಿದ್ದ. ದೇವಮ್ಮ ಕುತೂಹಲವನ್ನು ಹತ್ತಿಕ್ಕಿಕೊಂಡಳೇ ಹೊರತು ಮಗನನ್ನು ಅವನ ಗಡಿಬಿಡಿಗೆ ಕಾರಣವನ್ನು ಕೇಳಲಿಲ್ಲ.

ಆಫೀಸು ಸೇರುವ ವೇಳೆಗೆ ಸರಿಯಾಗಿ ೧೦-೩೦ ಆಗಿತ್ತು. ತನ್ನ ಸೀಟಿನಲ್ಲಿ ತಾನು ಕುಳಿತ. ಇನ್ನೂ ಸೆಕ್ಷನ್‌ನಲ್ಲಿ ಕೆಲಸ ಮಾಡುವವರು ಬರಬೇಕಿತ್ತು ಹೊತ್ತಿಗೆ ಸರಿಯಾಗಿ ಎಲ್ಲರೂ ಬಂದಿದ್ದುದೇ ಅಪರೂಪ ಕಾದು ಕುಳಿತ. ತನ್ನ ಪಕ್ಕದ ಕುರ್ಚಿ ತುಂಬುವುದನ್ನೇ ಕಾಯುತ್ತಿದ್ದ ಹೊರತಾಗಿ ಬೇರೆ ಯಾರೂ ಬಂದರೂ ಅವನಿಗೆ ಪರಿವೆಯಿರಲಿಲ್ಲ. ಹೊತ್ತು ಮುಂದುವರೆಯುತ್ತಿದ್ದಂತೆಯೇ ಅನಿಸಲಿಲ್ಲ. ಮನು ಈಗ ಬಂದಾನು.......ಈಗ ಬಂದಾನು-ಎಂದು ಕಾದ. ಆಫೀಸ್‌ನಲ್ಲಿನ ಉಳಿದ ಸಹೋದ್ಯೋಗಿಗಳು ವಾಸುವಿನ ಮುಖದಲ್ಲಿ ಕಾಣುತ್ತಿದ್ದ ಚಡಪಡಿಕೆಯನ್ನು ಗಮನಿಸಿದರು. ಬಾಲು ಕೇಳಿದ-ಹೇಯ್ ವಾಸು, ಇದೇನು ಈವತ್ತು ತುಂಬಾ ಅಪಸೆಟ್ ಆದ ಹಾಗೆ ಇದ್ದೀಯಲ್ಲ, ಮೈ ಹುಷಾರಿಲ್ಲವಾ? ಎಂದು. ವಾಸು ಆಷಾಢಭೂತಿ ನಗೆ ನಕ್ಕು, ಏನಿಕ್ಕಲ್ಲ ಬಾಲು, ಸುಮ್ಮನೆ ಹಾಗೆನಿಸಿದೆ ನಿನಗೆ ಅಷ್ಟೆ. ತನ್ನ ಗಡಿಯಾರ ಸರಿಯಾಗಿಲ್ಲವೇನೋ ಎಂದು, ಅಂದ ಹಾಗೆ ಟೈಂ ಏನಾಗಿದೆ ಈಗ? ಎಂದ. ಬಾಲೂಗೆ ನಗು ಬಂತು. ಕೈಯಲ್ಲಿನ ಗಡಿಯಾರ ಇಟ್ಕೊಂಡು ಟೈಂ ಕೇಳ್ತಾ ಇದ್ದೀಯಾ?- ಎಂದ. ಹಾಗೇನಿಲ್ಲ. ನಂದು ಸ್ವಲ್ಪ ಸ್ಲೋ ಇದೆ. ಅದಕ್ಕೇ ಕೇಳಿದೆ ಎಂದ-ವಾಸು. ಬಾಲು 'ಹನ್ನೊಂದುವರೆ' ಎಂದ. ಅಬ್ಬ ಆಗಲೇ ನಾನು ಬಂದು ಒಂದು ಗಂಟೆಯಾಯಿತೇ- ಎಂದುಕೊಂಡ. ಬಹುಶಃ ಮನೂ ಬರಲಾರ - ಎಲ್ಲೋ ರಜೆ ಹಾಕಿರಬೇಕು. ಎಂಥ ಈಡಿಯೆಟ್ ಅವನಿಗೆ ನನ್ನ ಈಗಿನ ಅಭಿಪ್ರಾಯ ತಿಳಿದಿದ್ದರೆ ಕುಣಿದು ಕುಪ್ಪಳಿಸುತ್ತಿದ್ದ.

ನಿರಾಶೆಯಿಂದಲೇ ಇಡೀ ದಿನ ಕಳೆದ. ಮನಸ್ಸಿಲ್ಲದ ಮನಸ್ಸಿನಿಂದಲೇ ಸಂಜೆವರೆಗೂ ಆಫೀಸ್‌ನಲ್ಲಿ ಉಳಿದ. ಮಾಡುವುದಕ್ಕೆ ಬೇಕಾದಷ್ಟು ಕೆಲಸ ಉಳಿದಿದ್ದರೂ, ನಾಳೆಗೆ ಮೀಸಲಿಟ್ಟು, ಗಂಟೆ ಐದಾಗುವುದನ್ನೇ ಕಾಯುತ್ತಿದ್ದು ಮನೆಯತ್ತ ಧಾವಿಸಿದ.

* * *

ಮರು ದಿವಸವೂ ಮನು ಆಫೀಸಿಗೆ ಬಂದಿರಲಿಲ್ಲ. ಈ ದಿನ ಅವನ ಮನೆಗಾದರೂ ಹೋಗಬೇಕೆಂದುಕೊಂಡ.

ಹನ್ನೆರಡು ಗಂಟೆಗೆ ಸರಿಯಾಗಿ ವಾಸುವಿಗೆ ಫೋನ್ ಬಂತು. ಮನೂ ಏನಾದರೂ ತನಗೆ ಫೋನ್ ಮಾಡಿರಬಹುದೇ ಎಂಬ ಕಾತುರತೆಯಿಂದ ರಿಸೀವರನ್ನು ಕೈಗೆತ್ತಿಕೊಂಡ. ಆದರೆ ಅದು ಆಸ್ಪತ್ರೆಯಿಂದ ರತ್ನಳ ಪರವಾಗಿ ಯಾರೋ ಮಾಡಿದ್ದರು. ರತ್ನಳು

ಆಸ್ಪತ್ರೆಯಲ್ಲಿರುವುದಾಗಿ ತಿಳಿಸಿದರು. ವಾಸುವಿಗೆ ಗಾಭರಿಯಾಯಿತು. ಈ ಕೂಡಲೇ ಬರುತ್ತೇನೆಂದು ತಿಳಿಸಿ ರಿಸೀವರನ್ನು ಕೆಳಗಿಟ್ಟ.

ಬಾಸ್‌ನ ಅಪ್ಪಣೆ ಪಡೆದು ಸೇಂಟ್ ಮೇರಿ ಆಸ್ಪತ್ರೆಯತ್ತ ಓಡಿದ. ಹೋಗುವಷ್ಟರಲ್ಲಿ ರತ್ನ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಮಂಚದ ಬಳಿ ಪಕ್ಕದ ಮನೆಯ ಸಾವಿತ್ರಮ್ಮ ನಿಂತಿದ್ದಳು. ಆಕೆಯ ಯಜಮಾನರೇ ವಾಸುವಿಗೆ ಫೋನ್ ಮಾಡಿದ್ದುದು. ವಾಸುವನ್ನು ನೋಡುತ್ತಿದ್ದಂತೆ ಅಳು ಜೋರಾಯಿತು. ಸಾವಿತ್ರಮ್ಮನನ್ನು ವಿಚಾರಿಸಿದ ವಾಸು. 'ನಿದ್ದೆ ಮಾತ್ರೆ ನುಂಗಿದ್ದಾರಂತೆ, ಡಾಕ್ಟರು ಹೇಳಿದರು. ವಾಂತಿ ಮಾಡಿಸಿ ಈಗೇನೋ ಪರವಾಗಿಲ್ಲಂತ ಹೇಳಿದ್ದಾರೆ ಡಾಕ್ಟರು. ಬೆಳಿಗ್ಗೆ ನಾನು ಅಕಸ್ಮಾತ್ತಾಗಿ ಹೋದಾಗ ನಿಮ್ಮ ಅತ್ತಿಗೆ ನೀರು ನೀರು ಅಂತ ನರಳ್ತಿದ್ದರು. ನನ್ನ ಬದುಕಿಸಿ, ನನ್ನ ಬದುಕಿಸಿ'– ಅಂತ ಹೊರಳಾಡ್ತಾ ಇದ್ದರು. ನನಗೆ ನೋಡಿ ಗಾಭರಿಯಾಗಿ ನಮ್ಮವರನ್ನು ಕರೆದು ತಂದೆ. ಅವರು ಕೂಡಲೇ ಆಂಬ್ಯುಲೆನ್ಸ್‌ಗೆ ಫೋನ್ ಮಾಡಿ ಕರೆಸಿದರು. ನಾವಿಬ್ಬರೂ ಜೊತೆಗೆ ಬಂದೆವು. ಆತ್ಮಹತ್ಯೆ, ಪೋಲೀಸ್ ಕೇಸ್ ಅಂತ ಏನೋ ಮಾತಾಡ್ತಾ ಇದ್ದರು. ನಿಮ್ಮಣ್ಣನೂ ಊರಲಿಲ್ಲವಂತೆ. ನಮಗ್ಯಾಕೋ ಭಯವಾಯ್ತು, ನಿಮ್ಮ ನೆನಪು ಬಂತು. ನಿಮ್ಮ ಅತ್ತಿಗೆಗೆ ಪ್ರಜ್ಞೆ ಬಂದ ಮೇಲೆ ಅವರೇ ನಿಮಗೆ ಫೋನ್ ಮಾಡಲು ಹೇಳಿದರು– ಎಂದು ಸಂಕ್ಷಿಪ್ತವಾಗಿ ವಿವರಿಸಿದರು.

ತುಂಬಾ ಉಪಕಾರವಾಯ್ತು ಸಾವಿತ್ರಮ್ಮ. 'ನಿಮ್ಮಿಂದ ನಮ್ಮತ್ತಿಗೆಯ ಪ್ರಾಣ ಉಳೀತು' ಎಂದು ವಾಸು ಕೈ ಮುಗಿದ.

ಅಯ್ಯೋ ಬಿಡಪ್ಪಾ! ಆಪತ್ಕಾಲದಲ್ಲಿ ಆಗದೆ ಹೋದರೆ ಮನುಷ್ಯನಾಗಿ ಹುಟ್ಟಿ ಸಾರ್ಥಕ ಏನು?– ಎಂದು ನುಡಿದರು ಸಾವಿತ್ರಮ್ಮ.

'ರತ್ನಳ ಅಳು ಅಷ್ಟರಲ್ಲಿ ಸಮಾಧಾನಗೊಂಡಿತ್ತು. ಸಾವಿತ್ರಮ್ಮನ ಯಜಮಾನರು ಅಲ್ಲಿಗೆ ಬಂದರು. ವಾಸು ಬಂದದ್ದನ್ನು ಕಂಡು ಅವರು ಹೊರಡಬೇಕೆಂದು ಕೊಳ್ಳುವಷ್ಟರಲ್ಲಿ ಡಾಕ್ಟರು, ಪೋಲೀಸ್ ಇನ್‌ಸ್ಪೆಕ್ಟರ್‌ರೊಂದಿಗೆ ಅಲ್ಲಿಗೆ ಬಂದು ಅವರೆಲ್ಲರ ಸ್ಟೇಟ್‌ಮೆಂಟ್ ಕೇಳಿದರು. ರತ್ನ ತನಗೆ ವಿಪರೀತ ಹೊಟ್ಟೇ ನೋವಿನಿಂದಾಗಿ ಸಹಿಸುವುದಕ್ಕಾಗದೆ ಒಂದು ಹಿಡಿ ಗುಳಿಗೆ ನುಂಗಿದುದಾಗಿ ವಿವರಿಸಿದಳು. ಸಾವಿತ್ರಮ್ಮ ಮತ್ತು ಅವರ ಯಜಮಾನರು ರತ್ನಳು ಯಾವ ಸ್ಥಿತಿಯಲ್ಲಿ ಬಿದ್ದಿದ್ದಳೆಂಬುದನ್ನು ವಿವರಿಸಿದರು. ಇನ್ನೊಮ್ಮೆ ಈ ರೀತಿಯಾಗಿ ಮಾಡಬಾರದೆಂದು ಡಾಕ್ಟರು, ಇನ್‌ಸ್ಪೆಕ್ಟರ್ ರತ್ನಳನ್ನು ಎಚ್ಚರಿಸಿ ಹೋದರು.

ಸದ್ಯ ಬಿಡುಗಡೆ ಸಿಕ್ಕಿತೆಂದು ರತ್ನಳನ್ನು ವಾಸುವಿಗೆ ಒಪ್ಪಿಸಿ ಸಾವಿತ್ರಮ್ಮ ದಂಪತಿಗಳು ಅಲ್ಲಿಂದ ಹೊರಟು ಹೋದರು.

ರತ್ನ ನಿದ್ರೆ ಗುಳಿಗೆಗಳನ್ನು ಯಾಕೆ ತೆಗೆದುಕೊಂಡಳೆಂದು ಮಾತ್ರ ಊಹಿಸಲಾಗಲಿಲ್ಲ. ಈಗಲೇ ಕೇಳಿದರೆ ಅವಳ ಮನಸ್ಸಿಗೆ ನೋವಾದೀತೆಂದು ಸುಮ್ಮನಾದ. ಒಮ್ಮೊಮ್ಮೆ

ತಾನು ಕೇಳಬಾರದು, ಅವಳೇ ಹೇಳಿಯಾಳು ಎನಿಸುತ್ತಿತ್ತು. ಕಾರಣ ತಿಳಿಯುವವರೆಗೂ ವಾಸುವಿನ ಮನಸ್ಸಿಗೆ ಸಮಾಧಾನವಿರಲಿಲ್ಲ. ಆದರೆ ಕೇಳುವುದಕ್ಕೆ ಅವಕಾಶವಿಲ್ಲದೆ ಮನಸ್ಸನ್ನು ಅದುಮಿಟ್ಟುಕೊಂಡ.

* * *

ಮನೋಹರ ರತ್ನಳನ್ನು ಪುಸಲಾಯಿಸಲು ಬಣ್ಣ ಬಣ್ಣದ ಮಾತುಗಳನ್ನಾಡಿದನೇ ಹೊರತಾಗಿ ಅವನಲ್ಲಿ ಧೈರ್ಯವಿರಲಿಲ್ಲ. ರತ್ನ ಮದುವೆಯಾಗಲೇಬೇಕೆಂದು ಹಟಹಿಡಿದಾಗ ಮನೋಹರನಿಗೆ ಭಯವಾಯಿತು. ಹೇಗಾದರೂ ಈ ಅನಿಷ್ಟದಿಂದ ಪಾರಾದರೆ ಸಾಕೆಂದು ಯೋಚಿಸಿದ. ವಾಸುವಿಗೆ ಬೇರೆ ತನ್ನ ಗುಟ್ಟು ಗೊತ್ತಾಗಿದೆ. ವಾಸು ತಮ್ಮಿಬ್ಬರ ಮದುವೆಗೆ ಸಹಾಯ ಮಾಡುತ್ತಾನೆಂಬುದನ್ನು ರತ್ನಳ ಬಾಯಿಂದ ಕೇಳಿ, ಇನ್ನು ಅವನು ಹಟ ಹಿಡಿದರೆ ಕಥೆ ಮುಗಿದಂತೆ ಎಂದುಕೊಂಡು ವಾಸು ತಮ್ಮಿಬ್ಬರನ್ನು ಕಂಡ ಮರು ದಿವಸ ರಾತ್ರಿ ೧೦-೦೦ ಗಂಟೆಯ ಮೇಲೆ ರತ್ನಳ ಮನೆಗೆ ಬಂದ, ಅಷ್ಟು ಹೊತ್ತಲ್ಲಿ ಮನು ಬಂದದ್ದನ್ನು ನೋಡಿ ರತ್ನಳಿಗೆ ಆಶ್ಚರ್ಯವಾಯಿತು, ಸ್ವಲ್ಪ ಮಾತನಾಡ ಬೇಕಾಗಿದೆಯೆಂದು ಹೇಳಲು, ಮನುವನ್ನು ಮೆಲ್ಲನೆ ಒಳ ಕೋಣೆಗೆ ಕರೆದೊಯ್ದಳು.

ಇದೇನು ಮನು ಇಷ್ಟು ಹೊತ್ನಲ್ಲಿ ಹೇಳ್ದೆ ಕೇಳ್ದೆ ಬಂದಿದ್ದೀರಿ? ಎಂದಳು. ಬರಬೇಕಾದ ಪರಿಸ್ಥಿತಿ ಬಂತು ಬಂದೆ. 'ನಾನು ನಿಮ್ಮನ್ನು ಒಂದು ಮಾತು ಕೇಳ್ತೀನಿ, ನೀವು ಸಂಕೋಚವಿಲ್ಲದೆ ನನಗೆ ಉತ್ತರ ಕೊಡಬೇಕು,'-ಎಂದ.

'ಇದೇನು ಬಹಳ ಒಗಟಾಗಿ ಮಾತಾಡ್ತಿದೀರಿ ಇವತ್ತು?' ಎಂದಳು.

'ಹೌದು........ನೀವು ನನ್ನನ್ನು ನಿಜವಾಗಿಯೂ ಪ್ರೀತಿಸ್ತಿದ್ದೀರಾ?'

'ಈಗ್ಯಾಕೆ ಆ ಸಂದೇಹ?'

'ದಯವಿಟ್ಟು ಹೇಳಿ. ಒತ್ತಾಯ ಪಡಿಸಿದ.'

ಹೌದು, ಹೌದು, ಹೌದು......ಇನ್ನು ನಂಬಿಕೆಯಾಗಲಿಲ್ಲವೇ?......ಸ್ವಲ್ಪ ರೋಷದಿಂದಲೇ ಹೇಳಿದಳು.

'ಹಾಗಾದರೆ ನಾನು ಹೇಳಿದ್ದೆಲ್ಲಕ್ಕೂ ಸಿದ್ಧವಾಗಿ, ನಾನು ಹೋಗೋ ಕಡೆಗೆ ನೀವು ಬರಬೇಕು.'

'ಹೂಂ!' ಎಂದಳು ಧೈರ್ಯದಿಂದ.

ಮನೂ ಒಂದಷ್ಟು ಗುಳಿಗೆಗಳನ್ನು ಅವಳ ಕೈಯೆಳೆದು ಸುರಿದ.

'ಏನಿದು?' ಅರ್ಥವಾಗದೆ ಕೇಳಿದಳು.

'ನಿದ್ರೆ ಗುಳಿಗೆಗಳು, ನನ್ನ ನಿಮ್ಮ ಮದುವೆ ಈ ಜನ್ಮದಲ್ಲಿ ಸಾಧ್ಯವಿಲ್ಲ. ನಮ್ಮ ಅಪ್ಪ ಅಮ್ಮನಿಗೆ ವಿಷಯ ತಿಳಿದಿದೆ. ನನ್ನನ್ನು ಕೇಳಿದರು. ನಾನು ಹೂಂ ಗುಟ್ಟಿ ಇದ್ದ ವಿಚಾರವನ್ನೆಲ್ಲಾ ಹೇಳಿ ವಿವರಿಸಿದೆ. ಕೇಳಲಿಲ್ಲ. ನೀನು ಮಾತು ಮೀರಿ ಮದುವೆಯಾದರೆ ನಾವಿಬ್ರೂ ಸಾಯ್ತೇವೆಂದು ನನ್ನ ತಂದೆ ತಾಯಿಗಳು ಹೆದರಿಸಿದ್ದಾರೆ. ಅದಕ್ಕೇ ಅವರು ಸಾಯೋದು ಬೇಡ, ನಾನೇ ಸಾಯೋಣಾಂತ ತೀರ್ಮಾನಿಸಿದ್ದೀನಿ–ಇದಕ್ಕೇನು ಹೇಳ್ತೀರಿ?–ಎಂದು ಪ್ರಶ್ನಿಸಿದ.

ರತ್ನಳಿಗೆ ಸಾವಿನ ಸುದ್ದಿ ನಡುಕ ಹುಟ್ಟಿಸಿತು. ವೀಣಾಳ ನೆನಪಾಯಿತು. ಮನಸ್ಸು ಹಿಂಜರಿಯಿತು. ಮನೂಗೆ ಏನು ಹೇಳಬೇಕೆಂದು ತೋಚಲಿಲ್ಲ. ಆದರೆ ಒಂದೆರಡು ಕ್ಷಣಗಳ ತರುವಾಯ, ಅವನೇನಂದು ಕೊಂಡಾನು? ತನ್ನ ಪ್ರೀತಿಯನ್ನು ಶಂಕಿಸಿಯಾನು..... ಯಾವುದೋ ಸಿನೇಮಾ ನೆನಪು...... ಪ್ರೇಯಸಿಯ ತ್ಯಾಗ. ಪ್ರಿಯ, ಪ್ರೇಯಸಿಯರಿಬ್ಬರ ಕೈ ಕೈ ಹಿಡಿದುಕೊಂಡು ಸಾಯುತ್ತಿರುವ ದೃಶ್ಯ. ತನ್ನನ್ನೂ ಮನೋಹರನನ್ನೂ ಅದೇ ಸ್ಥಿತಿಯಲ್ಲಿ ಕಲ್ಪಿಸಿಕಂಡಳು. ಅಷ್ಟರಲ್ಲಿ ಮನೂ ಎಚ್ಚರಿಸಿದ..... ಏನು ಹೇಳುತ್ತೀರಿ? ಎಂದ.

'ಮನೂ ನೀವು ಹೋದಲ್ಲಿ ನಾನು' ಎಂದಳು.

ಆ ದಿನ ರಾತ್ರಿ ಕಳೆಯಿತು ಇಬ್ಬರೂ ಸ್ವರ್ಗ ಸುಖವನ್ನು ಕಂಡರು. ಬೆಳಗಿನಜಾವ ಎದ್ದವನೇ ಮನು ಅವಳಿಗೆ ಗುಳಿಗೆಗಳನ್ನು ಕೊಟ್ಟು ನುಂಗಿಸಿದ, ನಾನು ನಿಮ್ಮ ಹಿಂದೆಯೇ ಬರುತ್ತೇನೆ ಎಂದು ಗುಳಿಗೆ ನುಂಗುವಂತೆ ನಟಿಸಿದ. ರತ್ನಳಿಗೆ ಮಂಪರು, ಏನೊಂದು ಕಾಣಿಸಲಿಲ್ಲ. ಮನೂ ನೀವೂ ಬರುತ್ತೀರಿ ತಾನೇ?

–ಎಂದು ಕೇಳಿ ಕಣ್ಣು ಮುಚ್ಚಿದಳು.

ಮೆಲ್ಲನೇ ಮನು ಅಲ್ಲಿಂದ ಜಾರಿದ.

–ಇದೆಲ್ಲವನ್ನೂ ರತ್ನ ವಾಸುವಿಗೆ ವಿವರಿಸಿದಳು. ವಾಸು ಕಟಕಟನೆ ಹಲ್ಲು ಕಡಿದ. ಅವನು ಸಿಕ್ಕರೆ ಖೂನಿ ಮಾಡುವುದಾಗಿ ಹಾರಾಡಿದ. ಆದರೆ ರತ್ನಳೇ ಆ ಸಂಗತಿಯನ್ನು ಮರೆತು ಬಿಡುವಂತೆ ಕೇಳಿಕೊಂಡಳು. ಅವಳ ಮಾತಿಗೆ ಕಟ್ಟು ಬಿದ್ದು ವಾಸು ಸುಮ್ಮನಾದ. ಮನೋಹರನೊಂದಿಗೆ ಮಾತು ಬಿಟ್ಟ.

* * *

ದೇವಮ್ಮನಿಗೆ ಒಂದೇ ಚಿಂತೆ. ವಾಸುವನ್ನು ಹೇಗೆ ರತ್ನಳ ಪಂಜಿನಿಂದ ಬಿಡಿಸುವುದು. ಮನೆಗಿಂತ ಅವನಿಗೆ ಅತ್ತಿಗೆಯ ಮನೆಯೇ ಹೆಚ್ಚಾಯಿತು. ಕೇಳಿ ನೋಡಿದಳು. ಅತ್ತು ಕೇಳಿಕೊಂಡಳು. ಏನೂ ಪ್ರಯೋಜನವಾಗಲಿಲ್ಲ. ವೀಣಾಳನ್ನು ಬೋರ್ಡಿಂಗ್ ಶಾಲೆಗೆ ಸೇರಿಸಿದ್ದ. ಅವಳ ಖರ್ಚಿನಿಂದ ಹಿಡಿದು ರತ್ನಳ ಲಿಪ್‌ಸ್ಟಿಕ್, ಪೌಡರ್ ವರೆಗೆ ವಾಸುವಿನ ಹಣವೇ ಬೇಕಾಗಿತ್ತು.

ರತ್ನಳು ಬದಲಾದಂತೆ ಕಾಣಲಿಲ್ಲ. ಬರಬರುತ್ತಾ ಬೀದಿಯೇ ರತ್ನಳನ್ನು ಥೂಕರಿಸತೊಡಗಿತ್ತು. ಅವಳ ಬಾಳುವ ಬೀದಿಯಲ್ಲಿ ಮರ್ಯಾದೆಯ ಜನ ಬಾಳಲಾಗುವುದಿಲ್ಲವೆಂದು ಗೊಣಗಿದರು. ಶ್ರೀನಿವಾಸ ಬರುತ್ತಿದ್ದ, ಹೋಗುತ್ತಿದ್ದ, ಅವನಿಗೂ ಸಂಬಂಧ ಇದ್ದೂ ಇಲ್ಲದಂತೆ ಒಮ್ಮೆ ಅನಿಸಿದರೆ ಮತ್ತೊಮ್ಮೆ ಅನ್ಯೋನ್ಯವಾಗಿದ್ದಂತೆ ಕಾಣುತ್ತಿತ್ತು. ರತ್ನ ಬುದ್ಧಿವಂತಳಾಗುತ್ತಿದ್ದಳು. ಗಂಡನನ್ನೂ ನಿಭಾಯಿಸಿಕೊಂಡು ಗಂಡಸರನ್ನೂ ನೋಡಿಕೊಳ್ಳುತ್ತಿದ್ದಳು. ಅವಳ ಆರಾಧಕರು ಹೆಚ್ಚಾದಂತೆ ಆದಾಯಕ್ಕೆ ಕೊರತೆಯಿಲ್ಲವಾಯಿತು.

ಶ್ರೀನಿವಾಸ ಮಾತ್ರ ಒಂದಿಷ್ಟೂ ಬದಲಾಗದೆ ಹಳೇ ಚಟಗಳಿಗೆ ಅಂಟಿಕೊಂಡು ತನ್ನ ಪಾಡಿಗೆ ತಾನು ಇದ್ದು ಬಿಡುತ್ತಿದ್ದ. ರತ್ನ ಶ್ರೀನಿವಾಸನ ಈ ನಿರ್ಲಿಪ್ತತೆಯನ್ನು ಚೆನ್ನಾಗಿ ಉಪಯೋಗಿಸಿಕೊಂಡಳು. ರತ್ನಳ ಷೋಕಿ, ಹೋಟೆಲು, ಸಿನಿಮಾ ತಿರುಗಾಟ ಮಿತಿಮೀರಿತು. ವಾಸು ಎಷ್ಟೋ ಸಲಬಂದು ಬಂದು ಬಾಗಿಲಿನ ಬೀಗ ನೋಡಿಕೊಂಡು ಹೋಗುತ್ತಿದ್ದ. ಇತ್ತೀಚೆಗೆ ಅಕ್ಕ ಪಕ್ಕದವರೆಲ್ಲಾ ಇವನು ಬಂದುದನ್ನು ಕದ್ದು ಕದ್ದು ನೋಡುತ್ತಿದ್ದರು. ವಾಸುವಿಗೆ ಆಗ ತನ್ನನ್ನು ನೋಡಿ ಇವರೆಲ್ಲಾ ನಗುತ್ತಿದ್ದಾರೇನೋ ಎಂಬ ಭ್ರಮೆಯುಂಟಾಯಿತು. ಯಾಕೋ ಮನಸ್ಸಿಗೆ ಸಂಕೋಚ, ಕಸಿವಿಸಿ.

ರತ್ನಳ ಕಾರುಬಾರು ಬೇಡ ಬೇಡವೆಂದರೂ ವಾಸುವಿಗೆ ಕಿವಿಗೆ ಬಂದು ಬೀಳುತ್ತಿತ್ತು. ರತ್ನಳನ್ನು ಇತ್ತೀಚೆಗೆ ಕಾಣುವುದು ಅಪರೂಪವಾದರೂ ಅವಳಿಂದ ಏನಿಲ್ಲೆಂದರೂ ವಾರಕ್ಕೆ ಮೂರು ಸಲ ಫೋನ್ ಬರುತ್ತಿತ್ತು. ಕಾಸು ಬೇಕೆನಿಸಿದಾಗ ಮರೆಯದೆ ವಾಸುವಿಗೆ ಫೋನ್ ಬರುತ್ತಿತ್ತು. ರತ್ನಳನ್ನು ನೋಡಲಾಗದೆ ನಿರಾಶನಾಗಿ ಹಿಂದಿರುಗಿದ ವಾಸುವಿಗೆ ಕಾಸು ಕೇಳಿದಾಗ, 'ಸಿಟ್ಟು ಬಂದು, ಸಾಯಲಿ ನನಗೇನು? ಈಗ ಮಾತ್ರ ನನ್ನ ನೆನಪಾಯಿತೇನೋ? ಎಂದು ಗುಡುಗುಡಿಸಿದರೂ ಮರುಕ್ಷಣವೇ ಕಾಲು ಇವಳ ಮನೆಯತ್ತ ಧಾವಿಸುತ್ತಿತ್ತು. ವಾಸು ಬಂದಾಗ ರತ್ನ ಕಾಣದ್ದಕ್ಕಾಗಿ ಏನೇನೋ ನೆಪಗಳನ್ನು ಸೃಷ್ಟಿಸಿ ನಂಬಿಸಿ ಬಿಡುತ್ತಿದ್ದಳು. ಸಿಟ್ಟೆಲ್ಲಾ ಅಲ್ಲಿಗೆ 'ಪುಸ್' ಎನ್ನುತ್ತಿತ್ತು. ಅವಳು ಕೇಳುವಷ್ಟು ಹಣವನ್ನು ತೆತ್ತು ಅವಳಿಂದ ಉಪಚಾರ ಪಡೆದು ಮುಖವರಳಿಸಿಕೊಂಡು ಬರುತ್ತಿದ್ದ ವಾಸು.

ದೇವಮ್ಮನ ಪ್ರಯತ್ನಗಳೆಲ್ಲಾ ಸೋತವು. ರತ್ನಳ ಮನೆಗೆ ಹೋಗಬೇಡವೆಂದು ಹೇಳಿದಷ್ಟೂ ವಾಸುವಿನ ಹಟ ಹೆಚ್ಚಾಗುತ್ತಿತ್ತು. ತಂಗೀ ಸಿನಿಮಾಗೆ ಕರೆದೊಯ್ಯಲು ಕೇಳಿದರೆ ಕಾಸಿಲ್ಲ; ಅಮ್ಮ ಹರಕಲು ಸೀರೆ ಉಟ್ಟಿದ್ದರೆ ನೋಡಿ ಸೀರೆ ಕೊಡಿಸಲು ಕಾಸಿಲ್ಲ. ರತ್ನಳಿಗೆ ಒಟ್ಟೊಟ್ಟಿಗೆ ನಾಲ್ಕೈದು ಸೀರೆ ಕೊಡಿಸುತ್ತಿದ್ದ. ಅವಳನ್ನು ಸಿನಿಮಾಗೆ ಕರೆದೊಯ್ಯುವುದೆಂದರೆ ವಾಸುವಿಗೆ ಸ್ವರ್ಗ ಸಿಕ್ಕಂತ ಅನುಭವ.

ದೇವಮ್ಮನಿಗೆ ದಿಢೀರೆಂದು ಯೋಚನೆಯೊಂದು ಹೊಳೆಯಿತು. ರತ್ನ ಬಹುಶಃ ತನ್ನ ಮಗನನ್ನು ವಶ ಪಡಿಸಿಕೊಳ್ಳಲು ಮಾಟ ಮಾಡಿರಬಹುದೇ ಎನಿಸಿತು. ಸರಿ

ಕೂಡಲೇ ಶಾಸ್ತ್ರ ಕೇಳಿದಳು. ಅವಳ ಊಹೆ ನಿಜವಾಗಿತ್ತು. ದೇವರು ಆ ಪೂಜಾರಪ್ಪನ ಮೈಮೇಲೆ ಬಂದು 'ಯಾರೋ ಹೆಂಗಸರು ನಿನ್ನ ಮಗನಿಗೆ ಮಾಟ ಮಾಡಿಸಿದ್ದಾರೆ- ಎಂದು ಹೇಳಿತು. ಪರಿಹಾರ ಏನೂಂತ ಕೇಳಿದಾಗ 'ಮಾರಮ್ಮನ ಗುಡಿ ಮುಂದೆ ನಲವತ್ತು ದಿನ ನಿಂಬೇಹಣ್ಣಿನ ದೀಪ ಹಚ್ಚಿಡು, ಎಲ್ಲಾ ಸರಿ ಹೋಗುತ್ತೆ' ಎಂದು ಹೇಳಿತು. ದೇವಮ್ಮ ಭಕ್ತಿಯಿಂದ ಕೈ ಜೋಡಿಸಿ ಹಾಗೇ ಮಾಡುವುದಾಗಿ ಹೇಳಿದರು. ಮನಸ್ಸಿನಲ್ಲಿ ಮಗ ದಾರಿಗೆ ಬಂದರೆ, ಅವಳ ಮನೆಗೆ ಹೋಗುವುದನ್ನು ನಿಲ್ಲಿಸಿದರೆ ಮಾರಮ್ಮನಿಗೆ ಸೀರೆ ಉಡಿಸುವುದಾಗಿ ಹರಕೆ ಹೊತ್ತಳು. ಅವಳ ಮುಗ್ಧ ನಂಬಿಕೆಗಳೇ ಅವಳ ಬದುಕಿನ ಭರವಸೆಗಳಾಗಿದ್ದವು.

ಇಷ್ಟೆಲ್ಲಾ ಮಾಡುವಷ್ಟು ಹೊತ್ತಿಗೆ ವಾಸು ಪೂರ್ತಿ ಮುಳುಗಿ ಹೋಗಿದ್ದ. ನೂರಿನ್ನೂರು ರೂಪಾಯಿ ಮನೆಗೆ ಕೊಟ್ಟರೆ ಮಿಕ್ಕ ಹಣ ತಾನು ಪೂರ್ತಿಯಾಗಿ ರತ್ನಳ ಮನೆಗೆ ಗುತ್ತಿಗೆಯಂತೆ ಕೊಡುತ್ತಿದ್ದ.

ಶ್ರೀನಿವಾಸನಿಗೆ ಕುದುರೆ ಜೂಜಿನಲ್ಲಿ ಎರಡು ಸಾವಿರ ರೂಪಾಯಿ ಬಂತು. ಜೀವನದಲ್ಲಿ ಅಂದು ಅವನಿಗೆ ಪರ್ವದಿನವಾಗಿತ್ತು. ಅವನಿಗೆ ಅದೇನೆನಿಸಿತೋ ರತ್ನಳಲ್ಲಿಗೆ ಬಂದು ಅವಳನ್ನು ಬಿಗಿಯಾಗಿ ಅಪ್ಪಿ ಮುತ್ತಿನ ಮಳೆ ಸುರಿದು ಹಣದ ಕಟ್ಟನ್ನವನು ಅವಳ ಮುಂದೆಸೆದ. ರತ್ನಳ ಕಣ್ಣರಳಿತು. ದೃಷ್ಟಿ ಮಿಂಚಿತು. 'ಇದೆಲ್ಲಾ ಏನು' ಎಂದು ಕೇಳಿದ್ದಕ್ಕೆ, ರತ್ನ ಇದೆಲ್ಲಾ ನಿಂಗೇ ಕಣೆ, ನನ್ನನ್ನು ನೀನು ಜೀವನದಲ್ಲಿ ನಿಷ್ಪ್ರಯೋಜಕ ಅಂತ ತೀರ್ಮಾನಿಸಿ ಬಿಟ್ಟಿದ್ದಿ, ನೋಡಿದೆಯಾ ಈಗ? – ಎಂದ ಹಂಗಿಸುವ ದಾಟಿಯಲ್ಲಿ.

ರತ್ನ ಮರು ಮಾತಾಡದೆ ಮೆಲ್ಲಗೊಂದು ಮುತ್ತು ಒತ್ತಿದಳು. ಶ್ರೀನಿವಾಸನ ಬಾಯಿ ಕಟ್ಟಿತು. ಹದಿನೈದು ದಿನ ಹಬ್ಬ ಮಾಡಿದರು. ಗೆಳೆಯರನ್ನು ಕರೆದು ಪಾರ್ಟಿ ಕೊಡಿಸಿದರು. ಸಿನೀಮಾ, ಹೋಟೆಲ್, ಕ್ಲಬ್ಬುಗಳನ್ನು ತಿರುಗಿದರು. ವಾಸು ಆ ಅವಧಿಯಲ್ಲಿ ಹೆಚ್ಚಾಗಿ ಇಲ್ಲೇ ಉಳಿದ. ದೇವಮ್ಮನ ಚಿಂತೆ ಇಮ್ಮಡಿಸಿತು. ಅವನನ್ನು ಹುಡುಕಿಕೊಂಡು ಅನಿವಾರ್ಯವಾಗಿ ಇವಳ ಹೊಸ್ತಿಲು ತುಳಿಯಬೇಕಾಯಿತು. ವಾಸುವಿಗೆ ತೀರಾ ಅವಮಾನವಾದಂತಾಯಿತು. ತಾಯಿಯನ್ನು ಬೈದ. ದೇವಮ್ಮ ರತ್ನಳನ್ನು ತನ್ನ ಮಗನನ್ನು ಬಿಟ್ಟುಕೊಡಲು ಕೇಳಿಕೊಂಡಳು. 'ನಿಮ್ಮ ಮಗನನ್ನು ನಾನೇನೂ ಕಟ್ಟಿಕೊಂಡಿಲ್ಲ. ಧಾರಾಳವಾಗಿ ಕರ್ಕೊಂಡು ಹೋಗಿ' ಎಂದು ನಕ್ಕಳು. ದೇವಮ್ಮನ ಮೈ ಉರಿಯಿತು. 'ಊರಲ್ಲಿ ನೆಮ್ಮದಿಯಾಗಿದ್ದ ನಮ್ಮನ್ನು ಇದಕ್ಕೇನಾ ವಾಸು ನೀನು ಕರೆಸಿದ್ದು'–ಎಂದು ಅಳುತ್ತಾ ವಾಸುವನ್ನು ಕೇಳಿದರೆ ನೀನು ಇಲ್ಲಿಂದ ಹೋಗಮ್ಮ ಸುಮ್ಮನೆ ರಾದ್ಧಾಂತ ಮಾಡಿ ಮನಸುಗಳ್ನ ಕೆಡಿಸ್ತೀಯಾ' ಎಂದ ನಿಷ್ಠೂರವಾಗಿ. ದೇವಮ್ಮ ಒತ್ತಿ ಬಂದ ದುಃಖವನ್ನು ನುಂಗಿಕೊಂಡು ಮರು ಮಾತಾಡದೆ ಅಲ್ಲಿಂದ ಹೊರಟು ಬಂದರು.

ವಾಸು ತಾಯಿಯನ್ನು ಬೈಯ್ಯುವಾಗ ಬೈದುಬಿಟ್ಟ. ಆದರೆ ನಂತರ ಅವನಿಗೇ ಅಯ್ಯೋ ಪಾಪವೆನಿಸಿತು. ತನ್ನ ವರ್ತನೆಗೆ ತಾನೇ ನಾಚಿದ. ತಾಯಿ ಯಾಕೆ ನಾನಿಲ್ಲಿಗೆ ಬರುವುದನ್ನು ಒಪ್ಪುವುದಿಲ್ಲ? ಇವಳು ತಿಳಿದಷ್ಟು ಕೆಟ್ಟವಳೇ ಅತ್ತಿಗೆ? – ಎಂದು ಯೋಚಿಸಿದ. ತಾಯಿಯೊಬ್ಬರೇ ಅಲ್ಲ. ತುಂಬಾ ಜನ ತನ್ನ ಅತ್ತಿಗೆಯ ವಿಚಾರವಾಗಿ ಲಘುವಾಗಿ ಮಾತಾಡಿಕೊಳ್ತಾರೆ. ತಾನೂ ಪ್ರತ್ಯಕ್ಷವಾಗಿ ಒಮ್ಮೆ ನೋಡಿಲ್ಲವೇ? ಎಂದು ಯೋಚಿಸಿದ. ಆದರೆ ಮನುಷ್ಯ ಒಂದು ಸಲ ತಪ್ಪು ಮಾಡಿದ ಮಾತ್ರಕ್ಕೆ ಪೂರ್ತಿಯಾಗಿ ಕೆಟ್ಟವರೂಂತ ಪಟ್ಟ ಕಟ್ಟುವುದು ಅಪರಾಧವಲ್ಲವೇ? ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿಯೇ ಅಲ್ಲವೇ ಮನುವಿನ ಸಹವಾಸ ಬಯಸಿದ್ದು – ಎಂದು ತಾನೇ ಸಮರ್ಥಿಸಿಕೊಂಡ.

ರತ್ನಳ ವಿಚಾರವಾಗಿ ಅಷ್ಟು ಸುಲಭವಾಗಿ ವಾಸುವಿನ ಮನಸ್ಸಿಗೆ ಕೆಟ್ಟ ಅಭಿಪ್ರಾಯ ಮೂಡುವುದು ಸಾಧ್ಯವಿರಲಿಲ್ಲ. ಅವನಿಗೆ ಅವಳ ಸ್ವಾರ್ಥ, ವಿಶೃಂಖಲ ಬದುಕು ಅರ್ಥವಾಗುವವರೆಗೂ ಯಾರು ಹೇಳಿದರೂ ಪ್ರಯೋಜನವಿರಲಿಲ್ಲ.

* * *

ದೇವಮ್ಮನಿಗೆ ವಿಪರೀತ ಜ್ವರ. ರಾತ್ರಿಯೆಲ್ಲಾ ಏನೇನೋ ಬಡ ಬಡಿಸುತ್ತಿದ್ದಳು. ಲಕ್ಷ್ಮಿಗೆ ಕೈಕಾಲು ಆಡಲಿಲ್ಲ. ಇದ್ದಕ್ಕಿದ್ದಂತೆ ಹೀಗೆ ತಾಯಿ ಹಾಸಿಗೆ ಹಿಡಿಯಲು ಲಕ್ಷ್ಮಿಗೆ ದಿಕ್ಕೇ ತೋಚಲಿಲ್ಲ. ಒಂದೇ ಸಮನೆ ಕುಳಿತು ಅತ್ತಳು. ವಾಸುವು ಡಾಕ್ಟರನ್ನು ಕರೆತಂದ. ಅವರೇನೋ ಭಯವಿಲ್ಲ, ಚೇತರಿಸಿಕೊಳ್ಳುತ್ತಾರೆಂದು ಹೇಳಿ ಔಷಧ ಬರೆದುಕೊಟ್ಟು ಸೂಜಿಯನ್ನು ಹಾಕಿ ಹೋದರು. ಆದರೆ ಸ್ವಲ್ಪವೂ ಜ್ವರ ಕಡಿಮೆಯಾದಂತೆನಿಸಲಿಲ್ಲ. ನಿಜವಾಗಿಯೂ ವಾಸುವಿಗೆ ಗಾಭರಿಯಾಯಿತು. ಲಕ್ಷ್ಮಿ ಅಳುವುದನ್ನು ನೋಡಿದಾಗ ಮತ್ತೂ ಕರುಳು ಇರಿದಂತಾಯಿತು. ಲಕ್ಷ್ಮಿ ಒಂದು ದಿನ ವಾಸುವನ್ನು ಪಕ್ಕಕ್ಕೆ ಕರೆದು ಅಳುತ್ತಲೇ ಕೈ ಹಿಡಿದುಕೊಂಡು ಕೇಳಿದಳು. ಅಣ್ಣ ದಯವಿಟ್ಟು ನೀನು ಅವಳ ಮನೆಗೆ ಹೋಗ ಬೇಡಣ್ಣ. ಅಮ್ಮನಿಗೆ ಅದೇ ಆಲೋಚನೆಯಾಗಿ ಬಿಟ್ಟಿದೆ. ದಿನಾ ನನ್ನ ಬಳಿ ಹೇಳಿಕೊಂಡು ಅಳುತ್ತಾರೆ. ಅದೇ ಯೋಚನೆಯಲ್ಲೇ ಅಮ್ಮನಿಗೆ ಖಾಯಿಲೆಯಾಗಿ ಬಿಟ್ಟಿದೆ. ಇದೇ ಚಿಂತೆಯಲ್ಲಿ ಅಮ್ಮನಿಗೆ ಏನಾದರೂ ಆಗಿ ಬಿಟ್ಟರೆ ನಮ್ಮ ಗತಿಯೇನು? ನೀನು ಯಾಕಣ್ಣಾ ಅವಳ ಮನೆಗೆ ಹೋಗ್ತಿ? – ಎಂದು ಒಂದೇ ಸಮನೆ ಪ್ರಶ್ನಿಸಿದಳು.

ಇದೇ ಮೊದಲ ಬಾರಿ ಲಕ್ಷ್ಮಿ ಧೈರ್ಯದಿಂದ ವಾಸುವಿಗೆ ಜೊತೆ ಮಾತನಾಡಿದ್ದು. ಅವಳು ಕೇಳಿದ ಪ್ರಶ್ನೆ ಅವನ ಎದೆಯನ್ನು ಹಿಡಿದು ಜಗ್ಗಿದಂತಾಯಿತು. ಹೌದು, ತಾನೇಕೆ ಅವಳ ಮನೆಗೆ ಹೋಗುವುದು? – ಚಿಂತಿಸಿದ. ಲಕ್ಷ್ಮಿಯ ಪ್ರಶ್ನೆ ಅವನಂತರಾಳದಲ್ಲಿ ಪ್ರತಿಧ್ವನಿಸಿತು. ತಂಗಿಯನ್ನೊಮ್ಮೆ ನೋಡಿದ. ಅತ್ತು ಅತ್ತು ಬಾತ ಕಣ್ಣುಗಳು! ಹಿಂಡು ಜೇನು ಹುಳುಗಳು ಕಡಿದಂತಾಯಿತು!

'ನಾನೇನು ಮಾಡಲಿ ಲಕ್ಷ್ಮಿ? ಮನಸ್ಸೆಷ್ಟು ಬಿಗಿ ಹಿಡಿದರೂ ತಾನಾಗಿ ಅಲ್ಲಿಗೆ ನಡೆಯುತ್ತದೆ. ನನಗೆ ಗೊತ್ತು ನಿಮಗೆಷ್ಟು ನೋವಾಗಿದೆ ಇದರಿಂದ ಎಂದು. ಅಮ್ಮನ ಹೃದಯಕ್ಕಾದ ಆಘಾತಕ್ಕೂ ನಾನೇ ಕಾರಣ. ಏನು ಮಾಡಲಿ? ಒಂದೂ ಅರ್ಥವಾಗುವುದಿಲ್ಲ. ತಲೆ ದಿಮ್ಮೆನ್ನುತ್ತದೆ. ನನ್ನ ಮನಸ್ಸಿನ ದೌರ್ಬಲ್ಯವೇ ನನಗೆ ಶತ್ರುವಾಗಿದೆ. ನನ್ನಿಂದಾಗಿ ನೀವೂ ಅನುಭವಿಸಬೇಕಾದ ಕರ್ಮ ಬಂದಿದೆ' ಎಂದ.

ಸ್ವಲ್ಪ ದಿನದ ಮಟ್ಟಿಗಾದರೂ ನೀನು ತಡೆಯಲೇ ಬೇಕು. ಅಮ್ಮನಿಗೆ ವಾಸಿ ಆದ ಮೇಲೆ ನಿನ್ನಿಷ್ಟ ಎಂದಳು ನಿರಾಸೆಯಿಂದ. ಆದರೆ ಅವಳ ಆ ಮಾತಿನಲ್ಲಿ ಚುಚ್ಚುವ ಮೊನಚು ಕಂಡ.

'ಆಗಲಿ ಲಕ್ಷ್ಮಿ, ಆದಷ್ಟೂ ಪ್ರಯತ್ನಿಸ್ತೇನೆ'. ನನಗೇನೂ ನಿಮ್ಮನ್ನು ಬೇಸರಗೊಳಿಸಿ ಅಲ್ಲಿಗೆ ಹೋಗೋ ಇಚ್ಛೆಯಿಲ್ಲ'–ಎಂದ.

ಆ ಕ್ಷಣದಿಂದ ವಾಸು ಮನಸ್ಸನ್ನು ಬಿಗಿ ಹಿಡಿದ. ಅವಳ ಮನೆಗೆ ಹೋಗಲೇ ಬೇಕೆನಿಸಿದಾಗ ಸಿನಿಮಾಗೆ ಹೋಗುತ್ತಿದ್ದ. ಪ್ರತಿ ಸಲವೂ ನಾನೇಕೆ ಇಷ್ಟು ದುರ್ಬಲನಾಗುತ್ತಿದ್ದೇನೆ–ಎಂದು ಪ್ರಶ್ನಿಸಿಕೊಳ್ಳುತ್ತಿದ್ದರೂ ಸಮಾಧಾನ ಮಾತ್ರ ಸಿಕ್ಕದೇ ಹೋಯಿತು.

ದೇವಮ್ಮ ಹಾಸಿಗೆ ಹಿಡಿದು ಸರಿಯಾಗಿ ಹದಿನೈದು ದಿನವಾಗಿತ್ತು. ಈಗ ಸ್ವಲ್ಪ ಚೇತರಿಸಿಕೊಂಡಿದ್ರು, ವಾಸು ಆಫೀಸಿನಿಂದ ಮರಳಿದರೆ ಮನೆ ಬಿಟ್ಟು ಕದಲುತ್ತಿರಲಿಲ್ಲ. ದೇವಮ್ಮನಿಗೆ ಇದರಿಂದಾದ ಸಮಾಧಾನವೇ ಅವಳು ಚೇತರಿಸಿಕೊಳ್ಳಲು ಸಹಕರಿಸಿತು.

ಹದಿನೈದು ಇಪ್ಪತ್ತು ದಿನಗಳಿಂದ ವಾಸುವಿನ ಸುಳಿವೇ ಇಲ್ಲದಾದಾಗ ರತ್ನ ಚಡಪಡಿಸಿದಳು. ಅವನ ಮನೆಗೇ ಹೋಗೋಣವೆನಿಸಿದರೂ ಧೈರ್ಯ ಸಾಲದಾಯಿತು. ಶ್ರೀನಿವಾಸನನ್ನು ಮನೆಯ ಬಳಿಗೆ ಕಳಿಸಿದ್ದಳು. ಆದರೆ ದೇವಮ್ಮ ಛೀಮಾರಿ ಹಾಕಿ ಹಿಂದಕ್ಕೆ ಅಟ್ಟಿದ್ದಳು. ರತ್ನ ಆಫೀಸಿಗೇ ಫೋನ್ ಮಾಡಿದಳು. ವಾಸು ಧುಮುಗುಟ್ಟಿದ. ಆಫೀಸಿನಲ್ಲಿ ಈಗಾಗಲೇ ವಾಸುವನ್ನು ಕಂಡರೆ ಎಲ್ಲರಿಗೂ ತಮಾಷೆಯಾಗಿತ್ತು. ವಾಸುವಿನ ಗೆಳೆಯರಿಗೆ ರತ್ನಳ ಪರಿಚಯ .ಒಂದಲ್ಲ ಒಂದು ಸಲ ಆಗ್ತಿತ್ತು. ಅವರೆಲ್ಲಾ ಅವಳ ವಿಚಾರವಾಗಿ ಏನೇನೋ ಪುಕಾರು ಹುಟ್ಟಿಸಿದರು. ವಾಸು ಬಂದರೆ ಮುಸಿಮುಸಿ ನಗುತ್ತಿದ್ದರು. ಫೋನಿನ ಗಂಟೆ ಕೇಳಿಸಿದರೆ ಇವರು ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದರು. ವಾಸುವಿಗೆ ಕ್ರಮೇಣ ಪರಿಸ್ಥಿತಿಯ ಅರಿವಾಯಿತು. ತನ್ನ ವಿಚಾರವಾಗಿ ಆಫೀಸಿನ ಜನಕ್ಕೆ ಮೂಡಿರುವ ಅಭಿಪ್ರಾಯ ಏನೆಂದು ತಿಳಿಯಲು ಕಷ್ಟವಾಗಲಿಲ್ಲ. ಮೊನ್ನೆ ಬಾಲು 'ಏನು ವಾಸು ನಿಮ್ಮ ಅತ್ತಿಗೆಗೆ ಗಿರಾಕಿ ಹೆಚ್ಚಾಗಿದೆಯಂತೆ, ನಮಗೂ ಒಂದು ಸಲ ಇಂಟ್ರೊಡ್ಯೂಸ್ ಮಾಡಿಕೊಡು'–ಎಂದ ಹಲ್ಲು ಕಿರಿಯುತ್ತ, 'ಫಳ್' ಎಂದು ಕಪಾಳಕ್ಕೆ ಹೊಡೆಯಬೇಕೆನಿಸಿತು. ಆದರೆ ಬೀದೀಲಿ ನಡೆಯುತ್ತಿದ್ದುದರಿಂದ ಹಲ್ಲು ಕಡಿದು 'ಬಾಲೂ' ಎಂದು ಅಬ್ಬರಿಸಿದ, ಬಾಲೂ ಹೆದರಲಿಲ್ಲ. ಬದಲಿಗೆ, ವಾಸುವಿಗೆ

'ಶಾಂತವಾದರೆ ನಿನಗೇ ಗೊತ್ತಾಗುತ್ತೆ ನನ್ನ ಮಾತಲ್ಲಿ ತಪ್ಪಿಲ್ಲ ಅಂತ'–ಎಂದು ನಗುತ್ತಲೇ ನುಡಿದ.

ಇಡೀದಿನ ಬಾಲುವಿನ ಮಾತು ವಾಸುವಿನ ಮನಸ್ಸನ್ನು ಕದಡಿತು. ರೋಷ ಹೆಚ್ಚಿ ಮೈ ಬೆಚ್ಚಗಾದಂತಾಯಿತು. ಆದರೆ ಮರುದಿನ ಸಿನಿಮಾಗೆ ಹೋದಾಗ, ರತ್ನಳನ್ನು ಯಾರೋ ಗಂಡಸರ ಜೊತೆ ನೋಡಿದ. ಕತ್ತಲಲ್ಲಿ ಮೊದಲು ಕಾಣಲಿಲ್ಲವಾದರೂ ಮಧ್ಯೆ ಮಧ್ಯೆ ಹೊಡೆದು ಕೇಳುತ್ತಿದ್ದ ನಗುವಿನ ದನಿ 'ಅತ್ತಿಗೆಯದಂತೆ ಇದೆಯಲ್ಲ, ಎಂದು ಕೊಳ್ಳುವಂತೆ ಇದ್ದರೂ, ಛೇ ಇರಲಾರದು ಎಂದು ಸುಮ್ಮನಾದ. ಮಧ್ಯಂತರದಲ್ಲಿ ಇಬ್ಬರೂ ಎದ್ದು ಹೊರಗೆ ಹೋದಾಗ ವಾಸು ಗಮನಿಸಿದ. ಆದರೆ ಅವರಿಗೆ ತಾನು ಮಾತ್ರ ಕಾಣಲಿಲ್ಲ. ವಾಸುವಿಗೆ ಬೇಸರವಾಯಿತು. ಒಂದು ಕ್ಷಣವೂ ಅಲ್ಲಿರುವ ಮನಸ್ಸಾಗಲಿಲ್ಲ. ತಾನು ಎದ್ದು ಮನೆಗೆ ಹಿಂದಿರುಗಿದ.

ರಾತ್ರಿಯೆಲ್ಲಾ ಹೊರಳಾಡಿದ. ನಿದ್ದೆ ಹತ್ತಲಿಲ್ಲ. ಛೇ ಛೆ! ಈಕೆ ಇಂಥಾ ಕುಲಟೆಯೇ? ಇಂಥವಳನ್ನು ಪೋಷಿಸುವುದಕ್ಕೆ ನಾನು ನನ್ನವರನ್ನು ವಂಚಿಸಿದೆನೇ? ಒಂದು ಸಂಸಾರವನ್ನು ಉದ್ಧಾರ ಮಾಡುವ ಭರದಲ್ಲಿ ನನ್ನ ಸಂಸಾರವನ್ನೇ ಹಾಳು ಮಾಡಿಕೊಳ್ಳುತ್ತಿದ್ದೆನಲ್ಲ, ದುಷ್ಟ ಗಂಡನಿಂದ ನೋಯುವುದನ್ನು ಕಂಡು ಕರಗಿದೆನಲ್ಲ? ಇದೆಲ್ಲ ಅವಳಾಡಿದ ನಾಟಕವೇ? ನನ್ನ ಬಗ್ಗೆ ಎಷ್ಟರ ಮಟ್ಟಿಗೆ ಪ್ರೀತಿ ವಾತ್ಸಲ್ಯವಿದ್ದೀತು? ನನ್ನ ಬಗ್ಗೆ ಅವಳು ತೋರಿದ ಪ್ರೀತಿ ವಾತ್ಸಲ್ಯಗಳು ಕೇವಲ ಸ್ವಾರ್ಥದ್ದೇ? ಅವಳ ಸಲುಗೆಯನ್ನು ನಾನೇ ತಪ್ಪಾಗಿ ಗ್ರಹಿಸಿರಬೇಕು. ಅವಳಾಡುವ ಮಾತುಗಳನ್ನು ಬುದ್ಧಿವಾದದ ನೆಲೆಯಿಂದ ಅಳೆದೆ. 'ವಾಸು ಖಂಡಿತ ನೀನು ಮದುವೆಯಾಗಬೇಡ, ಮದುವೆಯಲ್ಲಿ ಸುಖವಿಲ್ಲ' ಎಂದದ್ದರಲ್ಲಿ ಏನರ್ಥವಿದ್ದೀತು?.....ಛೀ! ಛಿ, ಪತಿತಳಾಗುವುದಕ್ಕೂ ಒಂದು ಮಿತಿಯಿಲ್ಲವೇ? ಆಫೀಸಿನಲ್ಲಿ, ಬೀದಿಯಲ್ಲಿ ನನಗಾಗುವ ಅವಮಾನವನ್ನು ನೆನೆಸಿಕೊಂಡರೆ, ನೇಣು ಹಾಕಿಕೊಂಡು ಸಾಯಬೇಕೆನಿಸುತ್ತದೆ..... ಇನ್ನವಳ ಮನೆಯ ಕಡೆ ನೋಡಲೇಬಾರದು ಎಂದು ಮನಸ್ಸು ಗಟ್ಟಿ ಮಾಡಿಕೊಂಡ. ಬಿಗಿಯಾಗಿ ರೆಪ್ಪೆ ಮುಚ್ಚಿ ಬಲವಂತವಾಗಿ ನಿದ್ದೆ ಮಾಡಲು ಪ್ರಯತ್ನಿಸಿದ.

* * *

ಆಫೀಸಿನಿಂದ ವಾಸು ದಣಿದು ಬಂದ. ದೇವಮ್ಮ ತುಂಬಾ ಉತ್ಸಾಹದಲ್ಲಿದ್ದರು. ಮಗನಿಗೆ ತಾನು ಕೇಳಿದ ಸುದ್ದಿ ಹೇಳಬೇಕೆಂದಿದ್ದರು. ವಾಸು ಬರುವುದನ್ನೇ ಕಾಯುತ್ತಿದ್ದು ಬಂದ ಕೂಡಲೇ ಹೇಳಿದರು. 'ಕೇಳಿದೆಯಾ ವಾಸು ನಿಮ್ಮತ್ತಿಗೆಯ ಸುದ್ದೀನ?' ಉತ್ಸಾಹ ವ್ಯಂಗ್ಯದ ದನಿಯಲ್ಲಿ ಹೇಳಿದರು. ವಾಸುಮೊದಲೇ ದಣಿದಿದ್ದ. ಚಿಟಗುಟ್ಟುವ ಮನಸ್ಸು, 'ವಿಷಯ ಏನೂಂತ ಮೊದಲು ಹೇಳಮ್ಮ'– ಅಸಮಾಧಾನದಿಂದ ನುಡಿದ.

'ಬೀದಿ ಜನವೆಲ್ಲಾ ಸೇರಿ ನಿಮ್ಮ ಅತ್ತಿಗೆಗೆ ಛೀಮಾರಿ ಹಾಕಿ, ಹೊಡೆದು, ಇನ್ನೊಂದು ವಾರದಲ್ಲಿ ಮನೆ ಖಾಲಿ ಮಾಡಿ ಆ ಬೀದಿ ಬಿಟ್ಟು ಓಡದಿದ್ದರೆ, ಪೋಲಿಸಿಗೆ ದೂರು

ಕೊಡುವುದಾಗಿ ಬೆದರಿಸಿದ್ದಾರೆ! ನಮ್ಮ ಪರಿಚಯದ ಶ್ಯಾಮಲಮ್ಮ ಬೆಳಗ್ಗೆ ಬಂದಾಗ ಹೇಳಿದರು. ನಿನ್ನನ್ನ ಆ ಕಡೆ ಬರದ ಹಾಗೆ ನೋಡಿಕೋಂತ್ಲೊ ಎಚ್ಚರಿಸಿದ್ದಾರೆ ಎಂದರು.

"ಹೂಂ! ಎಂದು ನಿಟ್ಟುಸಿರು ಬಿಟ್ಟು, ಅವರವರ ಕರ್ಮ' ಎಂದು ಗೊಣಗುಟ್ಟಿದ. 'ನೀನೆಷ್ಟು ಒಳ್ಳೇ ಕೆಲ್ಸ ಮಾಡಿದೆ ವಾಸು. ನಾನು ಮತ್ತೊಮ್ಮೆ ನಿನ್ನನ್ನು ಹೆತ್ತಂತೆ ಎನಿಸಿತು. ಎಲ್ಲಾ ಆ ದೇವರ ಕೃಪೆ ಇಲ್ಲಾಂದ್ರೆ ಆ ಮಾಟಗಾತಿಯ ಕೈಯಲ್ಲಿ ಸಿಕ್ಕಿ ನಾಶವಾಗಬೇಕಿತ್ತು' ಎಂದರು.

ವಾಸು ರತ್ನಳ ಮನೆಗೆ ಹೋಗುವುದನ್ನೇನೋ ನಿಲ್ಲಿಸಿದ್ದ. ಆದರೆ ಬೇಗನೆ ಆಕೆಯನ್ನು ಮರೆಯಲು ಸಾಧ್ಯವಾಗಲಿಲ್ಲ. ಅವಳ ಕಬಂಧ, ಬಂಧದ ಗುರುತುಗಳೂ ಇನ್ನೂ ಹಸಿಯಾಗಿಯೇ ಉಳಿದಿದ್ದವು. ಹೋಗಿ ಒಮ್ಮೆ ಉಗಿದು ಬರೋಣವೇ ಎಂದು ಆಗಾಗ ಅನಿಸಿದರೂ, ಅವಳ ಮುಂದೆ ತನ್ನ ಸೋಲಿನ ಭೀತಿ ಅವನ ಅನಿಸಿಕೆಯನ್ನು ಉರುಳಿಸುತ್ತಿತ್ತು. ಈಗಲೂ ಒಮ್ಮೊಮ್ಮೆ ಅವಳ ಹಸ್ತ ಸ್ಪರ್ಶದ ನೆನಪು ನೂರಾರು ಭಾವ ತರಂಗಗಳನ್ನು ಎಬ್ಬಿಸುತ್ತಿತ್ತು. ಮಿಂಚುನಗೆಯ ಆಕರ್ಷಕ ಮುಖ ಮೃದುವಾಗಿ ಎದೆಯನ್ನು ತಟ್ಟುತ್ತಿತ್ತು. ತನ್ನ ಪ್ರೀತಿಯ ತಿಳಿನೀಲಿ ನೈಲಾನ್ ಸೀರೆಯಲ್ಲಿ ಜಡೆಯ ಪಕ್ಕಕ್ಕೆ ಮುಡಿದ ಕೆಂಗುಲಾಬಿಯಲ್ಲಿ, ಉದ್ದನೆಯ ಕೆಂಪು ತಿಲಕದಲ್ಲಿ, ಮತ್ತೇರಿದ ರಂಗು ತುಟಿಗಳಲ್ಲಿ ನಿಂತ ನೋಟದ ಸ್ಮೃತಿ, ಹುಚ್ಚೆಬ್ಬಿಸುತ್ತಿತ್ತು. ಅದನ್ನೆಲ್ಲಾ ಮೆಚ್ಚುತ್ತಿದ್ದ ತನ್ನ ಭಾವನೆಗಳ ಆಳದ ಅರ್ಥವೇನೆಂದು ತಿಳಿಯಲಾಗದ ಅಸಂಬದ್ಧತೆಯಲ್ಲಿ ಮೇಣದಂತೆ ಅವಳಿಗಾಗಿ ಕರಗಿ ಹೋಗುತ್ತಿದ್ದ. ಅವಳನ್ನು ನೋಡಿದರೆ ನಿಷ್ಠೂರವಾಗಿ ನಿಲ್ಲುವ, ನುಡಿಯುವ ಭರವಸೆ ಕುಂಟುವಂತಿತ್ತು. ಅದಕ್ಕೇ ಅವಳನ್ನು ನೋಡಲೇಬಾರದೆಂದು ತೀರ್ಮಾನಿಸಿದ.

* * *

ಮೊಟ್ಟಮೊದಲಿಗೆ ರತ್ನಳಿಗೆ ಜೀವನದ ಬಗ್ಗೆ ಬೇಸರ ಬಂದಿತ್ತು. ತನ್ನ ಸುಖಲೋಲುಪತೆಯ ಭೀಕರತೆಯ ಪರಿಣಾಮ ಪ್ರತ್ಯಕ್ಷವಾಗಿ ಕಾಣುತ್ತಿದ್ದಳು. ಬದುಕು ಸಿನಿಮಾದಂತೆ ಎಂದು ಭಾವಿಸಿ, ಅಲ್ಲಿನದನ್ನು ಅನುಕರಿಸತೊಡಗಿದ್ದಳು. ಬಯಸಿದ್ದನ್ನು ಪಡೆಯುವುದಕ್ಕೆ ನೋಡಿದಳೇ ಹೊರತಾಗಿ, ಹಿಂದು ಮುಂದುಗಳ ಪರಿವೆ ಮರೆತಳು. ಗಂಡ ಕೊಟ್ಟ ಸಲುಗೆಯ ದುರುಪಯೋಗವಾಗಿತ್ತು. ತನ್ನ ತೀರದ ಬಯಕೆಗಳ ತೃಪ್ತಿಯಲ್ಲಿ ತುಟಿಸುಟ್ಟುಕೊಂಡಳು. ಹಾರುವ ಹವಣಿಕೆಯಲ್ಲಿ ರೆಕ್ಕೆ ಸುಟ್ಟುಕೊಂಡಳು. ಈಗ ತಲೆಯೆತ್ತಿ ಬಾಳುವುದಕ್ಕೂ ಇಲ್ಲದೆ ಹೋಯಿತು. ತನ್ನನ್ನು ಬಯಸಿ ಬರುತ್ತಿದ್ದವರಾರೂ ಹೆಸರು ಕೆಟ್ಟ ಮೇಲೆ ಹತ್ತಿರ ಸುಳಿಯಲಿಲ್ಲ. ಕೊನೆಗೆ ಗಂಡ ಅಂತ ಅನ್ನಿಸಿಕೊಂಡವನೂ ಇದ್ದ ಕೆಲಸವನ್ನೂ ಮತ್ತೆ ಕಳೆದುಕೊಂಡು ಕೆಲಸ ಹುಡುಕುವ ನೆಪದಲ್ಲಿ ಊರುಬಿಟ್ಟ,

ರತ್ನಳಿಗೆ ಪ್ರಪಂಚ ಭಯಂಕರವೆನಿಸಿತು. ಅರಳಿ ನಗುತ್ತಿದ್ದ ವಸಂತ ಸುಡು ಬಿಸಿಲಿನಲ್ಲಿ ರಸಬತ್ತಿಸಿಕೊಂಡಂತೆ ಕಂಡ. ನೆತ್ತಿಯ ಮೇಲೆ ಕೆಂಡದ ಕಿರೀಟ. ಯಾರೂ ಸಹಕರಿಸುವಂತಿಲ್ಲ. ಬೀದಿಗೆ ಬೀದಿಯೇ ಎದುರು ಬಿದ್ದಿದೆ. ನಗುವ ಬೀದಿಯೇ ಎದುರುಬಿದ್ದಿದೆ. ನಗುವ ತುಟಿಯ ರಂಗು ಹಾರಿತು. ಮಿಣುಕುವ ಕಣ್ಣ ಬೆಳಕು ಸತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಜೀವನದಲ್ಲಿ ಉಲ್ಲಾಸದ ಸೆಲೆಬತ್ತಿತ್ತು. ನಡುಕ ಹುಟ್ಟಿತು. ಎಷ್ಟೋ ದಿನಗಳಿಂದ ಖಾಯಿಲೆ ಬಿದ್ದು ಎದ್ದವರ ನಿಶ್ಶಕ್ತಿಯ ಅನುಭವವಾಯಿತು. ಚೀರಿಡುವಂತಾಯಿತು. ಈ ಅಸಹಾಯಕತೆಯಲ್ಲಿ ನನಗ್ಯಾರು ಎಂದು ಚೀರಿಟ್ಟು ಪ್ರಶ್ನಿಸಿಕೊಂಡಾಗ ಆಸೆಯ ಮಿಂಚಾಗಿ 'ವಾಸು' ನೆನಪಾದ. ಸ್ವಲ್ಪ ಸಮಾಧಾನವಾಯಿತು.

ಅವನಿಗಾಗಿ ಕಾದಳು. ಆಫೀಸಿಗೆ ಫೋನ್ ಮಾಡಿದಳು. ಬಸ್ಸಿಗೆ ಹೋಗುವ ದಾರಿಯಲ್ಲಿ ಅಡ್ಡಾದಳು. ವಾಸು ಕಾಣಲಿಲ್ಲ. ಈ ಹಾಳು ಮುಖದಿಂದ ವಾಸುವಿನ ತಾಯಿಯನ್ನು ಎದುರಿಸುವ ಮನಸ್ಸಾಗಲಿಲ್ಲ.

ನಿರಾಸೆಯ ನಿಟ್ಟುಸಿರಿಂದ ಹಿಂತಿರುಗಿದಳು.

* * *

ಬೆಳಗಾಗುತ್ತಿದ್ದಂತೆ ವಾಸು ದಿಗ್ಗನೆದ್ದು ಮುಖ ತೊಳೆಯದೆ, ತಾಯಿಗೂ ಹೇಳದೆ ಯಾವುದೋ ಭೀತಿಯ ಕಲ್ಪನೆಯ ಭೂತ ಹಿಡಿದವನಂತೆ, ದೇವಮ್ಮ 'ವಾಸು ವಾಸು' ಎಂದು ಕೂಗುತ್ತಿದ್ದರೂ ಲಕ್ಷ್ಯವಿಲ್ಲದೆ ನಡೆದ. ಬಸ್ಸಿಗಾಗಿ ಕಾಯಲಿಲ್ಲ. ಎದುರಿಗೆ ಬಂದ ಆಟೋ ಹತ್ತಿ ರತ್ನಳ ಮನೆಯತ್ತ ನಡೆದ. ಅವಳ ಮನೆ ಪ್ರವೇಶಿಸುವುದಕ್ಕೂ, ನಾಲ್ಕು ಜನ ಅವಳ ಹೆಣವನ್ನು ತರುವುದಕ್ಕೂ ಸರಿಹೋಯಿತು.

ದಿಗ್ಭ್ರಾಂತಿಯಿಂದ ನಿಂತುಬಿಟ್ಟ.

ಬರಬರುತ್ತಾ ಗುಂಪು ದೊಡ್ಡದಾಯಿತು, ಗುಜು ಗುಜು ಪ್ರಾರಂಭವಾಯಿತು.

ರತ್ನಳ ಮೇಲಿನ ಸೇಡು ತೀರಿದಂತಿತ್ತು. ಅಯ್ಯೋಪಾಪ! ಎಂಬ ಮಾತುಗಳು ಜನರ ನಡುವೆಯಿಂದ ಕೇಳಿ ಬಂತು. ತಪ್ಪಿದ ಹೆಜ್ಜೆಗಳು ಎಳೆದೊಯ್ಯುವ ನೆಲೆಯ ಭೀಕರತೆಯ ಅರಿವಾಗಿ ತಲೆಸುತ್ತಿ ಬೀಳುವಂತಾಯಿತು. ಯೋಚಿಸಿದಷ್ಟೂ–ಜೀವನದಲ್ಲಿ ದಿಕ್ಕು ತಪ್ಪಿಸುವ ಹಾದಿಗಳೇ ಹೆಚ್ಚು. ಆರಿಸಿಕೊಂಡು ಹೆಜ್ಜೆಯಿಡಬೇಕಾದಲ್ಲಿ, ಬದುಕಿನ ಭವಿಷ್ಯವನ್ನೇ ಅವಲಂಬಿಸಿರುವುದರಿಂದ ನಮ್ಮನ್ನೊಯ್ಯುವ ಸರಿಯಾದ ಹಾದಿ ಯಾವುದೆಂದು ಅರಿಯುವುದರಲ್ಲಿ ಬಹಳ ವಿವೇಕ ಬೇಕಾಗುತ್ತದೆ. ಒಮ್ಮೆ ತಪ್ಪು ಮಾಡಿ, ತಪ್ಪು ದಾರಿ ಹಿಡಿದಾಗ ನೆಲೆ ಅರಿಯುವ ಮುನ್ನವೇ ದಾರಿತಪ್ಪೆಂದು ತಿಳಿದುಕೊಂಡರೂ ಮತ್ತೆ ಮರಳಿ ಬರುವುದಕ್ಕೆ ಆಗದಷ್ಟು ದೂರ ಹೋಗಿದ್ದರೆ, ಅಂಕು ಡೊಂಕು ಕವಲು ಕವಲಾದ ಬಳಸಾದ ಹಾದಿಗಳಲ್ಲೇ ಮುಂದುವರೆದು, ಇನ್ನೂ ನೆಲೆಯವರೆಗೂ ನಡೆಯುವ ತ್ರಾಣವಿಲ್ಲದೆ ಹಾದಿಯ ಅರ್ಧದಲ್ಲೇ ಸೋಲನ್ನು

ಒಪ್ಪಿಕೊಂಡು ಕುಸಿಯ ಬೇಕಾಗುವ ಸನ್ನಿವೇಶವೇ ಇದೆಂದು ಮನವರಿಕೆಯಾಗತೊಡಗಿತು. ಮನಸ್ಸು ಭಾವುಕತೆಯಿಂದ ತುಂಬಿಹೋಯಿತು. ಅಲ್ಲಿ ನಿಲ್ಲಲಾಗಲಿಲ್ಲ. ಯಾರಾದರೂ ತನ್ನನ್ನು ಗಮನಿಸುವುದಕ್ಕೆ ಮೊದಲೇ ಹೋಗುವುದು ವಾಸಿಯೆನಿಸಿ ಮೆಲ್ಲನೆ ಗುಂಪಿನಿಂದ ಕಳಚಿಕೊಂಡು ನುಣುಚಿಕೊಂಡ.

ಹಿಂಡಿದಾಗ ಕಣ್ಣಲ್ಲಿ ಎರಡು ಹನಿ ಮಾತ್ರ ಉದುರಿದವು. ಆದರೆ ಅವುಗಳಲ್ಲಿ ನೂರೆಂಟು ಅರ್ಥಗಳು ಕರಗಿದ್ದವು.

ಮನೆ ತುಂಬಾ ಗದ್ದಲ. ಇಷ್ಟು ದೊಡ್ಡ ಕುಟುಂಬದಲ್ಲಿ ಪಾರ್ವತಿಗೆ ಈ ದಿನ ಮುಖ್ಯವಾದ ಸ್ಥಾನ. ಮದುವೆಯಾಗಿ ಐದು ವರ್ಷಗಳಾಗಿವೆ. ಈಗ ಪಾರ್ವತಿಗೆ ಚೊಚ್ಚಲ ಸಂಭ್ರಮ. ಮನೆಗೆ ಒಂದು ಕೂಸು ಬರುತ್ತಿದೆಯೆನ್ನುವುದೇ ಎಲ್ಲರ ಹಿಗ್ಗು. ಪಾರ್ವತಿಯ ತಂದೆ ತಾಯಿಯರಿಗಂತು ಸ್ವರ್ಗ ಮೂರೇ ಗೇಣು ಎನ್ನುವಂತಾಗಿದೆ. ಮೊಮ್ಮಗನನ್ನು ಎಷ್ಟು ನೋಡಿದರೂ ತೃಪ್ತಿಯಿಲ್ಲ.

ಮಗುವಿಗೆ ತೊಟ್ಟಿಲು ತೂಗುತ್ತಾರೆ. ರಾಜಪ್ಪ, ಸೀತಮ್ಮ ಊರಿಗೆ ಊರನ್ನೇ ಕರೆದಿದ್ದಾರೆ. ಮಗುವಿಗೆ ಜರತಾರಿ ಜುಬ್ಬ, ಮಕಮಲ್ಲಿನ ಟೋಪಿ ಹಾಕಿ, ಒಂದೆರಡು ಚಿನ್ನದ ಸರಗಳನ್ನು ಹಾಕಿ ಕಣ್ಣಿಗೆ ಕಾಡಿಗೆ, ಹಣೆಗೆ ಬೊಟ್ಟು, ಕೆನ್ನೆಯ ಮೇಲೆ ದೃಷ್ಟಿ ಚುಕ್ಕೆ ಇಟ್ಟು, ಸಿಂಗರಿಸಿ ಮಗುವನ್ನು ತಂದು ತೊಟ್ಟಿಲಲ್ಲಿ ಮಲಗಿಸಿ ತೂಗಿದರು. ತೊಟ್ಟಿಲು ತೂಗುವ ಶಾಸ್ತ್ರ ಮುಗಿದ ಮೇಲೆ ಬಂದವರೆಲ್ಲ ಮಗುವಿಗೆ ಮುಂಯ್ಯನ್ನು ಸಲ್ಲಿಸಿ ಹರಸುತ್ತಿದ್ದಾರೆ. ಮುತ್ತೈದೆಯರೆಲ್ಲಾ ಅರಿಶಿನ ಕುಂಕುಮ ತೆಗೆದುಕೊಂಡು ಹೋದ ಮೇಲೆ, ರಾಜಪ್ಪ ತೊಟ್ಟಿಲ ಬಳಿಗೆ ಬಂದು ಮಗುವನ್ನು

ಒಮ್ಮೆ ಬಗ್ಗಿನೋಡಿದ. ಮಗು ಕೈಕಾಲು ಬಡಿಯುತ್ತಾ ಕಿಲಕಿಲ ನಗುತ್ತಾ ಇರುವುದನ್ನು ಕಂಡು ರಾಜಪ್ಪನಿಗೆ ಸಂತೋಷ ತಡೆಯಲಾಗಲಿಲ್ಲ. ಹೆಂಡತಿಯನ್ನು ಕರೆದು ಮಗುವಿನ ಆಟವನ್ನು ತೋರಿದರು. ಪಾರ್ವತಿಯನ್ನು ನೋಡಿ, ಯಾಕಮ್ಮ ಅಳಿಯಂದಿರಿಗೆ ನಾಚಿಕೆ ಬಂದಂತಿದೆ. ಮಗುವನ್ನು ಬಂದು ನೋಡಲೇ ಇಲ್ಲವಲ್ಲ – ಎಂದರು ನಗುತ್ತಾ. ಪಾರ್ವತಿಗೆ ನಿಜವಾಗಿ ನಾಚಿಕೆಯಾಯಿತು. ಆದರೆ ತೋರಿಸಿಕೊಳ್ಳಲಿಲ್ಲ. ಹೋಗಪ್ಪ! ಅವರೇನು ನಾಚಿಕೊಂಡಿಲ್ಲ. ಇಷ್ಟು ಹೊತ್ತೂ ಇಲ್ಲಿ ಹೆಂಗಸರೆಲ್ಲಾ ಇದ್ದರಲ್ಲ, ಅದಕ್ಕೇ ಒಳಗೆ ಬರಲಿಲ್ಲ. ಈಗ ಬಂದು ನೋಡ್ತಾರೆ ಬಿಡು – ಎಂದಳು.

ಮಗಳನ್ನು ಸ್ವಲ್ಪ ಕೆಣಕಬೇಕೆಂದುಕೊಂಡರು. ಪಾರ್ವತಿ, ನೋಡಿಲ್ಲಿ, ನಿನ್ನ ಮಗನ ರೂಪಾ ಎಲ್ಲಾ ಅಪ್ಪನ ಹಾಗೆ ಇದೆ. ನಿನ್ನ ಹೋಲಿಕೆ ಒಂದಿಷ್ಟೂ ಇಲ್ಲ– ಎಂದರು.

ಹೋಗಲಿ ಬಿಡಪ್ಪ. ಯಾರ ಹಾಗಿದ್ದರೂ ಆಯಿತು. ಎಲ್ಲಿ ಹೋದರೂ ಅಪ್ಪನ ಹೆಸರು ಹೇಳಿಕೋತಾರೆಯೇ ಹೊರತು ಅಮ್ಮನ ಹೆಸರು ಹೇಳೋಲ್ಲವಲ್ಲ. ಹೇಗಾದರೂ ಇರಲಿ ನನ್ನ ಮಗ ಚೆನ್ನಾಗಿ ಆರೋಗ್ಯವಾಗಿ ಬೆಳೆದು ದೊಡ್ಡವನಾಗಿ ಬುದ್ಧಿವಂತಾಂತ ಅನ್ನಿಸಿಕೊಂಡರೆ ಸಾಕು. ಇನ್ನೇನೂ ಅವರಿಂದ ಅಪೇಕ್ಷಿಸಬೇಕಾದ್ದಿಲ್ಲ–ಎಂದಳು ಗಂಭೀರವಾಗಿ.

ರಾಜಪ್ಪ ಬೆರಗಾದರೂ ಎಷ್ಟು ಬೇಗನೆ ಈ ಪಾರ್ವತಿ ದೊಡ್ಡವಳಾಗಿ ಬಿಟ್ಟಿದ್ದಾಳೆ. ಹತ್ತಿಪ್ಪತ್ತು ಮಕ್ಕಳನ್ನು ಹೊತ್ತು ಹೆತ್ತು ಸಾಕಿದವಳಂತೆ ಮಾತಾಡುತ್ತಾಳೆ. ಮಕ್ಕಳ ಭವಿಷ್ಯದ ಕಾಳಜಿ ಈಗಲೇ ಇವಳ ತಲೆ ಹೊಕ್ಕಂತಿದೆ!–ಎಂದು ಆಲೋಚಿಸಿದರು.

ಪರವಾಗಿಲ್ಲ ಪಾರ್ವತಿ. ತುಂಬಾ ಮುಂದಾಲೋಚನೆ ಮಾಡ್ತಿದ್ದೀಯ. ದೇವರು ನಿನಗೆ ಕೀರ್ತಿವಂತ ಮಕ್ಕಳನ್ನೇ ಕೊಡಲಿ–ಎಂದು ತುಂಬು ಮನಸ್ಸಿನಿಂದ ಹರಸಿದರು.

ರಾಜಪ್ಪನ ಮಡದಿ ಪ್ರವೇಶಿಸಿ, ಹೊತ್ತಾಯಿತೆಂದು ಎಚ್ಚರಿಸಿದರು. ತೊಟ್ಟಿಲೊಳಗೆ ಬಗ್ಗಿ ಮಗುವನ್ನು ಕೈಗೆತ್ತಿಕೊಂಡು ಮುತ್ತಿಟ್ಟು, ಪಾರ್ವತಿಯ ಕೈಗೆ ಕೊಟ್ಟು ಹೇಳಿದಳು– ನೀನು ಮಗುವಿಗೆ ಹಾಲುಣಿಸಿ ಮಲಗಿಸಿ ಬಿಡು. ನಾನು ಇವರಿಗೆಲ್ಲಾ ಊಟವಿಟ್ಟು ಬಂದು ಮಗುವಿಗೆ ದೃಷ್ಟಿತೆಗೀತೇನೆ, ಯಾರ ಕಣ್ಣು ಹೇಗಿರುತ್ತೋ ಏನೋ?–ತಾಯಿಯ ಹೃದಯ ಸುಮ್ಮನಿರಲಾರದೆ ಹೇಳಿದಳು. ಪಾರ್ವತಿ ತಾಯಿಯ ಕೈಯಿಂದ ಮಗುವನ್ನಿಸಿಕೊಂಡು ಒಳಕೋಣೆಗೆ ನಡೆದಳು.

ರಾತ್ರಿ ಹತ್ತು ಗಂಟೆಯಾದರೂ ರಾಜಪ್ಪ ಅಳಿಯನೊಂದಿಗೆ ಮಾತಾಡುವುದರಲ್ಲಿ ಮೈಮರೆತಿದ್ದ. ಊಟಕ್ಕೆ ಕರೆದದ್ದೂ ಕೇಳಿಸಲಿಲ್ಲ. ಒಳಗಿನಿಂದಲೇ ಪಾರ್ವತಿ ಅಪ್ಪನನ್ನು ಊಟಕ್ಕೆ ಎಚ್ಚರಿಸಿದಳು.

ಇನ್ನು ಬೆಳಿಗ್ಗೆ ಬೇಗ ಎದ್ದು ಮಗಳನ್ನು ಅತ್ತೆಯ ಮನೆಗೆ ಕಳುಹಿಸಬೇಕಿತ್ತು. ಬೆಳಗಿನಿಂದ ದುಡಿದೂ ದುಡಿದೂ ಮೈಸೋತಿದೆ. ಊಟದ ಕೆಲಸ ಮನೆಗೆಲಸ ಮುಗಿದರೆ ಒಂದರೆಗಳಿಗೆ ಮಲಗುವುದಕ್ಕೆ ಸಾಧ್ಯವಾಗುತ್ತೇನೋ ಎನ್ನಿಸುತ್ತಿತ್ತು. ಪದೇ ಪದೇ ಕರೆದ ಮೇಲೆ ಮಾವ, ಅಳಿಯ ಊಟಕ್ಕೆದ್ದರು.

* * *

ಮಾರನೆಯ ದಿನ ನಸುಕಿನಲ್ಲಿಯೇ ಪಾರ್ವತಿಯ ತಾಯಿ ಎದ್ದು, ನೀರೊಲೆಗೆ ಉರಿ ಹಾಕಿ ಚೆನ್ನಾಗಿ ನೀರು ಕಾಯಿಸಿದರು. ಮಗಳಿಗೆ ಅಭ್ಯಂಗನ ಸ್ನಾನ ಮಾಡಿಸಿದರು. ತಾವೂ ಸ್ನಾನ ಮಾಡಿ ಬೇಗ ಬೇಗನೆ ಎರಡು ಮೂರು ಬಗೆಯ ತಿಂಡಿಗಳನ್ನು ಸಿದ್ಧಪಡಿಸಿದರು. ಅಳಿಯಂದಿರಿಗೂ ಎದ್ದು ಸ್ನಾನ ಮಾಡಿ ಒಂದೆರಡು ಗಂಟೆಗಳಲ್ಲಿ ಮುಸ್ತಾಬುಗೊಂಡು ಬಂದರು. ಪಾರ್ವತಿಗೆ ಬಿಸಿ ಬಿಸಿ ಹಾಲನ್ನು ಕೊಟ್ಟರು ತಾಯಿ. ಅಳಿಯಂದಿರಿಗೆ ತಿಂಡಿ ಕಾಫಿಗಳಾದವು. ಮಗುವನ್ನು ರೆಡಿ ಮಾಡಿದರು. ಬೇಗ ಬೇಗನೆ ಕಾರ್ಯಕ್ರಮಗಳನ್ನು ಮುಗಿಸಿ ಇನ್ನೇನು ಹೊರಡಬೇಕೆನ್ನುವಾಗ ಸಿದ್ದ ಎತ್ತಿನ ಗಾಡಿ ತಂದ. ರಾತ್ರಿಯೇ ರಾಜಪ್ಪ ಹೇಳಿ ಕಳುಹಿಸಿದ್ದರು. ಒಂದೆರಡು ಕಿಲೋ ಮೀಟರ್ ದೂರದಲ್ಲಿ ಬಸ್‌ಸ್ಟಾಪಿತ್ತು. ರಾಜಪ್ಪ, ಅಳಿಯ ಚಂದ್ರಣ್ಣ, ಪಾರ್ವತಿ, ಮಗು–ಇಷ್ಟು ಜನ ಹೊರಟು ನಿಂತರು. ಒಬ್ಬೊಬ್ಬರಾಗಿ ಗಾಡಿ ಹತ್ತಿದ ಮೇಲೆ, ರಾಜಪ್ಪ, ಅವರನ್ನು ಬಸ್ ಹತ್ತಿಸಿ ಬರುವುದಾಗಿ ಹೇಳಿದ. ಪಾರ್ವತಿ ತಾಯಿ ತಂದೆಯವರ ಕಾಲಿಗೆ ನಮಸ್ಕರಿಸಿದಳು. 'ಹೋಗಿ ಬರುತ್ತೇನಮ್ಮ' ಎಂದಳು ಕಣ್ಣು ತುಂಬಿಕೊಂಡು. ತಾಯಿಗೆ ಎಷ್ಟು ತಡೆದರೂ ದುಃಖ ನಿಲ್ಲಿಸಲಾಗಲಿಲ್ಲ. ಮಗಳನ್ನು ಕಳುಹಿಸಿಕೊಡುವಾಗ ಕಂಬನಿ ಒತ್ತರಿಸಿ ಬಂತು. 'ಹೋಗಿ ಬರುತೀಯಾಮ್ಮ?... ಎಚ್ಚರಿಕೆ. ಮಗುವನ್ನು ಚೆನ್ನಾಗಿ ನೋಡಿಕೋ. ಹೊತ್ತೊತ್ತಿಗೆ ಹಾಲುಕೊಡು. ಬೆಚ್ಚಗೆ ಏನಾದರೂ ಅವನಿಗೆ ತೊಡಿಸಿರು. ಮಗುವನ್ನು ಸ್ವಲ್ಪವೂ ನಿರ್ಲಕ್ಷಿಸಬೇಡ–ಎಂದು ಪದೇ ಪದೇ ಹೇಳಿದರು. ಎಲ್ಲಕ್ಕೂ ಪಾರ್ವತಿ ತಲೆ ತೂಗಿದಳು. ಗಾಡಿ ಹೊರಟಿತು. ತಾಯಿ ಮಕ್ಕಳಿಬ್ಬರೂ ಕಣ್ಮರೆಯಾಗುವವರೆಗೂ ಪರಸ್ಪರ ನೋಡಿಕೊಳ್ಳುತ್ತಲೇ ಇದ್ದರು. ಗಾಡಿ ಹೊರಟ ಶಬ್ದ ಕೇಳಿಸುತ್ತಾ ಹೋಯಿತು. ಪಾರ್ವತಿಯ ತಾಯಿಗೆ ಮನೆಯೆಲ್ಲ ಭಣಭಣ ಎನಿಸಿತು. ಈಗೊಂದು ಮೂರು ನಾಲ್ಕು ತಿಂಗಳುಗಳಿಂದಲೂ ಮನೆ ಗಲಭೆಯಿಂದ ತುಂಬಿತ್ತು. ಪಾರ್ವತಿಯ ಗಡಿಬಿಡಿಯ ಓಡಾಟ. ಅದಾದ ನಂತರ ಮಗುವಿನ ಅಳು... ನಗು... ಹೇಳುವುದಕ್ಕಾಗದಷ್ಟು ಸಂಭ್ರಮಗಳಿಂದ ತುಂಬಿತ್ತು. ಕೈ ತುಂಬಾ ಬಿಡುವಿಲ್ಲದಷ್ಟು ಕೆಲಸ. ಬಾಣಂತಿ ಸೇವೆ–ಮಗುವಿನ ಸೇವೆ ಹೊತ್ತು ಹೋಗುವುದೆ ಗೊತ್ತಾಗುತ್ತಿರಲಿಲ್ಲ.

ಬೆಳಕಾಗಿತ್ತು. ತಿಂಡಿಯ ಆತುರವೂ ಇಲ್ಲ. ಎಲ್ಲ ಮೊದಲೇ ಸಿದ್ಧವಾಗಿದೆ. ಗಂಡ ಬಂದ ಮೇಲೆ ಇನ್ನು ಅವರ ಸ್ನಾನಪಾನ. ಅಲ್ಲಿಯವರೆಗೆ ಒಂದಿಷ್ಟು ತಂಬಿಗೆ

ನೀರನ್ನಾದರೂ ಸೇದಿ ಹಾಕೋಣವೆನಿಸಿತು. ಸರಿ ಬಿಂದಿಗೆ ಹಿಡಿದು ಹಿತ್ತಲು ಮನೆಗೆ ನಡೆದರು. ನೀರು ಸೇದುವಾಗಲೂ ಅವಳಿಗೆ ಮಗಳ ಮತ್ತು ಮಗುವಿನ ಚಿಂತೆ ಬೆಂಬಿಡದೆ ಕಾಡುತ್ತಿತ್ತು. ಅತ್ತೆ ಮಾವ ಇದ್ದಾರೆ. ಆದರೂ ವಯಸ್ಸಾಗಿರುವ ಅವರು ಇವರನ್ನೇನು ತಾನೇ ನೋಡಿಕೊಂಡಾರು? ನಾಟಿ ವೈದ್ಯವನ್ನೇನೋ ಅಲ್ಪಸ್ವಲ್ಪ ಮಗುವಿಗಾಗಿ, ಪಾರ್ವತಿಗೆ ಹೇಳಿಕೊಟ್ಟಿದ್ದಳು. ಪಾರ್ವತಿ ಅಷ್ಟು ನಿರ್ಲಕ್ಷ್ಯದವಳೇನೂ ಅಲ್ಲ. ಆದರೆ ತಾಯಿ ಹೃದಯವಾದ್ದರಿಂದ ಅವಳ ಹೃದಯ ಕಾತರಿಸುತ್ತಿತ್ತು.

ವಿಶ್ವ ಮನೆಮಂದಿಗೆಲ್ಲ ಮುದ್ದು. ಸಾವಿತ್ರಮ್ಮನ ಹೆಮ್ಮೆ ಹೇಳತೀರದು. ಮೊಮ್ಮಗನನ್ನು ಎಷ್ಟು ಮುದ್ದಾಡಿದರೂ ತೃಪ್ತಿಯಿಲ್ಲ. ಅವನ ಮನಸ್ಸಿಗೆ ಒಂದಿಷ್ಟೂ ನೋವಾಗಲೂ ಬಿಡುತ್ತಿರಲಿಲ್ಲ. ಅರವತ್ತೈದರ ಗಡಿ ದಾಟಿದರೂ ಇನ್ನು ಗಟ್ಟಿ ಮುಟ್ಟಾಗೇ ಇದ್ದರು. ಕೃಷ್ಣಪ್ಪ ಈ ಮಧ್ಯೆ ವ್ಯಸನಗಳಿಗೆ ಸಿಕ್ಕಿ ತುಂಬಾನೇ ಇಳಿದು ಹೋಗಿದ್ದರು. ಹೃದಯ ದುರ್ಬಲವಾಗಿತ್ತು. ತುಂಬಾ ದಾಂಪತ್ಯ ಇವರದು. ಹತ್ತು ಮಕ್ಕಳನ್ನು ಹೆತ್ತಿದ್ದರೂ ಉಳಿದದ್ದು ಮೂರೇ! ಒಂದು ಗಂಡು ಎರಡು ಹೆಣ್ಣು. ಹೆಣ್ಣು ಮಕ್ಕಳಿಬ್ಬರಿಗೂ ಮದುವೆಯಾಗಿತ್ತು. ಒಳ್ಳೆ ಕಡೆ ನೋಡಿ ಮದುವೆಯಾಗಿತ್ತು. ಒಳ್ಳೆ ಕಡೆ ನೋಡಿ ಮದುವೆ ಮಾಡಿದ್ದರು. ಅವರ ಚಿಂತೆಯೇನೂ ಇರಲಿಲ್ಲ. ಆದರೆ ಮಗನ ವಿಚಾರವಾಗಿ ತುಂಬಾ ಹಚ್ಚಿಕೊಂಡಿದ್ದರು. ಮದುವೆ ಬೇಡವೆಂದು ಹಟ ಹಿಡಿದಿದ್ದ ಅಮನನ್ನು ಹೇಗೋ ಕಷ್ಟಪಟ್ಟು ಒಪ್ಪಿಸಿದ್ದಾಯಿತು. ಮದುವೆಯೇನೋ ಆಯಿತು. ಆದರೆ ಮಕ್ಕಳಾಗಲಿಲ್ಲ. ಅವರ ಆತಂಕ ಹೇಳತೀರದು. ಏನೇನೋ ಪೂಜೆ, ನೇಮ, ವ್ರತ ಮಾಡಿಸಿದರು. ಮಗು ಆಗಲಾರದೆಂದೇನೂ ಅಲ್ಲ. ಒಂದು ವರ್ಷದೊಳಗೆ ಆಗಲಿಲ್ಲವೆಂದೇ ಆತಂಕಪಟ್ಟವರು, ಐದು ವರ್ಷವಾದರೂ ಆಗದಿದ್ದಾಗ ನಿಜವಾಗಿ ಪೆದರಿದರು. ಪಟ್ಟಣಕ್ಕೆ ಕರೆದೊಯ್ದು ತೋರಿಸಬೇಕೆನ್ನುವ ಆಲೋಚನೆಯಲ್ಲಿರುವಾಗ, ಸಂಭ್ರಮದ ಸುದ್ದಿ ಕಿವಿಗೆ ಬಿತ್ತು. ಪಾರ್ವತಿಗೆ ತಿಂಗಳ ಮೇಲೆ ಹದಿನೈದು ದಿನವಾಗಿತ್ತು. ದೇವರು ಈ ಮುದುಕರ ಪ್ರಾರ್ಥನೆ ಕೇಳಿದನೆನಿಸುತ್ತೆ, ಅಂತೂ ಪಾರ್ವತಿ ಗರ್ಭಧರಿಸಿದಳು.

ನೆಲ ಸೋಕದಂತೆ ಸೊಸೆಯನ್ನು ಮುದ್ದಿನಿಂದ ಆದರಿಸಿ, ಆರೈಕೆ ಮಾಡಿದರು. ಒಂದು ಪವಾಡವನ್ನೇ ನಿರೀಕ್ಷಿಸುವಂತೆ ಮಗುವಿಗಾಗಿ ಎದುರು ನೋಡಿದರು. ದಿನಗಳ ಮೇಲೆ ದಿನಗಳು ಉರುಳಿದವು. ಪಾರ್ವತಿಗೆ ತನ್ನ ಅದೃಷ್ಟ ತುಂಬಾ ದೊಡ್ಡದೆನಿಸಿತು. ಹಿರಿಯರು ತನಗಾಗಿ ಕಷ್ಟ ಪಡುತ್ತಾ ಇರುವುದನ್ನು ನೋಡಿ ಅವರಿಂದ ಸೇವೆ ಮಾಡಿಸಿಕೊಳ್ಳುವುದಕ್ಕೆ ಸಂಕೋಚಪಟ್ಟಳು. ಗ್ರಾಮದ ತಾಯಿಂದಿರನ್ನೆಲ್ಲಾ ಸಾವಿತ್ರಮ್ಮ ವಿಚಾರಿಸಿದರು. ಸಾವಿತ್ರಮ್ಮನ ಸೊಸೆಯ ಸುದ್ದಿ ಊರೂರೇ ಹರಡಿತು.

ಪಾರ್ವತಿಗೆ ತಲೆ ಎತ್ತಲಾಗದಷ್ಟು ನಾಚಿಕೆ. ಹೊರಗೆ ಬಂದರೆ ಯಾರು ವಿಚಾರಿಸುತ್ತಾರೋ ಎನ್ನುವ ಭೀತಿ. ಬೆಳಕನ್ನು ಕಾಣುವುದೇ ಅವಳಿಗೆ ಅಪರೂಪವಾಯಿತು.

ಸಾವಿತ್ರಮ್ಮನಿಗೆ ಸೊಸೆಯನ್ನು ತವರಿಗೆ ಕಳುಹಿಸಲು ಇಷ್ಟವೇ ಇರಲಿಲ್ಲ. ಆದರೂ ಬಲವಂತಕ್ಕೆ ಕಟ್ಟುಬಿದ್ದು ಕಳುಹಿಸಿಕೊಟ್ಟರು. ಆದರೆ ಹೆರಿಗೆಯಾದ ಕೂಡಲೇ ಬೇಗ ಬಂದು ಬಿಡಬೇಕೆಂಬ ಷರತ್ತನ್ನು ಹಾಕಿದರು. ಕೃಷ್ಣಪ್ಪನವರೇನೂ ಅಡ್ಡಿಮಾಡಲಿಲ್ಲ. ಹೆಂಡತಿಯ ವ್ಯಾಮೋಹಕ್ಕೆ ನಕ್ಕರು. 'ಇಷ್ಟು ಮಕ್ಕಳನ್ನು ಹೆತ್ತರೂ ನಿನ್ನ ವ್ಯಾಮೋಹ ತಣಿದಿಲ್ಲ ಸಾವಿತ್ರಿ!' ಎಂದರು. ಸಾವಿತ್ರಮ್ಮನಿಗೆ ಆ ಮಾತು ಕಿವಿಗೆ ಬೀಳಲಿಲ್ಲ!

ಈಗ ಮಗುವಿನ ತಾಯಿಯಾಗಿ ಪಾರ್ವತಿ ಬಂದಿದ್ದಾಳೆ. ಅವಳಿಗೆ ಮೊದಲಿಗಿಂತ ಹೆಚ್ಚಿನ ಗೌರವ, ಮೊಮ್ಮಗನ ಜವಾಬ್ದಾರಿಯೆಲ್ಲಾ ಸಾವಿತ್ರಮ್ಮನದೇ. ಅವರು ಮಾಡುವ ಮುದ್ದಿನಿಂದ ಪಾರ್ವತಿಗೆ ಕೃತಜ್ಞತೆ, ಸಂತೋಷ ಹೃದಯ ತುಂಬಿ ಬಂದರೂ, ಇದರಿಂದ ಮಗು ಕೆಟ್ಟ ಹಾದಿಗೆ ಇಳಿದಾನೇನೋ ಎನ್ನುವ ಭೀತಿ. ಆದರೂ ಬಾಯಿ ಬಿಟ್ಟು ಹೇಳುವ ಹಾಗಿಲ್ಲ.

ಒಂದೆರಡು ವರ್ಷ ಉರುಳಿದವು. ವಿಶ್ವನಿಗೆ ಎರಡು ವರ್ಷ ತುಂಬಿದವು. ಮೂರನೇ ವರ್ಷದ ಹುಟ್ಟು ಹಬ್ಬವನ್ನು ಮಾಮೂಲಿನಂತೆ ವಿಜೃಂಭಣೆಯಿಂದ ಮಾಡಲು ನಿರ್ಧರಿಸಿದರು. ಒಂದು ಸಂಜೆ ಪಾರ್ವತಿಯನ್ನು ಕೂರಿಸಿಕೊಂಡು ಜಡೆ ಹೆಣೆಯುತ್ತಾ ಹೇಳಿದರು.

ಪಾರ್ವತಿ, ಈ ಸಲ ಹುಟ್ಟು ಹಬ್ಬಕ್ಕೆ ನಮ್ಮ ವಿಶ್ವನಿಗೆ ಏನು ಮಾಡಿಸೋಣವೇ? –ಎಂದರು. 'ಬಿಡಿ ಅತ್ತೆ, ಸುಮ್ಮನೆ ಗಂಡು ಹುಡುಗನಿಗೆ ಯಾಕೆ ಚಿನ್ನ ಪನ್ನದ ಒಡವೆ. ಏನೂ ಬೇಡ. ಒಂದು ಜೊತೆ ಅಂಗಿಗಳನ್ನು ಹೊಲಿಸಿದರಾಯಿತು. 'ಅವನಿಗೇಂತ ಏನೇ? ಈಗ ಚಿಕ್ಕವನಿರುವಾಗ ಎಲ್ಲವನ್ನೂ ಹಾಕಿರೋದು. ದೊಡ್ಡವನಾದ ಮೇಲೆ ಅವನು ಇವನ್ನೆಲ್ಲಾ ಯಾಕೆ ಹಾಕ್ತಾನೆ? ಈಗಿನ ಕಾಲದ ಹುಡುಗನಲ್ಲವೇ? ಏನೇನು ಕಲಿತು ಬರ್ತಾನೋ ಏನೋ? ಆಗ ನಾವೇನು ತಾನೆ ಅವನಿಗೆ ಹಾಕಿ ನೋಡಿ ಸಂತೋಷಪಡೋಬೇಕಾಗುತ್ತೆ? ಸುಮ್ಮನೆ ಅವನ ಹೆಸರಿಗೆ ಮಾಡಿಸೋದು. ಇನ್ನೇನು ನಿನಗೆ ಮಕ್ಕಳೇ ಆಗೊಲ್ವೆ? ಹೆಣ್ಣು ಮಕ್ಕಳಾದರೆ ಅವಕ್ಕೆ ಆಗುತ್ತವೆ, ಇವೆಲ್ಲಾ.

'ಸರಿ ಅತ್ತೆ ನಿಮ್ಮ ಮನಸ್ಸಿಗೆ ಯಾಕೆ ನೋವು? ಇಷ್ಟ ಬಂದದ್ದು ಮಾಡಿಸಿ. ಅಷ್ಟರಲ್ಲಿ ಜಡೆ ಹೆಣೆಯುವುದು ಮುಗಿದಿತ್ತು. ತಲೆ ತುಂಬಾ ಹಾಲಿನಷ್ಟು ಬೆಳ್ಳಗಿನ ದಿಂಡನ್ನು ಮುಡಿಸಿ ನೋಡಿ ಸಂತೋಷಪಟ್ಟರು. ಸೊಸೆಗೆ ದೃಷ್ಟಿಯಾದೀತೆಂದು ನೆಟಿಕೆ ಮುರಿದರು.

ವಿಶ್ವನಿಸ್ತಬ್ಧವಾಗಿ ಮಲಗಿದ್ದ. ರಾತ್ರಿಯೆಲ್ಲಾ ಎದ್ದು ಅಳುತ್ತಾನೆ. ಬೆಳಗಿಂದ ಹೀಗೆ ಮಲಗಿರುತ್ತಾನೆ. ಇತ್ತೀಚೆಗೆ ಅವನ ತುಂಟುತನ ವಿಪರೀತವಾಗಿದೆ. ಏನೊಂದು ವಸ್ತುವನ್ನೂ ಉಳಿಸುವುದಿಲ್ಲ. ಎಲ್ಲಕ್ಕೂ ಅವನು ಧ್ವಂಸಕಾರಿ. ಕ್ರಾಂತಿಕಾರಕ. ಮುರಿಯುವುದು, ಹೊಸ ಮಾದರಿಯಲ್ಲಿ ಜೋಡಿಸುವುದು. ಕಾಲು ನಡಿಗೆ ಬಂದಾಗಿನಿಂದ ಅವನ ಹಿಂಸೆ ವಿಪರೀತ. ಅವನನ್ನು ಹಿಡಿಯುವುದೇ ಕಷ್ಟ. ಸ್ನಾನಕ್ಕೆ, ಊಟಕ್ಕೆ, ಬಟ್ಟೆ ತೊಡಿಸಿಕೊಳ್ಳುವುದಕ್ಕೆ ಎಲ್ಲಕ್ಕೂ ದುಂಬಾಲು ಬೀಳಬೇಕು.

ಮೊನ್ನೆ ವಿಶ್ವನ ಚೇಷ್ಟೆ ಪ್ರಾಣಕ್ಕೆ ಬರುವಂತೆ ಮಾಡಿತ್ತು. ರಾತ್ರಿ ಮಲಗಿದ್ದು ತುಂಬಾ ಹೊತ್ತಾಗಿತ್ತು. ಬೆಳಿಗ್ಗೆ ಬೇಗ ಎಚ್ಚರಿಕೆಯಾಗಲಿಲ್ಲ. ಚಂದ್ರಣ್ಣ ಬೇಗ ಎದ್ದು ಹೊಲದ ಕಡೆ ನಡೆದಿದ್ದ. ವಿಶ್ವ ಪಕ್ಕದಲ್ಲಿಯೇ ಮಲಗಿದ್ದ. ಚಂದ್ರಣ್ಣ ಎದ್ದದ್ದನ್ನು ನೋಡಿದ. ತಿಳಿಯದಂತೆ ಅವನನ್ನು ಹಿಂಬಾಲಿಸಿದ. ಹಿತ್ತಿಲಿನಲ್ಲಿ ಚಂದ್ರಣ್ಣ ಮುಖ ಕೈ ಕಾಲು ತೊಳೆದುಕೊಂಡು ಬಂದು ಬಿಟ್ಟ. ಅಲ್ಲಿ ಹುಲ್ಲಿನ ಬಣಬೆಯೊಂದಿತ್ತು. ನಾಯಿಮರಿಯೊಂದು ಅದರ ನಡುವೆ ಬೆಚ್ಚಗೆ ಮಲಗಿತ್ತು. ಅದು ಹೇಗೋ ವಿಶ್ವನ ಕಣ್ಣಿಗೆ ಬಿತ್ತು. ಮೆಲ್ಲಗೆ ಅದರ ಬಳಿ ಸುಳಿದ. ಅದನ್ನು ಮುಟ್ಟಲು ಅದು 'ಕುಂಯ್ ಕುಂಯ್' ಎಂದು ದನಿ ಮಾಡಲು ವಿಶ್ವನಿಗೆ ಖುಷಿಯಾಯಿತು. ಅದರ ಪಕ್ಕದಲ್ಲಿ ಕೂತು ಅದರ ಬಾಲ ಹಿಡಿದುಕೊಂಡು ಆಟವಾಡತೊಡಗಿದ. ಅದೂ ಇವನೊಡನೆ ಸ್ನೇಹ ಬೆಳಸಿತು. ವಿಶ್ವನಾಗಲೀ, ನಾಯಿಮರಿಯಾಗಲೀ ನೋಡಿದವರಿಗೆ ಕಾಣುತ್ತಿರಲಿಲ್ಲ.

ಪಾರ್ವತಿಗೆ ಎಚ್ಚರವಾದಾಗ ಸಾಕಷ್ಟು ಹೊತ್ತೇರಿತ್ತು. ಸಾವಿತ್ರಮ್ಮ ಆಗಲೇ ಅಡಿಗೆಗೆ ಅಣಿ ಮಾಡುತ್ತಿದ್ದಳು; ಎದ್ದವಳೇ ವಿಶ್ವನಿಗಾಗಿ ನೋಡಿದಳು. ಪಕ್ಕದಲ್ಲಿರಲಿಲ್ಲ. ಅಜ್ಜಿಯ ಪಕ್ಕದಲ್ಲೋ ಇಲ್ಲ ತಾತನ ಪಕ್ಕದಲ್ಲೋ ಮಲಗಿರಬಹುದೆಂದುಕೊಂಡಳು. ಕೆದರಿದ ಕೂದಲನ್ನು ಸರಿಪಡಿಸಿಕೊಂಡಳು. ನೆರಿಗೆಗಳನ್ನು ಕೊಡವಿ ಸುಕ್ಕುಗಳನ್ನು ಸರಿ ಮಾಡಿಕೊಂಡು ಅಡಿಗೆ ಮನೆ ಬಾಗಿಲಿಗೆ ಬಂದು ಒಳಗ ಹೋಗದೆ, 'ಅತ್ತೆ, ವಿಶ್ವ ಇನ್ನೂ ಎದ್ದೇ ಇಲ್ವ?' ಎಂದಳು. ಅತ್ತೆಗೆ ಆಶ್ಚರ್ಯವಾಯಿತು. 'ಇದೇನು ಪಾರ್ವತಿ ನೀನು ಹೀಗೆ ಕೇಳ್ತೀ. ನಿಮ್ಮ ಹತ್ತಿರವೇ ಮಲಗಿದ್ದನಲ್ಲ. ಬೆಳಗಿಂದ ಅವನ ಸದ್ದೇ ಇಲ್ಲ. ನಿನ್ನೊಟ್ಟಿಗೇ ಅವನೂ ಮಲಗಿರಬಹುದೆಂದುಕೊಂಡೆ. ಮಾಮೂಲಾಗಿ ಐದು ಗಂಟೆಗೇ ಎದ್ದು ಬಿಡುತ್ತಿದ್ದ ವಿಶ್ವ, ನಿನ್ನ ಭಯಕ್ಕೇನಾದರೂ ಮಲಗಿರುವನೇನೋ ಎಂದುಕೊಂಡೆ ಎಂದಳು.

ಅತ್ತೆ ಮಾತು ಕೇಳಿ ಗಾಭರಿಯಾಯಿತು. ಎಲ್ಲಿ ಹೋದನೋ ಏನೋ. ಬೀದಿಗೆ ಹೊರಟಿದ್ದರೆ ದೇವರೇ ಗತಿ. ದನಕರುಗಳು, ಗಾಡಿಗಳು ಓಡಾಡುತ್ತಿರುತ್ತವೆ. ಇವನಿಗೆ ಆಟದಲ್ಲಿ ಬಿದ್ದರೆ ಒಂದೂ ತಿಳಿಯೊಲ್ಲ.. ಎದೆ ಹೊಡೆದುಕೊಳ್ಳಲಾರಂಭಿಸಿತು. 'ಇವರೆಲ್ಲಿ ಹೋದರು ಅತ್ತೆ?' ಎಂದು ಕೇಳಿದಳು. 'ಹೊಲದ ಕಡೆ ಹೋಗಿರಬೇಕು. ಮುಖ ತೊಳೆದು ಕಾಫಿ ಕುಡಿದು, ಈಗಲೇ ಬಂದು ಬಿಡ್ತೇನಂತ ಹೋದ. ಅವನು ಇಲ್ಲಿ ಕಾಫಿ ಕುಡಿಯುವಾಗಲೂ ವಿಶ್ವ ಕಾಣಿಸಲಿಲ್ಲ. ಸರಿ ಮಲಗಿರಬೇಕೆಂತಲೇ ಸುಮ್ಮನಿದ್ದೆ. 'ಹಾಗಾದರೆ ನೋಡಿ ಬರ್ತೇನೆ' ಎಂದವಳೇ ಮನೆಯ ಸಂದುಗೊಂದುಗಳನ್ನೆಲ್ಲಾ ಜಾಲಾಡಿದಳು. ಎಲ್ಲಿಯೂ ಕಾಣಲಿಲ್ಲ. ಅಕ್ಕಪಕ್ಕದವರನ್ನೆಲ್ಲಾ ವಿಚಾರಿಸಿದಳು. ಯಾರೂ ಕಾಣೆವೆಂದರು, ಹತಾಶಳಾಗಿ ಮನೆಗೆ ಹಿಂತಿರುಗಿದಳು. ಮಾವನನ್ನು ಮಾತಾಡಿಸಿದಳು. ಆ ಮುದಿಜೀವ ಚಳಿಗೆ ಸೆಡೆತುಕೊಂಡು ಅಗ್ಗಿಷ್ಟಿಕೆಯ ಮುಂದೆ ಕೈ ಕಾಯಿಸಿಕೊಳ್ಳುತ್ತಾ ಕುಳಿತಿದ್ದರು. 'ಮಾವ, ಸ್ವಲ್ಪ ಹೊಲದ ಕಡೆ ಹೋಗಿ ಅವರನ್ನ ಕರೆ ತರ್ತೀರಾ? ವಿಶ್ವ ಬೆಳಗಿನಿಂದ ಎಲ್ಲೂ ಕಾಣ್ತಾ ಇಲ್ಲ–ಎಂದಳು ಗಾಭರಿಯ ದನಿಯಲ್ಲಿ. ಸರಿಯಾಗಿ

ಕೇಳಿಸಲಿಲ್ಲ. ಕತ್ತೆತ್ತಿ ಪ್ರಶ್ನಾರ್ಥಕವಾಗಿ ನೋಡಿದರು. ಅಳು ತುಂಬಿ ಬಂದ ಧ್ವನಿಯಲ್ಲಿ ಮತ್ತೆ ಅದನ್ನೇ ಹೇಳಿದಳು. ಆಗ 'ನಿಜವೇನಮ್ಮ?.....ಎಲ್ಲಿ ಹೋಗಿರಲಿಕ್ಕೆ ಸಾಧ್ಯ. ಮನೆಯಲ್ಲೇ ಇನ್ನೊಮ್ಮೆ ಸರಿಯಾಗಿ ನೋಡು. ಮನೆ ಬಿಟ್ಟು ಹೋಗುವಷ್ಟು ಧೈರ್ಯ ಅವನಿಗೆ ಬರಲಾರದು. ಹಿತ್ತಿಲಲ್ಲಿ ಆ ಪೊದೆಗಳ ನಡುವೇನೋ, ಕೊಟ್ಟಿಗೆಯಲ್ಲೋ, ಹುಲ್ಲಿನ ರಾಶಿಯಲ್ಲೋ- ಎಲ್ಲೋ ಒಂದೆಡೆ ಇದ್ದಾನೇನೋ ನೋಡು' ಎಂದರು ಸಮಾಧಾನವಾಗಿ. ಅವಳ ಹೃದಯದಲ್ಲಿ ಭಯವಿದ್ದರೂ, ಮಾವ ಹೇಳಿದ ಈ ಜಾಗಗಳಲ್ಲಿ ಹುಡುಕುವುದನ್ನು ಮರೆತಿದ್ದಳು. ಈಗ ತನ್ನ ಬುದ್ಧಿಯನ್ನು ಬೈಯುತ್ತಾ ಹಿತ್ತಿಲೆಡೆಗೆ ನಡೆದಳು. ಗಿಡ ಪೊದೆ-ಕೊಟ್ಟಿಗೆ ಎಲ್ಲಾ ಶೋಧಿಸಿದಳು. ಹುಲ್ಲಿನ ಬಣವೆಗಳ ಮಧ್ಯೆ ಓಡಾಡಿ ಕಣ್ಣಾಡಿಸಿದಳು. ಎಲ್ಲೂ ಕಾಣಲಿಲ್ಲ. ಅಷ್ಟರಲ್ಲಿ ನಾಯಿಮರಿಯ ಕುಂಯ್, ಕುಂಯ್ ಶಬ್ದ ಕೇಳಿಸಿತು. ಪಾರ್ವತಿ ಬೆಚ್ಚಿದಳು. ಪಾರ್ವತಿಯ ಕಾಲು, ಮರಿಗೆ ತಗುಲಿತ್ತು. ಅದಕ್ಕೇ ಅದು ಕುಂಯ್‌ಗುಟ್ಟಿತ್ತು. ಸ್ವಲ್ಪ ಹುಲ್ಲನ್ನು ಸರಿಸಿ ನೋಡಿದರೆ ವಿಶ್ವಕಾಲು ಚಾಚಿ ಅವುಗಳ ಮೇಲೆ ಅಡ್ಡಲಾಗಿ ನಾಯಿ ಮರಿಯನ್ನು, ಮಲಗಿಸಿಕೊಂಡು ಬಗ್ಗಿ ಮುದ್ದಿಸುತ್ತಿದ್ದಾನೆ. ಪಾರ್ವತಿಗೆ ಒಂದು ಕಡೆ ಈ ದೃಶ್ಯ ನೋಡಿ ನಗು ಬಂದರೆ ಮತ್ತೊಂದು ಕಡೆ ಅವನು ಮಾಡಿದ ಕೆಲಸಕ್ಕೆ ಸಿಟ್ಟು ಬಂದಿತ್ತು. 'ವಿಶ್ವ' ಎಂದಳು ಗದ್ದರಿಸುವ ಧ್ವನಿಯಲ್ಲಿ. ಅಮ್ಮನ ಧ್ವನಿಯನ್ನು ಕೇಳಿದ್ದೇ ಮರಿಯನ್ನು ಬಿಸಾಡಿ ಓಡಿದ. ಪಾರ್ವತಿ ಕೈಚಾಚಿ ಹಿಡಿದಳು. ಆದರೆ ಹೇಗೋ ನುಸುಳಿಕೊಂಡು ಓಡಿದ. ಓಡಿದ ರಭಸಕ್ಕೆ ಅವನು ಬಿದ್ದಾನೆನಿಸಿ ಪಾರ್ವತಿ ಅವನನ್ನು ಅಟ್ಟಿಸಿಕೊಂಡು ಹೋಗಲಿಲ್ಲ. ಅವಳಿಗೆ ಗೊತ್ತು ಅವನು ಹೋಗುವುದು ಅಜ್ಜಿ, ಇಲ್ಲ ತಾತನ ಬಳಿಗೆ ಎಂದು. ಸಾವಿತ್ರಮ್ಮ ಅಡಿಗೆ ಕೆಲಸವನ್ನೂ ಬಿಟ್ಟು ಬರುತ್ತಿದ್ದಳು. ಆಕೆಯ ಹಿಂದೆ ಚಂದ್ರಣ್ಣ ಬಂದ. ವಿಶ್ವ ಹೋಗಿ ಅಜ್ಜಿಯನ್ನು ಅಪ್ಪಿ ಆಕೆಯ ಹಿಂದೆ ಅವಿತುಕೊಂಡ.

ಬೆಳಗಾಗೆದ್ದು ಇದೆಂತಹ ಗ್ರಹಚಾರ ಬಂತಪ್ಪ ಎಂದು ಹೆದರಿದ್ದ ಪಾರ್ವತಿಗೆ ಸಮಾಧಾನವಾಯಿತು. ಸದ್ಯ ಬದುಕಿದೆ ಎಂದುಕೊಂಡಳು. ವಿಶ್ವ ಮುಖ ಕೊಡಲೇ ಇಲ್ಲ ತಾಯಿಗೆ.

ನೆಮ್ಮದಿಯಿಂದ ಸ್ನಾನಕ್ಕೆಂದು ಹೊರಟಳು.

ಆ ದಿನದಿಂದ ವಿಶ್ವನನ್ನು ಮೈಯೆಲ್ಲಾ ಕಣ್ಣಾಗಿ ಕಾಯಬೇಕಿತ್ತು. ಯಾವುದಕ್ಕೂ ಅವನಿಗೆ ಭಯವಿಲ್ಲ. ಒಂದು ನಿಮಿಷ ಕಣ್ಮರೆಯಾದರೂ ಸಾಕು ಅಜ್ಜಿ, ಅಮ್ಮ ಗಾಭರಿಯಾಗಿ ಬಿಡುತ್ತಿದ್ದರು.

ಅವನು ಮಾಡುವ ಚೇಷ್ಟೆಗಳಿಗೂ ಕೊನೆ ಮೊದಲಿಲ್ಲ. ಅಜ್ಜಿ ಮೊಸರು ಕಡೆಯುವಾಗ ಏನಾದರೂ ಒಂದು ಕ್ಷಣ ಅದನ್ನು ಬಿಟ್ಟು ಆ ಕಡೆ ಹೋದರೆ ಸಾಕು. ಒಂದು ಹಿಡಿ ಮಣ್ಣನ್ನು ತಂದು ಅದರೊಳಗೆ ಸುರಿದು ಬಿಡುತ್ತಿದ್ದ. ತಾತನ ನಶ್ಯದ ಡಬ್ಬದ ಮುಚ್ಚಳ ತೆಗೆದು ಒಂದು ದಿನ ನಶ್ಯಾನೆಲ್ಲಾ ಪೂರ್ತಿ ಚೆಲ್ಲಿ, ಮೂಗು

ಮೂತಿಗಳಲ್ಲಿ ಮೆತ್ತಿಕೊಂಡು ಘಾಟಿನಿಂದ ಸೀನುಗಳನ್ನು ತಡೆಯಲಾರದೆ ಅಳಲು ಪ್ರಾರಂಭಿಸಿದ್ದ. ಕರುವಿನ ಕಾಲಡಿ ಹೋಗಿ ನಿಂತು ಕೈ ಚಪ್ಪಾಳೆ ಹೊಡೆದು ಕುಣಿಯುತ್ತಿದ್ದ. ಆ ಕರುವೂ ಏನೂ ಮಾಡದೆ ಅವನ ಆಟಗಳಿಗೆ ಅನುಮೋದನೆ ಕೊಡುವಂತೆ ಇದ್ದುಬಿಡುತ್ತಿತ್ತು.

ವಿಶ್ವನ ಆಟಗಳು ಸಹಿಸಲಾಗದಿರುವಂಥಾದ್ದಾದರೂ ಆ ಮನೆ ಮಂದಿಯ ಕಣ್ಮನಗಳಿಗೆ ಹಬ್ಬವಾಗಿತ್ತು. ಈ ಮನೆಯ ಕಣ್ಣ ಬೆಳಕೇ ಅವನಾಗಿದ್ದ. ಅವನಾಡುವ ಒಂದೊಂದು ಆಟವು ಮಧುರಸ್ಮೃತಿಗಳಾಗಿದ್ದವು. ನೆನೆಸಿಕೊಂಡಾಗಲೆಲ್ಲಾ ಪುಲಕಗೊಳ್ಳುತ್ತಿತ್ತು ಹೃದಯ.

ಹುಟ್ಟುಹಬ್ಬಕ್ಕೆ ಎರಡೇ ದಿನ, ಎಲ್ಲರನ್ನೂ ಕರೆಯಬೇಕೆಂದುಕೊಂಡರು. ಆ ರಾತ್ರಿಯೇ ವಿಶ್ವನಿಗೆ ಜ್ವರ ಬಂತು. ಸರಿ ಮಕ್ಕಳಿಗೆ ಜ್ವರ ಬರುವುದು, ನೆಗಡಿಯಾಗುವುದು ಎಲ್ಲ ಮಾಮೂಲೇ ಎಂದುಕೊಂಡು, ಮನೆಯ ಔಷಧಿಯನ್ನೇ ಕೊಟ್ಟರು. ಇಡೀ ರಾತ್ರಿ ಕಾದ ಕಾವಲಿಯಂತಹ ಜ್ವರ. ಒಂದಿಷ್ಟೂ ಕಡಿಮೆಯಾಗಲಿಲ್ಲ. ಜ್ವರದ ತಾಪಕ್ಕೆ ವಿಶ್ವನಿಗೆ ನಿದ್ದೆಯೇ ಬರಲಿಲ್ಲ, ಮುಲುಗುತ್ತಲೇ ಇದ್ದ. ಪಾರ್ವತಿ ಎದ್ದೇ ಇರಬೇಕಾಯಿತು. ಕಣ್ಣುಸೋತು, ನಿದ್ದೆಯಿಲ್ಲದ್ದಕ್ಕಾಗಿ ಬಾತುಕೊಂಡಂತಿದ್ದವು. ಚಂದ್ರಣ್ಣ ಹೆಂಡತಿಯ ಅವಸ್ಥೆಯನ್ನು ನೋಡಿದ. 'ಸ್ವಲ್ಪ ಹೊತ್ತು ನಾನು ವಿಶ್ವನನ್ನು ಇಟ್ಟುಕೊಂಡಿರ್ತೇನೆ, ನೀನು ಮಲಗು ಪಾರ್ವತಿ ಎಂದ. ಆದರೆ ಪಾರ್ವತಿ ಕೇಳಬೇಕಲ್ಲ? ಬೆಳಗಾದರೆ ಸಾಕು ದೇವರೇ ಎಂದು ಹಾರೈಸುತ್ತಿದ್ದಳು. ವಿಶ್ವ ನಡುಗುತ್ತಿದ್ದ. ತೇಲುಗಣ್ಣು ಹಾಕಿ ಪಾರ್ವತಿಯತ್ತ ನೋಡಿದ ಬೆಳಗಿನಿಂದ ವಿಶ್ವನ ಹೊಟ್ಟೆಗೆ ಏನೂ ಸರಿಯಾಗಿ ಬಿದ್ದಿಲ್ಲ. ಒಂದೆರಡು ಚಮಚ ಹಾಲನ್ನಾದರೂ ಕುಡಿಸೋಣವೆಂದು ಹೇಳಿದ್ದಕ್ಕೆ, ಚಂದ್ರಣ್ಣನೂ 'ಹೂಂ' ಎಂದ. ಮೆಲ್ಲನೆ ಹೊದಿಸಿದ ಕಂಬಳಿ ಸಹಿತವಾಗಿ ವಿಶ್ವನನ್ನು ಚಂದ್ರಣ್ಣನ ಮಡಿಲಲ್ಲಿ ಮಲಗಿಸಿ, ಚೊಂಬಿನಲ್ಲಿಟ್ಟಿದ್ದ ಹಾಲನ್ನು ಲೋಟಕ್ಕೆ ಬಗ್ಗಿಸಿ, ಸಕ್ಕರೆ ಬೆರಸಿ, ಕಲೆಸಿ, ಚಮಚದಿಂದ ವಿಶ್ವನಿಗೆ ಕುಡಿಸಲು ಪ್ರಯತ್ನಿಸಿದಳು. ವಿಶ್ವ ಬಾಯಿ ಬಿಡಲೊಲ್ಲ ಬಲವಂತವಾಗಿ ಬಿಡಿಸಿ ಚಮಚದ ಹಾಲನ್ನು ಕುಡಿಸಲು, ನೋವಿನಿಂದ ನರಳಿದ. ಹಾಲೆಲ್ಲಾ ಹೊರಗೇ ಬಂತು. ಪಾರ್ವತಿಯ ಕಣ್ಣು ಹನಿಸಿತು. ಚಂದ್ರಣ್ಣ ಗಮನಿಸಿದ. 'ನೀನೇ ಅತ್ತರೆ ಹೇಗೆ ಪಾರ್ವತಿ? ಮಕ್ಕಳೆಂದ ಮೇಲೆ ಕಾಯಿಲೆ ಬರದಿರುತ್ತದೆಯೇ? ಈಗ ವಿಶ್ವನಿಗೆ ಮುಳುಗಿಹೋಗುವಂಥಾದ್ದೇನೂ ಆಗಿಲ್ಲವಲ್ಲ? ಮಾಮೂಲು ಜ್ವರ ಹೋಗುತ್ತೆ, ಅದಕ್ಕಾಕೆ ಇಷ್ಟೊಂದು ಬಾಧೆ ಪಡಬೇಕು?

ಗಂಡನ ಮಾತು ಪಾರ್ವತಿಗೆ ಸಮಾಧಾನವಾಗಲಿಲ್ಲ. ಅವ್ಯಕ್ತ ಭೀತಿ ಅವಳನ್ನು ಕಾಡುತ್ತಿತ್ತು. ಹೇಳಲಾರಳು, ಹೇಳದೆ ಅನುಭವಿಸಲಾರಳು. ಆದರೂ ಹೇಳಿಕೊಳ್ಳದಿದ್ದರೆ ನೆಮ್ಮದಿ ಇರಲಾರದು. ಅದಕ್ಕೆಂದೇ,

'ನೀವೇನೋ ಧೈರ್ಯ ಹೇಳ್ತೀರಿ. ನನಗೇನೋ ಒಂದು ಥರಾ ಭಯವಾಗ್ತಾ ಇದೆ. ಕೆಟ್ಟ ಕೆಟ್ಟ ವಿಚಾರಗಳು ನನ್ನನ್ನು ಇರಿದು ತಿನ್ನುತ್ತಿವೆ. ವಿಶ್ವನಿಗೇನಾದರೂ ಆದರೆ ನಾನು ಖಂಡಿತ ಬದುಕಿರಲಾರೆ' ಎಂದು ಗೋಳೋ ಎಂದು ಅತ್ತಳು.

'ಛಿ! ಹುಚ್ಚಿ' ಇವೇನಿದು? ನಿನಗೆ ವಯಸ್ಸಾಯಿತೇ ವಿನಃ ಬುದ್ಧಿ ಮಾತ್ರ ಬರಲಿಲ್ಲ; ಕೂತು ತಲೆ ಕೆಡಿಸಿಕೊಂಡರೆ ಹಾಗೇನೇ. ಬೆಳಗಾದ ಕೂಡಲೇ ಡಾಕ್ಟರ್ ಹತ್ತಿರ ಕರದುಕೊಂಡು ಹೋಗಿ ಒಂದು ಸೂಜಿ ಕೊಡಿಸಿದರೆ ಎಲ್ಲಾ ಸರಿಹೋಗುತ್ತೆ' ಎಂದು ಧೈರ್ಯ ಹೇಳಿದ. ಆದರೆ ಮನಸ್ಸಿನಲ್ಲಿ ಅವನಿಗೂ ಭೀತಿ ಇದ್ದೇ ಇತ್ತು. ಈಗಂತೂ ವಿಶ್ವನಿಗೆ ಪ್ರಜ್ಞೆ ಇಲ್ಲದಂತಾಗಿತ್ತು.

ಸಾವಿತ್ರಮ್ಮ, ಕೃಷ್ಣಪ್ಪರಿಗೂ ನಿದ್ದೆ ಇಲ್ಲ. ಮುದಿಜೀವಗಳು. ಅವರಿಗೆ ತೊಂದರೆ ಕೊಡುವುದು ಬೇಡವೆಂದು ಚಂದ್ರಣ್ಣನೇ ಬೈದು ಮಲಗಲು ಹೇಳಿದ. ಸಾವಿತ್ರಮ್ಮ ಮೊಮ್ಮಗನನ್ನು ಬಿಟ್ಟು ಕದಲುವುದಿಲ್ಲವೆಂದು ಹಟ ಹಿಡಿದಿದ್ದಳು. ಆದರೆ ಮಗ ಗದ್ದರಿಸಿದ್ದಕ್ಕೆ ಎದ್ದು ಹೋಗಿದ್ದಳು. ವಿಶ್ವ ಒಂದರೆ ನಿಮಿಷ ಕಾಣದಿದ್ದರೆ ಚಡಪಡಿಸುತ್ತಿದ್ದಳು. ಅಂಥಾದ್ದರಲ್ಲಿ ಜ್ವರದಿಂದ ನರಳುತ್ತಿರುವ ವಿಶ್ವನ ಯೋಗಕ್ಷೇಮಕ್ಕೆ ನಿಲ್ಲುತ್ತೇನೆಂದದ್ದು ಆಶ್ಚರ್ಯವೇನೂ ಇಲ್ಲ.

ಜೀವನದಲ್ಲಿ ಎಷ್ಟೋ ವರ್ಷಗಳಿಂದ ದುಡಿದು ದುಡಿದು ಸಾಕಾಗಿದೆ. ಇನ್ನೂ ಅವರ ಕೈಯಿದ ದುಡಿಸಿಕೊಳ್ಳುವುದು ಚಂದ್ರಣ್ಣನಿಗಾಗಲೀ, ಪಾರ್ವತಿಗಾಗಲೀ ಹಿಡಿಸುತ್ತಿರಲಿಲ್ಲ. ಆದಷ್ಟೂ ತೊಂದರೆಯನ್ನು ಈ ಹಣ್ಣಾದ ಹೃದಯುಗಳಿಗೆ ಕಡಿಮೆಮಾಡಲು ಯೋಚಿಸಿದ್ದರು.

ಪಾರ್ವತಿಗೆ ಅತ್ತೆಯನ್ನು ಕರೆಯೋಣವೆನಿಸಿತು. ಎಷ್ಟಾದರೂ ಅನುಭವ ಉಳ್ಳವರು. ಈಗೊಂದಿಷ್ಟು ತೊಂದರೆಯಾದರೇನಂತೆ ಎಂದು ಯೋಚಿಸಿದಳು. ಇವಳ ಯೋಚನೆಗಿಂತ ಮೊದಲೇ ಸಾವಿತ್ರಮ್ಮ, ನಿದ್ದೆ ಹತ್ತದೇ ಹಾಸಿಗೆ ಮೇಲೆ ಹೊರಳಾಡಿ ಹೊರಳಾಡಿ ಬೇಸತ್ತು, ಕೊನೆಗೆ ಮಗ ಬೇಕಾದರೆ ಸಿಟ್ಟಾಗಲೀ, ನಾನು ಎದ್ದು ವಿಶ್ವನ ಬಳಿಗೆ ಹೋಗಿಯೇ ಹೋಗುತ್ತೇನೆಂದು ನಿರ್ಧರಿಸಿ ಬಂದಿದ್ದಳು. ಬಾಗಿಲಾಚೆಯಿಂದಲೆ ಕೇಳಿದಳು. ಪಾರ್ವತಿ, ವಿಶ್ವನಿಗೆ ಈಗ ಜ್ವರ ಹೇಗಿದೆ? ಏನಾದರೂ ಸ್ವಲ್ಪ ಕಡಿಮೆಯಾಯ್ತಾ? ಅತ್ತೆಯ ಧ್ವನಿ ಕೇಳಿದ್ದೇ, ತಡೆ ಹಿಡಿದಿದ್ದ ಅಳಲು ಪ್ರವಾಹದಂತೆ ನುಗ್ಗಿ ಬಂತು. 'ಬನ್ನಿ ಅತ್ತೆ, ನೋಡಿ ಕಣ್ಣೇ ಬಿಡುತ್ತಿಲ್ಲ. ಇನ್ನೂ ಜ್ವರ ಕಾದ ಕೆಂಡದಂತಿದೆ. ನನಗ್ಯಾಕೋ ಭಯವಾಗ್ತಿದೆ ಅತ್ತೆ. ನನ್ನ ಮಗನನ್ನು ಬದುಕಿಸಿ' ಎಂದು ಗೋಳೋ ಎಂದು ಅತ್ತಳು. ಸಾವಿತ್ರಮ್ಮನ ಕರುಳಿರಿದಂತೆ ಆಯಿತು. ಆ ಎಳೆ ಹೃದಯಕ್ಕೆ ಈ ನೋವು ಅತಿಯಾಯಿತೆನಿಸಿತು. ಮಗುವಿಗಾಗಿ ಹಂಬಲಿಸಿ ಈಗ ಏನಾದರೂ ಆದರೆ ಅವಳ ಸ್ಥಿತಿ ಊಹಿಸಿಕೊಳ್ಳುವಂತೆಯೇ ಇರಲಿಲ್ಲ. ಪಾರ್ವತಿಯ ಮಡಿಲಿಂದ ವಿಶ್ವನನ್ನು ಎತ್ತಿಕೊಂಡರು. ಅವನ ಸ್ಥಿತಿಯನ್ನು ನೋಡಿ ಸಾವಿತ್ರಮ್ಮನಿಗೂ ಗಾಭರಿಯಾಯಿತು.

ಈ ರಾತ್ರಿಯೇ ಚಿಕಿತ್ಸೆ ತುಂಬಾ ಅವಶ್ಯಕವಾಗಿತ್ತು. ಆದರೆ ಈ ಹಳ್ಳಿ ಕೊಂಪೆಯಲ್ಲಿ ಯಾವ ಡಾಕ್ಟರು ಸಿಕ್ತಾರೆ. ಹೋಗಲಿ ಊರ ಪಂಡಿತರನ್ನೇ ಕರೆಸೋಣವೆಂದುಕೊಂಡಳು. ಚಂದ್ರಣ್ಣ ಮುಖ ಚಿಕ್ಕದ್ದು ಮಾಡಿಕೊಂಡು ಕೂತಿದ್ದ. ಗಂಡಸಾಗಿ ತಾನು ಅಳುವುದು ಅಸಹ್ಯ. ಅದೂ ಅಲ್ಲದೆ ಅವಳಿಗೆ ಧೈರ್ಯ ತುಂಬಬೇಕಾಗಿರುವಾಗ ತಾನೇ ಅತ್ತರೆ ಅಧೈರ್ಯ ಮೂಡಿಸದಂತಾಗುವುದೆಂದು ಬಿಗಿ ಹಿಡಿದಿದ್ದ. ಸಾವಿತ್ರಮ್ಮ–

ಚಂದ್ರಣ್ಣ, ಮಗುವಿಗೆ ಇಷ್ಟೊಂದು ಖಾಯಿಲೆ ಇರುವಾಗ ನಾವು ಸುಮ್ಮನೆ ಕೂರೋದು ಬೇಡ. ನೀನು ಈಗಲೇ ಹೋಗಿ ಆ ಜೋಯಿಸ ಪಂಡಿತರನ್ನು ಕರೆದು ತಾ. ನೋಡಿ ಪರೀಕ್ಷಿಸಿ, ಸದ್ಯಕ್ಕೆ ಔಷಧಿಯೇನಾದರೂ ಕೊಟ್ಟಾರು.

ಅಮ್ಮ ಈ ಪಂಡಿತರ ಔಷಧಿಯಿಂದ ಈ ಜ್ವರ ಇಳಿಯೊಲ್ಲಮ್ಮ. ಇದಕ್ಕೆ ಪಟ್ಟಣದಾಸ್ಪತ್ರೆಗೆ ಕರೆದುಕೊಂಡು ಹೋಗಲೇಬೇಕು.

'ಹಾಗಲ್ಲ ಮಗ. ಔಷಧ ಕೊಟ್ಟರೆ ಕೊಡಲಿ, ಇಲ್ಲಾಂದ್ರೆ ಒಂದು ಯಂತ್ರಾನಾರಾ ಕಟ್ತಾರೆ. ಕೆಟ್ಟ ದೃಷ್ಟಿ ಬಿದ್ದು ಏನಾದರೂ ಆಗಿದ್ದರೆ ನಿವಾರಣೆಯಾಗುತ್ತೆ.'

'ನಿನಗೆ ಮಂತ್ರ ತಂತ್ರದಲ್ಲಿ ಬಾಳ ನಂಬಿಕೆ. ಈ ರೋಗಗಳೆಲ್ಲ ಅವಕ್ಕೆ ಜಗ್ಗೊಲ್ಲ. ಸೂಜಿ ಮದ್ದೇ ಬೇಕು. ನಸುಕು ಹರೀತಿದ್ದಂಗೆ ಸರ್ಕಾರಿ ಆಸ್ಪತ್ರೆಗೆ ಕರ್ಕೊಂಡೋಗ್ತೀನಿ.

'ನಾನು ಹೇಳೋದು ನಿನಗೆ ಅರ್ಥವಾಗೋಲ್ಲ ಚಂದ್ರಣ್ಣ. ಗ್ರಹಗತಿಯಿಂದಲೂ ಹೀಗಾಗಿರುತ್ತೆ. ನಾವೆಲ್ಲಾ ಇಂಥವುಗಳಿಂದಲೇ ಏನಾದ್ರೂ ಆದ್ರೆ ವಾಸಿ ಮಾಡಿಕೊಳ್ಳೊಲ್ಲವೇ? ಹೋಗು ಚಂದ್ರಣ್ಣ. ನಿರ್ಲಕ್ಷ್ಯ ಮಾಡಬೇಡ' ಎಂದರು.

ಅಮ್ಮನ ಆತಂಕ ಚಂದ್ರಣ್ಣನ ಹೃದಯ ಮುಟ್ಟಿತು. ಸದ್ಯಕ್ಕಾದರೂ ಈ ಚಿಕಿತ್ಸೆ ಇರಲಿ ಅಂತ ಚಂದ್ರಣ್ಣ ಹೋಗಲು ಎದ್ದ.

'ಹೋಗುವಾಗ ಜಾಗ್ರತೆ. ನಿನ್ನೊಟ್ಟಿಗೆ ಆ ಕಾಳನನ್ನು ಕರೆದುಕೊಂಡು ಹೋಗು' ಎಂದು ಹೇಳುವುದನ್ನು ಮರೆಯಲಿಲ್ಲ.

ಚಂದ್ರಣ್ಣ ಹೂಂ ಗುಟ್ಟಿದ ಗೂಡಿನಲ್ಲಿದ್ದ ಟಾರ್ಚನ್ನು ತೆಗೆದುಕೊಂಡು ಚಪ್ಪಲಿ ಮೆಟ್ಟಿ ನಡೆದ. ಯಾರನ್ನೂ ಕರೆದೊಯ್ಯಲಿಲ್ಲ. ಒಬ್ಬನೇ ನಡೆದ. ಅವನ ಆಲೋಚನೆಗಳೆಲ್ಲ ಮಗುವಿನ ಸುತ್ತಲೂ ಪರಿಭ್ರಮಿಸುತ್ತಿವೆ. ಧಗ ಧಗ ಉರಿವ ಬೆಂಕಿ ದೂರದಲ್ಲಿ! ಪಂಡಿತರ ಮನೆಗೆ ಹೋಗಬೇಕಾದರೆ ಊರ ಸ್ಮಶಾನವನ್ನು ದಾಟಿಕೊಂಡೇ ಹೋಗಬೇಕಾಗಿತ್ತು. ಆ ಬೆಂಕಿ ಕಣ್ಣಿಗೆ ಬಿದ್ದದ್ದೇ ಬೆಚ್ಚಿದ. ಸ್ವಲ್ಪ ಸ್ವಲ್ಪವೇ ಉರಿ ಹೆಚ್ಚುತ್ತಾ ಹೆಚ್ಚುತ್ತಾ ತನ್ನ ಸುತ್ತ ಬಳಸುತ್ತಿರುವಂತೆನಿಸಿತು. ಮೈಯೆಲ್ಲ ಬೆವರಿತು. ಈ ಭೀತಿ ಸಾಲದ್ದಕ್ಕೆ ಗೂಗೆಗಳ ಅಧ್ವಾನದ ಶಬ್ದ. ಬೇಗ ಬೇಗ ಹೆಜ್ಜೆ ಹಾಕಿದ.

ಚಂದ್ರಣ್ಣ ಪುಕ್ಕಲು ಮನುಷ್ಯನೇನೂ ಅಲ್ಲ. ಎಷ್ಟೋ ಸಲ ಈ ದಾರಿಯಲ್ಲಿ ಓಡಾಡಿದ್ದಾನೆ. ಆದರೆ ಇವತ್ತೇಕೋ ಸಲ್ಲದ ಭಯ ಅವನನ್ನು ಕಬಳಿಸಿದೆ.

ಬೇಗ ದಾರಿ ಸವೆದರೆ ಸಾಕು ದೇವರೇ ಎಂದು ಹಾರೈಸಿದ.

ಜರಕ್-ಜರಕ್-ಜರಕ್- ಚಪ್ಪಲಿ ಶಬ್ದ ಕೇಳುತ್ತಿತ್ತು. ಆ ಶಬ್ದವೊಂದೇ ಅವನಿಗೆ ಸಂಗಾತಿಯಾಗಿತ್ತು.

ಅಂತೂ ಇಂತು ಜೋಯಿಸರ ಮನೆ ಬಳಿಗೆ ಬಂದ. ಮರದ ಗೇಟಿನ ಕೊಂಡಿಯನ್ನು ಬಿಡಿಸಿದ. ಕಟರ್- ಕಟರ್- ಗೇಟಿನ ಶಬ್ದವಾಯಿತು. ಅಂಗಳ ದಾಟಿ ಮನೆಯ ಬಾಗಿಲಿಗೆ ಬಂದ. ಈ ಅಪರಾತ್ರಿಯಲ್ಲಿ ಎಬ್ಬಿಸುವುದು ಸರಿಯಲ್ಲವೇನೋ ಎನಿಸಿತು. ಆದರೆ ಅಮ್ಮನ ಮಾತು ವಿಶ್ವನ ಸ್ಥಿತಿ, ಅವನನ್ನು ಬಾಗಿಲು ತಟ್ಟಲು ಒತ್ತಾಯಿಸಿತು. ಮೆಲ್ಲನೆ ಬಾಗಿಲು ತಟ್ಟಿದ. ಯಾರಿಗೂ ಎಚ್ಚರವಾದಂತೆ ಕಾಣಿಸಲಿಲ್ಲ. ಮತ್ತೊಮ್ಮೆ ಗಟ್ಟಿಯಾಗಿ ತಟ್ಟಿದ. ಒಳಗಿಂದ ಕೇಳಿ ಬಂತು-ಯಾರದು?'-ಎಂದು. ನಾನು ಜೋಯಿಸರೇ, ಚಂದ್ರಣ್ಣ-ಎಂದು ಕೂಗಿ ಹೇಳಿದ ಗಟ್ಟಿಯಾಗಿ. ಜೋಯಿಸರಿಗೆ ಕೇಳಿಸಿತು. ಎದ್ದು ದೀಪ ಹಾಕಿದರು. ಸರಿ, ಬರುತ್ತಿದ್ದಾರೆಂದೆನಿಸಿತು. ಒಂದು-ಎರಡು-ಕ್ಷಣಗಳೂ ಕಾಯುವುದು ಕಷ್ಟವೆನಿಸಿತು. ಜೋಯಿಸರಿಗೆ ಏನೆಂದು ಹೇಳುವುದು. ಎಂದು ಯೋಚಿಸುತ್ತಿರುವಷ್ಟರಲ್ಲಿ ಜೋಯಿಸರು ಬಾಗಿಲ ಚಿಲಕ ತೆಗೆದ ಶಬ್ದವಾಯಿತು. ಹೊರಗೆ ಅಂಗಳದಲ್ಲಿ ಕತ್ತಲು ವಿಪರೀತವಿದ್ದುದರಿಂದ, ಕೈಯಲ್ಲಿ ಚಿಮ್ನಿ ದೀಪ ಹಿಡಿದೇ ಬಂದರು. ಯಾರೆಂದು ಪರೀಕ್ಷಿಸಲು ದೀಪವನ್ನು ಸ್ವಲ್ಪ ಎತ್ತಿ ಹಿಡಿದರು. ವಯಸ್ಸಾಗಿತ್ತು. ಕಣ್ಣು ಸರಿಯಾಗಿ ಕಾಣುತ್ತಿರಲಿಲ್ಲ. ಹತ್ತಿರದಿಂದ ನೋಡಿದರೆ ಮಾತ್ರ ಗುರುತು ಹತ್ತುತ್ತಿತ್ತು.

ಆ ಮಂದವಾದ ಬೆಳಕಿನಲ್ಲಿ ಚಂದ್ರಣ್ಣ ಕಾಣಿಸಿದ. ಜೋಯಿಸರು ಹುಬ್ಬು ಗಂಟಿಟ್ಟು ಆಲೋಚಿಸಿದರು. ಈ ಚಂದ್ರಣ್ಣ ಇಷ್ಟು ಅಪರಾತ್ರಿಯಲ್ಲಿ ಯಾಕೆ ಬಂದ ಎಂದು. 'ಏನು ಚಂದ್ರಣ್ಣ ಇಷ್ಟು ಹೊತ್ನಲ್ಲಿ ಬಂದಿದ್ದೀ. ಮನೆಯಲ್ಲಿ ಎಲ್ಲರೂ ಸೌಖ್ಯ ತಾನೇ? ನಿಮ್ಮ ತಂದೆಗೆ ಹೇಗಿದೆ? ಇತ್ತೀಚೆಗೆ ನೋಡಿದಾಗ ಏನೋ ಮೈ ಹುಷಾರಿಲ್ಲ ಅಂದಿದ್ದರ ನೆನಪು. ವಾಸಿಯಾಗಿದ್ದಾರೆ ತಾನೇ?-ಎಂದು ಒಂದೇ ಸಮನೆ ತಂದೆಯ ಬಗ್ಗೆ ವಿಚಾರಿಸಿದಾಗ ಚಂದ್ರಣ್ಣನಿಗೆ ಏನು ಹೇಳಬೇಕೋ ತಿಳಿಯದಾಯಿತು.

ತಗ್ಗಿದ ದನಿಯಲ್ಲಿ ನುಡಿದ – ಅಪ್ಪನಿಗೆ ಹುಷಾರಾಗಿದೆ. ಆದರೆ ನಮ್ಮ ವಿಶ್ವನಿಗೆ ಯಾಕೋ ಇವತ್ತು ಸಂಜೆಯಿಂದ ತುಂಬಾನೇ ಜ್ವರ ಬರ್ತಿದೆ. ಪ್ರಜ್ಞೆಯೇ ಇದ್ದಂತಿಲ್ಲ ಜೋಯಿಸರೇ. ದಯವಿಟ್ಟು ತಾವು ನನ್ನ ಜೊತೆ ಈ ಕೂಡಲೇ ಹೊರಡಬೇಕು. ಬೆಳಗಿನ ತನಕ ಕಾಯುವ ಧೈರ್ಯವೇ ನಮಗಿಲ್ಲ. ಅಮ್ಮ ಅಂತೂ ಪದೇ ಪದೇ ನಿಮ್ಮನ್ನು ಕರೆತರಲು ಹೇಳಿದ್ದಾರೆ. 'ಆಗುವುದಿಲ್ಲ ಎನ್ನಬೇಡಿ ಜೋಯಿಸರೇ. ನಿಮ್ಮ ಕಾಲು ಹಿಡೀತೀನಿ. ನನಗೆ ಗೊತ್ತು ಈ ಹೊತ್ನಲ್ಲಿ ವಯಸ್ಸಾದ ನಿಮಗೆ ಎಷ್ಟು ತೊಂದರೆಯಗುತ್ತೇಂತ. ಆದರೆ ನೀವು ಈ ಕೂಡಲೇ ಬಂದದ್ದೇ ಆದರೆ ನನ್ನ ಮಗನಿಗೆ ಪ್ರಾಣ ಕೊಟ್ಟ ಪುಣ್ಯ ಬರುತ್ತೆ' ಕಲ್ಲನ್ನೂ ಕರಗಿಸುವ ದೈನ್ಯ ತುಂಬಿತ್ತು.

'ಬರ್ತೀನಿ ಬಿಡು ಚಂದ್ರಣ್ಣ. ಇಷ್ಟು ಸಣ್ಣವನಾಗಿ ಬೇಡಬೇಕಾದ್ದಿಲ್ಲ. ಆಪತ್ತಿಗೆ ಆಗದಿದ್ದ ಮೇಲೆ ಮನುಷ್ಯ ಜನ್ಮ ಯಾತರದ್ದು? ನೀನು ಜೊತೆಗಿರ್ತಿ. ನನಗೇನೂ ತೊಂದರೆ ಇಲ್ಲ. ಒಂದ್ನಿಮಿಷ ಇರು. ಈಗಲೇ ಔಷಧಿ ಪೆಟ್ಟಿ ತೆಗೆದುಕೊಂಡು ಬಂದ್ಬಿಡ್ತೀನಿ'–ಎಂದು ಕೂಗುತ್ತಿದ್ದುದು ಕೇಳಿಸಿತು. ಜೋಯಿಸರು, ಮೊಮ್ಮಗಳು ಮಹಾಲಕ್ಷ್ಮಿಯನ್ನು ಕೂಗಿ ಎಬ್ಬಿಸಿದರು. ಮಹಾಲಕ್ಷ್ಮಿ ಕಣ್ಣು ಹೊಸಕಿಕೊಳ್ಳುತ್ತಾ ಎದ್ದಳು. 'ಏನಪ್ಪಯ್ಯ ನಿದ್ದೇಲಿ ಎಬ್ಬಿಸಿ ಬಿಟ್ಟಿರಿ. ಒಳ್ಳೇ ನಿದ್ದೇ ಬರ್ತಿತ್ತು–ಎಂದು ಗೊಣಗಿದಳು. 'ನಾನು ಇಲ್ಲೇ ಊರೊಳಕ್ಕೆ ಹೋಗಿ ಬರ್ತೀನಿ. ಅಜ್ಜಿ ಎದ್ದರೆ ಹೇಳಿಬಿಡು' ಇಲ್ಲೇ ಹೋಗಿದ್ದಾರೆ ಬಂದ್ಬಿಡ್ತಾರೇಂತ. ನಾನು ಬರ್ತೀನಿ ಸ್ವಲ್ಪ ಬಾಗಿಲು ಹಾಕ್ಕೋ. ಎಂದು ಹೇಳಿ ಚಪ್ಪಲಿ ಮೆಟ್ಟಿಕೊಂಡು ಚಂದ್ರಣ್ಣನಿಗೆ ಇನ್ನು ಹೊರಡೋಣವೇ–ಎಂದರು.

ಚಂದ್ರಣ್ಣ ಹೂಂಗುಟ್ಟಿದ. ಬಾಗಿಲು ದಾಟಿ ಬಂದ ಮೇಲೆ ಚಂದ್ರಣ್ಣ ಅವರ ಕೈಯಿಂದ ಔಷಧಿಯ ಪೆಟ್ಟಿಯನ್ನು ತೆಗೆದುಕೊಂಡ.

ತುಂಬಾ ಹೊತ್ತು ಯಾರೂ ಮಾತಾಡಲಿಲ್ಲ. ದಾರಿ ಬೇಗ ಸವೆಸುವುದಷ್ಟೇ ಅವರ ಗುರಿಯಾಗಿತ್ತು. ಚಂದ್ರಣ್ಣನ ಹೆಜ್ಜೆ ಎಷ್ಟು ನಿಧಾನ ಮಾಡಿದರೂ ಮುಂದಾಗುತ್ತಿತ್ತು. ಜೋಯಿಸರು ಹಿಂದೆ ಬೀಳುತ್ತಿದ್ದರು. ಆದರೂ ಮಾಮೂಲಿಗಿಂತ ಸ್ವಲ್ಪ ಬಿರುಸಾಗಿಯೇ ಇತ್ತು ನಡಿಗೆ. ಹೊಲೆಯರ ಕೇರಿ–ಸ್ಮಶಾನ–ತೋಪು–ಪಾಳುಗುಡಿ–ಹೀಗೆ ಒಂದೊಂದೇ ಒಂದೊಂದೇ ದಾಟಿದ್ದಾಯಿತು. ತೀರಾ ಔಪಚಾರಿಕವಾಗಿ ಮಳೆ–ಬೆಳೆ–ವಿಷಯ ಮಾತಾಡಿದರು. ಆ ಸಂದರ್ಭಕ್ಕೆ ಅದು ಅಸಂಬದ್ಧವಾಗಿತ್ತು. ಮಾತು ಮನೆಯತ್ತ ಸುಳಿದರೆ ಮತ್ತೆ ವಿಶ್ವನ ನೆನಪಾದೀತೆಂದು ಹೆದರಿದ.

ಮನೆ ಮುಟ್ಟುವ ವೇಳೆಗೆ ರಾತ್ರಿ ಎರಡೂವರೆ ಗಂಟೆಗೂ ಮೀರಿತ್ತು. ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದ ಮನೆಯವರಿಗೆ ಹೆಜ್ಜೆ ಸಪ್ಪಳ ಕೇಳಿಸಿತು. ಜೋಯಿಸರನ್ನು ಕರೆತಂದಿರಬೇಕೆಂಬ ಆಲೋಚನೆಯೇ ಪಾರ್ವತಿಯ ಮನಸ್ಸಿನಲ್ಲಿ ಆಶೆಯ ಮಿಂಚನ್ನು ಹೊಳೆಸಿತು, ವಿಶ್ವ ಅಜ್ಜಿಯ ಮಡಿಲಲ್ಲೇ ಇದ್ದ. ಪಾರ್ವತಿ ಹೊರಗೋಡಿ ಬಂದಳು. ದೂರದಿಂದಲೇ ಇಬ್ಬರನ್ನೂ ಗಮನಿಸಿದಳು. ಎದೆ ಹೊಡೆದುಕೊಳ್ಳುತ್ತಿತ್ತು – ಭಯ, ಕಾತುರಗಳಿಂದ! ಜೋಯಿಸರು ಒಳಗೆ ಬರುತ್ತಿದ್ದಂತೆ ಚಂದ್ರಣ್ಣ ಪೆಟ್ಟಿಗೆಯನ್ನು ಬಾಗಿಲಲ್ಲೇ ನಿಂತಿದ್ದ ಪಾರ್ವತಿಯ ಕೈಗಿಟ್ಟು ಜೋಯಿಸರನ್ನು ಒಳಗಿನ ಕೋಣೆಗೆ ಕರೆದೊಯ್ದರು. ಅಜ್ಜ, ಅಜ್ಜಿ, ಮಡಿಲಲ್ಲಿ ಮಗು. ಜೋಯಿಸರು ಅವಲೋಕಿಸಿದರು. ಅವರೆಲ್ಲರ ಮುಖಗಳಲ್ಲಿ ದುಗುಡದ ಛಾಯೆ ದಟ್ಟವಾಗಿ ಕವಿದಿದೆ. ಯಾರನ್ನೂ ಮಾತನಾಡಿಸಲಿಲ್ಲ. ನೇರಾಗಿ ಅಜ್ಜಿ ಸಾವಿತ್ರಮ್ಮನ ಮಡಿಲಲ್ಲಿದ್ದ ಮಗುವನ್ನು ಪರೀಕ್ಷಿಸಿದರು. ಮಗುವಿನ ನಾಡಿಯನ್ನು, ಎದೆ ಭಾಗವನ್ನು ನೋಡಿ ಪರೀಕ್ಷಿಸಿದರು. ತಲೆ ಮುಟ್ಟಿ ನೋಡಿದರು, ಸ್ವಲ್ಪ ಹೊತ್ತು ಗಂಭೀರವಾಗಿ ಆಲೋಚಿಸಿದರು. ಮೈ ಮುಟ್ಟಿದರೆ ಈಗ ಬಿಸಿ ಇರಲಿಲ್ಲ. ಅಂಗಾಲುಗಳನ್ನು ಮುಟ್ಟಿದರು. ಬಿಸಿ ಇದ್ದಂತಿರಲಿಲ್ಲ. ಕೈಯಿಂದ ಗಟ್ಟಿಯಾಗಿ ಉಜ್ಜಿದರು.

ಸುಮಾರು ಬಿಸಿಯ ಅನುಭವವಾಯಿತು. ಮೂಗಿನ ಬಳಿ ಕೈಯಿಟ್ಟು ಉಸಿರಾಟವನ್ನು ಗಮನಿಸಿದರು. ಕ್ಷೀಣವಾದ ಉಸಿರಾಟ ಕೇಳಿಸುತ್ತಿತ್ತು. ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ಎರಡು ಬಗೆಯ ಚೂರ್ಣಗಳನ್ನು ಕೊಟ್ಟರು. ಹಾಲಲ್ಲಿ ಬೆರೆಸಿ ಕುಡಿಸಲು ಹೇಳಿದರು.

ಸಾವಿತ್ರಮ್ಮ ಜೋಯಿಸರ ರೀತಿಯನ್ನು ನೋಡಿದರು. ಏನು ಹೇಳುವರೊ ಕೇಳಬೇಕೆಂಬ ಕುತೂಹಲ ಆದರೆ ಕೇಳಲು ಭಯ. ಕೃಷ್ಣಪ್ಪನ ಮುದಿಜೀವ ನಿಶ್ಚೇಷ್ಟಿತವಾಗಿ, ಮಂಕಾಗಿ ಕುಳಿತುಬಿಟ್ಟಿತ್ತು. ಜೋಯಿಸರು ಚಂದ್ರಣ್ಣನನ್ನು ಹೊರಗೆ ಕರೆದು ಈ ರಾತ್ರಿ ಕಳೆದುಬಿಟ್ಟರೆ ಸ್ವಲ್ಪ ಪರವಾಗಿಲ್ಲ. ಅಲ್ಲಿಯವರೆಗೆ ಸ್ವಲ್ಪ ಹುಷಾರಾಗಿರಬೇಕು. ಚಂದ್ರಣ್ಣ ಬೆಳಗಾಗೋವರೆಗೂ ನಾನು ಇಲ್ಲೇ ಇರ್ತೇನೆ. ಬೆಳಿಗ್ಗೆ ಎಲ್ಲಾ ಸರಿಯಾಗಿದ್ದರೆ ಔಷಧಿ ಕೊಟ್ಟು ಒಂದೇ ಸಲ ಮನೆಗೆ ಹೋಗ್ತೇನೆ. ಈಗಾಗಲೇ ಮೂರು ಗಂಟೆಗೂ ಹೆಚ್ಚು ಹೊತ್ತಾಗಿದೆ ಎಂದರು.

ಚಂದ್ರಣ್ಣನಿಗೆ ಸಂತೋಷವೇ ಆಯಿತು. ಸಾವಿತ್ರಮ್ಮ ಯಂತ್ರ ಕಟ್ಟಲು ಹೇಳಿದ್ದಕ್ಕೆ ಯಂತ್ರದಂದ ಪ್ರಯೋಜನವಿಲ್ಲವೆಂದರು. ಪಾರ್ವತಿಗೆ ಜೋಯಿಸರು ಉಳಿದದ್ದು ಭುಜಬಲ ಬಂದಂತಾಯ್ತು.

ಚೂರ್ಣ ಕಲೆಸಿ ಬಾಯೊಳಕ್ಕೆ ಸುರಿಯಲು ವಿಶ್ವ ಪ್ರಯತ್ನವೇ ಮಾಡಬೇಕಾಯಿತು. ಸದ್ಯ ಸ್ವಲ್ಪವಾದರೂ ಹೊಟ್ಟೆ ಸೇರಿತಲ್ಲ ಎಂದುಕೊಂಡು ಬಟ್ಟೆಯಿಂದ ಒರೆಸುತ್ತಿದ್ದ ಹಾಗೇ 'ಒಯಕ್' ಅಂತ ಎಲ್ಲವೂ ಹೊರಗೇ ಬಂತು. ಉಸಿರಾಟ ತುಂಬಾ ಜೋರಾಯಿತು. ಆ ವೇಗಕ್ಕೆ ಪಕ್ಕೆಗಳು ಹಾರುತ್ತಿದ್ದವು. ಪಾರ್ವತಿ ಸಾವಿತ್ರಮ್ಮನಿಗೆ ಗಾಭರಿಯಾಯಿತು. 'ಜೋಯಿಸರೇ, ಜೋಯಿಸರೇ ಬೇಗ ಬನ್ನಿ' ಎಂದು ಕೂಗಿದ ಪಾರ್ವತಿಯ ಧ್ವನಿ ಕೇಳಿಸಿತು.

ಜೋಯಿಸರು ಚಾಪೆಯ ಮೇಲೆ ಇನ್ನೇನು ಕೈಯೂರುವವರಿದ್ದರು. ಅಷ್ಟರಲ್ಲಿ ಪಾರ್ವತಿಯ ಕೂಗು ಕೇಳಿಸಿ ಧಾವಿಸಿದರು. ವಿಶ್ವನ ಉಸಿರಾಟವನ್ನು ಗಮನಿಸಿದರು. ಕೂಡಲೇ ಅವರಿಗೆ ಅದು ನಂದುವ ಕುಡಿ ಎನಿಸಿತು. ವಿಶ್ವ,....ವಿಶ್ವ .,......ಎಂದರು. ತೇಲುಗಣ್ಣನ್ನು ಹಾಕಿ ಚಡಪಡಿಸುವಂತೆ ಕಂಡಿತು. ಸ್ವಲ್ಪ ಸರಿಸಿದರು ಹೊದಿಕೆಯನ್ನು. ಕ್ಷಣ ಮಾತ್ರದಲ್ಲಿ ಕೈಗಳು ಜಡವಾಗಿ ಬಿದ್ದವು.

ಜೋಯಿಸರು ಹೊರಟು ನಿಂತರು. 'ಜೋಯಿಸರೇ ನನ್ನ ಮಗುವನ್ನು ನೋಡದೆ ಹೋಗ್ತೀರಾ? ಈಗ ತಾನೇ ಬೆಳಿಗ್ಗೆ ಹೋಗುತ್ತೇನೆಂದಿರಿ?' ಅಣಕಿಸುವಂತೆ ಪಾರ್ವತಿ ಕೇಳಿದಳು.

ಹೌದು ಹೇಳಿದೆ. ಇನ್ನು ನನ್ನ ಉಪಯೋಗ ಇಲ್ಲ. ಅದಕ್ಕೆ ಹೊರಟೆ.

'ಅಂದ್ರೆ?'–ಎಲ್ಲರೂ ಈ ಮಾತಿನ ಅರ್ಥವನ್ನು ಆಲೋಚಿಸಿದರು.

'ವಿಶ್ವ' – 'ವಿಶ್ವ'.......ಎಂದು ಎಲ್ಲರೂ ಬಿದ್ದು ಬಿದ್ದು ಅಳತೊಡಗಿದರು. ಜೋಯಿಸರ ಕಣ್ಣು ತೇವವಾಯಿತು. ನಿಲ್ಲಲಿಲ್ಲ, ಮಾತಾಡಲಿಲ್ಲ, ಮೆಲ್ಲನೆ ಹೆಜ್ಜೆ ಎಳೆದುಕೊಂಡು ಹೊರಗೆ ಹೋದರು.

* * *

ಪಾರ್ವತಿ ಅರೆ ಹುಚ್ಚಿಯಾಗಿದ್ದಳು. ಒಮ್ಮೊಮ್ಮೆ ನಗುವುದು, ಅಳುವುದು ವಿಶ್ವನೊಡನೆ ಆಡಿದಂತೆ ಆಡುತ್ತಾಳೆ. ಇಲ್ಲವೆಂದರೆ ಸುಮ್ಮನೆ ತಲೆ ಮೇಲೆ ಕೈ ಹೊತ್ತು ಕುಳಿತು ಬಿಡುತ್ತಾಳೆ. ಚಂದ್ರಣ್ಣ ಮಡದಿಯ ಧೈರ್ಯಕ್ಕಾಗಿ ತಾನು ಅಧೀರನಾಗದಂತೆ ಉಳಿದ. ಮನೆ ಮಂದಿಯೆಲ್ಲಾ ಹೀಗೆ ತಲೆ ಕೆಟ್ಟು ಕೂತರೆ ವ್ಯವಹಾರ ನಡೆಸುವವರು ಯಾರೂ ಇಲ್ಲ.

ಸಾವಿತ್ರಮ್ಮ ನೋವನ್ನೆಲ್ಲಾ ನುಂಗಿಕೊಂಡು, ಮನೆಗೆಲಸಗಳಲ್ಲಿ ತೊಡಗಿದರು. ಅವರಿಗೆ ಪಾರ್ವತಿಯದೇ ಚಿಂತೆ. ಪಾರ್ವತಿಯ ತಂದೆ ತಾಯಿ ಎಷ್ಟೇ ಬಂದು ಕರೆದರೂ ಪಾರ್ವತಿ ಹೋಗಲಿಲ್ಲ. ಅವಳನ್ನು ನೋಡಿಕೊಳ್ಳಬೇಕಿತ್ತು. ಅವಕಾಶ ಸಿಕ್ಕಾಗಲೆಲ್ಲ ಸಾವಿತ್ರಮ್ಮ ಪಾರ್ವತಿಗೆ ಧೈರ್ಯ ತುಂಬುತ್ತಲೇ ಇದ್ದರು. ಮನೆಯ ವಾತಾವರಣವೇ ಬೇರೆಯಾಗಿತ್ತು. ಎಲ್ಲರೂ ತಮ್ಮ ಪಾಡಿಗೆ ತಾವಿದ್ದರು.

ಇತ್ತೀಚಿಗೆ ಕೃಷ್ಣಪ್ಪನ ಆರೋಗ್ಯ ತುಂಬಾ ಸೂಕ್ಷ್ಮವಾಗಿ ಬಿಟ್ಟಿತ್ತು. ತಿಂದದ್ದೇನೂ ಜೀರ್ಣವಾಗುತ್ತಿರಲಿಲ್ಲ. ಕೈಕಾಲುಗಳ ಊತ ಬೇರೆ ಬಂದಿತ್ತು. ಒಂದೆಡೆ ಬಿದ್ದುಕೊಂಡು ಮುಲುಗುತ್ತಿದ್ದ. ಗಂಡನ ಸ್ಥಿತಿಗೆ ಸಾವಿತ್ರಮ್ಮ ಮರುಗಿದರು. ಗಂಡನ ಕಣ್ಣೆದುರು ತಮ್ಮ ಸಾವನ್ನು ಬಯಸಿದ್ದರು. ಕೃಷ್ಣಪ್ಪನ ಕಿರಿಕಿರಿಯೂ ಹೆಚ್ಚಾಗುತ್ತಿತ್ತು. ಹೇಗೆ ಅವರ ಸೇವೆ ಮಾಡಿದರೂ ಹಿಡಿಸುತ್ತಿರಲಿಲ್ಲ. ಸಾವಿತ್ರಮ್ಮ ಗಂಡನ ಬಳಿಯೇ ಕೂತಿರಬೇಕಾಗುತ್ತಿತ್ತು.

ಪಾರ್ವತಿಯ ದುಃಖ ಹೆಚ್ಚಾಗಿತ್ತು. ಆದರೆ ಮನೆ ಪರಿಸ್ಥಿತಿಗಳು, ಯಾರೂ ಗಮನಿಸುವುದಕ್ಕಿಲ್ಲದೆ ಹದಗೆಡುತ್ತಿದ್ದವು.

ಸರಿಯಾಗಿ ಹಸುಗಳಿಗೆ ಹುಲ್ಲು ಹಾಕುವವರಿಲ್ಲ. ಬೆಳೆಯನ್ನು ಗಮನಿಸುವವರಿಲ್ಲ. ಎಲ್ಲಿ ನೋಡಿದರೂ ಧೂಳು-ಬಟ್ಟೆಗಳು! -ಮನೆಯನ್ನು ಸಜ್ಜುಗೊಳಿಸುವವರಿಲ್ಲ. ಕಾಲ ಉರುಳಿದಂತೆ ದುಃಖದ ಬಿಸಿ ತಣ್ಣಾರಿತು. ಅಳಲಿನ ಕೆರೆ ಬತ್ತಿತು. ಪಾರ್ವತಿ ಸ್ವಲ್ಪಸ್ವಲ್ಪವಾಗಿ ಈ ಘಟನೆಯನ್ನು ಮರೆಯಲು ಪ್ರಯತ್ನಿಸಿದಳು.

ಅವಳ ಬುದ್ಧಿಗೇ ಈ ಮುದುಕರ ಕಷ್ಟ ಹೊಳೆಯಿತು. ತಾನಾಗಿ ನುಗ್ಗಿ ಸಾವಿತ್ರಮ್ಮನಿಂದ ಕೆಲಸವನ್ನು ಕಸಿದುಕೊಂಡು ಮಾಡತೊಡಗಿದಳು.

'ಅತ್ತೆ, ನೀವು ಆರಾಮವಾಗಿ ಮಾವನ ಬಳಿ ಇರಿ. ಅವರಿಗೆ ಕ್ಷಣಕ್ಷಣಕ್ಕೂ ನಿಮ್ಮ ಅವಶ್ಯಕತೆ ಬೀಳುತ್ತೆ. ನಾನು ಮನೆ ಕೆಲಸವನ್ನೆಲ್ಲಾ ನೋಡ್ಕೊಳ್ತೇನೆ. ಇಷ್ಟು ದಿವಸ ನಿಮಗ ಕೊಟ್ಟ ಕಷ್ಟ ಸಾಕಾಗಿದೆ'- ಎಂದಳು ಲವಲವಿಕೆಯಿಂದ.

ಸಾವಿತ್ರಮ್ಮನಿಗೆ ಸೊಸೆಯ ಮಾತು ಕೇಳಿ ತನ್ನ ಕಿವಿ ಕಣ್ಣುಗಳನ್ನೇ ನಂಬದಾದಳು. ಪಾರ್ವತಿಯ ಮುಖದಲ್ಲಿ ನಗೆ ಬೆಳಕು ಮೂಡಿ ಲವಲವಿಕೆಯಿಂದ ಇರುವುದನ್ನು ಈ ಜನ್ಮದಲ್ಲಿ ನೋಡಿಯೇನೇ? ಎಂದು ಪರಿತಪಿಸಿದ್ದರು.

'ಕಷ್ಟ ಏನು ಬಂತು ಪಾರ್ವತಿ, ನನ್ನ ಮಕ್ಕಳು ನನಗೆ ಕಷ್ಟವೇ? ಸದ್ಯ ನೀನು ಹೀಗೆ ನಗುನಗುತಾ ಓಡಾಡಿಕೊಂಡಿದ್ದರೆ ನಮಗೆ ಅಷ್ಟೇ ಸಾಕು.' ಎಂದಳು ಸಮಾಧಾನದ ದನಿಯಲ್ಲಿ.

ಪಾರ್ವತಿ ಕೆಲಸಗಳಲ್ಲಿ ತೊಡಗಿದಳು. ಮನೆ ಅವ್ಯವಸ್ಥಿತವಾಗಿತ್ತು. ಎಲ್ಲಿನ ವಸ್ತುಗಳು ಅಲ್ಲಿಯೇ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಅವುಗಳನ್ನೆಲ್ಲ ಸಜ್ಜುಗೊಳಿಸಿದಳು; ಒಂದು ಕಡೆಯಿಂದ ಎಲ್ಲಾ ಶುಭ್ರಗೊಳಿಸಿದಳು.

ರ[illegible]ನನ್ನು ಕರೆದು ದನಗಳ ಮೈ ತೊಳೆದು ತರಲು ಹೇಳಿದಳು. ಹಿತ್ತಲಿನಲ್ಲಿ ಕಾಲುಕಾಲಿಗೆ ಸಿಕ್ಕುವ ಹಾಗೆ ಹುಲ್ಲೆಲ್ಲಾ ಚೆಲ್ಲಿತ್ತು. ಅದನ್ನೆಲ್ಲಾ ಅಚ್ಚುಕಟ್ಟಾಗಿ ಒಂದು ಕಡೆ ಇರಿಸಿದಳು.

* * *

ಮಾವನ ದೇಹಸ್ಥಿತಿ ದಿನದಿನಕ್ಕೆ ಕುಸಿಯುತ್ತಿತ್ತು. ಮೊದಲೇ ವಯಸ್ಸಿನ ಪರಿಣಾಮದಿಂದ ದುರ್ಬಲರಾಗಿದ್ದರೆ, ವಿಶ್ವನ ಸಾವು ಇನ್ನಷ್ಟು ದೌರ್ಬಲ್ಯವನ್ನು ತಂದಿತ್ತು. ಮನೆಯವರೆಲ್ಲ ಅತ್ತರೂ ಅವರು ಅಳಲಿಲ್ಲ. ಅವರ ದುಃಖ ಹೆಪ್ಪುಗಟ್ಟಿದೆ. ಮಾತಿಗಿಂತ ಮೌನವೆ ಹೆಚ್ಚಾಗಿದೆ. ಹೇಳಲಾಗದ ತಳಮಳ, ಎದುರು ಬಂದವರನ್ನು ನೋಡಿ ಸಿಟ್ಟಿಗೆಬ್ಬಿಸುತ್ತೆ.

ಸಂಜೆಯಾದರೆ ಸಾಕು ಕೃಷ್ಣಪ್ಪ ಅರ್ಧ ಊರನ್ನಾದರೂ ಸುತ್ತಿ ಬರುತ್ತಿದ್ದ ದಾರಿಯಲ್ಲಿ ಎದುರು ಬಿದ್ದವರನ್ನೆಲ್ಲಾ ಮಾತಾಡಿಸಿ ಯೋಗಕ್ಷೇಮ ವಿಚಾರಿಸುತ್ತಿದ್ದ. ಇತ್ತೀಚಿಗೆ ಹೊರಗೆ ಮುಖ ಹಾಕಿದ್ದೇ ಇಲ್ಲ. ಸುಮ್ಮನೆ ಬಿದ್ದುಕೊಂಡಿರುವುದೇ ಕೆಲಸ. ಇಷ್ಟವಾದರೆ ಒಂದು ತುತ್ತು ಅನ್ನ ತಿನ್ನುತ್ತಾರೆ. ಇಲ್ಲವಾದರೆ ಉಪವಾಸವೇ. ಸಾವಿತ್ರಮ್ಮ ಅಂಗಲಾಚಿ ಬೇಡಿಕೊಂಡರೂ ಒಂದು ಅಗಳು ಮುಟ್ಟುತ್ತಿರಲಿಲ್ಲ. ಇನ್ನೂ ಒತ್ತಾಯ ಮಾಡಿದರೆ, ಅನ್ನದ ತಟ್ಟೆಯನ್ನೇ ತಳ್ಳಿ ಬಿಡುತ್ತಿದ್ದರು. ಮಗುವಿಗಿಂತ ಕಡೆಯಾಗಿ ವರ್ತಿಸುವ ಇವರನ್ನು ನೋಡಿಕೊಳ್ಳುವುದಕ್ಕೇ ಹೊತ್ತು ಸಾಕಾಗುತ್ತಿತ್ತು.

ಪಾರ್ವತಿ ಅಂಥ ಸಮಯದಲ್ಲಿ ತಾನೇ ಇನ್ನು ಸ್ವಲ್ಪ ಹೊತ್ತು ಬಿಟ್ಟು ಮಾವನನ್ನು ಊಟಕ್ಕಾಗಿ ಪುಸಲಾಯಿಸುತ್ತಿದ್ದಳು. ಕೃಷ್ಣಪ್ಪನ ಸಿಟ್ಟೆಲ್ಲ ಅವಳ ಮಾತು ಕೇಳಿ ಪುಂಗಿನಾದಕ್ಕೆ ಸೋತ ಹಾವಿನಂತಾಗುತ್ತಿತ್ತು.

ಒಂದು ದಿನ ಪಾರ್ವತಿ ಪ್ರೀತಿಯಿಂದ, 'ಮಾವ, ನೀವು ಹೀಗೆಲ್ಲ ಊಟ ಬಿಟ್ಟರೆ ನಿಮ್ಮ ದೇಹ ಸ್ಥಿತಿ ಸರಿಹೋಗುತ್ತೆಯೇ, ನಮಗೆ ನೀವು ಹಿರಿಯರು ಚೆನ್ನಾಗಿದ್ದರೆ

ಧೈರ್ಯ. ಪ್ರತಿಯೊಂದಕ್ಕೂ ನಿಮ್ಮ ಆಸರೆ ಬೇಕಾಗುತ್ತೆ. ಪಾಪ ಅತ್ತೆ ತುಂಬಾ ಬೇಜಾರು ಮಾಡಿಕೊಂಡಿದ್ದಾರೆ. ನೀವು ಸಿಟ್ಟುಗಿಟ್ಟು ಮಾಡಿಕೊಂಡು ಅವರ ಮೇಲೆ ಹಾರಾಡಿದರೆ ಅವರ ಹೃದಯಕ್ಕೆ ಎಷ್ಟು ನೋವಾಗುತ್ತೆ – ಎಂದು ವ್ಯಥೆ ತುಂಬಿ ಹೇಳಿದರು.

'ಈ ವಯಸ್ಸಾದ ಮುದಿಗೊಡ್ಡು – ದೇಹಸ್ಥಿತಿ ಸರಿಯಾಗಿರಿಸಿಕೊಂಡು ಮಾಡಬೇಕಾದ್ದೇನಿದೆಯಮ್ಮಾ? ಕೆಲಸಕ್ಕೆ ಬಾರದೆ ಮೂಲೆಗುಂಪಾಗಿ ಬದುಕಬೇಕಾದ ನಮಗೆ ದೇವರು ಇನ್ನಷ್ಟು ಆಯಸ್ಸು ಹೆಚ್ಚಾಗಿ ಸುರೀತಾನೆ' – ಸ್ವಲ್ಪ ರೋಷವಿದ್ದಂತಿತ್ತು ಮಾತಿನಲ್ಲಿ.

'ಆಯಸ್ಸು ಹೆಚ್ಚಾದರೆ ನಮಗೆ ಸಂತೋಷವೇ. ಮನೆಗೆ ಹಿರಿಯರೂಂತ ಇದ್ದರೇನೇ ಮನೆಯಲ್ಲಿ ಒಂದು ವ್ಯವಸ್ಥೆ ಇರುತ್ತೆ. ಅದು ಬಿಟ್ಟು ನಮ್ಮನ್ನು ಉಳಿಸಿದ್ದು ದೇವರ ತಪ್ಪು ಅಂತ ಅನ್ನೋದರಲ್ಲಿ ಏನರ್ಥ ಇದೆ ಮಾವ?'

'ಹುಂ! ಹೌದು. ಏನರ್ಥ ಇದೇಂತ ಕೇಳಿದೆಯಲ್ಲ? ಈ ಪ್ರಶ್ನೆ ನಿನಗೇ ಹೊಳೆದಿರಬೇಕಿತ್ತು' ಎಂದು ವ್ಯಂಗ್ಯವಾಗಿ ನಕ್ಕು ಹೇಳಿದರು.

'ನನಗ್ಯಾಕೆ ಹೊಳೀಬೇಕು?' ಎಂದಳು ಮುಗ್ಧವಾಗಿ.

'ಪಾರ್ವತಿ ಜೀವನ ಅನ್ನೋದು ಒಂದು ಹೂದೋಟ. ಬೇಕಾದಷ್ಟು ಹಸುರು ಗಿಡಗಳು, ಹೂ ಬಿಟ್ಟ ಗಿಡ ಮರಗಳು. ಕೆಲವು ಬೋಳು ಮರಗಳು – ಮತ್ತೆ ಕೆಲವು ಮೊಳೆವ ಚಿಗುರುಗಳು, ಹೂ ಗಿಡಗಳಲ್ಲಿ ಕೆಲವು ಅರಳಿದ ಹೂಗಳಾದರೆ ಮತ್ತೆ ಕೆಲವು ಅರಳಬೇಕಾದ ಹೂಗಳು. ಆದರೆ ಅರಳಿದ ಹೂಗಳು ಉಳಿದು ಕಾಯಿ ಮೊಗ್ಗುಗಳಳಿದರೆ ಅದು ಪ್ರಕೃತಿ ಧರ್ಮ ಅಂತ ಅನ್ನಿಸುತ್ತಾ? ಬಾಡುವುದಕ್ಕೆ ಅರಳಿದ ಹೂಗಳು, ಅರಳುವುದಕ್ಕೆ ನಿಂತ ಮೊಗ್ಗುಗಳು! ಯಾವುದು ಉಳಿಯಬೇಕು ನೀನೇ ಹೇಳು? – ಗಂಭೀರ ಸಮಸ್ಯೆಯನ್ನು ಒಡ್ಡುತ್ತಿರುವಂತೆನಿಸಿತು.

ಯೋಚಿಸಿದಳು ಪಾರ್ವತಿ – 'ಮೊಗ್ಗುಗಳು' ಎಂದು ಉತ್ತರಿಸಿದಳು.

'ಹೌದು ತಾನೇ? ಆದರೆ ನಿಜವಾಗಿ ಆದದ್ದು, ಆಗುತ್ತಿರುವುದು ನಮ್ಮಂಥ ಸಾರವಿಲ್ಲದ ಕೊರಡುಗಳು ಗತಿಸಿದ ವೈಭವದ ದಿನಗಳ ಅವಶೇಷಗಳಂತೆ ಉಳಿದಿರೋದು. ಪಾರ್ವತಿ ಇದು ನ್ಯಾಯಾಂತ ಒಪ್ತೀಯಾ? ನೆಲದಾಳದ ಕತ್ತಲಿನಿಂದ ಈಗ ತಾನೇ ಹೊರಚಾಚಿ ಹೊರಗಿನ ಗಾಳಿ ಬೆಳಕನ್ನು ಹೀರುವ ಮೊಳಕೆಗಳನ್ನು ಮುರುಟಿ ಹಾಕುವುದು ಯಾವ ದೇವರ ಪ್ರೀತಿ? – ಮಾತು ಮಾತಿನಲ್ಲಿ ರೋಷ – ಕಾವೇರುತ್ತಿತ್ತು.

ಪಾರ್ವತಿಗೆ ಹೆದರಿಕೆಯಾಯಿತು. ಮಾವನ ರೋಷಾವೇಶದ ಮಾತಿನ ಅರ್ಥವನ್ನು ಆಲೋಚಿಸುವುದಕ್ಕಿಂತ ಅವರಿಗೆ ದಣಿವಾಗದಂತೆ ನೋಡುವುದು ಮುಖ್ಯವೆನಿಸಿತು. ಮಾತನ್ನು ಮರಳಿಸಬೇಕು. ಅದಕ್ಕೇ–

'ಮಾವ, ನಿಮಗೆ ಮೂಲೆ ಮನೆಯ ಮಹದೇವ ಗೊತ್ತಾ?' ಎಂದು ಕೇಳಿದಳು.

'ಯಾರು, ಪಟ್ಟಣದಲ್ಲಿ ಓದ್ತೀನಂತ ಹೋಗಿದ್ದನಲ್ಲ ಅವನೇನಾ?'

'ಹುಂ! ಅವನೇ. ಯಾಕೆ? ಅವನ ವಿಚಾರ ಈಗ?'

'ಪಾಪ ಅವನ ಹೆಂಡತಿ ಅವನನ್ನು ಬಿಟ್ಟು ಓಡಿಹೋದಳಂತೆ.'

'ಹುಂ! ಹೋಗದೆ ಏನ್ಮಾಡ್ತಾಳೆ? ಇವನಿಗೆ ಸಂಪಾದಿಸಿದ್ದೆಲ್ಲಾ ಕುಡಿಯೋಕೆ ತಿನ್ನೋಕೆ ಸಾಕಾಗೊಲ್ಲ. ಅವಳೇನ್ಮಾಡ್ಬೇಕು. ಮೂರು ಜನ ಮಕ್ಕಳನ್ನು ಕಟ್ಕೊಂಡು? ಇವನ ಹತ್ತಿರ ತಲೆ ಚಚ್ಕೊಂಡು ಸಾಕಾಯ್ತು. ಸರಿ ಸಂಪಾದನೆಗೆ ಬೇರೆ ದಾರಿ ಕಂಡ್ಕೊಂಡ್ಳು'.

'ಆದರೆ ಮಕ್ಕಳ ಗತಿ?'

'ಏನ್ಮಾಡಿದ್ದಾಳೋ ಏನೋ? ತನ್ನ ಜೊತೆಗೆ ಕರ್ಕೊಂಡು ಹೋಗಿದ್ದಾಳೋ ಬಿಟ್ಟು ಹೋಗಿದ್ದಾಳೋ ಯಾರಿಗೆ ಗೊತ್ತು?'

'ಇಬ್ಬರು ಮಕ್ಳು ಇಲ್ಲೇ ಇದ್ದಾರಂತೆ. ಹೆಂಡತಿ ಮೇಲಿನ ಸಿಟ್ಟಿಗೆ ಅವುಗಳನ್ನು ಚೆನ್ನಾಗಿ ಹೊಡೆದು ಸಾಯಿಸ್ತಿದ್ನಂತೆ. ಮುನಿಯ ಬಿಡಿಸೋಕೆ ಹೋದರೆ, ಅವನು ಗರ್ಜಿಸ್ತಾ, ಮಧ್ಯೆ ಪ್ರವೇಶ ಮಾಡಿದರೆ ಚರ್ಮ ಸುಲೀತೀನಿ ಅಂದ್ನಂತೆ. ಹೆದರಿಕೊಂಡು ಮುನಿಯ ವಾಪಸು ಬಂದ್ನಂತೆ.'

ಚಂದ್ರಣ್ಣ ಬಂದವನೇ ಬಟ್ಟೆ ಬದಲಾಯಿಸಿದ. ಕೈಕಾಲು ತೊಳೆದುಕೊಂಡು ಊಟದ ಮನೆಗೆ ಬಂದು ಮಣೆಯ ಮೇಲೆ ಕುಳಿತುಕೊಂಡು,

'ಪಾರ್ವತಿ ನನಗೆ ಬೇಗ ಊಟ ಹಾಕು'–ಎಂದು ಆತುರಪಡಿಸಿದ. ಪಾರ್ವತಿ ಕಾರಣ ಕೇಳಲಿಲ್ಲ. ಮೊದಲು ಎಲೆ ಹಾಕಿ ಊಟ ಬಡಿಸಿದಳು. ಚಂದ್ರಣ್ಣ ಒಂದೆರಡು ತುತ್ತು ತಿಂದು ಹೆಂಡತಿಯ ಕಡೆ ನೋಡಿ ಹೇಳಿದ– 'ಇವತ್ತು ಅಡಿಗೆ ಚೆನ್ನಾಗಿದೆ. ಯಾರು ನೀನೇನಾ ಮಾಡಿದ್ದು? ಇಲ್ಲಾ ಅಮ್ಮನೋ? ಚಂದ್ರಣ್ಣ ಖುಷಿಯಾಗಿರುವಂತೆ ಕಂಡಿತು. ಪಾರ್ವತಿಗೂ ತಮಾಷೆ ಮಾಡಬೇಕೆನಿಸಿತು' ಇನ್ಯಾರು ಮಾಡ್ತಾರೆ. ಅತ್ತೆಯವರೇ ಮಾಡಿದ್ದು– ಎಂದಳು.

'ಅದಕ್ಕೇ ಇಷ್ಟು ರುಚಿಯಾಗಿದೆ. ಎಲ್ಲಿ ನಿನ್ನ ಕೈವಾಡವಿರುತ್ತೋ ಅಂತ ಭಯವಾಯ್ತು. ಸದ್ಯಕ್ಕೆ ಇಲ್ಲ. ಇಲ್ಲದಿದ್ದರೆ ಇವತ್ತೆಲ್ಲಾ ಬರೀ ಹೊಟ್ಟೇಲೆ ಇರಬೇಕಾಗ್ತಿತ್ತು.'

'ನೀವ್ಯಾಕೆ ಇರ್ತೀರ? ಹೊಲದ ಕಡೆ ಹೊರಟಿರ್ತೀರಿ. ಭತ್ತ, ಜೋಳ, ರಾಗಿ – ಎಲ್ಲ ಇರುತ್ತಲ್ಲಾ–ಮೇದು ಬರ್ತೀರಿ.

'ಪರವಾಗಿಲ್ಲ! ಪಾರ್ವತಿದೇವಿಯವರು ತುಂಬಾನೇ ಚೆನ್ನಾಗಿ ಮಾತಾಡ್ತಾರೆ.'

'ಮಾತು ಕಲಿಸಿದವರು ನೀವೇ ಅಲ್ವ? ಅದಿರ್ಲಿ ಇನ್ನೇನಾದರೂ ಬಡಿಸಬೇಕೇನು?' –ನಗುತ್ತಾ ಕೇಳಿದರು.

'ದೊಡ್ಡ ಮನಸು ಮಾಡಿ ಬಡಿಸಿದರೆ ಸಂತೋಷ. ಹೊಟ್ಟೆ ತುಂಬಾ ತಿಂದು, ಹರಸಿ ಹೋಗ್ತೇವೆ–ಎಂದು ಹೇಳಿದ ನಗುತ್ತಾ.

ಪಾರ್ವತಿ ಮತ್ತಷ್ಟು ಅನ್ನ, ತೊವ್ವೆ ಬಡಿಸಿದಳು. ಎಷ್ಟೋ ದಿವಸಗಳ ಮೇಲೆ ಚಂದ್ರಣ್ಣ ತೃಪ್ತಿಯಾಗಿ ಉಂಡ. ಅಲ್ಲಿಯೇ ಕೈ ತೊಳೆಯಲು ಪಾರ್ವತಿ ನೀರು ಕೊಟ್ಟಳು. ಚಂದ್ರಣ್ಣ ಕೈ ತೊಳೆದು ಹೆಗಲ ಮೇಲೆ ಹಾಕಿಕೊಂಡಿದ್ದ ಟವೆಲಿನಿಂದ ಕೈ ಒರೆಸಿಕೊಂಡ.

ಪಾರ್ವತಿ ಅವನನ್ನು ಅನುಸರಿಸಿದಳು. 'ಪಾರ್ವತಿ, ನಾನು ಸ್ವಲ್ಪ ಬೆಂಗಳೂರಿಗೆ ಹೋಗಿ ಬರ್ತೀನಿ. ಆದರೆ ರಾತ್ರಿಗೇ ಬರ್ತೀನಿ. ಇಲ್ಲವಾದರೆ ನಾಳೆ ಬರ್ತೀನಿ–ಎಂದು ಹೇಳುತ್ತಾ ತಲೆ ಬಾಚಿಕೊಂಡ–ಬಾಚಿಕೊಳ್ಳುತ್ತಿದ್ದಂತೆ ಏನೋ ನೆನಪಾದಂತಾಗಿ ಅಪ್ಪನ ವಿಚಾರ ಹೇಗೆ ಪಾರ್ವತಿ? ಇವತ್ತಾದರೂ ಏನಾದರೂ ತಿಂದರೋ ಹೇಗೆ? – ಎಂದ.

'ಗಂಭೀರವಾದ ಖಾಯಿಲೆ ಏನೂ ಇಲ್ಲ. ಆದರೆ ಮನಸ್ಸಿನಲ್ಲಿ ಏನನ್ನೋ ದೀರ್ಘವಾಗಿ ಆಲೋಚಿಸ್ತಿರೋ ಹಾಗಿದೆ ಇವತ್ತು ನೀವು ಬರೋಕೆ ಮುಂಚೆ ಅವರ ಜೊತೆ ಮಾತಾಡೋವಾಗ. ಅವರ ಮಾತಿನಲ್ಲಿ ಕೆಲವು ವಿಚಾರಗಳಲ್ಲಿ, ರೋಷಾವೇಶದಿಂದ ಇರೋ ಹಾಗೆ ಅನ್ನಿಸ್ತು. ಕಾಲಿನ ಊತ ಈಗಂತೂ ವಾಸಿಯಾಗಿದೆ. ಆದರೆ ಇನ್ನೂ ಸ್ವಲ್ಪ ದಿನ ಅದಕ್ಕೆ ಔಷಧಿ ಕೊಟ್ಟರೆ ವಾಸಿ.'

ಸರಿ, ನೀನು ಹೋಗಿ ಅವರನ್ನ ಏನಾದರೂ ಬೇಕಾ ಅಂತ ಕೇಳಿ ಬಾ. ಹಾಗೇನಾದರೂ ಬೇಕಿದ್ದರೆ, ಬರುವಾಗ ಅಲ್ಲಿಂದ ತೆಗೆದುಕೊಂಡು ಬರ್ತೀನಿ–ಎಂದು ಹೇಳಿದ.

ಪಾರ್ವತಿ, ಅತ್ತೆಮಾವರ ಬಳಿಗೆ ಹೋಗಿ ಕೇಳಿ ಬಂದಳು. ಅವರೇನೂ ಬೇಡವೆಂದರು.

ಚಂದ್ರಣ್ಣ ಪೂರ್ತಿ ರೆಡಿಯಾಗಿ ಕೈಯಲ್ಲೊಂದು ಚೀಲ ಹಿಡಿದು ಹೊರಟ.

ಪಾರ್ವತಿ ಅವನು ಹೋದ ದಾರಿಯನ್ನೇ ದಿಟ್ಟಿಸುತ್ತಾ ನಿಂತಳು.

* * *

ಆಳು ನಂಜನ ಜೊತೆಗೆ ರಾಜಪ್ಪ.......ಚಂದ್ರಣ್ಣನ ಮನೆಯ ಮುಂದೆ, ಗಾಡಿಯಿಂದಿಳಿದ. ಸಾವಿತ್ರಮ್ಮ ಕೃಷ್ಣಪ್ಪನ ಬಟ್ಟೆಗಳನ್ನು ಬದಲಾಯಿಸುತ್ತಿದ್ದಳು. ಪಾರ್ವತಿ ಮತ್ತೇನೋ ಕೆಲಸದಲ್ಲಿ ತೊಡಗಿದ್ದಳು. ನಂಜ ಸಾಮಾನುಗಳನ್ನೆಲ್ಲ ತೆಗೆದುಕೊಂಡು

ಮೊದಲು ಒಳಗೆ ನಡೆದ. ಪಾರ್ವತವ್ವ-ಪಾರ್ವತವ್ವ-ಎಂದು ಕರೆದ. ಸಾವಿತ್ರಮ್ಮ ನೋಡಿದಳು. ಆದರೆ ಆಕೆಗೆ ಗುರುತು ಹತ್ತಲಿಲ್ಲ. ಪಾರ್ವತಿಯ ಕಡೆಯವರು ಯಾರೋ ಎಂದುಕೊಂಡು ಅವಳನ್ನು ಕೂಗಿ ಕರೆದಳು. ಪಾರ್ವತಿ ಬರುತ್ತಾ ಕೇಳಿದಳು -ಏನತ್ತೆ, ಕರೆದಿರಾ, ಏನಾದರೂ ಬೇಕಿತ್ತಾ' ಎಂದಳು.

'ಇಲ್ಲ ಪಾರ್ವತಿ. ನೋಡು ಯಾರೋ ಬಂದ ಹಾಗಿದೆ. ನನಗೆ ಗುರುತು ಹತ್ತಲಿಲ್ಲ' ಎಂದು ಹೇಳುವಷ್ಟರಲ್ಲಿ ರಾಜಪ್ಪ ಒಳಗೆ ಬಂದರು. ಪಾರ್ವತಿಗೆ ತಂದೆ ಬಂದದ್ದು ನೋಡಿ ಆಶ್ಚರ್ಯವಾಯಿತು.

'ಬನ್ನೀಪ್ಪಾ, ಒಂದು ಕಾಗದಾನೂ ಬರೀದೆ ಬಂದ್ಬಿಟ್ರಲ್ಲ! ಮನೆಯಲ್ಲಿ ಎಲ್ಲಾ ಚೆನ್ನಾಗಿದ್ದಾರೆಯೇ? ಅಮ್ಮನನ್ನು ಕರೆತರಬಾರದಿತ್ತೇ? ಪಾಪ ಒಬ್ಬರೇ ಇದ್ದು ಬೇಸರವಾಗುತ್ತೆ. ಈ ಮನೇಗೆ ಬಂದು ಬೇರೆ ಎಷ್ಟೋ ದಿನವಾಯ್ತು-ಎಂದಳು.

'ಅವ್ವಾ ನೀವು ತುಂಬಾ ಸಣ್ಣಕ್ಕಾಗ್ಬಿಟ್ಟದ್ದೀರಿ. ನಿಮ್ಮ ಅವ್ವ ನೋಡಿದರೆ ಎಷ್ಟು ನೊಂದ್ಕೊಳ್ತಾರೋ ಏನೋ' – ಎಂದು ಮಧ್ಯೆ ಬಾಯಿ ಹಾಕಿದ.

'ಹೋಗೋ ನಂಜ. ನಿನಗೆ ಯಾವಾಗಲೂ ಹಾಗೆ. ಅದೆಲ್ಲಾ ಸರಿ. ನಿನ್ನ ಹೆಂಡ್ತಿ, ಮಗು ಚೆನ್ನಾಗಿದ್ದಾರೆಯೇ?' – ಎಂದಳು.

'ಹೆಂಡ್ತಿಗೇನು ಬಿಡೀವ್ವ, ಮಜಬೂತಾಗಿದಾಳೆ. ಚೆನ್ನಾಗಿ ಸಂಪಾದನೆ ಮಾಡ್ತಾಳೆ. ಮಗೂನೂ ಚೆನ್ನಾಗಿದೆ. ಮಗೂನ ನಮ್ಮಮ್ಮನ ತಾವ ಬಿಟ್ಟು ಬಂದಿಬಿಟ್ಟೆ' – ಎಂದ ಕಿಸಿಯುತ್ತಾ.

ಯಾಕೋ? ಇಬ್ಬರೇ ಇರ್ಬೇಕೂಂತ್ಲೇನು? ಈಗೇನು ನಿನ್ನ ಹೆಂಡ್ತಿ ಷೋಕಿಗೀಕಿ ಮಾಡೋದು ಬಿಟ್ಬಿಟ್ಳ?

'ಹೂಂನವ್ವ. ಜನ ಎಲ್ಲಾ ಬೈದರು. ಸೂಳೆ ಹಾಂಗೆ ಷೋಕಿ ಮಾಡಿದರೆ ಸಂಸಾರ ಹಾಳಾಗುತ್ತೇಂತ. ಏನೋ ಧರ್ಮಕ್ಕೆ ಬೇಗನೆ ತಿಳ್ಕಂಡು ಈಗ ಸರಿಯಾಗವ್ಳೆ. ಇಬ್ಬರೂ ಕೆಲಸಕ್ಕೆ ಓಯ್ತೀವಿ. ಸುಖವಾಗಿದ್ದೀವಿ. ನಿಮ್ಮನ್ನ ಊರಿಗೆ ಕರ್ಕಂಬಾಂತಾ ಅವಳೂ ಏಳವ್ಳೆ ಕಣವ್ವಾ – ಬತ್ತೀರಲ್ಲಾ?' ಎಂದ.

ಇನ್ನು ಈ ನಂಜನ ಮಾತಿಗೆ ನಿಂತರೆ ಇವತ್ತೆಲ್ಲಾ ಮುಗಿಯೋಲ್ಲ. ಸರಿ ನಂಜ ಕೈಕಾಲು ತೊಳ್ಕೊಂಡ್ಬಾ. ತಿಂಡಿ ಕಾಫಿ ತಗೊಳ್ಳಿವಿಯಂತೆ. ಎಂದ ಮಾತಿಗೆ, ನಂಜ ಕೂಡಲೇ ವಿಧೇಯನಂತೆ, 'ಆಗಲಿ ಕಣವ್ವಾ' ಎಂದು ಹೊರಟ. ಪಾರ್ವತಿ ತಂದೆಯನ್ನು ಎಬ್ಬಿಸಿದಳು. ರಾಜಪ್ಪ – ಚಂದ್ರಣ್ಣ, ಎಲ್ಲಿ ಕಾಣ್ತಿಲ್ವಲ್ಲ ಪಾರ್ವತಿ? ಊರಲ್ಲಿದ್ದಾರೇನು? ಎಂದು ಕೇಳಿದರು.

'ಇದ್ದಾರಪ್ಪಾ, ಇವತ್ತು ಬೆಳಿಗ್ಗೇನೇ ಬಂದರು. ನೆನ್ನೆ ಸ್ವಲ್ಪ ಬೆಂಗಳೂರು ಕಡೆ ಕೆಲಸದ ಮೇಲೆ ಹೋಗಿದ್ದರು. ಈಗ ಇಲ್ಲೇ ಮಂಜಯ್ಯನವರ ಮನೆಗೆ ಹೋಗಿದ್ದಾರೆ.

ಅವರ ಸ್ನೇಹಿತರು ಯಾರೋ ಬಂದಿದ್ದಾರಂತೆ ನೋಡಿ ಮಾತಾಡಿಸ್ಕೊಂಡು ಬರ್ತೀನೀ ಅಂದ್ರು, ನೀವೇಳಿ, ಎದ್ದು ಸ್ನಾನ ಗೀನ ಮಾಡಿ ತಿಂಡಿ ತೊಗೊಳ್ಳಿ. ಈಗಲೇ ಬಸವನ ಕೈಲಿ ಅವರಿಗೆ ಹೇಳಿ ಕಳಿಸ್ತೀನಿ' – ಎಂದಳು.

ನಿಧಾನವಾಗೇ ಬರಲಿ ಬಿಡು. ಅಂಥಾ ಅವಸರದ ಕೆಲಸವೇನೂ ಇಲ್ಲ. ಸ್ನೇಹಿತರನ್ನು ಮಾತಾಡಿಸ್ತಿರಬೇಕಾದರೆ ಮಧ್ಯೆ ಹೇಳಿ ಕಳಿಸೋದು ಬೇಡ – ಎಂದರು.

ಸಾವಿತ್ರಮ್ಮ ಬೀಗರು ಬಂದ ಕೂಡಲೇ ಅವರ ಯೋಗಕ್ಷೇಮ ವಿಚಾರಿಸಿ ಅಡುಗೆ ಮನೆಗೆ ನುಗ್ಗಿದ್ದರು. ಕೃಷ್ಣಪ್ಪನವರು ಆಗ ತಾನೇ ಕಣ್ಣು ಹಚ್ಚಿದ್ದರು. ರಾಜಪ್ಪನವರು ಮಾತಾಡಿಸಬೇಕೆಂದಾಗ ಪಾರ್ವತಿಯೇ ತಡೆದು – ಈಗ ನಿದ್ದೆಗಿಳಿದ ಹಾಗಿದೆ. ನೀವು ಸ್ನಾನ ಪಾನ ಮುಗಿಸಿ ಬಂದು ಮಾತಾಡಿಸಿ. ಅಷ್ಟರಲ್ಲಿ ಸ್ವಲ್ಪ ನಿದ್ದೆಯಾಗಿರುತ್ತೆ – ಎಂದು ಹೇಳಿದ್ದಕ್ಕೆ ರಾಜಪ್ಪ ಆಗಬಹುದೆಂದರು.

ರಾಜಪ್ಪನವರು ಸ್ನಾನ ಮಾಡಿ ಬರುವಷ್ಟು ಹೊತ್ತಿಗೆ ಸಾವಿತ್ರಮ್ಮ ಕಾಯಿತುರಿ ಹಾಕಿ ಚಟ್ನಿ ಮಾಡಿ ದೋಸೆಗಳನ್ನು ಹುಯ್ಯುತ್ತಿದ್ದರು. ತುಪ್ಪದ ವಾಸನೆ ಅಂಗಳದವರೆಗೂ ಹರಡಿತ್ತು. ಪಾರ್ವತಿ ಕಾಫಿಗೆ ಡಿಕಾಕ್ಷನ್ ಹಾಕಿದಳು.

'ಪಾರ್ವತಿ, ತಿಂಡಿಯೆಲ್ಲಾ ಸಿದ್ಧವಾಗಿದೆ. ನೀನು ತೆಗೆದುಕೊಂಡು ಹೋಗಿ ಕೊಟ್ಟು ಬಾ. ದೇವರ ಮನೇಲೇ ಕೂತ್ಕೊಳ್ಳೋ ಹಾಗಿದ್ರೆ ಅಲ್ಲೇ ಬಡಿಸಿಬಿಡು. ಪಾಪ ತುಂಬಾ ಹೊತ್ತಾಗಿದೆ. ಎಷ್ಟು ಹೊತ್ತಿಗೆ ತಿಂದದ್ದೋ ಏನೋ' – ಎಂದರು ಸಾವಿತ್ರಮ್ಮ.

ಪಾರ್ವತಿ ಸರ ಸರನೆ ಮಣೆ ಹಾಕಿ, ಎಲೆ ಬಡಿಸಿ ಒಂದು ಚೊಂಬು ನೀರನ್ನು, ಲೋಟವನ್ನು ಮುಂದಿಟ್ಟಳು. ಬನ್ನೀಪ್ಪ, ಬಡಿಸಿದ್ದೀನಿ – ಎಂದಳು ಒಳಗಿನಿಂದಲೇ.

ರಾಜಪ್ಪನವರು ಹೋಗಿ ಕುಳಿತರು. ದೋಸೆ ತಿನ್ನುತ್ತಿದ್ದ ಹಾಗೇ, ರಾಜಪ್ಪ ನಂಜನಿಗೂ ಬಡಿಸಿದ್ದರೆ? ಎಂದು ಹೇಳಿದರು. ಈಗಲೇ ಬಡಿಸ್ತೀನಪ್ಪ ನಿಮಗೆ ಬಡಿಸ್ಬಿಟ್ಟು ಹೋಗೋಣಾಂದುಕೊಂಡೆ, ಎಂದಳು.

ರಾಜಪ್ಪ ಕೊನೆಯ ದೋಸೆ ತಿನ್ನುವಾಗ, ಪಾರ್ವತಿ ಎಲೆಯಲ್ಲಿ ದೋಸೆ, ಬಾಳೆಹಲ್ವ, ಚಟ್ನಿ – ಎಲ್ಲ ಇಟ್ಟುಕೊಂಡು ಹೊರಗೆ ಬಂದು ನಂಜನನ್ನ ಕರೆದಳು. ನಂಜನಿಗೆ ತುಂಬಾ ಹಸಿದಿತ್ತೆಂದು ಕಾಣುತ್ತೆ. ಪಾರ್ವತಿಯ ದನಿ ಕೇಳಿದ್ದೇ ಓಡಿ ಬಂದ. ತಗೋ ನಂಜ ತಿನ್ನು. ಇನ್ನೂ ತಂದುಕೊಡ್ತೀನಿ....ಎಂದಳು. ಕೇಳ್ತೀನಿ ಬಿಡ್ರವ್ವ ಬೇಕಾದರೆ – ಎಂದುತ್ತರಿಸಿದ ನಂಜ.

ಇಬ್ಬರದೂ ತಿಂಡಿ ಕಾಫಿಗಳಾದವು. ಹಾಲಿನಲ್ಲಿ ಬಂದು ಕೂತರು. ರಾಜಪ್ಪ ತಾನು ಬಂದ ಕೆಲಸವನ್ನು ಹೇಳುವುದಕ್ಕೆ ಅವಕಾಶ ಕಾಯುತ್ತಿದ್ದ. ಬಂದ ಕೂಡಲೇ ಹೇಳಿದರ ಪಾರ್ವತಿಗೆ ಬೇಜಾರಾಗುತ್ತೇಂತ ಸುಮ್ಮನಿದ್ದ. ಪಾರ್ವತಿಯನ್ನು ಕರೆದು ತಂದಿದ್ದ ಕಾಯಿಪಲ್ಲೆ, ತಿಂಡಿಗಳನ್ನು ಒಳಗಿಡಲು ಹೇಳಿದ. ಪಾರ್ವತಿ ಬಂದು

ತೆಗೆದುಕೊಂಡು ಹೋಗಿ ಒಳಗಿಟ್ಟಳು. ಒಂದೈದು ನಿಮಿಷಗಳಾದ ಬಳಿಕ ರಾಜಪ್ಪ ಪಾರ್ವತಿಯನ್ನು ಕರೆದು ಕುಳಿತುಕೊಳ್ಳುವಂತೆ ಹೇಳಿದ. ಪಾರ್ವತಿಗೆ ಇದೆಲ್ಲಾ, 'ಅಪ್ಪ ಯಾವುದೋ ವಿಚಾರ ತಿಳಿಸುವುದಕ್ಕೆ ಸಿದ್ಧತೆ' ಎಂದುಕೊಂಡಳು.

'ಪಾರ್ವತಿ, ನೀನು ಈಗ ನಂಜೊತೆ ಹೊರಡಬೇಕು' ಎಂದರು ರಾಜಪ್ಪ.

'ಯಾಕಪ್ಪಾ ಈಗ. ನಾನಲ್ಲಿಗೆ ಬಂದರೆ ಮನೇಲಿ ಅತ್ತೆ-ಮಾವನಿಗೆ ತುಂಬಾ ತೊಂದರೆಯಾಗುತ್ತೆ.'

'ನಂಗೊತ್ತು ಪಾರ್ವತಿ. ಆದರೆ ಅಮ್ಮ ನಿನ್ನನ್ನು ನೋಡಲೇಬೇಕಂತ ಹಟ ಹಿಡಿದಿದ್ದಾಳೆ.'

'ಅಮ್ಮನನ್ನೇ ಕರೆದು ತರಬಹುದಾಗಿತ್ತಲ್ಲಪ್ಪ ಒಂದು ದಿನದಲ್ಲಿ ಏನಾಗಿ ಹೋಗುತ್ತಿತ್ತು ಹೇಳು? ಯಾವಾಗಲೂ ಮನೆ ಮನೇಂತಲೇ ಆಗಿ ಹೋಯಿತು.'

'ನಿಮ್ಮಮ್ಮ ಬರುವಷ್ಟು ಸ್ಥಿತೀಲಿ ಇಲ್ಲ ಪಾರ್ವತಿ – ಎಂದರು ದುಃಖ ತುಂಬಿದ ದನಿಯಲ್ಲಿ.'

'ಯಾಕಪ್ಪಾ ಏನಾಗಿದೆ ಅಮ್ಮನಿಗೆ? ಒಂದು ಕಾಗದಾನಾದರೂ ಬರೀಬಾರದಾಗಿತ್ತೇನಪ್ಪ' ಸಿಟ್ಟಿನಿಂದ ನುಡಿದಳು.

'ನಿಜಾಮ್ಮ ಬರೀಬೇಕಾಗಿತ್ತು. ಆದರೆ ಪುರಸೊತ್ತೇ ಆಗೊಲ್ಲ. ನಮ್ಮಂಥವರ ಬಾಳು ಯಾತಕ್ಕೆ ಪಾರ್ವತಿ? ಕೈಗೆ ಬಂದ ಮಕ್ಕಳೇ ಇಲ್ಲದೇ ಹೋದಾಗ ಯಾರು ತಾನೇ ನಮಗಾಗುತ್ತಾರೆ. ನಿನ್ನ ದೊಡ್ಡಪ್ಪ ಆಗಲೇ ನಮ್ಮ ಆಸ್ತಿ ಮೇಲೆ ಹದ್ದುಗಣ್ಣು ಹಾಕಿದ್ದಾನೆ. ನಿನಗೇ ಗೊತ್ತಲ್ಲ ಅವರ ಸ್ವಭಾವ. ಮೊದಲಿನಿಂದ ನನ್ನ ಮಗ ದೇಶಾಂತರ ಹೋದ. ನನ್ನ ಕರ್ಮ' ಅಂತ ಅಂದುಕೊಂಡು ಅವರ ಇಬ್ಬರು ಮಕ್ಕಳನ್ನು ಸಾಕಿದೆ. ಆದರೆ ಅವನು ಕಳಿಸಿದ್ದು ಆಸ್ತಿ ಅವರಿಗಾಗುತ್ತೇನೋ ಅನ್ನೋ ದೃಷ್ಟಿಯಿಂದಲೇ! ಈಗ ರೆಕ್ಕೆ ಬಲೀತು. ಅವರ ಇಷ್ಟ ಬಂದ ಹಾಗೇ ವರ್ತಿಸ್ತಾರೆ ಬಾಯಿಹಾಕ್ತಾರೆ ಆ ಮಕ್ಕಳೂನು.

'ರಾಜಾ, ಕಿಟ್ಟನಿಗೆ ಏನಾಗಿದೆಯಂತೆ. ಯಾವ ರೀತೀಲೂ ಕಡಿಮೆ ಮಾಡಿಲ್ವಲ್ಲ? ಮೊದಲು ಚೆನ್ನಾಗೇ ಇದ್ರಲ್ಲಪ್ಪ?'

ಚೆನ್ನಾಗೇ ಇರ್ತಾರೆ ಮೊದಲಲ್ಲಿ. ವಯಸ್ಸಾಗ್ತಾ ಆಗ್ತಾ ಹೇಳೋವ್ರ ಮಾತು ಕೇಳೋದು ಜಾಸ್ತಿ ಆಗುತ್ತೆ. ವಯಸ್ಸಾಗಿರೋರು ನಮಗೆ ಸಹಾಯಕ್ಕೆ ಬರ್ತಾರೆ ಅನ್ನೋ ನಿರೀಕ್ಷೆ ತಪ್ಪಾಯ್ತು. ರಜಕ್ಕೆ ಅವರ ತಂದೆ ಹತ್ರ ಹೋಗ್ತಾರೆ. ಬರ್ತಿದ್ದ ಹಾಗೆ ಕುಲಗೆಟ್ಟವರ ರೀತೀಲಿ ಆಡ್ತಾರೆ. ಕೈ ತುಂಬಾ ಕಾಸುಕೊಟ್ಟು ಹಾಸ್ಟೆಲಿನಲ್ಲಿಟ್ಟು ಓದಿಸಿದ್ದಕ್ಕೆ ಸಾರ್ಥಕವಾಯ್ತಮ್ಮ. ನಿಮ್ಮಕ್ಕನ ಮನೆಗೆ ಹೋಗಿಬನ್ರೋ ಎಂದರೆ ನಮಗೆ ಯಾರು ಅಕ್ಕ? ಯಾರು ಹೋಗ್ತಾರೆ ಆ ಕೊಂಪೆಗೆ ಅಂತ ಮೊನ್ನೆ ಅಂದು ಬಿಟ್ರು. ಸಾವಿತ್ರಿಗೆ ಆ ಮಾತು ಕೇಳಿ ವಿಷಕುಡಿದ ಹಾಗಾಯ್ತು. ಇವರದೇ ಅವಳಿಗೆ ಚಿಂತೆ!

ನಮ್ಮ 'ಗೋಪಿ' ವಿಚಾರ ಏನಾದ್ರೂ ತಿಳೀತೇನಪ್ಪ? ಅವನಿಗೆ ನಮ್ಮ ಕಷ್ಟ ತಿಳಿದ್ರೆ ಖಂಡಿತಾ ಬರಬಹುದೂಂತ ಅನ್ಸುತ್ತೆ.

'ಅದೆಲ್ಲಾ ಭ್ರಾಂತು. ಚಿಕ್ಕಂದಿನಲ್ಲೇ ಅವನು ನಮ್ಮ ಕೈ ತಪ್ಪಿ ಹೋದ. ನಮ್ಮ ಪಾಲಿಗೆ ಅವನು ಸತ್ತಂತೆಯೇ. ಸ್ವಂತ ಮಗನೇ ನಮಗೆ ಇಲ್ಲ – ಅಂದ ಮೇಲೆ ಅವರಿಬ್ಬರಿಂದ ಏನಪೇಕ್ಷಿಸೋಣ ಹೇಳು? ಅವನ ವಿಚಾರವಾಗಿ ನೋವಿಲ್ಲ. ಮನೆ ಬಿಟ್ಟು ಓಡಿದಾಗ ಹತ್ತು ವರ್ಷ ಹುಡುಕಿ ಹುಡುಕಿ ಸಾಕಾಯ್ತು ಅವನ ಯೋಚ್ನೇನೇ ಬಿಟ್ಟು ಬಿಟ್ಟೆ' – ಎಂದರು ನಿರ್ವೇಗದಿಂದ. ಈಗ ಹದಿನೈದು ವರ್ಷಗಳೇ ಆಗಿ ಹೋಗಿವೆ. ದೊಡ್ಡ ಗಂಡಸಾಗಿರಬಹುದು ಇಲ್ಲವೇ ಸತ್ತಿರಬಹುದು. ಅವನ ಸುಳಿವು ಸಿಕ್ಕಿದರೆ ತಾನೇ? –ಮಾತು ಮುಂದುವರೆಸಿದರು.

'ನಮ್ಮ ಅದೃಷ್ಟ ಚೆನ್ನಾಗಿದ್ದರೆ ಅವನು ಮತ್ತೆ ಬಂದರೂ ಬರಬಹುದು' – ಭರವಸೆಯ ಧ್ವನಿಯಲ್ಲಿ ಹೇಳಿದರಳು.

'ಇನ್ನೂ ಬರುತ್ತಾನೇಂತ ಆಸೆ ಇಟ್ಕೊಳ್ಳೋದು ತಪ್ಪು. ಒಂದು ವೇಳೆ ಬಂದರೂ ಪರಸ್ಪರ ಗುರುತೇ ಹತ್ತದಿರಬಹುದು. ಇವರಿಬ್ಬರ ರೀತಿಯಿಂದ ನಿಮ್ಮಮ್ಮನಿಗೆ ಕಳೆದ ಮಗನ ಯೋಚನೆ ಬಂದಿಬಿಟ್ಟಿದೆ. ಸಾಲದ್ದಕ್ಕೆ ಮುಟ್ಟಿನ ಖಾಯಿಲೆ ಬೇರೆ' – ನೊಂದು ನುಡಿದರು.

'ಇಷ್ಟೆಲ್ಲಾ ಆದ್ರೂ ನನಗೆ ಒಂದು ಮಾತು ಹೇಳಿ ಕಳಿಸೋಕೆ ನಿಮಗೆ ಆಗಲಿಲ್ಲವೇನಪ್ಪ? ನನ್ನನ್ನು ನಿಮ್ಮ ಪಾಲಿಗೆ ಸತ್ತಂತೆ ತಿಳಿದು ಬಿಟ್ರಾ?'

'ಛೆ! ಬಿಡ್ತು ಅನ್ನು ಸಂಜೆ ವೇಳೆ ಕೆಟ್ಟ ಮಾತು ಆಡಬೇಡ.'

'ಮತ್ತೇನಪ್ಪ. ನೀವು ಮಾಡಿದ್ದು ಸರಿಯಾ ಹೇಳಿ?' – ಎಂದು ಎತ್ತರಿಸಿದ ಧ್ವನಿಯಲ್ಲಿ ಕೇಳಿದಳು.

ಚಂದ್ರಣ್ಣ ಪ್ರವೇಶಿಸುತ್ತಲೇ ಇದೇನು, ಬರ್ತಿದ್ದ ಹಾಗೆ ತಂದೆ ಮಗಳು ನಡುವೆ ಇಷ್ಟೊಂದು ಬಿಸಿ ಚರ್ಚೆ – ಎಂದು ನಗುತ್ತಾ ಕೇಳಲು ಅಲ್ಲಿಯವರೆಗೂ ಇಬ್ಬರ ನಡುವೆ ಕವಿದಿದ್ದ ಗಂಭೀರ ವಾತಾವರಣ ಸಡಿಲಿತು.

ಚಂದ್ರಣ್ಣನಿಗೂ ಮಾವ ಸುದ್ದಿ ತಿಳಿಸದೆ ಬಂದ್ರಲ್ಲಾ ಅನ್ನೋದರಲ್ಲಿ ಆಶ್ಚರ್ಯ. ಆದರೆ ಅದನ್ನು ವ್ಯಕ್ತಪಡಿಸಲಿಲ್ಲ. ಮೇಲೆ ನಗು ತಂದುಕೊಳ್ಳುತ್ತಾ.

'ಇಷ್ಟು ದಿವಸದ ಮೇಲೆ ಮಗಳು ಅಳಿಯನ ಮೇಲೆ ಗಮನ ಹರೀತಲ್ಲ'......

.........'ಬಂದು ಎಷ್ಟು ಹೊತ್ತಾಯಿತು ಮಾವ' – ಎಂದ.

– 'ನಾಲ್ಕೈದು ಗಂಟೆಗಳ ಮೇಲೇ ಆಗಿದೆ. ಬಂದದ್ದೇ ಕಂಠ ಪೂರ್ತಿ ತಿನ್ನಿಸಿಬಿಟ್ಟಳು ನಿಮ್ಮ ಮಡದಿ. ಭುಕ್ತಾಯಾಸ! ಹೀಗೇ ಕುಂತು ಮಾತು ಪ್ರಾರಂಭಿಸಿದೆವು. ಅಷ್ಟರಲ್ಲಿ ನೀವು ಬಂದಿರಿ.

'ಅಲ್ಲ ಪಾರ್ವತಿ ಇವರು ಬಂದ ಕೂಡಲೇ ನನಗೆ ಹೇಳಿ ಕಳಿಸಬಾರದಿತ್ತೇ? – ಎಂದು ಆಕ್ಷೇಪಿಸಿದ.

'ನಾನೇನೋ ಹೇಳಿ ಕಳಿಸ್ತೀನಂದೆ'–ಎಂದು ಹೇಳುತ್ತಿರುವಷ್ಟರಲ್ಲೇ ರಾಜಪ್ಪ ಮಧ್ಯೆ ಪ್ರವೇಶಿಸಿ.

'ಹೌದು ಪಾರ್ವತಿಯೇನೋ ನಿಮಗೆ ತಿಳಿಸಹೇಳ್ತೀನಿ ಅಂದಳು. ಆದರೆ ನಾನೇ ಬೇಡ ಸುಮ್ಮನೆ ಸ್ನೇಹಿತರ ಜೊತೆ ಇರುವಾಗ ತೊಂದರೆ ಯಾಕೇಂತ ತಡೆದೆ. ಏನಾಯ್ತು ಬಿಡಿ ಈಗ?' – ಎಂದರು ಸಮಾಧಾನವಾಗಿ.

'ಅತ್ತೆಯವರನ್ನು ಕರೆತರಲಿಲ್ಲವೇಕೆ ಮಾವ? – ಎಂದು ಕೇಳಿದ ಚಂದ್ರಣ್ಣ.

'ನಿಮ್ಮ ಅತ್ತೆಗೆ ಮೈ ಹುಷಾರಿಲ್ಲಪ್ಪ. ನಿಮ್ಮಿಬ್ಬರ್ರೂ ನೋಡಬೇಕಂತ ಆಸೆ ಪಡ್ತಿದ್ದಾಳೆ. ನೀವಿಬ್ಬರೂ ನಂಜೊತೆಗೆ ಒಂದೆರಡು ದಿವಸದ ಮಟ್ಟಿಗಾದರೂ ಬನ್ನಿ' ಎಂದು ಕರೆದರು ರಾಜಪ್ಪ.

'ಕೂಡಲೇ ಚಂದ್ರಣ್ಣನಿಗೆ ಮಾವನ ಆಹ್ವಾನವನ್ನು ಮನ್ನಿಸುವುದು ಸಾಧ್ಯವಿರಲಿಲ್ಲ. ಆದರೆ ಅತ್ತೆಗೆ ಮೈ ಹುಷಾರಿಲ್ಲವೆಂದು ಹೇಳಿದ ಮೇಲೂ ಹೋಗದಿದ್ದರೆ ಚೆನ್ನಾಗಿರುವುದಿಲ್ಲ ಎಂದುಕೊಂಡ.

'ಮಾವ ಈಗ ಸದ್ಯಕ್ಕೆ ನಿಮ್ಮ ಜೊತೆಗೇ ಇಬ್ಬರೂ ಬರಲು ಸಾಧ್ಯವಿಲ್ಲ. ನೀವು ಬೇಕಾದರೆ ಪಾರ್ವತೀನ ಕರೆದುಕೊಂಡು ಹೋಗಿ. ನಾನು ಇನ್ನೊಂದೆರಡು ದಿನ ಬಿಟ್ಟು, ಇಲ್ಲಿ ಏನಾದರೂ ವ್ಯವಸ್ಥೆ ಮಾಡಿ ಬರ್ತೀನಿ' – ಎಂದ.

ಸರಿ, ರಾಜಪ್ಪನವರಿಗೆ ಅಷ್ಟಾದರೆ ಸಾಕಾಗಿತ್ತು 'ಹಾಗಾದರೆ ಹೊರಡಲು ಸಿದ್ಧಳಾಗು ಪಾರ್ವತಿ' ಎಂದದ್ದಕ್ಕೆ, ಪಾರ್ವತಿ – ನಮ್ಮ ಅತ್ತೆಯನ್ನು ಕೇಳಿ ಹೇಳ್ತೀನಪ್ಪ. ಅವರೊಬ್ಬರ ಕೈಲಿ ಮಾವನನ್ನು ಸುಧಾರಿಸುವುದು ಅಡಿಗೆ ಮಾಡುವುದು ಎರಡೂ ಸಾಧ್ಯವಾಗಲಾರದು. ಅವರನ್ನೇ ಕೇಳ್ತೀನಿ – ಇದಕ್ಕೇನಾದರೂ ವ್ಯವಸ್ಥೆ ಮಾಡಿ ಬರ್ತೀನಿ ಅಂದಳು.

ಪಾರ್ವತಿಗೆ ಒಳಗೆ ಕೆಲಸವಿತ್ತು. ಗಂಡ ಬಂದದ್ದರಿಂದ, ತಂದೆಗೆ ಮಾತನಾಡಲು ಜೊತೆ ಸಿಕ್ಕಿತೆಂದು ಅಲ್ಲಿಂದೆದ್ದಳು. ಪಾರ್ವತಿಗೂ ಮನಸ್ಸಿನಲ್ಲಿ ತವರಿಗೆ ಹೋಗಬೇಕೆಂದೇ ಇತ್ತು. ಆದರೆ ಇಲ್ಲಿನ ಪರಿಸ್ಥಿತಿಯನ್ನು ನೋಡಿಯೂ ಹೋಗುತ್ತೇನೆಂದು ಹೇಳುವುದು ಉಚಿತವಲ್ಲ ಎನಿಸಿತ್ತು. ಆದರೆ ಈಗ ಅಮ್ಮನಿಗೆ ಮೈ ಹುಷಾರಿಲ್ಲವೆಂದು ಕೇಳಿದಾಗಿನಿಂದ ಪಾರ್ವತಿಗೆ ಕ್ಷಣಕ್ಷಣಕ್ಕೂ ತಾಯಿಯನ್ನು ನೋಡಬೇಕೆಂಬ ಕಾತುರ ಹೆಚ್ಚಾಯಿತು.

ಸಾವಿತ್ರಮ್ಮ ವಿಷಯ ತಿಳಿದು, ಪಾರ್ವತಿಯನ್ನು ಹೋಗಿ ಬಾ ಎಂದರು. ನೀನೇನೂ ಚಿಂತೆ ಮಾಡಬೇಡ. ನನಗೇನೂ ಆಗಿಲ್ಲ. ನಾನು ಗಟ್ಟಿ ಮುಟ್ಟಾಗಿರೋದ್ರಿಂದ, ಅಂಥ ತೊಂದ್ರೆಯೇನೂ ಆಗೊಲ್ಲ. ನಿಮ್ಮ ಮಾವನ್ನು ನೋಡಿಕೊಂಡು ಕೆಲಸ ಮಾಡೋದು ನನಗೇನೂ ಕಷ್ಟವಾಗೊಲ್ಲ. ನೀ ಮೊದಲು ಹೋಗಿ ನಿಮ್ಮ ತಾಯಿಯನ್ನು

ನೋಡಿ ಬಾ. ಪಾಪ ಆಕೆ ಹೃದಯದಲ್ಲಿ ನಿನಗಾಗಿ ಎಷ್ಟು ಹಂಬಲವಿದೆಯೋ ಏನೋ? ಹಾಗೇ ಚಂದ್ರಣ್ಣನನ್ನು ಕರೆದುಕೊಂಡು ಹೋಗು–ಎಂದಳು.

'ಅವರು ಎರಡು ಮೂರು ದಿನಗಳ ನಂತರ ಬರ್ತಾರಂತೆ ಅತ್ತೆ. ಈಗ ನಾನು ನಮ್ಮ ತಂದೆ ಜೊತೆಗೇ ಹೋಗಬೇಕಂತೆ'–

ಸರಿ, ಹೇಗೋ ಬರಲಿ......ನಾನು ನಿಮ್ಮ ತಾಯಿಯನ್ನು ಕೇಳಿದೇಂತ ಹೇಳು. ಸಾಧ್ಯವಾಗುವ ಹಾಗಿದ್ದರೆ ನಾನು ನೋಡಿ ಬರಬಹುದಿತ್ತು. ಆದರೆ ನಿಮ್ಮ ಮಾವನನ್ನು ಗಳಿಗೆಯೂ ಬಿಟ್ಟಿರಲು ಸಾಧ್ಯವಿಲ್ಲ ಎಂದಳು.

ಎಲ್ಲರೂ ಹೋಗಿ ಬರಲು ಹೇಳಿದ ಮೇಲೆ ಇನ್ನು ಪಾರ್ವತಿಗೆ ಯಾವ ಅಭ್ಯಂತರವೂ ಇರಲಿಲ್ಲ. ಆ ದಿನ ರಾತ್ರಿಯೆಲ್ಲಾ ಪ್ರಯಾಣದ ಸಿದ್ಧತೆಗಳೇ ಆದವು. ತಾಯಿಗಾಗಿ ಒಂದು ಬುಟ್ಟಿ ಹಣ್ಣುಗಳನ್ನು ತರಿಸಿ ಇರಿಸಿದಳು. ರಾಜಪ್ಪ ಬೇಡಬೇಡವೆಂದರೂ ಕೇಳಲಿಲ್ಲ ಪಾರ್ವತಿ.

ಮಾರನೇ ದಿನವೇ ಪ್ರಯಾಣ. ಒಂದು ದಿನ ನಿಲ್ಲುವುದೂ ರಾಜಪ್ಪನಿಗೆ ಸಾಧ್ಯವಿರಲಿಲ್ಲ. ಪಕ್ಕದ ಮನೆಯ ರಂಗಮ್ಮನವರನ್ನು ಬರುವವರೆಗೆ ಹೆಂಡತಿಯ ಜೊತೆಗಿರುವಂತೆ ಹೇಳಿ ಬಂದಿದ್ದರು. ಅದಕ್ಕಾಗಿ ಕೂಡಲೇ ಹೊರಡಬೇಕಿತ್ತು.

ತವರಿಗೆ ಹೊರಡುತ್ತಿರುವ ಸಂತೋಷ ಪಾರ್ವತಿಯನ್ನು ತಬ್ಬಿತ್ತು. ಉತ್ಸಾಹದಿಂದಲೇ ಬೆಳಗಿನ ಕೆಲಸಗಳನ್ನೆಲ್ಲಾ ಮುಗಿಸಿದಳು. ತಿಂಡಿ ತೀರ್ಥ ಆದ ಮೇಲೆ ಹೊರಡುವಾಗ ಅತ್ತೆ ಮಾವ ಗಂಡನಿಗೆ ನಮಸ್ಕರಿಸಿದಳು. ಕರಿಯ, ರಂಗ ಎಲ್ಲರಿಗೂ ಹೋಗಿ ಬರುತ್ತೇನೆಂದು ಹೇಳಿದಳು. ಮನೆಯ ಕಡೆ ಜಾಗ್ರತೆ ವಹಿಸಬೇಕೆಂದು ಪದೇ ಪದೇ ನೆನಪಿಸಿದಳು. ಚಂದ್ರಣ್ಣನಿಗೆ ನಗು ತಡೆಯಲಾಗುತ್ತಿಲ್ಲ. 'ನೀನು ಹೊರಡು ಮಹರಾಯಿತಿ. ನಾವೆಲ್ಲಾ ಸುರಕ್ಷಿತವಾಗಿ ನೋಡಿಕೊಳ್ತೀವಿ' ಎಂದು ಆತುರ ಪಡಿಸಿದ.

ಅಂತೂ ಕೊನೆಗೆ ಮನೆ ಹೊಸ್ತಿಲು ದಾಟಿದಳು. ಗಾಡಿ ಸಿದ್ಧವಾಗಿತ್ತು. ರಾಜಪ್ಪ ಹೋಗಿ ಬರುತ್ತೇನೆಂದು ತಿಳಿಸಿ ಮಗಳೊಂದಿಗೆ ಗಾಡಿ ಹತ್ತಿದ. ನಂಜನೂ ಅನುಸರಿಸಿದ. ಗಾಡಿಯ ಮುಂಭಾಗದಲ್ಲಿ ಹತ್ತಿ ಕುಳಿತ.

ಗಾಡಿ ಹೊರಟಿತು. ಚಂದ್ರಣ್ಣ ಕಾಲು ನಡಿಗೆಯಲ್ಲಿ ಒಂದಷ್ಟು ದೂರ ಹೋಗಿ ಬಂದ.

* * *

ಸೀತಮ್ಮನ ನರಳಾಟ ಜಾಸ್ತಿಯಾಗಿತ್ತು. ರಂಗಮ್ಮನಿಗೆ ದಿಕ್ಕೇ ತೋಚದಂತಾಗಿತ್ತು. ರಾಜಪ್ಪನ ದೂರದ ನೆಂಟರು, ಪಕ್ಕದ ಬೀದಿಯಲ್ಲಿದ್ದರು. ರಂಗಮ್ಮ ಅವರ ಮನೆಗೆ ಹೋಗಿ ಗಂಡಸರನ್ನು ಕರೆತಂದಳು. ಸೀತಮ್ಮನಿಗೆ ಇಷ್ಟು ಕಾಯಿಲೆ ಇರುವಾಗ ರಾಜಪ್ಪ ಮನೆಬಿಟ್ಟು ಹೋಗಬಾರದಾಗಿತ್ತೆಂದುಕೊಂಡರು. ಸೀತಮ್ಮ ಗಂಡನನ್ನು

ಮಗಳನ್ನು ಪದೇ ಪದೇ ಸ್ಮರಿಸಿಕೊಳ್ಳತೊಡಗಿದ್ದರು. ಬಂದವರೆಲ್ಲಾ ಸೀತಮ್ಮನಿಗೆ ಸಮಾಧಾನ ಹೇಳಿದರು. ಈಗಲೇ ಬಂದುಬಿಡುತ್ತಾರೆ ಸೀತಕ್ಕ. ಸುಮ್ಮನೆ ಮಲಗಿ. ರಾಜಪ್ಪಣ್ಣ ಖಂಡಿತ ಒಂದು ಗಳಿಗೆ ಹೆಚ್ಚಿಗೆ ನಿಲ್ಲೊಲ್ಲ. ನೀವು ಪಾರ್ವತೀನ ನೋಡಬೇಕೆಂದದ್ದಕ್ಕೆ ಕರೆತರಲು ಹೋಗಿದ್ದಾರೆ. ಇಷ್ಟು ಹೊತ್ತಿಗೆ ಬರ್ತಿದ್ರೂ ಇರಬಹುದು – ಎಂದು ರಂಗಮ್ಮ ಸಮಾಧಾನ ಹೇಳಿದಳು.

ಇಲ್ಲ ರಂಗವ್ವ ನಂಗೇನೂ ಭಯವಾಗ್ತಿದೆ. ಕಣ್ಣುಕತ್ತಲೆ ಬರ್ತಾ ಇದೆ. ನನ್ನ ಕಣ್ಮುಂದೆ ನನ್ನ ಮಗಳೂ ಇಲ್ಲ, ಮಗನೂ ಇಲ್ಲ. ಸಾಕಿದವರೂ ಇಲ್ಲ. ಅವರೆಲ್ಲಾ ಬರೋಕೆ ಮುಂಚೇನೇ ನನಗೇನಾದ್ರೂ ಆಗ್ಬಿಟ್ರೇಂತ ಭಯವಾಗ್ತಾ ಇದೆ – ಎಂದಳು ಕಂಪಿಸುವ ದನಿಯಲ್ಲಿ.

ಅಲ್ಲಿದ್ದ ಒಂದಿಬ್ಬರು ಗಂಡಸರು ಹೊರಗೆ ಹೋಗಿ ರಾಜಪ್ಪನ ಬರವಿಗಾಗಿ ಎದುರು ನೋಡುತ್ತಿದ್ದರು. ದೂರದಿಂದ ಗಾಡಿ ಬರುವ ಶಬ್ದ ಕೇಳಿಸಿತು ಸ್ವಲ್ಪ ಹೊತ್ತಿಗೆ ಗಾಡಿಯೂ ಕಾಣಿಸಿತು. 'ರಾಜಪ್ಪ ಬರುತ್ತಿದ್ದಾರೆ' ಎಂದು ಆತುರದಿಂದ ಹೇಳಿದರು. 'ನೋಡಿದೆಯಾ ಸೀತಕ್ಕ. ನಾನು ಹೇಳಿದ ಮಾತು ಸರೀತಾನೇ. ಈಗ ರಾಜಪ್ಪಣ್ಣ ಬರ್ತಾ ಇದ್ದಾರಂತೆ – ಎಂದಳು ರಂಗಮ್ಮ ಆಸಕ್ತಿಯಿಂದ.

'ನನ್ನ ಪಾರ್ವತಿ?' – ಪ್ರಶ್ನಿಸಿದಳು ಕ್ಷೀಣ ಧ್ವನಿಯಲ್ಲಿ.

'ಅವಳೂ ಬರ್ತಿದ್ದಾಳಂತೆ.' ನೆಮ್ಮದಿಯಿಂದ ಇರು ಸೀತಕ್ಕ ಇನ್ನಾದರೂ.

'ಇನ್ನೇನು ನೆಮ್ಮದಿ ಬಿಡು ರಂಗವ್ವ, ಎಲ್ಲಾ ಮುಗೀತು. ಕ್ಷಣ ಎಣಿಸ್ತಿದೆ ಜೀವ' – ಎಂದಳು, ನೊಂದ ಧ್ವನಿಯಲ್ಲಿ.

ಅಷ್ಟರಲ್ಲಿ ಗಾಡಿ ಬಂದೇ ಬಂತು. ರಾಜಪ್ಪ, ಹಿಂದಿನಿಂದ ಪಾರ್ವತಿ ಇಳಿದರು. ಮನೆಯೊಳಗೆ ಪ್ರವೇಶಿಸುತ್ತಿದ್ದಂತೆ, ತನ್ನ ನೆಂಟರೂ ಅಲ್ಲಿರುವುದು ನೋಡಿ ರಾಜಪ್ಪನಿಗೆ ಭಯ – ಆಶ್ಚರ್ಯ ಒಮ್ಮೆಗೇ ಉಂಟಾಯಿತು. ಗಡಿಬಿಡಿಯಿಂದ ಬಂದ ರಂಗಮ್ಮ– ರಾಜಪ್ಪಣ್ಣ, ಸೀತಕ್ಕ ಒಂದೇ ಸಮನೆ ನಿಮ್ಮನ್ನು ವಿಚಾರಸ್ತಿದ್ಲು. ರಾತ್ರಿಯೆಲ್ಲಾ ತುಂಬಾ ಸಂಕಟ ಪಡ್ತಿದ್ರು. ಬೇಗ ಆಸ್ಪತ್ರೆಗೆ ಸೇರಿಸೋದು ಒಳ್ಳೇದು – ಎಂದಳು.

ಅವಳ ಮಾತನ್ನೂ ಸರಿಯಾಗಿ ಕೇಳಿಸಿಕೊಳ್ಳದೆ ರಾಜಪ್ಪ, ಒಳಗೆ ನಡೆದ. 'ಸೀತ, ಸೀತ' ಇಗೋ ಬಂದ್ಬಿಟ್ಟೆ. ಪಾರ್ವತೀನೂ ಬಂದಿದ್ದಾಳೆ. ನೋಡು ಸ್ವಲ್ಪ – ಎಂದರು.

ಸೀತ ದಣಿವಿನಿಂದ ಕಣ್ಣು ಬಿಟ್ಟಳು. ರಾಜಪ್ಪ ಪಾರ್ವತಿಯರನ್ನು ನೋಡಿ ಮುಖ ಗೆಲುವಾಯಿತು.

ಬಂದೆಯಾ ಪಾರ್ವತಿ! ನೀನು ಬರ್ತೀಯೋ ಇಲ್ವೋ ಅಂತಿದ್ದೆ. ಹೇಗಿದ್ದೀಯಮ್ಮಾ?..... ಬಹಳ ಸೊರಗಿದ ಹಾಗಿದೆಯಲ್ಲ – ಎಂದರು ಮೆಲ್ಲನೆ.

ಪಾರ್ವತಿ ತಾಯಿಯ ಹಾಸಿಗೆಯ ಬಳಿಗೆ ಸರಿದಳು. ಪಕ್ಕದಲ್ಲಿ ಕುಳಿತು ತಾಯಿಯ ತಲೆ ನೇವರಿಸಿದಳು – ನನಗೇನಾಗಿದೆಯಮ್ಮ. ಚೆನ್ನಾಗೇ ಇದ್ದೀನಿ ನಾನು. ನೀನ್ಯಾಕೆ ಹೀಗೆ ಮಲಗಿಬಿಟ್ಟೆ?' ಕಾತುರದಿಂದ ಕೇಳಿದಳು.

ಯಾಕೇಂದ್ರೆ?.....ಅದು ನನ್ನ ಕರ್ಮ! ಪಾರ್ವತಿ ಜೀವನಾ ಎಷ್ಟು ಭಯಂಕರ ಅಲ್ವ? ಈ ನೋವು ನರಳಾಟಕ್ಕೇನಾ ನಾವೆಲ್ಲಾ ಹುಟ್ಟೋದು? ಯಾರನ್ನಾದರೂ ಭಯಂಕರ ಕಷ್ಟವಿಲ್ಲದೆ ಇಟ್ಟಿದ್ದಾನೆಯೇ?

'ಅದೆಲ್ಲಾ ಈಗ್ಯಾಕೆ ಯೋಚ್ನೆ ಮಾಡ್ತೀಯ? ಸುಮ್ಮನೆ ವಿಶ್ರಾಂತಿ ತಗೋ – ಎಂದಳು.

'ಹೌದು ಪಾರ್ವತಿ. ದೇಹ ತುಂಬಾ ದಣಿದಿದೆ. ಮನಸ್ಸು ಪೂರ್ತಿ ಬೆಂದಿದೆ. ಇನ್ನು ತಡೆಯೋಕೆ ಆಗೊಲ್ಲ. ಪೂರ್ತಿ ವಿಶ್ರಾಂತಿ ತಗೊಂಡ್ಬಿಡ್ತೀನಿ ಪಾರ್ವತಿ.

'ಥೂ! ಬಿಡ್ತು ಅನ್ನು. ಅಂಥಾ ಮಾತೆಲ್ಲಾ ಆಡಬೇಡ.'

'ನೀನು ಏನು ಹೇಳಿದರೂ ಆಗುವಂಥಾದ್ದು ಆಗದೆ ಇರುತ್ತದೆಯೇ? ಪಟ್ಟಣದ ಡಾಕ್ಟರು ಹೇಳಿದ್ದು ನನಗೆ ಅರ್ಥವಾಯ್ತು. ಅವರಂದಂತೆ ನನ್ನ ದಿನ ಮುಗೀತಾ ಬಂತು. ನಾನು ಹೋಗೊಲ್ಲಾಂದ್ರೆ, ನನ್ನನ್ನು ಉಳಿಸಿಕೊಳ್ಳೋವ್ರು ಯಾರು? – ಪೂರ್ತಿ ನಿರಾಸೆ ತುಂಬಿತ್ತು ಆ ಮಾತಿನಲ್ಲಿ.

'ಹೀಗೆಲ್ಲಾ ಮಾತಾಡ್ತಾ ಇದ್ರೆ ನಾನು ಹೊರಟುಹೋಗ್ತೀನಿ. ನಂಗೆ ಅಪ್ಪ ಎಲ್ಲಾ ಹೇಳಿದ್ದಾರೆ. ನೀನು ಸುಮ್ಮನೆ ವಿಶ್ರಾಂತಿ ತಗೊಂಡ್ರೆ ಎಲ್ಲಾ ಸರಿ ಹೋಗುತ್ತೆ' – ಎಂದಳು.

'ಸರಿಯಮ್ಮ ನೀನು ಹೇಳಿದ ಹಾಗೆ ಕೇಳ್ತೀನಿ. ನೀನು ಹೋಗತೀನೀಂತ ಮಾತ್ರ ಹೇಳ್ಬೇಡ. ನನ್ನ ಮಗ ನನ್ನನ್ನು ಬಿಟ್ಟು ಹೋದ.' ನೀನು ಹೋದ್ರೆ.....ನನಗೆ ಬದುಕೋಕೆ ಸಾಧ್ಯ ಆಗೊಲ್ಲ. ಹೋಗು, ರಂಗವ್ವ ನೀರು ಕಾಸಿ, ಅಡಿಗೆ ಮಾಡಿಟ್ಟಿದ್ದಾಳೆ. ಮೊದಲು ಹೊಟ್ಟೆಪಾಡು ನೋಡ್ಕೊಂಡು ಬನ್ನಿ. ನನ್ನ ಸಾವು ಇದ್ದೇ ಇರುತ್ತೆ. ಯಾರಿಗೂ ನನ್ನಿಂದ ಸುಖವಿಲ್ಲ. ಪಾಪ, ಇಡೀ ರಾತ್ರಿ ರಂಗವ್ವ ಕಣ್ಣು ರೆಪ್ಪೆ ಹಚ್ಚಲಿಲ್ಲ – ಎಂದಳು ಮರುಕದಿಂದ. ತಾಯಿಯನ್ನು ಮಲಗಲು ಹೇಳಿ, ಸರಿಯಾಗಿ ಕಂಬಳಿ ಹೊದಿಸಿ ಪಾರ್ವತಿ ಮೇಲೆದ್ದಳು.

ಸ್ನಾನ, ಊಟದ ಹೊತ್ತಿನಲ್ಲೂ ಅವಳಿಗೆ ತಾಯಿಯ ಯೋಚನೆ. ತುಂಬು ಕಳೆಯಿಂದ ಕೂಡಿದ್ದ ತಾಯಿ ಎಲುಬಿನ ಗೂಡಾಗಿದ್ದಾರೆ. ಕಣ್ಣುಗಳು ಹೂತುಹೋಗಿವೆ ; ಮುಖದಲ್ಲಿನ ದೊಡ್ಡ ದೊಡ್ಡ ಕಮರಿಗಳಂತೆ ಕಾಣುತ್ತಿವೆ ಅವು! – ನೋಡಿದರೆ ಎದೆ 'ಜಲ್ಲೆನಿಸುತ್ತಿತ್ತು'. ಆ ತಾಯಿಯ ಹೃದಯ ನೋವು ನಂಜಿನ ಕೊಳವಾಗಿತ್ತು. ಇಷ್ಟು ಕಾಲವೂ ಅನ್ಯೋನ್ಯವಾಗಿ ಬಾಳಿ ಬದುಕಿದರು ಇವರಿಬ್ಬರೂ! ತೀರಾ ಬಡತನದಲ್ಲಿ

ಹುಟ್ಟಿ ಅದೃಷ್ಟವಶಾತ್ ಸುಮಾರು ಸ್ಥಿತಿವಂತನಾಗಿದ್ದ ರಾಜಪ್ಪನವರ ಕೈ ಹಿಡಿದಿದ್ದರು. ರಾಜಪ್ಪನ ತಂದೆಗೆ ಶ್ರೀಮಂತ ಕುಟುಂಬದ ಹೆಣ್ಣನ್ನು ತಂದುಕೊಳ್ಳಬೇಕೆಂದು ಆಸೆ. ಆದರೆ ರಾಜಪ್ಪ ಸೀತಮ್ಮನ ಮುಖದಲ್ಲಿದ್ದ ಗಂಭೀರ ಸೌಂದರ್ಯಕ್ಕೆ ಮಾರುಹೋಗಿ, ಅವಳ ಗುಣವಂತಿಕೆಗೆ ಸೋತು ಅವಳನ್ನೇ ಮದುವೆಯಾಗುವುದಾಗಿ ಹಟ ಹಿಡಿದರು. ರಾಜಪ್ಪನ ನಿರ್ಧಾರ ತಂದೆಯ ಹಟಕ್ಕೆ ಸೋಲಲಿಲ್ಲ. ಹೆದರಲಿಲ್ಲ. ಹೆಚ್ಚು ಕಷ್ಟವಿಲ್ಲದೆ ಸೀತಮ್ಮನ ತಂದೆ ತಾಯಿಗಳು, ಮದುವೆಯನ್ನು ಸರಳವಾಗಿ ಗುಡಿಯೊಂದರಲ್ಲಿ ಮಾಡಿಕೊಟ್ಟರು.

ನೆಂಟರಿಷ್ಟರಾಗಲೀ, ತಂದೆ ತಾಯಿಯಾಗಲೀ ಮದುವೆಗೆ ಬರಲಿಲ್ಲ. ರಾಜಪ್ಪ ಹೆದರಲಿಲ್ಲ. ಬದುಕುವುದಕ್ಕೆ ತಾಕತ್ತಿದೆಯೆಂದು ತೋರಿಸುವ ಹಟದಿಂದ ಸ್ವಲ್ಪ ಹೆಚ್ಚು ಶ್ರಮಿಸಿದರು. ಮೊದಲು ಕೆಲವು ವರ್ಷ ತಂದೆ ತಾಯಿ ಬಂದು ಹೋಗುತ್ತಿರಲಿಲ್ಲ ಇವರ ಮನೆಗೆ. ತಂದೆಯೇನೋ ಹಟದಿಂದಲೇ ಇದ್ದರು. ಆದರೆ ತಾಯಿಯ ಹೃದಯ ಕೇಳಬೇಕಲ್ಲ. ಗಂಡನ ಕಾಲು ಹಿಡಿದರು. ಬೇಡಿ ಅಂಗಲಾಚಿದರು. ಅದಕ್ಕೇ ಒಂದೇ ಒಂದು ಬಾರಿ ನೋಡಿಬರಲು ಅನುಮತಿಯಿತ್ತರು.

ರಾಜಪ್ಪ ತಂದೆ ಇರುವ ಕಡೆ ಇರಲೇಬಾರದೆಂದು ತೀರ್ಮಾನಿಸಿ ಈ ಗ್ರಾಮದಲ್ಲಿ ಬಂದು ನೆಲೆಸಿದರು. ಕಷ್ಟಪಟ್ಟು ದುಡಿದು ಒಂದಷ್ಟು ಕಾಸು ಮಾಡಿಕೊಂಡರು. ಸ್ವಲ್ಪ ನೆಲ ಕೊಂಡು ವ್ಯವಸಾಯ ಮಾಡಿಸಿದರು. ಅದೃಷ್ಟ ಚೆನ್ನಾಗಿತ್ತು. ಒಳ್ಳೇ ಬೆಳೆ ಬಂತು. ದಿನದಿನಕ್ಕೆ ವೃದ್ಧಿಯನ್ನು ಕಂಡರು. ಮನೆ ಮಠ ಆಸ್ತಿಗಳನ್ನು ಮಾಡಿಕೊಂಡರು. ಬೇಡವೆಂದು ದೂರವಿಟ್ಟವರೆಲ್ಲಾ ಬರತೊಡಗಿದರು. ತಂದೆ ಮಾತ್ರ ಕೊನೆಗಳಿಗೆವರೆಗೂ ಬರಲಿಲ್ಲ. ಪಾರ್ವತಿ-ಗೋಪಿ ಇಬ್ಬರೇ ಮಕ್ಕಳು. ಮಕ್ಕಳು ಮನೆ ಮಠ ಆಸ್ತಿ ಹಣ ಯಾವುದಕ್ಕೂ ಕೊರತೆಯಿಲ್ಲದೆ ಬದುಕಿದರು. ಸೀತಮ್ಮನಿಗೆ ಇಷ್ಟಾದರೂ ಒಂದು ಚೂರು ಹೆಮ್ಮೆಯಿಲ್ಲ. ತನ್ನ ಬಡತನದ ಬದುಕಿನ ನೆನಪೇ ಅವಳ ಅಹಂಕಾರದ ತಡೆಯಂತೆ ಇತ್ತು.

ಚಿಕ್ಕಂದಿನಿಂದಲೇ ಹಟಮಾರಿಯಾಗಿದ್ದ ಗೋಪಿ, ತಂದೆ ಬೈದರು ಅನ್ನೋ ಕ್ಷುಲ್ಲಕ ಕಾರಣಕ್ಕಾಗಿ ಹೇಳದೆ ಕೇಳದೆ ಮನೆ ಬಿಟ್ಟು ಹೊರಟು ಹೋದ. ಆಟಕ್ಕೆಂದು ಹೋದವನು ಮತ್ತೆ ಮರಳೇ ಇಲ್ಲ. ಅವರು ಹುಡುಕಿಸುವುದಕ್ಕಾಗಿ ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು. ಮಗ ಕಣ್ಮರೆಯಾದಂದಿನಿಂದ ಸೀತಮ್ಮನ ರೀತಿಯೇ ಬದಲಾಯಿತು. ಅವನ ನೆನಪು ಅವಳೆದೆಯಲ್ಲಿ ಕೀಳಲಾಗದ ಮುಳ್ಳಾಗಿ ನಿಂತಿತು. ಎಷ್ಟೋ ಕಾಲದ ಮೇಲೆ ಅವನನ್ನೂ ಪಾರ್ವತಿಯಲ್ಲಿ ಕಂಡು ಮರೆಯಲು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಿಲ್ಲವಾಯಿತು. ಗಂಡ ಬೈದದ್ದಕ್ಕೆ ಮರೆತಂತೆ ನಟಿಸಿದಳು. ರಾಜಪ್ಪನ ಅಣ್ಣನ ಮಕ್ಕಳಿಬ್ಬರನ್ನು ತಂದಿರಿಸಿಕೊಂಡರು.

ಪಾರ್ವತಿಗೆ ಮದುವೆಯಾಗಿ ಹೋದ ಮೇಲೆ, ಮನೆಯಲ್ಲಿನ ಶೂನ್ಯತೆ ರಾಜ, ಕಿಟ್ಟರಿಂದ ದೂರವಾಗುತ್ತೆ ಎಂದು ಭಾವಿಸಿದಳು. ಆ ಇಬ್ಬರು ಮಕ್ಕಳೂ ಓದಲು ಬೆಂಗಳೂರಿಗೆ ಹೋದಾಗ, ಭೀಕರ ಒಂಟಿತನ ಅವಳನ್ನು ಜರ್ಝರಗೊಳಿಸಿತು. ಸಾಲದ್ದಕ್ಕೆ ಸ್ವಂತ ಗಂಡನ ಅಣ್ಣನಿಂದಲೇ ಕಿರುಕುಳ ಪ್ರಾರಂಭವಾಯಿತು. ತಂದೆಯ ಕಿವಿ ತುಂಬಿ ಆಸ್ತಿ ಗಂಡನಿಗೆ ಬರದಂತೆ ಮಾಡಿದ್ದ. ಆಗಲೂ ಗಂಡ ರೇಗಾಡಿದರೂ, ಕೋರ್ಟಿನಲ್ಲಿ ಕೇಸು ಹಾಕಿ ನನ್ನ ಪಾಲು ಹಂಚಿಕೊಳ್ಳುತ್ತೇನೆಂದು ಹೇಳಿದಾಗಲೂ ಸೀತಮ್ಮ ಅಡ್ಡ ಬಂದು ಸಮಾಧಾನ ಹೇಳಿದರು. ಇರುವ ಆಸ್ತಿಯೇ ಸಾಕಾಗಿರುವಾಗ, 'ಇನ್ನೂ ನಮಗೇಕೆ ಆಸ್ತಿಯ ಚಿಂತೆ' ಎಂದು ಗಂಡನ ಆವೇಶವನ್ನು ವಿರಮಿಸಿದ್ದಳು. ಆ ಇಬ್ಬರೂ ಮಕ್ಕಳೂ ತಂದೆ ತಾಯಿಗಳ ಮಾತು ಕೇಳಿ ಬೈಯ್ಯುವುದೂ, ತಮ್ಮ ವಿಚಾರವಾಗಿ ಇಲ್ಲಸಲ್ಲದ ದೂರು ಹೇಳುವುದೂ ಮೊದಲಾದಾಗ, ಸೀತಮ್ಮನಿಗೆ ಸಾಯಬೇಕೆನಿಸಿತು.

ಸಹನೆ, ಶಾಂತಿಗಳ ತವರಾಗಿದ್ದ ತಾಯಿಯ ಕಥೆ ಸುರುಳಿ ಬಿಚ್ಚಿಕೊಂಡಿತು. ಕಣ್ಣು ಹನಿಸಿದಾಗ ಬೆರಳಿಂದ ಹನಿಯನ್ನು ತೊಡೆದು ಹಾಕಿದಳು. ಇವರ ಆಸರೆ ತಪ್ಪಿದರೆ ತಾನು ಖಂಡಿತವಾಗಿಯೂ ತಬ್ಬಲಿಯೇ ಆಗುತ್ತೇನೆಂದುಕೊಂಡು ಹೆದರಿದಳು. ಎಲ್ಲೆಂದರೆ ಅಲ್ಲಿ ಯೋಚನೆಯಲ್ಲಿ ನಿಲ್ಲುತ್ತಿದ್ದ ಪಾರ್ವತಿಗೆ, ರಂಗವ್ವ ತಾನು ಇನ್ನು ಬರುತ್ತೇನೆಂದು ಹೇಳುತ್ತಿದ್ದುದು ಕಿವಿಗೆ ಅಪ್ಪಳಿಸಿತು.

ರಂಗವ್ವನನ್ನು ಇರಿಸಿಕೊಂಡರೆ ಅನುಕೂಲ, ದೊಡ್ಡವರು, ತಿಳಿದವರು ಇದ್ದರೆ ಧೈರ್ಯ. ಅದಕ್ಕೆಂದೇ ಬಲವಂತವಾಗಿ ಅವರನ್ನು ಇರ ಹೇಳಿದಳು.

ಅಮ್ಮನಿಗೆ ಆಸ್ಪತ್ರೆ ಸೇರಲೇಬೇಕಾಗಿದೆ. ಬಂದಾಗ ಸುಮಾರಾಗಿ ಗೆಲುವಿನಿಂದಲೇ ಮಾತಾಡಿದವಳು, ಈಗ ಮತ್ತೆ ನೋವಿನಿಂದ ನರಳುತ್ತಿದ್ದಾಳೆ. ಅಪ್ಪನಿಗೆ ಹೇಳಲೇಬೇಕು ಬೆಂಗಳೂರಿನಲ್ಲಿ ಯಾವುದಾದರೂ ಒಳ್ಳೇ ನರ್ಸಿಂಗ್ ಹೋಂಗೆ ಸೇರಿಸಿದರೆ ಒಳಿತು– ಎಂದು ತೀರ್ಮಾನಿಸಿದಳು.

ಅಪ್ಪನನ್ನು ಕಂಡು ತನ್ನ ಅಭಿಪ್ರಾಯವನ್ನು ಹೇಳಿದಳು ಅವರೂ ಅದಕ್ಕೆ ಸಮ್ಮತಿಸಿದರು. ರಾಜಪ್ಪ ಈ ಮೊದಲು ಸೀತೆಯನ್ನು ಕರೆದೊಯ್ದಿದ್ದರು. ಬೆಂಗಳೂರಿಗೆ ಚಿಕಿತ್ಸೆಗಾಗಿ. ಈಗ ಪ್ರಾರಂಭದೆಶೆಯುಲ್ಲಿದೆಯೆಂದು ನಿರ್ಲಕ್ಷ್ಯ ವಾಡಿದರೆ ಅಪಾಯವಾದೀತೆಂದಿದ್ದರು. ಸೀತೆಗೆ ಈ ವಿಷಯ ತಿಳಿದಿರಲಿಲ್ಲ. ರಾಜಪ್ಪ ಮೂರು ನಾಲ್ಕು ಬಾರಿ ಅದರ ನಂತರ ಚಿಕಿತ್ಸೆಗಾಗಿ ಕರೆದೊಯ್ದಿದ್ದರು. ಹೊರಗೆ ಕುಳಿತಿದ್ದ ಸೀತೆಗೆ ಒಳಗೆ ಗಂಡ ಮತ್ತು ಡಾಕ್ಟರು ಗುಟ್ಟಾಗಿ ಮಾತಾಡಿಕೊಳ್ಳುತ್ತಿರುವುದನ್ನು ಗಮನಿಸಿದಳು. ವಾಸ್ತವವಾಗಿ ತನಗೇನು ಖಾಯಿಲೆಯೆಂದು ತಿಳಿದಿರಲಿಲ್ಲವಾದರೂ, ಯಾವುದೋ ಭಯಂಕರ ಖಾಯಿಲೆ ಇರಬೇಕೆಂದು ನಿರ್ಧರಿಸಿದಳು. ಅದರಿಂದ ಧೈರ್ಯಗೆಡಲಿಲ್ಲ. ತಾನು ಸೊರಗಿ ವ್ಯಥೆಪಡುವುದನ್ನು ಕಂಡರೆ ಗಂಡನಿಗೆ

ನೋವಾದೀತೆಂದು ಬಲವಂತವಾಗಿ ಗೆಲುವನ್ನು ರೂಢಿಸಿಕೊಂಡಳು. ಒಳಗೆ ಮನಸ್ಸು ಕುದಿಯುತ್ತಿದ್ದರೂ ಹೊರಗೆ ಏನೊಂದನ್ನೂ ತೋರಿಸಿಕೊಳ್ಳಲಿಲ್ಲ. ಪ್ರಶಾಂತವಾಗೇ ಮೇಲು ನೋಟಕ್ಕೆ ಕಾಣುತ್ತಿದ್ದಳು.

ಈಗ ಅವಳ ಖಾಯಿಲೆ. ವೈದ್ಯರು ಹೇಳಿದ್ದಂತೆ ತೀರಾ ಗಂಭೀರ ಸ್ಥಿತಿಗೆ ಬಂದಿದೆ. ಪರಿಣಾಮದ ಕಲ್ಪನೆಯೂ ರಾಜಪ್ಪನಿಗೆ ಇತ್ತು. ಆದರೂ ಸಾಯುವಾಗಲೂ ಮಿಣುಕು ಬದುಕಿನ ಆಸೆ ಹೊತ್ತಿ ಉರಿಯುವಂತೆ, ರಾಜಪ್ಪ ಹೆಂಡತಿಯನ್ನು ಮಾರನೆ ದಿನ ಬೆಳಗ್ಗೆ ಬೆಂಗಳೂರಿಗೆ ಕರೆದೊಯ್ದು, ಸೀತಮ್ಮ ಬರುವುದಿಲ್ಲವೆಂದು ಕೊಸರಾಡಿದರೂ, ಗಂಡ ಮಗಳು ಕಂಬನಿ ದುಂಬಿಕೊಂಡು ಬೇಡಿದಾಗ, ಇವರಾಸೆಗೇಕೆ ನಾನು ಅಡ್ಡಿ ಬರಲಿ, ನನ್ನ ತುದಿ ನನಗೆ ತಿಳಿದಿರೋವಾಗ ಇವರೆಂಥಾ ಮೂರ್ಖರು. ನಂದಿ ಕರಕಾದ ಬತ್ತಿಯನ್ನು ಹೊತ್ತಿಸಬಯಸುತ್ತಾರೆ' ಎಂದುಕೊಂಡಳು. ನೆಂಟ ರಾಘವನ ಕಾರನ್ನೇ ತೆಗೆದುಕೊಂಡು ಬೆಂಗಳೂರಿನತ್ತ ನಡೆದರು. ಪಾರ್ವತಿ ಬರುತ್ತೇನೆಂದರೂ ಮನೆಯ ಜವಾಬ್ದಾರಿ ಹೆಚ್ಚಿ ಅಲ್ಲಿಯೇ ಉಳಿಯುವಂತೆ ಮಾಡಿ ರಾಜಪ್ಪ, ಸೀತಮ್ಮ ಇಬ್ಬರೇ ಹೋದರು. ರಾಜು, ಕಿಟ್ಟರ ನೆನಪು ಬರದೇ ಇರಲಿಲ್ಲ. ಚಿಕ್ಕಮ್ಮನಿಗೆ ಖಾಯಿಲೆಯೆಂದು ತಿಳಿದಿದ್ದರೂ ಬರಲಾಗುವುದಿಲ್ಲವೆಂದು ಉತ್ತರಿಸಿದರು.

ತಾಯಿ ತಂದೆಗಾಗಿ ದಾರಿ ಕಾದಳು. ಊಟ ಮಾಡಲಿಲ್ಲ. ಒಂದು ಕ್ಷಣವೂ ಅವಳ ಮನಸ್ಸಿಗೆ ಸಮಾಧಾನವಿರಲಿಲ್ಲ. ಅಪ್ಪನಿಂದ ವಿಷಯ ತಿಳಿದಿತ್ತು. ತಾಯಿಯಿಲ್ಲದ ತಬ್ಬಲಿಯಾದರೆ.......ಇದೊಂದೇ ಪ್ರಶ್ನೆ ಅವಳನ್ನು ಕಾಡುತ್ತಿತ್ತು. ತಾಯಿಯಿಂದ ವಂಚಿತಳನ್ನಾಗಿ ಮಾಡಬೇಡವೆಂದು ದೇವರಿಗೆ ಕೈ ಮುಗಿದಳು. ಆದರೆ ಪ್ರತಿಯೊಬ್ಬರ ಪ್ರಾರ್ಥನೆಗೂ ಸ್ಪಂದಿಸಲಾರ. ಎಲ್ಲವೂ ನಮ್ಮಿಚ್ಛೆಯಂತೆ ನಡೆದರೆ ದೇವರು ಧರ್ಮಗಳ ಅಸ್ತಿತ್ವವೇ ಇರುವುದಿಲ್ಲ. ಆದರೂ ಮುಗ್ಧವಾದ ಮನಸ್ಸು ಮೂಲಭೂತ ಆಲೋಚನೆಗಳನ್ನು ಕಡೆಗಿರಿಸಿ ಕಾಣದ್ದಕ್ಕೆ ಕೈಮುಗಿದು ಸಾಂತ್ವನಗೊಳ್ಳುತ್ತದೆ.

ಮಾತಿನಂತೆ ಚಂದ್ರಣ್ಣ ಬಂದ. ಅವನು ಬಂದದ್ದು ಪಾರ್ವತಿಗೆ ಸ್ವಲ್ಪ ಧೈರ್ಯವೆನಿಸಿತು. ಆ ಕೂಡಲೇ ಅವನೊಂದಿಗೆ ತಾಯಿ ಬಳಿಗೆ ಹಾರಿಹೋಗೋಣವೆಂದು ಅವಳ ಮನಸ್ಸಿನ ಹಕ್ಕಿ ಫಡಪಡಿಸಿತು.

ಚಂದ್ರಣ್ಣನಿಗೆ ವಿಷಯ ತಿಳಿದು ನೊಂದುಕೊಂಡ. ಬೆಂಗಳೂರಿಗೆ ಹೋಗಿ ಅವರನ್ನು ಯಾವ ನರ್ಸಿಂಗ್ ಹೋಂನಲ್ಲಿದ್ದಾರೆಂದು ಹುಡುಕುವುದು? ಎಲ್ಲಿಯೂ ಸುಖ ಕಾಣುತ್ತಿಲ್ಲ. ಸದ್ಯಕ್ಕೆ ಹೋದವರು ಬದುಕಿ ಬಂದರೆ ಸಾಕು–ಎನಿಸಿತು ಚಂದ್ರಣ್ಣನ ಮನಸ್ಸಿಗೆ.

ಸಂಜೆ ಆರು ಘಂಟೆಗೆ ಕಾರು ಮರಳಿ ಬಂತು. ಆದರೆ ತಾಯಿ ಇಲ್ಲ. ತಂದೆ ಇಲ್ಲ. ತಮ್ಮನ್ನು ಕರೆತರಲು ಹೇಳಿ ಕಳಿಸಿದ್ದರಂತೆ. ಅರ್ಧ ಘಂಟೆಯಲ್ಲಿ ಪಾರ್ವತಿ,

ಚಂದ್ರಣ್ಣ ರೆಡಿಯಾದರು. ಮತ್ತೆ ರಂಗವ್ವನೇ ಶರಣು ಎಂದುಕೊಂಡು ಮನೆ ಜವಾಬ್ದಾರಿಯನ್ನು ಆಕೆಗೆ ವಹಿಸಲು, ಆ ಉದಾರ ಹೆಂಗಸು ಒಪ್ಪಿಕೊಂಡಳು.

ಕಾರು ವೇಗವಾಗಿ ಬೆಂಗಳೂರಿನತ್ತ ಹೊರಟಿತು.

ಇವರು ನರ್ಸಿಂಗ್ ಪ್ರವೇಶಿಸುತ್ತಿದ್ದಂತೆ ಜರ್ಝರಿತರಾದ ತಂದೆ ಎದುರು ಬಂದರು. ವಿಚಾರಿಸಿದರೆ, ಉತ್ತರ ಕೊಡದೆ ವಾರ್ಡಿನೊಳಗೆ ನಡೆದ ಇಬ್ಬರೂ ಇವರನ್ನು ಅನುಸರಿಸಿದರು. ಕಂಡದ್ದು ತಾಯಿಯ ಶವ! ಪಾರ್ವತಿ ಎಳೆ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತಳು. ಚಂದ್ರಣ್ಣ, ರಾಜಪ್ಪ ಬಲವಂತದಿಂದ ಅವಳನ್ನು ಹೊರಕ್ಕೆ ಎಳೆದು ತಂದರು. ಅಳಬೇಡ ಪಾರ್ವತಿ, ಅತ್ತರೆ ಅಮ್ಮನ ಆತ್ಮಕ್ಕೆ ದುಃಖವಾಗುತ್ತದೆ. ನಿನಗೇ ಗೊತ್ತಲ್ಲ, ಇನ್ನೊಬ್ಬರ ನೋವಿಗೆ ನರಳುತ್ತಾ, ತನ್ನದನ್ನು ಮರೆತು ನಗುತ್ತಾ ಇರುತ್ತಿದ್ದುದು.

ನಿನ್ನ, ನನ್ನ ಅಳು ಏನು ಬಂತು, ಪ್ರಪಂಚವೇ ಅತ್ತರೂ, ಅವಳು ಮರಳುವುದಿಲ್ಲ – ಎಂದು ಸಮಾಧಾನ ಹೇಳಿದರು. ಪಾರ್ವತಿಗೂ ಗೊತ್ತಾಯಿತು. ಅಪ್ಪನ ಸಮಾಧಾನದ ಮಾತು ತುಟಿಯಾಚೆಗಿನದು. ಹೆಪ್ಪುಗಟ್ಟಿದ ಅಳಲು. ಹೊರಗೆ ಹರಿಯುವುದಿಲ್ಲ; ಒಳಗೆ ಜಗ್ಗುತ್ತದೆ–ಎಂದು.

ರಾಜಪ್ಪ ಮಡದಿಯ ಶವವನ್ನು ಊರಿಗೆ ಹೊತ್ತು ತಂದ. ಊರಿಗೆ ಊರೇ ಮರುಗಿತು. ವೈಭವವಾಗಿ ಅಂತ್ಯಕ್ರಿಯೆ ನಡೆಸಿದ. ತಾವು ಉಳುವ, ಬೆಳೆವ ನೆಲದಲ್ಲಿಯೇ ಅವಳ ಸಮಾಧಿ ಮಾಡಿದ.

ಪಾರ್ವತಿ ತಂದೆಯನ್ನು ಬಿಟ್ಟು ತಕ್ಷಣ ಹೋಗುವಂತಿರಲಿಲ್ಲ. ಚಂದ್ರಣ್ಣ ನಿರೀಕ್ಷಿಸಿದ್ದಕ್ಕಿಂತ ಒಂದೆರಡು ದಿನಗಳು ಹೆಚ್ಚಾಗಿಯೇ ಉಳಿದ. ಮಾವನ ಕೆಲಸ ಕಾರ್ಯಗಳಲ್ಲಿ ಸಹಕರಿಸಿದ. ಆದರೆ ಅಲ್ಲಿನ ಪರಿಸ್ಥಿತಿಯೂ ಚೆನ್ನಾಗಿಲ್ಲದಿದ್ದ ಕಾರಣ ಚಂದ್ರಣ್ಣನಿಗೆ ಊರಿಗೆ ಹೋಗುವುದು ಅನಿವಾರ್ಯವಾಗಿತ್ತು. ತಮ್ಮಲ್ಲಿಯೇ ಬಂದು ಉಳಿಯಲು ಹೇಳಿದ ಚಂದ್ರಣ್ಣ. ಪಾರ್ವತಿಯೂ ತುಂಬಾ ಒತ್ತಾಯಿಸಿದಳು. 'ಒಬ್ಬರೇ ಇದ್ದು ಇಲ್ಲಿ ಮಾಡುವುದೇನಿರುತ್ತೆ. ನೀವೂ ನಮ್ಮೊಟ್ಟಿಗೆ ಇದ್ದು ಬಿಡಿ ಅಪ್ಪ – ಎಂದಳು. 'ಸೀತ ಬದುಕಿದ, ಬಾಳಿದ, ನಕ್ಕ, ನಶಿಸಿದ – ಈ ಮನೆಯನ್ನು ಬಿಟ್ಟು ಹೋಗುವುದುಂಟೇ ಪಾರ್ವತಿ? ಅವಳಿಲ್ಲಿಯೇ ಇರುತ್ತಾಳೆ, ನನಗಾಗಿ. ನನ್ನ ಬಿಟ್ಟು ಎಲ್ಲಿಗೆ ಹೋಗಲು ಸಾಧ್ಯ ಹೇಳು? ಅವಳೊಂದಿಗೆ ನಾನು ಈ ಮನೆಯಲ್ಲಿಯೇ ಜೀವನದ ಅನೇಕ ಅನುಭವಗಳನ್ನು ಪಡೆದದ್ದು. ಇಲ್ಲಿಯೇ ನಾನು ಸಾಯುತ್ತೇನೆ – ಎಂದು ಉದ್ದಕ್ಕೆ ಮಾತಾಡಿದರು. ಮಾತು ತೆಗೆದರೆ ಅಮ್ಮನ ನೆನಪಾಗುತ್ತದೆಂದು ಅಪರೂಪವಾಗಿಯೇ ತಂದೆಯ ಬಳಿ ಮಾತಾಡುತ್ತಿದ್ದಳು. ಅದೂ ಒಂದೊ, ಎರಡೋ ಮಾತು!

ಪಾರ್ವತಿ, ಎರಡು ತಿಂಗಳು ತಂದೆ ಮನೆಯಲ್ಲಿ ಉಳಿದಳು. ಮದುವೆಯಾದವಳು ಎಷ್ಟು ದಿವಸ ಉಳಿಯಲು ಸಾಧ್ಯ? ಮತ್ತೊಮ್ಮೆ ತಂದೆಯನ್ನು ಕರೆದಳು. ಅದೇ

ಉತ್ತರ. ಸರಿ, ಪಾರ್ವತಿ ಹೊರಡುತ್ತೇನೆಂದಾಗ, ರಾಜಪ್ಪ ಇರು' ಎನ್ನಲಿಲ್ಲ 'ಹೋಗು' ಎನ್ನಲಿಲ್ಲ. ನಂಜನನ್ನು ಜೊತೆಗೆ ಕರೆದುಕೊಂಡು ಪಾರ್ವತಿ ಊರಿಗೆ ಹೊರಟಳು.

ದಾರಿಯಲ್ಲಿ ಪಾರ್ವತಿ, ನಂಜನಿಗೆ, ತಂದೆಯನ್ನು ಚೆನ್ನಾಗಿ ನೋಡಿಕೊಂಡಿರು' ಎಂದು ಬುದ್ಧಿ ಹೇಳಿದಳು. ನಂಜನಿಗೂ ನೋವಾಗಿತ್ತು. ಏನೇ ಆಗ್ಲಿ, ಇವರಿಗೆ ಈ ಕಸ್ಟ ಕೊಡಬಾರದಾಗಿತ್ತು ದ್ಯಾವರು. ಒಳ್ಳೇ ಜನೀಕ್ಕೆ ಇಂಗೇ ಕಣವ್ವಾ....ನೀವೇನೂ ಯೋಚ್ನೆ ಮಾಡಿಕ್ಕೋಬ್ಯಾಡಿ ನಾನು ಆಯ್ಯಾವರ್ನ ಚೆಂದಾಗಿ ನೋಡ್ಕೋತೀನಿ. ನಮ್ಮಪ್ಪನಂಗೇ ಅಪ್ಪಾ ಅವ್ರೂನೂ – ಎಂದ.

ನಂಜನಿಗೆ ಇರುವ ಮನಸ್ಸು, ನಮ್ಮಲ್ಲಿ ತಿಂದು, ಉಂಡು, ಕೊಂಡು ಹೋದ ಜನರಿಗೆ ಇರಬಾರ್ದೆ? ಕೊನೆಗೆ ದೊಡ್ಡಪ್ಪನೂ ಬರಲಿಲ್ಲ. ಆ ಮಕ್ಕಳೂ ಬರಲಿಲ್ಲ. ಚೆನ್ನಾಗಿರುವಾಗ ತಿನ್ನೋಕೆ ಬಂದ್ರು, ಕಷ್ಟ ಬಂದಾಗ ಅಸ್ಪೃಶ್ಯರಂತೆ ಹಿಂದೆ ನಿಂತರು. ಈ ಲೋಕದ ನೀತೀನೇ ಇಷ್ಟಿರಬೇಕು. ಎಂದುಕೊಂಡಳು.

'ಅವ್ವ, ನಿಮ್ಮತ್ತೆ ಭಾಳ ಒಳ್ಳೇವ್ರು ಕಣವ್ವಾ, ನಂತಾವ ಏಟೊತ್ತು ಕುಂತ್ಕೊಂಡು, ಕಷ್ಟ, ಸುಖಾನ ಇಚಾರಿಸ್ತಾ ಇದ್ರು. ಬಾಯಿತುಂಬಾ ಮಾತಾಡಿದ್ರು, ನಿಮ್ಮನ್ನಂತೂ ಏಟು ಒಗಳಿದ್ರೂಂತ! – ಕಣ್ಣರಳಿಸಿ ಹೇಳಿದ.

'ಹೌದೇಳು ನಂಜ. ತಮ್ಮ ವಸ್ತು ಅಂದ್ರೆ ಕೆಟ್ಟದ್ದಿದ್ರೂ ಒಳ್ಳೇದೂಂತ್ಲೇ ಹೊಗಳ್ತಾರೆ. ಅದಕ್ಕೆಲ್ಲಾ ಬೆಲೇನಾ? – ಎಂದಳು ನಗುತ್ತ.

ಬಸ್‌ಸ್ಟ್ಯಾಂಡಿಗೆ ಚಂದ್ರಣ್ಣ ಬಂದಿದ್ದ. ಪಾರ್ವತಿ ಮೊದಲೇ ಕಾಗದ ಬರೆದು ತಿಳಿಸಿದ್ದಳು. ಪಾರ್ವತಿ ಇಳಿದಳು. ನಂಜ ಸಾಮಾನನ್ನೆಲ್ಲಾ ಚಂದ್ರಣ್ಣನ ಕೈಗೆ ಕೊಟ್ಟು ಕೊನೆಗೆ ತಾನಿಳಿದ. ಇವರೆಲ್ಲಾ ಇಳಿದು, ಚಂದ್ರಣ್ಣ ತಂದಿದ್ದ ಗಾಡಿಯ ಕಡೆ ನಡೆಯಲು, ಬಸ್ಸು ಇವರನ್ನು ಹಿಂದೆ ಹಾಕಿಹೋಯಿತು. ಬಸ್ ದೂರ ಸರಿದಂತೆ, ತವರೇ ಇನ್ನು ತನಗೆ ದೂರವಾಯಿತೆಂದುಕೊಂಡು ನಿಟ್ಟುಸಿರು ಬಿಟ್ಟಳು ಪಾರ್ವತಿ. ಚಂದ್ರಣ್ಣ ಗಮನಿಸಿದ. ಆದರ ವಿವರಣೆಗೆ ಅವಳನ್ನು ಕೇಳಲಿಲ್ಲ.

ಐದಾರು ವರ್ಷಗಳೇ ಕಳೆದವು. ಜೀವನದಲ್ಲಿ ಹೇಳಿಕೊಳ್ಳುವಂತಹ ಏರುಪೇರುಗಳಾಗಲಿಲ್ಲ. ಅದೇ ಮನೆ, ಅದೇ ಊರು, ಅದೇ ನೆಲ. ಅದೇ.....ಅದೇ ....ಆಗಿತ್ತು. ಜೀವನವೆಂದರೆ ವಾಕರಿಕೆ ಬರುವಂತಾಗಿತ್ತು. ಪಾರ್ವತಿ ಚಂದ್ರಣ್ಣರ ಅನುಭವಕ್ಕೆ ಬಂದದ್ದು ಹುಟ್ಟಿಗಿಂತ ಸಾವಿನ ಸಂಖ್ಯೆಯೇ ಬದುಕಿನಲ್ಲಿ ಹೆಚ್ಚು ಎಂದು.

ವಿಶ್ವನಿಂದ ಮೊದಲಾದ ಸಾವಿನ ಚಕ್ರ ಕೃಷ್ಣಪ್ಪನೊಂದಿಗೆ ಕೊನೆಯಾಯಿತು. ಬಹುಶಃ ಇಷ್ಟು ಸಮೀಪದಲ್ಲಿ ಇಷ್ಟೊಂದು ಸಾವುಗಳು ಬೇರೆಲ್ಲೂ ಇರಲಾರದೇನೋ ಎನಿಸಿತು. ಗಂಡನಿಗಿಂತ ಮೊದಲೇ ಸಾಯಬೇಕೆಂಬ ಸಾವಿತ್ರಮ್ಮನ ಮನೋನಿರ್ಧಾರವೇ, ಅವಳ ಆಕಾಂಕ್ಷೆಯನ್ನು ಪೂರ್ತಿ ಮಾಡಿತೆನಿಸುತ್ತದೆ.

ಗಟ್ಟಿಮುಟ್ಟಾಗಿದ್ದ ಸಾವಿತ್ರಮ್ಮ ಕಾಲುಜಾರಿ ಬಿದ್ದವಳು, ಮತ್ತೆ ಮೇಲೇಳಲೇ ಇಲ್ಲ. ಅರೆ ಮರುಳಾಗಿ ನರಳಿದ ಕೃಷ್ಣಪ್ಪ, ಆಕೆಯ ಸಾವಿನ ಒಂದೆರಡು ತಿಂಗಳಲ್ಲೇ ಅವಳ ಹಾದಿ ಹಿಡಿದ.

ಸಾರವನ್ನೆಲ್ಲಾ ಕಳೆದುಕೊಂಡ ಸಿಪ್ಪೆಯ ಬದುಕಿನ ಅನುಭವ ಪಾರ್ವತಿ ಚಂದ್ರಣ್ಣನಿಗೆ; ಯಾವುದಕ್ಕೂ ನಿರ್ಲಿಪ್ತ ಮನೋಭಾವ ಇಬ್ಬರದೂ, ಮದುವೆಯಾದ ಹೊಸತರಲ್ಲಿ ಕಟ್ಟಿಕೊಂಡ ಕನಸುಗಳೂ ಕೇವಲ ನೆನಪಿನ ಬುತ್ತಿಗಳಾದವು. ರೂಪಿಸಿಕೊಂಡಿದ್ದ ಬದುಕೇ ಬೇರೆತೆರನದಾಗಿತ್ತು. ಅವರಿಗೆ ದೊರೆತದ್ದೇ ಮತ್ತೊಂದು ತೆರ.

ಮದುವೆಯಾಗಿ, ಹೊಸದಾಗಿ ಈ ಊರಿಗೆ ಬಂದಾಗ, ಎಲ್ಲೆಲ್ಲೂ ಸ್ವರ್ಗದ ಛಾಯೆ. ಚಂದ್ರಣ್ಣನ ತುಂಟುತನ ಬೇಡ ಬೇಡವೆಂದು ಮೇಲೆ ನುಡಿಸಿದರೂ, ಒಳಗೆ ಹಿತವೆನಿಸುತ್ತಿತ್ತು.

ಸ್ವಚ್ಛಂದ ಹಕ್ಕಿಗಳಂತೆ ಊರಿನ ಬನಗಳಲ್ಲಿ ಸುಳಿದಾಡಿರು. ಹೊಲಗದ್ದೆಗಳಲ್ಲಿ ಅಲೆದಾಡಿದರು. ಕೆರೆ, ಕುಂಟೆಗಳಲ್ಲಿ ನೀರಾಟವಾಡಿದರು. ಸಾವಿತ್ರಮ್ಮ, ಹಸಿಮೈ, ಬೇಡ ಬೇಡವೆಂದರೂ ಕೇಳದೆ, ಆ ಹಳ್ಳಿಯ ಒಂದೊಂದು ಮರ, ಹಕ್ಕಿ, ಗಿಡ, ಬಳ್ಳಿಗಳ ಪರಿಚಯ ಮಾಡಿಸಿದ. ಹೊಲಗಳ ಆಚೆ, ದೂರದ ಬಯಲಲ್ಲಿ ತಾನೇ ಹಿಮಾಲಯವೆಂಬಂತಹ ಹೆಮ್ಮೆಯಿಂದ ತಲೆ ಎತ್ತಿನಿಂತ ಗುಡ್ಡದ ಮೇಲೇರಿ, ಬೀಸಿ ಬರುವ ಗಾಳಿಗೆ ಮೈಯೊಡ್ಡಿ ಅನುಭವಿಸುವುದೆಂದರೆ ಪಾರ್ವತಿಗೆ ಬಹಳ ಖುಷಿ. ಪರಿಶುಭ್ರವಾಗಿ ತೊಳೆದಂತಿದ್ದ ನಿರ್ಮಲ ಆಕಾಶದಲ್ಲಿ ಮೆಲ್ಲನೆ ತೇಲಿಬರುವ ಮೋಡಗಳು, ಆಕಾಶ ಕೊಳೆಯಾದೀತೆಂದು ಹೆದರಿ, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಜಾಗರೂಕತೆಯಿಂದ ಬರುವ ಸುಹಾಸಿನಿಯರಂತೆ ಕಾಣುತ್ತಿವೆ – ಎನ್ನುತ್ತಿದ್ದಳು ಪಾರ್ವತಿ.

ಚಂದ್ರಣ್ಣ ಚಪ್ಪಾಳೆ ಹೊಡೆದು ಕೇಕೆ ಹಾಕಿ ನಕ್ಕು, ಅವಳ ಕಲ್ಪನೆಯನ್ನು ಅದ್ದೂರಿಯಾಗಿದೆಯೆಂದು ವ್ಯಂಗ್ಯವಾಗಿ ಹೊಗಳಿ, ಅವಳನ್ನು ಸಿಟ್ಟಿಗೆಬ್ಬಿಸಿದ. ಅವಳ ಮುಖದಲ್ಲಿ ಸಿಟ್ಟು, ಮೂಡಿಸಿದ ಕೆಂಪು ಸಂಜೆ ಸೂರ್ಯನು ಕದ್ದು ಹೋದನೆಂದು ಚುಡಾಯಿಸಿದ. ಹೊತ್ತು ಗೊತ್ತಿಲ್ಲದೆ ಸುತ್ತಾಡುವ ಈ ಜೋಡಿ ಹಕ್ಕಿಗಳು. ಊರಿಗೆಲ್ಲಾ ಪರಿಚಿತವಾದವು. ಕೆಲವರು ನಕ್ಕರು!

ಇವೆಲ್ಲಾ ಗತಿಸಿಹೋದ ವೈಭವದ ದಿನಗಳು ಈಗ ಅವೆಲ್ಲಾ ಅವಶೇಷಗಳು. ಅಂದ ಚೆಂದಗಳೂ ಕಾಣದಷ್ಟು ಭಗ್ನವಾಗಿವೆ.

ಮೂವತ್ತರ ಗಡಿ ಮುಟ್ಟುತ್ತಿದ್ದ ಪಾರ್ವತಿಗೆ, ಮಕ್ಕಳ ಆಸೆ ದಟ್ಟವಾಯಿತು. ಗಂಡ ಹೆಂಡಿರಿಬ್ಬರಿದ್ದರೂ ಒಂಟಿತನವೇ. ಈ ಒಂಟಿತನಕ್ಕೆ ಮಗುವೇ ಚಿಕಿತ್ಸೆ ಎನಿಸಿದರೂ, ಅದು ತಮಗೆ ದಕ್ಕದ್ದು ಎಂದುಕೊಂಡರು. ಆದರೆ ಆಸೆ ಸುಪ್ತಾಕಾಂಕ್ಷೆಯಾಗಿ ಒಳಗೆ

ಹೊತ್ತಿ ಉರಿಯುತ್ತಿತ್ತು. ಒಮ್ಮೊಮ್ಮೆ ತಾನು ತಾಯಿಯಾಗಲಾರನೇ ನಿಜವಾಗಿಯೂ ಎಂದು ಆಲೋಚಿಸುತ್ತಿದ್ದಳು.

ಅವಳಿಗೆ ತುಂಬಲಾಗದ ಆಸೆ ಎನಿಸಿದ್ದು, ಎದೆಯ ಕೋಶದಲ್ಲಿ ಕಾವು ಪಡೆಯುತ್ತಿತ್ತು. ಅನಿಸಿಕೆಗಳು ಏನೇ ಆದರೂ ಪ್ರಕೃತಿ ಧರ್ಮದಂತೆ ಕೆಲಸ ನೆರವೇರಿತು.

ಕಾದು ಕಾದು ಬೇಸತ್ತ ನೆಲಕ್ಕೆ ಮಳೆ ತುಂಬ ಹಿತವಾಗಿತ್ತು. ಎಷ್ಟು ದಿನದಿಂದ ಮಳೆಯಿಲ್ಲದೆ ಬಾಯಾರಿದ್ದ ಪ್ರಕೃತಿ ತಣಿಯಿತು. ನಿರೀಕ್ಷಿಸುತ್ತಾ ಇದ್ದ ಮಳೆಯ ಹನಿಗಳು ಉದುರಿದ್ದೇ ಮರಗಿಡಗಳೆಲ್ಲಾ ಪುಲಕಿತಗೊಂಡವು.

ಬಾವಿಗಳು, ಕೆರೆಗಳು ಬತ್ತಿ ಹೋಗಿದ್ದವು. ನೀರು ಕಾಣದೆ ತಳ ಅಂಟಿದಂತಾಗಿತ್ತು. ಇನ್ನೊಂದೆರಡು ದಿನ ಈ ಮಳೆ ಬರದಿದ್ದರೆ ವೃಕ್ಷಗಳೆಲ್ಲಾ ರೂಕ್ಷಗಳಾಗುತ್ತಿದ್ದವು. ಬೆಳೆ ಬಾಡಿ ನೆಲದ ಮಣ್ಣಲ್ಲಿ ಬೆರೆಯಬೇಕಾಗಿತ್ತು. ಹಕ್ಕಿಗಳು ಹಾರಾಡಿ, ಹಾರಾಡಿ ನೀರಿಗಾಗಿ ತೊಳಲಾಡಿ, ಹುಡುಕಾಡಿ, ನೀರಿನ ಹನಿಯೂ ಕಾಣದೆ, ಕಾಣಲು ಆಗದೆ ರೆಕ್ಕೆ ಸೋತು ಕುಸಿಯುತ್ತಿದ್ದವು. ಮೇವಿಲ್ಲದೆ ಮುದಿಬಿದ್ದವು ಪಶುಗಳು. ಮಳೆ–ಮಳೆ– ಎಂದು ಮಾತ್ರವೇ ಹೊರಳಾಡುತ್ತಿದ್ದ ನಾಲಗೆಗಳೂ ಸೋತು ಸೇದಿಹೋಗಬೇಕಿದ್ದ ಕ್ಷಣದಲ್ಲಿ ಮಳೆ! ಅಬ್ಬ! ಎಂಥ ಸಂತೋಷ–ಎನಿಸಿತು. ಈ ಗಳಿಗೆಗೆ ಮಳೆ ಬಂದದ್ದರಿಂದ ಮೂಡಿದ ಪುಲಕ–ಬೇರಾವ ಹೊತ್ತಿನಲ್ಲಿ ಬಂದಿದ್ದರೂ ಸಾಧ್ಯವಿರಲಿಲ್ಲ.

ಸೆಳೆದು ಹೋಗುತ್ತಿದ್ದ ಉಸಿರು ನಿರಾತಂಕವಾಗಿದೆ. ಗಾಳಿಯ ಬಿಸಿ ನಂದಿದೆ. ಅದರ ಬೀಸು ಹಿತವಾಗಿದೆ. ಮಳೆಯಿಂದ ನೆಲದ ಹೊಕ್ಕುಳಿಂದ ಹೊರಟ ಮಣ್ಣಿನ ಸೌರಭ ಮೂಗಿಗೆ ರುಚಿಯಾಗಿದೆ.

ಮಳೆಗಾಗಿ ಮಾಡಿದ ನೆಲದ ತಪಸ್ಸು ಫಲಿಸಿದೆ.

'ಪಾರ್ವತಿಗೆ ಈ ವಾತಾವರಣ ಬಹಳವಾಗಿ ಹಿಡಿಸಿತು. ತನ್ನ ಬಸಿರತ್ತ ನೋಡಿಕೊಂಡು ನಕ್ಕಳು ಪಾಪ! ಕತ್ತಲಲ್ಲಿ ಹೇಗಿದ್ದಾನೋ ಎನಿಸಿತು. ಇದ್ದಕ್ಕಿದ್ದಂತೆ ಇವನು ನನಗೆ ಜೀವನದಲ್ಲಿ ಆಸೆ ಹುಟ್ಟಿಸುತ್ತಿದ್ದಾನೆ. ಎಂತಹ ಸ್ವಾರ್ಥಿ! ನನ್ನ ನಿರಾಸಕ್ತ ಬದುಕು ಅವನಿಗಪಾಯವೆಂದೋ ಏನೋ ಈಗಲೇ ಆಸೆಗಳನ್ನು ಕೆರಳಿಸುತ್ತಿದ್ದಾನೆ, ಘಟಿಂಗ! ಎಂದುಕೊಂಡು ಭಾವೀ ಮಗನನ್ನು ಕುರಿತು ಚಿಂತಿಸಿದಳು.

ಹಿತ್ತಿಲಿನಿಂದ ಕರುವಿನ ಕೂಗು ಕೇಳಿಸಿತು. ತಾಯಿ ಹಸುವಿನಿಂದ ದೂರ ಕಟ್ಟಿ ಹಾಕಿದ್ದರು. ಆ ಕರೆ ಕೇಳಿದ್ದೇ ಪಾಪ! ಎನಿಸಿ, ಕಷ್ಟದಿಂದ ಎದ್ದು ನಡೆದಳು. ಬಿಗಿದ ಹಗ್ಗವನ್ನು ಬಿಚ್ಚಿಕೊಳ್ಳಲು ಕರು ಪಡುತ್ತಿರುವ ಕಷ್ಟವನ್ನು ನೋಡಿದಳು. ಮೆಲ್ಲಗೆ ಬಳಿಸಾರಿ ಕುಣಿಕೆಯನ್ನು ಬಿಚ್ಚಿದ್ದೇ, ಚಂಗನೆ ನೆಗೆದು, ಮಿಂಚಿನಂತೆ ಮಾಯವಾಯಿತು ಕರು. ತಲೆ ಎತ್ತಿ ನೋಡಿದರೆ ಹಸುವಿನ ಮೊಲೆಗೆ ಮೊಗವಿಟ್ಟು ಚೀಪುತ್ತಿದೆ! ತನ್ನಲ್ಲೇ ನಕ್ಕಳು.

ಪಾರ್ವತಿಗೆ ಗಂಡು ಮಗುವೇ ಆಯಿತು. ನೋಡುವುದಕ್ಕೆ ಮುದ್ದಾಗಿತ್ತು ಮಗು. ವಿಶ್ವನನ್ನು ಮರೆಸುತ್ತಾನೆ ಎಂದುಕೊಂಡರು. ವಿಶ್ವನನ್ನು ಸ್ವಾಗತಿಸುವುದಕ್ಕೆ ಅಪ್ಪ ಅಮ್ಮ ಅತ್ತೆ ಮಾವ ನೆಂಟರಿಷ್ಟರೆಲ್ಲಾ ಇದ್ದರು. ಆದರೆ ಈಗ ಇವನು ಸಾಕಷ್ಟು ಒಂಟಿತನವನ್ನು ಬೆನ್ನಿಗಿಟ್ಟುಕೊಂಡೇ ಬಂದಿದ್ದಾನೆ. ಅತ್ತೆ ಇದ್ದಿದ್ದರೆ ಹತ್ತು ಮಂದಿ ಇದ್ದಂತೆ – ಎನಿಸಿತು ಪಾರ್ವತಿಗೆ.

ಚಂದ್ರಣ್ಣನ ಪತ್ರ ಸೇರಿದ್ದೇ, ಅಕ್ಕ ಜಾನಕಿ ಬಂದೇ ಬಂದಳು. ಒಂದು ತಿಂಗಳ ಮಟ್ಟಿಗಾದರೂ ಪಾರ್ವತಿಯ ಬಾಣಂತನ ಮಾಡಿದರೆ, ನಂತರ ಅವಳೇ ಕೆಲಸ ಮಾಡಿಕೊಳ್ಳುತ್ತಾಳೆ. ಜಾನಕಿಗಂತೂ ಕೈಗೊಂದು ಕಂಕುಳಿಗೊಂದು – ಅನ್ನೋ ಹಾಗೆ ಮಕ್ಕಳು ತುಂಬಾ! ಸಾಲದ್ದಕ್ಕೆ ಮನೆಗೆ ಹಿರಿಯ ಸೊಸೆ. ಜವಾಬ್ದಾರಿಗಳು. ಅದಕ್ಕೆ ಆಕೆ ತವರಿಗೆ ಬಂದದ್ದೇ ಅಪರೂಪ.........ಜಾನಕಿಯ ಗಂಡ ಊರಿಗೇ ಶ್ರೀಮಂತರಾದ ವೆಂಕಟರಾಯಪ್ಪನ ಮಗ. ಹೊರಗೆ ಹೊರಟರೆ ಹೆಜ್ಜೆ ಹೆಜ್ಜೆಗೂ ಸಲಾಮು ಮಾಡುವ ಜನ. ಆದರೂ ಆತನಿಗೆ ಅಹಂಕಾರವಿಲ್ಲ. ತಂದೆಗೆ ವಯಸ್ಸಾಯಿತಂತ ಯಜಮಾನಿಕೆಯೆಲ್ಲಾ ಈತನಿಗೆ ಬಂದಿತ್ತು. ತಲೆ ತುಂಬ ವ್ಯವಹಾರಗಳೆ ಆತನಿಗೆ. ಅಂಥಾದ್ದರಲ್ಲೂ ಚಂದ್ರಣ್ಣ, ಭಾವನಿಗೆ ವಿಷಯ ತಿಳಿಸಿ ಪತ್ರ ಬರೆದಾಗ ಕೂಡಲೇ ಮನ್ನಿಸಿ, ಜಾನಕಿಯನ್ನು ಕರೆತಂದು ಬಿಟ್ಟ.

ತಮ್ಮನ ಕಷ್ಟವನ್ನು ನೋಡಿ ಅವಳಿಗೂ ಬೇಸರವಾಗಿತ್ತು. ಅಂಥಾದ್ದರಲ್ಲಿ ಈ ಸುದ್ದಿ ಸ್ವಲ್ಪ ಹಿತವಾಗಿತ್ತು. ನಾದಿನಿಯ ಬಾಣಂತನಕ್ಕೆ ಸಂತೋಷದಿಂದ ಬಂದಳು. 'ಗಂಡು ಮಗು' ವೆಂದು ತಿಳಿದು ಜಾನಕಿಗೆ ಪಾರ್ವತಿಗಿಂತಲೂ ಸಂತೋಷವಾಯಿತು. ಚಂದ್ರಣ್ಣನಿಗೆ ಹೇಳಿದಳು. 'ಚಂದ್ರು ಅಪರೂಪಕ್ಕೆ ಗಂಡು ಹುಟ್ಟಿದೆ, ಸ್ವಲ್ಪ ಅದ್ದೂರಿಯಾಗಿಯೇ ನಾಮಕರಣ ನಡೆಸೋ – ಎಂದಳು. ಆದರೆ ಪಾರ್ವತಿ, ಚಂದ್ರಣ್ಣ ಒಪ್ಪಲಿಲ್ಲ. 'ನಾವು ನಕ್ಕರೆ ಅವನು ಅಳಿಸುತ್ತಾನೆ' ಎನ್ನುವ ಭಾವನೆ ಪಾರ್ವತಿಯಲ್ಲಿ ಬೇರು ಬಿಟ್ಟಿತ್ತು. ಯಾವ ಆಡಂಬರವೂ ಇಲ್ಲದೆ ಮಗನನ್ನು ಸ್ವಾಗತಿಸಿದರು.

'ಮಗು ಹುಟ್ಟುವಾಗ ಅಳಲಿಲ್ಲವಂತೆ' ಈ ಮಾತು ಬಾಯಿಂದ ಬಾಯಿಗೆ ಹರಡಿತು. ಸೂಲಗಿತ್ತಿ ಮಗುವನ್ನು ಹೊಡೆದು, ಚಿವುಟಿ ಅಳುವಂತೆ ಮಾಡಿದಳು. ಆಗಲೂ ಅತ್ತದ್ದು ಮಗು ಒಂದೇ ಕ್ಷಣ. ಆಮೇಲೆ ಸರಿಹೋಗುತ್ತೆ ಎಂದು ಸುಮ್ಮನಾದರು.

ಮೈಲಿಗೆ ಕಳೆದು ಸ್ನಾನವಾಯಿತು ಪಾರ್ವತಿಗೆ. ಮಗುವಿನ ಆರೈಕೆ ಅವಳಿಗೆ ಸರಿಹೋಯಿತು. ವಿಶ್ವನನ್ನು ಸಾಕಿದ ಅನುಭವ ತಪ್ಪಿ ಹೋಗಿತ್ತು. ಈಗೇನೋ ಪಾರ್ವತಿಗೆ ಎಲ್ಲವೂ ಹೊಸದೆನಿಸುತ್ತಿತ್ತು. ಅದೃಷ್ಟಕ್ಕೆ ಮಗುವೂ ತಾಯಿಗೆ ಹಿಂಸೆ ಕೊಡಲಿಲ್ಲ. ಹಗಲಾಗಲೀ, ರಾತ್ರಿಯಾಗಲೀ ಮಗು ಅಳುವುದೇ ಕಡಿಮೆ. ಕೊನೆಗೆ ಹಸಿವಾದಾಗಲೂ ಅಳುತ್ತಿರಲಿಲ್ಲ. ಪಾರ್ವತಿ ಹೊತ್ತು ಗೊತ್ತು ತಿಳಿದು ಹಾಲೂಡಿಸಿದರೆ ಸರಿ, ಇಲ್ಲವಾದರೆ

ತುಟಿಪಿಟಕ್ಕೆನ್ನದೆ ಮೂರು ಮೂರು ದಿವಸವಾದರೂ ಉಪವಾಸವಿದ್ದುಬಿಡುತ್ತಿತ್ತು ಮಗು.

ಹದಿಮೂರನೇ ದಿನ ಮನೆ ಮಟ್ಟಿಗೆ 'ನಾಮಕರಣ' ಇಟ್ಟುಕೊಂಡರು. ವಿಶ್ವನ ನಾಮಕರಣ ತವರಿನಲ್ಲಿ ನಡೆಯಿತು. ಬೇಡ ಬೇಡವೆಂದರೂ ಹಳೆಯ ಘಟನೆಗಳು ನೆನಪಾದವು. ತಾಯಿ ಎಷ್ಟು ಸಂಭ್ರಮದಿಂದ ಓಡಾಡಿ ಊರಿಗೆ ಊರನ್ನೇ ಆಹ್ವಾನಿಸಿದ್ದಳು!....ಛೆ!....ಈ ಹೊತ್ತಿನಲ್ಲಿ ಅಶುಭದ ಕಲ್ಪನೆಗಳು ಕೂಡದೆನಿಸಿತು–ಬೇರೇನೋ ವಿಚಾರದತ್ತ ಗಮನ ಹರಿಸಿದಳು.

ಜೋಯಿಸರು ಬಂದಿರಲಿಲ್ಲ. ಮಾಲಕ್ಷಮ್ಮಿಯ ಗಂಡ ವಿಷ್ಣು ಜೋಯಿಸ ಬಂದಿದ್ದ, ನಾಮಕರಣ ಮಾಡಿಸಲು. ಜೋಯಿಸರೂ ಕಾಲನ ಕೈಯಿಂದ ಉಳಿಯಲಿಲ್ಲ. ಅವರಿಗೆ ಅದು ಮನದಟ್ಟಾಗಿದ್ದಿದ್ದರಿಂದಲೇ, ಮನೆಯ ಜವಾಬ್ದಾರಿಗೆ ಯಾರೂ ಇಲ್ಲವೆಂದು ತಿಳಿದು ಮಾಲಕ್ಷ್ಮಿಗೆ ಮದುವೆ ಮಾಡಿದರು. ಮೊಮ್ಮಗಳು, ಮೊಮ್ಮಗನನ್ನು ಮನೆಯಲ್ಲೇ ಇರಿಸಿಕೊಂಡು, ತಮ್ಮ ವಿದ್ಯೆ, ವೃತ್ತಿಗಳೆಲ್ಲವನ್ನೂ ಕಲಿಸಿಕೊಟ್ಟರು. ಜೋಯಿಸರಿಗೆ ಹೇಳುವಾಗಲೇ, ಮಾಲಕ್ಷ್ಮಿಯನ್ನು ಕರೆತರಲು ತಿಳಿಸಿದ್ದರು. ಅದಕ್ಕೇ ಗಂಡನ ಜೊತೆಗೆ ಮಾಲಕ್ಷ್ಮಿಯೂ ತನ್ನಿಬ್ಬರು ಮಕ್ಕಳನ್ನೂ ಕರೆದುಕೊಂಡು ಬಂದಿದ್ದಳು. ಪಾರ್ವತಿಗೆ ಗುರುತು ಹತ್ತದಂತೆ, ತನ್ನ ಮುಂದಿನ ಚೋಟುದ್ದ ಹುಡುಗಿ, ದೊಡ್ಡ ಹೆಂಗಸಿನಂತೆ ಕಾಣುತ್ತಿದ್ದಾಳೆ. ತುಂಬು ತಾಯ್ತನ ಅವಳ ಮುಖದಲ್ಲಿದೆ. ತನಗಿಂತ ಮುಂಚೆ ಅವಳು ತಾಯಿಯೆಂದು ಕರೆಸಿಕೊಂಡಿದ್ದಾಳೆ! ಅವಳನ್ನು ನೋಡನೋಡುತ್ತಿದ್ದಂತೆ ಹೆಣ್ಣು ಮಕ್ಕಳು ಹುಟ್ಟುವಾಗಲೇ ತಾಯಂದಿರಾಗಿ ಹುಟ್ಟುತ್ತಾರೋ ಏನೋ ಎನಿಸಿತು. ವಿಷ್ಣು ಜೋಯಿಸ ಹುಟ್ಟಿದ ಗಳಿಗೆ, ದಿನ, ಎಲ್ಲಾ ನೋಡಿ ಲೆಕ್ಕಾಚಾರ ಹಾಕಿ, 'ಶಂಕರ' ಅನ್ನೋ ಹೆಸರನ್ನು ಸೂಚಿಸಿದ. ಎಲ್ಲರಿಗೂ ತುಂಬ ಹಿಡಿಸಿತು. ಶಂಕರನಷ್ಟೇ ಮುಗ್ಧವಾಗಿ ನಿರುಪದ್ರವಿಯಾಗಿ ಕಾಣುತ್ತಿದ್ದ ಮಗುವಿಗೆ ಅದಕ್ಕಿಂತ ಅನ್ವರ್ಥವಾಗುವ ಹೆಸರು ಮತ್ತೊಂದು ಇರಲಾರದೆಂದುಕೊಂಡಿರಬೇಕು. ಶಂಕರ...... ಶಂಕರ...... ಶಂಕರ ಮೂರು ಬಾರಿ ಚಂದ್ರಣ್ಣ ಮಗುವಿನ ಕಿವಿಯಲ್ಲಿ ಪಿಸುಗುಟ್ಟಿದ. ಹುಟ್ಟಿದಂದಿನಿಂದ ನಕ್ಕದ್ದನ್ನೇ ಕಾಣದ ಮನೆಯವರಿಗೆ ಈ ಮಗು ನಗುತ್ತಿರುವಂತೆ ಕಾಣಿಸಿತು!

ಎಲ್ಲಾ ಸಾಂಗವಾಗಿ ನೆರವೇರಿತು. ಬಂದವರೆಲ್ಲಾ ಚದುರಿದರು. ಮಾಲಕ್ಷ್ಮಿಗೆ ಪಾರ್ವತಿ, ಸೀರೆ ಕುಪ್ಪಸವಿಟ್ಟಳು. ಮಕ್ಕಳಿಬ್ಬರಿಗೂ ಬಟ್ಟೆಗಳನ್ನು ಕೊಟ್ಟಳು. ಮಾಲಕ್ಷ್ಮಿ ಬೇಡಬೇಡವೆಂದರೂ ಪಾರ್ವತಿ ಬಿಡಲಿಲ್ಲ. ವಿಷ್ಣು ಜೋಯಿಸರನ್ನು ಚಂದ್ರಣ್ಣ, ಮಗುವಿನ ಜಾತಕ ಫಲವನ್ನು ಕೇಳಿದಾಗ, ವಿಷ್ಣು ಜೋಯಿಸ ಮತ್ತೊಮ್ಮೆ ದೀರ್ಘವಾಗಿ ನೋಡಿ ಹೇಳುತ್ತೇನೆ. ಈಗ ಆತುರದಲ್ಲಿ ಹೇಳುವುದು ಸರಿಯಲ್ಲ ಎಂದು ಅಷ್ಟಾಗಿ ಗಮನ ಕೊಡದೆ ನಡೆದು ಬಿಟ್ಟ. ಚಂದ್ರಣ್ಣನಿಗೂ, ಜಾತಕಫಲ ಕೇಳಿ ತಿಳಿಯಲೇಬೇಕೆಂಬ ಛಲವೂ ಇರಲಿಲ್ಲ. ಅದಕ್ಕೇ ಜೋಯಿಸರಂದದ್ದಕ್ಕೆ, ಒತ್ತಾಯ ಪಡಿಸಲಿಲ್ಲ.

ಜಾನಕಿ ಕೈಕೂಸನ್ನು ಮಾತ್ರ ತಂದಿದ್ದಳು. ತುಂಬ ಬಡಕಲಾಗಿತ್ತು. ತಾಯಿ ಎದೆ ಹಾಲಿಲ್ಲದೆ ಈ ಕೂಸು ಮಾತ್ರ ತುಂಬ ಕಷ್ಟ ಕೊಟ್ಟಿತಂತೆ. ಬೇರೇನೂ ಆ ಮಗು ಮುಟ್ಟುತ್ತಿರಲಿಲ್ಲ. ಅಮ್ಮ ಹತ್ತಿರವಿದ್ದರೆ ಸಾಕು ಅನ್ನುವಂಥಾದ್ದು. ಅಮ್ಮನ ಮಗಳಾಗಿ ಬಿಟ್ಟಿದ್ದಳು. ಒಂದು ವರುಷ ಕಳೆಯುವವರೆಗೆ ಜಾನಕಿಗೆ ಈ ಮಗುವನ್ನು ಕಾಪಾಡುವುದು ತುಂಬಾ ಪ್ರಯಾಸವಾಯಿತಂತೆ. ಆದರೆ ಈಗ ಸ್ವಲ್ಪ ಮೈಹತ್ತಿ ಗುಂಡುಗುಂಡಾಗಿದೆ–ಎಂದು ಅವರು ಅಂದುಕೊಂಡಿದ್ದರೂ, ಬೇರೆಯವರ ದೃಷ್ಟಿಯಲ್ಲಿ ಬಡಕಲೇ.

ಇಲ್ಲಿಗೆ ಬಂದ ಮೇಲೆ, ಜಾನಕಿಯ ಅದೃಷ್ಟವೋ ಏನೋ, ಮಗು ಪಾರ್ವತಿಗೆ, ಚಂದ್ರಣ್ಣನಿಗೆ ಹೊಂದಿಕೊಂಡಿತ್ತು. ಪಾರ್ವತಿಯ ಪುಟ್ಟ ಮಗುವಿನೊಂದಿಗೆ ಆಡುವುದೂ ಮಹಾ ಇಷ್ಟ, ಸ್ವಲ್ಪವೂ ಸದ್ದಿಲ್ಲದೆ ಆ ಮಗುವಿನ ಬಳಿ ಕುಳಿತು, ಕಣ್ಣು ಮೂಗುಗಳ ಜೊತೆಗೆ ಆಟವಾಡುತ್ತಿತ್ತು. ಏನಾದರೂ ಕೈ, ಕಾಲು, ಕಣ್ಣು ಎಳೆದಾಡೀತೆಂದು ಭಯದಿಂದ ಎಚ್ಚರವಹಿಸಬೇಕಾಗಿತ್ತೆ ವಿನಹ ಬೇರೇನೂ ಇಲ್ಲ. ಮಗುವಿನ ಕಾಟವಿಲ್ಲದ್ದಕ್ಕೆ ಜಾನಕಿಗೆ ಮನೆಗೆಲಸ, ಬಾಣಂತಿ ಅಡಿಗೆ–ಎಲ್ಲಾ ನಿರ್ವಹಿಸಲು ಸಾಧ್ಯವಾಗುತ್ತಿತ್ತು.

ತಿಂಗಳು ಕಳೆಯುತ್ತಿದ್ದಂತೆ ಜಾನಕಿ ಹೊರಟುಹೋದಳು. ಪಾರ್ವತಿಯೇ ಎಲ್ಲಾ ಕೆಲಸಗಳನ್ನು ವಹಿಸಿಕೊಂಡಳು. ಈರನ ಹೆಂಡತಿ ಚಿಕ್ಕಿ ಸುತ್ತುಗೆಲಸಕ್ಕೆ ಇದ್ದಳು. ಜೊತೆಗೆ ಮಗುವನ್ನೂ ನೋಡಿಕೊಳ್ಳುತ್ತಿದ್ದಳು. ಸ್ನಾನ ಮಾಡುವುದು ಮೊದಲುಗೊಂಡು ಎಲ್ಲಾ ಮಗುವಿನ ಕೆಲಸಗಳನ್ನೂ ಅವಳೇ ಮಾಡುತ್ತಿದ್ದಳು. ಪಾರ್ವತಿ ಬೇಡವೆಂದರೂ ಚಿಕ್ಕಿ ಕೇಳುತ್ತಿರಲಿಲ್ಲ. 'ಬಿಡೀ ಅವ್ವ, ನೀವು ಹಸಿ ಬಾಣಂತಿ. ಎಷ್ಟು ಕೆಲಸಗಳಂತ ಮಾಡ್ತೀರ? ಮಗುವಿಗೆ ಮಾಡಿದರೆ ನನ್ನ ಕೈಯೇನೂ ಸವೆಯೋದಿಲ್ಲವಲ್ಲ! ಎನ್ನುತ್ತಿದ್ದಳು.

'ಚಿಕ್ಕಿ, ನೀನು ಈ ಮಗುವಿಗೆ ಮಾಡೋ ಸೇವೆ ನೋಡಿದರೆ ಹಿಂದಿನ ಜನ್ಮದಲ್ಲಿ ಇದಕ್ಕೆ ಋಣ ಮಾಡಿರಬೇಕೇನೋ ಅನ್ಸತ್ತೆ. ಇಲ್ಲದಿದ್ದರೆ ನೀನ್ಯಾಕೆ ಆ ಮಗೂನ ಅಷ್ಟೊಂದು ಹಚ್ಕೊಳ್ತಿ? ತಾಯಿಯಾದ ನನಗೂ ಅವಕಾಶ ಕೊಡದೆ ಮಾಡ್ತಿದ್ದೀಯಲ್ಲೆ? ಎಂದಳು ನಗುತ್ತಾ.

'ನಿಮಗೆ ಆಮೇಲೆ ಮಾಡೋದು ಇದ್ದೇ ಇದೆ. ಈಗ ನಿಮಗೆ ತೊಂದ್ರೆ ಆಗ್ಬಾರ್ದೂಂತ್ಲೇ ಅಲ್ವ ನಾ ಮಾಡ್ತಿರೋದು? ನಾನಿರೋಗಂಟ ನೀವು ಮಗುವಿನ ಯೋಚ್ನೆ ಬಿಡಿ' ಅಂದಳು.

'ಅಲ್ವೆ ನಿಂದು ನೋಡಿದ್ರ ನಾಲ್ಕು ಮಕ್ಕಳು. ಅವುಗಳಿಗೆ ಮಾಡಿದ್ದು ಸಾಲದು ಅಂತ, ಈಗ ನನ್ನ ಮಗನ ಸೇವೇನೂ ಮಾಡ್ತೀಯಲ್ಲೇ ನಿಂಗೇನು ಬೇಸರ ಇಲ್ವಾ? –ಎಂದು ಕೇಳಿದಳು.

'ಬ್ಯಾಸರ ಎಲ್ಲಿ ಬಂತು? ಇಂಥ ಹತ್ತು ಮಕ್ಕಳಿಗೆ ಎಷ್ಟು ಬೇಕಾದರೂ ಮಾಡಬಹುದು. ಅತ್ತು ಹಿಂಸೆ ಕೊಟ್ಟರೆ ತಾನೆ ಬ್ಯಾಸರ ಆಗೋದು?'

'ಹೋಗಲಿ ಬಿಡು, ಮುಂದಿನ ಜನ್ಮಕ್ಕೆ ಇವನಿಗೆ ನೀನೇ ತಾಯಾಗ್ತೀಯ' – ನಕ್ಕು ಹೇಳಿದಳು.

'ಅಂಗೇ ಆಗ್ಲಿಬಿಡ್ರವ್ವ, ದ್ಯಾವರು ಆ ಅದೃಷ್ಟ ಕೊಟ್ಟರೆ ಬ್ಯಾಡಾನ್ಲಾರೆ. ಸವಾಲಿಗೆ ಪ್ರತ್ಯುತ್ತರದಂತಿತ್ತು ಮಾತು. 'ಚಿಕ್ಕಿ' ಸಿಕ್ಕಿದ್ದು ಪಾರ್ವತಿಗೆ ತುಂಬಾ ಅನುಕೂಲವಾಯಿತು. ಪಾರ್ವತಿಯಿಂದ ಚಿಕ್ಕಿಗೆ ದೊರೆಯುತ್ತಿದ್ದ ಪ್ರೀತಿ ಆದರಗಳೇ, ಚಿಕ್ಕಿಯ ನಿಸ್ವಾರ್ಥ ಸೇವೆಗೆ ಕಾರಣವಾದವು. ತನ್ನ ಮನೆಗೆಲಸಗಳನ್ನು ಯಾವುದೋ ಒಂದು ಹೊತ್ತಿಗೆ ಹೋಗಿ ಮಾಡಿ ಮುಗಿಸಿ ಬರುತ್ತಿದ್ದಳು. ಪಾರ್ವತಿ ಚಿಕ್ಕಿಗೂ ಊಟಕ್ಕಿಟ್ಟು, ಮನೆಗೂ ಸಾಕಷ್ಟು ಕಳಿಸಿಕೊಡುತ್ತಿದ್ದರು. ಈರ ಚಂದ್ರಣ್ಣನ ಜೊತೆಗೆ ನಿಂತರೆ ಚಿಕ್ಕಿ ಪಾರ್ವತಿಯ ಜೊತೆಗಾದಳು.

ಶಂಕರನಿಗೆ ವರ್ಷ ತುಂಬಿತು. ಮೈ ಕೈ ತುಂಬಿಕೊಂಡು ಮುದ್ದಾಗಿದ್ದಾನೆ. ಆದರೆ ವಿಶ್ವನಷ್ಟು ಚುರುಕುತನ ಲವಲವಿಕೆ ಇಲ್ಲ. ಅವನ ಕಣ್ಣುಗಳು ಯಾರೂ ಇಲ್ಲದಿದ್ದಾಗ ಅರ್ಧ ಮುಚ್ಚಿರುತ್ತಿದ್ದವು. ಯಾರಾದರೂ ಬಂದ ಸದ್ದಾದರೆ ಗಕ್ಕನೆ ಕಣ್ಣು ಬಿಚ್ಚಿ ಶೂನ್ಯದಲ್ಲೇನೋ ಹುಡುಕುತ್ತಿರುವಂತಿತ್ತು. ಎಲ್ಲಿ ಕೂರಿಸಿದರೆ ಅಲ್ಲಿ ಕದಲದೆ ಕೂತು ಬಿಡುತ್ತಿದ್ದ. ಎಲ್ಲ ಮಕ್ಕಳಂತೆ ನಗುವುದಾಗಲೀ, ಕೇಕೆ ಚಪ್ಪಾಳೆಗಳಿಂದ ಕುಕಿಲುವುದಾಗಲಿ ಇಲ್ಲ ಯಾವ ಮಕ್ಕಳು ಬಂದರೂ ಅವರೊಡನೆ ಬೆರೆಯುವ ಆತುರ ತೋರುತ್ತಿರಲಿಲ್ಲ.

ಪಾರ್ವತಿಗೆ ಚಿಂತೆಯಾಯಿತು. ಅವಳಿಗೆ ಮೊದಲಿನಿಂದ ಅನ್ನಿಸಿತು. ಇವನು ವಿಶ್ವನಂತಲ್ಲ, ಉಳಿದ ಮಕ್ಕಳಂತೆಯೂ ಅಲ್ಲ–ಎಂದು. ಸಪ್ಪೆಯಾಗಿ, ಕುಪ್ಪೆಯಾಗಿ ಕೂರುತ್ತಿದ್ದ ಇವನಿಗೆ ಕಾಲು ಬರುತ್ತೋ ಇಲ್ಲವೋ ಎನ್ನು ಶಂಕೆಯಾಯಿತು. ಅಂಬೆಗಾಲಿಡುವ, ನಡೆವ ಪ್ರಯತ್ನಗಳೇ ಇರಲಿಲ್ಲ.

ಪಾರ್ವತಿ, ಚಂದ್ರಣ್ಣ ಇಬ್ಬರೂ ಮಗುವಿನ ನಿರಾಸಕ್ತ ರೀತಿಯನ್ನು ಗಮನಿಸಿ ಅರ್ಥಗರ್ಭಿತವಾಗಿ ಇಬ್ಬರೂ ನೋಡಿಕೊಂಡರು. ಶಂಕರನನ್ನು ಆಕರ್ಷಿಸಲು ಇವರಿಬ್ಬರೂ ಮಕ್ಕಳಂತಾದರು. ಅವನನ್ನು ನಗಿಸುವುದಕ್ಕೂ ನಡೆಸುವುದಕ್ಕೂ ಪ್ರಯತ್ನಿಸಿದರು.

ಶಂಕರ ದೇವರ ಕೋಣೆಯ ಬಳಿಗೆ ಹೇಗೋ ಸರಿದು ಕೂತಿದ್ದ. ಪಾರ್ವತಿ ಅವನಿಗಿಂತ ಎರಡು ಮೂರಡಿ ದೂರದಲ್ಲಿ ನಿಂತು, 'ಶಂಕರ.....ಶಂಕರ'–ಎಂದು ಪ್ರೀತಿಯಿಂದ ಕರೆದಳು. ಶಂಕರ ದೇವರ ವಿಗ್ರಹವನ್ನೇ ದಿಟ್ಟಿಸುತ್ತಿದ್ದ. ಮತ್ತೆ ಪಾರ್ವತಿ ಕೂಗಿದಳು. ಶಂಕರನಿಗೆ ಕೇಳಿಸಿತು. ತಿರುಗಿ ನೋಡಿದ. ಆದರೆ ಆ ಪುಟ್ಟ ಕಣ್ಣುಗಳಲ್ಲಿ ಎಷ್ಟು ಕೋಪವಿತ್ತು! ಪಾರ್ವತಿ ಸ್ತಂಭಿಸಿದಳು. ಇವನು ನನ್ನ ಮಗುವೊ, ಇಲ್ಲ ದೇವರ ಮಗುವೋ–ಎಂದು ಯೋಚಿಸಿದಳು. ಮರುಗಳಿಗೆಯೇ ಮತ್ತೊಮ್ಮೆ ಪ್ರೀತಿಯಿಂದ ಬಾ ಶಂಕರ – ಎಂದು ಆರ್ತವಾಗಿ ಕೈ ಚಾಚಿ ಕರೆದಳು. ಆಶ್ಚರ್ಯ,

ಅಂಬೆಗಾಲಿಟ್ಟಿದ್ದೇ ನೋಡಿರಲಿಲ್ಲ. ಈಗ ಅಂಬೆಗಾಲಿಟ್ಟುಕೊಂಡು ಓಡಿ ಬಂದ. ಪಾರ್ವತಿಗೆ ಪ್ರೀತಿ ಉಕ್ಕಿ ಬಂತು. 'ಶಂಕರ' 'ಮಗು' ಎನ್ನುತ್ತಾ ಅವನ್ನೆತ್ತಿ ಮುದ್ದಾಡಿದಳು.

ಇನ್ನು ಸ್ವಲ್ಪ ದಿನ ಹೋದರೆ ನನ್ನ ಮಗು ಸರಿಹೋಗುತ್ತೆ – ಎಂದು ಸಮಾಧಾನ ತಂದುಕೊಂಡಳು. ಕೆಲವು ಮಕ್ಕಳಿಗೆ ಮಾತು ನಡಿಗೆ ತಡವಾಗಿ ಬರುವುದುಂಟು– ಎಂದು ತೀರ್ಮಾನಿಸಿದಳು.

ಜಾನಕಿಯಿಂದ ಪತ್ರ ಬಂದಿತ್ತು. ಹಿರಿಯ ಮಗಳಾದ ಶಕುಂತಳೆಗೆ ಮದುವೆ – ಅಂತ. ಪಾರ್ವತಿ – ಚಂದ್ರಣ್ಣರಿಗೆ ಹೋಗಬೇಕಾಗಿತ್ತು. ಮನೆ, ಶಂಕರ ಇವರ ಯೋಚನೆ! ಮನೆಗೆ ಬೀಗ ಹಾಕಿಕೊಂಡು ಹೋಗಬೇಕಿತ್ತು. ಹೋಗದೆ ಇರಲು ಸಾಧ್ಯವಿಲ್ಲ. ಶಂಕರನನ್ನು ಮದುವೆಗೆ ಕರೆದೊಯ್ಯಲು ಇಷ್ಟವಿಲ್ಲ. ಅವನ ವಿಚಿತ್ರ ರೀತಿ ಎಲ್ಲರ ಗಮನ ಸೆಳೆದು, ತಲೆಗೊಂದು ಮಾತು ಆಡಿಯಾರೆಂಬ ಶಂಕೆ. ಚಿಕ್ಕಿಯೇಯೇನೋ ಇವನನ್ನು ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಆದರೆ ನೋಡಿದವರು ಏನೆಂದುಕೊಂಡಾರು? ಎಂದು ಯೋಚಿಸಿದ್ದ ಚಂದ್ರಣ್ಣನಿಗೆ ವಿಷಯ ಹೇಳಿದಾಗ, ಯಾರೇನೆಂದುಕೊಳ್ಳುತ್ತಾರೆನ್ನುವುದು ಬೇಡ. ನೀನು ಒಪ್ಪಿದರೆ ಚಿಕ್ಕಿಯಕೈಗೆ ಒಪ್ಪಿಸಿಬಾ ಮಗುವನ್ನು ಎಂದ.

ಪಾರ್ವತಿಗೆ ಚಂದ್ರಣ್ಣನ ಆ ಮಾತೊಂದು ಸಾಕಾಯಿತು. ಚಿಕ್ಕಿಯ ಎರಡನೆ ಮಗ ಪುಟ್ಟ ಮನೆಯ ಅಂಗಳದಲ್ಲಿ ಬುಗುರಿಯಾಡುತ್ತಿದ್ದ. ಕರೆದು ಹೇಳಿದಳು– ಪುಟ್ಟ ಬೇಗ ಓಡಿ ಹೋಗಿ ನಿಮ್ಮಮ್ಮನ್ನ ನಾನು ಕರೆದೆ ಅಂತ ಹೇಳಿ ಕರ್‍ಕೊಂಡು ಬರ್‍ತೀಯಾ ಎಂದಳು, ಬುಗುರಿಗೆ ದಾರ ಸುತ್ತುತ್ತಲೇ ಹೇಳಿದ – ಓ ಈಗೊಂಟು ಆಗ್ಬಂದ್ಬಿಡ್ತೀನಿ ಎಂದು ಹೇಳುತ್ತಾ ಕೈಲಿ ಅವೆರಡನ್ನು ಹಿಡಿದುಕೊಂಡೇ ಓಡಿದ.

ಚಿಕ್ಕಿಯ ಗುಡಿಸಲು ಇದ್ದದ್ದು ಎರಡನೇ ಬೀದೀಲಿ. ಕೇವಲ ಐದೇ ಐದು ನಿಮಿಷದ ನಡಿಗೆ. ಪುಟ್ಟನಿಗೆ ತಾಯಿಯನ್ನು ಕರೆತರಲು ಹೇಳಿ ಒಳಗೆ ನಡೆದಳು. ಶಂಕರ ತನ್ನ ಪಾಡಿಗೆ ತಾನು ಏನೇನೋ ಮಣಮಣಿಸುತ್ತಾ ಸುತ್ತಲೂ ನೋಡಿ ನೋಡಿ ನಗುತ್ತಿದ್ದಾನೆ. ಅದನ್ನು ನೋಡಿದಾಗ ಅವಳಿಗೂ ನಗು ಬತು. 'ಶಂಕು'– ಎಂದಳು. ಶಂಕರ ತಿರುಗಿ ಅವಳು ಕರೆಯದೆಯೇ ಬಂದ.

ಪಾರ್ವತಿಗೆ ಈ ಮಗುವೇ ಅರ್ಥವಾಗುವುದಿಲ್ಲ. ಒಮ್ಮೆ ಕರೆದ ಕೂಡಲೇ ಬರುತ್ತಾನೆ. ಮತ್ತೊಮ್ಮೆ ಕರೆದೂ ಕರೆದೂ ಬಾಯಾರಿದರೂ ಕಿವುಡನಂತೆ ನಿರ್ಲಕ್ಷ್ಯವಾಗಿದ್ದು ಬಿಡುತ್ತಾನೆ. ಕೊನೆಗೆ ಈ ಕಡೆಯೂ ತಿರುಗುವುದಿಲ್ಲ. ಇದೆಂಥ ವಿಚಿತ್ರ ಮಗುವಪ್ಪ! ಎಂದುಕೊಂಡಳು.

ಶಂಕರನನ್ನು ಕಂಕುಳಿಗೇರಿಸಿಕೊಂಡು ಪಾರ್ವತಿ ಚಿಕ್ಕಿಗೆ ಎದುರು ನೋಡಿದಳು. ಓಡಿ ಬರುತ್ತಿದ್ದ ಪುಟ್ಟ ಕಾಣಿಸಿದ. ಅವನ ಹಿಂದಿನಿಂದ ಚಿಕ್ಕಿಯೂ ಬರುತ್ತಿದ್ದಳು.

ಬಂದವಳೇ ಚಿಕ್ಕಿ ಕೇಳಿದಳು – ಏನ್ರವ್ವ ಏಳಿಕಳ್ಸಿದ್ರಂತೆ? ಏನಾರಾ ಆಗ್ಬೇಕಾಗಿತ್ತಾ? ಅಂದಳು. 'ಹೂಂ! ಕಣೇ.' ನಿನಗೂ ಗೊತ್ತಲ್ಲ, ಜಾನಕವ್ವನ ಮಗಳಿಗೆ ಮದುವೆ. ಅಯ್ಯನವರು ನಾನು, ಹೋಗ್ಬೇಕಂತಿದ್ದೀವಿ. ಆದರೆ ಶಂಕರನ್ದೇ ಸಮಸ್ಯೆ. ನನಗೇನೋ ಅವನ್ನ ಕರ್ಕೊಂಡು ಹೋಗೋಕೆ ಇಷ್ಟವಿಲ್ಲ. ಆದರೆ ಬಿಟ್ಟು ಹೋಗೋಕೆ ಯಾರಿದ್ದಾರೇಂತ ಯೋಚಿಸ್ತಿದ್ದೀನಿ. ನೋಡೇ ಚಿಕ್ಕಿ. ನಿನಗೆ ಕಷ್ಟವಾಗೋದಿಲ್ಲಂದ್ರೆ ನಾ ಬರೋವರ್ಗೆ ಇವನ್ನ ನೋಡಿಕೊಂಡು ಇರ್ತೀಯಾ? – ಎಂದು ಕೇಳಿದಳು.

ಚಿಕ್ಕಿಗೆ ಪಾರ್ವತಿಯ ಮಾತು ತಮಾಷೆಯೆನಿಸಿತು. ಅವಳಿಗೆ ನಂಬೋಕೆ ಆಗಲಿಲ್ಲ– ಸಂದೇಹದಿಂದ ಕೇಳಿದಳು –ಅವ್ವ, ನಿಜ ಏಳ್ತಿದ್ದೀರಾ? ನಿಮ್ಮ ಶಂಕರನ್ನ ನನ್ನ ಬಳಿ ಬಿಟ್ಟು 'ಒಯ್ತೀರಾ' – ಎಂದು.

ಯಾಕೆ ಚಿಕ್ಕಿ? ಹಸುಕೂಸನ್ನು ನನಗೊಪ್ಪಿಸಿ ಅದರ ಸೇವೆ ಮಾಡಿಸ್ಕೊಂಡೆ. ಈಗ ಈ ಮಗುವನ್ನು ಬಿಟ್ಟರೆ ಯಾಕೆ ಅಷ್ಟಾಗಿ ಕಣ್ಬಿಡ್ತೀಯ? ನೀನೇನು ಮನುಷ್ಯಳಲ್ಲವಾ? ಎಂದಳು.

ಸರಿ ಕಣವ್ವಾ, ಈ ಮುದ್ದು ಶಂಕರನನ್ನು ನಾನು ನೋಡ್ಕೋತೀನಿ ಎಂದು ಕಂಕುಳಲ್ಲಿದ್ದ ಶಂಕರನನ್ನು 'ಬರ್ತೀಯಾ ಶಂಕರ, ನಂತಾವ' – ಎಂದು ಕೈಚಾಚಿದರೆ ನಿಮಿಷ ಮಾತ್ರದಲ್ಲಿ ಅವಳತ್ತ ಬಾಗಿದ. ಪಾರ್ವತಿ ಶಂಕರನನ್ನು ಅವಳ ಕೈಗೆಕೊಟ್ಟು 'ಚಿಕ್ಕಿ ಇವನ್ನ ಇಟ್ಕೋ ನಾನು, ಸ್ವಲ್ಪ ಕೆಲಸ ಇದೆ, ಅದನ್ನು ಮುಗಿಸಿ ಬಂದ್ಬಿಡ್ತೀನಿ.'

'ಹುಂ ಕಣವ್ವ, ಅಂದಂಗೆ ನೀವು ಊರಿಗೆ ಹೋಗೋದು ಯಾವಾಗ?

'ಇವತ್ತು ರಾತ್ರಿಗೇ ಹೊರಡಬೇಕು. ನೀನು ಈಗಲೇ ಇಲ್ಲಿ ಇದ್ಬಿಡು. ಪುಟ್ಟ, ನೀನು ಇಲ್ಲೇ ಊಟಮಾಡಿ.'

'ಇಲ್ಲ ಕಣವ್ವ, ಈರ ಮಧ್ಯಾಹ್ನ ಉಣ್ಣೋಕೆ ಬರ್ತಾನೆ. ಮಕ್ಕಳೂ ಶಾಲಿ ಮುಗಿಸ್ಕೊಂಡು ಮನೆಗೆ ಬರ್ತಾವೆ. ಅವರ್ನೆಲ್ಲ ಇಚಾರಿಸ್ಕೊಂಡು ಸಂಜೇಗೆ ಬಂದ್ಬಿಡ್ತೀನಿ.

'ಖಂಡಿತ ಬರ್ತೀ ತಾನೇ ಚಿಕ್ಕಿ? ನಿನ್ನ ಈರನಿಗೂ ವಿಷಯ ತಿಳಿಸು. ಅಯ್ಯನೋರೂ ಹೇಳೇ ಇರ್ತಾರೆ.'

'ಆಯ್ತು, ನನ್ನ ಈರ ಕೂಡ ಏನನ್ನಾಕಿಲ್ಲ. ದಣೀರ ಮನೆಗೆ ಅಂದ್ರೆ ಮುಂಚೆ ಓಗು–ಅಂತಾನೆ.'

'ಹಾಗಾದ್ರೆ, ನಿನಗೆ ತೊಂದರೆ ಗಿಂದರೆ ಆಗೊಲ್ಲ ತಾನೆ? ಖಚಿತಪಡಿಸಿಕೊಳ್ಳುವಂತೆ ಕೇಳಿದಳು.'

'ಯಾಕ್ರವ್ವ, ನಿಂಗೆ ಈಟೊಂದು ಸಂಸೇಯ?'

'ಹಾಗಲ್ಲ ಚಿಕ್ಕಿ. ನಿನಗೆ ತೊಂದರೆಯಾಗುತ್ತೇನೋ – ಅಂತ ಅಷ್ಟೆ ಸರಿ, ನಾ ಬರ್ತೀನಿ. ನೀ ಒಂದ್ನಿಮಿಷ ಇರು–ಎಂದು ಒಳಗೆ ಹೋಗಿ ಐದು ನಿಮಿಷದ ನಂತರ, ಒಂದು ಪಾತ್ರೆಯಲ್ಲಿ ಅನ್ನ, ಒಂದು ಪಾತ್ರೆಯಲ್ಲಿ ಸಾರು ತಂದುಕೊಟ್ಟಳು.

ಚಿಕ್ಕಿಯ ಕಣ್ಣು ಕೃತಜ್ಞತೆಯಿಂದ ತುಂಬಿತು. ಶಂಕರನನ್ನು ಪಾರ್ವತಿಯ ಕೈಗೆ ಒಪ್ಪಿಸಿ ಪಾತ್ರೆಗಳನ್ನು ಜೋಡಿಸಿಕೊಂಡು ಸಂಜೆ ಬರುವುದಾಗಿ ಹೇಳಿ ಹೋದಳು.

ಒಂದು ಸಮಸ್ಯೆ ಪರಿಹಾರವಾಯಿತು. ಚಂದ್ರಣ್ಣ ಊಟಕ್ಕೆ ಬಂದಾಗ ಪಾರ್ವತಿ ತನ್ನ ವ್ಯವಸ್ಥೆಯನ್ನು ತಿಳಿಸಿದಳು. ಚಂದ್ರಣ್ಣ ಹೂಂಗುಟ್ಟಿದ. ಊಟ ಮಾಡಿದ್ದಾದ ಮೇಲೆ ಕೈತೊಳೆಯುತ್ತಾ, 'ಹಾಗಾದರೆ ಹೊರಡೋದಕ್ಕೆ ಸಿದ್ಧವಾಗು' ಎಂದ. ಪಾರ್ವತಿ ನಕ್ಕು, 'ಬಿಡೀಂದ್ರೆ ಅದೆಷ್ಟು ಹೊತ್ತು ಮಹಾ! ಎಷ್ಟು ಹೊತ್ತಿಗೆ ಹೋಗೋದೂಂತ ನೀವು ಹೇಳಿದರೆ ಅಷ್ಟು ಹೊತ್ತಿಗೆ ರೆಡಿಯಾಗಿರ್ತೀನಿ–ಎಂದಳು'.

'ಸಂಜೆ ಆರು ಗಂಟೆಗೆ ಬಸ್ಸಿದೆ. ಅದರಲ್ಲೇ ಹೊರಟು ಬಿಡೋಣ ನಾಳೆ ಅಲ್ಲಿದ್ದು ನಾಳಿದ್ದು ಹೊರಟು ಬಂದ್ಬಿಡೋಣ' ಎಂದ.

'ಮತ್ತೆ ನಿಮಗೆ ಕೆಲಸವಿದೆಯಾ? – ಎಂದು ಪ್ರಶ್ನಿಸಿದಳು.

'ಕೆಲಸವೇನೂ ಅಂಥಾದ್ದಿಲ್ಲ. ಆದರೆ ಸುಮ್ಮನೆ ಒಂದು ಸುತ್ತು ಹೋಗಿ ಬಂದ್ಬಿಡ್ತೇನೆ. ನೀನು ಅಷ್ಟರಲ್ಲಿ ರೆಡಿಯಾಗಿದ್ದರೆ ಆಯ್ತು – ಎಂದು ಹೇಳಿದ.

ಚಂದ್ರಣ್ಣ ಉಡುಪು ಬದಲಾಯಿಸಿ ಹೊರಗೆ ಹೊರಟ. ಪಾರ್ವತಿಯೂ ಊಟ ಮಾಡಿ ಪ್ರಯಾಣದ ಸಿದ್ಧತೆಗೆ ತೊಡಗಿದಳು. ಅತ್ತಿಗೆ ಮತ್ತು ಅಣ್ಣನಿಗೆ ಸೀರೆ ಪಂಚೆಗಳನ್ನು ತೆಗೆದಿರಿಸಿದಳು. ಮದುವೆ ಹೆಣ್ಣಿಗೆಂದು ಒಂದು ಚಿನ್ನದ ಉಂಗುರವನ್ನಿಟ್ಟುಕೊಂಡಳು. ಪೆಟ್ಟಿಗೆಯೊಳಗಿಂದ ಒಂದು ಭಾರಿ ಅಂಚಿನ ದೊಡ್ಡ ಸೀರೆಯೊಂದನ್ನು ತೆಗೆದಳು. ಗಿಣಿ ಹಸಿರು ಬಣ್ಣದ ಮೈದಾನ ಮಧ್ಯೆ ಮಧ್ಯೆ ಜರಿಯ ಬಳ್ಳಿ ಹೂಗಳು. ಹಸಿರು ಬಣ್ಣದ ಹಿನ್ನೆಲೆಗೆ ಜರಿಯ ಆಂಚು. ಚಂದ್ರಣ್ಣನ ಪ್ರೀತಿಯ ಸೀರೆ. ಅದನ್ನುಟ್ಟು ಮೊದಲ ಬಾರಿಗೆ ಚಂದ್ರಣ್ಣನ ಬಳಿಗೆ ಹೋದಾಗ, ಅದನ್ನು ಹೊರುವುದರಲ್ಲಿ ಅವಳ ಕಷ್ಟವನ್ನು ನೋಡಿ ನಕ್ಕು ಮೂಗಿಗಿಂತ ಮೂಗುತಿ ಭಾರ' ಅನ್ನೋ ಹೇಗೆ ನಿನಗಿಂತ ಭಾರವಾಗಿರುವ ಸೀರೆ ನಿನಗ್ಯಾಕೆ? ತೆಗೆದಿರಿಸಿ ಬಾರೆ ಬಾಲೆ ಚತುರೆ' ಎಂದು ಕೀಟಲೆ ಮಾಡಿದ್ದುದರ ನೆನಪಾಗಿ ಮುಸಿ ಮುಸಿ ನಕ್ಕಳು. ಚಂದ್ರಣ್ಣನ ಚೇಷ್ಟೆಗಳನ್ನು ನೆನೆಸಿಕೊಂಡಷ್ಟೂ ನಾಚಿಕೆಯೆನಿಸಿತು. ಮಂಚದ ಮೇಲೆ ಶಂಕರ ಮಲಗಿದ್ದಾನೆ. ಅವನು ಕಣ್ಣಿಗೆ ಬಿದ್ದದ್ದೇ ಮರೆತಿದ್ದ ತಾಯ್ತನ ಜಾಗೃತವಾಗಿ, ಛಿ! ತಾಯಿಯಾಗಿದ್ದರೂ ನನಗ್ಯಾಕೆ ಇಂತಹ ನೆನಪುಗಳು – ಎಂದುಕೊಂಡಳು.

ಎಲ್ಲಾ ರೆಡಿಯಾದ ಕೂಡಲೇ ಶಂಕರನನ್ನು ಎಬ್ಬಿಸಿದಳು. ಅವನ ಮುಖ ತೊಳೆದು ನೀಟಾಗಿ ಬಟ್ಟೆ ಹಾಕಿ, ದೃಷ್ಟಿ ಬೊಟ್ಟಿಟ್ಟಳು. ಹೋಗುವ ಆತುರದಲ್ಲಿ ಹಾಲು

ಕುಡಿಸಲು ಆಗುವುದಿಲ್ಲವೆಂದು, ಹಾಲು ಕಾಸಿ, ಸಕ್ಕರೆ ಬೆರೆಸಿ ಚಮಚದಿಂದ ಶಂಕರನಿಗೆ ಹಾಲು ಕುಡಿಸಿದಳು. ಜಾಣ ಮಗುವಿನಂತೆ ಶಂಕರ ತಾಯಿಯ ಉಪಚಾರವನ್ನೆಲ್ಲ ಒತ್ತಾಯವಿಲ್ಲದೆ ಮಾಡಿಸಿಕೊಂಡ. ಅವನ ಮುಂದಷ್ಟು ಆಟದ ಸಾಮಾನುಗಳನ್ನು ತಂದು ಸುರವಿ, ತಾನಿನ್ನು ಸಿದ್ಧಳಾಗಬೇಕೆಂದು ಹೊರಟಳು. ಚಂದ್ರಣ್ಣನೂ ಅಷ್ಟರಲ್ಲಿ ಬೇಗನೆ ಬಂದು ಬಿಟ್ಟ.

ಪಾರ್ವತಿ, ಚಂದ್ರಣ್ಣ ಹೊರಡಲು ಸಿದ್ಧವಾಗಿದ್ದಾಗ ಚಿಕ್ಕಿ ಪ್ರವೇಶಿಸಿದಳು. ಹಿಂದಿನಿಂದ ಈರ ಬಂದ.

ಪಾರ್ವತಿ ಪದೇ ಪದೇ ಮನೇ ಕಡೆ, ಮಗುವಿನ ಕಡೆ ಜಾಗ್ರತವಹಿಸಬೇಕೆಂದು ತಿಳಿಸಿದಳು. ಚಂದ್ರಣ್ಣ ಈರನಿಗೆ ಮನೆಯ ಕಡೆ ನೋಡಿಕೊಂಡಿರಲು ಮತ್ತೊಮ್ಮೆ ಹೇಳಿದ. ರಾತ್ರಿ ಈರಣ್ಣ ಇಲ್ಲಿಯೇ ಮಲಗುವುದು – ಎಂದು ತೀರ್ಮಾನವಾಗಿತ್ತು. ಈರ ಅವರ ಮಾತಿಗೆಲ್ಲಾ ವಿಧೇಯನಾಗಿ ಹೂಂಗುಟ್ಟಿದ. ಶಂಕರ ಚಿಕ್ಕಿಯ ಕಂಕುಳೇರಿ ಬಿಟ್ಟಿದ್ದ.

ಈರ, ಈರನ ತಂದೆ ಹೀಗೆ ಎಲ್ಲರೂ ಈ ಮನೆಗೆ ದುಡಿದವರೇ. ಚಂದ್ರಣ್ಣನಿಗೆ ಈರನ ಪ್ರಾಮಾಣಿಕತೆಯ ಬಗ್ಗೆ ತುಂಬಾ ನಂಬಿಕೆ. ಅದಕ್ಕೆ ಅವನು ಎಂತಹ ವ್ಯವಹಾರವೇ ಆಗಲಿ ಈರನಿಂದ ಬಚ್ಚಿಟ್ಟದ್ದಿಲ್ಲ. ಅವನ ಕೈಗೆ ಸಾವಿರ ಕೊಟ್ಟರೂ, ಒಂದು ಪೈಸೆ ಕಡಿಮೆ ಬೀಳುವುದಿಲ್ಲ. ಅದಕ್ಕೆಂದೇ ಈರನಿಗೆ ಚಿಕ್ಕಿಗೆ ಮನೆಯನ್ನು ಒಪ್ಪಿಸಿ ಹೋದದ್ದು. ತಿಜೋರಿ ತೆರೆದಿರಿಸಿ ಮರೆತಿದ್ದರೂ ಪರವಾಯಿಲ್ಲ. ಈರನ ಜವಾಬ್ದಾರಿಯಲ್ಲಿ ಒಂದು ಇರುವೆಯೂ ಅವನ ಅನುಮತಿಯಿಲ್ಲದೆ ಒಳಗೆ ಹೋಗುವಂತಿಲ್ಲ. ಚಂದ್ರಣ್ಣನಿಗೆ ಆ ಮನೆಯೆಷ್ಟು ಹಳೆಯದೋ, ಪರಿಚಿತವಾದ್ದೋ, ಅಷ್ಟೇ ಹಳೆಯದು – ಅಷ್ಟೇ ಪರಿಚಿತವಾದ್ದು ಈರನಿಗೆ. ಈರನ ಕೈ ಹಿಡಿದು ಬಂದ ಚಿಕ್ಕಿಯೂ ಈ ಮನೆಗೆ ಈರನಿಂದ ಸೇವೆಯನ್ನು ಹಂಚಿಕೊಂಡು ಸಲ್ಲಿಸುತ್ತಿದ್ದಳು. ಎಂದೂ ಕೆಲಸದವರಂತೆ ತಮ್ಮನ್ನು ಕಂಡಿಲ್ಲವೆಂಬುದೇ ಇವರಿಗೆ ಹೆಮ್ಮೆ. ಆ ಮನೆಮಂದಿಗಾಗಿ ಇನ್ನೆಷ್ಟು ತಲೆಮಾರುಗಳಾದರೂ, ಸೇವೆ ಸಲ್ಲಿಸಲು ಸಿದ್ಧರಿದ್ದರು.

ಅಣ್ಣತಮ್ಮಂದಿರಿಲ್ಲದ ಚಂದ್ರಣ್ಣ ಈರನನ್ನೇ ತಮ್ಮನಂತೆ ಕಾಣುತ್ತಿದ್ದ ಈರನೂ ಅಷ್ಟೇ, ಚಂದ್ರಣ್ಣನ ಅನುಪಸ್ಥಿತಿಯಲ್ಲೂ ಆತನ ಕೆಲಸಗಳನ್ನು ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ. ಹೊಲಗದ್ದೆಗಳ ಕೆಲಸವನ್ನು ಬೆಳೆಯುಕೊಯ್ಲನ್ನೂ ನೋಡಿಕೊಳ್ಳುತ್ತಿದ್ದವನು ಈರನೇ. ಹಣದ ವ್ಯವಹಾರ ಬಂದಾಗ, ಚಂದ್ರಣ್ಣನಿಗೆ ಕಾಯುತ್ತಿದ್ದನೇ ಹೊರತಾಗಿ ಮಿಕ್ಕೆಲ್ಲಾ ವಿಚಾರಗಳನ್ನೂ ತಾನೇ ನೋಡಿಕೊಳ್ಳುತ್ತಿದ್ದ.

ಈರ, ಪುಟ್ಟ ಶಂಕರನೊಂದಿಗೆ ಆಡಲು ಕುಳಿತರು. ಚಿಕ್ಕಿ ಮನೆಗೆ ಹೋಗಿ ಬರುತ್ತೇನೆಂದಳು.

ಶಂಕರನಿಗೆ ವಯಸ್ಸಾಗುತ್ತಿದ್ದಂತೆ, ಸ್ವಲ್ಪ ಛಳಿ ಬಿಟ್ಟು ಮಾತನಾಡತೊಡಗಿದ. ಪಾರ್ವತಿಗೆಅವನ ವಿಚಾರದಲ್ಲಿದ್ದ ಭಯ ದೂರವಾಯಿತು. ಎಲ್ಲರಂತೆ ನಡೆಯಲು, ಮಾತಾಡಲು ಕಲಿತ. ಆದರೆ ಮಾತು ಬಂದದ್ದು ಸ್ವಲ್ಪ ತಡವೇ ಆಯಿತು. ಮೊದಲಿಗಿಂತ ತೀರಾ ಮೊದ್ದಾಗಿ ಕುಳಿತುಕೊಳ್ಳದೆ ಸ್ವಲ್ಪ ಚುರುಕಾದ, ಮಾತುಗಳಾಡುತ್ತಿದ್ದರೂ ಅವಶ್ಯಕವಾದ ಒಂದೆರಡು ಮಾತ್ರ! ಮೂಗನಾಗಿ ಬಿಟ್ಟಿದ್ದರೆ ಗತಿಯೇನು! – ಎಂದು ಪಾರ್ವತಿ ಸಮಾಧಾನ ಪಟ್ಟುಕೊಂಡಳು.

ಐದು ವರ್ಷ ತುಂಬಿತು. ಪಾರ್ವತಿ ಚಂದ್ರಣ್ಣನಿಗೆ, ಶಂಕರನ ವಿದ್ಯಾಭ್ಯಾಸದ ಬಗ್ಗೆ ಪ್ರಸ್ತಾಪ ಮಾಡಿದಳು. 'ಹೀಗೆ ಬಿಟ್ಟರೆ, ನಾಳೆ ಅವನು ಶಾಲೆಗೆ ಹೋಗಬೇಕಾದರೆ ಹಟ ಹಿಡಿದಾನು. ಆದಷ್ಟೂ ಬೇಗ ಅವನನ್ನೂ ಶಾಲೆಗೆ ಹಾಕಬೇಕು. ಅದಕ್ಕೂ ಮುಂಚೆ ಶಂಕರನಿಗೆ ಮನೆಯಲ್ಲಿ ಅಕ್ಷರಾಭ್ಯಾಸ ಪ್ರಾರಂಭ ಮಾಡಿಸಬೇಕು. ಒಂದು ಒಳ್ಳೆ ದಿನ ನೋಡಿ ಚಿಕ್ಕ ಜೋಯಿಸರಿಗೇ ಅಕ್ಷರಾಭ್ಯಾಸ ಮಾಡಿಸುವುದಕ್ಕೆ ಹೇಳೋಣ' ಎಂದಳು.

'ಹಾಗೇ ಆಗಲಿ ಪಾರ್ವತಿ. ಇವತ್ತೇ ನಾನು ಹೋಗಿ ಜೋಯಿಸರಿಗೆ ಒಳ್ಳೇ ದಿನ ನೋಡಿ ಹೇಳುವುದಕ್ಕೆ ಹೇಳ್ತೀನಿ. ಆಮೇಲೆ ಬೇಕಾದರೆ ಅವನನ್ನು ಯಾವ ಶಾಲೆಗೆ ಹಾಕೋದೂಂತ ಯೋಚನೆ ಮಾಡೋಣ – ಎಂದು ಹೇಳಿದ.

'ಹಾಗೇ ಆಗಲಿ ಪಾರ್ವತಿ. ಇವತ್ತೇ ನಾನು ಹೋಗಿ ಜೋಯಿಸರಿಗೆ ಒಳ್ಳೇ ದಿನ ನೋಡಿ ಹೇಳುವುದಕ್ಕೆ ಹೇಳ್ತೀನಿ. ಆಮೇಲೆ ಬೇಕಾದರೆ ಅವನನ್ನು ಯಾವ ಶಾಲೆಗೆ ಹಾಕೋದೂಂತ ಯೋಚನೆ ಮಾಡೋಣ– ಎಂದು ಹೇಳಿದ.

ಚಂದ್ರಣ್ಣನಿಗೆ ಹೊರಗಡೆ ಯಾವುದಾದರೂ ಬೋರ್ಡಿಂಗ್ ಸ್ಕೂಲಿಗೆ ಹಾಕಿ ಚೆನ್ನಾಗಿ ಓದಿಸಿ ದೊಡ್ಡ ಆಫೀಸರನ್ನಾಗಿ ಮಾಡಬೇಕೆಂಬ ಹಂಬಲ. ಪಾರ್ವತಿಗೂ ಅದೇ ಆಸೆಯೇನೋ ಇತ್ತು. ಆದರೆ ಶಂಕರನಿಂದ ದೂರವಿರುವುದು ಅವಳಿಗೆ ಸಾಧ್ಯವಿಲ್ಲ. ತುಂಬಾ ವರ್ಷಗಳ ನಂತರ ಮನೆಗೊಂದು ಮಗು, ಮನಕೊಂದು ನಗು – ಅನ್ನುವ ಹಾಗೆ ಶಂಕರ ಬಂದಿರಬೇಕಾದರೆ ಅವನಿಂದ ದೂರವಿದ್ದು ನೆಮ್ಮದಿ ತಂದುಕೊಳ್ಳಲು ಸಾಧ್ಯವಿರಲಿಲ್ಲ. ಕ್ಷಣ ಕ್ಷಣಕ್ಕೂ ಅವನ ಹಿತವನ್ನೇ ಚಿಂತಿಸುತ್ತಿರುವಾಗ, ಅವನನ್ನು ಕಾಣದವರ ಕೈಗೊಪ್ಪಿಸುವುದನ್ನು ಕಲ್ಪಿಸಿ ಕೊಳ್ಳಲಾರದವಳಾಗಿದ್ದಳು.

ಶಂಕರ ಬೇರೆ ಎಲ್ಲ ಮಕ್ಕಳಂತೆ ಲವಲವಿಕೆಯಿಂದ ಗೆಳೆಯರೊಂದಿಗೆ ಬೆರೆಯುತ್ತಿರಲಿಲ್ಲ. ಸುತ್ತಮುತ್ತಲ ಮಕ್ಕಳು ಬಂದು ಶಂಕರನನ್ನು ಆಟಕ್ಕೆ ಬಾ ಎಂದು ಒತ್ತಾಯಪಡಿಸಿದರೂ, ಬಲವಂತವಾಗಿ ಎಳೆದುಕೊಂಡು ಹೋದರೂ ಬೆದರುಕಂಗಳಿಂದ ನೋಡಿ, ಕೈ ಕೊಸರಿಕೊಂಡು ಓಡಿ ಬಂದು ಪಾರ್ವತಿಯನ್ನು ಗಟ್ಟಿಯಾಗಿ ತಬ್ಬಿಕೊಂಡು ಬಿಡುತ್ತಿದ್ದ. ಅವನ ಸ್ನೇಹ ಮನುಷ್ಯರೊಂದಿಗಿಂತ ಪ್ರಾಣಿಗಳೊಂದಿಗೇ ಹೆಚ್ಚು.

ನಿರ್ಭಯವಾಗಿ ಹಸುವಿನ ಕಾಲುಗಳ ನಡುವೆ ಹೋಗಿ ನಿಲ್ಲುತ್ತಿದ್ದ. ಕರುವನ್ನು ನೇವರಿಸುತ್ತಿದ್ದ ನಾಯಿಗಳನ್ನು ಎಳೆದು ಅಪ್ಪಿಕೊಳ್ಳುತ್ತಿದ್ದ.

ಕಣ್ಣು ತಪ್ಪಿದರೆ ಸಾಕು ಬೀದಿಗಿಳಿದು ನೇರಾಗಿ ಕೆರೆಯ ಕಡೆಗೇ ಹೆಜ್ಜೆ ಹಾಕುತ್ತಿದ್ದ. ಅವನಿಗೆ ದಾರಿ ತಿಳಿದೋ ತಿಳಿಯದೆಯೋ ಅದೇ ದಾರಿಯನ್ನು ಹಿಡಿಯುತ್ತಿದ್ದ. ಅಕ್ಕಪಕ್ಕದವರು ಯಾರೋ ಕಂಡು ಕರೆದುಕೊಂಡು ಬಂದು ಬಿಡುತ್ತಿದ್ದರು. ಹೊರಗೆ ಬಯಲಿನಲ್ಲಿ ಒಬ್ಬನೇ ನಿಂತು ಆಕಾಶದತ್ತ ಕಣ್ಣು ಮಾಡಿ ನೋಡುವುದು ಅವನಿಗೆ ಮಾಮೂಲಾಗಿತ್ತು. ಈ ಪುಟ್ಟ ಶಂಕರನ ರೀತಿಯನ್ನು ನೋಡಿದವರು, ಯಾಕಂಗೆ ಈ ಮಗು ಬೆಪ್ಪು ಬೆಪ್ಪಾಗಿ ನಿಲ್ಲುತ್ತೆ. ಎಲ್ಲೋ ಹೆದರಿರಬೇಕು. ಮಂತ್ರ ಹಾಕಿಸಬಾರದೇ? ಯಂತ್ರ ಕಟ್ಟಿಸಬಾರದೇ– ಎಂದು ಪ್ರಶ್ನಿಸುತ್ತಿದ್ದರು.

ಶಂಕರನನ್ನು ಹೊರಗೆ ಸುತ್ತಾಡಿಸಬೇಕಾದರೆ ಈರನೋ, ಚಿಕ್ಕಿಯೋ ಆಗಬೇಕಾಗಿತ್ತು. ಪಾರ್ವತಿ ಹೊರಗೆ ಹೋಗುವಂತಿಲ್ಲ, ಚಂದ್ರಣ್ಣ ಮಕ್ಕಳನ್ನು ಹೊರಗೆ ಕರೆದೊಯ್ಯುವ ಅಭ್ಯಾಸವಿಟ್ಟುಕೊಂಡಿಲ್ಲ.

ಮೊನ್ನೆ ಸಂಜೆ, ಚಿಕ್ಕಿ ತನ್ನ ಮಗಳನ್ನು ಹುಡುಕಿಕೊಂಡು ಬಂದಿದ್ದಳು. ಮಕ್ಕಳು ಪಾರ್ವತಿಯ ಮನೆಯ ಅಂಗಳದಲ್ಲಿ ಆಡುತ್ತಿದ್ದರು. ಶಂಕರ ಸುಮ್ಮನೆ ನಿಂತುಕೊಂಡು ಆಟ ಗಮನಿಸುತ್ತಿದ್ದನೇ ವಿನಃ ಆಟಕ್ಕೆ ಸೇರಲಿಲ್ಲ. ಬಾರೋ ಎಂದು ಕರೆದರೂ ಹೋಗಲಿಲ್ಲ. ಚಿಕ್ಕಿ ಬಂದು ಮಕ್ಕಳನ್ನು ಗದ್ದರಿಸಿ ಕರೆದಳು. ಮಕ್ಕಳಿಗೆ ಆ ಕೂಡಲೇ ಮನೆಗೆ ಹೋಗುವ ಮನಸ್ಸಿರಲಿಲ್ಲ. ಆದರೆ ತಾಯಿ ಗದರಿಸಿದ್ದಕ್ಕೆ ಹೆದರಿ ಅವಳ ಹಿಂದೆ ಹೋದರು. ಅಲ್ಲಿಯವರೆವಿಗೂ ಸುಮ್ಮನಿದ್ದ ಶಂಕರ 'ಅಮ್ಮ' ಎಂದು ಕೂಗಿದ. ಚಿಕ್ಕಿ ತಿರುಗಿ ನೋಡಿದರೆ, 'ನಾನೂ ಬರುತ್ತೇನೆ' ಎನ್ನುವಂತೆ ಸನ್ನೆ ಮಾಡಿದ. 'ನೀ ಬ್ಯಾಡ ಶಂಕರಣ್ಣ ತುಂಬಾ ಹೊತ್ತಾಗಿದೆ' ಎಂದು ಹೇಳುತ್ತಾ ಹತ್ತಿರ ಬಂದು ಮುತ್ತುಕೊಟ್ಟಳು. ಅವಳ ಮಾತು ಅರ್ಥವಾಗಿರಬೇಕು. ಅಳು ಮೋರೆ ಮಾಡಿದ. ಚಿಕ್ಕಿಯ ಮನಸ್ಸು ಕರಗಿತು. 'ಅವ್ವಾ......ಅವ್ವಾ.....' ಎಂದು ಪಾರ್ವತಿಯನ್ನು ಕೂಗಿ ಕರೆದಳು. ಪಾರ್ವತಿ, ಯಾರು ಬಂದರಪ್ಪಾ ಈ ಹೊತ್ತಲ್ಲಿ? ಎಂದುಕೊಳ್ಳುತ್ತಾ ಹೊರಗೆ ಬಂದಳು. ಚಿಕ್ಕಿಯನ್ನು ನೋಡಿ, ಓ ನೀನಾ ಕರೆದದ್ದು? ನಾನು ಯಾರೋ ಎಂದುಕೊಂಡಿದ್ದೆ. ಏನು ಕೂಗಿದ್ದು ಚಿಕ್ಕಿ?....ಎಂದು ಪ್ರಶ್ನಿಸಿದಳು. 'ಶಂಕರಪ್ಪ, ನಂಕೂಡ ಬರ್ತೀನಿಂತಾವ್ನೆ ಕರ್ಕಂಡೋಗ್ಲಾ? ಎಂದು ಕೇಳಿದಳು ಚಿಕ್ಕಿ. ಪಾರ್ವತಿ ಶಂಕರನ ಕಡೆಗೆ ತಿರುಗಿ 'ಏನೋ ಶಂಕರ' ಹೋಗ್ತೀಯಾ ಅವಳ ಜೊತೆ? ಎಂದು ಕೇಳಿದ್ದಕ್ಕೆ ಶಂಕರನು 'ಹೂಂ' ಎಂದು ತಲೆತೂಗಿದ.

ಚಿಕ್ಕ ಮಧ್ಯೆ ಬಾಯಿ ಹಾಕಿ – ಕಳಿಸಿ ಅವ್ವ, ಪಾಪ, ಇವನಿಗೆ ಒಬ್ಬನೇ ಇದ್ದು 'ಬೇಜಾರಾಗಿರುತ್ತೆ' ಎಂದು ಹೇಳಿದಳು.

'ಸರಿ ಕರ್ಕೊಂಡು ಹೋಗು. ಒಂದು ಸುತ್ತು ಹಾಕಿಸಿ ಕರ್ಕೊಂಡು ಬಂದ್ಬಿಡು ಬೇಗ. ಇಲ್ಲವಾದರೆ, ಅಯ್ಯನವರು ಬಂದ್ರೆ ಸಿಟ್ಟಾಗ್ತಾರೆ.' ಎಂದಳು.

'ನಂಗೆ ಅಟ್ಟೂ ಗೊತ್ತಿಲ್ವೆ ಸುಮ್ಮನೆ ಆ ಕೆರೆದಂಡೆವರೆಗು ಹೋಗಿ ಬರ್ತೇವೆ' – ಎಂದು ಚಿಕ್ಕಿ ಹೇಳುತ್ತಿದ್ದುದನ್ನು ಕೇಳಿ ಚಿಕ್ಕಿಯ ಮಕ್ಕಳಾದ ರಂಗ, ಚಂದ್ರಿ ತಾವು ಅವಳೊಂದಿಗೆ ಬರುತ್ತೇವೆಂದು ಹಟ ಹಿಡಿದವು. ಆದರೆ ಚಿಕ್ಕಿ ಅವರನ್ನೆಲ್ಲಾ ಗುಡ್ಡೆ ಹಾಕಿಕೊಂಡು, ಹೋಗಿ ಬರುವುದು ಪ್ರಯಾಸವೆನಿಸಿದ್ದರಿಂದ, 'ನೋಡಿ ಮಕ್ಳೆ ಮನೇಲಿ ಅಕ್ಕ ನಿಮಗೆಲ್ಲಾ ಪಾಯಸ ಮಾಡಿಕ್ಕವ್ಳೆ, ಬೇಗ ಓದ್ರೆ ಸಿಕ್ತೈತಿ, ಇಲ್ಲಾಂದ್ರೆ ಉಳಿಯಾಕಿಲ್ಲ. ಏಳಿ, ನೀವು ನಂಜೊತೆ ಬರ್ತೀರೋ? ಇಲ್ಲ ಓಗ್ತೀರೋ? ಬೇಗ ಏಳಿ ನನಗೆ? ಎಂದು ಆತುರಪಡಿಸಿದಳು.

ಪಾಯಸದ ಹೆಸರು ಕಿವಿಗೆ ಬಿದ್ದುದ್ದೇ, ಮಕ್ಕಳೆಲ್ಲಾ, ನಾನು ನಿಂಕೂಡ ಬರಾಕಿಲ್ಲ. ಮನೀಗೆ ಓಯ್ತೀವಿ, ಎಂದೋಡಿದರು. ಮಕ್ಕಳು ಓ ಎಂದು ಕೂಗುತ್ತಾ ಹೋದದ್ದು ನೋಡಿ ಶಂಕರ ಗೆಲುವಿನಿಂದ ನಕ್ಕ.

ಚಿಕ್ಕಿ ಶಂಕರನನ್ನು ಎತ್ತಿಕೊಂಡು ಹೊರಟಳು. ಶಂಕರನಿಗೆ ಬಿಡುಗಡೆಯ ಆನಂದ. ಹೊರಗಿನ ವಾತಾವರಣ ಅವನ ಮುದುಡಿದ ಮನಸ್ಸನ್ನು ಅರಳಿಸುತ್ತಿತ್ತು. ತನಗೆ ಆಗುತ್ತಿರುವ ಆನಂದ ಚಿಕ್ಕಿಗೂ ಆಗುತ್ತಿರುವುದೇನೋ ಎಂದು ನೋಡುವಂತೆ ಅವಳ ಮುಖದತ್ತ ಬಗ್ಗಿದ. ಚಿಕ್ಕಿ ಶಂಕರನನ್ನು ಗಮನಿಸುತ್ತಿದ್ದಳು. ಶಂಕರನ ಈ ಚೇಷ್ಟೆ ಅವಳಿಗೆ ನಗು ತರಿಸಿತು. 'ಬೀದಿ' ಎನ್ನುವುದನ್ನು ಮರೆತು ಅವನ ಮೇಲೆ ಮುತ್ತಿನ ಮಳೆಗರೆದಳು.

ಶಂಕರನಿಗೆ ಕಂಕುಳಲ್ಲಿರುವುದು ಹಿಂಸೆಯಾಗುತ್ತಿತ್ತು. ಇಳಿಯುತ್ತೇನೆಂದ – ಚಿಕ್ಕಿ 'ಬೇಡ, ದಣಿ, ಪುಟ್ಟ ಕಾಲು ನೋಯುತ್ತವೆ. ಬಂಗಾರದ ಪಾದ ಕೊಳೆಯಾಗುತ್ತೆ' – ಎಂದಳು ನಾಟಕೀಯವಾಗಿ.

ಆದರೆ ಶಂಕರ ಕೇಳಬೇಕಲ್ಲ. ಕಾಲುಗಳಿಂದ ರಪರಪ ಬಡಿದ. ವಿಧಿಯಿಲ್ಲದೆ ಚಿಕ್ಕಿ ಇಳಿಸಿದಳು. ಅಷ್ಟೇ ಸಾಕೆಂದು ಓಡಿದ. ಚಿಕ್ಕಿಗಂತೂ ತನ್ನ ಕಣ್ಣನ್ನು ತಾನೆ ನಂಬಲಾರದಾದಳು. ಶಂಕರ ಓಡುವ ವೇಗಕ್ಕೆ ತಾನು ತಡಬಡಿಸಿದಳು. ಅವನು ಓಡಿದ್ದು, ಕುಂಟನಿಗೆ ಕಾಲು ಬಂದಷ್ಟೇ ಆಶ್ಚರ್ಯವಾಗಿತ್ತು. 'ಅವರವ್ವನಿಗೆ ಇದ್ನ ಏಳ್ಲೇಬೇಕು.– ಎಂದು ಆಗಲೇ ನಿರ್ಧಾರ ಮಾಡಿದಳು. ಶಂಕರನ ಹಿಂದೆ ಅವಳೂ ಓಡಿದಳು, ಶಂಕರ, ಶಂಕರ ನಿಲ್ಲು' ಎಂದು ಕಿರುಚುತ್ತಲೇ ಇದ್ದಳು. ಶಂಕರ 'ಗಕ್ಕೆ'ಂದು ನಿಂತ. ಸದ್ಯ ಚಿಕ್ಕಿ ಓಡಿಹೋಗಿ ಹಿಡಿದು ಬಿಟ್ಟಳು. ಕೆರೆ ಅಲ್ಲಿಂದ ಪ್ರಾರಂಭವಾಗಿತ್ತು. ಶಂಕರನ ಕೈ ಹಿಡಿದೇ ದಂಡೆ ಮೇಲೆ ನಡೆದು ಬಯಲು ಸೇರಿದಳು. ಇಲ್ಲಿ ಭಯವಿರಲಿಲ್ಲ. ಶಂಕರನ ಕೈ ಬಿಟ್ಟಳು. ಶಂಕರ ಈಗ ಓಡಲಿಲ್ಲ. ಆಕಾಶದತ್ತ ಮುಖ ಮಾಡಿ ಯಾರನ್ನೋ ಹುಡುಕಾಡುವಂತೆ ಮಾಡಿದ. ಮತ್ತೊಂದು ಕ್ಷಣದಲ್ಲಿ ಗಂಭೀರತೆ

ಸಡಿಲಿತು. ಸಂತೋಷದ ಛಾಯೆ, ನಗು–ಇದೆಲ್ಲಾ ಆದ ಮೇಲೆ ಒಂದು ಸ್ವಲ್ಪ ದೂರಕ್ಕೆ ಹೋದ ಒಂದು ಬಂಡೆಗಲ್ಲು ಸಿಕ್ಕಿತು. ಅದರ ಮೇಲೆ ಕುಳಿತು ಕಣ್ಮುಚ್ಚಿದ. ಚಿಕ್ಕಿಗೆ ಏನೊಂದು ಅರ್ಥವಾಗಲಿಲ್ಲ. ಶಂಕರ ಬೆಳೆದ ವ್ಯಕ್ತಿಯಂತೆ ಕಾಣಿಸಿದ. ಅವನ ರೀತಿಯೆಲ್ಲಾ ದೊಡ್ಡವರು, ಜ್ಞಾನಿಗಳಂತೆ ಇತ್ತು. ಚಿಕ್ಕಿಯ ದೃಷ್ಟಿಯಲ್ಲಿ ಶಂಕರನೇ ದೊಡ್ಡವ, ತಾನೇ ಅವನ ಮುಂದೆ ಮಗುವೆನಿಸಿತು. ಬಂದು ಆಗಲೇ ಅರ್ಧಘಂಟೆಗೂ ಮೀರಿತ್ತು. ಇನ್ನು ಹೊರಡಲೇ ಬೇಕೆನಿಸಿತು. ಆದರೆ ಶಂಕರ ಕದಲುವಂತೆ ಕಾಣಲಿಲ್ಲ. ಚಿಕ್ಕಿಗೆ ಅವನ ಬಳಿ ಹೋಗಿ ಎಚ್ಚರಿಸುವುದಕ್ಕೂ ಹೆದರಿಕೆಯಾಯಿತು. ಇನ್ನೊಂದೈದು ನಿಮಿಷ ನೋಡಿದಳು. ಇತ್ತಕಡೆಯೇ ಅವನ ಗಮನವಿಲ್ಲ. ಈಗ ಧೈರ್ಯ ಮಾಡಿ ಮೆಲ್ಲಗೆ 'ಅಯ್ಯ, ಅಯ್ಯ' – ಎಂದಳು. ತೃಪ್ತಿಯ ನಗೆಯನ್ನು ತಂದುಕೊಂಡು ಕಣ್ಣುಬಿಟ್ಟ. ಹೋಗೋಣವಾ? ಎಂದಳು. 'ಹುಂ' ಎಂದು ಶಂಕರ ಹೊರಡಲು ನಿಂತ. ಚಿಕ್ಕಿಯ ಮನಸ್ಸಿನಲ್ಲಿ ಶಂಕರನ ವಿಚಾರವಾಗಿ ಭಕ್ತಿ, ಆಶ್ಚರ್ಯಗಳು ಮೂಡಿದ್ದವು. ಅವರ ತಾಯಿಗೆ ಇದನ್ನು ಹೇಳಬೇಕೇ ಬೇಡವೇ' ಎಂದು ಯೋಚಿಸಿದಳು. ಹೇಳುವಂತೆ ಮನಸ್ಸು ಒಂದೆಡೆ ಪ್ರಚೋದಿಸಿದರೆ, ಮತ್ತೊಂದು ಕಡೆ ಹೇಳಬೇಡವೆಂದು ಪಿಸುಗುಟ್ಟುತ್ತಿತ್ತು. ಶಂಕರನನ್ನೇ ಕೇಳಿದರೆ? ಎಂದುಕೊಂಡಳು. ಅವನು ಮಾಡಿದ್ದು, ಅವನಿಗೇ ತಿಳಿಯದಿದ್ದರೆ ಹೇಗೆ? ತನ್ನ ಅನುಭವಗಳನ್ನು ಹೇಳುವಷ್ಟು ವಯಸ್ಸೇ ಅವನದು? ಎಂದಾಲೋಚಿಸಿದಳು. ಕೊನೆಗೇ ಅವಳೇ ಒಂದು ದಾರಿ ಹುಡುಕಿದಳು. ಶಂಕರನ ಮುಂದೆ ಎರಡು ಬೆರಳುಗಳನ್ನು ಹಿಡಿದು, ಶಂಕರಪ್ಪ, ಈ ಎಲ್ಡುರಾಗೆ ಯಾವ್ಯಾದಾದರೂ ಒಂದು ಇಡ್ಕೊಲ್ಲಾ–ಎಂದು ಕೇಳಿದಳು. ಶಂಕರ 'ಹೇಳಬೇಡವೆಂದು' ಗುರುತಿಸಿದ ಬೆರಳನ್ನು ಹಿಡಿದ. ಚಿಕ್ಕಿಗೆ ಸಮಾಧಾನವಾಯಿತು ಸುಮ್ಮನಿರಬೇಕೆಂದು ತೀರ್ಮಾನವಾಯಿತು.

ಮನೆ ಸೇರುವ ವೇಳೆಗೆ ಎಷ್ಟೆಂದರೂ, ಸ್ವಲ್ಪ ಸ್ವಲ್ಪ ಕತ್ತಲಾಗುತ್ತಿತ್ತು. ಪಾರ್ವತಿಯೂ ಇವರಿಗಾಗೇ ಎದುರು ಕಾಯುತ್ತಿದ್ದಳು. ಚಂದ್ರಣ್ಣನೂ ಇನ್ನೂ ಮನೆಗೆ ಬಂದಿರಲಿಲ್ಲ. ಚಿಕ್ಕಿ ಶಂಕರನನ್ನು ಒಪ್ಪಿಸಿ ಮನೆಗೆ ಹೋಗುತ್ತೇನೆಂದಳು. ಪಾರ್ವತಿ ಮಕ್ಕಳಿಗಾಗಿ ಒಂದಷ್ಟು ಬತ್ತಾಸು ಕಳಿಸಿದಳು.

ಶಂಕರನ ಮುಖದಲ್ಲಿ ಉಲ್ಲಾಸವಿತ್ತು. 'ಸುತ್ತಾಟ ಚೆನ್ನಾಗಿತ್ತಾ ಶಂಕರ? – ಎಂದು ಪಾರ್ವತಿ ಕೇಳಿದ್ದಕ್ಕೆ, 'ಕಿಲ ಕಿಲ ನಕ್ಕ' ಶಂಕರ. ಅವನ ಆ ನಗೆ ಪಾರ್ವತಿಯ ಹೃದಯದಲ್ಲಿ ಸಂತಸದ ಕಡಲನ್ನೇ ಉಕ್ಕಿಸಿತು. ನೂರೆಂಟು ಬೆಳ್ದಿಂಗಳುಗಳನ್ನು ಒಟ್ಟಿಗೆ ಕಂಡಂತಾಯಿತು. ಶಂಕರನನ್ನು ಎಳೆದುಕೊಂಡು ಮುದ್ದಿಸಿದಳು. ಪಾರ್ವತಿಯ ಕೆನ್ನೆ ಮೇಲೆ ಶಂಕರ ಕೈಯಾಡಿಸಿದ. ಆ ಸ್ಪರ್ಷ ಪುಲಕದ ಮೊಗ್ಗುಗಳನ್ನು ಅರಳಿಸಿದವು.

ಜೋಯಿಸರಿಂದ ಅಕ್ಷರಾಭ್ಯಾಸದ ಪ್ರಾರಂಭವಾಯಿತು. ಪಾರ್ವತಿ ಮಗನನ್ನು ತಮ್ಮ ಊರಿನ ಶಾಲೆಗೇ ಸೇರಿಸಿದಳು. ಬುದ್ಧಿವಂತರಾದ ಮಕ್ಕಳು ಎಲ್ಲಿಯಾದರೂ ಕಲಿಯುತ್ತಾರೆ. ಎಲ್ಲಾ ಅವರವರ ಯೋಗ ಎಂದು ವಾದಿಸಿದ್ದಕ್ಕೆ ಚಂದ್ರಣ್ಣ ಪ್ರತಿ

ಹೇಳಲಿಲ್ಲ. ಅವನಿಗೆ ಗೊತ್ತಿತ್ತು. ಈ ಮಗುವೊಂದರ ಹೊರತು ಬೇರಾವ ಆಕರ್ಷಣೆಯೂ ಇಲ್ಲ ಎಂದು. ಅದಕ್ಕೇ ಚಂದ್ರಣ್ಣ ಸುಮ್ಮನಿದ್ದು ಬಿಟ್ಟು ಶಂಕರನ ಓದಿನ ಜವಾಬ್ದಾರಿಯನ್ನು ಪಾರ್ವತಿಗೇ ವಹಿಸಿದ.

ಶಾಲೆಗೆ ಬಿಟ್ಟುಬರಲು ಚಿಕ್ಕಿಯೇ ಹೋಗುತ್ತಿದ್ದಳು. ಮೊದ ಮೊದಲು ಶಂಕರ ಶಾಲೆಗೆ ಹೋಗುವುದಿಲ್ಲವೆಂದು ಹಟ ಹಿಡಿದ. ಕ್ರಮೇಣ ಹಟ ಮಾಡಿದರೆ ನಡೆಯುವುದಿಲ್ಲವೆಂದು ತಿಳಿದು ಹೋಗಿ ಬರತೊಡಗಿದ. ಸ್ವಲ್ಪ ಅಭ್ಯಾಸವಾಗುತ್ತಿದ್ದಂತೆ ತಾನೇ ಹೋಗುತ್ತೇನೆಂದ, ಆದರೆ ಇವರಿಗೆ ಭೀತಿ. ಸ್ಕೂಲು ಹತ್ತಿರವೇ ಇತ್ತು. ಮಠದ ಸ್ಕೂಲಿದ್ದಂತೇ ಇತ್ತು. ಹೇಳಿಕೊಡುವ ಉಪಾಧ್ಯಾಯರು ಒಬ್ಬರೇ. ನಾಲ್ಕನೇ ತರಗತಿಯವರೆಗೆ ಆ ಸ್ಕೂಲಿನಲ್ಲಿ ಓದಿಗೆ ಅವಕಾಶವಿತ್ತು. ಈ ಶಾಲೆ ಒಂದು ರೀತಿಯಲ್ಲಿ ಸಮತಾವಾದಿ ಸಂಸ್ಥೆ ಇದ್ದ ಹಾಗೆ. ಹೊಲೆಯರ ಮಕ್ಕಳು, ಬ್ರಾಹ್ಮಣರ ಮಕ್ಕಳು, ಜಮೀನ್‌ದಾರ್ ಮಗ, ಕೂಲಿಯ ಮಗ ಎನ್ನುವ ತಾರತಮ್ಯಕ್ಕೆ ಅವಕಾಶವಿರಲಿಲ್ಲ. ಇರುವುದೆಲ್ಲಾ ಒಂದು ಶಾಲೆ! ಒಬ್ಬರೇ ಗುರುಗಳು! ಹಾಗಿದ್ದದ್ದಕ್ಕೆ ಚಿಕ್ಕಿ ಮಕ್ಕಳೂ ಶಂಕರನೊಟ್ಟಿಗೆ ಅದೇ ಶಾಲೆಗೆ ಓದಲು ಹೋಗುತ್ತಿದ್ದರು. ಮಡಿವಂತಿಕೆಯಿಂದ ಬೇರೆ ಬೇರೆ ಶಾಲೆಗೆ ಸೇರಿಸಬೇಕೆಂದು ಬಯಸಿದರೂ ಅದಕ್ಕೆ ಅವಕಾಶವಿರಲಿಲ್ಲ.

ಶಂಕರ ಶಾಲೆಗೆ ಹೋಗುತ್ತಿದ್ದ. ಅಷ್ಟೊಂದು ಗೆಳೆಯರಿದ್ದರೂ, ಅವರೊಂದಿಗೆ ಬೆರೆಯುತ್ತಲೇ ಇರಲಿಲ್ಲ. ತಾನಾಯಿತು, ತನ್ನ ಪಾಡಾಯಿತು. ಉಪಾಧ್ಯಾಯರು ಪೇಳಿ ಕೊಟ್ಟದ್ದನ್ನು ತಿಳಿಯಲು ಪ್ರಯತ್ನಿಸುತ್ತಿದ್ದ. ಆದರೆ ಅಂತಹ ಚುರುಕುತನವೇನೂ ಕಾಣಿಸಲಿಲ್ಲ.

ತರಗತಿಯಲ್ಲಿ ಮಕ್ಕಳೆಲ್ಲಾ ಗಲಭೆ ಮಾಡಿದರೂ, ಇವನು ಮಾತ್ರ ದೂರದಲ್ಲಿ ಯಾರೊಂದಿಗೂ ಬೆರೆಯದೆ ಇದ್ದು ಬಿಡುತ್ತಿದ್ದ. ಎಲ್ಲಾ ನಕ್ಕರೂ ಇವನು ನಗುತ್ತಿರಲಿಲ್ಲ. ಇವನು ನಗದಿರುವುದನ್ನು ನೋಡಿ, ಉಳಿದವರು ಮತ್ತಷ್ಟು ನಗುತ್ತಿದ್ದರು. ಅದನ್ನು ಕಂಡಾಗ ಮಾತ್ರಸ್ವಲ್ಪ ಸಿಟ್ಟೇರುತ್ತಿತ್ತು. ಅವಡುಗಚ್ಚುತ್ತಿದ್ದ, ಕೆಂಗಣ್ಣು ಬಿಟ್ಟು ನೋಡುತ್ತಿದ್ದ. ಅಷ್ಟು ಬಿಟ್ಟರೆ ಬೇರೇನೂ ಮಾಡುತ್ತಿರಲಿಲ್ಲ. ಶಂಕರನ ಸಾಚಾತನ ಮೇಷ್ಟ್ರರ ಗಮನ ಸೆಳೆಯಿತು.

ಅವನನ್ನು ಮಾದರಿ ವಿದ್ಯಾರ್ಥಿ ಅಂತ ಬೆನ್ನು ತಟ್ಟುತ್ತಿದ್ದರು. ಇವನನ್ನು ಹೊಗಳುವುದು ಉಳಿದವರಿಗೆ ಹಿಡಿಸಲಿಲ್ಲ. ಅದಕ್ಕೆಂದೇ ವಿರಾಮದ ವೇಳೆಯಲ್ಲಿ ಅವನ ಬಳಿ ಕಾಲು ಕೆರೆದು ಜಗಳ ತೆಗೆಯುತ್ತಿದ್ದರು. ಇವನಿಗಿಂತ ಹಿರಿಯ ವಿದ್ಯಾರ್ಥಿಗಳು ಈ ಚಿಕ್ಕ ತರಗತಿಯವರಿಂದ ಬೇಕಾದಷ್ಟು ಕೆಲಸಗಳನ್ನು ಮಾಡಿಸುತ್ತಿದ್ದರು. ತಮ್ಮ ಸ್ಲೇಟು ಪುಸ್ತಕಗಳನ್ನು ಹೊರಿಸುವುದು, ಬೋರ್ಡ್‌ಗಳನ್ನು ಒರೆಸಿಸುವುದು, ಬೆಂಚುಗಳನ್ನು ಸರಿಪಡಿಸುವುದು – ಹೀಗೆ ಏನೆಲ್ಲಾ ಕೆಲಸಗಳನ್ನು ಹಚ್ಚುತ್ತಿದ್ದರು! ತಾವು ಮಾಡಬೇಕಾದ ಕೆಲಸಗಳನ್ನು ಅವನ ಕೈಯಿಂದ ಮಾಡಿಸುತ್ತಿದ್ದರು.

ಶಂಕರನ ವಿಚಾರ ತಿಳಿಯಿತು. ಎಲ್ಲಾ ಒಟ್ಟಾದರು. ವಿರಾಮದ ವೇಳೆಯೆಂದು ಶಂಕರ ಆಚೆ ಬಂದರೆ ಅವನ ಜೇಬಿನಲ್ಲಿ ಕೈ ಹಾಕಿ ಅದರೊಳಗಿದ್ದ ಬಳಪ, ಗೋಲಿಗಳನ್ನೆಲ್ಲಾ ಕಿತ್ತುಕೊಂಡರಲ್ಲದೆ, ಅವನ ಸ್ಲೇಟನ್ನು ಒಡೆದು ಚೂರು ಚೂರು ಮಾಡಿ, ಕೈ ಚಪ್ಪಾಳೆ ತಟ್ಟುತ್ತಾ, ಅವನ ತಲೆ ಸುತ್ತುವಂತೆ ಇವರೆಲ್ಲಾ ಅವನ ಸುತ್ತೂಸುತ್ತಿದ್ದರು. ಮೇಷ್ಟ್ರು ನಿನ್ನನ್ನ ಹೊಗಳ್ತಾರಲ್ಲಾ? 'ಹೇಗೆ ಅದು? ಹೀಗಾ? ಹಾಗಾ?' ಎಂದು ಅವನ ತಲೆಯ ಮೇಲೆ ಮೊಟ್ಟೆ ಮೊಟ್ಟಿ ಅಳಿಸುತ್ತಿದ್ದರು.

ಇನ್ನೂ ಒಂದು ಬಾರಿ ಅವನ ಅಂಗಿ ಕಳಚಿ ಚಿಂದಿ ಚಿಂದಿ ಮಾಡಿ ಅವನ ಕೈಲಿ ತುರುಕಿ ಮನೆಗೆ ಕಳಿಸಿದರು. ಶಂಕರನಿಗೆ ಇವರ ಉಪಟಳ ಹೆಚ್ಚಾಯಿತು. ಶಾಲೆಗೆ ಹೋಗುವುದೆಂದರೇನೇ ಭಯಪಡತೊಡಗಿದ.

ಶಾಲೆಗೆ ಸರಿಯಾಗಿ ಹೋಗುತ್ತಿದ್ದವನು ಈಚೀಚೆಗೆ ಹಟ ಮಾಡುವುದನ್ನು ನೋಡಿ ಪಾರ್ವತಿಗೆ ಕಾರಣ ಹೊಳೆಯಲಿಲ್ಲ. ಶಾಲೆಗೆ ಹೋಗೆಂದು ಬಲವಂತಪಡಿಸಿದರೆ ಮುಳು ಮುಳು ಅಳತೊಡಗಿದ್ದ. ಪಾರ್ವತಿ ಚಂದ್ರಣ್ಣನಿಗೆ ಶಂಕರನ ವಿಚಾರ ತಿಳಿಸಿದಾಗ ಚಂದ್ರಣ್ಣ ಶಂಕರನನ್ನು ಕರೆದು, ಪ್ರೀತಿಯಿಂದ ನೇವರಿಸಿ, ಹೋಗದಿರಲು ಕಾರಣವೇನೆಂದು ವಿಚಾರಿಸಿದಾಗ, ಹೆದರುತ್ತಲೇ ಎಲ್ಲವನ್ನೂ ವಿವರಿಸಿದ.

ಚಂದ್ರಣ್ಣನಿಗೆ ಸುದ್ದಿ ತಿಳಿದು ಕೋಪ ಬಂತು. ಇಷ್ಟೆಲ್ಲಾ ಆಗುತ್ತಿದ್ದರೂ ಮೇಷ್ಟ್ರು ದನ ಕಾಯುತ್ತಿದ್ದರೇ? ಅವರನ್ನು ಬಂದು ಗದ್ದರಿಸಬಾರದಿತ್ತೇ? – ಎಂದು ಸಿಡಿಮಿಡಿಗೊಂಡರು. ಚಂದ್ರಣ್ಣನ ಅವತಾರ ನೋಡಿ ಪಾರ್ವತಿಗೆ ಮಾತಾಡಿಸಲು ಹೆದರಿಕೆಯಾಯಿತು. ಚಂದ್ರಣ್ಣನೇ ರೇಗಾಡುತ್ತ ನೋಡಿದೆಯಾ ಪಾರ್ವತಿ, ನೀನು ಹೇಳಿದರೆ ಕೇಳಲಿಲ್ಲ. ಅವನು ಆ ಶಾಲೆಗೆ ಹೋಗುವುದು ಬೇಡಾಂತ ಈಗ ಅನುಭವಿಸು. ಶಂಕರ ಶಾಲೆಗೆ ಹೋಗಲು ಹೆದರುತ್ತಾನೆ ಏನ್ಮಾಡುವುದು ಈಗ?–ಎಂದ.

ಪಾರ್ವತಿಗೆ ಏನು ಹೇಳಲೂ ಆಗಲಿಲ್ಲ. ಯಾವ ಶಾಲೆಯಾದರೂ ಇಷ್ಟೇ. ಬೇರೆ ಶಾಲೆಗೆ ಹೋದ ಮಾತ್ರಕ್ಕೆ ಹುಡುಗರು ಒಳ್ಳೆಯವರು ಇರುತ್ತಾರೆಂದು ಏನು ಖಾತ್ರಿ? ಅದರಲ್ಲಿ ಶಂಕರನದೇನೂ ತಪ್ಪಿರಲಾರದೇ? – ಎಂದು ಯೋಚಿಸಿದಲ್ಲಿ ತಕ್ಷಣ ಪರಿಹಾರ ಹುಡುಕಬೇಕಿತ್ತು. ಮೆಲ್ಲಗೆ, ಸಮಾಧಾನವಾಗಿಯೇ ಚಂದ್ರಣ್ಣನಿಗೆ, – ಏನೂಂದ್ರೆ, ನೀವೊಮ್ಮೆ ಶಾಲೆಗೆ ಹೋಗಿ, ಮೇಷ್ಟ್ರಿಗೆ ಈ ವಿಷಯಾನೆಲ್ಲಾ ವಿವರಿಸಿ ಹೇಳಿ. ಹುಡುಗರನ್ನು ಗದ್ದರಿಸಿಯಾರು. ಅಲ್ದೆ ನಮ್ಮ ಶಂಕರನ ವಿಚಾರವಾಗಿ ಹೆಚ್ಚಿನ ಗಮನವಿಟ್ಟಾರು. ಎಂದಳು. ಚಂದ್ರಣ್ಣನಿಗೂ ಈ ಮಾತು ಪ್ರಸ್ತುತಕ್ಕೆ ಸಮ್ಮತವಾಯಿತು. ಸದ್ಯಕ್ಕೆ ಇದಕ್ಕಿಂತ ಬೇರೇನೂ ಮಾಡಲಾರದಾಗಿದ್ದರು. ಶಂಕರನನ್ನು ತಮ್ಮ ಜೊತೆ ಹೊರಡಲು ಹೇಳಿದ. ಒಲ್ಲೆನೆಂದ ಶಂಕರ. ಆದರೆ ಚಂದ್ರಣ್ಣ ಶಂಕರನ ಬೆನ್ನಿಗೆ ಒಂದೇಟು ಹಾಕಲು, ಅಳುತ್ತಾ ಚಂದ್ರಣ್ಣನ ಜೊತೆಗೆ ಹೊರಡಲು ನಿಂತ.

ಚಂದ್ರಣ್ಣ ತರಗತಿಯನ್ನು ಸಮೀಪಿಸಿದಾಗ ಗುರುಗಳು ಹುಡುಗರಿಗೆ ನೀತಿ ಪಾಠವನ್ನು ಹೇಳಿಕೊಡುತ್ತಿದ್ದರು. ಎಲ್ಲಾ ತರಗತಿಯ ಹುಡುಗರನ್ನು ಒಟ್ಟಿಗೆ ಸೇರಿಸಿ ನೀತಿ ಪಾಠ ಹೇಳುತ್ತಿದ್ದರು. ಅವರು ಹೇಳಿಕೊಟ್ಟದ್ದನ್ನು ಕೆಟ್ಟ ಕೆಟ್ಟ ಧ್ವನಿಯಲ್ಲಿ ಎಲ್ಲರೂ ಒಕ್ಕೊರಲಿಂದ ಅರಚುತ್ತಿದ್ದರು. ಬಾಯಿ ಪಾಠ ಹೇಳುತ್ತಿದ್ದರೂ, ಕೈಗಳು ತೀಟೆ ಮಾಡುತ್ತಲೇ ಇದ್ದವು. ಒಂದು ಕೈ ಜೇಬಿನಿಂದ ಕಲ್ಲುಗಳನ್ನು ತೆಗೆಯುತ್ತಿದ್ದರೆ, ಮತ್ತೊಂದು ಕೈ ಮುಂದೆ ಕುಳಿತಿರುವ ಹುಡುಗನ ಕೂದಲನ್ನು ಬ್ಲೇಡಿನಿಂದ ಕೊಯ್ಯುತ್ತಿತ್ತು. ಅಕ್ಕ ಪಕ್ಕದ ಹುಡುಗರು ಕಣ್ಣಲ್ಲಿ ನಗುತ್ತಿದ್ದರು ಬಾಯಲ್ಲಿ ಪಾಠ ಹೇಳುತ್ತಿದ್ದರು. ಚಂದ್ರಣ್ಣ, ಶಂಕರ ಬಾಗಿಲಲ್ಲಿ ಹದಿನೈದು ನಿಮಿಷಗಳಿಗೂ ಮೀರಿ ನಿಂತಿದ್ದರು. ಹುಡುಗರ ಚೇಷ್ಟೆಗಳನ್ನೆಲ್ಲಾ ಗಮನಿಸುತ್ತಿದ್ದ ಚಂದ್ರಣ್ಣ.

ಮೇಷ್ಟ್ರು ಪಾಠ ಹೇಳುವ ಭರದಲ್ಲಿ ಇದ್ದುದರಿಂದ, ಇವರು ಬಂದದ್ದನ್ನೇ ಗಮನಿಸಲಿಲ್ಲ. ಹಿಂದೆ ತಿರುಗಿದ ಒಬ್ಬ ಹುಡುಗ ಇವರನ್ನು ನೋಡಿದ. ಸಾರ್, ಸಾರ್ – ಎಂದು ಕೂಗಿದ. ಹತ್ತು ಸಲ ಕೂಗಿದ ಮೇಲೆ, ಮೇಷ್ಟ್ರು ಕೂಗುವುದು ಯಾರೆಂದು ನೋಡಲು ತಿರುಗಿದರು. ಬೋರ್ಡಿನ ಮೇಲೆ ಬರೆಯುತ್ತಾ ಹೇಳುತ್ತಿದ್ದುದರಿಂದ ಅವರ ಬೆನ್ನು ಇವರ ಕಡೆಗಿತ್ತು. ಈಗ ತಿರುಗಿದರೆ ಶಂಕರ! ಅವನ ಜೊತೆಗೆ ಚಂದ್ರಣ್ಣ ಕಾಣಿಸಿದರು! ಓಹೋ! ಶಂಕರ. ಬಾ ಬಾ. ಇವತ್ತು ಶಾಲೆಗೆ ಯಾಕೆ ಬರಲಿಲ್ಲವೋ ಎಂದು ನೋಡಿದೆ. 'ಇದೇನು ಸ್ವಾಮಿ, ನೀವು ಬಂದಿದ್ದೀರಿ? ಯಾಕೆ ಬರುವುದಿಲ್ಲವೆಂದು ಹಟ ಮಾಡಿದನೇನು? ಇಷ್ಟು ದಿವಸ ಚೆನ್ನಾಗೇ ಬರ್ತಿದ್ದನಲ್ಲ? ಎಂದು ಒಂದೇ ಸಮನೆ ಮಾತಾಡತೊಡಗಿದರು

'ಹೌದು' ನೀವು ಹೇಳೋದು ಸರಿಯೆ. ಅವನೇನೊ ಹಟ ಮಾಡದೆ ಬರ್ತಿದ್ದ. ಆದರೆ ಈ ಪೋಲಿ ಹುಡುಗರೆಲ್ಲಾ ನನ್ನ ಮಗನನ್ನ ಹೊಡೆಯುವುದು ಬಡಿಯುವುದು, ಬಟ್ಟೆ ಹರಿಯುವುದು ಮಾಡ್ತಿದ್ರೆ, ಹೇಗೆ ತಾನೇ ಅವನು ಬಂದಾನು? ಸಾರ್, ನೀವು ಇವರನ್ನೆಲ್ಲಾ ವಿಚಾರಣೆ ಮಾಡ್ಬೇಕಾಗಿತ್ತು. ಈ ಚಿಕ್ಕ ಹುಡುಗನ್ನ ಹೀಗೆ ಹಿಂಸೆ ಮಾಡಿದ್ರೆ ಬರ್ರೋವ್ರು ಹೇಗೆ ತಾನೇ ಬರ್ತಾರೆ? ನೀವೇ ಏನಾಗ್ತಿದೆ ಶಾಲೇಲಿ ಅನ್ನುವುದನ್ನು ಗಮನಿಸಬೇಕಿತ್ತು. ನೀವೇ ಇದನ್ನೆಲ್ಲಾ ಗಮನಕ್ಕೆ ತೆಗೆದುಕೊಳ್ಳದಿದ್ರೆ, ಬೇರೆ ಯಾರಿಗೆ ಗೊತ್ತಾಗುತ್ತೆ ಹೇಳಿ? –ಎಂದು ಸ್ವಲ್ಪ ಕಟುವಾಗೇ ನುಡಿದ. ಮೇಷ್ಟ್ರು ಒಳಗೆ ಬರಲು ಹೇಳಲೂ ಇಲ್ಲ, ಚಂದ್ರಣ್ಣ ಒಳಗೆ ಹೋಗಲೂ ಇಲ್ಲ. ಶಂಕರ ಪಿಳಿ ಪಿಳಿ ಕಣ್ಣು ಬಿಡುತ್ತಾ, 'ಅಪ್ಪನನ್ನು ಒಮ್ಮೆ, ಮೇಷ್ಟ್ರನ್ನು ಒಮ್ಮೆ ನೋಡುತ್ತಿದ್ದ.

ಹುಡುಗರು ಕಣ್ಣು ಬಿಟ್ಟುಕೊಂಡು ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದರು. ದಿನಾ ಪಾಠ ಕೇಳಿ ಕೇಳಿ ಬೇಸರವಾಗಿದ್ದ ಅವರಿಗೆ ಇದು ಒಂದು ಥರಾ ತಮಾಷೆಯೆನಿಸಿತು. ಚಂದ್ರಣ್ಣನ ಏರಿದ ಧ್ವನಿಯನ್ನು ಕೇಳಿ ಇವರು ದೊಡ್ಡ ವ್ಯಕ್ತಿಗಳೇ ಇರಬೇಕು. 'ಇಲ್ಲವಾದಲ್ಲಿ ಮೇಷ್ಟ್ರ ಮೇಲೆ ಯಾಕೆ ಕೂಗಾಡ್ತಿದ್ದರು' ಎಂದು ತೀರ್ಮಾನಿಸಿದ್ದರು. ಇವರ ತೀರ್ಮಾನಕ್ಕೆ ಪುಷ್ಟಿ ಸಿಗುವಂತೆ, ಮೇಷ್ಟ್ರೂ ಸಹ,

ತುಂಬಾ ವಿನೀತರಾಗಿ. 'ಕ್ಷಮಿಸಿ ಸಾರ್. ಇದೆಲ್ಲಾ ನಂಗೆ ಒಂದೂ ಗೊತ್ತಿಲ್ಲ ಶಂಕರ ಮೃದು ಹುಡುಗ. ಯಾರ ತಂಟೆಗೂ ಹೋಗುವವನಲ್ಲ ಅದು ನನಗೂ ಗೊತ್ತಿದೆ. ಯಾವಾಗಲೂ ತಾನಾಯ್ತು ತನ್ನ ಪಾಡಯ್ತು ಎಂದು ಇರುತ್ತಾನೆ. ಅಂಥಾದ್ದರಲ್ಲಿ ಇದು ಹೇಗಾಯಿತು? ಯಾರು......ನೋಡಿದರು ಅನ್ನೋದು ಗೊತ್ತಿಲ್ಲ. ಆದರೂ ನಾನು ವಿಚಾರಿಸ್ತೀನಿ. ಈಗಲೇ ಯಾರನ್ನುವುದನ್ನು ಪತ್ತೆ ಹಚ್ಚಿ ನಿಮಗೆ ಹೇಳ್ತೇನೆ. ಇದನ್ನು ಹೀಗೇ, ಬಿಟ್ಟರೆ, ಹುಡುಗರು ಇನ್ನೂ ಕೊಬ್ಬಿ ಉಳಿದವರನ್ನೂ ಹಿಂಸಿಸುತ್ತಾರೆ – ಎಂದು ಶಂಕರನನ್ನು ನೋಡಿ, 'ಹೇಳು ಶಂಕರ, ನಿನ್ನನ್ನು ಹೊಡೆದವರು ಯಾರೂಂತ'. ನೋಡು ಎಲ್ಲಾ ತರಗತಿಯವರೂ ಇಲ್ಲೇ ಇದ್ದಾರೆ. ಇವರಲ್ಲಿ ನಿನ್ನನ್ನು ಹೊಡೆದವರು ಯಾರೂಂತ, ನೋಡಿ ಹೇಳು – ಎಂದು ಶಂಕರನನ್ನು ಮುಂದಕ್ಕೆ ಕರೆದುಕೊಂಡು ಹೋದ. ಶಂಕರ ಎಲ್ಲರನ್ನೂ ನೋಡಿದ. ತನ್ನನ್ನು ಹೊಡೆದ ಹುಡುಗರಿದ್ದರು. ಅವರನ್ನೆಲ್ಲಾ ತೋರಿಸಿಬಿಟ್ಟರೆ ನಾಳೆ ಮತ್ತೆ ಏನಾದರೂ ಮಾಡಿಯಾರೆಂದು, ಸುಮ್ಮನೆ ಒಂದಷ್ಟು ಮಂದಿಯ ಮೇಲೆ ಕಣ್ಣು ನೆಟ್ಟು ನಿಂತುಬಿಟ್ಟ. ಎಷ್ಟು ಕೇಳಿದರೂ ಬಾಯಿಬಿಡಲಿಲ್ಲ. ಮೇಷ್ಟ್ರೇ ಕೇಳಿದರು. 'ಈ ಹುಡುಗನನ್ನು ಪೀಡಿಸಿ ಹೊಡೆದವರು ಯಾರು ಯಾರು – ಎದ್ದು ನಿಂತು ಕೊಂಡರೆ ಸರಿ. ಇಲ್ಲವದರೆ ಇಷ್ಟೂ ಜನಕ್ಕೆ ಒಂದೊಂದು ಕೈಗ 12 ರಂತೆ 24 ಛಡಿ ಏಟು–ಎಂದು. ಅವರ ಮಾತಿನಲ್ಲಿ ಬೆದರಿಕೆಯ ದಾಟಿ ಇತ್ತು. ಸ್ವಲ್ಪ ಹೊತ್ತು ವಾತಾವರಣವೇ ಮೌನವಾಗಿತ್ತು. ಯಾರೂ ಬಾಯಿ ಬಿಡಲಿಲ್ಲ. ಈಗ ಗತ್ಯಂತರವಿಲ್ಲದೆ, ಹತ್ತು ಎಣಿಸುವುದರೊಳಗಾಗಿ, ಬಾಯ್ಬಿಡಬೇಕು–ಎಂದು ವೇಳೆಯ ಗಡುವು ಕೊಟ್ಟರು. ಒಂದು......ಎರಡು ಮೂರು....ನಾಲ್ಕು.....ಐದು....ಆರು....ಏಳು....ಎಂಟು.....ಒಂಬತ್ತು...ಎಂದು ಹೆಚ್ಚು ದೀರ್ಘವಾಗಿ ಎಳೆದರು. ಈ ಗಲಾಟೆಯನ್ನು ನೋಡಿದ ಒಂದೆಂಟು ಹತ್ತು ಮಂದಿ, ತಮಗೆಲ್ಲರಿಗೂ ಏಟು ಬೀಳುವುದೆಂದು ಹೆದರಿ, ಬಡಬಡನೆ ಹೆಸರುಗಳನ್ನು ಹೇಳಿದರು. ತಮ್ಮ ಹೆಸರುಗಳು ಬಂದದ್ದು ನೋಡಿ ಅಪರಾಧಿಗಳೆಲ್ಲಾಗಕ್ಕೆಂದು ತಿರುಗಿದರು. ಹೆಸರು ಹೇಳಿದವರನ್ನು ನುಂಗುವಂತೆ ನೋಡಿದರು. ಆದರೆ ಅಷ್ಟರಲ್ಲಿ ಮೇಷ್ಟ್ರ ಛಡಿ ಅವರ ಬೆನ್ನ ಮೇಲೆ ಬಿದ್ದು ಛಳಿ ಬಿಡಿಸಿತ್ತು. ಎಲ್ಲರೂ ಎದ್ದು ತಲೆಬಾಗಿಸಿ ಅಪರಾಧಿಗಳಂತೆ ನಿಂತುಕೊಂಡರು, ತರಗತಿಯಲ್ಲಿ 'ಹೋ'.....ಎಂಬ ಗಲಭೆ. ಮೇಷ್ಟ್ರು ಮೇಜು ಕುಟ್ಟಿ ಸುಮ್ಮನಾಗಿಸಿದರು.

ಅಪರಾಧಿಗಳನ್ನೆಲ್ಲಾ ಸಾಲಾಗಿ ನಿಲ್ಲಿಸಿದರು. ಶಂಕರ ಅವರ ಮುಂದೆ ನಿಂತಿದ್ದ ಈ ಚೋಟುದ್ದ ಹುಡುಗನಿಂದ ತಮಗೆ ಇಷ್ಟೊಂದು ಅವಮಾನವಾಯಿತಲ್ಲ–ಎಂದು ಒಳಗೆ ಹಲ್ಲು ಕಡಿಯುತ್ತಿದ್ದರು. ಮೇಷ್ಟ್ರು ಅವರಿಗೆಲ್ಲಾ – ಕೆನ್ನೆ ಬಡಿದುಕೊಂಡು, ಎರಡೂ ಕ್ರಾಸು ಕೈಗಳಿಂದ ಕಿವಿಗಳನ್ನು ಹಿಡಿದುಕೊಂಡು, ತಪ್ಪಾಯಿತೆಂದು ಹೇಳಿ ಇಪ್ಪತ್ತು ಉಠ್‌ಬೈಠ್‌ಗಳನ್ನು ಮಾಡಬೇಕು. ಇಲ್ಲವಾದರೆ ನಿಮ್ಮ ಬೆನ್ನು ಮೂಳೆ ಮುರಿದೇನು ಎಂದು ಬೆದರಿಸಿ ಹೇಳಿದರು.

ಇವರಿಗೆಲ್ಲಾ ಬೇರೆ ದಾರಿಯೇ ಕಾಣಲಿಲ್ಲ. ಯಾಕಾದರೂ ಅವನ ಸಹವಾಸಕ್ಕೆ ಹೋದೆವೋ? ಎಂದು ತಮ್ಮನ್ನು ಶಪಿಸಿಕೊಳ್ಳುತ್ತಾ ಮೇಷ್ಟ್ರು ಹೇಳಿದಂತೆ ಮಾಡತೊಡಗಿದರು.

ಶಂಕರನಿಗೆ ಅಳು ಬಂತು. 'ಸಾರ್ ಬಿಟ್ಬು ಬಿಡಿ' ಎಂದ. ಪಾಪ ನೋಯುತ್ತೆ– ಎಂದು ತಾನೂ ಸಂಕಟಪಟ್ಟ ಹುಡುಗರಿಗೆ ಆಶ್ಚರ್ಯವಾಯಿತು. ತಮಗೆ ಶಿಕ್ಷೆ ಆದರೆ ತಾನು ಸಂತೋಷ ಪಡಬಹುದೆಂದು ಭಾವಿಸಿದ್ದ. ಅವರಿಗೆ ಶಂಕರನ ಮಾತು ಕೇಳಿದಾಗ ವಿಸ್ಮಯವಾಯಿತು. ನಿಜವೇ ಎಂದು ತಿಳಿಯಲು, ಒಂದು ಕ್ಷಣ ಸುಮ್ಮನೆ ನಿಂತರು.

ಶಂಕರನ ಮಾತು ಕೇಳಿ ಅಪರಾಧಿ ಹುಡುಗರಿಗೆ ಆದಷ್ಟೇ ವಿಸ್ಮಯ ಮೇಷ್ಟ್ರು ಮತ್ತು ಚಂದ್ರಣ್ಣನಿಗೂ ಆಯಿತು. ಇಬ್ಬರೂ ಶಂಕರನತ್ತ ಬೆರಗಾಗಿ ನೋಡಿದರು. ಇನ್ನೂ ಶಂಕರ ಅಳು ಮುಖದಲ್ಲೇ ಇದ್ದ.

ಮೇಷ್ಟ್ರಿಗೆ ಅರ್ಥವಾಯಿತು. 'ನೋಡಿದಿರಾ ಶಂಕರನ ಒಳ್ಳೆತನವನ್ನು'.... ನೋಡಿ ಬುದ್ಧಿ ಕಲಿಯಿರಿ. ಇಷ್ಟು ದೊಡ್ಡ ದೊಡ್ಡ ಹುಡುಗರು ನೋವು. ಚಿಕ್ಕವರ ಜೊತೆಗೆ ಹೊಂದಿಕೊಂಡಿದ್ದು, ಅವರಿಗೆ ಒಳ್ಳೆ ಪಾಠ ಹೇಳಿಕೊಡುವುದು ಬಿಟ್ಟು, ನೀವೇ ಅವರಿಂದ ಹೇಳಿಸಿಕೊಳ್ಳುವಂತಾಯಿತು. ಹುಂ! ಇರಲಿ, ಅವನಲ್ಲಿ ಕ್ಷಮೆ ಕೇಳಿ ಹೋಗಿ ಕುಳಿತುಕೊಳ್ಳಿ ಎಂದರು. 'ಅಮ್ಮಯ್ಯ – ಎಂದು ನಿಟ್ಟುಸಿರು ಬಿಟ್ಟು, ತುಂಬಿ ಬಂದ ಕೃತಜ್ಞತೆಯಿಂದ, ಅವನಲ್ಲಿ, ಕ್ಷಮಿಸು ಶಂಕರ, ತಪ್ಪಾಯಿತು' ಎಂದರು. ಶಂಕರನಿಗೆ ಏನೋ ಒಂದು ರೀತಿ ಅನಿಸಿತು. ಅಷ್ಟು ದೊಡ್ಡವರು ತನ್ನಲ್ಲಿ ಹಾಗೆ ಕ್ಷಮೆ ಕೇಳಿದ್ದು ಯಾಕೆ, ಎಂದು ಸರಿಯಾಗಿ ಅರ್ಥವಾಗದೆ, ಸಂಕೋಚಪಟ್ಟುಕೊಂಡ.

ಚಂದ್ರಣ್ಣ, ಮೇಷ್ಟ್ರಿಗೆ, ಈ ಸಮಸ್ಯೆ ಇಷ್ಟು ಸಮಾಧಾನವಾಗಿ ಪರಿಹಾರವಾದದ್ದು ಸಂತೋಷವೇ ಆಯಿತು. ಚಂದ್ರಣ್ಣ ಶಂಕರನನ್ನು ಅಲ್ಲಿಯೇ ಉಳಿಸಿ, ಮೇಷ್ಟ್ರಿಗೆ ಧನ್ಯವಾದ ಹೇಳಿ ಹೊರಟ.

ಮೇಷ್ಟ್ರು ಪ್ರೀತಿಯಿಂದ ಶಂಕರನನ್ನು ಮುಂದೆ ಕೂರುವಂತೆ ಹೇಳಿದರು. ಹುಡುಗರೆಲ್ಲಾ, ಶಂಕರ ಇಲ್ಲಿ ಬಾ. ಶಂಕರ ಇಲ್ಲಿ ಬಾ. ಇಲ್ಲಿ ಜಾಗ ಇದೆ' ಎಂದು ಕರೆಯುವವರೇ ಆದರು. ಅವರಿಗೆಲ್ಲಾ ಶಂಕರ ದೊಡ್ಡ ಮನುಷ್ಯರ ಮಗನಿರಬೇಕೆನಿಸಿ, ಅವನ ಸ್ನೇಹ ಪಡೆಯಲು ಪ್ರಯತ್ನಿಸುತ್ತಿದ್ದರು. ಆದರೆ ಶಂಕರ ಯಾರಲ್ಲಿಗೂ ಹೋಗಲಿಲ್ಲ. ಮೇಷ್ಟ್ರ ಮೂಗಿನ ನೇರಕ್ಕೆ ಮುಂದುಗಡೆ ಕುಳಿತುಕೊಂಡ.

ಮೇಷ್ಟ್ರಿಗಂತೂ ಶಂಕರನನ್ನ ಎತ್ತಿ ಮುದ್ದಾಡುವಂತೆನಿಸಿತು. ಇಷ್ಟು ಪುಟ್ಟ ಹೃದಯದಲ್ಲಿ ಈಗಲೇ ಎಷ್ಟೊಂದು ಅನುಕಂಪ ತುಂಬಿದೆ. ದೊಡ್ಡವರಲ್ಲಿಯೂ ಇರಲಾರದ ಸಹನೆ. ಇವನಿಗೆಲ್ಲಿಂದ ಬಂತು? ಎಂದು ಯೋಚಿಸಿದರು.

ಗಂಟೆ ಹೊಡೆಯಿತು. ಸೆರೆಯಲ್ಲಿದ್ದಂತೆ ಭಾಸವಾಗುತ್ತಿದ್ದ ಹುಡುಗರಿಗೆ ಈಗ ಬಿಡುಗಡೆ ದೊರೆತಂತಾಯಿತು. ಕೋಶವೊಡೆದುಕೊಂಡು ಪಟಪಟನೆ ರೆಕ್ಕೆ ಹೊಡೆಯುತ್ತಾ ಸ್ವಚ್ಛಂದವಾಗಿ ಗಾಳಿಯಲ್ಲಿ ಹಾರಿಹೋಗುವಂತೆ ಚಿಟ್ಟೆಗಳಂತೆ ತರಗತಿಯಿಂದ ಓಡಿದರು.

ಆ ಪ್ರಕರಣಕ್ಕೆ ಅಂದೇ ಕೊನೆಯಾಯಿತು.

ಶಂಕರ ಒಂದೊಂದೇ ತರಗತಿಯನ್ನು ದಾಟುತ್ತಾ ಬಂದಿದ್ದಾನೆ. ಆ ಹಳ್ಳಿ ಸ್ಕೂಲಿಗೆ ಇವನೇ ಮೇಧಾವಿಯೆನಿಸಿಕೊಂಡಿದ್ದರೂ, ಸಾಧಾರಣ ಪ್ರತಿಭೆ ಮಾತ್ರವೇ ಇತ್ತು.

ಊರಿನಿಂದ ಮೂರು ಮೈಲುಗಳ ಅಂತರದಲ್ಲಿದ್ದ ಸೆಕೆಂಡರಿ ಸ್ಕೂಲಿನಲ್ಲಿ ಓದಿ ಹತ್ತನೇ ತರಗತಿಯವರೆಗೂ ಬಂದ.

ಈ ವರ್ಷಗಳಲ್ಲಿ ಪಾರ್ವತಿ ಮತ್ತೆ ಎರಡು ಮಕ್ಕಳಿಗೆ ತಾಯಾಗಿದ್ದಳು. ಇಬ್ಬರೂ ಹೆಣ್ಣು ಮಕ್ಕಳು. ಇವರು ನಾಲ್ಕನೇ ತರಗತಿಯವರೆಗೂ ಮಾತ್ರ ಓದಿ ಸಾಕು ಮಾಡಿದರು. ಪಾರ್ವತಿಗೆ ಮನೆಗೆಲಸಗಳಲ್ಲಿ ಅವರ ಸಹಾಯವಿರುತ್ತಿತ್ತು. ವಯಸ್ಸಾಗುತ್ತಿದ್ದಂತೆ ಪಾರ್ವತಿಯಲ್ಲಿ ದೌರ್ಬಲ್ಯ ಹೆಚ್ಚಾಯಿತು. ಬರಬರುತ್ತಾ ಮನೆಕೆಲಸಗಳನ್ನು ಮಾಡುವುದಕ್ಕೂ ತ್ರಾಣವಿಲ್ಲದೇ ಹೆಣ್ಣು ಮಕ್ಕಳೇ ಎಲ್ಲವನ್ನೂ ನಿರ್ವಹಿಸಿಕೊಂಡು ಹೋಗುತ್ತಿದ್ದರು.

ಈ ಬಾರಿ ಶಂಕರನದು ಓದು ಮುಗಿದ ಕೂಡಲೇ, ನಿಲ್ಲಿಸಿ ಬಿಡಬೇಕೆಂದು ಚಂದ್ರಣ್ಣ ಆಲೋಚಿಸಿದ. ವಯಸ್ಸಿಗೆ ಬಂದ ಗಂಡು ಮಗು ಮನೆಯಲ್ಲಿ ಇರುವುದು ಅನಿವಾರ್ಯವೆನಿಸಿತು. ಶಂಕರ ಯಾವುದಕ್ಕೂ ಪ್ರತಿ ಹೇಳುತ್ತಿರಲಿಲ್ಲ. ಮನೆಯ ಕಷ್ಟವಾಗಲೀ, ಮನೆಯವರ ಪ್ರೀತಿಯಾಗಲೀ ಅವನ ಮೇಲೆ ಯಾವ ಪರಿಣಾಮವನ್ನು ಬೀರುತ್ತಿರಲಿಲ್ಲ. ಸ್ವಲ್ಪವೂ ವ್ಯವಹಾರ ಜ್ಞಾನವಿದ್ದಂತೆ ಕಾಣಲಿಲ್ಲ. ಸ್ಕೂಲಿಂದ ಬಂದರೆ ಕೋಣೆ ಸೇರಿ ಬಿಡುತ್ತಿದ್ದ. ಊಟಕ್ಕೋ, ತಿಂಡಿಗೋ ಅದೂ ಎರಡು ಮೂರು ಬಾರಿ ಕೂಗಿದರೆ ಬಂದು, ತಿಂದು ಹೋಗುತ್ತಿದ್ದ.

ತಂಗಿಯರು ಅಣ್ಣನನ್ನು ಏನಾದರೂ ವಿಚಾರಿಸಿದರೆ ಕಿವುಡನಂತೆ ನಿಲ್ಲುತ್ತಿದ್ದ. ಆ ಹೆಣ್ಣು ಮಕ್ಕಳ ಆಸೆಗಳು ತೀರಾ ಸಾಮಾನ್ಯವಾದವು. ಯಾವಾಗಲಾದರೂ ತಂದೆ ಒತ್ತಾಯಿಸಿದರೆ, ಕೆಲಸದ ಮೇಲೆ ಶಂಕರ ಬೆಂಗಳೂರಿಗೆ ಹೋಗುತ್ತಿದ್ದ. ಹಾಗೆ ಹೋದಾಗ, ತಮಗೆ – ಬಳೆ, ಲೋಲಾಕು, ಪೌಡರು, ತಂದು ಕೊಡಣ್ಣ, ಎಂದು ಕೇಳಿದರೆ 'ಹೂಂ' ಗುಟ್ಟುತ್ತಿದ್ದನೇ ಹೊರತಾಗಿ ಎಂದೂ ತಂದಿದ್ದಿಲ್ಲ.

ತಂದೆ, ತಾಯಿ ತಂಗಿಯರು ಯಾರೊಂದಿಗೂ ಒಂದು ಕ್ಷಣ ಪ್ರೀತಿಯಿಂದ ಮಾತಾಡಿದ್ದಿಲ್ಲ. ಅಕಸ್ಮಾತ್ತಾಗಿ, ಎಲ್ಲರೂ ಬಿಡುವಾಗಿದ್ದಾಗ ಒಟ್ಟಿಗೆ ಸೇರಿ ಮಾತಾಡುತ್ತಾ, ನಗುತ್ತಾ ಇದ್ದರೂ, ತಾನು ಮಾತ್ರ ಅಲ್ಲಿಂದೆದ್ದು ಕೋಣೆ ಸೇರಿ ಬಾಗಿಲು ಹಾಕಿಕೊಳ್ಳುತ್ತಿದ್ದ.

ಇತ್ತೀಚೆಗೆ ಮೌನ ತೀವ್ರವಾಗಿತ್ತು. ಕೋಣೆ ಸೇರಿ ಏನು ಮಾಡುತ್ತಿದ್ದನೆಂದು ಯಾರಿಗೂ ಗೊತ್ತಿರಲಿಲ್ಲ.

ಒಮ್ಮೆ ಶಂಕರ ಕೋಣೆಯೊಳಗೆ ಕಣ್ಣು ಮುಚ್ಚಿಕೊಂಡು ಏನನ್ನೋ ಧ್ಯಾನಿಸುತ್ತ, ಮಧ್ಯೆ ಮಧ್ಯೆ ಬಡಬಡಿಸುತ್ತಾ, ಗೊಣಗಿಕೊಳ್ಳುತ್ತಾ ಕೂತಿದ್ದ. ಯಾವುದೊ ಮರವಿನಲ್ಲಿ ಚಿಲಕ ಹಾಕುವುದನ್ನು ಮರೆತಿದ್ದ. ಚಿಕ್ಕ ತಂಗಿ ಪ್ರಮೀಳ, ಆ ಕೋಣೆಯಲ್ಲಿದ್ದ ತನ್ನ ಬಟ್ಟೆಗಳನ್ನು ತೆಗೆದುಕೊಳ್ಳಬೇಕೆಂದು ಕೋಣೆಯ ಒಳಗೆ ಹೋದಳು. ಯಾರೋ ಮಾತಾಡುತ್ತಿರುವಂತೆ ಕೇಳಿಸಿತು. ಕೋಣೆಯಲ್ಲಿ ಶಂಕರನ ಹೊರತು ಬೇರಾರೂ ಇದ್ದಂತೆ ಅನಿಸಲಿಲ್ಲ. ಶಂಕರ ಗೊಣ ಗೊಣ ಎಂದು ಏನೋ ಒದರಿಕೊಳ್ಳುತ್ತಿದ್ದ. ಅದು ಸಂಕರನ ಧ್ವನಿಯೇ! ಸಂಶಯವಿಲ್ಲ. ಜೊತೆಗೆ ಯಾರಾದರೂ ಇರಬಹುದೇ– ಎಂದೆನಿಸಿದರೂ, ತಮ್ಮ ಮನೆಗೆ ಯಾರು ಬಂದಂತಿರಲಿಲ್ಲ. ಮತ್ತೆ ಹಾಗಾದರೆ.... ಶಂಕರ ಒಬ್ಬನೇ?.... ಎಂದುಕೊಂಡು ಮೆಲ್ಲನೆ ಸದ್ದಾಗದಂತೆ ಬಾಗಿಲು ತೆರೆದು ಇಣುಕಿದಳು. ಶಂಕರ ಕಣ್ಣು ಮುಚ್ಚಿಕೊಂಡು–ಏನೇನೋ–ದೇವರು–ಧರ್ಮ–ಸೃಷ್ಟಿ–ಹುಟ್ಟಿದ್ದು–ಸುಳ್ಳು–ಸ್ಥಿರ–ಹೀಗೆ ಅರ್ಥವಾಗದಂತೆ ತನಗೆ ತಾನೇ ಬಡಬಡಿಸುತ್ತಿದ್ದಾನೆ ಇದೇನಿರಬಹುದು. ಎಂದು ಆಲೋಚಿಸಿದರೆ ಅವಳಿಗೆ ಏನೂ ಹೊಳೆಯಲಿಲ್ಲ. ಹಾಗೇ ಮೆಲ್ಲನೆ ಬಾಗಿಲು ಮುಚ್ಚಿಕೊಂಡು ಅಮ್ಮನ ಬಳಿಗೆ ಓಡಿದಳು. ಪಾರ್ವತಿ ಮೊಸರು ಕಡೆಯುತ್ತಿದ್ದಳು. 'ಅಮ್ಮ ಬಾಮ್ಮ ಇಲ್ಲಿ, ಬೇಗ ಬಾಮ್ಮ' ಎಂದು ಎಳೆಯಲು ಪಾರ್ವತಿ ತ್ರಾಣವಿಲ್ಲದೆ ಬಿದ್ದಳು. ಥೂ ಮುಂಡೇದೆ ನಿನಗೇನೆ ಆಯ್ತು? ಹಾಗೆ ಪ್ರಾಣ ಹೋದವರ ಹಾಗೆ ಆಡ್ತೀಯ? ಸ್ವಲ್ಪವೂ ಸಮಾಧಾನವಾಗಿ ಇರಬಾರದೇ? – ಎಂದು ಬೈದಳು.

ಪ್ರಮೀಳಾಗೆ ಅಳುವೇ ಬಂತು. 'ಏನಮ್ಮ ಹಾಗೆ ಬೈತೀಯ ಅಣ್ಣ ಕೋಣೆಯಲ್ಲಿ ಒಬ್ಬನೇ ಕುಳಿತು ಏನೇನೋ ಮಾತಾಡ್ಕೋತಾ ಇದ್ದಾನೆ.

ನಿಂಗೆ ಹೇಳಿ ತೋರಿಸೋಣಾಂತ ಬಂದ್ರೆ, ಹೀಗೆಲ್ಲಾ ಬೈತೀಯ' ಎಂದು ಮುಖ ಊದಿಸಿಕೊಂಡಳು. ಪಾರ್ವತಿಗೆ 'ಅಯ್ಯೋ' ಎನಿಸಿತು. 'ಪ್ರಮೀಳ ಬಾ ಇಲ್ಲಿ ನೋಡು, ನಾನು ಯಾವುದೋ ಆಲೋಚನೇಲಿ ಇದ್ದೆ. ಅದಕ್ಕೇ ನಿನ್ನನ್ನು ಬೈದುಬಿಟ್ಟೆ, ಅಷ್ಟಕ್ಕೆಲ್ಲಾ ಕೋಪ ಮಾಡ್ಕೋತೀಯೇನೆ ನಿಮ್ಮಮ್ಮನ ಮೇಲೆ? ಎಂದಳು. ಅಷ್ಟರಲ್ಲಿ 'ಶಾಂತ' ತಂಗಿ, ತಾಯಿ ಮಧ್ಯೆ ಏನು ನಡೆದಿದೆ ಅನ್ನೋ ಕುತೂಹಲ ನೋಡೋಣಾಂತ ಬಂದಳು. ಏನೇ ಅದು ಪ್ರಮೀ, ಅಮ್ಮನ್ನ ಅಷ್ಟು ಆತುರಪಡಿಸಿ ಏಳಿತಿದ್ದೆ? ಎಂದದ್ದಕ್ಕೆ ಪ್ರಮೀಳಾ, ಅವಳಿಗೂ ಅಣ್ಣನ ವಿಚಾರ ಹೇಳಿದಳು. ಶಾಂತ ತಕ್ಷಣ, 'ಅಯ್ಯೋ, ದೆವ್ವ ಗಿವ್ವ, ಹಿಡಿದಿದೆಯೇನೋ ಅಣ್ಣನ್ನ ಕಣೇ' ಎಂದು ಸಂಶಯ ವ್ಯಕ್ತಪಡಿಸಿದಳು. ಪ್ರಮೀಳಾಗೆ ಈ ವಿಚಾರ ಹೊಳೆದಿರಲಿಲ್ಲ. ಹೌದು, ಅಕ್ಕ ಹೇಳಿದ ಹಾಗೆ ದೆವ್ವ ಹಿಡಿದಿರಬಹುದು. ಎಂದೇ ಅಭಿಪ್ರಾಯಪಟ್ಟಳು.

ಅಷ್ಟರಲ್ಲಿ ಪಾರ್ವತಿ ಎದ್ದು, ಬಾರೆ ಹೋಗೋಣ ಎಂದು ಪ್ರಮೀಳಳನ್ನು ಕರೆದೊಯ್ದಳು. ಸದ್ದಾಗದಂತೆ ಮೆಲ್ಲನೆ ಬಾಗಿಲು ತೆರೆದು ಇಣುಕಿದಳು. ಶಂಕರ ಇನ್ನೂ ಕಣ್ಣು ಮುಚ್ಚಿಕೊಂಡು ಬಡಬಡಿಸುತ್ತಲೇ ಇದ್ದಾನೆ. ಪಾರ್ವತಿ ನಿಟ್ಟುಸಿರುಬಿಟ್ಟಳು. ಅನುಸರಿಸಿ ಬಂದಿದ್ದ ಶಾಂತಳಿಗೆ ತಾಯಿಯ ನಿಟ್ಟುಸಿರು ಕೇಳಿಸಿತು. ಅಮ್ಮನಿಗೆ ಏನೋ ಚಿಂತೆಯಾಗಿದೆ – ಎಂದು ಅರ್ಥಮಾಡಿಕೊಂಡಳು.

ಪಾರ್ವತಿ – 'ಶಂಕರ, ಎಂದು ಗಟ್ಟಿಯಾಗಿ ಕರೆದಳು. ಶಂಕರನಿಗೆ ಪ್ರಜ್ಞೆ ಇದ್ದಂತಿರಲಿಲ್ಲ. ಒಳಗೆ ಹೋದಳು. ಅವನ ಬೆನ್ನುತಟ್ಟಿ, ಮೆಲ್ಲಗೆ ಶಂಕರ' ಎಂದು ಕಿವಿಯಲ್ಲಿ ಗಟ್ಟಿಯಾಗಿ ಕೂಗಿದಳು. ಬೆಚ್ಚಿದಂತೆ ಶಂಕರ ಕಣ್ಣುಬಿಟ್ಟ. ಅವನಿಗೆ ಸಿಟ್ಟೇರುತ್ತಿತ್ತು. ಕಣ್ಣು ಬಿಡುತ್ತಿದ್ದಂತೆ ಎದುರಿಗಿದ್ದ ತಾಯಿಯನ್ನು ನೋಡಿದ ಕೂಡಲೇ ಸಿಟ್ಟು ಮಾಯವಾಯಿತು. ಆದರೆ ವ್ಯಥೆಯಿಂದ ಕೇಳಿದ–

ಯಾಕಮ್ಮ ನನ್ನನ್ನು ಕೂಗಿ ಕರೆದದ್ದು. ಸ್ವಲ್ಪ ಹೊತ್ತು ನನಗೆ ನೆಮ್ಮದಿ ಸಿಗುವುದೂ ನಿನಗೆ ಇಷ್ಟವಿಲ್ಲವೇ?' ಎಂದು ಕೇಳಿದ.

'ಶಂಕರ, ನೀನು ಈ ಮಾತು ಕೇಳ್ತಿದ್ದೀಯ? ನಿನ್ನ ಸುಖ, ಸಂತೋಷಗಳಿಗಾಗಿ ತಾನೇ ನಾನು ದುಡಿದು ಬದುಕುತ್ತಿರುವುದು? ನಿನ್ನ ನೆಮ್ಮದಿಗೆ ನಾವೇನು ಭಂಗ ತಂದಿದ್ದೇವೆ ಹೇಳು? ಈಗ ಸ್ವಲ್ಪ ಹೊತ್ತಿಗೆ ಮುಂಚೆ, ಪ್ರಜ್ಞೆ ಇಲ್ಲದೆ ಏನೇನೋ ಬಡಬಡಿಸುತ್ತಿದ್ದೆ. ನಿನಗೆ ಏನಾಯಿತೋ ಎಂದು ಹೆದರಿ ನಿನ್ನನ್ನು ಕೂಗಿದ್ದು.

ಶಂಕರನಿಗೆ ತಾಯಿಯ ಮಾತು ವಿಚಿತ್ರವಾಗಿತ್ತು. ವಿಸ್ಮಯದಿಂದ ಕೇಳಿದ ನಾನು ಬಡಬಡಿಸುತ್ತಿದ್ದೆನಾ? ನೀನು ಹೇಳುವ ಮಾತೇ ಅರ್ಥವಾಗೊಲ್ಲ. ನಾನು ಕಣ್ಣು ಮುಚ್ಚಿಕೊಂಡು ಏನೋ ಒಂದು ವಿಚಾರವನ್ನು ಆಲೋಚಿಸುತ್ತಿದ್ದೆ. ಹಾಗೇ ನಿದ್ದೆ ಬಂದಂತಾಯಿತು. ಒಳ್ಳೆ ಕನಸು ಬಿತ್ತು. ಎಷ್ಟು ಸುಂದರವಾದ ಕನಸು! ನೀನು ಕೂಗಿ ಹಾಳು ಮಾಡಿದೆಯಲ್ಲಮ್ಮ ಇನ್ನೊಂದರೆ ಕ್ಷಣ ಸುಮ್ಮನಿದ್ದರೆ ಅವರು ಖಂಡಿತ ನನ್ನ ಮಾತು ಕೇಳ್ತಾ ಇದ್ದರು! ಅಂದ.

'ಯಾರೋ ನಿನ್ನ ಮಾತು ಕೇಳ್ತಾ ಇದ್ದವ್ರು?'–

'ಅದನ್ನೆಲ್ಲಾ ನೀನು ಕೇಳಬಾರದಮ್ಮ ಅವರ ವಿಷಯವನ್ನು ಯಾರಿಗೂ ತಿಳಿಸಬಾರದೂಂತ ಕಟ್ಟಪ್ಪಣೆ ಮಾಡಿದ್ದಾರೆ'–ಎಂದ.

ಪ್ರಮೀಳ, ಪಾರ್ವತಿ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಪ್ರಮೀಳ ಮನಸ್ಸಿನಲ್ಲಿ ಅವಳು ಕೇಳಿದ ಶಬ್ದಗಳು.....ಗುಂಯ್ ಗುಡುತ್ತಿದ್ದವು. ಅಣ್ಣನನ್ನು ಕೇಳಲು ಹೆದರಿಕೆ. ಆದರೆ ತಿಳಿದುಕೊಳ್ಳಲೇಬೇಕೆಂಬ ಅದಮ್ಯ ಹಂಬಲ. ಧೈರ್ಯ ಮಾಡಿ ಕೇಳಿದಳು–ಅದೇನಣ್ಣ ನೀನು– ದೇವರು–ಧರ್ಮ ಹೋಗೊಲ್ಲ–ಸೃಷ್ಟಿ–ಸವಾಲು–ಬರ್ತ್ತಾನೆ–ಇನ್ನೂ ಏನೇನೋ ಮಾತಾಡ್ತಿದ್ದೆ?

'ಹೋಗೇ ನಾನೇನೂ ಮಾತಾಡ್ಲಿಲ್ಲ. ನಿನಗೆ ತಲೆ ಕೆಟ್ಟಿರಬೇಕು' ಎಂದ.

ಈಗ ಸರಿ ಹೋಯಿತು. ಇವನಿಗೆ ತಲೆ ಕೆಟ್ಟಿದೇಂತ ಇವರೆಂದುಕೊಂಡರೆ ಅವನೇ ಇವರ ತಲೆ ಕೆಟ್ಟಿದೆಯೆಂದು ಬಿಟ್ಟ! ಅವನಿಗೆ ಹೇಳಲೇಬೇಕೆನಿಸಿತು.

'ನನಗೇನಲ್ಲ ನಿನಗೇ ತಲೆ ಕೆಟ್ಟಿರೋದು' – ಎಂದು ಬಿಟ್ಟಳು.

ಇವಳ ಈ ಉದ್ಧಟತನವನ್ನು ನೋಡಿ ಪಾರ್ವತಿಗೆ ಕೆಡುಕೆನಿಸಿತು. 'ಛಳ್' ಎಂದು ಕಪಾಳಕ್ಕೆ ಹೊಡೆದಳು. 'ಅಣ್ಣನಿಗೆ ತಲೆಕೆಟ್ಟಿದೆ ಎಂದು ಹೇಳುವಷ್ಟು ಧೈರ್ಯ ಬಂತೇ?' ಎಂದಳು. ಪ್ರಮೀಳ ಸ್ವಲ್ಪ ಒರಟು. ಇನ್ನು ಅಲ್ಲಿದ್ದರೆ ಸಿಟ್ಟಿನಲ್ಲಿ ಏನಾದರೂ ಅಂದಾಳೆಂದು, ಶಾಂತ ಅವಳನ್ನು ಎಳೆದುಕೊಂಡು ಹೋದಳು. ಶಂಕರ ಅಲ್ಲಿ ನಿಲ್ಲದೆ ಕೋಣೆಯಾಚೆಗೆ ಬಂದು, ಹೊರನಡೆದ. ಪಾರ್ವತಿ ಬಿಕ್ಕಿ ಬಿಕ್ಕಿ ಅತ್ತಳು. ತನಗೇನೋ ಆಗಿದೆಯೆಂದುಕೊಂಡಳು. ಇತ್ತೀಚೆಗೆ ಪಾರ್ವತಿಗೆ ಉದ್ವೇಗ ಹೆಚ್ಚಾಗುತ್ತಿತ್ತು. ಸಣ್ಣ ಸಣ್ಣ ಕಾರಣಗಳಿಗೆಲ್ಲಾ ಸಿಟ್ಟಾಗುತ್ತಿದ್ದಳು. ಹೇಳಿಕೊಳ್ಳಲಾಗದ ಸಂಕಟ. ತಳಮಳ ವಯಸ್ಸಾಗುತ್ತಿತ್ತು. ಮೈಯಲ್ಲಿ ಕಸುವೇ ಇಲ್ಲದಂತಾಗಿತ್ತು. ಹೆಣ್ಣು ಮಕ್ಕಳ ಮದುವೆಯಾಗಬೇಕಿತ್ತು. ಶಂಕರ ಅವಳಿಗೊಂದು ಸಮಸ್ಯೆಯಾಗಿಬಿಟ್ಟ. ಚಂದ್ರಣ್ಣನಲ್ಲಿ ಅವನ ವಿಚಾರ ಹೇಳಿಕೊಂಡು ಮುಳು ಮುಳು ಅತ್ತಳು. 'ನಮ್ಮ ಶಂಕರನಿಗೆ ಏನೋ ಆಗಿದೆ ಅವನ ಮನಸ್ಸೇ ತಿಳಿಯುವುದಿಲ್ಲ. ಒಂದು ಸಲ ಚೆನ್ನಾಗಿ ಮಾತನಾಡಿದರೆ, ಮತ್ತೊಂದು ಸಲ ಅಮ್ಮ ಅಪ್ಪ ತಂಗಿ ಅನ್ನುವ ಮಮಕಾರವೇ ಇಲ್ಲದಂತೆ ವರ್ತಿಸುತ್ತಾನೆ. ನಾಳೆ ನಮಗೇನಾದರೂ ಆದರೆ ಈ ಹೆಣ್ಣು ಮಕ್ಳ ಗತಿಯೇನಾಗುವುದೋ?–ಎಂದು ತನ್ನ ಹೃದಯವನ್ನೇ ತೋಡಿಕೊಂಡಳು.

ಚಂದ್ರಣ್ಣನ ಎದೆಯಲ್ಲೂ ಚಿಂತೆ ಚಿತೆಯಂತೆ ಉರಿಯುತ್ತಿದೆ. ತಾನು ಯಾರಿಗೆ ಹೇಳಿಕೊಳ್ಳುವುದು? ಈರನೊಬ್ಬನೇ ಇರುವುದರಲ್ಲಿ ಆತ್ಮೀಯ. ಈರ, ಚಂದ್ರಣ್ಣ ಸಮ ದುಃಖಿಗಳು. ಒಂದು ರೀತಿಯಲ್ಲಿ ಈರಣ್ಣನ ಬಾಧ್ಯತೆ ಸ್ವಲ್ಪ ಕಡಿಮೆಯಾಗಿತ್ತು. ಇಬ್ಬರು, ಮಕ್ಕಳಿಗೂ ಪಕ್ಕದೂರಿನ ಬಸ್ಯ, ಶಿವಲಿಂಗ ಅನ್ನುವವರಿಗೆ ಕೊಟ್ಟು ಮದುವೆ ಮಾಡಿದ್ದ. ಚಿಕ್ಕಿಯ ಸಾವು ಅವನನ್ನು ಸ್ವಲ್ಪ ಮಟ್ಟಿಗೆ ದುಃಖಿಯನ್ನಾಗಿ ಮಾಡಿತ್ತು. ಹೆರಿಗೆಯ ಬೇನೆಯಲ್ಲಿ ಚಿಕ್ಕಿ ಸತ್ತಳು. ಈರ ತುಂಬ ಅತ್ತ. ಚಂದ್ರಣ್ಣನೇ ತುಂಬಾ ಸಮಾಧಾನ ಮಾಡಿದ. ಚಿಕ್ಕಿಯ ಪ್ರೇಮ, ಸಹಕಾರ ಈರನಿಗೆ ನೆರಳಾಗಿತ್ತು. ಒಂದು ದಿವಸವಾದರೂ ಮನಸ್ಸು ಕೆಡಿಸಿಕೊಳ್ಳದೆ ಅನ್ಯೋನ್ಯವಾಗಿ ಬಾಳಿದರು. ಊರೆಲ್ಲವೂ, ಚಿಕ್ಕಿ ಈರರಂತೆ ಗಂಡಹೆಂಡಿರು ಬಾಳಬೇಕು'–ಎಂದುಕೊಳ್ಳುವಂತೆ ಇತ್ತು. ಅಂಥಾದ್ದರಲ್ಲಿ ಚಿಕ್ಕಿ ಸತ್ತದ್ದು ಈರನಿಗೆ, ನಡೆಯಲಾಗದವನಿಗಿದ್ದ ಊರುಗೋಲೂ ಕಳುವಾದಂತೆನಿಸಿತು. ಹೆಣ್ಣುಮಕ್ಕಳು ಮದುವೆಯಾಗಿ ಹೋದರೆ ಮನೆ ನಡೆಸಲು ಯಾರು? ಎಂಬ ಪ್ರಶ್ನೆ ಬಂತು. ಈರನ ನೆಂಟರು ಅವನನ್ನು ಎರಡನೆ ಮದುವೆಗೆ ಒತ್ತಾಯಪಡಿಸಿದರು. ಚಿಕ್ಕಿಯ ಜೊತೆ ಬಾಳಿದ ಈರನಿಗೆ ಇನ್ನಾವ ಹೆಣ್ಣು ಸರಿದೂಗಲಾರದೆನಿಸಿತು. ಆದರೂ ಮನೆಯ

ಚಿಂತೆ, ಗಂಡುಮಕ್ಕಳ ಚಿಂತೆ ಅವನನ್ನು ಹೆಚ್ಚಾಗಿ ಕಾಡಿತು. ಒಂದೆರಡು ತಿಂಗಳು ಈರನಿಗೆ ಸಮಾಧಾನ ಹೇಳುವವರು ಇಲ್ಲದಂತಾಯಿತು.

ಚಿಕ್ಕಿಯೊಂದಿಗೆ ಮಗು ಸತ್ತಿದ್ದರೆ ಚೆನ್ನಾಗಿತ್ತೆಂದುಕೊಂಡ. ಆದರೆ ಬಗು ಬದುಕಿರುವಾಗ ಸಾಯಿಸುವುದು ಹೇಗೆ? ಎರಡನೇ ಮದುವೆಗೆ ನೆಂಟನ ಒತ್ತಾಯ ಹೆಚ್ಚಾಯಿತು.

ಕಾಳಪ್ಪನ ತಂಗಿ ಗಂಡನನ್ನು ಕಳೆದುಕೊಂಡು ಮನೆಯಲ್ಲಿ ಉಳಿದುಕೊಂಡಿದ್ದಳು. ಅತ್ತಿಗೆ ನಾದಿನಿಯರಿಗೆ ದಿನವೂ ಸಮರ. ಅವನಿಗೆ ಇವರಿಬ್ಬರ ಜಗಳ ಸಾಕು ಸಾಕಾಗಿ ಹೋಗಿತ್ತು. ತಂಗಿಗೆ ದಾರಿ ಇಲ್ಲದೆ ಇವನಲ್ಲಿ ಉಳಿದಿದ್ದಳು. ಅತ್ತೆ ಮನೆಯವರು ಮಹಾಕಟುಕರು. ಸೊಸೆಯನ್ನು ಉಳಿಸಿಕೊಳ್ಳಲು ಹೀನಾಮಾನವಾಗಿ ಬೈದು ಮನೆಯಾಚೆ ಅಟ್ಟಿಬಿಟ್ಟಿದ್ದರು. ವಿಧಿಯಿಲ್ಲದೆ ಅಣ್ಣನ ಮನೆಗೆ ಬಂದು ಇದ್ದಳು. ಕಾಳಪ್ಪನ ಮಡದಿಗೆ ಇದು ಸಹಿಸಲಿಲ್ಲ. ತಂಗಿಗೆ ಯಾವುದಾದರೂ ಗಂಡು ಕೂಡಿಕೆಗೆ ದೊರೆತರೇ? ಎಂದು ನೋಡುತ್ತಿದ್ದ. ಈಗ ಈರ ಕಾಳಪ್ಪನ ದೃಷ್ಟಿಗೆ ಬಿದ್ದ.

ದಿನಾ ಅವನನ್ನು ಕಂಡು ಪುಸಲಾಯಿಸಿ, ಹೆಣ್ಣಿಲ್ಲದ ಸಂಸಾರದ ಬವಣೆಗಳನ್ನು ವಿವರಿಸಿ, ಕೊನೆಗೆ ಮದುವೆಗೆ ಒಪ್ಪಿಸಿದ. ಬಂದವಳು ಸರಿಯಾಗಿಲ್ಲದೆ ಹೆಣ್ಣು ಮಕ್ಕಳಿಗೆ ಹಿಂಸೆ ಕೊಟ್ಟರೆ ತನ್ನಿಂದ ನೋಡಲಾಗುವುದಿಲ್ಲವೆಂದದ್ದಕ್ಕೆ, ತಾನೇ, ಅವರಿಗೆ ಗಂಡುಗಳನ್ನು ಹುಡುಕಿಕೊಡುವುದಾಗಿಯೂ, ಆ ನಂತರವೇ ಕೂಡಿಕೆ ಮಾಡಿಕೊಳ್ಳಬಹುದೆಂತಲೂ ಹೇಳಿ ಒಪ್ಪಿಸಿದ.

ಕಾಳಪ್ಪ ಅಂದಂತೆ ಈರನ ಹೆಣ್ಣು ಮಕ್ಕಳಿಗೆ ಗಂಡುಗಳನ್ನು ಹುಡುಕಿಕೊಟ್ಟ. ಅವರು ಸಂತೋಷವಾಗಿ ಮದುವೆಯಾಗಿ ಹೊರಟು ಹೋದರು.

ಒಂದು ಒಳ್ಳೇ ದಿನ ಈರ ಮತ್ತು ರಂಗಿಯ ಕೂಡಿಕೆಯ ಸಮಾರಂಭವಾಯಿತು. ಆ ದಿನ ಬಂದ ನೆಂಟರಿಗೆಲ್ಲ ಒಳ್ಳೆ ಹೆಂಡ ಕೊಡಿಸಿದ.

ಸಮಾರಂಭ ಮುಗಿದು ಎಲ್ಲಾ ಮನೆಗೆ ಹೋದ ಮೇಲೆ ಈರ, ರಂಗಿಯಿಂದ ಪ್ರಮಾಣ ಮಾಡಿಸಿಕೊಮಡ. 'ನನ್ನ ಮಕ್ಕಳಿಗೆ ತಾಯಿಯಿಲ್ಲದ ಕೊರತೆಯ ಅನುಭವ ಆಗ್ಬ್ಯಾರ್ದು ರಂಗಿ. ಅವುಕ್ಕಾಗಿ ನಾ ಬದುಕಿವ್ನಿ' ಎಂದು ಹೇಳಿದ. ರಂಗಿ ಕಿವಿಗೊಟ್ಟು ಅವನ ಮಾತುಗಳನ್ನು ಕೇಳಿದಳು. 'ಅಂಗೇ ಆಗ್ಲಿ ಈರ', ನಂಗೂ ನನ್ನವರಂತ ಯಾರವ್ರೆ ಏಳು? ನನ್ನ ಅತ್ಗಿ ಕೊಡೋ ಕಷ್ಟ, ಅನುಭವ್ಸೋಕಾಗ್ದೆ ಪ್ರಾಣ ಕಳಕಳ್ಳಾಣಾಂತ ಇದ್ದೆ. ಅಸ್ಟರಾಗೆ ನಿನ್ನ ಇಚಾರ ಬಂತು. ಅಣ್ಣ, ಒಳ್ಳೆ ಸಮ್ಮಂದಾಂತ ಏಳ್ದ. ಅಲ್ಲಿಂದ ಪಾರಾದ್ರೆ ಸಾಕೆನ್ಸಿತ್ತು. ಅದಕೇ ನಾನೂ ಒಪ್ಕೊಂಡ್ಬಿಟ್ನಿ – ಎಂದು ಸಂಕ್ಷಿಪ್ತವಾಗಿ ಕತೆ ಹೇಳಿದಳು.

ಇದ್ದುದರಲ್ಲಿ ರಂಗಿ ಚೆನ್ನಾಗೇ ಸಂಸಾರ ನಡೆಸಿಕೊಂಡು ಹೋಗ್ತಿದ್ಲು. ಚಿಕ್ಕ ಎಳೇ ಮಗು ತಾಯ ಹಾಲಿಲ್ಲದೆ ತುಂಬಾ ಕಷ್ಟ ಕೊಟ್ಟಿತು. ಹಸುವಿನ ಹಾಲು ಹಿಡಿಸಲೇ

ಇಲ್ಲ. ಜೊತೆಗೆ ಅದೇನು ಮಗುವಿನ ದೇಹ ಪ್ರಕೃತಿಯೋ, ದಿನಕ್ಕೊಂದು ಖಾಯಿಲೆ. ರಂಗಿ ಪಾಪ ಎಷ್ಟೂಂತ ಮಾಡಿಯಾಳು? ಈರನೂ ನೋಡಿದ. ಈ ಹಾಳು ಮಗು ಇತ್ತ ಸಾಯುವುದಿಲ್ಲ ಅತ್ತ ಬದುಕುವುದಿಲ್ಲ ಅನ್ನುವ ಹಾಗಿದೆ' ಎಂದು ತುಂಬಾ ಬೇಸರಗೊಂಡಿದ್ದ.

ಇಷ್ಟೊಂದು ನರಳುವ ಈ ಮಗು ತುಂಬಾ ದಿವಸ ಬದುಕಲಿಲ್ಲ. ಒಂದು ದಿನ ವಾಂತಿ ಭೇದಿಗಳಿಂದ ಸುಸ್ತಾಗಿ ಸತ್ತೇ ಹೋಯಿತು.

ಗಂಡು ಮಕ್ಕಳು ಸುಮಾರು ದುಡಿಯುವ ವಯಸ್ಸಿಗೆ ಬಂದಿದ್ದರು. ಅಪ್ಪನಿಗೆ ಬದಲಾಗಿ ತಾವೇ ದುಡಿಯುತ್ತೇವೆಂದು ಹೇಳುತ್ತಿದ್ದರು. ಆದರೆ ಈರನಿಗೆ ಆ ಮಕ್ಕಳ ಮೇಲೆ ಭಾರ ಹೊರಿಸಲು ಇಷ್ಟವಿಲ್ಲದೆ ತಾನೂ ಕೆಲಸಕ್ಕೆ ಹೋಗುತ್ತಿದ್ದ.

ಚಂದ್ರಣ್ಣನಿಗೆ ಆ ಅದೃಷ್ಟವೂ ಇರಲಿಲ್ಲ. ಇದ್ದೊಬ್ಬ ಮಗು ಶಂಕರ ತಂದೆತಾಯಿ ಮನಸ್ಸಿಗೆ ಈ ವಯಸ್ಸಿನಲ್ಲಿ ಸುಖವಾಗಿ ಇಡುವುದಕ್ಕೆ ಬದಲಾಗಿ ಅವನೇ ಅವರಿಗೆ ಹೆಚ್ಚು ಹೆಚ್ಚು ಸಮಸ್ಯೆಯಾಗುತ್ತಿದ್ದ. ಚಂದ್ರಣ್ಣ ಅವನ ವಿಚಾರವಾಗಿ ಈರನಲ್ಲಿ ಪ್ರಸ್ತಾಪ ಮಾಡಿದಾಗ ಈರ, 'ಬುದ್ಧಿ, ಅವನ ವಿಷಯದಾಗೆ ನೀವು ಕೆಟ್ಟದಾಗಿ ಬಾವಿಸ್ಬ್ಯಾಡಿ. ನಿಮ್ಮ ಶಂಕರ ನಮ್ಮಂಗಲ್ಲ ಬುದ್ಧಿ. ಅವನಾಗೆ ಏನೋ ಮಯಿಮಾ ಇದೇಂತ ಅನ್ನಿಸ್ತಾದ. ನಿಮ್ಗೆ ಗೊತ್ತಿಲ್ಲ. ಚಿಕ್ಕಿ ನಂತಾವ ಒಂದು ಗುಟ್ಟು ಏಳಿದ್ದು ಚೋಟುದ್ದ ಶಂಕರನ್ನ ಒಮ್ಮೆ ಸುತ್ತಾಡಿಸ್ಕಂಬರಾನಾಂತ, ಕೆರೆಯಾಚೆ ಬಯಲಿಗೆ ಕರ್ಕಂಡು ಓಗಿದ್ನಂತೆ. ಆಗ್ಲೂ ಇವನು ಇಂಗೇ ಆಡಿದ್ನಮತೆ. ಚಿಕ್ಕಿಗೆ ಬೆರಗಾಯಿತಂತೆ. ಇದನ್ನ ಅವ್ವಾವ್ರಿಗೆ ಏಳೋದಾ ಬೇಡ್ವಾಂತ ಯೋಚ್ನೆಯಾಗೆ ಬಿದ್ದು, ಅವನ್ನೆ ಬೆರಳಿಟ್ಟು ಕೇಳಿದ್ಕೆ, 'ಏಳ್ಬೇಡಾಂತ' ಅನ್ಕಂಡಿದ್ದ ಬೆರಳ್ನೆ ಮುಟ್ತಂತೆ. ಅದಕ್ಕೇ ಅವ್ವ ಸುಮ್ಮನಾದಂತೆ – ಎಂದು ಚಿಕ್ಕಿ ಹೇಳಿದ ಕತೆಯನ್ನು ಹೇಳಿದ.

'ಏನು ಮಹಿಮೇನೋ ಏನೋ ಈರ! ನನಗಂತೂ ಒಂದೂ ಅರ್ಥವಾಗೊಲ್ಲ. ವ್ಯವಹಾರ ಜ್ಞಾನವೇ ಇಲ್ಲ. ಯಾವಾಗ್ಲೂ ಪೆದ್ದು ಪೆದ್ದಾಗಿರ್ತಾನೆ. ನಮ್ಮ ವಿಷಯ ನಮಗೆ ಯೋಚ್ನೆ ಇಲ್ಲ. ನಾಳೆ ಅವನು ಬಾಳಿ ಬದುಕಬೇಕಾದವನು. ಹಿಗೆ ಇದ್ದರೆ ಅವನ ಜೀವನ ಏನಾದೀತು. ಮನುಷ್ಯನಾಗಿ ಹುಟ್ಟಿ ಮನುಷ್ಯನಂತೆ ಬದುಕುವುದನ್ನು ಕಲಿಯದಿದ್ದರೆ ಹೇಗೆ? ಯಾವಾಗಲೂ ಅವನನ್ನು ನೋಡ್ಕೋಳ್ತಾನಾವೇ ಇರ್ತೀವೀಂತ ಏನು ಭರವಸೆ? ಅವನಿಗೆ ಯಾರೂ ಬೇಡ. ಪ್ರಪಂಚಕ್ಕೂ ತನಗೂ ಏನೂ ಸಂಬಂಧವಿಲ್ಲ ಅನ್ನೋ ಹಾಗೆ ವರ್ತಿಸಿದರೆ, ಒಂಟಿಯಾಗಿ ಜೀವನ ಸಾಗಿಸೋದು ಸಾಧ್ಯವೇ? ಬದುಕಿನಲ್ಲಿ ಹತ್ತು ಜನರ ಸ್ನೇಹ, ಪ್ರೀತಿ, ಸಹಕಾರ ಬೇಕಾಗುತ್ತೆ. ಎಂಥ ಸನ್ಯಾಸಿಯಾದವನಿಗೂ ನಮ್ಮಂಥವರ ಬೆಂಬಲ ಬೇಕೇ ಬೇಕಾಗುತ್ತೆ. ಅಂಥಾದ್ದರಲ್ಲಿ ಇನ್ನೂ ಹದಿನೆಂಟು ತುಂಬದ ಈ ಶಂಕರ ಯಾರ ಹಂಗೂ ಇಲ್ಲದೆ ಹೇಗೆ ಬದುಕುತ್ತಾನೆ. ನೀನೇ ಹೇಳು – ಎಂದ.

ಚಂದ್ರಣ್ಣ ಹೇಳುವ ಮಾತು ವ್ಯವಹಾರದ ದೃಷ್ಟಿಯಿಂದ ನಿಜವೇ. ಆದರೆ ಶಂಕರ ಅರ್ಥ ಮಾಡಿಕೊಳ್ಳಬೇಕಲ್ಲ? ಯಾರ ತಂಟೆ ತಕರಾರುಗಳಿಗೆ ಹೋಗದೆ ತನ್ನ ಪಾಡಿಗೆ ತಾನು ನಿರುಪದ್ರವಿಯಾಗಿ ಬಾಳಿದರೆ ಯಾರಿಗೆ ಹಾನಿ' ಎಂಬಂತೆ ಬಾಳುವ ರೀತಿ ಶಂಕರನ ದೃಷ್ಟಿಗೆ ಸರಿಯೆನಿಸಿರಬಹುದು ಎಂದುಕೊಂಡ ಈರ. ಈರನ ಬುದ್ದಿಗೆ ಇದಕ್ಕಿಂತ ಹೆಚ್ಚಾಗಿ ಆಲೋಚನೆ ಮಾಡಲು ಸಾಧ್ಯವಾಗಲಿಲ್ಲ.

ಚಂದ್ರಣ್ಣನೇ ಮಾತು ಮುಂದುವರೆಸಿದ. 'ಯಾಕೆ ಈರಣ್ಣ, ನಿನಗೆ ನಾನು ಹೇಳಿದ ಮಾತು ಸರಿಯೆನಿಸಲಿಲ್ಲವೇ? ಶಂಕರನನ್ನು ಎಷ್ಟೋ ಸಲ ಮಾತಾಡಿಸಬೇಕೆಂದು ಪ್ರಯತ್ನಿಸಿದರೂ ಸಾಧ್ಯವಾಗುತ್ತಿಲ್ಲ. ನನ್ನ ಎದುರಿಗೇ ಕಾಣಿಸಕೊಳ್ಳುವುದಿಲ್ಲ. ಈಗಂತೂ ಅವನು ಕಲಿತದ್ದು ಮುಗಿಯಿತು. ಆದರೂ ಮನೆಯಲ್ಲಿರುವುದೇ ಅಪರೂಪ. ಇದ್ದರೆ ಕೋಣೆ ಸೇರಿ ಬಾಗಿಲು ಜಿಗಿದುಕೊಳ್ಳುತ್ತಾನೆ. ಬೆಳಗಿನಿಂದ ಸಂಜೆವರೆಗೆ ಎಲ್ಲಿ ಹೋಗುತ್ತಾನೆ. ಏನು ಮಾಡುತ್ತಾನೆ ಎಂದು ಯಾರಿಗೂ ತಿಳಿಯದು. ಹೀಗಾದರೆ ನಮ್ಮ ಗತಿ ಏನಾಗುವುದು ಯೋಚ್ನೆ ಮಾಡು – ಎಂದು ಈರನಿಗೇ ಮರು ಪ್ರಶ್ನೆ ಹಾಕಿದ.

'ಅವನ ಗೆಣೇರು ಹೇಳ್ತಾರೆ. ಒಂದ್ಸಲ ದಂಡೆ ಮ್ಯಾಕೆ ಓಯ್ತಿದ್ದಾಂತಾರೆ, ಮತ್ತೊಂದು ಸಾರಿ ಊರಗಡಿಯ ಪಾಳ್ಗುಡಿತಾವ ಕುಂತಿದ್ದ – ಅಂತಾರೆ. ಇದರಾಗೆ ನಿಜ ಏನೈತೆ ಅನ್ನೋದ್ನ ನೋಡ್ವಾಕು ಬುದ್ಧಿ!' ಹೊಸ ವಿಷಯ ಹೇಳಿದಂತೆ ಹೇಳಿದ ಈರ.

'ಈರ, ನಿನಗೆ ನೆನಪಿರಬಹುದು ವಿಶ್ವಸತ್ತಮ್ಯಾಲೆ, ಎಷ್ಟು ಪಾಡು ಪಟ್ಟು, ಇವನು ಬಂದಾಂತ ಸಂತೋಷ ತಂದುಕೊಂಡಿವಿ. ಸದ್ಯಕ್ಕೆ ದೇವರು ಗಂಡು ಮಗು ಕೊಟ್ಟು ಸಂತಾನ ಉದ್ಧಾರ ಮಾಡಿದ, ಅಂತ ಹಿರಿಹಿರಿ ಹಿಗ್ಗಿದಿವಿ. ವಿಶ್ವನ ಸಾವಿನ ನೋವನ್ನು ಮರೆಸಿದ್ದಕ್ಕಾಗಿ ದೇವರನ್ನು ಕೊಂಡಾಡಿ, ಈ ವರ ಅಮೂಲ್ಯವೆಂದು ಭಾವಿಸಿ ಕಾದಿಟ್ಟಿವಿ. ಆದರೆ ಈಗ ನೋಡಿದರೆ ವರವೇ ಶಾಪವೇನೋ ಎನ್ನಿಸ್ತಿದೆ – ಎಂದು ನೊಂದುಕೊಂಡ.

ಚಂದ್ರಣ್ಣನ ನೋವನ್ನು ನೋಡಿ ಈರನಿಗೆ ಕರುಳು ಹಿಂಡಿದಂತಾಯಿತು. ತನ್ನ ಕೈಯಿಂದ, ಅನ್ನವಿಕ್ಕಿದ ದಣಿಗೆ ಏನಾದ್ರು ಉಪಕಾರ ಆಗುವ ಹಾಗಿದ್ರೆ ಮಾಡೋಣವೆಂದುಕೊಂಡ. ಒಳ್ಳೆಯವರಿಗೆ ದೇವರು ಕೊಡೋ ಕಷ್ಟ ಅಷ್ಟಿಷ್ಟಲ್ಲ. ಕಷ್ಟವೇ ಅವರಿಗೆ ಕೊಡಬೇಕೆನ್ನುವ ಮನಸ್ಸಿದ್ದರೆ, ಸುಖ ಕಾಣಿಸಿ ಕಷ್ಟ ಕೊಡುವುದೇಕೆ? ಎಂದು ಪ್ರಶ್ನಿಸಿಕೊಂಡ. ಈರ, ಚಂದ್ರಣ್ಣನ ಬದುಕನ್ನು ನೋಡುತ್ತಲೇ ಬಂದಿದ್ದಾನೆ. ಆರ್ಥಿಕ ಮುಗ್ಗಟ್ಟು ಇಲ್ಲದಿದ್ದರೂ ಬೇರೆ ಬೇರೆ ವಿಧದಲ್ಲಿ ಮುಗ್ಗಟ್ಟನ್ನು ಅನುಭವಿಸುತ್ತಲೇ ಇರುವುದನ್ನು.

ಚಂದ್ರಣ್ಣನ ಮದುವೆ. ವಿಶ್ವನ ಹುಟ್ಟು–ಅವನ ಸಾವು–ಅತ್ತೆಯ ಸಾವು–ಮಾವನ ಚಿತ್ತವಿಕಾರ–ಮತ್ತೆ ತಾಯಿ–ತಂದೆ–ಇವರ ಸಾವು. ಹೀಗೆ ಒಂದೇ ಎರಡೆ? ಒಟ್ಟೊಟ್ಟಿಗೆ

ಇಷ್ಟೊಂದು ಸಾವುಗಳು ಯಾವ ಕಲ್ಲೆದೆಯವನನ್ನೂ ಕರಗಿಸುತ್ತದೆ. ಜೀವನದಲ್ಲಿ ವಿರಕ್ತನಂತಿದ್ದ ಚಂದ್ರಣ್ಣ, ಅನ್ಯ ಮನಸ್ಕಳಾಗಿದ್ದ ಪಾರ್ವತಿ, ಇವರಿಗೆ ಶಂಕರ ಹುಟ್ಟಿದ್ದು, ದೈವೀಕವೆ! ಅದಕ್ಕಾಗಿ ಅವರು ಅನುಭವಿಸಿದ ಸಂತೋಷ ಹೇಳತೀರದು. ಈಗ ಅದೇ ಶಂಕರನಿಗಾಗಿ ಅಳಬೇಕಾಗಿ ಬಂದಿದೆ. ಇದೆಂಥಾ ಅನ್ಯಾಯ ಅನಿಸಿತು, ಈರನ ಮನಸ್ಸಿಗೆ.

'ಬುದ್ಧಿ, ನೀವು ನಿಧಾನವಾಗಿ ಅವನಿಗೆ ತಿಳಿಸಿ ಯೋಳಿದರೆ, ಅರ್ಥ ಮಾಡಿಕೊಂಡ್ಯಾನು. ಅವರಿಗಿನ್ನೂ ಜೀವನಾನುಭವದ ಕಾವು ತಟ್ಟಿರಲಿಕ್ಕಿಲ್ಲ. ಸ್ವತಂತ್ರವಾಗಿ ಬಾಳುವ ವಯಸ್ಸಿದೆ. ಅದಕೇ ಅವನು ಅಂಗೆ. ಎಲ್ಲ ಸರಿ ಓಯ್ತಾನೆ. ಅವನ ಯೋಚ್ನೆ ಬುಟ್ಬುಡಿ ನೀವು' ಅಂದ.

'ಇದೆಲ್ಲ ನಮ್ಮ ಕರ್ಮ ಈರಣ್ಣ. ಯಾರ್ನಂದು ಏನ್ಪ್ರಯೋಜ್ನ ಇದೆ ಹೇಳು?'

.....ಹೋಗಲಿ ಬಿಡು. ನನ್ನ ಕಷ್ಟ ಯಾವಾಗ್ಲೂ ಇದ್ದೇ ಇದೆ. ದೇವರಿಟ್ಟ ಹಾಗೆ, ಆಗಲಿ' ಎಂದ ಸೋತ ದನಿಯಲ್ಲಿ.

ಈರಣ್ಣ, ಈ ಮಾತನಾಡಿದ ಚಂದ್ರಣ್ಣನ ಮುಖದತ್ತ ನೋಡಿದ. ಜೀವನಾವಧಿಯಲ್ಲಿ ಒಮ್ಮೆಯಾದರೂ ಅಧೀರನಾದದ್ದನ್ನೇ ನೋಡದವನು. ಈಗ ಚಂದ್ರಣ್ಣನ ಕಣ್ಣಂಚಿನಲ್ಲಿ ಮುತ್ತಾಗಿ ಉದುರಲಿದ್ದ ಕಂಬನಿಯನ್ನು ಕಂಡ!

ಶಂಕರನ ನಡತೆಯಲ್ಲಿ ಒಂದಿಷ್ಟೂ ಪರಿವರ್ತನೆಯನ್ನು ಕಾಣದ ಚಂದ್ರಣ್ಣ, ಈ ವರ್ಷದೊಳಗೆ ಇಬ್ಬರು ಹೆಣ್ಣು ಮಕ್ಕಳ ಮದುವೆ ಮಾಡಲೇಬೇಕೆಂದು ನಿರ್ಧರಿಸಿದ. ತಮ್ಮ ದೇಹಸ್ಥಿತಿ ಮನಃಸ್ಥಿತಿ ಒಂದು ದಿನವಿದ್ದಂತೆ. ಮತ್ತೊಂದು ದಿನವಿರಲಾರದೆಂದು ಭಾವಿಸಿ, ಬೇಗ ಬೇಗನೆ ಗಂಡುಗಳನ್ನು ಹುಡುಕಾಡತೊಡಗಿದ. ತನ್ನ ಸ್ನೇಹಿತರಿಗೆಲ್ಲಾ ಹೇಳಿದ. ತವರಿನ ಯೋಚನೆ ಇರಬಾರದಂತಹ ಜಾಗವಾದರೆ ಒಳ್ಳೆಯದೆಂದು ಪ್ರಯತನಿಸುತ್ತಿದ್ದ.

ಬೆಳೆದ ಹೆಣ್ಣು ಮಕ್ಕಳಿಗೆ, ತಂದೆ ತಯಿಯರ ಚಿಂತೆ ಅರ್ಥವಾಗುತ್ತಿದೆ. ಆದರೆ ಅಸಹಾಯಕರಾದ ಅವರು ಯಾವ ರೀತಿಯಲ್ಲಿಯೂ ಸಹಾಯ ಮಾಡುವಂತಿಲ್ಲ. ತಮ್ಮ ಮದುವೆಯ ಚಿಂತೆ ಮತ್ತಷ್ಟು ಕಾಡುತ್ತಿದೆ ಎಂದು ಅವರು ಭಾವಿಸಿದರು. ಒಂದು ದಿನ ಚಂದ್ರಣ್ಣ, ಮೈಗೆ ಆಲಸ್ಯವೆಂದು ಹೊರಗೆಲ್ಲೂ ಹೋಗದೆ ಮನೆಯಲ್ಲಿಯೇ ಉಳಿದ. ಇಬ್ಬರು ಹೆಣ್ಣು ಮಕ್ಕಳೂ ತಂದೆಯನ್ನು ಸಮೀಪಿಸಿದರು. ಮೊದಲಿಗೆ ವಿಷಯ ಹೇಗೆ ಪ್ರಾರಂಭಿಸಬೇಕೆಂದು ತಿಳಿಯಲಿಲ್ಲ. ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಚಂದ್ರಣ್ಣನಿಗೆ ಇವರ‍್ಯಾಕೆ ಹೀಗೆ ಮಾಡುತ್ತಿದ್ದಾರೆನಿಸಿತು? 'ಯಾಕಮ್ಮ ಇಬ್ಬರೂ ಒಟ್ಟಿಗೆ ಬಂದಿದ್ದೀರಿ? ಏನಾದರೂ ಆಗ್ಬೇಕಾ?–ಎಂದು ಕೇಳಿದ್ದಕ್ಕೆ ಅವರಿಬ್ಬರೂ, 'ಅಪ್ಪ ನಾವು ನಿನ್ನಲ್ಲಿ ಒಂದು ಮಾತು ಕೇಳಬಹುದಾ?–ಎಂದು ಮೊದಲು, ಮಾತಿಗೆ ವೇದಿಕೆ ಸಿದ್ಧಪಡಿಸಿದರು.

ಒಂದ್ಮಾತೇನು? ಸಾವಿರ ಮಾತು ಕೇಳಿ – ಎಂದು ನಕ್ಕ.

ನೀವು ಇತ್ತೀಚೆಗೆ ತುಂಬಾ ಬಡವಾಗ್ಬಿಟ್ಟಿರಿ. ನಮಗ್ಗೊತ್ತು. ನೀವೇನೋ ಚಿಂತೆ ಇಟ್ಕೊಂಡಿದ್ದೀರಿ. ನಮಗೆ ಅದೇನೂಂತ ಹೇಳ್ಬಾರ್ದೇನಪ್ಪಾ?

ಹೆಣ್ಣು ಮಕ್ಕಳಾದ ನಿಮಗ್ಯಾಕೆ ನಮ್ಮ ಚಿಂತೆ? ಇರುವಷ್ಟು ದಿವಸ ನಿಮ್ಮ ಪಾಡಿಗೆ ನೀವು ಸಂತೋಷವಾಗಿ ಇದ್ಬಿಟ್ಟು ಹೋಗು.

ಏನಪ್ಪ ಹಾಗಂದ್ರೆ? ಹೆಣ್ಮಕ್ಕಳಾದ ತಪ್ಪಿಗೆ ನಾವು ನಿಮ್ಮಿಂದ ಬೇರೆಯೇನು? ನಮಗೇನು ಜವಾಬ್ದಾರೀನೇ ಇರಬಾರದೆ? ತಂದೆ ತಾಯಿಯರ ಚಿಂತೇನ ಏನೂಂತ ತಿಳಿಯುವ ಅಧಿಕಾರಾನೂ ನಮಗಿಲ್ಲವೆಂದರೆ ಇನ್ನು ನಾವ್ಯಾಕಪ್ಪ ನಿಮ್ಮ ಮಕ್ಕಳೆನ್ನಿಸಕೊಳ್ಳಬೇಕು?

'ಯಾಕಮ್ಮಾ, ಇವತ್ತು ಇದ್ದಕ್ಕಿದ್ದ ಹಾಗೆ ಬಂದು ನಮ್ಮ ಮೇಲೆ ದಾಳಿ ಮಾಡ್ತಿದ್ದೀರಿ? ಹೌದಪ್ಪಾ ನೀನಾಗಿ ಬಾಯ್ಬಿಟ್ಟು ನಮಗೆ ಹೇಳೊಲ್ಲ – ಎಂದ ಮೇಲೆ ನಾವೇ ಪ್ರಯತ್ನಿಸಿ ನೋಡ್ತೀವಿ–ಶಾಂತ ಹೇಳಿದಳು.

'ನೀವು ತಿಳಿದೂ ಏನ್ಮಾಡ್ತೀರಿ ಹೇಳಿ'

ಅದು ಆಮೇಲೆ ಆಲೋಚನೆ ಮಾಡೋಣಪ್ಪ – ಪರಿಮಳ ಸಲಹೆ ಹೇಳಿದಳು.

'ನನಗೇನೂ ಚಿಂತೆಯಿಲ್ಲ. ನಿಮ್ಮಂಥ ಮಕ್ಕಳಿರುವಾಗ ನನಗ್ಯಾತರ ಚಿಂತೆ ಹೇಳಿ –ಎಂದ ಚಂದ್ರಣ್ಣ.

'ಅದೆಲ್ಲಾ ಬೇಡಿ. ಮಾತು ಮರೆಸುವ ರೀತಿ. ನಮಗ್ಗೊತ್ತು, ನಿಮಗೆ ಅಣ್ಣನ ವಿಚಾರವಾಗಿ, ನಮ್ಮ ಮದುವೆ ವಿಚಾರವಾಗಿ ಬೇಸರವಾಗಿದೆ.

'ಅದೆಲ್ಲಾ ಸುಳ್ಳು. ನನ್ನನ್ನು ನೋಡಿ ನೀವು ಹಾಗೆಂದುಕೊಳ್ಳುತ್ತೀರಿ ಅಂತ ಊಹಿಸಿದ್ದೆ. ಒಂದ್ಮಾತು ಹೇಳಿ. ಮನುಷ್ಯ ಯಾವಾಗಲೂ ಒಂದೇ ರೀತಿ ಇರುವುದಕ್ಕೆ ಆಗುತ್ತದೆಯೇ? ವಯಸ್ಸಾದಂತೆ, ದೇಹ, ಮುಖ – ಎಲ್ಲಾ ಕೆಡುತ್ತೆ ಬೇಸರ ಕವಿದಂತೆ ಅನಿಸುತ್ತೆ – ಅಷ್ಟೇ ಎಂದ.

'ನೋಡೀಪ್ಪಾ, ನಮಗೂ ಪರಿಸ್ಥಿತಿ ಅರ್ಥ ಮಾಡಿಕೊಳ್ಳುವ ಪ್ರಾಯ ಬಂದಿದೆ. ಇನ್ನೂ ನಾವು ಮುಗ್ಧರಲ್ಲ. ನಮ್ಮನ್ನು ಮೋಸಪಡಿಸಬೇಡಿ–ಎಂದಳು ಶಾಂತ ಸ್ವಲ್ಪ ಕಟುವಾಗಿ.

'ಸುಮ್ಮನೆ ಹೋಗಿ ಮಕ್ಕಳೆ. ನಿಮ್ಮ ಕೆಲಸ ನೀವು ನೋಡಿಕೊಳ್ಳಿ. ಕೈಗೆ ಬಂದಿರುವ ಗಂಡು ಹುಡುಗನಿಗೇ ಅಪ್ಪ, ಅಮ್ಮನ ಚಿಂತೆ ಇಲ್ಲದಿರುವಾಗ ನಿಮಗೇಕೆ ಆ ತಲೆನೋವು? ನೆಮ್ಮದಿಯಾಗಿ ಒಂದೆರಡು ದಿನವಿದ್ದು ಮದುವೆ ಮಾಡಿಕೊಂಡು ಹೋಗಿ' – ಎಂದ ಬೇಸರದ ದನಿಯಲ್ಲಿ.

'ಅದೇ ವಿಷಯಕ್ಕೆ ನಾವು ಬಂದದ್ದು' – ಎಂದಳು ಪರಿಮಳ.

'ಏನು ಮದುವೆ ವಿಷಯವೇ? ಎಂದ ವಿಸ್ಮಯದಿಂದ.

'ಹೌದಪ್ಪ'– ಶಾಂತ ಉತ್ತರಿಸಿದಳು.

'ಏನಾದರೂ ನೀವೇ ಗಂಡುಗಳನ್ನು ಆರಿಸಿಕೊಂಡಿದ್ದೀರಾ? ಹೇಗೆ? – ಸಂಶಯದಿಂದ ಕೇಳಿದ.

'ಅಂಥಾದ್ದೆಲ್ಲಾ ಏನೂ ಇಲ್ಲ. ಆದರೆ ನಾವು ಮದುವೆ ಮಾಡಿಕೊಳ್ಳುವುದಿಲ್ಲಪ್ಪ– ನಿರ್ಧಾರದ ಧ್ವನಿಯಲ್ಲಿ ಹೇಳಿದರು.

'ಊಹುಂ'! ಯಾವತ್ತಿಂದ ಈ ಚಳುವಳಿ?

'ಇವತ್ತಿನಿಂದಲೇ – ಎಂದಳು.

ಚಂದ್ರಣ್ಣ ಬಿದ್ದು ಬಿದ್ದು ನಕ್ಕ. ಇಬ್ಬರೂ ಪೆಚ್ಚಾದರು. ನಾವೇನೋ ಗಂಭೀರ ವಿಚಾರವೆಂದು ಹೇಳಿದರೆ, ಈ ಅಪ್ಪನಿಗೆ ಅದು ತಮಾಷೆಯಂತೆ ಕಾಣುತ್ತಿದೆಯಲ್ಲ? – ಎಂದು ಬೆರಗಾದರು. ಆದರೆ ಮೋಡಗಳೇ ಕವಿದಿರುತ್ತಿದ್ದ ಅಪ್ಪನ ಮುಖದಲ್ಲಿ ಈಗೊಂದೆರಡು ನಿಮಿಷ ಕಾಣಿಸಿದ ಸಂತೋಷದ ಬೆಳ್ದಿಂಗಳು ಇಬ್ಬರಿಗೂ ಹಿತವೆನಿಸಿತು. ಅಪ್ಪನ ಮುಖದಲ್ಲಿ ನಗುವನ್ನೇ ಕಾಣದಿದ್ದವರು, ಮನಃಪೂರ್ತಿ, ಈಗ ಕಂಡು ಹಿಗ್ಗಿದರು. ಚಂದ್ರಣ್ಣ ನಗುವಿನಲ್ಲೇ ಮುಗಿಸಲಿಲ್ಲ. ಪಾರ್ವತಿಯನ್ನು ಕೂಗಿ ಕರೆದರು. ಗಂಡನ ಕರೆಯನ್ನು ಕೇಳಿ ಗಾಭರಿಯಿಂದ ಪಾರ್ವತಿ ಎದ್ದು ಬಿದ್ದು ಓಡಿಬಂದು, ಏದುಸಿರು ಬಿಡುತ್ತಾ ಕೇಳಿದಳು' ಏನೂಂದ್ರೆ ನನ್ನನ್ನು ಕರೆದಿರಾ?'

'ಇಲ್ಲ ನಿನ್ನನ್ನು ಕೂಗಲಿಲ್ಲ. ನಿನ್ನ ಸವತಿಯನ್ನು ಕೂಗಿದ್ದು' ಎಂದ ನಕ್ಕು.

'ಸರಿಬಿಡೀಂದ್ರೆ, ನಿಮಗ್ಯಾಕೆ ಈ ವಯಸ್ಸಿನಲ್ಲಿ ತಮಾಷೆ ಮಾಡೋ ಮನಸ್ಸು ಬಂತು?–ಎಂದು ಆಕ್ಷೇಪಿಸಿದಳು.

'ಮುದುಕಿಯಾಗಿರೋ ನೀನ್ಯಾಕೆ ಓಡಿಬಂದೆ ಹೇಳು?'

'ಹೌದು ನಾನೇನೋ ಮುದುಕಿಯಾದೆ. ನೀವು ಮಾತ್ರ ಇನ್ನೂ ಹುಡುಗರು, ಅದಕ್ಕೇ ಇರ್ಬೇಕಲ್ಲ, ಈಗ ಹುಡುಗಾಟ ಆಡ್ತಿದ್ದದ್ದು?

'ಹುಡುಗಾಟ ಆಡೋದೇನ್ಬಂತು? ನಿನ್ನ ಈ ಕುಲಪುತ್ರಿಯರಿದ್ದಾರಲ್ಲ ಅವರ ಮಾತು ಕೇಳಿದರೆ ನಿನಗೂ ಹುಡುಗಾಟ ಆಡ್ಬೇಕಂತ ಅನ್ಸತ್ತೆ, ನಿಮ್ಮಜ್ಜಿಗೂ ಅನ್ಸುತ್ತೆ– ಎಂದು ಮತ್ತೆ ನಗತೊಡಗಿದ.

ಅಪ್ಪ, ಅಮ್ಮರ ನಡುವಿನ ಸರಳ ಸಂಭಾಷಣೆ ಕೇಳಿ ಇಬ್ಬರಿಗೂ ಮೋಜೆನಿಸಿತು. ಉಸಿರುಕಟ್ಟಿದ ವಾತಾವರಣದಲ್ಲಿ ನಿರೀಕ್ಷೆಗಿಂತ ಬೇರೆ ರೀತಿಯಲ್ಲಿ ಗಂಧಗಾಳಿ ಬೀಸಿದಂತೆನಿಸಿ, ಉಲ್ಲಾಸದ ಅನುಭವವಾಯಿತು.

'ಏನ್ರೆ ಅದು, ನಿಮ್ಮಪ್ಪ ಅಷ್ಟೊಂದು ಖುಷಿಯಲ್ಲಿದ್ದಾರೆ ಏನಾಯ್ತು? ಬೇಗ ಹೇಳಿ ಒಳಗೆ ಮಾಡೋ ಕೆಲಸ ಬೇಕದಷ್ಟಿದೆ......ಎಂದು ಆತುರಪಡಿಸಿದಳು. ಶಾಂತ, ಪರಿಮಳ ಸುಮ್ಮನೆ ಇದ್ದರು. ಚಂದ್ರಣ್ಣನೇ ಹೇಳಿದ–ನೋಡು ನಿನ್ನ ಈ ಇಬ್ಬರು ಹೆಣ್ಣು ಮಕ್ಕಳೂ ಮದುವೆಯಾಗುವುದಿಲ್ಲವಂತೆ. ನಮಗೋಸ್ಕರ ಬ್ರಹ್ಮಚಾರಿಗಳಂತೆ.... ಇರ್ತಾರಂತೆ ಎಂದು.

ಹೌದೇನೆ? ನೀವು ಮದುವೆಯಾಗೊಲ್ಲ ಅನ್ನುವುದಕ್ಕೆ ನಿಮಗೇನಾಯ್ತು?

'ನಮ್ಮ ಕಷ್ಟಾನ ನೋಡಿ, ಹಾಗೆ ನಿರ್ಧಾರ ಮಾಡಿದ್ದಾರಂತೆ.'

'ಭಾಳ ಚೆನ್ನಾಯ್ತು. ನೋಡಿದವ್ರು ಏನಂದ್ಕೋಬೇಕು.'

'ಅಂದ್ಕೋಳ್ಳೋದು ಏನ್ಬಂತಮ್ಮ? ಅಣ್ಣ ನೋಡಿದರೆ ಹಾಗಿದ್ದಾನೆ. ನಮ್ಮ ವಿಚಾರವೇ ಅವನಿಗೆ ಬೇಕಿಲ್ಲ ಅನ್ನುವ ಹಾಗೆ ವರ್ತಿಸ್ತಾನೆ. ನಿಮ್ಮಿಬ್ಬರನ್ನು ನೋಡ್ಕೊಳ್ಳೋವ್ರು ಯಾರಿರ್ತಾರೆ ಹೇಳಮ್ಮ? –ವ್ಯಥೆಯಿಂದಲೇ ಶಾಂತ ಹೇಳಿದಳು.

'ನಿಮ್ಮ ಮದುವೆಯಾದ್ರೆ, ನಮ್ಮ ಕಷ್ಟಕ್ಕೆ ಆಗ್ಬಾರ್ದೂಂತ ಏನಾದ್ರೂ ನಿಯಮ ಇದೆಯೋ?....ಸದ್ಯ ನಿಮ್ಮಿಬ್ಬರ ಮದುವೆ ಒಂದು ನಡೆದು ಬಿಟ್ಟರೆ ನಮ್ಮ ಅರ್ಧ ದುಃಖ, ಕಷ್ಟ ಕಳೆಯುತ್ತೆ' – ಎಂದಳು ನಿಟ್ಟುಸಿರು ಬಿಡುತ್ತಾ.

'ಅಷ್ಟೊಂದು ಹಿಂಸೆಯಾಗಿದ್ದೇವೇನಮ್ಮ ನಿಮಗೆ?' ಎಂದಳು ಪರಿಮಳ.

'ಅದೆಲ್ಲ ನಿಮಗೆ ಅರ್ಥವಾಗೋಲ್ಲ. ಹೆತ್ತಮಕ್ಕಳಿಗೆ ಯಾವ ತಂದೆ ತಾಯಿಯಾದರೂ ಮಾಡಬೇಕಾದ ಕರ್ತವ್ಯ. ಅದನ್ನು ಹೊರೆ ಅಂದುಕೊಂಡರೆ ಹೇಗೆ? ನೀವು ನಮಗೆ ಹಿಂಸೆಯಾಗಿದ್ದೀರೀಂತ ಎಂದೂ ಭಾವಿಸೊಲ್ಲ ಕರ್ತವ್ಯ ಅರ್ಧದಲ್ಲಿ ಉಳಿದು, ಬಿಟ್ಟರೆ ಹೇಗೆ ಅನ್ನೋ ಯೋಚನೆ ಹೊರತಾಗಿ ಬೇರೇನೂ ಅಲ್ಲ.' – ಎಂದಳು ತಿಳಿಸಿ ಹೇಳುವ ಹಾಗೆ.

ಬಂದ ಗಳಿಗೆ, ಯಾಕೋ ಸರಿಯಿಲ್ಲವೆನಿಸಿತು. ತಾವು ಗಂಭೀರವಾಗಿ ಹೇಳಿದ್ದು ಇವರಿಗೆ ತಮಾಷೆಯಾಗಿದೆಯಲ್ಲ:– ಎಂದು ನೊಂದುಕೊಂಡರು.

ಏನಪ್ಪ, ನಾವಿಷ್ಟು ಹೇಳಿದ್ದು ನಿಮಗೆ ಅಷ್ಟೊಂದು ಹಗುರವಾಯಿತೇ? ನೋಡಿ, ಶಾಂತಕ್ಕ ಎಷ್ಟು ನೊಂದುಕೊಂಡು ಹೋದಳು? – ಎಂದು ತೀಕ್ಷ್ಣವಾಗಿ ನುಡಿದಳು.

ವಾಸ್ತವವಾಗಿ ಚಂದ್ರಣ್ಣನಿಗೆ ಹೆಣ್ಣುಮಕ್ಕಳ ಈ ವರ್ತನೆಯಿಂದ ಹೃದಯ ತುಂಬಿಬಂತು. ಮಕ್ಕಳಾಗಿ ಹುಟ್ಟಿದ್ದು ಸಾರ್ಥಕವಾಯಿತು. ತಂದೆ ತಾಯಿಗಳ ನೋವನ್ನು ಇಷ್ಟಾಗಿ ಹಚ್ಚಿಕೊಂಡು ಅಳುತ್ತಿದ್ದಾರಲ್ಲ! ಪಾಪ–ಎಂದುಕೊಂಡಿತು ಮನಸ್ಸು.

'ಅಮ್ಮ, ಅಮ್ಮ, ಜಾನಕತ್ತೆಯಿಂದ ಪತ್ರ ಬಂದಿದೆ – ಎಂದು ಪರಿಮಳ ಓಡಿ ಬಂದಳು. ಪಾರ್ವತಿಗೆ ಆಶ್ಚರ್ಯವಾಯಿತು. ತುಂಬಾ ದಿವಸಗಳಿಂದ ಜಾನಕಿಯಿಂದ

ಪತ್ರವೇ ಬಂದಿರಲಿಲ್ಲ. ಈಗ ಇದ್ದಕ್ಕಿದ್ದಂತೆ ತಮ್ಮ ನೆನಪು ಬಂದು ಪತ್ರ ಬರೆಯಬೇಕಾದರೆ ವಿಶೇಷವೇನಾದರೂ ಇರಬೇಕು – ಎಂದುಕೊಂಡು ಪರಿಮಳಳಿಂದ ಪತ್ರವನ್ನು ತೆಗೆದುಕೊಂಡು ಓದಿದಳು. ಓದುತ್ತಿದ್ದಂತೆ ಪಾರ್ವತಿಯ ಮುಖದಲ್ಲಿ ಸಂತೋಷ ಕಂಡುಬಂತು. ಪರಿಮಳ ಸುಮ್ಮನಿರಲಾರದೆ ಕೇಳಿದಳು.

'ಏನಮ್ಮ ಬರೆದಿದ್ದಾಳೆ ಅತ್ತೆ? ನಿನಗೆ ಸಂತೋಷ ಆಗುವಂಥಾದ್ದು?

'ಹೂಂ! ಬರೆದಿದ್ದಾಳೆ ನನ್ನ ಸೊಸೇದೀರು ಹೇಗಿದ್ದಾರೆ? ಅವರನ್ನು ನೋಡಬೇಕಂತ ಮನಸ್ಸಾಗ್ತಾ ಇದೆ. ಅವರಿಬ್ಬರನ್ನು ಒಂದು ವಾರದ ಮಟ್ಟಿಗಾದರೂ ಕಳಿಸಿಕೊಡು. ಪಾಪ! ಆ ಮಕ್ಕಳು ಎಲ್ಲಿತಾನೇ ಹೋಗ್ತಾರೆ? ಅಲ್ಲದೆ ನನ್ನ ಹಿರಿಯ ಮಗ ಪ್ರಕಾಶ ವಿದೇಶದಿಂದ ಬರಲಿದ್ದಾನೆ. ಚಿಕ್ಕವನೂ ರಜೇಂತ ಮನೆಗೆ ಬರ್‍ತಿದ್ದಾನೆ. ಹೆಣ್ಣು ಮಕ್ಕಳು, ತಮ್ಮ ಮಕ್ಕಳೊಂದಿಗೆ ಬರ್‍ತಿದ್ದಾರೆ. ಎಲ್ಲರೂ ಒಟ್ಟಿಗೆ ಒಂದೆರಡು ದಿನ ಕಳೆದ ಹಾಗಾಗುತ್ತೆ ಈ ಮಾತನ್ನು ನನ್ನ ತಮ್ಮನಿಗೆ ಹೇಳುವುದು, ಸಾಧ್ಯವಾಗುವುದಾದರೆ ನೀವು ಬಂದು ಹೋಗಿ' – ಎಂದು ಬರೆದಿದ್ದಾಳೆ. ಅದಕ್ಕೇ ನಗು ಬಂದದ್ದು.

'ಅತ್ತೆ ನಮ್ಮ ವಿಚಾರ ಮಾತ್ರ ಬರೆದಿದ್ದಾಳೆ. ಅಣ್ಣನ ಬಗ್ಗೆ ಏನೂ ಬರೆದೇ ಇಲ್ಲ? – ಎಂದು ಪ್ರಶ್ನಿಸಿದಳು. ಎಲ್ಲರ ವಿಚಾರಾನೂ ಬರೆದಿದ್ದಾಳೆ. ಅಷ್ಟೊಂದು ಆತುರಪಟ್ಟರೆ ಹೇಗೆ? ಇನ್ನೂ ಪುಟಗಳಿವೆಯಲ್ಲ. ಯಾರನ್ನು ಮರೆತರೂ ಶಂಕರನನ್ನು ಜಾನಕಿ ಅತ್ತಿಗೆ ಮರೆಯುವುದಿಲ್ಲ. ಅವನ ಹೆರಿಗೆಗೆ ಅವಳೇ ಬಂದಿದ್ದದ್ದು. ಎತ್ತಿ ಸಾಕಿಕ ಕೈ. ಮರೆಯುತ್ತಾಳೆ ಹೇಗೆ?

'ಏನ್ಬರೆದಿದ್ದಾಳೆ ಹೇಳಮ್ಮ' – ಎಂದು ಕೇಳಿದಳು. ಕುತೂಹಲದಿಂದ.

'ಏನ್ಬರೀತಾಳೆ ಶಂಕರನಲ್ಲಿ ಈಗಲೇನಾದರೂ ಬದಲಾವಣೆ ಆಗಿದೆಯೇ? ಇಲ್ಲ ಮೊದಲಿನ ಹಾಗೇ ಇದ್ದಾನೆಯೇ? ಒಮ್ಮೆ ನೀವು ಆಸ್ಪತ್ರೆಯಲ್ಲಿ ತೋರಿಸುವುದು ಉತ್ತಮ. ನಿಮಗಾಗದಿದ್ದರೆ, ಹೇಗಾದರೂ ಅವನ ಮನವೊಲಿಸಿ ನಮ್ಮೂರಿಗೆ ಕಳಿಸಿಕೊಡು. ಪ್ರಕಾಶನ ಗೆಳೆಯರು, ಡಾಕ್ಟರುಗಳು ಇದ್ದಾರೆ. ತೋರಿಸಿಕೊಂಡು ಬಂದಾನು. ಅವನ ವಿಚಾರದಲ್ಲಿ ಹೆಚ್ಚು ಶ್ರದ್ಧೆ ವಹಿಸಿ' ಅಂತ ಬರೆದಿದ್ದಾರೆ.

'ಪಾಪ! ಅತ್ತೆಯ ಮನಸ್ಸಿಗೂ ನೋವಾಗಿರಬೇಕಲ್ವ?'

'ಯಾರು ನೊಂದುಕೊಂಡು ಏನ್ಮಾಡ್ತಾರೆ ಹೇಳು? ಒಂದು ರೀತಿಯಲ್ಲಿ ಶಂಕರ ಅಂಥ ಕೆಟ್ಟವನೇನೂ ಅಲ್ವಲ್ಲ. ನಮ್ಮನ್ನು ಹಚ್ಚಿಕೊಂಡಿಲ್ಲ. ಮನೆಯ ಜವಾಬ್ದಾರಿ ತಗೊಂಡಿಲ್ಲ. ಅನ್ನೋದು ಬಿಟ್ರೆ, ಯಾರ ತಂಟೆಗೂ ಬರದೆ ಅವನ ಪಾಡಿಗೆ ಅವನಿದ್ದಾನಲ್ಲ. ಅಲ್ದೆ ನಮ್ಮ ಕಣ್ಣೆದುರಿಗೇ ಇದ್ದಾನೆ. ನಿಮ್ಮ ಸೋದರ ಮಾವನಂತೆ ಅಪ್ಪ, ಅಮ್ಮನನ್ನು ಕಣ್ಣೀರ ಕೂಪಕ್ಕೆ ತಳ್ಳಿ ಮನೆಬಿಟ್ಟು ಓಡಿ ಹೋಗಲಿಲ್ಲವಲ್ಲ?

'ಹೌದೇನಮ್ಮ, ಸೋದರಮಾವ ಒಬ್ಬ ಇದ್ದನಾ ನಮಗೆ?'

'ಇದ್ದ. ಈಗ ಅಂದ್ಕೊಂಡು ಉಪಯೋಗವೇನು?

'ಈಗಿಲ್ವ?

'ಇದ್ದಾನೋ ಸತ್ತಿದ್ದಾನೊ ಯಾರಿಗ್ಗೊತ್ತು'-ಬೇಸರದಿಂದ ಹೇಳಿದಳು. ಪರಿಮಳಳಿಗೆ. ತಾಯಿಗೆ ಇನ್ನು ಪ್ರಶ್ನೆ ಕೇಳಿದರೆ ಬೇಸರವಾಗುತ್ತೆಂದು ಸುಮ್ಮನಾದಳು. ಪಾರ್ವತಿಯೇ ಹೇಳಿದಳು-ಹೋಗು ಪರೀ ನಿಮ್ಮಪ್ಪ ಬರುವ ಹೊತ್ತಾಯಿತು. ಬೇಗ ಬರ್ತೀನೀಂತ ಹೇಳಿ ಹೋಗಿದ್ರು. ಬರುವಷ್ಟು ಹೊತ್ತಿಗೆ ಊಟಕ್ಕೆ ಸಿದ್ಧಮಾಡಿಲ್ಲವೆಂದರೆ ಸಿಟ್ಟಾಗ್ತಾರೆ. ಹೋಗಿ ಎಲ್ಲ ಆಗಿವೆಯಾ ನೋಡು. ಇಲ್ಲಾಂದ್ರೆ, ನಿಮ್ಮ ಅಕ್ಕನಿಗೆ ಸ್ವಲ್ಪ ಸಹಾಯಮಾಡು. ಎಂದಳು. ಪರಿಮಳ ತಾಯಿಯ ಮಾತಿಗೆ 'ಹೂಂ' ಗುಟ್ಟಿ ಮನಸ್ಸಿಲ್ಲದ ಮನಸ್ಸಿನಿಂದ ಹೋದಳು.

ಪರಿಮಳಳಿಗೆ ಕೆಲಸ ಮಾಡುವುದೆಂದರೆ ಸ್ವಲ್ಪ ಮೈಭಾರ. ಅವಳಿಗೆ ಚೆಲ್ಲು ಚೆಲ್ಲಾಗಿ ಆಡುತ್ತಾ, ಮೇಲೆ ಮೇಲೆ ಸುತ್ತಾಡಿಕೊಂಡು ಕೆಲಸ ಮಾಡುವುದೆಂದರೆ ಖುಷಿ. ನೀಟಾಗಿ ಡ್ರೆಸ್ ಮಾಡಿಕೊಂಡು, ಹೊರಗೆಲ್ಲಾದರೂ ಸುತ್ತಾಡಿಕೊಂಡು ಬರುವುದೆಂದರೆ ಪ್ರಾಣ. ಹಳ್ಳಿಯಲ್ಲಿದ್ದರೂ, ಫ್ಯಾಷನ್ ಬಗ್ಗೆ ಪ್ರೇಮ. ಒಂದೆರಡು ಬಾರಿ ಹಟಮಾಡಿ ಚಂದ್ರಣ್ಣನ ಜೊತೆಗೆ ಬೆಂಗಳೂರಿಗೆ ಹೋಗಿ ಬಂದಿದ್ದಳು. ನಗರದ ಹುಡುಗಿಯರ ಫ್ಯಾಷನ್‌ನನ್ನು ಬೆರಗಿನಿಂದ ನೋಡಿ ಮೆಚ್ಚಿದ್ದಳು. ಅಂದಿನಿಂದಲೂ ಅವಳಿಗೆ ಆ ರೀತಿ ತಾನೂ ಇರಬೇಕೆಂದುಕೊಳ್ಳುತ್ತಿದ್ದಳು. ಆದರೆ ಆ ಹಳ್ಳಿ ಕೊಂಪೆಯಲ್ಲಿ ಯವುದಕ್ಕೂ ಅವಕಾಶವಿರಲಿಲ್ಲ. ಎರಡು ಜಡೆ ಹಾಕಿ, ಕಣ್ಣಿಗೆ ಕಾಡಿಗೆ, ಕಣ್ಣಸೋಗೆ ತಿದ್ದಿಕೊಂಡರೆ 'ಸೂಳೇರಂಗೆ ಅಲಂಕಾರ ಮಾಡ್ಕಂಡವ್ಳೆ' ಅಂದುಕೊಳ್ಳುತ್ತಿದ್ದರು. ಹಲ್ಲು ಕಚ್ಚಿಕೊಂಡು ತನ್ನಲ್ಲಿ ಆಸೆಗಳನ್ನು ಅದುಮಿಟ್ಟುಕೊಂಡಿದ್ದಳು.

ಕೆಲಸ ಬಿಟ್ಟು, ಮಾತಾಡುವುದೆಂದರೆ ಮಹಾಪ್ರೀತಿ, ಚಿಕ್ಕಂದಿನಿಂದಲೂ ಅಷ್ಟೇ. ಅದಕ್ಕೆ 'ಮಾತಿನ ಮಲ್ಲಿ' ಅನ್ನುವುದು ಅವಳ ಅಡ್ಡ ಹೆಸರಾಗಿತ್ತು.

ತಾಯಿ ಕೆಲಸ ಹಚ್ಚಿದಳಲ್ಲ-ಅಂತ ಅಸಮಾಧಾನವಿದ್ದರೂ, ತಾಯಿ ಸಿಟ್ಟಾದಾರೆಂಬ ಭೀತಿಯಿಂದ ಹೊರಟಳು.

ಪರಿಮಳಳನ್ನು ಕಳಿಸಿದ ಪಾರ್ವತಿ ಮತ್ತೊಮ್ಮೆ ಪತ್ರ ಓದಿದಳು. ಜಾನಕಿ ಅದರಲ್ಲಿ ಈ ಹೆಣ್ಣು ಮಕ್ಕಳ ಮದುವೆ ವಿಚಾರ ಪ್ರಸ್ತಾಪ ಮಾಡಿದ್ದಳು. ತಮ್ಮೂರಲ್ಲಿ ಒಂದೆರಡು ಸಂಬಂಧ ಇದೆ. ಅವರಿಬ್ಬರನ್ನು ಕಳಿಸಿ ಕೊಟ್ಟರೆ, ಅಲ್ಲೇ ವಧು ಪರೀಕ್ಷೆ ನಡೆಸುವುದಾಗಿ ಹೇಳಿ ಬರೆದಿದ್ದಳು. ಅದನ್ನು ಮಾತ್ರ ಪರಿಮಳಳ ಮುಂದೆ ಓದಲಿಲ್ಲ. ಹರಕು ಬಾಯಿಯ ಪರಿಮಳಳಿಂದ ಒಂದೂ ಮುಚ್ಚಿಡಲು ಆಗುತ್ತಿರಲಿಲ್ಲ. ಅದಕ್ಕೇ ಇದನ್ನು ಬಿಟ್ಟು ಉಳಿದದ್ದನ್ನು ಓದಿದಳು.

ಗಂಡ ಬಂದರೆ ಈ ವಿಚಾರವನ್ನು ತಿಳಿಸಬೇಕೆಂದುಕೊಂಡಳು. ಅಷ್ಟರಲ್ಲಿ ಪುಟ್ಟನಿಗೆ ದನಗಳಿಗೆ ಹಿಂಡಿ ಕಲಸಿ ಇಡಲು ಹೇಳಿದ್ದುದರ ನೆನಪಾಯಿತು. ಏನು ಮಾಡಿದ್ದಾನೋ ಏನೋ ಎಂದು ನೋಡಲು ಹೋದಳು.

ಪುಟ್ಟ ಈಗ ಯುವಕನಾಗಿದ್ದ. ಆಗತಾನೇ ಮೂಡಿದ ಮೀಸೆ ಆಕರ್ಷಕವಾದ ಮುಖ. ಮೈಕಟ್ಟು ಬಣ್ಣ ಕಪ್ಪಾದರೂ ತುಂಬಾ ಸುಂದರನಂತೆ ಕಾಣುತ್ತಿದ್ದ. ಚಿಕ್ಕಿಯದೇ ಆದ ಚಂಚಲ ಕಣ್ಣುಗಳು! ಕಷ್ಟಪಟ್ಟು ದುಡಿಯುತ್ತಿದ್ದ ಸ್ವಲ್ಪ ಭೂಮಿಯನ್ನು ದುಡಿಮೆಯ ಹಣದಿಂದ ಸ್ವಂತವಾಗಿ ಮಾಡಿಕೊಂಡು ವ್ಯವಸಾಯವನ್ನೇ ಮಾಡುತ್ತಿದ್ದ. ಬಿಡುವಿನ ವೇಳೆಯಲ್ಲಿ ಈ ಮನೆಯ ಸಣ್ಣಪುಟ್ಟ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದ. ರಂಗಿಯೂ ಮಕ್ಕಳನ್ನು ಚೆನ್ನಾಗಿಯೇ ನೋಡಿಕೊಂಡಿದ್ದಳು. ವಯಸಾಗಿರೋ ಅಪ್ಪನಿಗೆ, ಚಿಕ್ಕ ವಯಸ್ಸಿನ ಹೆಂಡತಿ! ಪುಟ್ಟ ಚಿಕ್ಕಮ್ಮನ ಬಗ್ಗೆ ತುಂಬಾ ಕಾಳಜಿ ವಹಿಸುತ್ತಿದ್ದ.

ಪಾರ್ವತಿ ಹೋಗಿ ನೋಡುವಷ್ಟರಲ್ಲಿ ಪುಟ್ಟ ಹಸುಗಳಿಗೆ ಕಲಗಚ್ಚನ್ನು ಕುಡಿಸಿ, ಅವುಗಳ ಮೈ ತೊಳೆದು, ಮತ್ತೆ ಅವುಗಳ ಜಾಗದಲ್ಲಿ ಅವುಗಳನ್ನು ಕಟ್ಟಿ ಹಾಕುತ್ತಿದ್ದ.

ಪಾರ್ವತಿ ಬಂದವಳೇ 'ಆಯ್ತಾ ಪುಟ್ಟ, ಮೇವು ಹಾಕಿದ್ದು?–ಎಂದು ಕೇಳಿದಳು.

'ಆಯ್ತರವ್ವ, ಎಲ್ಲಾ ಮುಗಿಸಿ ಅವುಗಳನ್ನು ಕಟ್ಟಿ ಹಾಕಿದ್ದೇನೆ. ಇನ್ನೇನಾದರೂ ಕೆಲಸವಿದೆಯಾ'? ಎಂದು ಕೇಳಿದ.

'ಇಲ್ಲ ಈಗೇನೂ ಕೆಲಸ ಉಳಿದಿಲ್ಲ. ನಾಳೆ ನಿನಗೆ ಬಿಡುವಾದಾಗ ಬಂದು, ಅಲ್ಲಿ ಬಿದ್ದಿರೋ ಒಣ ಹುಲ್ಲನ್ನೆಲ್ಲಾ ಬಿಸಿಲು ಮಚ್ಚಿನ ಮೇಲೆ ಹಾಕಿಡು' ಎಂದಳು.

'ಆಯ್ತು ಬರ್ತಿನಿ ಬಿಡ್ರವ್ವಾ...ನಾನೀಗ ಹೋಗಿ ಬರ್ಲೇ? ಅಪ್ಪಣೆ ಕೇಳಿದ.

'ಇರು ಪುಟ್ಟ ಉಂಡು ಹೋಗಿವೆಯಂತೆ'

'ಇಲ್ಲವ್ವ ಚಿಕ್ಕಮ್ಮ ನಂಗೋಸ್ಕರ ಕಾಯ್ತಿರ್ತಾಳೆ. ಊಟಕ್ಕೆ ಬಂದು ಬಿಡ್ತೀನಿ' ಅಂತ ಹೇಳಿ ಬಂದಿದ್ದೀನಿ – ಎಂದು ಹೋಗಲು ತಿರುಗಿದ.

'ಪುಟ್ಟ ಇನ್ನೊಂದ್ಮಾತು. ಶಂಕರ ಬೆಳಗೆದ್ದು ಹೋದವನು ಇನ್ನೂ ಬಂದೇ ಇಲ್ಲ. ಸ್ವಲ್ಪ ನೋಡ್ತೀಯಾ? ದಾರೀಲೆಲ್ಲಾದ್ರೂ ಕಂಡರೆ ಅಮ್ಮ ಕರೀತಾವ್ರೆ ಅಂತ ಹೇಳ್ತೀಯ?

'ಹೇಳ್ತೀನ್ರವ್ವ, ಇಲ್ದೆ ಇದ್ರೂ ಅವನು ಹೋಗೋ ಜಾಗಗಳೆಲ್ಲ ನಂಗೊತ್ತು. ಅಲ್ಲಿಗೇ ಹೋಗಿ ನೋಡಿ ಕಳಿಸಿಕೊಡ್ತೀನಿ' ಎಂದು ಹೇಳುತ್ತಾ ಹೊರಟ. ಪಾರ್ವತಿ ಬಾಗಿಲು ಮುಚ್ಚಿಕೊಂಡು ಒಳಗೆ ಬಂದಳು.

ಜಾನಕಿಯ ಪತ್ರ ನೋಡಿದಾಗಿನಿಂದ, ಪಾರ್ವತಿಯ ಮನಸ್ಸಿನಲ್ಲಿ ಆಸೆ ಮಿಂಚೊಂದು ಹೊತ್ತಿತ್ತು. ಜಾನಕಿಯವರು ಊರಿಗೇ ಭಾರಿ ಕುಳಗಳು ಅವರ

ಪರಿಚಯಗಳೆಲ್ಲಾ ದೊಡ್ಡ ದೊಡ್ಡವರೊಂದಿಗೇ! ಒಂದು ವೇಳೆ ಅವಳು ನೋಡುವ ಗಂಡುಗಳು ನಮ್ಮ ಮಕ್ಕಳನ್ನು ಒಪ್ಪಿ ಮದುವೆ ಕುದುರಿದರೆ ತುಂಬಾ ಚೆನ್ನಾಗಿರುತ್ತೆ' ಎಂದು ಆಲೋಚಿಸುತ್ತಿತ್ತು. ಭಾರಿ ಸಂಬಂಧ-ವೈಭವದ ಮದುವೆ ಇವುಗಳನ್ನು ಕುರಿತು ಆಲೋಚಿಸುತ್ತಾ ಮೈಮರೆತಿರುವಾಗ, ಬಾಗಿಲು ಬಡಿದ ಶಬ್ದವಾಯಿತು. ಗಕ್ಕನೆ, ದಿಗಿಲು ಬಿದ್ದಂತೆ ಎದ್ದಳು. 'ಚಂದ್ರಣ್ಣನೇ ಬಂದಿರಬೇಕೆಂದುಕೊಂಡು – ಎದ್ದು ಬಾಗಿಲು ತಟ್ಟಿದಂತಾಯಿತು. 'ಅಮ್ಮ' ಎಂದು ಕೂಗಿದ್ದು ಪಾರ್ವತಿಗೆ ಈಗ ಸ್ಪಷ್ಟವಾಗಿ ಕೇಳಿಸಿತು. 'ಯಾರು' ಶಂಕರನಿರಬಹುದೆ?....ಹೌದು ಅವನೇ ಇರಬೇಕು. ಇಲ್ಲವಾದರೆ ಇನ್ಯಾರು 'ಅಮ್ಮ' ಎಂದು ಕರೆಯುವವರು?...ಎಂದು ವಿಚಾರಿಸುತ್ತಲೇ ಬಾಗಿಲು ತೆರೆದಳು. ದಿಗ್ಭ್ರಾಂತಳಾದಳು. ಎಷ್ಟು ದಿವಸಗಳ ನಂತರ ಶಂಕರ ತನ್ನನ್ನು 'ಅಮ್ಮ' ಎಂದು ಕರೆಯುತ್ತಿರುವುದು! –ಕಣ್ಣು ಕಿವಿಗಳನ್ನೇ ನಂಬದಾದಳು.

ಚೆನ್ನಾಗಿ ಬಿಸಿಲಲ್ಲಿ ಸುತ್ತಾಡಿ ಬಂದಿರಬೇಕು. ಮುಖ ಕೆಂಪಗಾಗಿತ್ತು. ಬೆವರು ಸುರಿಯುತ್ತಿತ್ತು. ಕರುಳು ಚುರುಗುಟ್ಟಿತು. ಎಲ್ಲಿ ಹೋಗಿದ್ದೆ ಶಂಕರ ಈ ಬಿಸಿಲಲ್ಲಿ! ಬೆಳಿಗ್ಗೆ ಹೋದವನು, ಈಗ ಬರ್ತಿದ್ದೀಯಲ್ಲ' ನಿನಗೆ ತಿಂಡಿ, ಊಟದ ಚಿಂತೆ ಇಲ್ಲ? – ಎಂದು ಕೇಳಿದಳು.

ಪಾರ್ವತಿಯ ಪ್ರಶ್ನೆಗಳನ್ನು ಕೇಳುತ್ತಿದ್ದ ಶಂಕರ ಒಂದು ಸಲ ಕಣ್ಣೆತ್ತಿ ನೋಡಿದ. ಪಾರ್ವತಿಯ ಕಣ್ಣುಗಳಲ್ಲಿ ಸಂತೋಷ, ವಾತ್ಸಲ್ಯಗಳು ತುಂಬಿದ್ದವು. ನೀರೂರಿದ ಕಣ್ಣುಗಳಲ್ಲಿ ಅವ್ಯಕ್ತವಾದ ನೋವಿನ ಛಾಯೆಯೂ ಇದ್ದಂತೆನಿಸಿತು. ಶಂಕರನೆಂದೂ ತಾಯಿಯನ್ನು ದಿಟ್ಟಿಸಿ ನೋಡಿರಲಿಲ್ಲ. ಇಷ್ಟು ದಿವಸ ಅವನಿಗನಿಸದಿದ್ದ ಭಾವನೆಗಳು ಮೆಲ್ಲಗೆ ಶಂಕರನ ಹೃದಯವನ್ನು ತುಂಬಿದವು. ಹಿಂದೆಂದೂ ಕಾಣದ ಅನುಭವ ಅವನಿಗಾದಂತಾಯಿತು.

ಮನಸ್ಸಿನಲ್ಲಿ ಹೇಗೆ ಹೇಗೋ ಅನಿಸಿತು. ಇಷ್ಟು ದಿವಸ ತಾನು ವಿಹ್ವಲನಾಗಿ, ವಿಕ್ಷುಬ್ಧನಾಗಿ ಇದ್ದುದೇಕೆ ಎಂದುಕೊಂಡ. ತಾಯಿ ಅದೇನೋ ಒಂದು ದಿವ್ಯ ಶಕ್ತಿ ಅನಿಸಿತು. ಅಲ್ಲಿ ಆ – ಬಯಲಲ್ಲಿ-ಆ ಪಾಳುಗಡಿಯಲ್ಲಿ-ಅರಸಿ....ಅರಸಿ....ಕಂಡು ಆದ ಅನುಭವವೇ ಈಗ ಇವಳನ್ನು ಕಂಡಾಗ ತನಗಾಗುತ್ತಿರುವಂತೆ ಭಾಸವಾಯಿತು. ತಲೆ ಸುತ್ತಿದಂತಾಯಿತು. ಅಸ್ಪಷ್ಟವಾದ ಧ್ವನಿಗಳು ಒಮ್ಮೆಲೇ ತನ್ನ ತಲೆಯಲ್ಲಿ ತುಂಬಿದಂತಾಯಿತು. ಆ ಧ್ವನಿಗಳು.....ಕರ್ಕಶವಾಗಿವೆ.....ಶೂಲಗಳು ಇರಿದಂತಾಗುತ್ತಿದೆ.... ಶಂಕರನಿಗೆ ತಡೆಯಲಾಗಲಿಲ್ಲ. ಗಟ್ಟಿಯಾಗಿ ತಲೆ ಹಿಡಿದುಕೊಂಡು... 'ಅಮ್ಮ' 'ಅಮ್ಮ' ಎಂದು ಪಾರ್ವತಿಯ ಮೇಲೆ ವಾಲಿದ.

ಪಾರ್ವತಿಗೆ ಗಾಭರಿಯಾಯಿತು. ಪರೀ....ಶಾಂತ....ಎಂದು ಕೂಗಿದಳು. ಶಾಂತ ಓಡಿ ಬಂದಳು. 'ಬೇಗ ನೀರು ತೆಗೆದುಕೊಂಡು ಬಾರೆ' ಎಂದು ಪಾರ್ವತಿ ಆತುರಪಡಿಸಿದಳು. ಪರಿಸ್ಥಿತಿ ಅರ್ಥವಾಯಿತು. ಅಣ್ಣನಿಗೆ ಏನೋ ಆಗಿದೆ, ಎಂದಷ್ಟು

ತಿಳಿದುಕೊಂಡು ಓಡಿ ಹೋಗಿ ನೀರು ತಂದಳು. ಪಾರ್ವತಿ, ಶಾಂತ ಇಬ್ಬರೂ ಸೇರಿ ಮೆಲ್ಲಗೆ ಶಂಕರನನ್ನು ನೆಲದ ಮೇಲೆ ಮಲಗಿಸಿದರು. ಶಾಂತ ಗಾಳಿ ಹಾಕಿದಳು. ಪಾರ್ವತಿ ನಡುಗು ಕೈಗಳಿಂದ ಶಂಕರನ ಮುಖದ ಮೇಲೆ ನೀರು ಚಿಮುಕಿಸಿದಳು. ಶಂಕರ ಸ್ವಲ್ಪ ಹೊತ್ತಿನ ಮೇಲೆ ಕಣ್ಬಿಟ್ಟು ಸುತ್ತಲೂ ಕಣ್ಣಾಡಿಸಿದ. ಪಾರ್ವತಿ ಗದ್ಗದ ಕಂಠದಿಂದ ಕೇಳಿದಳು. ಏನಾಯ್ತು ಶಂಕರ?

'ಏನೂ ಆಗಿಲ್ಲಮ್ಮ ಯಾಕೋ ಕಣ್ಣು ಸುತ್ತಿ ಬಂತು ಅಷ್ಟೇ'–ಎಂದ.

'ಬೆಳಗಿನಿಂದ ಹೊಟ್ಟೆಗೇನೂ ಇಲ್ಲದೆ ಇದ್ರೆ ಹೇಗೆ ಹೇಳು?....ನಾವು ಹೇಳಿದ ಮಾತು ಕೇಳಿದರೆ ತಾನೇ?....ಶಾಂತ ಹೋಗಿ ಅಣ್ಣನಿಗೆ ಊಟಕ್ಕೆ ರೆಡಿ ಮಾಡು. ಬರ್ತಾನೆ – ಎಂದಳು.

ಶಾಂತ ತಾಯಿಯ ಮಾತಿಗೆ ವಿಧೇಯಳಂತೆ ಹೋದಳು. ಪಾರ್ವತಿ ಶಂಕರ ಏಳಲು ಆಸರೆ ಕೊಟ್ಟರು.

ಶಾಂತ ಅಣ್ಣನಿಗೆ ತಟ್ಟೆ ಹಾಕಿ ಕಾದಿದ್ದಳು. ಪಾರ್ವತಿ ಮಗನೊಂದಿಗೇ ಬಂದು ಕುಳಿತಳು. 'ಕೂಡು ಶಂಕರ–ಎಂದು ಹೇಳಲು ತಲೆ ಬಗ್ಗಿಸಿಕೊಂಡು ಕುಳಿತ ಶಂಕರ. ಶಾಂತ ಒಂದೊಂದೇ ಆಗಿ ಅನ್ನ, ಹುಳಿ, ಪಲ್ಯ ಮೊದಲಾದವುಗಳನ್ನು ಬಡಿಸಿದಳು. ಶಂಕರ ಉಣ್ಣುತ್ತಿದ್ದರೆ ತಾಯಿಯ ಮನಸ್ಸು ಹಿಗ್ಗಿತು. ಶಾಂತ ಪ್ರೀತಿಯಿಂದ ಅಣ್ಣನಿಗೆ ಮತ್ತೆ ಮತ್ತೆ ಒತ್ತಾಯ ಮಾಡಿ ಬಡಿಸುತ್ತಿದ್ದಳು.

'ಅಣ್ಣ, ಈ ಪಲ್ಯ ಇನ್ನೂ ಸ್ವಲ್ಪ ಹಾಕ್ಕೊಳ್ಳಣ್ಣ. ತುಂಬಾ ಚೆನ್ನಾಗಿದೆ' ಎಂದಳು.

'ಬೇಡ, ಶಾಂತ, ಸಾಕು.' – ಎಂದು ಕೈ ಅಡ್ಡ ಮಾಡಿದ.

'ಅಣ್ಣ ಈ ಹುಳಿ ಚೆನ್ನಾಗಿದೆಯೇನಣ್ಣ?'

'ಹೂಂ! ತುಂಬಾ ಚೆನ್ನಗಿದೆ' – ಎಂದಷ್ಟೇ ಹೇಳಿದ.

ಬೇಡ ಬೇಡವೆಂದರೂ ಹೊಟ್ಟೆ ಬಿರಿಯುವಷ್ಟು ಬಡಿಸಿ ಉಣಿಸಿದಳು ಶಾಂತ.

ಊಟ ಮಾಡಿ ಅಲ್ಲಿಯೇ ತಟ್ಟೆಯಲ್ಲಿ ಕೈತೊಳೆದು ಎದ್ದ. ಪಾರ್ವತಿಗೆ ಎದೆಯ ಮೇಲಿನ ಭಾರ ಇಳಿದಂತಾಯಿತು. ಆದರೆ ಅವಳ ಮನಸ್ಸಿನಲ್ಲಿ ಶಂಕರ ತಾನಾಗಿ ಬಂದನೇ, ಇಲ್ಲವೇ ಪುಟ್ಟ ಕರೆದು ಹೇಳಿ ಕಳಿಸಿದ್ದಕ್ಕೆ ಬಂದನೇ – ಎಂಬುದು ಬಗೆಹರಿಯಲಿಲ್ಲ. ಪುಟ್ಟನ ಬಲವಂತಕ್ಕೆ ಅವನು ಬಂದದ್ದೇ ಆದರೆ, ಇದು ತುಂಬಾ ದಿನ ಉಳಿಯುವುದಿಲ್ಲ. ತಾನಾಗಿ, 'ಬುದ್ಧನಿಗಾದ ಜ್ಞಾನೋದಯದಿಂದ ಬಂದನೇ ಆದರೆ ನನ್ನ ಮಗನಲ್ಲಿ ಬದಲಾವಣೆಯಾಗಿದೆಯೆಂದುಕೊಳ್ಳಬಹುದು! ಆಕಸ್ಮಿಕ ಪರಿವರ್ತನೆ ಶಂಕರನಲ್ಲಿ ಏನಾದರೂ ಆಗಿರಬಹುದೇ ಎಂಬ ಸಂಶಯವಾಯಿತು. ಅವನ 'ಕರೆಯಲ್ಲಿ ಎಂದೂ ಇಲ್ಲದ ಆತ್ಮೀಯತೆ ಇತ್ತು. ಕೇವಲ ವ್ಯವಹಾರದಂತಿದ್ದ

ಅವನ ರೀತಿ, ಇಷ್ಟು ಆತ್ಮೀಯವಾಗಲು ಸಾಧ್ಯವೇ?....ಅಬ್ಬಬ್ಬ' ಅರ್ಥವಿಲ್ಲದ, ಅಸಂಬದ್ಧ ವಿಚಾರಗಳು ತಲೆಯಲ್ಲಿ ಸುಳಿದಾಡುತ್ತಿದೆ – ಎಂದುಕೊಂಡಳು ಪಾರ್ವತಿ.

ಅಸಮಾಧಾನ, ಅಸಂತೃಪ್ತಿಗಳಿಂದ ಕ್ಷುಬ್ಧವಾಗಿದ್ದ ಬದುಕಿನಲ್ಲಿ ಈ ಒಂದು ದಿನ ಪರ್ವವೆನಿಸಿತು. ಒಟ್ಟೊಟ್ಟಿಗೆ ಎರಡು ಸಂತಸದ ಸುದ್ದಿಗಳು! ಗಟ್ಟಿ ಹೃದಯಗಳೇ ತಮಗಿರಬೇಕೆಂದುಕೊಂಡಳು ಪಾರ್ವತಿ. ಗಂಡನಿಗೆ ಈ ಸುದ್ದಿಗಳು ತಿಳಿದರೆ ಎಷ್ಟೊಂದು ಸಂತಸಪಡಬಹುದೆಂದು ಲೆಕ್ಕಾಚಾರ ಹಾಕಿದರು.

ಊಟ ಮಾಡಿ ಎದ್ದ ಶಂಕರ ಮನೆಯ ಮುಂದಿನ ಅಂಗಳದಲ್ಲಿ ಎರಡೂ ಕಡೆಗೆ ಮುಗಿಲೆತ್ತರಕ್ಕೆ ಬೆಳೆದ ತೆಂಗಿನ ಮರಗಳ ಕಡೆಗೆ ನಡೆದ. ಪರಿಮಳ ಬಿಸಿಲು ಮಚ್ಚಿನ ಮೇಲಿಂದಲೇ 'ಅಣ್ಣ' ಎಂದು ಕೂಗಿದಳು. ಶಂಕರ ತನ್ನನ್ನು ಕರೆಯುವವರು ಯಾರೆಂದು ಮೇಲು ಕೆಳಗೆಲ್ಲಾ ನೋಡಿದ. ತಾನು ಅಣ್ಣನಿಗೆ ಕಾಣದಿದ್ದುದನ್ನು ಕಂಡು ಮತ್ತೊಮ್ಮೆ 'ಅಣ್ಣ ಇಲ್ಲಿ ಮೇಲೆ' – ಎಂದಳು. ಶಂಕರ ತಲೆಯೆತ್ತಿ ನೋಡಿದ. ಪರಿಮಳ ನಿಂತು ನಗುತ್ತಿದ್ದಳು. 'ಏನಮ್ಮ ಕೂಗಿದ್ದು?' ವಿನಯದಿಂದ ಕೇಳಿದ. ತೋಟದ ಕಡೆಗೆ ಹೊರಟಿದ್ದೀಯಾ? – ಎನ್ನುವ ಪ್ರಶ್ನೆಗೆ 'ಇಲ್ಲ, ಅಪ್ಪನನ್ನು ಊಟಕ್ಕೆ ಕರೆ ತರಲು ಹೊರಟಿದ್ದೀನಿ – ಎಂದ. ಅಮ್ಮನಿಗೆ ಹೇಳಿದೆಯಾ? – ಎಂದು ಪ್ರಶ್ನಿಸಿದ್ದಕ್ಕೆ.

ಅಪ್ಪನನ್ನು ಊಟಕ್ಕೆ ಕರೆತರಲೂ ಅಮ್ಮನನ್ನು ಕೇಳಬೇಕಾ?...ಬೇಡ ಅಮ್ಮನಿಗೆ ತಿಳಿಸದೆ ಕರ್ಕೊಂಡು ಬರ್ತೀನಿ – ಎಂದು ಬಿರಬರನೆ ಹೆಜ್ಜೆ ಹಾಕಿ ಅಂಗಳ ದಾಟಿ, ರಸ್ತೆಗೆ ಬಂದಿದ್ದ. ಎದುರಿಗೆ ಸರಿಯಾಗಿ 'ಚಂದ್ರಣ್ಣ, ಮಲ್ಲಣ್ಣಗೌಡ' ಎದುರಿಗೆ ಬಂದರು. ಮೊದಲು ಶಂಕರನನ್ನು ನೋಡಿದ್ದು, ಮಲ್ಲಣಗೌಡ ಚಂದ್ರಣ್ಣನನ್ನು ತಿವಿದು,

'ನೋಡು, ಚಂದ್ರಪ್ಪ ಅಲ್ನೋಡು ಯಾರು ಬರ್ತಿರೋವ್ರು' ಎಂದು, ಹೇಳಿದ. ಕಣ್ಣಿಗೆ ಹೊಡೆಯುವ ಬಿಸಿಲಲ್ಲಿ ಯಾರೆಂಬುದು ಚಂದ್ರಣ್ಣನಿಗೆ ತಿಳಿಯಲಿಲ್ಲ. ಹಣೆಯ ಮೇಲೆ ನೆರಳಿನಂತೆ ಕೈ ಇಟ್ಟು ನೋಡಿದ. ಅವಾಕ್ಕಾಗಿ ನಿಂತುಬಿಟ್ಟ ಶಂಕರ!

"ನನ್ನ ಮಗ ಶಂಕರ ಅಲ್ವೇ?' ಎಂದ.

"ಯಾಕಪ್ಪಾ? ನಿನ್ನ ಮಗನ ಗುರುತು ನಿಗೆ ಸಿಗಲಿಲ್ಲವಾ?"

"ಗುರುತು ಸಿಗುತ್ತೆ. ಆದರೆ ಕೆಲವೊಮ್ಮೆ ಸಿಕ್ಕಿದ ಗುರುತೂ ನಮ್ಮನ್ನು ಮೋಸ ಮಾಡುತ್ತೆ."

'ಇತ್ಲಾಗೇ ಬರ್‍ತಾವ್ನೆ.'

'ಸರಿ ಎಲ್ಲೋ ಸಾಯೋಕೆ ಹೋಗುತ್ತೇಂತೆ ಕಾಣುತ್ತೆ.

'ಹಂಗೆಲ್ಲ ಅನ್ಬೇಡ ಚಂದ್ರಪ್ಪ ಕೆಟ್ಟ ಮಾತು ಮಕ್ಕಳ ಆಯಸ್ಸನ್ನು ಕಡಿಮೆ ಮಾಡುತ್ತೆ.

'ಅವರ ಆಯಸ್ಸು ಹೆಚ್ಚಾಗಿದ್ದು, ನಮ್ಮ ದುಃಖಾನೂ ಹೆಚ್ಚಾಗ್ಬೇಕೂಂತ ಹೇಳ್ತೀಯ?'

'ಇದೇನ್ಮಾತು ಬಿಡು. ಲಕ್ಷಣವಾಗಿ ಒಬ್ಬ ಮಗ ಇದಾನೆ. ಅವನ ವಿಚಾರವಾಗಿ ಇಷ್ಟು ಕಟುವಾದರೆ ಹೇಗೆ?'

'ಕಟುವಾಗದೆ ಇನ್ನೇನು ತಾನೇ ಮಾಡಲಿ ಹೇಳು ಮಲ್ಲಣ್ಣ. ಅಪರೂಪಕ್ಕೆ ಹುಟ್ಟಿದ ಮಗ ಅಂತ ಕಣ್ಣು ರೆಪ್ಪೆಯಂತೆ ಕಾಪಾಡಿದೆವು. ಆದರೆ ಅವನಿಗೇನು ದೆವ್ವ ಹಿಡಿದಿದೆಯೋ! ಮನೆಯೇ ಬೇಡವೆಂದು ಬೆಳಗಿಂದ ಅಲೀತಾನೆ. ಊಟವೂ ಬೇಡ ಏನೂ ಬೇಡ. ಇಷ್ಟವಾದರೆ ಮನೆ ಸೇರುತ್ತಾನೆ. ಇಲ್ದಿದ್ರೆ ರಾತ್ರಿ ಹೊತ್ತು ಮಾತ್ರವೇ ಬರ್ತ್ತಾನೆ....

'ನೀನು ಒಮ್ಮೆ ಒಳ್ಳೇ ಮಾತಿನಲ್ಲಿ ಬುದ್ಧಿ ಹೇಳು.'

'ಅವನ ಮುಖ ನೋಡುವುದಕ್ಕೆ ಇಷ್ಟವಿಲ್ಲ. ಅವನನ್ನು ನೋಡಿದಷ್ಟೂ ನನಗೆ ಹಿಂಸೆಯಾಗುತ್ತೆ.'

'ಒಬ್ಬರನ್ನು ಅಷ್ಟು ಬೇಗ ಅಳೆಯುವುದು ಬೇಡ. ಎಲ್ಲದಕ್ಕೂ ನಮ್ಮ ಕರ್ಮ ವಿಶೇಷ. ಅದೇ ನಮ್ಮನ್ನು ಜನ್ಮ ಜನ್ಮಕ್ಕೂ ಕಾಡುತ್ತದೆ. ಮಕ್ಕಳಾಗಿ ಕೆಲವು ಸಲ. ಅದೃಷ್ಟವಶಾತ್ ಅವರು ಮುಂದೆ ನಮ್ಮ ಪುಣ್ಯದಿಂದ ಒಳ್ಳೇಯವರಾದರೂ ಆಗಬಹುದು. ಅವರದೂ ತಪ್ಪಲ್ಲ. ವಿಧಿ ಅವರನ್ನು ಹಾಗೆ ಆಡಿಸುತ್ತೆ ಅಷ್ಟೇ ಎಂದು ವೇದಾಂತ ಹೇಳಿದ. ಮಲ್ಲಣ್ಣನ ವೇದಾಂತ ಕೇಳುವಷ್ಟು ಸಹನೆ ಚಂದ್ರಣ್ಣನಿಗೆ ಇರಲಿಲ್ಲ. ದೇವರು ಧರ್ಮ ಎಂದರೆ ನಂಬಿಕೇನೂ ಉಳಿಸಿಕೊಳ್ಳಲಿಲ್ಲ. ಮನಸ್ಸು ಹದಗೆಟ್ಟಿದ್ದರೂ ಮೇಲೆ ಮಾತ್ರ ಮಾಮೂಲಿನಂತೆ ಕಾಣಿಸಿಕೊಂಡ. ಪಾರ್ವತಿಯ ನರ ದೌರ್ಬಲ್ಯ ಅವನನ್ನು ಮತ್ತಷ್ಟು ಬಲವಂತದ ಸಹನೆ ತಂದುಕೊಳ್ಳುವಂತೆ ಮಾಡಿತ್ತು. ಇಬ್ಬರೂ ಮಾತುಮಾತಿಗೆ ಪ್ರಕ್ಷುಬ್ಧರಾದರೂ ಪರಿಸ್ಥಿತಿ ಭಯಂಕರವಾಗುತ್ತದೆ – ಎಂದೇ ಮನೆಯಲ್ಲಿ ಹೊರಗಿನವರ ಎದುರಿನಲ್ಲಿ ಪ್ರಶಾಂತವಾಗಿ ಕಾಣಿಸಿಕೊಳ್ಳುತ್ತಿದ್ದ.

ಶಂಕರ ತೀರಾ ಎದುರಿಗೇ ಬಂದರೂ ಮಾತನಾಡಿಸಬಾರದೆಂದುಕೊಂಡ. ಚಂದ್ರಣ್ಣ ಈ ವಿಚಾರದಲ್ಲಿ ಇರಬೇಕಾದರೇನೇ, ಶಂಕರ 'ಇಲ್ಲೇ ಸಿಕ್ಕಿದರಾ ಅಪ್ಪ ತುಂಬಾ ಒಳ್ಳೇದೇ ಆಯ್ತು. ಅಮ್ಮ, ಶಾಂತ, ಪರಿಮಳ ಎಲ್ಲಾ ನಿಮಗೋಸ್ಕರ ಕಾದಿದ್ದಾರೆ. ಊಟಕ್ಕೆ ಬೇಗ ಬರ್ತೀನೀಂತ ಹೇಳಿದ್ರಂತೆ. ಆದರೆ ಇಷ್ಟು ಹೊತ್ತಾದ್ರು ಬರಲಿಲ್ಲ. ಅದಕ್ಕೆ ನಾನೇ ಬಂದೆ' ಎಂದು ಒಂದೇ ಸಮನೆ ತಂದೆಯ ಪ್ರತಿಕ್ರಿಯೆಗಾಗಿ ಕಾಯದೆ ಹೇಳಿಬಿಟ್ಟ.

'ಚಂದ್ರಣ್ಣ ತನ್ನ ಕಿವಿಗಳನ್ನು ನಂಬದಾದ. ಪಕ್ಕದಲ್ಲಿದ್ದ ಮಲ್ಲಣ್ಣ, ಚಂದ್ರಣ್ಣನ ಮುಖ ನೋಡಿ ವಿಜಯದ ನಗೆನಕ್ಕ. ಚಂದ್ರಣ್ಣ ಅಪರಾಧಿಯಂತೆ ನಿಂತ. ಈ ಆಕಸ್ಮಿಕ ಸನ್ನಿವೇಶ ತನ್ನನ್ನು ಇಂತಹ ಫಜೀತಿಗೆ ತರುತ್ತದೆಂದು ಭಾವಿಸಿರಲಿಲ್ಲ.

ಮಗನ ವಿಚಾರವಾಗಿ ಹೇಳಿದ ನಿಜವಾದ ಮಾತು ತನ್ನನ್ನು ಈಗ ಸುಳ್ಳನನ್ನಾಗಿ ಮಾಡಿತು.

'ನೀನು ಮನೆಗೆ ಹೋಗಿದ್ದೆಯಾ?' ಚಂದ್ರಣ್ಣ ಕೇಳಿದ.

'ಹೌದು. ಹೋಗಿದ್ದೆ ಊಟ ಮಾಡಿ ಬಂದೆ. ನೀವು ಬರಲಿಲ್ಲ. ಅಂದುಕೊಂಡದ್ದು ಕೇಳಿ ನಾನೇ, ಅವರಿಗೆ ಹೇಳದೆ ಬಂದುಬಿಟ್ಟೆ' – ದೊಡ್ಡ ಕೆಲಸ ಮಾಡಿದವನಂತೆ ಮಾತಾಡಿದ.

'ನಾನು ನಿನಗೆ ತಂದೆ ಅನ್ನುವ ಗುರುತು ಇದೆಯಾ ಶಂಕರ?

'ಹುಂ! ಇದೆ. ಎಲ್ಲರ ಗುರುತೂ ಇದೆ. ಅದಕ್ಕೆ ಇನ್ನೂ ಬಂಧುತ್ವದ ಸೆಳೆತದಿಂದ ಬಿಡಿಸಿಕೊಳ್ಳಲು ಆಗಲಿಲ್ಲ – ಮಾತು ಸ್ವಲ್ಪ ಗಂಭೀರವೆನಿಸಿತು.

'ಶಂಕರ, ಈಗ ಎಲ್ಲಿಯಾದರೂ ಹೊರಟಿದ್ದೀಯ ಇಲ್ಲ ನನ್ನ ಜೊತೆ ಮನೆಗೇ ಬರ್ತೀಯಾ? – ಎಂದು ಕೇಳಿದ ಚಂದ್ರಣ್ಣ.

'ಎಲ್ಲೂ ಹೋಗಬೇಕಿಲ್ಲ. ನಿಮ ಜೊತೆಗೆ ಬರ್ತೀನಿ – ಎಂದ ಶಂಕರ.

'ಹಾಗಾದರೆ ನೀನು ಹೋಗುತ್ತಿರು. ಇಲ್ಲೇ ಮಲ್ಲಣ್ಣ ಗೌಡರನ್ನು ಮನೆತನಕ ಬಿಟ್ಟು ಒಂದಿಷ್ಟು ಕೆಲಸ ಇರೋದನ್ನು ಮುಗಿಸಿ ಬಂದು ಬಿಡ್ತೇನೆ.'

'ನೀವು ಬೇಕಾದರೆ ಮನೆಗೆ ಹೋಗಿ, ನಾನೇ, ನಿಮ್ಮ ಕೆಲಸವಿದ್ದರೆ, ಮುಗಿಸಿಕೊಂಡು ಬರ್ತೀನಿ. ಅದೇನು ಕೆಲಸ ಹೇಳಿ.'

'ನಿನ್ನಿಂದ ಆಗುವಂಥಾದ್ದಲ್ಲ ನೀನು ಹೋಗು. ನಾನು ಬಂದ್ಬಿಡ್ತೀನಿ ಎಲ್ಲೂ ಹೋಗಬೇಡ. ನಿನ್ಹತ್ರ ಸ್ವಲ್ಪ ಮಾತಾಡುವುದಿದೆ' ಎಂದು ಎಚ್ಚರಿಸಿ ಹೇಳಿದ.

'ಆಗಲಿ' – ಎಂದು ಶಂಕರ ಬಂದ ದಾರಿಯಲ್ಲೇ ಹಿಂದಕ್ಕೆ ಹೋದ. ಚಂದ್ರಣ್ಣ ಮಲ್ಲಣ್ಣಗೌಡರು ಮತ್ತೆ ಮಾತು ಮುಂದುವರೆಸುತ್ತಾ ಎಡಕ್ಕೆ ತಿರುಗಿದರು. ಮಲ್ಲಣ್ಣ ಸುಮ್ಮನಿರಲಾರದೆ, 'ಈಗ ಏನ್ಹೇಳ್ತೀಯ ಚಂದ್ರಣ್ಣ? ಮಗನ ಮೇಲೆ ಉರಿದು ಬಿದ್ದೆ? ಪ್ರಯೋಜನಕ್ಕೆ ಬಾರದವನೆಂದು ಹಿಯಾಳಿಸಿದೆ! – ಈಗೇನಾಯ್ತು? ಎಂದ.

'ಮಲ್ಲಣ್ಣ ನೀನು ನಿಜಾಂತಲಾದರೂ ತಿಳಿ, ಸುಳ್ಳಂತಲಾದರೂ ತಿಳಿ. ನನ್ನನ್ನು ಹುಡುಕಿಕೊಂಡು ಬಂದದ್ದು ನನಗೇ ನಂಬಿಕೆಯಾಗ್ತಿಲ್ಲ?"

'ಹೋಗಲಿ, ಇನ್ನು ಮೇಲಾದರೂ ನಂಬಬಹುದಲ್ಲ.'

'ಮಲ್ಲಣ್ಣ, ಮನೆಗೆ ಹೋಗಿ ವಿಚಾರಿಸುವವರೆಗೂ ನನಗೆ ಇವನ ಮಾತಿನಲ್ಲಿ ನಂಬಿಕೆ ಬರುವುದಿಲ್ಲ. ಎಂದು ಅಪನಂಬಿಕೆಯಿಂದಲೇ ಹೇಳಿದ.

'ಮನೆಗೆ ಹೋಗಿ ರಾದ್ಧಾಂತ ಮಾಡಬೇಡ. ಅವನೇನಾದರೂ ಸರಿಯಾಗಿ ವರ್ತಿಸುತ್ತಿದ್ದರೆ ಸುಮ್ಮನಿದ್ದು ಬಿಡು. ಯಾಕೆ? ಏನು? ಎಲ್ಲಿ? ಎತ್ತ ಅಂತ ಕೇಳಿ ಪ್ರಶ್ನಿಸಬೇಡ. ಮತ್ತೆ ಅವನೇನಾದರೂ ಬದಲಾದಾನು' ಎಂದು ಬುದ್ಧಿವಾದದ ದನಿಯಲ್ಲಿ.

'ಇಲ್ಲ. ಇಲ್ಲ ಹಾಗೇನೂ ಅವನ ಬಳಿ ಮಾತಾಡೋದೆ ಇಲ್ಲ' ಅವನಿಗೆ ತಿಳಿದೀರೋ ಹಾಗೇ. ಮನೆಯವರಲ್ಲಿ ವಿಚಾರಿಸ್ತೀನಿ' ಎಂದು ಹೇಳಿದ.

'ಅದೇ ಸರಿಯಾದ ಮಾರ್ಗ' ಎಂದು ಚಂದ್ರಣ್ಣನ ಉಪಾಯವನ್ನು ಹೇಳಿದ. ಈ ಮಾತು ಮುಗಿಯುವಷ್ಟು ಹೊತ್ತಿಗೆ ಮಲ್ಲಣ್ಣನ ಮನೆ ಬಂತು. ಚಂದ್ರಣ್ಣ ಮಲ್ಲಣ್ಣನಿಗೆ, 'ಯಾವುದೂ ಬೇಗ ಇತ್ಯರ್ಥವಾಗಲಿ' ಅಂತ ವನಿಗೆ ತಿಳಿಸಿ ಹೇಳು, ಶಾನುಭೋಗರು ಸಿಕ್ಕಿದರೆ ಕಂಡು ಮಾತಾಡ್ತೀನಿ. ನಿನಗೇ ಆದರೆ, ಆ ಕೆಲಸಾನ ನೀನೇ ಮುಗಿಸಿಬಿಡು. ಮಲ್ಲಣ್ಣ, ಚಂದ್ರಣ್ಣನನ್ನು ಒಳಗೆ ಬರಲು ತುಂಬಾ ಹೇಳಿದ. ಬಾಯಾರಿಕೇನಾದರೂ ತೀರಿಸಿಕೊಂಡು ಹೋಗು' ಎಂದು ಎಷ್ಟು ಹೇಳಿದರೂ, ಕೇಳದೆ ಚಂದ್ರಣ್ಣ ಬೇಗ ಬೇಗನೆ ಹೆಜ್ಜೆ ಹಾಕಿ ತನ್ನ ಮನೆಯತ್ತ ನಡೆದ.

ಮನೆ ಸೇರುವ ವೇಳೆಗೆ ಪಾರ್ವತಮ್ಮ ಬಾಗಿಲಲ್ಲೇ ಕಾದಿದ್ದಳು. ಚಂದ್ರಣ್ಣ ಒಳಗೆ ಬರುತ್ತಿದ್ದಂತೆ ಪಾರ್ವತಿ ಕೇಳಿದಳು 'ಬೇಗ ಬರ್ತೀನೀಂತ ಹೋದವ್ರು ಮಾಮೂಲಿಗಿಂತ ತಡವಾಗಿಯೇ ಬಂದಿದ್ದೀರಲ್ಲ? ಶಂಕರ ಕರೆದಾಗಲೂ ಅವನೊಟ್ಟಿಗೆ ಬರುವುದಕ್ಕೆ ನಿಮಗೆ ಆಗಲಿಲ್ಲವೇ?–ಎಂದಳು ಆಕ್ಷೇಪದ ದನಿಯಲ್ಲಿ. 'ಹೀಗೇ ಕೆಲಸವಿತ್ತು. ಬರಬೇಕಂತಲೇ ಅಂದ್ಕೊಂಡ. ಆದರೆ ಕೆಲಸಾನ ಮಧ್ಯೆ ಬಿಟ್ಟು ಬರೋದಕ್ಕೆ ಆಗುತ್ತದೆಯೇ? ಎಂದು ಚಂದ್ರಣ್ಣ ಕೇಳಿದ.

'ಹೋಗಲಿ ಬೇಗ ನಡೀರಿ. ಆ ಹೆಣ್ಣುಮಕ್ಕಳು ನೀವು ಬರಲೀಂತ ಕಾದಿದ್ದಾರೆ'ಎಂದು ಆತುರಪಡಿಸಿದಳ.

'ಅವರು ಕಾದಿದ್ದಾರೆ, ನೀನೇನೂ ಕಾದಿಲ್ವಲ್ಲ? ಎಂದು ನಗುತ್ತಾ ಚಪ್ಪಲಿ ಬಿಟ್ಟು, ಹಜಾರದ ಒಂದು ತುದಿಗೆ ನಡೆದು ಕೋಟನ್ನು ಬಿಚ್ಚಿ ಕೊಕ್ಕೆಗೆ ತಗುಲಿ ಹಾಕಿದ. ಅಷ್ಟರಲ್ಲಿ ಪಾರ್ವತಮ್ಮ ಟವಲೊಂದನ್ನು ತಂದುಕೊಟ್ಟಳು.

ಇವರಿಬ್ಬರ ಮಾತನ್ನು ಕೇಳಿಸಿಕೊಂಡಿದ್ದ ಪರಿಮಳ ಇದ್ದಲ್ಲಿಂದಲೇ, 'ಅಮ್ಮ ಅಪ್ಪನಿಗೆ ಅತ್ತೆಯ ಕಾಗದದ ವಿಚಾರ ತಿಳಿಸಿದೆಯಾ?'ಎಂದು ನೆನಪಿಸಿದಳು.

'ಹರಕು ಬಾಯಿ ಮುಂಡೇದು. ಇನ್ನೂ ಬರುವುದಕ್ಕೆ ಇಲ್ಲ. ಆಗಲೇ ಬಾಯಿ ತೆಗಿದಿದ್ದಾಳೆ. ಒಂದ್ನಿಮಿಷ ಸುಮ್ಮನಿರುವುದು ಅವಳಿಗೆ ಸಾಧ್ಯವಿಲ್ಲ–ಎಂದು ಗೊಣಗಿದಳು.

'ಅದೇನೇ ಅದು ರಾಮಾಯಣ? ಅಷ್ಟ್ಯಾಕೆ ಸಿಡಿಮಿಡಿಯಾಗ್ತಿಯ?

ನಿಮ್ಮ ಮಗಳಿಗೆ ಹರಕು ಬಾಯಿತನ ನಿಲ್ಲಿಸು ಅಂತ ಹೇಳ್ತಿದ್ದೀನಿ'

'ಈಗ ಅಂಥಾದ್ದೇನು ಮಾಡಿದಳು?'

'ಏನೂ ಮಾಡಲಿಲ್ಲ. ಹೆಣ್ಣು ಹುಡುಗಿ ಬೇರೆಯವರ ಮಾತಿನಲ್ಲಿ ಬಾಯಿ ಹಾಕುವುದನ್ನು ಅಭ್ಯಾಸ ಮಾಡಬೇಡಾಂತ ಹೇಳ್ತಿದ್ದೀನಿ ಅಷ್ಟೇ.

ಇವರಿಬ್ಬರ ಮಾತಿನ ಪರಿವೆಯಿಲ್ಲದೆ ಪರಿಮಳ ಅಣ್ಣನ ಜೊತೆಗೆ ಹರಟೆ ಹೊಡೆಯುತ್ತಿದ್ದಳು. ಯಾವುದೋ ತಮಾಷೆ ಮಾತಿಗೆ ಗಟ್ಟಿಯಾಗಿ ಇಬ್ಬರೂ ನಕ್ಕರು. ಚಂದ್ರಣ್ಣ ಪಾರ್ವತಿ ಇಬ್ಬರಿಗೂ ಇವರ ನಗೆ ಕೇಳಿಸಿತು.

ಚಂದ್ರಣ್ಣ ಏನೊಂದು ಪ್ರತಿಕ್ರಿಯೆಯನ್ನೂ ತೋರದೆ ತಲೆ ಬಗ್ಗಿಸಿಕೊಂಡು ಊಟ ಮಾಡುತ್ತಿದ್ದ. ಪಾರ್ವತೀನೆ ಮಾತಿಗೆ ತೆಗೆದಳು. 'ನಿಮ್ಮಕ್ಕ ಕಾಗದ ಬರೆದಿದ್ದಾರೆ'.

'ಓಹೋ! ಏನಂತೆ?' ಇಷ್ಟು ದಿವಸದ ಮೇಲೆ ತಮ್ಮನ ಮೇಲೆ ನೆನಪಾಯಿತೇನೋ ಆಕೆಗೆ?' ತಾತ್ಸಾರದ ದನಿಯಿತ್ತು.

ಇಲ್ಲ ತುಂಬ ನೊಂದುಕೊಂಡು ಬರೆದಿದ್ದಾಳೆ..... ತನಗೆ ಪತ್ರ ಬರೆಯಲು ಆಗದಿದ್ದುದಕ್ಕಾಗಿ........ನಿಮ್ಮನ್ನು ನೋಡಲು ಮನಸ್ಸಾಗುತ್ತಿದೆಯಂತೆ. ಕಣ್ಣಲ್ಲಿ ನೀವೇ ಇದ್ದೀರಿ. ಒಮ್ಮೆ ನಿಮ್ಮೆಲ್ಲರನ್ನೂ ನೋಡಲೇ ಬೇಕೆಂದೆನಿಸಿದೆ'. ತಮ್ಮನಿಗೆ ಈ ವಿಷಯ ತಿಳಿಸುವುದು ಎಂದು ಬರೆದಿದ್ದಾಳೆ.

'ಅಲ್ಲವೇ ವಾರಕ್ಕೊಂದು ಕಾಗದವಾದರೂ ಬರೆಯುವುದು ಬೇಡವೇನೆ? ತಮ್ಮ ಇದ್ದಾನೋ, ಸತ್ತಾನೋ ಅಂತಲಾದರೂ ತಿಳಿಯುವುದು ಬೇಡವೇ?- ಎಂದು ಆಕ್ಷೇಪಣೆ ಮಾಡಿದ.

'ಅವರೇನೋ ಬರೆಯಲಿಲ್ಲ. ನೀವಾದರೂ ಬರೆಯಬಾರದಿತ್ತೇನು? ನಿಮಗೂ ಅವರ ಮೇಲೆ ಅಭಿಮಾನ ಇದ್ದದ್ದೇ ಆದರೆ ನೀವೆ ಬರೀಬೇಕಿತ್ತು' ಅತ್ತಿಗೆಯ ಪರವಾಗಿ ವಾದಿಸಿದಳು.

ಇದೇನೇ ಇದು, ಅತ್ತಿಗೆಯ ಪರವಾಗಿ ವಾದಿಸುತ್ತಿದ್ದೀಯಲ್ಲ. ಏನಾದರೂ ತಲೆ ಸವರುವ ವಿಷಯ ಬರೆದಿದ್ದಾಳೆಯೇ? -ಸಂಶಯದಿಂದ ಕೇಳಿದ.

'ನೋಡಿ, ಸ್ವಂತ ಅಕ್ಕನ ವಿಷಯವಾಗಿ ಹೀಗೆಲ್ಲಾ ನೀವೇ ಮಾತಾಡಿದರೆ ಬೇರೆಯವರು ಏನು ಮಾಡಿತಾರು?'

'ಅದಿರಲಿ, ಇನ್ನೇನಾದರೂ ವಿಶೇಷವನ್ನು ಬರೆದಿದ್ದಾಳೇನು?'

'ಹುಂ!....ಅವನ ಮಕ್ಕಳೆಲ್ಲಾ ರಜೆಗೆ ಮನೆಗೆ ಬರುತ್ತಿದ್ದಾರಂತೆ. ವಿದೇಶದಿಂದ ಪ್ರಕಾಶನೂ ಬರ್‍ತಾನಂತೆ. ನಿನ್ನಿಬ್ಬರು ಮಕ್ಕಳನ್ನೂ ಕಳಿಸಿಕೊಡು. ಶಂಕರನ ವಿಚಾರ ಏನಾಯಿತು. ಹೇಗಿದ್ದಾನೇಂತ-ವಿಚಾರಿಸಿ ಬರೆದಿದ್ದಾರೆ.

'ಹಾಗೋ ಸಮಾಚಾರ?'

'ಅಷ್ಟೇ ಅಲ್ಲ. ನಮ್ಮ ಹೆಣ್ಣು ಮಕ್ಕಳಿಗೆ ಯಾವುದೋ ಗಂಡುಗಳಿವೆಯಂತೆ, ನೋಡಿದ ಹಾಗೂ ಆಗುತ್ತೆ' ಅಂತ ಬರೆದಿದ್ದಾರೆ.

ಬೇರೆ ಗಂಡುಗಳನ್ನು ಹುಡುಕುವುದಕ್ಕೆ ನಮಗೆ ಆಗುವುದಿಲ್ಲವೇ? –ವ್ಯಂಗ್ಯವಾಗಿ ಹೇಳಿದ.

'ಹಾಗಂದರೆ ಏನು ನಿಮ್ಮರ್ಥ?' ಅನುಮಾನಿಸಿ ಕೇಳಿದಳು.

'ತನ್ನ ಮಗನೇ ಇದ್ದಾನಲ್ಲ. ನಮ್ಮ ಮಕ್ಕಳಲ್ಲಿ ಯಾರಾದರೂ ಒಬ್ಬರನ್ನು ತಂದುಕೊಳ್ಳುವ ಯೋಚನೆ ಮಾಡಬಾರದಾ?

'ಅಲ್ಲಾಂದ್ರೆ ಅವರ ಅಂತಸ್ತಿಗೂ, ನಮಗೂ ಒಂದೇನಾ? ಅಲ್ದೆ ನಮ್ಮ ಮಕ್ಕಳು ಹಳ್ಳಿ ಮುಕ್ಕಗಳು. ಓದಿ ವಿದೇಶಕ್ಕೆ ಹೋಗಿ ಬಂದ ತಮ್ಮ ಮಗನಿಗೆ, ನಮ್ಮ ಮಕ್ಕಳಲ್ಲಿ ಏನಿದೇಂತ ತಗೋಳ್ತಾರೆ. ವಿದ್ಯೆ, ಆಸ್ತಿ, ಅಂತಸ್ತು ಯಾವುದೂ ಇಲ್ವಲ್ಲ.'

ಆ ಕಡೆಯಿಂದ ಹಾದು ಹೋಗುತ್ತಿದ್ದ ಶಂಕರ ಆ ಮಾತು ಕೇಳಿ ಬಿದ್ದು ಬಿದ್ದು ನಗತೊಡಗಿದ. ಚಂದ್ರಣ್ಣನಿಗೆ ಅವನ ನಗುವಿಗೆ ಕಾರಣ ತಿಳಿಯಲಿಲ್ಲ.

'ಯಾಕೋ, ದೆವ್ವ ಹಿಡಿದವರಂತೆ ನಗ್ತಿದ್ದೀಯ'–ಎಂದ.

'ನೀವು ಆಸ್ತಿ, ಅಂತಸ್ತು, ಅಂತ ಮಾತಾಡಿದಿರಲ್ಲ. ಅದಕ್ಕೆ ನಗು ಬಂತು.'

'ಯಾಕೆ ಇದೆಲ್ಲ ಮುಖ್ಯ ಅಲ್ಲವೇನು?' ಸಂಶಯದಿಂದ ಕೇಳಿದ.

'ಯಾವುದೂ ಮುಖ್ಯವಲ್ಲ. ನಾವೇ ಇಲ್ಲವಾಗುವಾಗ, ಆ ಇಲ್ಲದ್ದಕ್ಕೆ ಇವುಗಳ ಹೊರೆ ಹೊರಿಸುವುದು ಮೂರ್ಖತನ.

'ಹಾಗಂತ ಯಾರು ಹೇಳಬೇಕು?' ಅವರಿಗವರೇ ಹೇಳ್ತಾರೆ.

'ಅದ್ಹ್ಯಾಗೆ? ಹುಟ್ಟುವವರಿಗೆಲ್ಲಾ, ಎಲ್ಲ ಗೊತ್ತಿರುತ್ತಾ?

'ಗೊತ್ತಿಲ್ಲದೆ ಏನು? ಆದರೆ ಗೊತ್ತಿರುವುದರ ಕಡೆ ಕಣ್ಮುಚ್ಚಿಕೊಂಡು ಗೊತ್ತಿಲ್ಲದ್ದಕೆ, ಗೊತ್ತಿಲ್ಲವೆಂದು ಕಣ್ಣು ಬಿಟ್ಟು ಹುಡುಕಿದರೆ ಅದು ಹೇಗೆ? –ಮರುಪ್ರಶ್ನೆ ಹಾಕಿದ.

'ನಿನಗೆಲ್ಲಾ ಮಹಾ ತಿಳಿದಿದೆ ಅಲ್ವ? ಮನುಷ್ಯನಿಗೆ ಸಮಾಜದಲ್ಲಿ ಹಣ, ಸ್ತ್ರೀ, ಪದವಿ ಇದ್ದರೇನೆ ಮರ್ಯಾದೆ. ಇಲ್ಲವಾದರೆ ನಾಯಿ ಸಹ ಮೂಸುವುದಿಲ್ಲ.

'ಹೊಲಸಿಗೆ ಹೊಂದಿಕೊಂಡ ಮೂಗು ಪರಿಮಳಾನ ಗುರುತಿಸುತ್ತದೆಯೇ? ಕೆಟ್ಟದ್ದೂಂತ ಗೊತ್ತಿದ್ದೂ ಕೈ ಚಾಚಿ ಹಿಡೀತೇವೆ.... ಮನುಷ್ಯನ ಸ್ವಭಾವ ವಿಚಿತ್ರ.'

'ಶಂಕರ ಹೀಗೆಲ್ಲಾ ಮಾತಾಡೋಕೆ ನಿನಗೆ ಯಾರು ಹೇಳಿಕೊಟ್ಟರು?

'ಯಾರು ಯಾಕೆ ಹೇಳಿಕೊಡಬೇಕು? ಹಕ್ಕಿಗೆ ಹಾರುವುದನ್ನು, ನೀರಿಗೆ ಹರಿಯುವುದನ್ನು, ಹೂವಿಗೆ ಅರಳುವುದನ್ನು, ಚಿಕ್ಕಿಗೆ ನಗುವುದನ್ನು ಯಾರು ಹೇಳಿಕೊಡ್ತಾರೆ?'

'ನಿನ್ನ ಸ್ವಭಾವವೇ ಅರ್ಥವಾಗೊಲ್ಲ ಶಂಕರ? ಎಷ್ಟು ದೊಡ್ಡದಾಗಿ ಮಾತಾಡಿ ಬಾಯಿ ಮುಚ್ಚಿಸಿ ಬಿಡ್ತೀಯ.

'ನೋಡೀಂದ್ರೆ, ನನ್ನ ಮಗ ಎಷ್ಟು ದೊಡ್ಡ ವೇದಾಂತಿಯ ಹಾಗೆ ಮಾತಾಡ್ತಾನೆ.'

'ನೀವೆಲ್ಲಾ ಅವನನ್ನು ಹುಚ್ಚು, ಬೆಪ್ಪ, ಮೊದ್ದು ಎಂದುಕೊಂಡಿರಿ? ಹಂಗಿಸಿದಳು.

'ನಾನು ಯಾರ ಮಗನೂ ಅಲ್ಲ. ನೀನು ತಪ್ಪು ಹೇಳ್ತಿದ್ದೀಯ' ಎಂದು ಪಾರ್ವತಿಯ ಮಾತನ್ನು ವಿರೋಧಿಸಿದ.

'ಏನು? ನೀನು ನನ್ನ ಮಗನಲ್ಲವೆ?' ಗಳಗಳನೆ ಅತ್ತಳು.

'ಉಹೂಂ! ಖಂಡಿತ ಅಲ್ಲ. ನಿನ್ನನ್ನು ಇನ್ನಷ್ಟು ದಿವಸ ಅಜ್ಞಾನದಲ್ಲಿ ಇಡಲು ನನಗೆ ಇಷ್ಟವಿಲ್ಲ.'

'ಏನಿದು ಹುಚ್ಚುಚ್ಚು ಮಾತು ಶಂಕರ?' ಚಂದ್ರಣ್ಣ ಅರಚಿದ.

'ಎಷ್ಟಾದರೂ ಹುಚ್ಚನಲ್ಲವೇ.'– ಎಂದ ವ್ಯಂಗ್ಯವಾಗಿ.

'ಏನೋ ಶಂಕರ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಅಷ್ಟೊಂದು ಪ್ರೀತಿಯಿಂದ 'ಅಮ್ಮ' ಎಂದು ಇದೇ ಬಾಯಿಂದ ಕರೆದೆಯಲ್ಲೋ, ಈಗ ಇದ್ದಕ್ಕಿದ್ದಂತೆ ಹೀಗಾಡ್ತಿದ್ದೀಯಲ್ಲೊ?'

'ಆಟಕ್ಕೆ ಇದೀಗಲೇ ಪ್ರಾರಂಭ ಇನ್ನೂ ಮುಂದೆ ತುಂಬ ಇದೆ.....ಗಹಗಹಿಸಿ ನಕ್ಕ.

ಚಂದ್ರಣ್ಣನಿಗೆ ಬುದ್ಧಿ ಭ್ರಮಣೆಯಾಗುತ್ತಿರುವಂತೆನಿಸಿತು. ಮಗನ ಅರ್ಥವಿಲ್ಲದ ಮಾತುಗಳು! ಅಸಂಬದ್ಧವಾದ ಮಾತುಗಳು! – ಆದರೆ ತಾಯಿ ಹೃದಯದ ಮೇಲಿನ ಆಘಾತ ಭಯಂಕರವಾದೀತು.

ಇಪ್ಪತ್ತರ ಹೊಸ್ತಿಲಲ್ಲಿರುವ ಹುಡುಗ, – ಒಮ್ಮೆ ಬುದ್ಧಿವಂತಿಕೆಯಿಂದ ಮಾತಾಡಿದರೆ ಮತ್ತೊಮ್ಮೆ ಮರುಳನಂತೆ ಮಾತಾಡುತ್ತಾನೆ. ಚಂದ್ರಣ್ಣನಿಗೆ ತಾನು ಊಟ ಮಾಡುತ್ತಿದ್ದುದೆ ಮರೆತುಹೋಯಿತು. ಪಾರ್ವತಿ ನೆನಪಿಸಿದಳು. ಆದರೆ ಚಂದ್ರಣ್ಣನಿಗೆ ಇನ್ನು ಊಟ ಮಾಡಲು ಮನಸ್ಸು ಬರಲಿಲ್ಲ. ಕೈ ತೊಳೆದು ಎದ್ದ.

ಊಟದರ್ಧದಲ್ಲೇ ಎದ್ದದ್ದು ಪಾರ್ವತಿಗೆ ನೋವಾಯಿತು. ಮೂಕರಂತೆ ನಿಂತಿದ್ದ ಹೆಣ್ಣು ಮಕ್ಕಳನ್ನು ಊಟ ಮಾಡಲು ಹೇಳಿ, ತಾನೂ ಗಂಡನನ್ನು ಅನುಸರಿಸಿದಳು.

ಹೋಗುವಾಗ, ಶಂಕರ ನಿನ್ನ ರೀತಿಯೇ ನೆಮ್ಮದಿಗಳನ್ನು ಸೀಳುತ್ತಿವೆ. ರಕ್ತ ಉಣ್ಣಿಸಿ ನಿನ್ನನ್ನು ಸಾಕಿ ಬೆಳೆಸಿದ್ದೇವೆ.. ನಿನಗೆ ಕೃತಜ್ಞತೆಯೇ ಇದ್ದಂತಿಲ್ಲ – ಒರಟಾಗಿ ನುಡಿದಳು.

'ನನ್ನ ಶಕ್ತಿಗೆ ಒಂದು ರೂಪ, ಆಶ್ರಯಬೇಕಿತ್ತು. ನಿನ್ನನ್ನು ಆರಿಸಿದೆ. ಅಷ್ಟೇ.'

ಅಂದರೆ ನೀನೇನು ದೆವ್ವವೆ? ಭೀತಿಯಿಂದ ಕೇಳಿದಳು.

ದೆವ್ವವೆಂದರೆ, ದೆವ್ವ, ದೈವವೆಂದರೆ ದೈವ. ನಮ್ಮ ನಮ್ಮ ನಂಬಿಕೆಗಳನ್ನು ಆದರಿಸಿದ್ದು.

'ನನ್ನನ್ನೇ ಆಶ್ರಯಿಸಿದ್ದು ಯಾಕೆ? ನನ್ನ ಪ್ರಾಣ ತೆಗೆಯಲು ಎಂದೇ?

'ಪೂರ್ವಜನ್ಮದ ಕರ್ಮಶೇಷದಿಂದಲೇ ನಿನ್ನಲ್ಲಿ ಜನಿಸಿದೆ. ನಿನ್ನ ಪ್ರಾಣ ತೆಗೆಯಲು ಅಲ್ಲ, ಪ್ರಾಣವನ್ನು ಪ್ರತಿಷ್ಠಾಪಿಸಲು.

'ಸಾಕು ನಿನ್ನ ಪ್ರಾಣ ಪ್ರತಿಷ್ಠಾಪನೇ! – ಒದರಿ ನಡೆದಳು.

'ಅಮ್ಮ, ನಿಲ್ಲು. ನನ್ನ ಮಾತುಗಳನ್ನು ಕೇಳು' ಎಂದು ಕೂಗಿದ.

'ಅರ್ಹತೆಯಿಲ್ಲದ ಬಾಯಿಂದ ಅಮ್ಮನೆಂದು ಕರೆಯಬೇಡ' ತುಂಡರಿಸಿದಳು ಮಾತಿನಲ್ಲಿ.

'ನೀನು ಬೇಡವೆಂದರೂ ನಾನು ಕರೆಯಲೇಬೇಕು' ದೃಢವಾಗಿ ಹೇಳಿದ.

'ಅಗತ್ಯವಿಲ್ಲ. ತಾಯಿ ಮಗ ನಾವಲ್ಲವೆಂದು ಹೇಳಿದ ಮೇಲೆ ಇನ್ನೂ ನನ್ನ ಬೆನ್ನ ಹಿಂದೆ ಯಾಕೆ ಬರುತ್ತೀ?

'ನನಗಿಲ್ಲಿಂದ ಅಪ್ಪಣೆ ದೊರೆಯುವವರೆಗೂ ನಿನ್ನನ್ನು ನಾನು ಹಿಂಬಾಲಿಸಲೇಬೇಕು!

'ಅಪ್ಪಣೆ ಕೊಡುವವರು ಬೇರೆ ಇದ್ದಾರೆಯೇ? ನಿನಗೆ'

'ಹೌದು'

'ಯಾರು? ಎಲ್ಲಿದ್ದಾರೆ ಅವರು?

'ಬೆಳಕು. ಇಲ್ಲದ ಜಾಗವೇ ಇಲ್ಲ.

'ಹಾಗಾದರೆ ಯಾಕೆ ಕಾಣುತ್ತಿಲ್ಲ?

'ಸರಿಯಾಗಿ ನೋಡಿದರೆ ಕಾಣುತ್ತಾರೆ. ಮಾತೂ ಆಡುತ್ತಾರೆ'

'ಅಂದರೆ ನಮಗೆ ಕುರುಡು ಅಂತಲೇ?'

'ಹಾಗಂತ ನಾನು ಹೇಳಲಿಲ್ಲ.

'ಮತ್ತೆ ಎಲ್ಲರಿಗೂ ಯಾಕೆ ಕಾಣುವುದಿಲ್ಲ?......ನಿನಗೆ ಕಂಡಿದೆಯೇ'

'ಹೂಂ! ನನ್ನನ್ನು ಬಿಡುವುದೇ ಇಲ್ಲ. ಭೀತಿ ಹುಟ್ಟಿಸುವಷ್ಟು ಕೆಲವೊಮ್ಮೆ ಬೆನ್ನಟ್ಟುತ್ತಾರೆ. ಆದರೆ ಅವರೊಂದಿಗೆ ಇದ್ದಾಗ ನನಗೆ ನಾನೇ ಆಗಿರುವುದಿಲ್ಲ ಅವರು ಪ್ರೀತಿಸುತ್ತಾರೆ. ನಾನೂ ಬರುತ್ತೇನೆಂದರೆ, ಸ್ವಲ್ಪ ದಿನವಿದ್ದು ಬಾ ಈಗ ಬೇಡವೆನ್ನುತ್ತಾರೆ.

'ನಿನಗೆ ಅವರೇ ಏನು ಬಂಧುತ್ವವನ್ನು ಇರಿದು ಕೊಲೆ ಮಾಡೂಂತ ಹೇಳಿದ್ದು?'

'ಛೇ! ಛೇ! ಅವರು ಹೇಳಿದ್ದನ್ನು ಕೇಳುವುದಕ್ಕೆ ನಾನೇನೂ ಮಗುವಲ್ಲ ಯಾರಿಗಾದರೂ ಗೊತ್ತು, ಇಲ್ಲಿನ ಸಂಬಂಧಗಳು ಸಂಬಂಧಗಳೇ ಅಲ್ಲ. ಕೇವಲ ಲೋಕದೃಷ್ಟಿಯಲ್ಲಿ ಮಾತ್ರ ನಾವು ಅಪ್ಪ, ಅಮ್ಮ, ಅಣ್ಣ, ತಮ್ಮ, ಅಕ್ಕ-ತಂಗಿ' ಅಂತ. ವಾಸ್ತವವಾಗಿ ಯಾರಿಗೆ ಯಾರ ಸಂಬಂಧವೂ ಇಲ್ಲ. ಮರ, ಗಿಡ, ಬಳ್ಳಿ, ಹಸು, ಎಮ್ಮೆ ಮೊದಲಾದ ಪ್ರಾಣಿ ವರ್ಗದಲ್ಲಿ ಈ ರೀತಿಯ ಸಂಬಂಧ ಬಂಧನವಿದೆಯಾ? ಅವುಗಳಲ್ಲಿ ಜೀವವಿದೆ, ನಮ್ಮಲ್ಲೂ ಇದೆ. ನಾವು ಕೊಡುವಷ್ಟು ಪ್ರಾಧಾನ್ಯ ಅವು ಕೊಡುತ್ತವೆಯೇ? ಒಂದರಿಂದ ಒಂದು ಹುಟ್ಟುತ್ತೆ. ಸೃಷ್ಟಿ ಮುಂದುವರಿಯುತ್ತೆ. ಇದು ಪ್ರಕೃತಿ ಧರ್ಮ; ವಸ್ತು ಧರ್ಮ. ಪ್ರೀತಿ, ಪ್ರೇಮ, ವಾತ್ಸಲ್ಯ ಸ್ವಾರ್ಥವಾಗುತ್ತೆ' ತಿಳಿಸಿ ಹೇಳುವಂತೆ ಹೇಳಿದ.

'ನಿನ್ನ ಸುಖ, ನಿನ್ನ ವಿಚಾರಕ್ಕಾಗಿ, ಹೆತ್ತ ಅಮ್ಮನನ್ನು, ಸಂಬಂಧವಿಲ್ಲ ಎಂದು ಹೇಳಿದ್ದು ನಿನ್ನ ಸ್ವಾರ್ಥವಲ್ಲವಾ?'

'ಇದ್ದುದನ್ನು ಇದ್ದ ಹಾಗೆ ತಿಳಿಸಿದ್ದಕ್ಕೆ ನೀವು ನನ್ನ ಸ್ವಾರ್ಥವೆನ್ನುತ್ತೀರಿ. ಇದಕ್ಕೆ ಇದೇ ಹೆಸರನ್ನು ಕೊಡುವುದಾದರೆ, ನನ್ನ ವಿರೋಧವಿಲ್ಲ – ಎಂದಷ್ಟೇ ಹೇಳಿದ.

ಪಾರ್ವತಿ ಶಂಕರನ ಮಾತುಗಳಿಗೆ ಸೋತಂತೆನಿಸಿತು. ಆದರೆ ಮಗನ ವಿಚಾರವಾಗಿ ಆಳವಾಗಿ ಬೆಸೆದುಕೊಂಡಿದ್ದ ವಾತ್ಸಲ್ಯದ ಕೊಂಡಿಯನ್ನು ಶಂಕರ ಇಷ್ಟು ಸುಲಭವಾಗಿ ಕಡಿದು ಕಳಚಿದ್ದನ್ನು ಸಹಿಸದಾದಳು.

ಒಳಗಿನಿಂದ ಬಂದ ಶಾಂತ, ಏನಮ್ಮ ನಿಮ್ಮದು ಇನ್ನೂ ವಾದ ಮುಗಿದಿಲ್ಲವಾ? ಅಣ್ಣನ ಮಾತಿಗೆ ನೀವಿಷ್ಟೊಂದು ಮನಸ್ಸು ಕೆಡಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ– ಅಸಮಾಧಾನದಿಂದ ಹೇಳಿದಳು.

ನೀನು ಹೋಗು ಅಪ್ಪ ಕರೋತಿದ್ದಾರೆ. ಇವತ್ತೆಲ್ಲಾವಾದ ಮಾಡಿದರೂ ನೀವು ಸಾಧಿಸುವುದಂತೂ ಏನೂ ಇಲ್ಲ – ಎಂದು ಅವಳೇ ಮಾತು ಮುಂದುವರೆಸಿದಳು. ತಾಯಿಯನ್ನು ಒಳಗೆ ಕಳಿಸಿದಳು. ಶಂಕರನ ಕಡೆ ತಿರುಗಿ,

ಅಣ್ಣ, ಸುಮ್ಮನೆ ಅರ್ಥವಿಲ್ಲದ್ದೆಲ್ಲಾ ಹೇಳಿ ಅಮ್ಮನ ತಲೆ ಕೆಡಿಸ್ತೀಯ.'

ನಿನ್ನ ದೊಡ್ಡ ದೊಡ್ಡ ವಿಚಾರಗಳು ಆಕೆಗೆ ಹೇಗೆ ಅರ್ಥವಾಗಬೇಕು?–ಎಂದು ಪ್ರಶ್ನಿಸಿದಳು.

'ನಿಜ ಹೇಳಿದೆ ಶಾಂತ. ಕೇವಲ ವಿಚಾರಗಳು ಮನುಷ್ಯನ ಈಗಿರುವ ಸ್ವಭಾವವನ್ನು ಬದಲಾಯಿಸುವುದಿಲ್ಲ. ಮಾತಿಗಿಂತ ಮೌನವೇ ಪರಿಣಾಮಕಾರಿಯಾಗಿರುತ್ತೆ. ಮನುಷ್ಯನಿಗೆ ಮಾತೇ ಇಲ್ಲದಿದ್ದರೆ ಅನುಬಂಧಗಳು ಇನ್ನೂ ಬಿಗಿಯಾಗಿ ಸುತ್ತುತ್ತಿದ್ದವೋ ಏನೋ! ನಮ್ಮಂಥವರ ಮಾತೂ ಅರ್ಥವಾಗುವುದು ಕಷ್ಟ. ಇನ್ನು ಮಾತಿನಲ್ಲಿ ಪ್ರಯೋಜನವಿಲ್ಲ.

......ನೀನೇ ಗುರು ಶಾಂತ......ನೀನೆ ಗುರು – ಎಂದು ಶಾಂತಳಿಗೆ ಕೈ ಬೇಕಾದ್ದೇನಿದೆ?

'ಅಣ್ಣ, ಏನು ನೀನು ಮಾಡ್ತಿರೋದು? ನನಗೆ ಮುಗಿಯಬೇಕಾದ್ದೇನಿದೆ?

ಅಮ್ಮನಿಗೆ ಅರ್ಥವಾಗದ ವಿಚಾರಗಳನ್ನು ಹೇಳಬೇಡವೆಂದೆ. ಅಷ್ಟೇ.

'ಆಯ್ತು, ಬರ್ತೀನಿ. ನನ್ನನ್ನು ಎಲ್ಲೆಂದು ಹುಡುಕಾಡಬೇಡಿ. ಅಮ್ಮ-ಅಪ್ಪ ಇಬ್ಬರಿಗೂ ಹೇಳಿಬಿಡು. ಮನಸಾದಾಗ ಒಮ್ಮೆ ಬರ್ತೀನಿ' – ಎಂದು ಹೊರಟೇ ಬಿಟ್ಟ. ಶಾಂತ ದಿಗ್ಭ್ರಾಂತಳಾಗಿ ನೋಡುತ್ತಾ ನಿಂತಳೇ ಹೊರತಾಗಿ ಕೂಗಲಿಲ್ಲ.

ಜಾನಕಿ ಪತ್ರಕ್ಕೆ ಉತ್ತರವನ್ನೂ ಕೊಡಲಿಲ್ಲ. ಶಾಂತ ಪರಿಮಳರನ್ನೂ ಕಳಿಸಲಿಲ್ಲ. ಪಾರ್ವತಮ್ಮ ಮಗನನ್ನು, ಅವನಾಡಿದ ಮಾತುಗಳನ್ನು ನೆನೆಸಿಕೊಂಡು ಅಳುತ್ತಿದ್ದಳು. ದಿನವಿಡೀ ಯೋಚಿಸುತ್ತಾ ಕುಳಿತು ಬಿಡುತ್ತಿದ್ದರು. ವಿಶ್ವನಿಗೂ ಇವನಿಗೂ ಎಷ್ಟೊಂದು ವ್ಯತ್ಯಾಸ! ಒಂದು ಕಣ್ಣಿಗೆ ತಂಪಾಗಿದ್ದರೆ, ಮತ್ತೊಂದು ಶೂಲವಾಗಿದೆ.

ಶಂಕರನಿಂದಾಗಿ ಮನೆಯಲ್ಲಿ ಎಲ್ಲರೂ ಕೊರಗುವರೇ. ಪರಿಮಳ ಮಾತ್ರ ಸ್ವಲ್ಪ ಹೊತ್ತಿಗೆಲ್ಲಾ ಮರೆತು ತನ್ನ ಬದುಕಿನ ಕನಸುಗಳನ್ನು ಕಾಣುತ್ತಿದ್ದಳು. ಯಾವುದನ್ನೂ ಆಳವಾಗಿ ತೆಗೆದುಕೊಂಡು ತಲೆ ಕೆಡಿಸಿಕೊಳ್ಳುವುದಿಲ್ಲ. ಕೊರಗಿದರೆ ತನ್ನ ಅಂದಕ್ಕೆ ಎಲ್ಲಿ ಕೆಡು ಬರುತ್ತದೆಯೋ ಎಂದು ಆಲೋಚಿಸಿ, ಏನೇ ವಿಷಯವಾದರೂ ಹಗುರವಾಗಿ ತೆಗೆದುಕೊಳ್ಳುತ್ತಿದ್ದಳು. ಮನೆ ಅವಳಿಗೆ ಬರಬರುತ್ತಾ ನರಕವೆನಿಸಿತು.

ಅಪ್ಪ, ಅಮ್ಮನ ಕಷ್ಟದಿಂದಾಗಿ ಮದುವೆ ಬೇಡವೆಂದು ಹೇಳೋಣವೆಂದು ಹೊರಟಿದ್ದರೂ ಅದು ಶಾಂತಳ ಬಲವಂತದಿಂದಾಗಿ. ಮನಸ್ಸಿನಲ್ಲಿ ಈಗ, ತನಗೆ ಮದುವೆಯಾಗಿ ಹೋದರೆ ಸಾಕಪ್ಪಾ ಎನಿಸುತ್ತಿತ್ತು. ಒಂದೆರಡು ದಿನದ ಮಟ್ಟಿಗಾದರೂ ಜಾನಕತ್ತೆಯ ಮನೆಗೆ ಹೋಗಿ ಬರುವ ಅವಕಾಶ ಸಿಕ್ಕುವುದೇನೋ – ಎಂದು ಎದುರು ಕಾಯುತ್ತಿದ್ದ ಅವಳಿಗೆ ನಿರಾಶೆಯೇ ಆಯಿತು.

ಹೊರಗಿನ ಪ್ರಪಂಚದ ಪರಿವೆಯೇ ಇಲ್ಲದೆ, ಮನೆಯ ನಾಲ್ಕು ಗೋಡೆಗಳ ಮಧ್ಯೆಯೇ ಅವರ ಜೀವನ ಸಮಾಧಿಯಾಗುವುದೋ ಎನ್ನುವಂತಹ ಪರಿಸ್ಥಿತಿ. ಮನೆಕೆಲಸ, ಅಡುಗೆ ಕೆಲಸ ಬಿಟ್ಟರೆ ಬೇರೇನೂ ಉದ್ಯೋಗವಿಲ್ಲ ಎಷ್ಟೋ ದಿನ ಬೆಳಕು ಕಾಣುವ ಅದೃಷ್ಟವೂ ಅವರ ಪಾಲಿಗೆ ಇರಲಿಲ್ಲ.

ಪಾರ್ವತಿಯ ದೇಹಸ್ಥಿತಿ ಕೆಟ್ಟಿತು. ಈ ಮಧ್ಯೆ ವಿಪರೀತ ಕೆಮ್ಮು, ಉಬ್ಬಸ ಸಹಿಸಲಸಾಧ್ಯವಾದ ಆಯಾಸ. ಈಗಂತೂ ಒಂದು ಚೂರು ಕೆಲಸವೂ ಅವಳಿಂದ ಆಗುತ್ತಿರಲಿಲ್ಲ. ಎಷ್ಟೋ ಸಲ ಪಾರ್ವತಮ್ಮನಿಗೆ ತನ್ನತ್ತೆಯ ನೆನಪಾಗುತ್ತಿತ್ತು.

'ಮಹರಾಯಿತು, ಸಾಯುವ ಕ್ಷಣದವರೆಗೂ ದುಡಿಯುತ್ತಲೇ ಇದ್ದರು. ನನಗೆ ನೋಡಿದರೆ ಈಗಲೇ ಇಷ್ಟೊಂದು ಖಾಯಿಲೆ- ಎಲ್ಲವೂ ನನ್ನ ಕರ್ಮ. ಎಂದು ತನ್ನನ್ನು ಶಪಿಸಿಕೊಳ್ಳುತ್ತಿದ್ದಳು.

ಶಂಕರನನ್ನು ತಿದ್ದಲು ಯಾರಿಗೂ ಸಾಧ್ಯವಿಲ್ಲ. ಅವನ ಹಣೆಬರಹವೇ ಅಷ್ಟಾಗಿರಬೇಕು. ಒಬ್ಬ ಮಗ ಸತ್ತೂ ಬದುಕಿದ್ದಾನೆ ನೆನಪಿನಲ್ಲಿ. ಇವನು ಬದುಕಿಯೂ ಸತ್ತಿದ್ದಾನೆ. 'ಪುಣ್ಯಕ್ಕೆ ತಕ್ಕಂತೆ ಗಂಡ, ಧರ್ಮಕ್ಕೆ ತಕ್ಕಂತೆ ಮಕ್ಕಳು!' – ಇಷ್ಟೇ ತನ್ನ ಅದೃಷ್ಟ ಎಂದು ಸಮಾಧಾನ ತಂದುಕೊಳ್ಳುತ್ತಿದ್ದಳು.

ಶಾಂತ ಮಾತ್ರ ಕತ್ತೆಯಂತೆ ದುಡಿಯುತ್ತಿದ್ದಳು. ಮನೆಗೆಲಸ ತಾಯಿಯ ಆರೈಕೆ, ತಂದೆಯ ಮೇಲ್ವಿಚಾರಣೆ....ಹೀಗೆ ಎಲ್ಲಾ ಅವಳೇ ನಿಭಾಯಿಸುತ್ತಿದ್ದಳು. ಪರಿಮಳ ಮೇಲೆ ಮೇಲೆ ಸ್ವಲ್ಪ ಕೆಲಸ ಮಾಡಿಕೊಡುತ್ತಿದ್ದಳು. ಅದೂ ಗೊಣಗಿಕೊಳ್ಳದೆ ಮಾಡುತ್ತಿರಲಿಲ್ಲ.

ಪುಟ್ಟ ಮಾತ್ರ ಪ್ರತಿದಿನ ಬಂದು ಹೋಗುತ್ತಿದ್ದ. ಈ ಮನೆಗೆ ಅವನೇ ಹಿರಿಯ ಮಗನಂತೆ, ಮನೆಗೆ ಬೇಕಾಗುವ ಪ್ರತಿಯೊಂದು ವಸ್ತುವನ್ನೂ ತಂದು ಕೊಡುತ್ತಿದ್ದ. ಅವನನ್ನು ನೋಡಿದಾಗಲೆಲ್ಲಾ ಪಾರ್ವತಿ, ಚಂದ್ರಣ್ಣ; ಹೊಟ್ಟೆಯಲ್ಲಿ ಹುಟ್ಟಿದ ಮಾತ್ರಕ್ಕೆ ಮಕ್ಕಳಲ್ಲ, ಕಷ್ಟಕ್ಕಾಗುವವರೇ ನಿಜವಾದ ಮಕ್ಕಳು, ಎಂದು ತೀರ್ಮಾನಿಸಿದ್ದರು.

'ಅಯ್ಯ, ಸುಮ್ಮನೆ ಶಂಕರನ ವಿಚಾರವಾಗಿ ನೀವು ನೋಯಬೇಡಿ. ನೀವು ಹಾಗೆ ನೊಂದುಕೊಳ್ಳುತ್ತಿದ್ದರೆ ನನಗೆ ಅಳು ಬರುತ್ತೆ. ನೀವೇ ನನಗೆ ತಂದೆ ತಾಯಿ ಅಂತ, ನಮ್ಮಪ್ಪ ಸಾಯುವಾಗ, ನನಗೆ ಹೇಳಿ ಹೋಗಿದ್ದಾರೆ. ನನ್ನನ್ನೇ ನಿಮ್ಮ ಮಗ ಅಂದ್ಕೊಳ್ಳಿ ಅಯ್ಯ'-ಚಎಂದು ಪುಟ್ಟ ಕಣ್ಣೀರಿಟ್ಟು ಎಷ್ಟೋ ಸಲ ಹೇಳುತ್ತಿದ್ದ.

ಮಲತಾಯಿಯಾದರೂ, ರಂಗಿ, ಸ್ವಂತ ಮಕ್ಕಳಿಗಿಂತ ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು. ಈರನಿಂದ ಅವಳಿಗೆ ಎರಡು ಮಕ್ಕಳಾಗಿದ್ದವು. ಮನೆ ತುಂಬಾ ಮಕ್ಕಳಿದ್ದರೂ, ಬೇಸರಿಸಿಕೊಳ್ಳದೆ ಅವರನ್ನು ಸಾಕುತ್ತಿದ್ದರು.

ಪುಟ್ಟ, ರಂಗ, ರಾಜ ಇವರೆಲ್ಲಾ ದುಡಿಯುವ ವಯಸ್ಸಿನವರಾದ್ದರಿಂದ ಕಷ್ಟವಿಲ್ಲದೆ ಸಂಸಾರ ನಡೆಯುತ್ತಿತ್ತು.

ಚಂದ್ರಣ್ಣನನ್ನು ಕಷ್ಟಪಡಲು ಬಿಡದೆ, ಅವರಲ್ಲೇ ಯಾರಾದರೂ ಒಬ್ಬರು ಹೊಲ ಗದ್ದೆಗಳನ್ನು ನೋಡಿಕೊಳ್ಳುತ್ತಿದ್ದರು. ಪಾರ್ವತಿಯ ಮನೆಯಿಂದ ಯಾರೇ ಕೂಗಿದರೂ, ಒಂದು ಕೂಗಿಗೆ ಯಾರಾದರೂ ಪುಟ್ಟನ ಮನೆಯಿಂದ ಇವರ ಮನೆಯಲ್ಲಿ ಹಾಜರಿರುತ್ತಿದ್ದರು.

ಚಂದ್ರಣ್ಣನಿಗೆ ಪುಟ್ಟನನ್ನು ಕಂಡರೆ ಪ್ರೀತಿ ಉಕ್ಕಿ ಬರುತ್ತಿತ್ತು. ಅವನಿಗೂ ತನಗೂ ಏನು ಸಂಬಂಧ? ನನಗಾಗಿ ದುಡಿಯುತ್ತಾನೆ, ನನಗಾಗಿ ದುಃಖಿಸುತ್ತಾನೆ....ಇದಕ್ಕೆ ಏನೋ ಋಣಾನುಬಂಧ ಅನ್ನುವುದು.'

ಚಂದ್ರಣ್ಣನಿಗೆ ಹೃದಯ ತುಂಬಿ ಬಂದಾಗ 'ಪುಟ್ಟ ನಿನ್ನ ಸಂಸಾರವೇ ನಿನಗೆ ಹೊಣೆಯಾಗಿರಬೇಕಾದರೆ, ನಮ್ಮನ್ನೂ ಯಾಕೆ ಹೊರುತ್ತೀಯ? – ಎಂದು ಕೇಳಿದರೆ, 'ಇದೇನಯ್ಯ? ನನಗೆ ಶಕ್ತಿ ಇದೆ. ಏನೋ ಕೈಲಾದ ಸಹಾಯ ಮಾಡಿದರೆ, ಅದೂ ಯಾರಿಗೆ, ನನ್ನವರಿಗೆ' –ಅದು ಹೊರೆ ಹೇಗಾಗುತ್ತೆ? ನಮ್ಮ ಅಪ್ಪ, ಅಮ್ಮ ನಮಗೆ ಹೊರೆಯೇ? ಅದು ಹೊರೆ ಹೇಗಾಗುತ್ತೆ? ನಮ್ಮ ಅಪ್ಪ, ಅಮ್ಮ ನಮಗೆ ಹೊರೆಯೇ? ಅದೂ ನಾನು ನಿಮಗೇನು ಕಾಸುಕೊಟ್ಟು ಹೊಟ್ಟೆ ಹೊರೀತಿಲ್ವಲ್ಲ? ನಮ್ಮ ವಂಶವೇ ನಿಮ್ಮ ನೆರಳಲ್ಲಿ ಬೆಳೆದದ್ದು ಹಾಗಿರುವಾಗ ನೀವ್ಯಾಕೆ ನನಗೆ ಹೊರೆ ಹೇಳಿ? ಹಿಂಗೆಲ್ಲಾ ಹೇಳಬೇಡಿ ಅಯ್ಯ' ಎಂದ ನೊಂದ ದನಿಯಲ್ಲಿ.

ಅವನ ಮಾತು ಸಕ್ಕರೆಯಷ್ಟು ಸವಿಯಾಗಿತ್ತು. ಚಂದ್ರಣ್ಣ ಅವನನ್ನು ತಬ್ಬಿಕೊಂಡು, ಪುಟ್ಟ ಜಾತಿಯೊಂದು ಅಡ್ಡ ಬರದಿದ್ದರೆ ನನ್ನ ನೂರು ಹೆಣ್ಣು ಮಕ್ಕಳನ್ನಾದರೂ ಕೊಟ್ಟು ಅಳಿಯನನ್ನಾಗಿ ಮಾಡಿಕೊಳ್ಳುತ್ತಿದ್ದೆ' ಎಂದರು.

ಚಂದ್ರಣ್ಣನ ಅಪ್ಪುಗೆಗೆ ಕಕ್ಕಾಬಿಕ್ಕಿಯಾಗಿ ಪುಟ್ಟ,

'ಅಯ್ಯ', ಅಯ್ಯ! ಇದೇನು ನೀವು ಹೀಗೆ ಮಾಡ್ತಿರೋದು. ನನ್ನನ್ನು ಹೀಗೆ ತಬ್ಬಿಕೊಳ್ಳಬಹುದೇ? ನಾನೆಲ್ಲಿ ನೀವೆಲ್ಲಿ? – ಎಂದು ಕೇಳಿದ ಭಯದಿಂದ.

'ಪುಟ್ಟ, ಹೆಸರಿಗೆ ನನಗೂ ಒಬ್ಬ ಮಗನಿದ್ದರೂ, ಮಗನ ಅಪ್ಪುಗೆಯ ಆನಂದದ ಅನುಭವವಿಲ್ಲ. ಮನಸು, ಮಮತೆಗಳಲ್ಲಿ ಮಗನನ್ನೂ ಮೀರಿಸಿರುವ ನಿನ್ನ ಅಪ್ಪುಗೆಯಿಂದ ಆ ಅನುಭವವನ್ನು ಪಡೆಯುತ್ತಿದ್ದೇನೆ. ಇದೂ ನನ್ನ ಸ್ವಾರ್ಥವೆ ಎಂದ.

ಪುಟ್ಟನ ಕಣ್ಣುಗಳಲ್ಲಿ ಆನಂದ ಭಾಷ್ಪಗಳಿದ್ದವು. ಷರಟಿನ ತುದಿಯಿಂದ ಒರೆಸಿಕೊಂಡ. ಪುಟ್ಟ ಹೂವಾದ. ಶಂಕರ ಮುಳ್ಳಾದ.

ಚಂದ್ರಣ್ಣ ಈಗ ಹೆಚ್ಚು ಹೊತ್ತು ಮನೆಯಲ್ಲಿಯೇ ಉಳಿಯುತ್ತಿದ್ದ. ಪಾರ್ವತಿಯ ಕೆಮ್ಮು ಉಲ್ಬಣಿಸುತ್ತಿತ್ತು. ಚಂದ್ರಣ್ಣ ವೈದ್ಯರನ್ನು ಕರೆತರುತ್ತೇನೆಂದರೆ, 'ಸಣ್ಣ ಪುಟ್ಟ ಖಾಯಿಲೆಗಳಿಗೆಲ್ಲಾ ವೈದ್ಯರು ವೈದ್ಯರು ಅಂದ್ರೆ, ಆಯ್ತು' – ನೀವು ಸುಮ್ಮನಿರಿ ನನಗೇನೂ ಆಗಿಲ್ಲ. ಎಲ್ಲಾ ಸರಿಹೋಗುತ್ತೆ–ಎಂದು ಆ ಮಾತನ್ನೇ ನಿವಾರಿಸುತ್ತಿದ್ದಳು.

ಮಕ್ಕಳೂ ಬಲವಂತ ಪಡಿಸಿದರು. ಆದರೆ ಅದರಿಂದ ಏನೂ ಫಲವಿಲ್ಲವಾಯಿತು.

ಚಂದ್ರಣ್ಣ ವಿಧಿಯಿಲ್ಲದೆ ಸುಮ್ಮನಾದ.

ರಂಗಿಗೆ ಮನೆ ಕೆಲಸಗಳೇ ಸಾಕು ಸಾಕಾಗಿತ್ತು. ಬಿಡುವೇ ಸಿಗುತ್ತಿರಲಿಲ್ಲ. ಆದರೂ ಯಾವಾಗಲಾದರೊಮ್ಮೆ ತುಂಬಾ ಬೇಸರವಾದರೆ ಪಾರ್ವತಮ್ಮನ ಮನೆಗೆ ಸಂಜೆ ಬಿಡುವು ಮಾಡಿಕೊಂಡು ಬಂದು ಒಂದೆರಡು ಗಳಿಗೆ ಮಾತಾಡಿಕೊಂಡು ಹೋಗುತ್ತಿದ್ದಳು.

ಪಾರ್ವತಿಗೂ ಸ್ವಲ್ಪ ಬೇಸರ ಕಳೆದಂತಾಗುತ್ತಿತ್ತು. ಒಮ್ಮೊಮ್ಮೆ ಪಾರ್ವತಿಯೇ ಹೇಳಿ ಕಳುಹಿಸುತ್ತಿದ್ದುದುಂಟು ಇವತ್ತೂ ಅಷ್ಟೆ. ಪಾರ್ವತಿ ರಂಗಿಗೆ ಹೇಳಿ ಕಳಿಸಿದಳು. ರಂಗಿ ಸರಿಯಾಗಿ ನಾಲ್ಕು ಗಂಟೆಗೆ ಬಂದಳು. ಶಾಂತ ಪರಿಮಳ ಇಬ್ಬರೂ ತಾಯಿಯ ಬಳಿ ಕುಳಿತಿದ್ದರು.

ರಂಗಿ ಬಂದದ್ದನ್ನು ನೋಡಿದ ಶಾಂತ, 'ಅಮ್ಮ, ರಂಗಕ್ಕ ಬಂದಳು' ಎಂದಳು. ಪಾರ್ವತಿ ಎದ್ದು ಕುಳಿತುಕೊಳ್ಳುತಾ, 'ಬಾ ರಂಗಿ'–ಎಂದಳು.

'ಹೇಳಿ ಕಳಿಸಿದ್ರಲ್ಲವ್ವಾ, ಏನ್ಸಮಾಚಾರ?' ಎಂದು ಕೇಳುತ್ತಾ ಪಾರ್ವತಮ್ಮನಿಗೆ ಸ್ವಲ್ಪ ದೂರದಲ್ಲಿ ಕುಳಿತಳು.

'ಏನಿಲ್ಲ. ಹೀಗೆ ಬೇಸರವಾಯ್ತು. ಒಂದೆರಡು ನಿಮಿಷ ಮಾತಾಡೋಣಾಂತ ಹೇಳಿ ಕಳಿಸಿದೆ......ಅಡಿಗೆ ಗಿಡಿಗೆ ಆಯ್ತು?

'ಏನಡಿಗೆ ಬಿಡವ್ವಾ, ಒಸಿ ಇಟ್ಟು ಮಾಡಿ ಆದ್ರೆ – ಸಾಕಾಯ್ತಾದೆ. ಬೆಳಿಗ್ಗೇದೇ ಸಾರು ಗೀರು ಇದೆ – ಎಂದಳು.'

ಪಾರ್ವತಿಗೆ, ಹೇಳಬೇಕಾದ ಒಂದು ಮುಖ್ಯ ವಿಷಯವಿತ್ತು. ಆದರೆ ಶಾಂತ, ಪರಿಮಳ ಎದುರಿಗಿದ್ದರು. ಅವರಿಬ್ಬರನ್ನೂ ಅಲ್ಲಿಂದ ಕಳಿಸಿದ ಮೇಲೆ ವಿಷಯಕ್ಕೆ ಬರೋಣವೆಂದು, ಮಕ್ಕಳು, ಮರಿ, ಹೊಲ, ಗದ್ದೆ, ಮನೆ ಮೊದಲಾಗಿ, ವ್ಯವಹಾರದ ವಿಷಯಗಳನ್ನೇ ಕೇಳಿದಳು.

"ರಂಗಕ್ಕ, ನಿಮ್ಮ ಹಸು ಕರು ಹಾಕ್ತಾ?" ಇದ್ದಕ್ಕಿದ್ದಂತೆ ಪರಿಮಳ ಕೆದಕಿದಳು.

'ಯಾಕೆ ಚಿಕ್ಕವ್ವಾ, ಗಿಣ್ಣು ಹಾಲು ಬೇಕಿತ್ತಾ'–ಎಂದು ನಕ್ಕು ಕೇಳಿದಳು.

'ಉಹುಂ' ಸುಮ್ಮನೆ ಕೇಳಿದೆ– ಪುಟ್ಟಣ್ಣ, ಹಾಗೇಂತ ಹೇಳ್ತಿದ್ದ. ಅದಕ್ಕೇ ಕೇಳಿದೆ– ಎಂದಳು. ಮತ್ತೇನನ್ನೋ ಕೇಳಬೇಕೆಂದುಕೊಂಡು ಯೋಚಿಸತೊಡಗಿದಳು. ಪಾರ್ವತಿ, ಇನ್ನು ಪರಿಮಳ ಮಾತಿಗಿಳಿದರೆ ಸದ್ಯದಲ್ಲಿ ಮುಗಿಸುವುದಿಲ್ಲವೆಂದು ಸೂಕ್ಷ್ಮವರಿತು, 'ಸರಿ, ಈಗ ನೆನಪಾಯ್ತು ನೋಡು, ನಮ್ಮ ಹಸುವಿನ ಹಾಲೇ ಕರೆದಿಲ್ಲ. ಸ್ವಲ್ಪ ನೋಡ್ತೀಯಾ? ಎಂದಳು.

'ಯಾಕ್ರೀ ಪಾರ್ವತವ್ವ ನಮ್ಮ ಪುಟ್ಟ ರಂಗ, ಯಾರೂ ಬರಲಿಲ್ಲವೇ?' ಎಂದಳು.

'ಇಲ್ಲ ಪುಟ್ಟ, ಏನೋ ಬರ್ತೀನಂತ ಹೇಳಿ ಹೋಗಿದ್ದ. ಆದರೆ ಇನ್ನೂ ಬಂದಿಲ್ಲ ಎಂದಳು. ಶಾಂತಳನ್ನು ಮತ್ತೇನೋ ಕೆಲಸ ಹೇಳಿ ಎಬ್ಬಿಸಿದಳು.

ಅವರಿಬ್ಬರೂ ಅಲ್ಲಿಂದ ಹೋದ ಮೇಲೆ, ಪಾರ್ವತಿ.

'ರಂಗಿ, ನಾಳೆ ಮಧ್ಯಾಹ್ನ ನಿನ್ನ ಮಗ ಪುಟ್ಟ ಬಂದರೆ, ಇಲ್ಲಿಗೆ ಬರಬೇಕಂತ ಹೇಳಿಕಳಿಸು. ನನ್ನ ಅತ್ತಿಗೆಗೆ ಸ್ವಲ್ಪ ಕಾಗದ ಬರೀಬೇಕಾಗಿದೆ. ನನ್ನ ಯಜಮಾನರಿಗಾಗಲೀ, ಮಕ್ಕಳಿಗಾಗಲೀ ತಿಳಿಯಬಾರದು' ಎಂದಳು.

'ಯಾಕೆ ಪಾರ್ವತವ್ವ, ಜಾನಕವ್ವನ್ನ ಕಂಡರೆ, ಅಯ್ಯನೋರಿಗೆ ಆಗಾಕಿಲ್ಲ?

'ಅಂಥಾದ್ದೇನೂ ಇಲ್ಲ ರಂಗಿ. ಪತ್ರ ಬರಿಯೋದಕ್ಕೆ ಅವರು ಅಡ್ಡಿ ಹೇಳೊಲ್ಲ. ಆದರೆ ನಾನು ಏನು ವಿಷಯ ಬರೆಯಬೇಕೆಂದಿದ್ದೇನೆ. ಅದನ್ನು ಖಂಡಿತ ಅವರು ಇಷ್ಟಪಡೊಲ್ಲ.

'ಅಷ್ಟೊಂದು ಗುಟ್ಟಾಗಿರೋ ವಿಷಯಾನ, ಪುಟ್ಟನ ಕೈಲಿ ಹೇಗೆ ಹೇಳ್ತೀರವ್ವ? ನಗುತ್ತಾ ಕೇಳಿದಳು.

'ಪುಟ್ಟ ನನ್ನ ಸ್ವಂತ ಮಗನಿಗಿಂತ ಹೆಚ್ಚು. ಯಾರ ಯಾರ ವಿಷಯ ಅವರವರ ಹತ್ತಿರವೇ! ಒಬ್ಬರದು ಒಬ್ಬರಿಗೆ ಹೇಳೊಲ್ಲ ಅವನು.

'ಹೌದ್ರವ್ವಾ ಪುಟ್ಟನಂಥಾ ಮಗನನ್ನು ಪಡೀಬೇಕಾದ್ರೆ ಪುಣ್ಯ ಮಾಡಿರಬೇಕು. ಬಂಗಾರದಂಥ ಮಗ. ಅವರವ್ವ ಎಷ್ಟು ಅದೃಷ್ಟ ಮಾಡಿ ಹಡೆದಳೋ?

'ಈಗೇನಾಯ್ತು? ನೀನು ಹಡೆಯದಿದ್ದರೂ, ನಿನ್ನ ಮಗನೇ ಅಲ್ವ?

'ಹೌದು, ನಿಜವಾಗ಼್ೂ ನನ್ನ ಅದೃಷ್ಟ ಅನ್ನಕಬೇಕು. ಮನೆಯಾಗೂ ಅಷ್ಟೇ ತಮ್ಮ ತಂಗೇರನ್ನೆಲ್ಲಾ ತುಂಬಾ ಪ್ರೀತಿಸ್ತಾನೆ. ಅವರಿಗೂ ಅವನ್ನ ಕಂಡರೆ ಪ್ರಾಣ. ನಂಗೆ ಒಂದು ಚೂರು ನೋವು ಮಾಡ್ಕಳ್ಳಾಕೆ ಬಿಡಾಕಿಲ್ಲ.

'ಅದಕ್ಕೇ ಹೇಳಿದ್ದು ಪೂರ್ವ ಜನ್ಮದ ಪುಣ್ಯ ಅಂತ!' ಅವನೊಬ್ಬನಿದ್ದರೆ ನನಗೆ ಮತ್ತೆರಡು ಭುಜ ಇದ್ದ ಹಾಗೆ.

'ಅವರಿಗೆ ಇಪ್ಪತ್ನಾಕು ಗಂಟೆನೂ ನಿಮ್ಮ ಯೋಚ್ನೇನೆ. ಯೋಳ್ತಿರ್ತಾನೆ. ಚಿಕ್ಕವ್ವಾ, ದ್ಯಾವರು ಅವರಿಗೆ ಭಾಳಾ ಕಷ್ಟ ಕೊಟ್ಟಾನೆ. ಒಳ್ಳೇ ಜನಕ್ಕ ಹೀಗ ಮಾಡ್ತಾನ. ಪಾರ್ವತವ್ವ ಚಂದ್ರಯ್ಯ, ಶಂಕರನ ಚಿಂತೇನ ಏಸಚ್ಕೊಂಡಿದ್ದಾರೆ. ನೋಡಾಕಾಗದ್ದಂಗ ಸೊರಗ್ಯಾರ ಎಂದದ್ದು.

ಕಳಿಸ್ತೀನಿ ಬಿಡ್ರವ್ವ...... ಅಂದಂಗೆ ಶಾಂತವ್ವ ಪ್ರಮೀಳವ್ವನ ಮದುವೆ ಇಚಾರ ಏನಾಯ್ತೂಂತ?

'ಏನಾಗುತ್ತೆ ರಂಗಿ' ನೋಡೋವ್ರು, ಮಾಡೋವ್ರು, ಇರಬೇಕಲ್ಲ? ಅವರಿಗೊಬ್ಬರಿಗೇ ಹೇಳಬೇಕಾಗಿದೆ. ಒಬ್ಬರು ಎಷ್ಟೂಂತ ನೋಡ್ತಾರೆ ಮಾಡ್ತಾರೆ?....ಸರಿ.

ಇತ್ತೀಚೆಗೆ ನನ್ನ ಮಗನ ಚಿಂತೆಯಲ್ಲಿ ಪೂರ್ತಿಯಾಗಿ ಪ್ರಯತ್ನ ನಿಂತೇ ಹೋಯಿತು. ಅಲ್ದೆ ಜಾನಕತ್ತಿಗೆ ಹೆಣ್ಣು ಮಕ್ಕಳನ್ನು ಕಳಿಸಿಕೊಡು, ಇಲ್ಲಿ ಒಂದೆರಡು ಗಂಡುಗಳಿವೆ, ನೋಡೋಣವೆಂದು ಬರೆದರೂ ಅದನ್ನ ಕಿವಿ ಮೇಲೆ ಹಾಕಿಕೊಳ್ಳಲಿಲ್ಲ.

ಒಂದ್ಸಲ ಬರೆದ ಮಾತಿಗೆ ಬೆಲೆ ಕೊಡದೆ ಇದ್ದರೆ ಮತ್ತೊಮ್ಮೆ ಅವರ್‍ಯಾಕೆ ನಮಗೆ ಸಹಾಯ ಮಾಡ್ತಾರೆ ಹೇಳು.

'ಕಳಿಸಿದ್ದರೆ ಚೆನ್ನಾಗಿರ್ತಿತ್ತೇನೋ. ಯಾರ ಅದೃಷ್ಟ ಏಗಿದೆಯೋ ನೋಡಬಹುದಾಗಿತ್ತು.

'ನನಗೂ ಕಳಿಸಬೇಕೆಂತಲೇ ಇಷ್ಟವಿತ್ತು. ಅಷ್ಟರಲ್ಲಿ ಈ ದರಿದ್ರ ಶಂಕರನ ಗಲಾಟೆಯಾಯಿತು. ಯಜಮಾನರನ್ನು ಕೇಳುವ ಧೈರ್ಯವಾಗಲೀ, ಮನಸ್ಸಾಗಲೀ ಇರಲಿಲ್ಲ. ಈಗ ನೋಡಿದರೆ ಇವರು ಯೋಚನೇನೆ ಮಾಡುತ್ತಿಲ್ಲ.

'ಅವ್ವ ಜಾನಕವ್ವನಿಗೆ ಒಂದೆರಡು ಗಂಡು ಮಕ್ಕಳು ಇರಬೇಕಲ್ವ? ಅವನಿಗೆ ಯಾರನ್ನಾದರೂ ಕೊಡುವುದು.'

'ಅವರಿಗಾಗಿ ಏನೂ ಹೇಳ್ಲಿಲ್ಲ. ನಾವಾಗಿ ಕೇಳೋಕೆ ಸಂಕೋಚ ಪಡ್ತಿದ್ವಿ. ಈಗ ನನಗನ್ನಿಸಿದೆ, ಇವರಿಂದ ಗಂಡುಗಳನ್ನು ಹುಡುಕುವುದು ಕಷ್ಟ ಅಂತ. ಅದಕ್ಕೆ ನಾನೇ ನಮ್ಮ ಅತ್ತಿಗೆಗೆ ಇಲ್ಲಿನ ಪರಿಸ್ಥಿತಿಯನ್ನು ತಿಳಿಸಿ ಸೂಕ್ಷ್ಮವಾಗಿ ಪ್ರಸ್ತಾಪ ಮಾಡ್ತೀನಿ. ಆದರೆ ಆಗಲಿ.'

'ಅದೇ ಸರಿಯಾದ್ದು. ಕೇಳೋದ್ರಿಂದ ಏನ್ತಪ್ಪಿಲ್ಲ ಬಿಡ್ರವ್ವಾ' ಯಾರ ಅದೃಷ್ಟ ಏಗಿರುತ್ತೋ!

'ಪುಟ್ಟನಿಗೆ ಹೇಳಿ ಕಾಗದ ಬರೆಸೋಣಾಂತ ಇದ್ದೀನಿ. ನೀನು ಮಾತ್ರ ಮರೀದೀರಾ ಅವನ್ನ ಕಳಿಸು.

'ಅವ್ವ, ನಂದು ಒಂದು ಇಚಾರ'–ಎಂದು ಸ್ವಲ್ಪ ಹೊತ್ತು ಆಲೋಚಿಸಿದ ನಂತರ ಹೇಳಿದಳು.

'ಏನದು ನಿನ್ನ ವಿಚಾರ ರಂಗಿ?'

'ಅದೇ ನಮ್ಮ ಪುಟ್ಟಂಗೆ ನಾನೂ ಎಣ್ಣನ್ನ ತಂದ್ಕೊಂಬೇಕಂತೀನಿ. ಆದ್ರೆ ಅವ ನನ್ನ ಮಾತ ಕೇಳಾಕಿಲ್ಲ ಬಿಡವ್ವ, ಈಗ್ಲೆ ಎಂಥಾದ್ದು ಮದ್ವಿ, ಈ ಮಕ್ಕಳೆಲ್ಲ ಇನ್ನೂ ಸ್ವಲ್ಪ ದೊಡ್ಡವ್ರಾಗಲೀ – ಅಂತ ಯೇಳ್ತಾನೆ. ನಂಗೇನೋ ಕೈ ಆಸರೆಗೆ ಒಂದು ಹೆಣ್ಣಾಳು ಇದ್ರೆ ಒಳ್ಳೆಯದು ಅನ್ನಿಸ್ತೈತೆ.

'ಓಹೋ ಪುಟ್ಟನಿಗೆ ಮದುವೆ ಪ್ರಯತ್ನಾನು ನಡೆಸಿ ಬಿಟ್ಟಿಯಾ? ಎಂದು ಆಶ್ಚರ್ಯಪಟ್ಟಳು.

'ಹೂಂ! ನಮ್ಮ ದೊಡ್ಡ ಮಗಳಿದಾಳಲ್ಲ. ಅವರ ಪೈಕಿ ಒಂದು ಯೆಣ್ಣಿದೆ ಅಂತ ಹೇಳಿದ್ರು ತುಂಬಾ ಚಂದಾಗವ್ಳಂತೆ. ಒಳ್ಳೆ ಮನೆತನ, ಅದಕ್ಕೆ ಆಕೆ ನಂಗೆ ಕಾಯಿದ ಬರೆದು, 'ನೋಡು, ಚಿಕ್ಕಪ್ಪ, ಪುಟ್ಟಂಗೆ ಸರಿ ಓಯ್ತತೆ' ಎಂದು ಯೋಳಿದ್ದಾಳೆ.

'ಹೌದು ರಂಗಿ, ಸಂಬಂಧ ತುಂಬಾ ಚೆನ್ನಾಗಿರೋದು ಬಂದಾಗ ಬೇಡಾಂತ ಬಿಟ್ಟು ಬಿಡಬೇಡ. ಆಮೇಲೆ ನೋಡಿ ಮಾಡೋ ಗಂಡಸ್ರು ಯಾರಿರ್ತಾರೆ ಹೇಳು?.....ಈಗ ನೋಡು ನಮ್ಮ ಯಜಮಾನ್ರು ಒಬ್ಬರು. ಅವರಿಗೇನು ವಯಸ್ಸು ಕಡಿಮೆಯೇ? ಶಕ್ತಿ ಇಲ್ಲದಿರುವಾಗ ಅವರಿಗೇನು ಮಾಡೋಕಾಗುತ್ತೆ? ಒಂದೆರಡು ದಿನ ಮನಸ್ಸು ಚೆನ್ನಾಗಿದ್ದಾಗ ಹುರುಪಿಂದ ಓಡಾಡಿದರು. ಈಗ ಸುತರಾಂ ಪ್ರಯತ್ನವಿಲ್ಲ.

'ನಾನೂ ಅದೇ ಯೆಳ್ತೀನವ್ವ, ನೀನು ಮದ್ವಿ ಆದ್ರೆ, ಮಿಕ್ಕವ್ರಗೆ ನೀನೇ ಜವಾಬ್ದಾರಿ ತಕೋ ಬ್ಯೆದು ಅಂತ. ರಂಗಿ ರಾಜ, ನಮ್ಮ ಚಿಕ್ಕವು ಎಲ್ಲಾ ಇವೆ. ನಾನು ತುಂಬಾ ದಿವಸ ಬದುಕಿರ್ತೀನಿ ಅಂತ ಖಾತ್ರಿ ಏನೈತೆ? ಇಂವ ಕೇಳಬೇಕಲ್ಲ.

'ಅವನು ಒಳ್ಳೆಯವನು. ಪರಿಸ್ಥಿತಿ ತಿಳಿಸಿ ಹೇಳಿದ್ರೆ ಕೇಳ್ತಾನೆ.'

'ನಾನು ಇನ್ನೊಮ್ಮೆ ಯೇಳ್ತೀನಿ. ಆದ್ರೆ ನೀವೂ ಒಂದ್ಮಾತು ಅವರಿಗೆ ಯೇಳಿ. ನೋಡಾಣ' ಎಂದು ದೀರ್ಘವಾಗಿ ಉಸಿರೆಳೆದರು.

ಅಷ್ಟರಲ್ಲಿ ಪುಟ್ಟ ಹಿತ್ತಲ ಬಾಗಿಲಿನಿಂದ "ಚಿಕ್ಕವ್ವಾ, ಚಿಕ್ಕವ್ವಾ ಎಂದು ಕೂಗುತ್ತಾ ಹಾಲಿನ ತಂಬಿಗೆಯನ್ನು ಹಿಡಿದುತಂದ. ಪಾರ್ವತಮ್ಮ ರಂಗಿ ಇಬ್ಬರೂ ಸಂಭಾಷಣೆಯಲ್ಲಿ ಇದ್ದದ್ದನ್ನು ನೋಡಿ, "ಏನ್ ಚಿಕ್ಕವ್ವಾ ಇವತ್ತು ಆರಾಮಾಗಿ ಅವ್ವನವರ ಕೂಡಾ ಮಾತಾಡ್ಲಿಕ್ಕೆ ಹತ್ತಿ? ನಾನು ಮನೆ ಹತ್ರಕ್ಕೆ ಹೋಗಿದ್ದೆ. ನೀನು ಇಲ್ಲಿದ್ದೀಂತ ತಿಳೀತು. ಹುಡುಕ್ಕೊಂಡು ಬಂದೆ ಅಷ್ಟರಾಗೆ ಪರಿಮಳವ್ವ, ಹಾಲು ಕರೀಬೇಕೆಂದಳು. ಸರಿ ಹಾಲು ಕರೆದು ಕೊಟ್ಟು ಬಿಟ್ಟು ನಿನ್ನ ಕರ್ಕಂಡು ಹೋಗೋವಾಂತ ಬಂದೆ – ಎಂದು ಹೇಳಿದ.

'ಅವ್ವಾವ್ರು ಯೇಳಿ ಕಳ್ಸಿದ್ರು ಪುಟ್ಟ, ಅದಕಾ ಬಂದೆ. ನಿಂತಾವ ಕೆಲ್ಸ ಇದೇಂತ ಯೇಳಿದ್ರು. ಅದೇನೋ ನೀ ಕೇಳ್ಕಂಬಾ. ನಾ ಓಯ್ತೀನಿ – ಎಂದು ಎದ್ದಳು.

'ಕೂಡು ರಂಗಿ, ಸ್ವಲ್ಪ ಕಾಫಿ ಕುಡಿದು ಹೋಗೋವಂತೆ' ಅಂತ ಹೇಳಿ ಶಾಂತಳಿಗೆ ಕಾಫಿ ತರಲು ಕೂಗಿ ತಿಳಿಸಿದಳು ಪಾರ್ವತಿ.

ಶಾಂತ ಹೊಳೆ ಹೊಳೆಯುವ ಹಿತ್ತಾಳೆ ಲೋಟಗಳಲ್ಲಿ ಎಲ್ಲರಿಗೂ ಕಾಫಿ ತಂದುಕೊಟ್ಟಳು. ಪುಟ್ಟ ಕಾಫಿ ಕುಡಿಯುತ್ತಾ,

'ಶಾಂತವ್ವ, ಕಾಫಿ ಬಾಳ ಚೆನ್ನಾಗಿದೆ – ಎಂದು ಹೊಗಳಿದ.

ಹೋಗೋ ಪುಟ್ಟಣ್ಣ. ನಿನಗೆ ಏನು ಕೊಟ್ಟರೂ ಚೆನ್ನಾಗಿರುತ್ತೀಂತಿ.

ಕೊನೆಗೆ ಕುಡಿತೆ ಕೊಟ್ಟರೂ 'ಪಸಂದ್' ಅಂತೀ. ನಿನ್ನ ಮಾತಿಗೇನು? ಎಂದಳು. ಪುಟ್ಟ ಶಾಂತರ ಮಾತಿಗೆ ನಗುತ್ತಿದ್ದ ಪಾರ್ವತಿ,

'ಶಾಂತಿ, ಇನ್ನು ಸ್ವಲ್ಪ ಕಾಫಿ ಬೇಕಾದರೆ ಕೊಡು ಪುಟ್ಟನಿಗೆ ಅಂದಳು.

'ಬೇಕಾ ಪುಟ್ಟಣ್ಣ?' ಎಂದಳು ಶಾಂತ.

'ಏನೋ ಶಾಂತವ್ವ, ನಿನ್ನ ಕೈಯಾರ ಕೊಟ್ರೆ, ನಿನ್ನ ಹೆಸರು ಏಳ್ಕೊಂಡ ಕುಡಿತೀನಿ' ಎಂದ.

'ಎಷ್ಟು ದಿವಸ ಕುಡಿತೀ ಹೇಳು. ನಿನ್ನ ಹೆಂಡ್ರು ಬರೋವರೆಗೂ – ಎಂದು ಪಾರ್ವತಿ ನಕ್ಕು ಹೇಳಿದಳು.

'ಅಹ್ಹಾ! ಪುಟ್ಟನಿಗೆ ಹೆಂಡ್ತಿ ಬರ್ತಾಳ! ಕಳ್ಳ ಹೇಳ್ಲೆ ಇಲ್ವಲ್ಲ.

ಪುಟ್ಟನಿಗೆ ಇದೆಲ್ಲಾ ಏನೆಂದು ಅರ್ಥವಾಗಲಿಲ್ಲ. ಕುಡಿಯಬೇಕೆಂದು ಕಾಫಿಯನ್ನು ಬಾಯಿಗೆ ಎತ್ತಿದನು, 'ಚಿಕ್ಕವ್ವಾ, ಇದೆಲ್ಲಾ ಏನು ತಮಾಷೆ' – ಎಂದು ಪ್ರಶ್ನಿಸಿ ತಲೆ ತಗ್ಗಿಸಿದ.

"ಪಾರ್ವತವ್ವ ಯೇಳ್ತಾರೆ – ನಾನೀಗ ಬರ್ತೀನಿ ಎಂದು ಮತ್ತೊಮ್ಮೆ ಪಾರ್ವತಿಗೂ ಹೇಳಿ ಹೊರಟಳು.

ಪಾರ್ವತಿ ಪುಟ್ಟನಿಗೆ ಹೇಳಿ ಪತ್ರ ಬರೆಸಿದಳು. ಜಾನಕಿಯ ಕರುಳು ಕರಗುವಂತೆ ಮನೆಯ ಪರಿಸ್ಥಿತಿಯನ್ನು ವಿವರಿಸಿ ಬರೆದಳು. ಶಂಕರ ಮನೆ ಬಿಟ್ಟು ಹೋಗಿರುವ ಸುದ್ದಿಯನ್ನು ತಿಳಿಸಿದ್ದಳು. ಹೆಣ್ಣು ಮಕ್ಕಳ ಮದುವೆಯ ವಿಚಾರವಾಗಿ ತುಂಬಾ ನೊಂದಿರುವಂತೆ ಬರೆಸಿದಳು. ತೊಂದರೆಯಾಗದಿದ್ದಲ್ಲಿ ಕೂಡಲೇ ಬರುವಂತೆ ಹೇಳಿದ್ದಳು. ಪುಟ್ಟ ಗುಟ್ಟಾಗಿ ಪಾರ್ವತಿ ಹೇಳಿದಷ್ಟನ್ನು ಬರೆದು ಟಪಾಲಿಗೆ ಹಾಕಿದ.

ಈ ಪತ್ರದ ವಿಚಾರ ಪುಟ್ಟ, ಪಾರ್ವತಿಯ ಹೊರತಾಗಿ ಬೇರೆ ಯಾರಿಗೂ ತಿಳಿಯಲಿಲ್ಲ. ಪಾರ್ವತಮ್ಮ ಪತ್ರ ಬರೆದ ಗಳಿಗೆಯಿಂದಲೇ, ಎದುರುತ್ತರಕ್ಕೆ ದಾರಿ ಕಾಯುತ್ತಿದ್ದಳು. ದಿನಗಳು ಕಳೆಯುವುದೂ ಕಷ್ಟವಾಯಿತು ಅವಳಿಗೆ.

ಹತ್ತು ದಿನಗಳಾದ ಮೇಲೆ ಜಾನಕಿಯಿಂದ ನಿರೀಕ್ಷಿಸಿದ ಪತ್ರ ಬಂದೇ ಬಂತು. ಪರಿಮಳ, ಶಾಂತ, ಯಾರೂ ಸದ್ಯಕ್ಕೆ ಹತ್ತಿರ ಇರಲಿಲ್ಲ. ಪಾರ್ವತಿಗೆ ಬರೆಯಲು ಶುದ್ಧವಾಗಿ ಬರುತ್ತಿರಲಿಲ್ಲವಾದರೂ, ನಿಧಾನವಾಗಿ ಓದಿಕೊಳ್ಳಲು ಬರುತ್ತಿತ್ತು. ಅದಕ್ಕೆ ಯಾವಾಗಲೂ ಬೇರೆಯವರಿಂದಲೇ ಪತ್ರ ಬರೆಸುವ ಹವ್ಯಾಸ ಇಟ್ಟುಕೊಂಡಿದ್ದಳು.

ರಾಜಪ್ಪನಿಗೆ ಮಗಳನ್ನು ಓದಿಸಬೇಕೆಂದಿದ್ದರೂ, ಸೀತಮ್ಮನ ವಿರೋಧದಿಂದ ಪಾರ್ವತಿ ಓದನ್ನು ನಿಲ್ಲಿಸಿದಳು. ಎರಡನೇ ತರಗತಿವರೆಗೆ ಮಾತ್ರ ಓದಿದಳು. ಮದುವೆಯಾದ ಹೊಸದರಲ್ಲಿ, ಗಂಡನಿಗೆ ಪತ್ರ ಬರೆಯಲೇಬೇಕಾಗಿ ಬಂದಾಗ ಒಂದೆರಡು

ಬಾರಿ ಬರೆದಿದ್ದಳು. ಆದರೆ ಚಂದ್ರಣ್ಣ ಸುಮ್ಮನಿರಬೇಕಲ್ಲ. ಪತ್ರದಲ್ಲಿನ ತಪ್ಪುಗಳನ್ನೆಲ್ಲಾ ಹುಡುಕಿ, ಅವಳ ಪ್ರಾಣ ತೆಗೆಯುತ್ತಿದ್ದ. ಸಮಯ ಸಿಕ್ಕರೆ ಸಾಕು, ಹಂಗಿಸುತ್ತಿದ್ದ. ಅಂದಿನಿಂದ ಪತ್ರ ಬರೆಯುವುದನ್ನೇ ನಿಲ್ಲಿಸಿ ಬಿಟ್ಟಿದ್ದಳು.

ಮೆಲ್ಲಗೆ ಪತ್ರ ಬಿಡಿಸಿ ಓದಿಕೊಂಡಳು. ಮುಖ್ಯವಾದ ವಿಚಾರಗಳಷ್ಟನ್ನೂ ಮತ್ತೆ ಮತ್ತೆ ಓದಿದಳು.

"ಚಿರಂಜೀವಿ ಪಾರ್ವತಿಗೆ.

ನಿನ್ನ ಅತ್ತಿಗೆಯ ಆಶೀರ್ವಾದಗಳು. ಚಂದ್ರೂವಿಗೂ ನನ್ನ ಆಶೀರ್ವಾದಗಳು. ನೀನು ಬರೆದ ಪತ್ರ ಸೇರಿತು. ವಿಷಯ ತಿಳಿಯಿತು. ಅಲ್ಲಿನ ಪರಿಸ್ಥಿತಿಗಳಿಗಾಗಿ ನನಗೆ ತುಂಬಾ ನೋವಾಯಿತು. ಚಂದ್ರು ಇಷ್ಟೆಲ್ಲಾ ಆಗುತ್ತಿದ್ದರೂ ಒಂದು ಮಾತನ್ನು ನನಗೆ ಬರೆಯಲಿಲ್ಲ. ಬಹುಶಃ ನಾನು ಅವನ ದೃಷ್ಟಿಯಲ್ಲಿ ಬೇರೆಯವಳೆನಿಸಿರಬೇಕು. ತಂದೆ ತಾಯಿಗಳಿಲ್ಲದ ನಮಗೆ, ನಮ್ಮ ನಮ್ಮ ಬಂಧುತ್ವ ತಪ್ಪುತ್ತದೆಯೇ? ಇದಕ್ಕೆ ಮೊದಲು ಬರೆದ ಪತ್ರದಲ್ಲಿ ನನ್ನ ಸೊಸೆಯರನ್ನು ಕಳಿಸಿಕೊಡೆಂದು ಹೇಳಿದ್ದೆ. ಆದರೆ ನನ್ನ ಕರೆಗೆ ಮರ್ಯಾದೆಯೇ ಇಲ್ಲದಂತೆ ಯಾರನ್ನೂ ಕಳಿಸಲಿಲ್ಲ. ಮನೆಯಲ್ಲಿ ಎಲ್ಲರೂ ಸೇರಿದ್ದರು. ನನ್ನ ಮಕ್ಕಳೂ, ಮೊಮ್ಮಕ್ಕಳೂ, ಪದ್ಮನ ಮಕ್ಕಳೂ ಎಲ್ಲರಿಂದ ಮನೆ ಮದುವೆ ಮನೆಯಂತೆ ಇತ್ತು. ಆದರೆ ನಿಮ್ಮಲ್ಲಿ ಯಾರೂ ಬರಲಿಲ್ಲವೆಂದು ಎಷ್ಟು ನೋವು ಪಟ್ಟುಕೊಂಡೆ ಗೊತ್ತಾ? ಚಂದ್ರುವಿಗೆ ನಾವೇನೂ ಸಂಬಂಧವಿಲ್ಲದಂತೆ ಆಡುತ್ತಾನೆ.

ಪಾರ್ವತಿ, ನೀನಾದರೂ ಅವನಿಗೆ ಬುದ್ಧಿ ಹೇಳಬಾರದೆ? ನನಗೆ ಗೊತ್ತು ಮಗನ ರೀತಿಯಿಂದ ಅವನ ಹೃದಯ ಸಿಡಿದಿರುತ್ತದೆ ಎಂದು. ಆದರೂ ನಾಲ್ಕು ಜನರೊಂದಿಗೆ ಬೆರೆತಾಗ ಮನಸ್ಸಿನ ಕ್ಲೇಶ ಕಡಿಮೆಯಾಗುತ್ತದೆ. ನಿನ್ನ ಪತ್ರ ನೋಡಿದಾಗಿನಿಂದಲೂ ನನ್ನೆದೆ ಕುದಿಯುತ್ತಿದೆ. ನೋಡಬೇಕೆಂದು ಕಾತರಿಸುತ್ತಿದೆ. ಮುಂದಿನ ಭಾನುವಾರ ಪ್ರಕಾಶನನ್ನು ಕರೆದುಕೊಂಡು ಬರುತ್ತೇನೆ. ವಿಷಯವನ್ನು ಚಂದ್ರುವಿಗೆ ತಿಳಿಸುವುದು.

ನನ್ನ ಸೊಸೆಯರಿಗೆ, ಆಶೀರ್ವಾದಗಳು.

ಇಂತು,

ಪ್ರೀತಿಯ ಅತ್ತಿಗೆ ಜಾನಕಿ

ಪಾರ್ವತಿ ಪತ್ರ ಓದುತ್ತಿದ್ದಂತೆ, ತುಂಬಿ ಬಂದ ಕಂಬನಿಯನ್ನು ಸೆರಗಿನ ತುದಿಯಿಂದ ಒರೆಸಿಕೊಂಡಳು. ಇಷ್ಟು ಒಳ್ಳೆಯವಳಾದ, ಹಾಲಿನಂತಹ ಹೃದಯವುಳ್ಳ ಅತ್ತಿಗೆಯನ್ನು ಗಂಡನೇಕೆ ಮನ್ನಿಸುತ್ತಿಲ್ಲ? ಎಂದು ಯೋಚಿಸಿದಳು.

ಜಾನಕಿಯಂಥವರಿರುವಾಗ ತನ್ನ ಮಕ್ಕಳ ಚಿಂತೆ ಅರ್ಥವಿಲ್ಲದ್ದು! ತಮ್ಮನಿಗಾಗಿ ಆಕೆ ಸ್ವಲ್ಪ ತ್ಯಾಗವನ್ನು ಮಾಡಲಾರಳೇ? ತನ್ನ ಹೆಣ್ಣು ಮಕ್ಕಳಲ್ಲಿ ಯಾರನ್ನಾದರೂ, ಮಗನಿಗೆ ತಂದುಕೊಂಡು, ಕಡಿದು ಹೋಗುವ ಬಂಧುತ್ವವನ್ನು ಮುಂದುವರೆಸಲಾರಳೇ? ಎಂದು ಯೋಚಿಸಿದಷ್ಟೂ, ಅವಳ ಮನಸ್ಸು ಆಸೆ-ನಿರಾಸೆಗಳ ಮಧ್ಯೆ ತುಯ್ದಾಡುತ್ತಿತ್ತು. ಕೊನೆಗೆ, ಯಾವುದಕ್ಕೂ ಅತ್ತಿಗೆ ಬರಲಿ' ಎಂದು ಸಮಾಧಾನ ತಂದುಕೊಂಡಳು.

ಶಾಂತ ಬೇಗ ಬೇಗ ಮನೆ ಕೆಲಸ ಮಾಡಿದಳು. ಹೊರಗೆ ಹೋಗುವುದೇ ಅಪರೂಪವಾಗಿತ್ತು ಅವಳಿಗೆ. ಆದರೆ ಕಸೂತಿ ಕಲಿಯುವ ನೆಪವೊಂದು ಇತ್ತೀಚೆಗೆ ಸಿಕ್ಕಿತ್ತು. ಊರ ಮುಂದಿನ ಗುಡಿಯ ಅಂಗಳದಲ್ಲಿ ಒಬ್ಬ ಹೆಂಗಸು ಬಂದು, ಆ ಊರಿನ ಹೆಣ್ಣು ಮಕ್ಕಳಿಗೆ ಕಸೂತಿ ಹೇಳಿಕೊಡುತ್ತಿದ್ದಳು. ಆ ಗುಡಿಗೆ ಸಮೀಪದಲ್ಲೇ ಒಂದು ಸಣ್ಣ ಗುಡಿಸಲನ್ನು ನಿರ್ಮಿಸಿ ಕೊಂಡಿದ್ದಳು. ಸಮಾಜ ಸೇವಕಿಯಂತೆ! ಸರ್ಕಾರ ಅವಳಿಗೆ ಈ ಕೆಲಸಕ್ಕೆ ಏನೋ ತೀರಾ ಅಲ್ಪ ಸಂಭಾವನೆ ಕೊಡುತ್ತಿತ್ತು. ಆದರೆ ಸೇವೆಯ ಉದ್ದೇಶ ಇದ್ದುದರಿಂದ, ಈ ಹೆಂಗಸು ಈ ಹಳ್ಳಿಯಲ್ಲಿರಲು ಒಪ್ಪಿಕೊಂಡು ಬಂದಿದ್ದಳು.

ಮೊದ ಮೊದಲು ಯಾರೂ ಅವಳ ಶಾಲೆಗೆ ಬರಲಿಲ್ಲ. ಮನೆ ಮನೆಗೂ ಹೋಗಿ ತಿಳಿಸಿ ಹೇಳಿದ್ದಕ್ಕೆ ಒಂದೆರಡು ದೊಡ್ಡ ಮನೆಯ ಹೆಣ್ಣು ಮಕ್ಕಳು ಕಲಿಯಲು ಮುಂದಾದರು. ಇನ್ನೂ ಸ್ವಲ್ಪ ದಿವಸಕ್ಕೆ ಸಾಕಷ್ಟು ಮಂದಿ ಸೇರಿದರು. ಅವರಿಗೆಲ್ಲಾ ತುಂಬಾ ಹಿಡಿಸಿತು. ಮನೆಗಳಲ್ಲೇ ಕೊಳೆಯ ಬೇಕಾಗಿದ್ದ ಅವರಿಗೆ ಶಾಲೆಗೆ ಹೋಗುವ ನೆಪದಲ್ಲಿ ಸ್ವಲ್ಪ ಸ್ವಾತಂತ್ರ್ಯ ಸಿಕ್ಕಿತು.

ಪರಿಮಳಗೆ ಸುದ್ದಿ ಗೊತ್ತಾದದ್ದೇ ಪೀಡಿಸತೊಡಗಿದಳು. ಶಾಂತ ತಾನೂ ಹೋಗುವುದಾಗಿ ಬೇಡಿಕೊಂಡಳು.

ಪಾರ್ವತಮ್ಮ ಒಪ್ಪಿಗೆ ಕೊಟ್ಟದ್ದೇ ಸಾಕು, ಸ್ವತಂತ್ರ ಪಕ್ಷಿಗಳಂತೆ ಸಂತೋಷದ ರೆಕ್ಕೆ ಬಡಿಯುತ್ತಾ ಹೋಗಿ ಬರತೊಡಗಿದರು. ಚಂದ್ರಣ್ಣನಿಗೆ ಇಷ್ಟವಿರಲಿಲ್ಲ. ಆದರೆ ಪಾರ್ವತಿಯೇ ವಾದಿಸಿದಳು.

'ಮದುವೆಯಿಲ್ಲ, ಮುಂಜಿಯಿಲ್ಲ, ಈಗಲೇ ಸಂಸಾರ ತಲೆಗೆ ಕಟ್ಟಿ ಕಟ್ಟಿಕೊಂಡು ಬೆಳಗಿನಿಂದ ಸಂಜೆವರೆಗೂ ದುಡಿಯುತ್ತಲೇ ಇದ್ದರೆ, ಅವರಿಗೆ ಜೀವನದಲ್ಲಿ ನಾವು ಏನು ಸುಖ ಕೊಟ್ಟಂತೆ ಆಯಿತು? ಊರಿನ ಹೆಣ್ಣು ಮಕ್ಕಳೆಲ್ಲಾ ಹೋಗಿ ಕಲಿಯುತ್ತಿರಬೇಕಾದರೆ, ನಮ್ಮದು ಮಹಾ ದೊಡ್ಡಸ್ತಿಕೆ. ಒಂದೆರಡು ಗಳಿಗೆ ಮನೆಯ ಯೋಚನೆಯನ್ನು ಬಿಟ್ಟು, ನೆಮ್ಮದಿಯಾಗಿ ಕಲಿತುಬರಲಿ ಬಿಡಿ–ಎಂದಳು.

ನಿನಗೆ ಮೈ ಸರಿ ಇಲ್ಲದಿರುವಾಗ, ಇಬ್ಬರೂ ಹೊರಟು ಬಿಟ್ಟರೆ ಹೇಗೆ? ಪ್ರತಿವಾದಿಸಿದ ಚಂದ್ರಣ್ಣ.

ಶಾಂತ ಈ ಮಾತನ್ನು ಕೇಳಿಸಿಕೊಂಡಳು.

'ಪರವಾಗಿಲ್ಲ ಬಿಡಮ್ಮ. ಪರಿಮಳ ಹೋಗಿ ಕಲಿತು ಬರಲಿ. ನಾನು ಮನೆ ನೋಡಿಕೊಂಡು ಇರ್ತೀನಿ' ಎಂದಳು.

'ಅದೇನೂ ಬೇಡ. ನಿನ್ನ ಪಾಡಿಗೆ ನೀನು ಹೋಗು. ಒಂದೆರಡು ಗಂಟೆಗಳಲ್ಲಿ ಪ್ರಪಂಚ ಮುಳುಗಿ ಹೋಗುವುದಿಲ್ಲ. ಇಲ್ಲಿ ನಾನು ಸಾಯುವುದಿಲ್ಲ.'

ಬೇಡಮ್ಮ. ಅಣ್ಣ ಹೇಳಿದ್ದು ನಿಜ. ನಿನಗೆ ಮೈ ಸರಿಯಿಲ್ಲದಿರುವಾಗ. ನಿನ್ನೊಬ್ಬಳನ್ನೆ ಮನೆಯಲ್ಲಿ ಬಿಟ್ಟು ಹೋಗೋದು ಬೇಡ.

'ನೀ ಸುಮ್ಮನೆ ಬಾಯಿ ಮುಚ್ಚಿಕೊಂಡು ಹೋಗಿ ಬಾ. ಪರಿಮಳ ಕಲಿಯುವುದೇನು ಬಂತು? ಅವಳ ತಲೆ! ಅವಳಿಗೆ ಏನಿದ್ದರೂ ಮನೆಯಿಂದ ಹೊರಗೆ ಹೋಗಲು ಒಂದು ನೆಪ ಅಷ್ಟೇ. ನೀನು ಕಲಿತು ಬಾ.' ಎಂದು ಆಜ್ಞಾಪಿಸಿದಳು.

ಪಾರ್ವತಿಯ ವಾದಕ್ಕೆ ಚಂದ್ರಣ್ಣ, ಶಾಂತ, ಇಬ್ಬರೂ ಸೋತು ಸಪ್ಪಗಾದರು.

ಶಾಂತ ಪಾರ್ವತಿಗೆ 'ಹೋಗಿ ಬರುತ್ತೇನೆಂದು ಹೇಳಿದಳು. ಹೊರಗಿನಿಂದ ಪರಿಮಳ ಕೂಗಿದಳು – ಆಯ್ತೇನೆ ಶಾಂತಕ್ಕ? ಎಷ್ಟು ಹೊತ್ತು ಮಾಡ್ತೀಯೇ? ಎಂದೇ ಸಿಡಿಮಿಡಿಗೊಂಡಳು. ಊರಿಗೆ ಮುಂಚೆ ಸಿದ್ಧವಾಗಿ ನಿಂತು ಬಿಡುತ್ತಿದ್ದಳು. ಪಾರ್ವತಿ ಇನ್ನು ಕೆಲಸದಲ್ಲಿರಬೇಕಾದರೇನೆ, ಪರಿಮಳ ಜಡೆ ಹೆಣೆದುಕೊಂಡು ಮುಖ ತೊಳೆದು ಅಲಂಕರಿಸಿಕೊಂಡು ತುದಿಗಾಲಲ್ಲಿ ನಿಂತುಬಿಟ್ಟಳು. ಪರಿಮಳ ಅವಸರಪಡಿಸಿದ್ದು ಕೇಳಿ, ಅಬ್ಬಬ್ಬಬ್ಬ 'ಅದೇನು ಆತುರ ಕಣೆ! ಒಬ್ಬೆ ಏಳು ತಿಂಗಳಲ್ಲಿ ಹುಟ್ಟಿದವರಂಗೆ ಆಡ್ತಿದ್ದೀಯಲ್ಲೇ ಎಂದು ಬೈಯುತ್ತಲೆ ಬೀದಿಗಿಳಿದಳು.

ಇಬ್ಬರೂ ದಾರಿಯುದ್ದಕ್ಕೂ ಮೌನವಾಗೇ ನಡೆದರು. ಪರಮಳಾಗೆ ಹಿಂಸೆಯಾಗಿತ್ತು. ಮಾತಿಲ್ಲದೆ ಇರುವುದೆಂದರೆ ಅವಳಿಗೆ ಮಹಾ ಸಂಕಟ. ಯಾರಾದರೂ ಮಾತಿಗಿರಲೇಬೇಕು. ಆದರೆ ಈ ಶಾಂತ ಮಾತಿಗಿಂತ ಮೌನವನ್ನೇ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ತಲೆಯೆಲ್ಲಾ ಮಾತಾಡುವ ಪರಿಮಳಳ ಜೊತೆಗೆ ಮಾತಿಗಾರಂಭಿಸಿ ಬಿಟ್ಟರೆ ಮುಗಿಯುವುದೇ ಇಲ್ಲ. ತಲೆನೋವು ಬರಿಸಿ ಬಿಡುತ್ತಾಳೆ. ಅದಕ್ಕೆ ಶಾಂತ ಮಾತೇ ತೆಗೆಯುತ್ತಿರಲಿಲ್ಲ. ಅವಳೊಂದಿಗೆ ಯಾರೂ ಸಿಕ್ಕದಿದ್ದರೆ ಗೋಡೇನಾದರೂ ಮಾತಾಡಿಸುತ್ತಾಳೆ.

ಇನ್ನು ಪರಿಮಳಳ ಸಹನೆ ಮೀರಿತು. ಮಾತಿಗಾರಂಭಿಸಿದಳು.

'ಲೇ ಶಾಂತಕ್ಕ, ನಿಂಗೆ ಗೊತ್ತಾ ವಿಷಯ?'

'ಏನು ವಿಷಯಾನೇ?'

'ಅದೇ ಪುಟ್ಟಣ್ಣನಿಗೆ ಹೆಣ್ಣು ನೋಡಿದ್ದಾರಂತೆ. ಅವರು ಈ ಶುಕ್ರವಾರ ಪುಟ್ಟಣ್ಣನ ಮನೆಗೆ ಬರ್ತಾರಂತೆ' ಎಂದಳು.

'ನಿನಗ್ಯಾರೇ ಹೇಳಿದ್ರು ಇದ್ನೆಲ್ಲಾ?'

'ಅದೇ ಆ ರಂಗಕ್ಕನ ಮಕ್ಕಳು ಚೋಟುದ್ದ ಹುಡುಗಿ ಗೌರಿ ಇದ್ದಾಳಲ್ಲ. ಅವಳೇ ಹೇಳಿದ್ಲು. 'ನಮ್ಮ ಪುಟ್ಟಣ್ಣನಿಗೆ ಮದ್ವೆ, ನಮಗೆಲ್ಲಾ ಅತ್ತಿಗೆ ಬರ್ತಾಳೆ. ಒಸಾ ಬಟ್ಟೆ ಸಿಗ್ತೈತೆ' ಅಂತ ಕುಣೀತಿದ್ಲು ನಾನು ಕರೆದು ಕೇಳಿದ್ದಕ್ಕೆ ಹೂ! ಅಂದ್ಲು.

'ಅವನಿಗೆ ಮದುವೆಯಾದರೆ ನಿನಗೇನು ಬಂತು?'

'ಏನ್ಬರಬೇಕು? ಸಂತೋಷ ಆಗೋದಿಲ್ವ? ನಂಪುಟ್ಟನಿಗೆ ಮದುವೇಂದ್ರೆ?

'ಆಗುತ್ತೆ ಮಹರಾಯಿತು, ನೀನು ಸ್ವಲ್ಪ ಸುಮ್ಮನಿರು, ನನ್ನ ತಲೆ ಬಿಸಿಯಾಗ್ತಿದೆ ಎಂದು ಅಂಗಲಾಚಿದಳು.

'ಸರಿ ಬಿಡೆ ನಾನು ಮಾತಾಡಿದರೆ ನಿಂಗೆ ಸೇರೊಲ್ಲ' ಎಂದು ಹೇಳುತ್ತಾ ಸಿಟ್ಟಿನಿಂದ ದೂರ ಸರಿದಳು. ಇಬ್ಬರೂ ಒಬ್ಬರ ಹಿಂದೆ ಒಬ್ಬರು ಮೂರು ನಾಲ್ಕು ಅಡಿಗಳ ಅಂತರದಲ್ಲಿ ನಡೆಯತೊಡಗಿದರು.

ಶಾಲೆ ಗುಡಿ ಬಂತು. ಗುಡಿಯ ಅಂಗಳ ಪ್ರವೇಶಿಸುತ್ತಿದ್ದಂತೆ, ಜಗುಲಿ ಮೇಲೆ ಒಬ್ಬ ವ್ಯಕ್ತಿ ಕೂತಿರುವುದು ಕಣ್ಣಿಗೆ ಬಿತ್ತು. ದಟ್ಟವಾಗಿ ಬೆಳೆದ ಪೊದೆ ಗಡ್ಡ ಮೀಸೆಗಳು ಕಣ್ಣುಗಳು ಕುಳಿ ಬಿದ್ದಿವೆ. ಚಿಂದಿ ಚಿಂದಿಯಾದ ಬಟ್ಟೆ ಮೈಮೇಲೆ, ತಲೆಯ ಮೇಲಿನ ಕೂದಲೆಲ್ಲಾ ಜಡೆಗಟ್ಟಿದೆ. ಚಳಿಗೆ ನಡುಗುತ್ತಿದ್ದಾನೆ. ಮಧ್ಯಾಹ್ನದ ಬಿಸಿಲಲ್ಲಿ 'ಥಳಿ' ಎಂದು ನಡುಗುತ್ತಿರುವಾತನನ್ನು ನೋಡಿ ಶಾಂತ ನಿಂತಳು. ಪರಿಮಳ ಇದ್ಯಾವುದನ್ನು ಲೆಕ್ಕಿಸದೆ ಒಳಗೆ ಹೋದಳು. 'ಪಾಪ ಜ್ವರ ಬರುತ್ತಿರಬೇಕು' ಎಂದುಕೊಂಡಳು. ತನ್ನನ್ನೇ ಏನೂ ಇಲ್ಲ. ಹೊದಿಸುವುದಕ್ಕೆ. ಯಾರೊ, ಏನೋ ಎಂದುಕೊಂಡಳು. ತನ್ನನ್ನೇ ನೋಡುತ್ತಾ ನಿಂತ ಶಾಂತಳನ್ನು ನೋಡಿ ಆ ವ್ಯಕ್ತಿಗೆ ವಿಚಿತ್ರವೆನಿಸಿತು. ತಾನೂ ನೋಡಿದ. ಸೆಳೆದು ಹೋಗುತ್ತಿರುವ ಕಣ್ಣುಗಳು, ಶಾಂತಳ ಮುಖ ಅಸ್ಪಷ್ಟವಾಗಿತ್ತು ಆತನಿಗೆ. ಆದರೂ ಆ ವ್ಯಕ್ತಿ ಈ ಮುಖವನ್ನು ಎಲ್ಲೋ ನೋಡಿರುವೆನೆಂದುಕೊಂಡ. ಉಹುಂ! ತಿಳಿಯಲಿಲ್ಲ. ನಡುಗುತ್ತಲೆ ಎದ್ದು ಹೋಗಲು ಪ್ರಯತ್ನಪಟ್ಟು ಬೀಳುತ್ತಿದ್ದ. ಕೊನೆಯ ಬಾರಿಗೆ ತ್ರಾಣವಿಲ್ಲದೆ ತಲೆ ಸುತ್ತಿ ಬಂದು ದೊಪ್ಪೆಂದು ಬಿದ್ದ.

ಶಾಂತ, 'ಅಯ್ಯೋ ಬನ್ನಿ ಬನ್ನಿ' ಎಂದು ಕಿರುಚಿದಳು.

ಒಳಗಿದ್ದ ಹೆಣ್ಣು ಮಕ್ಕಳೆಲ್ಲಾ ಏನಾಯಿತೋ ಎಂದು ಗಾಬರಿಯಿಂದ ಮಾಡುವ ಕೆಲಸಗಳನ್ನೆಲ್ಲಾ ಹಾಗೆ ಬಿಟ್ಟು ಓಡಿ ಬಂದರು. ಅವರೊಂದಿಗೆ ಅವರ ಟೀಚರೂ ಬಂದಳು.

ಅಲ್ಲಿ ನೆರೆದಿದ್ದ ಹೆಣ್ಣು ಮಕ್ಕಳನ್ನೆಲ್ಲಾ ಚದುರಿಸಿದಳು. ತನ್ನ ಮನೆ ಹತ್ತಿರವೇ ಇದ್ದುದರಿಂದ ಓಡಿ ಹೋಗಿ ನೀರನ್ನು ತಂದಳು. ಆ ವ್ಯಕ್ತಿಯ ಮುಖದ ಮೇಲೆ ಚಿಮುಕಿಸಿದಳು. ಅಲ್ಲಿದ್ದ ಪುಸ್ತಕದಿಂದ ಗಾಳಿ ಹಾಕಿದಳು. ಆ ವ್ಯಕ್ತಿ ಸ್ವಲ್ಪ ಹೊತ್ತಾದ ಮೇಲೆ ಕಣ್ಣು ಬಿಟ್ಟು ಸುತ್ತಲೂ ನೋಡಿದ. ಯಾರಿಗಾಗೋ ಹುಡುಕಾಡುತ್ತಿದ್ದಂತಿತ್ತು. ಅಲ್ಲಿರುವವರೆಲ್ಲಾ ಒಬ್ಬರನ್ನೊಬ್ಬರು ನೋಡಿಕೊಂಡರು. ಶಾಂತ ಬೆದರು ಕಂಗಳಿಂದ ನೋಡುತ್ತಿದ್ದಳು.

ಆ ವ್ಯಕ್ತಿಯ ಕಣ್ಣು ಕೊನೆಗೆ ಶಾಂತಳ ಮೇಲೆ ನೆಟ್ಟಿತು. ಆಗಲೇ ಗುಂಪಿನಲ್ಲಿ ಪಿಸ ಪಿಸ ಮಾತು ಶುರುವಾಯಿತು. 'ಶಾಂತ....ಶಾಂ.....ತ' ಎಂದು ಕೂಗಿದ. ಆ ವ್ಯಕ್ತಿಯ ಕ್ಷೀಣವಾದ ದನಿ ಕೇಳಿ ಎಲ್ಲರೂ ಸ್ತಬ್ಧರಾದರು. ಶಾಂತಳಿಗೆ ಗಾಬರಿಯಾಯಿತು. ಇದ್ಯಾರಿದು ತನ್ನ ಹೆಸರು ಹಿಡಿದು ಹೋಗಿ ಅವಮಾನ ಮಾಡ್ತಿರೋದು ಎನಿಸಿ ಅಲ್ಲಿ ನಿಲ್ಲಲು ಮನಸ್ಸು ಬರಲಿಲ್ಲ. ಮೆಲ್ಲಗೆ, 'ಪರಿ, ಬಾರೆ ಹೋಗೋಣ. ನಂಗೆ ಭಯವಾಗ್ತಿದೆ" ಎಂದು ಕರೆದಳು. ಇಬ್ಬರೂ ಮೆಲ್ಲಗೆ ಗುಂಪಿನಿಂದ ಕದಲಿದರು. ಅದನ್ನು ಗಮನಿಸಿದ ವ್ಯಕ್ತಿ ಮತ್ತೆ ಶಾಂತಳ ಹೆಸರಿಡಿದು ಕೂಗಿದ. ಅಲ್ಲಿಯೇ ನಿಂತಿದ್ದ ಟೀಚರು ಶಾಂತಳ ಮುಖದಲ್ಲಿದ್ದ ಭಯವನ್ನು ಆ ವ್ಯಕ್ತಿಯ ಕಣ್ಣುಗಳಲ್ಲಿದ್ದ ವೇದನೆಯನ್ನು ಗಮನಿಸಿದಳು. ಇದರಲ್ಲಿ ಏನೋ ಅರ್ಥವಿದೆ ಎನಿಸಿ, ಅಲ್ಲಿದ್ದವರನ್ನೆಲ್ಲಾ ಮನೆಗಳಿಗೆ ಕಳುಹಿಸಿಬಿಟ್ಟಳು. ಶಾಂತ ಪರಿಮಳರನ್ನು ಅಲ್ಲಿಯೇ ಉಳಿಯುವಂತೆ ಸನ್ನೆ ಮಾಡಿದಳು.

ಎಲ್ಲರೂ ಹೊರಟು ಹೋದ ಮೇಲೆ ಟೀಚರು ವ್ಯಕ್ತಿಯ ಬಳಿಗೆ ಹೋಗಿ ನೋಡಿದಳು. ನಿಜವಾಗಿಯೂ ಸಾಯುವಂಥ ಜ್ವರ. ಹತ್ತಿರ ಹೋದರೇನೇ ಆ ಕಾವಿನ ಅನುಭವವಾಗುತ್ತದೆ.

'ಶಾಂತ ನಿನಗೆ ಈ ವ್ಯಕ್ತಿಯ ಪರಿಚಯ ಇದೆಯಾ?' ಎಂದು ಟೀಚರು ಕೇಳಿದಳು.

'ಖಂಡಿತ ನನಗೆ ಗೊತ್ತಿಲ್ಲ ಟೀಚರ್. ಈತ ಯಾಕೆ ನನ್ನ ಹೆಸರು ಹಿಡಿದು ಕೂಗುತ್ತಿದ್ದಾನೋ ತಿಳಿಯದು? ಎಂದು ಗಳಗಳನೆ ಅಳತೊಡಗಿದಳು.

"ಅರೆ ಇದಕ್ಕೆಲ್ಲಾ ಯಾಕೆ ಅಳ್ತಿದ್ದಿ? ಏನಾಯ್ತೂಂತ? ಅರ್ಥವಾಗದೆ ಪ್ರಶ್ನಿಸಿದಳು.

"ಅವರೆಲ್ಲಾ ಏನಾದರೂ ಅಂದ್ಕೊತಾರೆ" ಹೆದರಿದಂತೆ ಹೇಳಿದಳು.

"ಸುಮ್ನಿರಕ್ಕ ಯಾರಂದುಕೊಂಡರೆ ನಮಗೇನು? ಪರಿಮಳ ಮಧ್ಯ ಹೇಳಿದಳು.

"ಶಾಂತ ಇಲ್ಲಿ ಬಾ ಸ್ವಲ್ಪ ಹತ್ತಿರ ಬಂದು ನೋಡು. ನಿನಗೆ ಗುರುತು ಮರೆತಿದ್ದರೂ ಇರಬಹುದು. ಹತ್ತಿರದಿಂದ ನೋಡಿದರೆ ಪರಿಚಯ ಸಿಗಬಹುದು" ಎಂದು ಪುಸಲಾಯಿಸಿದಳು.

'ನಾನು ಬರೊಲ್ಲ, ನನಗೆ ಭಯವಾಗುತ್ತೆ ಎಂದಳು ಶಾಂತ.

ಕ್ಷಣ ಕ್ಷಣಕ್ಕೂ ಆ ವ್ಯಕ್ತಿಯ ಸ್ಥಿತಿ ಕೆಡುತ್ತಿತ್ತು. ಟೀಚರು ಒತ್ತಾಯದಿಂದ ಶಾಂತ, ಪರಿಮಳ ಇಬ್ಬರನ್ನು ಆ ವ್ಯಕ್ತಿಯ ಬಳಿಗೆ ಸೆಳೆದು ತಂದಳು. ಶಾಂತ ಪರಿಮಳ ಗಮನಿಸುತ್ತಿದ್ದರು. ಆ ವ್ಯಕ್ತಿ ಕಣ್ಣು ಮುಚ್ಚಿಕೊಂಡು ಕನವರಿಸುತ್ತಿದ್ದ.....ನಿನ್ನ ಬಿಟ್ಟು ಹೋಗೋಲ್ಲಮ್ಮ....ಈಗಲೇ ನನಗೆ ಅಪ್ಪಣೆಯಿಲ್ಲ. ಅಪ್ಪ ಸಿಟ್ಟಾಗ್ತಿದ್ದಾರೆ....ನೋಡು ನೋಡು.....ಕಿಡಿಕಾರುವ ಕಣ್ಣು....ಶಾಂತ....ಪರಿ ಬನ್ನಿರೇ....ನಾನು.....ನಾ....ನು ಸತ್ತೆ.....ಎಂದು ಕಿರುಚಿದ.

ಶಾಂತ ಪರಿಮಳರಿಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಅವರಿಗೆ ಮನೆ ಬಿಟ್ಟು ಹೋದ ಅಣ್ಣ ಶಂಕರನಿರಬೇಕೆನಿಸಿತು. ಸ್ವಲ್ಪ ಧೈರ್ಯ ತಂದುಕೊಂಡು 'ಅಣ್ಣ, ಶಂಕರಣ್ಣ' ಎಂದು ಕರೆದರು. ಆ ಕೂಗು ಸಂಜೀವಿನಿಯಂತೆ ಕೆಲಸ ಮಾಡಿತು. ಸೋತ ಕಣ್ಣು ರೆಪ್ಪೆಗಳನ್ನು ಕಷ್ಟದಿಂದ ಬಿಡಿಸಿದ. ತನಗೆ ಹತ್ತಿರದಲ್ಲಿ ನಿಂತಿದದವರಿಬ್ಬರನ್ನೂ ನೋಡುತ್ತಿದ್ದಂತೆ ಮುಖ ಅರಳಿತು. ಶಾಂ....ಶಾಂತ.....ನಾ.....ನು....ಶಂಕರ" ಎಂದು ತೊದಲಿದ.

ಶಾಂತ, ಪರಿಮಳ ಇಬ್ಬರೂ ಈಗ ಅಳುತ್ತಿದದರು. 'ಅಪ್ಪ' ನನ್ನ ಮಗ ಎಲ್ಲೋ ಸತ್ತು ಹೋಗಿರಬೇಕು' ಎಂದಿದ್ದ. ಈಗ ನೋಡಿದರೆ ಅಣ್ಣ ಬದುಕಿದ್ದಾನೆ. ತಿಳಿಸಿದರೆ ಅಪ್ಪ ಇವನನ್ನು ಮನೆಗೆ ಸೇರಿಸುತ್ತಾರೆಯೇ? ಎಂದಾಲೋಚಿಸಿ ಭಯಪಟ್ಟಳು ಶಾಂತ.

ಟೀಚರು ಅರ್ಥವಾಗದೆ ಅವರನ್ನೇ ಕೇಳಿದಳು 'ಇದು ಯಾರು ಈ ವ್ಯಕ್ತಿ ಶಾಂತ?'

'ನಮ್ಮಣ್ಣ ಟೀಚರ್' ಪರಿಮಳ ಉತ್ತರಿಸಿದಳು.

'ಏನು ನಿಮ್ಮಣ್ಣ? ಯಾಕೆ ಮನೇಲಿ ಇರಲಿಲ್ಲವಾ?

'ಇಲ್ಲ ಮನೆ ಬಿಟ್ಟು ಹೋಗಿದ್ದ. ತುಂಬಾ ದಿವಸವಾಗಿತ್ತು – ಈಗಲೇ ನೋಡಿದ್ದು ಒಂದೆರಡು ವರ್ಷವಾದ ಮೇಲೆ. ಅದಕ್ಕೆ ಗುರುತು ಹತ್ತಲಿಲ್ಲ. ಎಂದು ವಿವರಿಸಿದಳು.

'ಹಾಗಾದರೆ ನಿಮ್ಮ ಅಣ್ಣನನ್ನು ಕರೆದೊಯ್ಯುತ್ತೀರಾ? ಎಂದು ಪ್ರಶ್ನಿಸಿದ್ದಕ್ಕೆ ಪರಿಮಳ, ಶಾಂತಳ ಮುಖ ನೋಡಿದಳು.

'ಮನೆಗೆ ತಿಳಿಸಿ ಬಂದು ಕರೆದೊಯ್ಯುತ್ತೇವೆ ಎಂದಳು ಶಾಂತ.

'ಹಾಗೆ ಮಾಡಿ ಅಲ್ಲಿಯವರೆಗೆ ನಾನು ಇಲ್ಲೇ ಕಾದಿರುತ್ತೇನೆ. ಆದರೆ ನೀವು ಸ್ವಲ್ಪ ಕಾಫಿ ಏನಾದರೂ ಕುಡಿಸುವ ಹಾಗಿದ್ದರೆ ನೋಡಿ, ಈಗಲೇ ಮನೆಗೆ ಹೋಗಿ ತಂದ್ಬಿಡ್ತೀನಿ.'

'ಹೂಂ' – ಎಂದಳು ಶಾಂತ.

ಟೀಚರ್ ಮನೆಗೆ ಹೋಗಿ ಕಾಫಿ ತಂದು ಕೊಟ್ಟಳು. ಶಾಂತ ಪರಿಮಳ ಇಬ್ಬರೂ ಸೇರಿ ಆತನಿಗೆ ಕಾಫಿ ಕುಡಿಸಿದರು. ತೃಪ್ತಿಯ ಅನುಭವವಾದಂತೆ ಆತ ಕಾಣಿಸಿದ. ಮತ್ತೆ ಅಲಲೇ ಮಲಗಿಸಿದರು. ಆದರೆ ಶಂಕರ,

'ನಿಮ್ಮ ಜೊತೆಗೇ ಬರುತ್ತೇನೆ ಎಂದ.

'ಬೇಡಣ್ಣ, ನಿನಗೆ ನಡೆಯಲು ಆಗುವುದಿಲ್ಲ. ನೀನು ಇಲ್ಲೇ ಇರು. ನಾವು ಹೋಗಿ ಅಪ್ಪನನ್ನು ಕಳಿಸ್ತೀನಿ.'

'ಬೇಡ ಬೇಡ ಅಪ್ಪನಿಗೆ ನನ್ನ ಮೇಲೆ ಸಿಟ್ಟು ನನಗಾಗಿ ಬರುವುದಿಲ್ಲ. ಅದಕ್ಕೆ ನಾನೇ ಬರುತ್ತೇನೆ ನಿಧಾನವಾಗಿ ನಡೆದುಕೊಂಡು 'ಬೇಡಾ' ಅನ್ನಬೇಡ ಶಾಂತ– ಎಂದು ಅಂಗಲಾಚಿದ.

ಕೊನೆಗೆ ಶಾಂತ ಪರಿಮಳರು ಅವನ ಮಾತಿಗೆ ಒಪ್ಪಲೇಬೇಕಾಯಿತು. ಟೀಚರು ಇವರಿಬ್ಬರೂ ಸೇರಿ ಕಷ್ಟಪಟ್ಟು ಜಗುಲಿಯಿಂದ ಇಳಿಸಿ ನಿಲ್ಲಿಸಿದರು. ಕಾಲುಗಳು ಕಂಪಿಸುತ್ತಿದ್ದವು. ಆದರೂ ನಿರ್ಧಾರ, ಅವನನ್ನು ನಿಶ್ಯಕ್ತಿಯನ್ನು ಮರೆಯುವಂತೆ ಮಾಡಿತು. ಇಬ್ಬರು ತಂಗಿಯರ ಭುಜಗಳ ಮೇಲೂ ಕೈಗಳನ್ನೂರಿ ಹೆಜ್ಜೆಯ ಮೇಲೆ ಹೆಜ್ಜೆ ಹಾಕಿ ನಡೆದ.

ಪಾರ್ವತಮ್ಮ ಬಾಗಿಲಲ್ಲೇ ಕಾದಿದಳು. ಯಾವಾಗಲೂ ಬರುವುದಕ್ಕಿಂತ ಈ ದಿನ ತುಂಬಾ ತಡವಾಯಿತೆಂದು, ಶಾಂತ, ಪರಿಮಳರ ದಾರಿ ನೋಡುತ್ತಿದ್ದಳು. ಎದೆಯ ಬಡಿತ ಜೋರಾಗುತ್ತಿತ್ತು. ಎಂದೂ ತಡ ಮಾಡದಿದ್ದ ಇವರೇಕೆ ಇಷ್ಟು ಹೊತ್ತು ಮಾಡುತ್ತಿದ್ದಾರೆ ಇವತ್ತು? ಅವರು ಬಂದರೆ 'ಖಂಡಿತ ಬೈಯ್ಯುತ್ತಾರೆ. ಏನು ಗ್ರಹಚಾರ ಕಾದಿದೆಯೋ! ದೇವರೆ' ಎಂದುಕೊಳ್ಳುತ್ತಿದ್ದಳು.

ದೂರದಲ್ಲಿ ಅವರು ಬರುವುದು ಅಸ್ಪಷ್ಟವಾಗಿ ಕಾಣಿಸಿತು. 'ಮಧ್ಯದಲ್ಲಿ ಯಾರೋ ಇರುವಂತಿದೆಯಲ್ಲಾ! ಎಂದು ಯೋಚಿಸುತ್ತಿರುವಷ್ಟರಲ್ಲಿ ಅಮ್ಮ ಬಾಮ್ಮ ಬೇಗ– ಇಲ್ಲಿ.....ಅಣ್ಣ ಬಂದಿದ್ದಾನೆ ; ಅಣ್ಣ ಬಂದಿದ್ದಾನೆ' ಎಂದು ಕಿರುಚಿದಳು ಪರಿಮಳ. ಪಾರ್ವತಮ್ಮ ಕದಲಲಿಲ್ಲ ಈ ಸುದ್ದಿಯನ್ನು ಕೇಳಿ ಉದ್ವಿಗ್ನಳಾಗಲಿಲ್ಲ. ನಿಂತಲ್ಲೆ ನಿಂತು ಭಾವಶೂನ್ಯ ದೃಷ್ಟಿಯಿಂದ ನೋಡಿದಳು. 'ನನ್ನನ್ನು ತಾಯಿಯೇ ಅಲ್ಲವೆಂದು' ಘೋಷಿಸಿದ ಇವನನ್ನು ಕರೆದುಕೊಳ್ಳುವುದೇ? ಇಲ್ಲವೆ ಸಾಯಲು ಬಿಡುವುದೇ? ಎಂದು ಚಿಂತಿಸಿದಳು. ಇವಳ ಯೋಚನೆ ಮುಗಿಯುವ ಮೊದಲೇ, ಶಾಂತ, ಪರಿಮಳರು ಶಂಕರನೊಂದಿಗೆ ಹೊಸ್ತಿಲ ಬಳಿ ಬಂದರು. ಅಡ್ಡವಾಗಿ ನಿಂತಿದ್ದ ಪಾರ್ವತಿ ಈ ಗಡ್ಡ ಮೀಸೆಗಳ ಪೊದೆಯ ನಡುವೆ ಸ್ವಲ್ಪವೇ ಕಾಣುತ್ತಿದ್ದ ಮುಖವನ್ನು ನೋಡಿದಳು. ಬೆಚ್ಚಿದಳು. ಇವನು ಶಂಕರನೇ ಅಲ್ಲವೆನ್ನುವಷ್ಟು ಬದಲಾಯಿಸಿದ್ದಾನೆ. ದ್ವೇಷ ಪ್ರೇಮಗಳ ತಾಕಲಾಟದಲ್ಲಿ ಪ್ರೇಮವೇ ಮೇಲ್ಗೈ ಪಡೆಯಿತು. ಶಂಕರನನ್ನು ಕರೆದುಕೊಂಡಳು. 'ಜ್ವರ ಸುಡುವ ಕೆಂಡದಂತಿತ್ತು', ಅಡಿಯಿಂದ ಮುಡಿಯವರೆಗೆ ಕೊರೆದಂತಾಯಿತು. ಶಾಂತ ಓಡಿ ಬಂದು ಬೇಗ ಹಾಸಿಗೆಯೊಂದನ್ನು ಅವನ ಕೋಣೆಯಲ್ಲಿ ಹಾಸಿದಳು.

ಪರಿಮಳ ಪಾರ್ವತಿ ಅವನನ್ನು ತಂದು ಮಲಗಿಸಿದರು, ಪಾರ್ವತಿ ಮಗನ ತಲೆಯ ಕೂದಲೊಳಗೆ ಬೆರಳಾಡಿಸಿ 'ಶಂಕರ ಶಂಕರ' ಎಂದು ಪ್ರೀತಿಯಿಂದ ಕರೆದಳು. ಮನಸ್ಸಿನ ಉಮ್ಮಳದಿಂದ ಮಾತು ಹೊರಡದಾಯಿತು.

ಶಾಂತ ಬೇಸಿನ್ನೊಂದರಲ್ಲಿ ನೀರನ್ನು ಒಂದಷ್ಟು ಚೂರು ತೆಳುವಾದ ಬಿಳಿ ಬಟ್ಟೆಯನ್ನು ತಂದು ತಾಯಿಯ ಮುಂದೆ ಇಟ್ಟಳು. ಪಾರ್ವತಿ ಬಟ್ಟೆಯನ್ನು ತಣ್ಣೀರಿನಲ್ಲಿ

ಅದ್ದಿ ಹಣೆಯ ಮೇಲೆ ಪಟ್ಟಿಯನ್ನು ಹಾಕಿದಳು. ಕ್ಷಣಕ್ಷಣಕ್ಕೆ ಬಟ್ಟೆ ಒಬಣಗಿ ಹೋಗುತ್ತಿತ್ತು. ಶಂಕರ ಮುಲುಗುತ್ತಿದ್ದ. 'ಅಮ್ಮ ಅಮ್ಮ' ಎಂದು ಹೇಳಿಕೊಳ್ಳುತ್ತಾ ಹಾಸಿಗೆಯ ಮೇಲೆ ಮೆಲ್ಲನೆ ಹೊರಳುತ್ತಿದ್ದ.

'ಶಂಕರ, ಇಲ್ನೋಡು, ನಾನು ನಿನ್ನಮ್ಮ' ಎಂದು ತನ್ನ ಕಡೆ ತೋರಿಸಿದಳು. ಶಂಕರನಿಂದ 'ಅಮ್ಮ ಅಮ್ಮ' ಅನ್ನುವ ನರಳಾಟದ ಸದ್ದು ಮಾತ್ರವೇ ಕೇಳಿಸಿತು.

ಮರೆವಿನಾಳದಲ್ಲಿ ಹೂತು ಹೋಗಿದ್ದ ವಿಶ್ವನ ನೆನಪು ತಾನೇ ತಾನಾಗಿ ಚಿಗಿದೊಡೆಯಿತು. ಜ್ವರ ತನ್ನ ವಂಶಕ್ಕೆ ಮೃತ್ಯು ಶಾಪವೇನೋ ಎನಿಸಿ ಗಣ್ಣಗೆ ಕಂಪಿಸಿದಳು ಪಾರ್ವತಿ. ಮಕ್ಕಳಿಗಾಗಿ ಹಂಬಲಿಸಿ ಪಡೆದ ಮಕ್ಕಳನ್ನು ಮತ್ತೆ ಮೃತ್ಯುವಿನ ಕೈಗೆ ಒಪ್ಪಿಸುವುದಕ್ಕಾಗಿಯೇ ತನ್ನ ಬದುಕಾಯಿತೇ ಎಂದು ರೋದಿಸಿದಳು. ಕಣ್ಮರೆಯಾಗಿ ಹೋಗಿದ್ದ ಇವನು ಸತ್ತಿದ್ದರೆ, ತಿಳಿಯುವವರೆಗಾದರೂ ಒಂದು ರೀತಿಯ ಸಮಾಧಾನವಿರುತ್ತಿತ್ತು. ಆದರೆ ಈ ಸ್ಥಿತಿಯಲ್ಲಿಯೇ ಕಳೆದು ಹೋದ ಮಗ ಕಾಣಿಸಿಕೊಂಡು ಚಿತ್ರ ಹಿಂಸೆಕೊಡುತ್ತಿದ್ದಾನೆ. ತನ್ನ ಜೀವನದಲ್ಲಿನ ವೈಪರೀತ್ಯಗಳನ್ನು ಕಂಡು ಅನುಭವಿಸಿದಾಗ, ದೇವರ ಬಗ್ಗೆಯೇ ಅಸಹ್ಯ ಮೂಡುತ್ತಿತ್ತು.

ಶಾಂತ, ಪರಿಮಳ ತಾಯಿ ಅನುಭವಿಸುತ್ತಿರುವ ಯಾತನೆಯ ಸ್ವಲ್ಪ ಅಂಶವಾದರೂ ಹಂಚಿಕೊಳ್ಳುವುದಕ್ಕಾದರೆ ಅನುಭವಿಸುವುದಕ್ಕೆ ತಾವು ಸಿದ್ಧರಾದರು. ಆದರೆ ಅದು ಸಾಧ್ಯವಿರಲಿಲ್ಲ. ಒಬ್ಬರ ದುಃಖವನ್ನು ಒಬ್ಬರು ಹಂಚಿಕೊಳ್ಳಲಾರರು.

ಪುಟ್ಟನಿಗೆ ವಿಷಯ ತಿಳಿದು, ಊಟ ಸಹ ಮಾಡದೆ ಓಡಿ ಬಂದ. ಪಾರ್ವತಿಯನ್ನು 'ಪಾರ್ವತವ್ವ, ಹೇಗಿದೆ ಶಂಕರನಿಗೆ' ಎಂದು ಕೇಳಿದ.

'ನೀನೇ ನೋಡು ಹೇಗಾಗಿದ್ದಾನೆ? ನನ್ನ ಶಂಕರ ನನಗೆ ದಕ್ಕುವಂತೆ ಕಾಣುವುದಿಲ್ಲ' ಎಂದಳು ರೋಧಿಸುತ್ತಾ.

ಪ್ರಜ್ಞಾಶೂನ್ಯವಾಗಿ ಬಿದ್ದಿರುವ ಕೊಳಕಾಗಿರುವ ಶಂಕರ ಒಂದು ಕಡೆ ಮಗನ ಸ್ಥಿತಿಗಾಗಿ ಶೋಕ ತಪ್ತೆಯಾಗಿ ಕಣ್ಣೊರೆಸಿಕೊಳ್ಳುತ್ತಾ ಕುಳಿತಿರುವ ಪಾರ್ವತಮ್ಮ ಮತ್ತೊಂದೆಡೆ. ಪರಿಸ್ಥಿತಿಯ ಅಸಹಾಯಕತೆಯಿಂದ ಮೂಕಪ್ರೇಕ್ಷಕರಂತೆ ನಿಂತಿರುವ ಶಾಂತ, ಪರಿಮಳ.

ಪುಟ್ಟನ ಮನಸ್ಸಿಗೆ ಈ ಕುಟುಂಬ ಶಪಿತ ಕುಟುಂಬವೆನಿಸಿತು. ಶಂಕರನ ಹತ್ತಿರಕ್ಕೆ ಬಂದು ಅವನ ಹಣೆಯ ಮೇಲೆ ಕೈಯಿಟ್ಟ, ಶಂಕರನಲ್ಲಿ ಸ್ಪಂದನವೇ ಇಲ್ಲ. ಅಲ್ಲಿನಿಲ್ಲದೆ ಕ್ಷಣಾರ್ಧದಲ್ಲಿ ಎದ್ದ. ಯಾರಿಗೂ ಏನೂ ಹೇಳದೆ ಮನೆಯಿಂದ ಹೊರಟ.

ಪುಟ್ಟ ಮನೆಗೆ ಹೋಗಿ ತನ್ನ ಸೈಕಲ್ಲನ್ನು ಆತುರಾತುರವಾಗಿ ಹೊರ ತೆಗೆದು ಹತ್ತಿದ. ರಂಗಿಗೆ ಕಾಣಿಸಿತು. ಯಾಕೆ ಅಷ್ಟು ಆತುರ, ಕೇಳೋಣವೆಂದು ಹೊರಗೆ ಬರುವಷ್ಟರಲ್ಲಿ ಮಿಂಚಿನಂತೆ ಮರೆಯಾಗಿದ್ದ. ರಂಗಿಯ ಇಬ್ಬರು ಚಿಕ್ಕಮಕ್ಕಳು ಮಧ್ಯಾಹ್ನವೇ ಶಾಲೆಯಿಂದ ಬಂದುಬಿಟ್ಟಿದ್ದರು. ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ಅಮ್ಮ ಅಮ್ಮ

ಶಂಕರ ಮಾಮಂಗೆ ಜ್ವರ ಅಂತೆ' ಎಂದು ಹೊಸ ಸುದ್ದಿಯಂತೆ ತಿಳಿಸಿದವು. ರಂಗಿಗೆ, ಪುಟ್ಟನು ಹೋದುದರ ಕಾರಣ ಹೊಳೆಯಿತು. ಅವರ ಮನೆಗೆ ಹೋಗಿದ್ದವನು, ಇದ್ದಕ್ಕಿದ್ದಂತೆ ಬಂದು ಹೋಗಬೇಕಾದರೆ ಏನೋ ಆತುರದ ಕೆಲಸವಿರಬೇಕೆಂದು ಕೊಂಡಳು.

ಮನೆಗೆ ಬರುತ್ತಿದ್ದಂತೆ ಚಂದ್ರಣ್ಣನಿಗೆ ವಿಷಯ ತಿಳಿಯಿತು. ಈಗ ಏನು ಮಾತಾಡಬಾರದೆಂದು ಸುಮ್ಮನಾದನು. ಕೋಣೆಯೊಳಗೆ ಹೆಜ್ಜೆಯಿಡುತ್ತಿದ್ದಂತೆ ಪಾರ್ವತಿಯ ಅಳು ಶುರುವಾಯಿತು. 'ನೋಡೀಂದ್ರೆ ನಿಮ್ಮ ಮಗ ಇವನೂ ನಮಗೆ ಮೋಸ ಮಾಡ್ತಿದ್ದಾನೆ" ಎಂದು ಹೇಳುತ್ತಲೇ ಅತ್ತಳು. ತಾಯಿಯ ಕರುಳ ಪ್ರೀತಿ ಅರ್ಥವಾದರೂ ಚಂದ್ರಣ್ಣ ಏನೆಂದು ಸಮಾಧಾನ ಮಾಡಿಯಾನು? ಅಲ್ಲಿ ನಿಂತಷ್ಟೂ ಅವಳ ದುಃಖ ಹೆಚ್ಚಾಗುವುದು ಎಂದು ಹೊರಗೆ ಬಂದು ತೂಗುಯ್ಯಾಲೆಯ ಮೇಲೆ ಕುಳಿತು ಚಿಂತಿಸತೊಡಗಿದ.

ಶಾಂತ ಶಂಕರನ ಕೋಣೆಯಿಂದ ಬಂದು, ಚಿಂತೆಯಲ್ಲಿ ಮುಳುಗಿದ್ದ ತಂದೆಯನ್ನು "ಅಪ್ಪ ಊಟಕ್ಕೇಳುವುದಿಲ್ಲವೇ? ಎಂದು ಹೆದರುತ್ತಲೇ ಕೇಳಿದಳು.

"ನನಗೆ ಬೇಡಮ್ಮ ಹಸಿವಿಲ್ಲ" ಎಂದುಬಿಟ್ಟ.

"ಒಂದು ತುತ್ತಾದರೂ ತಿನ್ನಿಯಪ್ಪ" ಅಂಗಲಾಚಿದಳು.

"ನನಗೆ ಬೇಡವೇ ಬೇಡ ಶಾಂತ. ಒತ್ತಾಯಿಸಬೇಡ ನನ್ನನ್ನು" ಎಂದು ಸ್ಪಷ್ಟವಾಗಿ ಹೇಳಿಬಿಟ್ಟ. ಇದ್ದಕ್ಕಿಂತ ಹೆಚ್ಚಾಗಿ ಬಲವಂತ ಮಾಡಲು ಶಾಂತಳಿಗೆ ಧೈರ್ಯವಿಲ್ಲ. ಇನ್ನೂ ಒತ್ತಾಯಿಸಿದರೆ ಸಿಟ್ಟಾದಾರು ಅಪ್ಪ ಎಂದುಕೊಂಡು ಹೊರಟು ಹೋದಳು.

ಅರ್ಧಘಂಟೆಯ ನಂತರ ಪುಟ್ಟ ಬಂದ. ಜೊತೆಗೊಬ್ಬ ಸೂಟುಧಾರಿ ವ್ಯಕ್ತಿಯಿದ್ದ. ಕಣ್ಣಿಗೆ ಬಿಸಿಲು ಕನ್ನಡದ ಧರಿಸಿದ್ದ. ವಯಸ್ಸು ಸುಮಾರು 30 ಇರಬಹುದು. ನೋಡುವುದಕ್ಕೆ ಆಕರ್ಷಕವಾಗಿಯೇ ಇದ್ದ. ಚಂದ್ರಣ್ಣ ಯಾರೆಂದು ಅರ್ಥವಾಗದೆ ಗಕ್ಕನೆ ಎದ್ದ. ಪುಟ್ಟ ಜೊತೆಗೇ ಇದ್ದುದರಿಂದ ಪುಟ್ಟನಿಗೆ ತಿಳಿದವರು ಯಾರೋ ಇರಬಹುದೆಂದುಕೊಂಡ. ಪುಟ್ಟ ಮುಂದೆ ಬಂದು, ಅಯ್ಯ ಇವರು ಡಾಕ್ಟರು ಗೋಪಾಲರು. ಪಕ್ಕದ ಹಳ್ಳೀಲಿ ಷಾಪಿಟ್ಟವರೆ. ಶಂಕರನಿಗೆ ಮೈ ಚೆನ್ನಾಗಿಲ್ಲಂತ ಕರ್ರೊಂಬಂದೆ. ಒಳಗೆ ಕರ್ರೊಂಡ್ಹೋಗಿ ತೋರಿಸ್ತಿರಾ ಅಯ್ಯ" ಅಂದ.

ಡಾಕ್ಟರು ಪರಿಚಯ ಹೇಳುತ್ತಿದ್ದಂತೆ ನಮಸ್ಕರಿಸಿದರು. ಚಂದ್ರಣ್ಣನೂ ಸೌಜನ್ಯದಿಂದಲೇ ಪ್ರತಿ ನಮಸ್ಕಾರ ಮಾಡಿದ. ನೀನೇ ಕರ್ರೊಂಡ್ಹೋಗು ಪುಟ್ಟು ನಾ ಬರ್ತೀನಿ ಹಿಂದಿಂದ" ಎಂದು ಹೇಳಿದ ಚಂದ್ರಣ್ಣನ ಮಾತು ಕೇಳಿ ಪುಟ್ಟ,

"ಬನ್ನಿ ಡಾಕ್ಟರೇ, ಪೇಷೆಂಟ್‌ನ ನೋಡುವಿರಂತೆ." ಎಂದು ಹೇಳುತ್ತಾ ಕರೆದೊಯ್ದು. ಡಾಕ್ಟರು ಬಂದದ್ದು ಪಾರ್ವತಿಗೆ ತಿಳಿಯಲ್ಲಿ. ಪುಟ್ಟ "ಅಮ್ಮ ಸ್ವಲ್ಪ ಜಾಗ ಬಿಡ್ತೀರಾ?

ಡಾಕ್ಟರು ಬಂದವ್ರೆ" ಎಂದು ಹೇಳಿದ. ಅವನ ಮಾತು ಕೇಳಿ ಪಾರ್ವತಿ ಹಿಂತಿರುಗಿ ನೋಡಿ ಎದ್ದಳು.

ಡಾಕ್ಟರು, ರೋಗಿಯ ಬಳಿ ಕುಳಿತು ನಿಧಾನವಾಗಿ ಪರೀಕ್ಷಿಸಿದರು. ರಕ್ತದ ಒತ್ತಡ, ಟೆಂಪರೇಚರ್, ಎಲ್ಲಾ ಪರೀಕ್ಷಿಸಿದರು. ಕಣ್ಣಲ್ಲಿ ರೆಪ್ಪೆ ಬಿಡಿಸಿ ನೋಡಿದರು. ಸುಮಾರು ಹದಿನೈದು ನಿಮಿಷಗಳವರೆಗೆ ಪರೀಕ್ಷಿಸಿ ನೋಡಿದ ಮೇಲೆ, ಎರಡು ಮೂರು ಬಗೆಯ ಔಷಧಿಗಳನ್ನು ಬರೆದುಕೊಟ್ಟು ಕೂಡಲೆ ಅವುಗಳನ್ನು ತಂದುಕೊಡಬೇಕೆಂದು ಹೇಳಿದರು.

ಚಂದ್ರಣ್ಣ ಚೀಟಿಯನ್ನು ತೆಗೆದುಕೊಂಡ. ಡಾಕ್ಟರು ಇಂಜಕ್ಷನ್ ರೆಡಿ ಮಾಡಿದರು. ಶಂಕರನ ತೋಳನ್ನು ಹೊರತೆಗೆದು, ಅಂಗಿಯನ್ನು ಮಡಿಚಿ, ಇಂಜಕ್ಷನ್ ಚುಚ್ಚಿದರು. ಪಾರ್ವತಮ್ಮ ಅಷ್ಟಕ್ಕೇ ಹೆದರಿದಂತೆ ಕಣ್ಣು ಮುಚ್ಚಿದರು.

ಚಂದ್ರಣ್ಣ ಶಂಕರನಿಗೆ ಹೇಗಿದೆಯೆಂದು ವಿಚಾರಿಸಿದಾಗ, ಡಾಕ್ಟ್ರಯ ಗಾಭರಿ ಪಡುವ ಅವಶ್ಯಕತೆಯಿಲ್ಲ. ಈಗ ಬರೆದುಕೊಟ್ಟಿರುವ ಔಷಧಿಗಳನ್ನು ತಂದುಕೊಡಿ. ಮೂರು ದಿನ ಕೊಟ್ಟರೆ ಸರಿ ಹೋಗುತ್ತೆ. ತುಂಬಾ ದುರ್ಬಲವಾಗಿರುವುದರಿಂದ ಜ್ವರ ತೀವ್ರವಾಗಿದ್ದಂತೆ ಅನಿಸುತ್ತದೆ. ಆದರೆ ಎಲ್ಲಾ ಬೇಗನೆ ಗುಣವಾಗುತ್ತೆ. ಔಷಧಿ ಮಾತ್ರ ಮರೆಯಬೇಡಿ' ಎಂದು ಎಚ್ಚರಿಸಿ ಹೇಳಿದರು.

ಡಾಕ್ಟರು ಹೊರಡಲು ಸಿದ್ಧರಾದರು. ತಾನೂ ಅವರೊಂದಿಗೆ ಹೋಗಿ ಬಿಟ್ಟು ಬರುವುದಾಗಿಯೂ, ಹಾಗೇ ಬರುವಾಗ ಔಷಧಿ ತರುವುದಾಗಿಯೂ ಹೇಳಿದ. ಪುಟ್ಟ, ಚಂದ್ರಣ್ಣ ಪುಟ್ಟುವನ್ನು ಗುಟ್ಟಾಗಿ ಕರೆದು ಜೇಬಿನಿಂದ ಹಣವನ್ನು ತೆಗೆದು ಅವನ ಕೈಲಿರಿಸಿದನು. ಪುಟ್ಟ ತನ್ನ ಬಳಿ ಇರುವುದಾಗಿ ಹೇಳಿದರೂ ಕೇಳದೇ, ಚಂದ್ರಣ್ಣ ಬಲವಂತವಾಗಿ ಅವನ ಜೇಬಿಗೆ ತುರುಕಿದ.

ಪುಟ್ಟ ಡಾಕ್ಟರನ್ನು ಹಿಂಬಾಲಿಸಿದ.

ಶಂಕರನ ಜ್ವರ ಇಳಿಮುಖವಾಯಿತು. ಸ್ವಲ್ಪ ಸ್ವಲ್ಪವೇ ಚೇತರಿಸಿಕೊಳ್ಳುತ್ತಿದ್ದ ಶಂಕರ. ಪೂರ್ತಿ ವಾಸಿಯಾಗುವವರೆಗೆ ಅವನ ಮುಖ ಶುಭ್ರಗೊಳಿಸುವಂತಿರಲಿಲ್ಲ. ಶಂಕರ ಪೂರ್ತಿ ಬದಲಾಯಿಸಿಬಿಟ್ಟಿದ್ದ. ಮೊದಲಿನಂತೆ ಮಾತು ಮಾತ್ರ ಇಲ್ಲವಾಗಿತ್ತು. ಮಾತಾಡಲೇ ಬೇಕಾದರೆ ಒಂದೋ, ಎರಡೋ ಪದಗಳು, ಅದೂ ಅನಿವಾರ್ಯವೆನಿಸಿದಾಗ ಮಾತ್ರ.

ಮನೆ ಕೆಲಸ, ಶಂಕರನ ಆರೈಕೆ, ಚಂದ್ರಣ್ಣನ ವ್ಯವಹಾರ ಇಷ್ಟೇ ಈ ಮನೆಯ ಯಾಂತ್ರಿಕ ಚಟುವಟಿಕೆಗಳು. ಮನುಷ್ಯರೇ ಇಲ್ಲವೇನೋ ಎನ್ನುವಷ್ಟು ನಿಸ್ತಬ್ಧತೆ ನೆಲಸಿತ್ತು. ಒಮ್ಮೊಮ್ಮೆ ಹಾಳು ಸುರಿಯುವ ದೆವ್ವದ ಕೊಂಪೆಯೋ ಎನ್ನುವಷ್ಟು ಭೀಕರ ಮೌನ ಆವರಿಸಿರುತ್ತಿತ್ತು.

ಯಾರಿಗೆ ಅವರದೇ ಚಿಂತೆ. ಪರಸ್ಪರ ಮಾತೇ ಇಲ್ಲ.

ದಿನಗಳ ಮೇಲೆ ದಿನಗಳು ಉರುಳಿದವು. ಶಂಕರನಲ್ಲಿ ಈಗೀಗ ರಕ್ತ ತುಂಬಿ ಜೀವ ಕಳೆ ಕಾಣಿಸಿತ್ತು. ಪುಟ್ಟನಂತೂ ಮುಕ್ಕಾಲು ಮೂರು ಪಾಲು ಇವರ ಮನೆಯಲ್ಲೇ ಇದ್ದು ಬಿಡುತ್ತಿದ್ದ. ಚಂದ್ರಣ್ಣ ಮತ್ತಷ್ಟು ಜೀರ್ಣವಾಗುತ್ತಿದ್ದ. ಆ ಶಂಕರನ ಯೋಚನೆಯಲ್ಲಿ ಉಳಿದದ್ದೆಲ್ಲಾ ಮರೆತು ಹೋಯಿತು.

* * *

ಒಮ್ಮೆ ಶಂಕರ ಕೋಣೆಯೊಳಗೆ ಕಣ್ಣು ಮುಚ್ಚಿಕೊಂಡು ಏನನ್ನೋ ಧ್ಯಾನಿಸುತ್ತ

ಮಧ್ಯೆ ಮಧ್ಯೆ ಅಸಂಬದ್ಧವಾಗಿ ಬಡಬಡಿಸುತ್ತ ಗೊಣಗಿ ಕೊಳ್ಳುತ್ತಾ ಕೂತಿದ್ದ.

ಯಾವುದೋ ಮರವಿನಲ್ಲಿ ಅಗುಳಿ ಹಾಕುವುದನ್ನು ಮರೆತಿದ್ದ. ತಂಗಿ ಪ್ರಮೀಳ. ಆ ಕೋಣೆಯುಲ್ಲಿದ್ದ ತನ್ನ ಬಟ್ಟೆಗಳನ್ನು ತೆಗೆದುಕೊಳ್ಳಬೇಕೆಂದು ಕೋಣೆಯ ಒಳಗೆ ಬಂದಳು. ಯಾರೋ ಮಾತಾಡಿದಂತೆ ಕೇಳಿಸಿತು. ಶಂಕರನ ಹೊರತು ಕೋಣೆಯಲ್ಲಿ ಬೇರಾರೂ ಇರಲಿಲ್ಲ. ಮತ್ತೊಮ್ಮೆ ಕಿವಿಗೊಟ್ಟು ಆಲಿಸಿದಳು. ಹೌದು, ಇದು ಶಂಕರಣ್ಣನದೇ ! ಸಂಶಯವಿಲ್ಲ!! ಎಂದು ಕೊಂಡಳು. ಜೊತೆಗೆ ಯಾರಾದರೂ ಇರಬಹುದೇ – ಎಂದು ಸಂಶಯದಿಂದ ಸುತ್ತಲೂ ನೋಡಿದಳು. ಇಲ್ಲ, ಯಾರಾದರೂ ಇರಬಹುದೇ – ಎಂದು ಸಂಶಯದಿಂದ ಸುತ್ತಲೂ ನೋಡಿದಳು. ಇಲ್ಲ, ಯಾರೂ ಇಲ್ಲ. ಅವನಾಡುವ ಮಾತು ಪರಿಮಳಾಗೆ ಅರ್ಥವಾಗುವಂತಿರಲಿಲ್ಲ. ಆದರೆ ಶಬ್ದಗಳನ್ನು ಮಾತ್ರ ನೆನಪಿಟ್ಟು ಕೊಂಡಳು. ದೇವರು– ಧರ್ಮ – ಸೃಷ್ಟಿ– ಪಾಪ– ಪುಣ್ಯ– ಹುಟ್ಟು– ಸುಳ್ಳು, ಅಸ್ಥಿರ–ಮುಕ್ತಿ.

ಇನ್ನೂ ಇಂಥಾದ್ದೆಲ್ಲಾ ಏನೇನೋ ಅವನ ಬಾಯಿಂದ ಹೊರಡುತ್ತಿದ್ದವು. ಆದರೆ ಪರಿಮಳ ಅವುಗಳ ಅರ್ಥದ ಬಗ್ಗೆ ತಲೆಕೆಡಿಸಿಕೊಳ್ಳುವ ಸಾಹಸಕ್ಕೆ ಹೋಗದೆ ದಿಗ್ಭ್ರಮೆಗೊಂಡು, ತಾನು ಕಂಡದ್ದನ್ನು ಅಮ್ಮನಿಗೆ ತಿಳಿಸಲು ಓಡಿದಳು. ಅವಳು ಓಡಿದ ರಭಸಕ್ಕೆ ಪರಿಮಳಾಗೆ ಏದುಸಿರು ಬಿಡುವಂತಾಯಿತು.

ಮೊಸರು ಕಡೆಯುತ್ತಿದ್ದ ಪಾರ್ವತಿಯ ಬಳಿಗೆ ಓಡಿ ಆತುರಾತುರವಾಗಿ 'ಅಮ್ಮ ಬಾಮ್ಮ, ಇಲ್ಲಿ ಬೇಗ ಬಾಮ್ಮ' ಎಂದು ಎಳೆಯಲು ತೊಡಗಿದಳು. ಅವಳು ಎಳೆದ ರಭಸಕ್ಕೆ ಜೋಲಿತಪ್ಪಿ ಬೀಳುವಂತಾಯಿತು ಪಾರ್ವತಿಗೆ. ಇದರಿಂದ ಸಿಟ್ಟಿಗೆದ್ದ ಅವಳು, 'ಥೂ' ಮುಂಡೇದೆ ನಿನಗೇನೆ ಆಯ್ತು ? ಹಾಗೆ ಪ್ರಾಣ ಹೋದವರ ಹಾಗೆ ಆಡ್ತೀಯಾ? ಸ್ವಲ್ಪವಾದರೂ ಸಾವಧಾನ ಬೇಡವೇ ಎಂದು ಬೈದಳು. ಇತ್ತೀಚೆಗೆ ಮನೆಯ ತಾಪತ್ರಯಗಳ ಜೊತೆಗೆ ಶಂಕರನ ಚಿಂತೆಯೂ ಸೇರಿ ಬಹಳ ಸಿಡಿಮಿಡಿಗೊಳ್ಳುವ ಪ್ರವೃತಿಯನ್ನು ಬೆಳೆಸಿಕೊಂಡಿದ್ದಳು, ಮಾತುಮಾತಿಗೂ ಸಿಟ್ಟಿಗೇಳುತ್ತಿದ್ದಳು. ಇದು ಪರಿಮಳಾಗೆ ಗೊತ್ತಿತ್ತು. ಅದಕ್ಕೆ ಅಮ್ಮನ ಬೈಗಳಿಂದ ಅಳುವೇ ಬರುವಂತಾಗಿದ್ದರೂ ಸಮಾಧಾನವಾಗಿಯೇ ಉತ್ತರಿಸಿದಳು: "ಏನಮ್ಮ ಹಾಗೆ ಬೈತೀಯಾ? ಅಣ್ಣ ಕೋಣೆಯಲ್ಲಿ ಒಬ್ಬನೇ ಕುಳಿತುಕೊಂಡು ಏನೇನೋ ಮಾತಾಡ್ಕೊಳ್ತಾ ಇದ್ದಾನೆ. ನಿಂಗೇ ಹೇಳಿ ತೋರಿಸೋಣಾಂತ ಬಂದ್ರೆ, ಹೀಗೆಲ್ಲಾ ಸಿಟ್ಟಿಗೇಳ್ತೀಯಾ" ಎಂದು ಮುಖ ಊದಿಸಿಕೊಂಡಳು. ಅದನ್ನು ಕಂಡ ಪಾರ್ವತಿಗೆ ಅಯ್ಯೋ ಎನಿಸಿತು. ಪಾಪದ ಮಕ್ಕಳು! ಯಾವ ಸುಖಕ್ಕೂ ಕೇಳಿಕೊಂಡು ಬಂದವರಲ್ಲ ! ವಿನಾಕಾರಣ ಸಿಟ್ಟಿಗೆದ್ದು ಆ ಪುಟ್ಟ ಮನಸ್ಸಿಗೆ ನೋವುಂಟು ಮಾಡಿದೆನಲ್ಲಾ ಎಂದು ಮನಸ್ಸಿನಲ್ಲಿಯೇ ಪೇಚಾಡಿಕೊಂಡಳು. ಆಗ ನೋವನ್ನು ಮರೆಯಿಸುವುದಕ್ಕಾಗಿ, "ಪ್ರಮೀ, ಬಾ ಇಲ್ಲಿ, ನೋಡು. ನಾನು ಏನೋ ಆಲೋಚನೇಲಿದ್ದೆ. ಅದಕ್ಕೆ ನಿನ್ನನ್ನು ಬೈದುಬಿಟ್ಟೆ. ಅಷ್ಟಕ್ಕೆಲ್ಲಾ ಕೋಪ ಮಾಡ್ಕೋತಾರಾ? ಅದೂ ಅಮ್ಮನ ಮೇಲೆ" ಎಂದಳು. ಅಷ್ಟರಲ್ಲಿ ಶಾಂತ, ತಂಗಿ ಮತ್ತು ಅಮ್ಮನ ನಡುವೆ ಏನು ನಡೆದಿದೆಯೋ, ನೋಡುವ ಕುತೂಹಲದಿಂದ ಅಲ್ಲಿಗೆ ಬಂದಳು. ಬಂದವಳೇ, "ಏನೇ ಪ್ರಮೀ, ಅಮ್ಮನ್ನ ಅಷ್ಟೊಂದು ಆತುರದಿಂದ ಎಳೀತಿದ್ದೆ." ಎಂದದ್ದಕ್ಕೆ ಪ್ರಮೀಳ, ಅವಳಿಗೂ ಅಣ್ಣನ ವಿಚಾರ ಹೇಳಿದಳು. ತಕ್ಷಣವೇ ಶಾಂತ, "ಅಯ್ಯೋ! ಅಣ್ಣನಿಗೆ ದೆವ್ವ-ಗಿವ್ವ ಹಿಡಿದಿದೆಯೇನೋ ಕಣೇ" ಎಂದು ತನ್ನ ಅಭಿಪ್ರಾಯ ವ್ಯಕ್ತಪಡಿಸಿದಳು. ಪ್ರಮೀಳಾಗೆ ಇದು ಹೊಳದೇ ಇರಲಿಲ್ಲ. ಹೌದು, ಅಕ್ಕ ಹೇಳಿದ ಹಾಗೆ ದೆವ್ವ ಹಿಡಿದಿರಬಹುದು? ಆದರೆ ಹಾಗಂತ ಹೇಳೋ ಧೈರ್ಯವಿರಲಿಲ್ಲ ಇಬ್ಬರಿಗೂ, ಅದರಲ್ಲೂ ಅಮ್ಮನಿಗೆ, ಅಣ್ಣನ ವಿಚಾರದಲ್ಲಿ ಹಾಗೆಲ್ಲಾ ಹೇಳಿದರೆ ತುಂಬಾ ಕೋಪ ಬರುತ್ತೆ ಅಂತ ತಿಳಿದಿದ್ದರಿಂದ ಸುಮ್ಮನಾದರು.

ಅಷ್ಟರಲ್ಲಿ ಪಾರ್ವತಿ ಎದ್ದು, ಬಾರೆ ಹೋಗೋಣ ಎಂದು ಪ್ರಮೀಳಳನ್ನು ಕರೆದೊಯ್ದಳು. ಸದ್ದಾಗದಂತೆ ಬಂದು ಬಾಗಿಲು ತೆಗೆದು ಇಣುಕಿದರು. ಶಂಕರ ಇನ್ನೂ ಕಣ್ಮುಚ್ಚಿಕೊಂಡು ಬಡಬಡಿಸುತ್ತಲೇ ಇದ್ದಾನೆ. ಪಾರ್ವತಿ ನಿಟ್ಟುಸಿರು ಕೇಳಿಸಿತು.

ಅಮ್ಮನಿಗೆ ಏನೋ ಚಿಂತೆಯಾಗಿದೆ ಎಂದು ಅರ್ಥಮಾಡಿಕೊಂಡಳು. ಪಾರ್ವತಿ ಶಂಕರನನ್ನು ಅಲುಗಿಸಿ, 'ಶಂಕರ', 'ಶಂಕರ' – ಎಂದು ಗಟ್ಟಿಯಾಗಿ ಕೂಗಿದಳು. ಶಂಕರನಿಗೆ ಪ್ರಜ್ಞೆ ಇದ್ದಂತಿರಲಿಲ್ಲ. ಆದರೆ ಮತ್ತೂ ಜೋರಾಗಿ ಅಲುಗಿಸಿ ಕೂಗಿ ಕರೆದಳು. ಈಗ ಶಂಕರ ಬೆಚ್ಚಿದವನಂತೆ ಕಣ್ಣು ಬಿಟ್ಟ. ಅವನನ್ನು ಎಚ್ಚರಗೊಳಿಸಿದ್ದಕ್ಕೆ ಸಿಟ್ಟು ಬಂದಂತಾಗಿದ್ದರೂ, ಎದುರಿಗೆ ತಾಯಿಯನ್ನು ನೋಡಿದ ಕೂಡಲೇ ಸಿಟ್ಟು ಮಾಯವಾಯಿತು. ಆದರೆ ವ್ಯಥೆಯಿಂದ ಅಮ್ಮನನ್ನು ಮಾತನಾಡಿಸಿದ :

"ಯಾರಮ್ಮ ನನ್ನನ್ನು ಕೂಗಿ ಕರೆದದ್ದು? ಸ್ವಲ್ಪ ಹೊತ್ತಾದರೂ ನೆಮ್ಮದಿಯನ್ನು ಅನುಭವಿಸುವುದು ನಿನಗೆ ಇಷ್ಟವಿಲ್ಲವೆ?" ಎಂದು ಕೇಳಿದ. ಈ ಮಾತು ಪಾರ್ವತಿಯ ಎದೆಗೆ ತೀಕ್ಷ್ಣವಾಗಿ ನಾಟಿ ನೋವಾಯಿತು. ಎಂತಹ ಪ್ರಶ್ನೆ ಕೇಳುತ್ತಿದ್ದಾನೆ! ತಾನು ಅವನ ತಾಯಿಯಲ್ಲವೆ? ಅವನ ನೆಮ್ಮದಿಯನ್ನು ಹಾಳು ಮಾಡುತ್ತಿದ್ದೇನೆಯೇ! ಎಂದು ಪ್ರಶ್ನಿಸಿಕೊಂಡಾಗ, ಕಣ್ಣು ತೇವವಾಯಿತು. ಆದರೂ ತೋರ್ಪಡಿಸಿಕೊಳ್ಳದೆ ನುಡಿದಳು :

"ಶಂಕರ ಈ ಮಾತು ನೀನು ಕೇಳ್ತಿದ್ದೀಯ? ನಿನ್ನ ಸುಖ ಸಂತೋಷಗಳಿಗಾಗಿಯೇ ತಾನೇ ನಾವು ದುಡಿದು ಬದುಕುತ್ತಿರುವುದು? ನಿನ್ನ ನೆಮ್ಮದಿಗೆ ನಾವೇನು ಭಂಗ ತಂದಿದ್ದೇವೆ ಹೇಳು? ಈಗ ಸ್ವಲ್ಲ ಹೊತ್ತಿಗೆ ಮುಂಚೆ ಏನೇನೋ ಬಡಬಡಿಸುತ್ತದ್ದೆ. ನಿನಗೆ ಏನಾಯಿತೋ ಅಂತ ಹೆದರಿ ನಿನ್ನನ್ನು ಕೂಗಿದ್ದು. ಅಷ್ಟೇಪ್ಪ."

ಶಂಕರನಿಗೆ ತಾಯಿಯ ಮಾತು ವಿಚಿತ್ರವೆನಿಸಿತು. ವಿಸ್ಮಯದಿಂದ ಕೇಳಿದ, "ಏನವ್ಮಾ ನಾನು ಬಡಬಡಿಸುತ್ತಿದ್ದೆನೆ! ನೀನಾಡೋ ಮಾತೇ ಅರ್ಥವಾಗೊಲ್ಲ! ನಾನು ಕಣ್ಮುಚ್ಚಿಕೊಂಡು ಏನೋ ಒಂದು ವಿಚಾರ ಯೋಚಿಸ್ತಿದ್ದೆ. ಹಾಗೇ ನಿದ್ದೆ ಬಂದಂತಾಯ್ತು. ಒಳ್ಳೆ ಕನಸು ಬಿತ್ತು. ಎಷ್ಟು ಸುಂದರವಾದ ಕನಸು! ... ನೀನು ಕೂಗಿ ಹಾಳು ಮಾಡಿದೆಯಲ್ಲಮ್ಮ. ಇನ್ನೊಂದು ಕ್ಷಣ ಸುಮ್ಮನಿದ್ದರೆ ಅವರು ಖಂಡಿತ ನನ್ನ ಮಾತು ಕೇಳ್ತಾ ಇದ್ದರು!" ಅಂದ. ಪಾರ್ವತಿಗೆ ಆಶ್ಚರ್ಯವಾಯಿತು. "ಯಾರೋ ನಿನ್ನ ಮಾತು ಕೇಳ್ತಾ ಇದ್ದವ್ರು?"

"ಅದನ್ನೆಲ್ಲಾ ನೀನು ಕೇಳಬಾರದಮ್ಮ. ಅವರ ವಿಷಯ ಯಾರಿಗೂ ತಿಳಿಸಬಾರದೂಂತ ಕಟ್ಟಪ್ಪಣೆ ಆಗಿದೆ." ಎಂದ.

ಪ್ರಮೀಳ ಪಾರ್ವತಿ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಪ್ರಮೀಳ ಮನಸ್ಸಿನಲ್ಲಿ.... ಅದೇ ಶಬ್ದಗಳು. ಅವಳು ಕೇಳಿದ ಧರ್ಮ–ಸೃಷ್ಟಿ–ಹುಟ್ಟು–ಸಾವು ಇತ್ಯಾದಿ ಇತ್ಯಾದಿ ಶಬ್ದಗಳು ಗುಂಯ್‌ಗುಟ್ಟ ತೊಡಗಿದವು. ಅವಳಿಗೆ ಅಣ್ಣನಲ್ಲಿ ಇದೆಲ್ಲಾ ಹೇಳಿ ಅರ್ಥ ಕೇಳುವ ಹಂಬಲ. ಮೊದಲು ಹೆದರಿಕೆ ಅನಿಸಿದರೂ, 'ಧೈರ್ಯ ಮಾಡಿ ಕೇಳಿಯೇ ಬಿಟ್ಟಳು : "ಅದೇನಣ್ಣ – ನೀನು ದೇವರು – ಧರ್ಮ

ಹೋಗೊಲ್ಲ–ಸೃಷ್ಟಿ–ಸವಾಲು–ಬರ್ತೇನೆ– ಅಂತ ಇನ್ನೂ ಏನೇನೇನೋ ಮಾತಾಡಿಕೊಳ್ತಿದ್ದೆ?" ಶಂಕರನಿಗೆ ಮಾತು ಬೆಳೆಸುವ ಇಚ್ಛೆಯಾಗಲೀ–ಅವುಗಳ ಅರ್ಥದ ಚರ್ಚೆಯಾಗಲಿ ಮಾಡುವ ಮನಸ್ಸಿಲ್ಲದೆ, "ಹೋಗೆ, ನಾನೇನೂ ಮಾತಾಡ್ಲಿಲ್ಲ. ನಿನಗೆ ತಲೆ ಕೆಟ್ಟಿದೇಂತ ಆರೋಪಿಸುತ್ತಿರುವುದು ತಮ್ಮ ಮೇಲೆ' ! ಒಂದು ಕಡೆ ನಗಬೇಕೆನಿಸಿದರೆ ಮತ್ತೊಂದು ಕಡೆ ಕೋಪ ಏರಿ ಬಂತು, ತಡೆಯುವುದಕ್ಕೆ ಆಗಲಿಲ್ಲ.

"ನನಗೇನಲ್ಲ, ನಿನಗೇ ತಲೆಕೆಟ್ಟಿರೋದು !" ಎಂದೇಬಿಟ್ಟಳು. ಇವಳ ಈ ಉದ್ಧಟತನವನ್ನು ನೋಡಿ ಪಾರ್ವತಿಗೆ ಕೆಡುಕೆನಿಸಿತು. 'ಛಳ್' ಎಂದು ಪ್ರಮೀಳ ಕಪಾಳಕ್ಕೆ ಎರಡು ಬಿಗಿದಳು. "ಅಣ್ಣನಿಗೆ ತಲೆ ಕೆಟ್ಟಿದೆ ಎಂದು ಹೇಳುವಷ್ಟು ಧೈರ್ಯ ಬಂತೇ ?" ಎಂದು ಕಣ್ಣು ಕೋಪದ ಕಿಡಿಕಾರುತ್ತ ಕೇಳಿದಳು. ಶಾಂತ ಪ್ರಮೀಳಳನ್ನು, ಪರಿಸ್ಥಿತಿ ಪ್ರಕೋಪಕ್ಕೆ ತಿರುಗಬಾರದೆಂದು ಭಾವಿಸಿ ಎಳೆದುಕೊಂಡು ಹೋದಳು. ಶಂಕರ ಕೋಣೆಯಿಂದ, ಮೌನವಾಗಿ ಎದ್ದು ಆಚೆ ಹೊರಟ.

ಪಾರ್ವತಿಗೆ ದಿನವಿಡೀ ಅಳುವುದೇ ಕೆಲಸವಾಯಿತು. ಕಂಬನಿ ಪೂರ್ತಿಯಾಗಿ ಬತ್ತಿಹೋಗುವ ತನಕ ಅಳಬೇಕೆಂದುಕೊಂಡಳು. ಹೇಳಿಕೊಳ್ಳಲಾಗದ ದೌರ್ಬಲ್ಯಕ್ಕೆ ಒಳಗಾಗುತ್ತಿದ್ದಳು. ದಿನದಿನಕ್ಕೂ ಮನಸ್ಸಿನ ಉದ್ವೇಗ ತೀವ್ರವಾಗಿತ್ತು. ಅವ್ಯಕ್ತ ನೋವಿನ ಮುಳ್ಳುಗಳು ಹಿಂಸಿಸುತ್ತಿದ್ದವು. ಒಳಗೇನೋ ಭೀತಿ, ತಳಮಳ, ಭರಿಸಲಾಗದ ಮಾನಸಿಕ ವ್ಯಥೆ, ದೈಹಿಕ ಅನಾರೋಗ್ಯಗಳು ನೆಮ್ಮದಿಯನ್ನು ಛಿದ್ರಗೊಳಿಸಿದ್ದವು. ಮಾತು ಮಾತಿಗೆ ಸಿಡಿದ ಜ್ವಾಲಾಮುಖಿಯಾಗುತ್ತಿದ್ದಳು. ಇದೊಂದೇ ಶಂಕರನ ಪ್ರಸಂಗವಲ್ಲ. ಅನೇಕ ಸಲ ಶಂಕರನೊಂದಿಗೆ ಇಂತಹ ಪ್ರಸಂಗಗಳನ್ನು ಎದುರಿಸಿದ್ದಳು. ಅವನದೇ ಸಮಸ್ಯೆ. ಅವನ ರೀತಿ, ನೀತಿ, ಮಾತು, ನಡೆ ಒಂದೂ ಅರ್ಥವಾಗುವುದಿಲ್ಲ. ಒಮ್ಮೊಮ್ಮೆ ಪಾರ್ವತಿಗೆ ಅನಿಸುವುದು ಶಂಕರನು ನಮಗೆ ಅರ್ಥವಾಗುತ್ತಿಲ್ಲವೋ ಅಥವಾ ನಾವೇ ಅವನಿಗೆ ಅರ್ಥವಾಗುತ್ತಿಲ್ಲವೋ! ಎಂದು. ಹುಟ್ಟಿದಂದಿನಿಂದ ಇಂದಿನವರೆಗೂ, ಎಂದೂ ಅವನು ಎಲ್ಲರಂತೆ ಕಾಣುತ್ತಿಲ್ಲ. ಯಾಕೆ ಅವನು ಎಲ್ಲರಿಗಿಂತ ಭಿನ್ನವಾಗಿ ವಿಚಿತ್ರವಾಗಿ ಹುಚ್ಚನಂತಾಗಿ, ಬುದ್ಧಿಶೂನ್ಯನಂತಾಗಿ ಒಮ್ಮೆಯಾದರೆ, ಅತಿ ಬುದ್ಧಿವಂತನಂತೆ ಮತ್ತೊಮ್ಮೆ ಕಾಣಿಸಿಕೊಳ್ಳುತ್ತಾನೆ! ಅವನನ್ನು ಕಾಡುತ್ತಿರುವ ಸಮಸ್ಯೆಗಳಾದರೂ ಏನು? ತಾಯಿಯಾಗಿಯೂ ತನ್ನಿಂದಲೂ ಅವನನ್ನು ಅರ್ಥಮಾಡಿಕೊಳ್ಳಲು ಆಗುತ್ತಿಲ್ಲವಲ್ಲ! ಅದೇ ಪಾರ್ವತಿಯ ಕೊರಗು.

ಶಂಕರ ಹುಟ್ಟಿದಾಗ ಅನುಭವಿಸಿದ ಆನಂದ, ತುಂಬಿದ್ದ ಸಡಗರ ಸಂಭ್ರಮಗಳು ಏನಾದವು? ಯೋಚಿಸಿದಷ್ಟೂ ಪಾರ್ವತಿಯ ತಲೆ ಸಿಡಿಯುವಂತಾಗುತ್ತಿತ್ತು. ವಿಶ್ವನ ಸಾವಿನಿಂದ ಸಾಲುಗಟ್ಟಿದ ಸಾವುಗಳ ಕರಾಳ ನೆರಳುಗಳಿಂದ ಕವಿದ ಬದುಕು ಶಂಕರನ ಹುಟ್ಟಿನಿಂದಾಗಿ ಫಳಕ್ಕನೆ ಹೊಳೆಯಿತು. ವಿಶ್ವನನ್ನೂ ಕಸಿದುಕೊಂಡು ಮಾಯದ ಘಾಯವನ್ನು ಮಾಡಿದ್ದ ವಿಧಿ ಶಂಕರನನ್ನು ದಯಪಾಲಿಸುವುದರ ಮೂಲಕ ಉರಿದ

ಘಾಯಕ್ಕೆ ಚಂದನವನ್ನು ಲೇಪಿಸಿದ್ದಂತಾಗಿತ್ತು. ಆದರೆ... ಆದರೆ... ತಮ್ಮೆಲ್ಲಾ ಕನಸುಗಳನ್ನು, ಆಸೆಯ ಗೋಪುರಗಳನ್ನು ಒಡೆದು ಹುಡಿಗೊಳಿಸುತ್ತಿದ್ದಾನೆ. ಈ ಶಂಕರ. ಅವನಿಗೇನಾಗಿದೆ? ಅವನಿಗೇನಾಗಿದೆ...? ಎಂದು ಪಾರ್ವತಿ ಚೀರಿ ಚೀರಿ ತನ್ನನ್ನು ಪ್ರಶ್ನಿಸಿಕೊಳ್ಳುತ್ತಾನೆ. ಒಂದೊಂದು ದಿನಕ್ಕೆ ಒಂದೊಂದು ಕ್ಷಣಕ್ಕೆ ಬದಲಾಗುತ್ತಿರುವ ಅವನ ಸ್ವಭಾವ ಮುಂದೆ ಬರಲಿರುವ ಬಿರುಗಾಳಿಯ ಪೂರ್ವ ಸೂಚನೆಯಂತೆನಿಸುತ್ತಿತ್ತು... ಕೊರೆಕೊರೆದು ಕಾಡುವ ಇವನ ಚಿಂತೆಯ ಜೊತೆಗೆ ಪ್ರಾಯವರಳಿ ನಿಂತಿರುವ ಹೆಣ್ಣು ಮಕ್ಕಳ ನೆನಪು ಹೃದಯದ ಮೇಲೆ ಭಾರಿ ಬಂಡೆಯನ್ನು ಎಳೆದು ಅದುಮಿದಂತೆ ಆಗುತ್ತಿತ್ತು. ಇವನ ಪಾಡು ಹೀಗಾದರೆ ನಾಳೆ ಈ ಹೆಣ್ಣು ಮಕ್ಕಳ ಗತಿ ಏನಾಗುವುದೋ ಎಂದು ಹೆದರಿ ತನ್ನ ಹೃದಯವನ್ನೇ ಚಂದ್ರಣ್ಣನಲ್ಲಿ ತೋಡಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಚಂದ್ರಣ್ಣನ ಎದೆಯಲ್ಲೂ ಅದೇ ಉರಿವ ಚಿಂತೆಯ ಚಿತೆ ಪ್ರಜ್ವಲಿಸುತ್ತಿರಬೇಕಾದರೆ ಹೆಂಡತಿಗೆ ಏನೆಂದು ತಾನೇ ಸಮಾಧಾನ ಮಾಡಿಯಾನು? ಯಾರೊಡನೆ ತನ್ನ ಕಷ್ಟವನ್ನು ಹೇಳಿಕೊಂಡು ಹೃದಯವನ್ನು ಹಗುರ ಮಾಡಿಕೊಂಡಾನು? ಹೆಸರಿಗೆ ಮಗ ವಯಸ್ಸಿಗೆ ಬಂದಿರುವವನು. ಆದರೆ ಅವನಿಂದ ತಮಗೇನು ಪ್ರಯೋಜನ? ತನ್ನದೇ ಸಮವಯಸ್ಕ ಈರ. ಇದ್ದುದರಲ್ಲಿ ಅವನೇ ವಾಸಿ. ದುಡಿಯಲು ಬಿಡದೇ ತಾವೇ ಹೊಲದ ಕೆಲಸಕ್ಕೆ ಹೋಗಿ ದುಡಿಯುತ್ತೇವೆಂದು ಹಟ ಹಿಡಿಯುತ್ತಿದ್ದರು. ಈರನಿಗೆ ತಾನು ಹೋಗಲೇಬೇಕಾದ ಕೆಲಸವಿರಲಿಲ್ಲವಾದರೂ ಹೊತ್ತು ಹೋಗದ್ದಕ್ಕೆ ಎಂದಾದರೂ ದುಡಿಯಲು ಹೊರಡುತ್ತಿದ್ದ. ಇದನ್ನೆಲ್ಲಾ ನೋಡುತ್ತಿದ್ದ ಚಂದ್ರಣ್ಣನಿಗೆ ಶಂಕರನ ನೆನಪಿನಿಂದ ಮತ್ತಷ್ಟು ದುಃಖ ಹೆಚ್ಚುತ್ತಿತ್ತು. ಒಳಗೆ ಹೆಪ್ಪುಗಟ್ಟಿದ ನೋವನ್ನು ಯಾರೊಂದಿಗಾದರೂ ಹೇಳಿಕೊಳ್ಳದೆ ಕರಗಿ ಹರಿಯುವುದಿಲ್ಲವೆನಿಸಿದ್ದರಿಂದ, ಸಂಜೆ ಕೆರೆ ಏರಿಯ ಮೇಲೆ ನಡೆಯುತ್ತಲೇ, ಈರನಲ್ಲಿ ತನ್ನ ಅಳಲನ್ನು ತೋಡಿಕೊಂಡ. ಆದರೆ ಈರನಿಗೆ ಚಂದ್ರಣ್ಣನ ದುಃಖಕ್ಕೆ ಅರ್ಥವಿಲ್ಲ ಎನಿಸಿತು. ಅವನಿಗೆ ಅವನ ಮಗಳಿಗೆ ಶಂಕರನಲ್ಲಿ ಏನೋ 'ಮಯಿಮಾ;ನೇ ಕಾಣುತ್ತಿತ್ತು. ಅದಕ್ಕೆಂದೇ ಚಂದ್ರಣ್ಣನ ಮಾತಿಗೆ ಅವನು ಗಂಭೀರನಾಗಲಿಲ್ಲ, ಬದಲಾಗಿ "ಬುದ್ಧಿ, ಅವನ ವಿಸಯದಾಗೆ ನೀವು ಕೆಟ್ಟದಾಗಿ ಬಾವಿಸ್ಬ್ಯಾಡಿ, ನಿಮ್ಮ ಶಂಕರ ನಮ್ಮಂಗಲ್ಲ ಬುದ್ಧಿ. ಅವನಾಗೆ ಏನೋ ಮಯಿಮಾ ಇದೇಂತ ಅನ್ನಿಸ್ತಾದ. ನಿಮ್ಗೆ ಗೊತ್ತಿಲ್ಲ. ಚಿಕ್ಕಿ ನಂತಾವ ಏನೇನೋ ಇಚಾರನೆಲ್ಲ ಏಳವ್ಳೆ. ನಿಮಗ್ಯಾರಿಗೂ ಏಳಬ್ಯಾರ್ದಂತ ಚಿಕ್ಕಿ ಕೇಳಕಂಡವ್ಳೆ" ಎಂದ.

ಚಂದ್ರಣ್ಣ ಅವನ ಮಾತು ಕೇಳಿ ನಿಟ್ಟುಸಿರುಬಿಟ್ಟ. ಈರನಿಗೆ ತನ್ನ ಮನೆಯ ವಿಚಾರದಲ್ಲಿ ಭಕ್ತಿ ಶ್ರದ್ಧೆಯಿದೆ. ಈ ಮನೆತನದ ಸೇವೇನ ಮಾಡ್ಕೊಂಡೇ ಬಂದಿದ್ದಾರೆ. ಈರನಪ್ಪ, ಈರ – ಈಗ ಪುಟ್ಟು, ಅವರಿಗೆ ಈ ಮನೆ ಮೇಲೆ, ಮನೆಯ ಜನರ ಮೇಲೆ ಎಲ್ಲಿಲ್ಲದ ಅಭಿಮಾನ. ಮನೆಯನ್ನು, ಮನೆಯವರನ್ನು ಕುರಿತು ಯಾವ ಕೆಡುಕನ್ನೂ ಕೇಳ ಬಯಸುವುದಿಲ್ಲ; ಹಾರೈಸುವುದೂ ಇಲ್ಲ. ಇಂತಹ ಸ್ವಾಮಿಭಕ್ತಿ.

ಚಂದ್ರಣ್ಣನ ಮನೆಯವರೂ ಅಷ್ಟೆ. ಅವರ ಕಷ್ಟ ಸುಖಗಳೆಲ್ಲದರ ಜವಾಬ್ದಾರೀನೂ ಹೊತ್ತು ನಡೆಸಿಕೊಂಡಿದ್ದರು. ಹಾಗಾಗಿ ಈರ ಶಂಕರನ ವಿಷಯದಲ್ಲಿ ಅಭಿಮಾನದ ಮಾತನ್ನೇ ಆಡಿದ್ದ. ಆದರೆ ಚಂದ್ರಣ್ಣನಿಗೆ ಈರನ ಮಾತು ಸಮ್ಮತವಾಗಲಿಲ್ಲ. ಹೇಳಿದ.

"ಏನು ಮಹಿಮೇನೋ ಏನೋ ಈರ! ನನಗಂತೂ ಒಂದೂ ಅರ್ಥವಾಗೊಲ್ಲ. ವ್ಯವಹಾರ ಜ್ಞಾನವೇ ಇಲ್ಲ. ಯಾವಾಗ್ಲೂ ಹುಚ್ಚನಂತೆ ಇರ್ತಾನೆ. ನಮ್ಮ ವಿಷಯ ನಮಗೆ ಯೋಚ್ನೆ ಇಲ್ಲ. ನಾಳೆ ಅವನು ಬಾಳು ಬದುಕಬೇಕಾದವನು. ಹೀಗೇ ಇದ್ದರೆ ಅವನ ಜೀವನ ಏನಾದೀತು? ಮನುಷ್ಯನಾಗಿ ಹುಟ್ಟಿ ಬದುಕುವುದನ್ನು ಕಲಿಯದಿದ್ದರೆ ಹೇಗೆ? ಯಾವಾಗಲೂ ಅವನನ್ನು ನೋಡ್ಕೊಳ್ತಾ, ನಾವೇ ಇರ್ತೀವಂತ ಯಾವ ಭರವಸೆ! ಅವನಿಗೆ ಸ್ವಲ್ಪವಾದರೂ ಜವಾಬ್ದಾರೀ ಅನ್ನೋದೇ ಬೇಡವೆ?... ಅವನಿಗೇನು? ಯಾರೂ ಅವನಿಗೆ ಬೇಕಿಲ್ಲ. ಪ್ರಪಂಚಕ್ಕೂ ತನಗೂ ಏನೇನೂ ಸಂಬಂಧವಿಲ್ಲ ಅನ್ನೋ ಹಾಗೆ ವರ್ತಿಸಿದರೆ, ಒಂಟಿಯಾಗಿ ಜೀವನ ಸಾಗಿಸೋದು ಸಾಧ್ಯವೇ? ಬದುಕಿನಲ್ಲಿ ಹತ್ತು ಜನರ ಸ್ನೇಹ ಪ್ರೀತಿ, ಸಹಕಾರ ಬೇಕಾಗುತ್ತೆ. ಎಂಥ ಸನ್ಯಾಸಿಯಾದವನಿಗೂ ನಮ್ಮಂಥ ಲೌಕಿಕರ ಸಂಬಂಧ ಸಹಕಾರಗಳು ಬೇಕೇ ಬೇಕಾಗುತ್ತೆ. ಅಂಥಾದ್ದರಲ್ಲಿ ಇನ್ನೂ ಹದಿನೆಂಟು ತುಂಬದ ಈ ಶಂಕರ ಯಾರ ಹಂಗೂ, ಇಲ್ಲದೆ ಹೇಗೆ ಬದುಕುತ್ತಾನೆ? ನೀನೇ ಹೇಳು ಈರ" ಎಂದ.

ಚಂದ್ರಣ್ಣನ ಮಾತು ವ್ಯವಹಾರದ ದೃಷ್ಟಿಯಿಂದ ನಿಜವೇ. ಆದರೆ ಶಂಕರನ ತಲೆಗೆ ಇವೆಲ್ಲ ಹೋಗಬೇಕಲ್ಲ. 'ಯಾರ ತಂಟೆ ತಕರಾರು ಬೇಡ ಅಂತ, ತನ್ನ ಪಾಡಿಗೆ ತಾನು ನಿರುಪದ್ರವಿಯಾಗಿ ಬಾಳಿದರೆ ಯಾರಿಗೆ ಹಾನಿ' ಎಂಬಂತೆ ಬಾಳುವ ರೀತಿ ಶಂಕರನಿಗೆ ಸರಿಯೆನಿಸಿರಬಹುದು ಎಂದುಕೊಂಡ ಈರ. ಈರನ ಬುದ್ಧಿಗೆ ಇದಕ್ಕಿಂತ ಹೆಚ್ಚಿಗೆ ಆಲೋಚಿಸುವ ಸಾಮರ್ಥ್ಯವಿರಲಿಲ್ಲ.

ಚಂದ್ರಣ್ಣನೇ ಮಾತು ಮುಂದುವರೆಸಿದ:

"ಈರ ನಿನಗೆ ನೆನಪಿರಬಹುದು. ವಿಶ್ವ ಸತ್ತ ಮೇಲೆ ಎಷ್ಟು ಪಾಡುಪಟ್ಟು ಇವನು ಬಂದಾಂತ ಸಂತೋಷ ತಂದುಕೊಂಡಿವಿ. ಸದ್ಯಕ್ಕೆ ದೇವರು ಗಂಡುಮಗು ಕೊಟ್ಟು ಉದ್ಧಾರ ಮಾಡಿದ ಅಂತ ಹಿರಿಹಿರಿ ಹಿಗ್ಗಿದಿವಿ. ವಿಶ್ವನ ಸಾವಿನ ನೋವನ್ನು, ಶಂಕರನನ್ನು ಕೊಟ್ಟು ಮರೆಸಿದ್ದಕ್ಕಾಗಿ, ದೇವರನ್ನು ಕೊಂಡಾಡಿ ಈ ವರ ಅಮೂಲ್ಯವೆಂದು ಭಾವಿಸಿ ಕಾದಿಟ್ಟಿವಿ. ಆದರೆ ಈಗ ನೋಡಿದರೆ ಈ ವರ ಶಾಪವೇನೋ ಎನ್ನಿಸಿದೆ" ಎಂದು ನೊಂದುಕೊಂಡ.

ಚಂದ್ರಣ್ಣನ ನೋವನ್ನು ನೋಡಿ ಈರನಿಗೆ ಕರುಳು ಹಿಂಡಿದಂತಾಯಿತು. ತನ್ನ ಕೈಯಿಂದ, ಅನ್ನವಿಕ್ಕಿದ ದಣಿಗೆ ಏನಾದ್ರೂ ಉಪಕಾರ ಆಗುವ ಹಾಗಿದ್ರೆ ಮಾಡೋಣವೆಂದುಕೊಂಡ. 'ಒಳ್ಳೆಯವರಿಗೆ ದ್ಯಾವರು ಕೊಡೋ ಕಷ್ಟ ಅಷ್ಟಿಷ್ಟಲ್ಲ. ಕಷ್ಟವನ್ನೇ ಕೊಡಬ್ಯಾಕು ಅನ್ನೋ ಮನಸ್ಸಿದ್ದರೆ, ಸುಖ ಕೊಟ್ಟು ಕಷ್ಟ ಕೊಡುದ್ಯಾಕೇ

ದ್ಯಾವರು?' – ಎಂದು ಪ್ರಶ್ನಿಸಿಕೊಂಡ. ಈರ ಚಂದ್ರಣ್ಣನ ಬದುಕನ್ನು ನೋಡುತ್ತಲೇ ಬಂದಿದ್ದಾನೆ. ಹಣಕ್ಕಾಗಿ ಕೊರತೆ ಇಲ್ಲದಿದ್ದರೂ ಬೇರೆ ಹಲವು ರೀತಿಯ ತಾಪತ್ರಯಗಳನ್ನು ಅನುಭವಿಸುತ್ತಲೇ ಇರುವುದನ್ನು.

ಚಂದ್ರಣ್ಣನ ಮದುವೆ, ವಿಶ್ವನ ಹುಟ್ಟು – ಅವನ ಸಾವು, ಅತ್ತೆಯ ಸಾವು – ಮಾವನ ಚಿತ್ತ ವಿಕಾರ – ಮತ್ತೆ ತಾಯಿ – ತಂದೆ – ಇವರ ಸಾವು ಹೀಗೆ ಒಂದೆ ಎರಡೇ? ಒಟ್ಟೊಟ್ಟಿಗೆ ಇಷ್ಟೊಂದು ಸಾವುಗಳು ಯಾವ ಕಲ್ಲೆದೆಯನ್ನಾದರೂ ಕರಗಿಸದೆ ಇರುತ್ತದೆಯೆ?

ಇತ್ತೀಚೆಗೆ ಚಂದ್ರಣ್ಣನೂ ವಿರಕ್ತನಂತೆ ನಿರ್ಲಿಪ್ತನಂತೆ ಇರುತ್ತಿದ್ದ. ಪಾರ್ವತಿಯೂ ಅನ್ಯಮನಸ್ಕಳಾಗಿ ಇರುತ್ತಿದ್ದುದನ್ನೂ ಗಮನಿಸಿದ್ದ. ಯಾವ ಮಗುವಿನ ಹುಟ್ಟನ್ನು ದೇವರ ಅನುಗ್ರಹವೆಂದು ಕೊಂಡಾಡಿ ಕುಣಿದಿದ್ದರೋ ಅದೇ ಮಗು ಈಗ ಅವರ ಬದುಕನ್ನು ಸುಡುತ್ತಿರುವ ಚಿತೆಯಾಗಿದೆ. ಇದೆಂಥ ಅನ್ಯಾಯ! – ಎನಿಸಿತು ಈರನ ಮನಸ್ಸಿಗೆ. ಸಾವಧಾನವಾಗಿ ಆಲೋಚಿಸಿ ನುಡಿದ:

"ಬುದ್ಧಿ, ನೀವು ನಿಧಾನವಾಗಿ ಅವನಿಗೆ ತಿಳಿಸಿಯೋಳಿದರೆ ಅರ್ಥ ಮಾಡಿಕೊಂಡ್ಯಾನು. ಅವಂಗಿನ್ನೂ, ಜೀವನ್ದಾಗೆ ಅನುಭವ ಸಾಲ್ದು. ಎಲ್ಲ ಮುಂದೆ ಸರಿ ಓಯ್ತಾನೆ. ಅವನ ಯೋಚ್ನೆ ಬುಟ್ಬುಡಿ" ಅಂದ.

"ಇದೆಲ್ಲ ನಮ್ಮ ಪೂರ್ವಜನ್ಮ ಕರ್ಮಶೇಷ ಈರಣ್ಣ. ಯಾರ್ನಂದು ಏನು ಪ್ರಯೋಜನ? ಹೇಳು?... ಹೋಗಲಿ ಬಿಡು. ನನ್ನ ಕಷ್ಟ ಯಾವಾಗ್ಲೂ ಇದ್ದದ್ದೆ. ದೇವರಿಟ್ಟ ಹಾಗೆ ಆಗಲಿ" ಎಂದ ಸೋತ ದನಿಯಲ್ಲಿ.

ಈರ, ಈ ಮಾತನಾಡಿದ ಚಂದ್ರಣ್ಣನ ಮುಖದತ್ತ ನೋಡಿದ. ಜೀವನಾವಧಿಯಲ್ಲಿ ಒಮ್ಮೆಯಾದರೂ ಅಧೀರನಾದದ್ದನ್ನೇ ನೋಡದವನು, ಈಗ ಕಣ್ಣಂಚಿನಲ್ಲಿ ಮುತ್ತಾಗಿ ಉದುರಲಿದ್ದ ಕಂಬನಿಯನ್ನು ಕಂಡ!

* * *

ಶಂಕರನಲ್ಲಿ ಯಾವ ಬದಲಾವಣೇನೂ ಕಾಣಲಿಲ್ಲ. ಬರಬರುತ್ತಾ ಚಂದ್ರಣ್ಣನ ಆರೋಗ್ಯ ಸೂಕ್ಷ್ಮವಾಗತೊಡಗಿತ್ತು. ಅದಕ್ಕೇ ಚಂದ್ರಣ್ಣನ ಮನಸ್ಸಿಗೆ ಗಾಬರಿ ಮುಸುಕಿತು. ತಾನಿನ್ನೂ ಬದುಕಿರುವಾಗಲೇ ಹೆಣ್ಣು ಮಕ್ಕಳಿಬ್ಬರಿಗೂ ಮದುವೆ ಮಾಡಿಬಿಡಬೇಕೆಂದು ನಿರ್ಧರಿಸಿದ್ದರಿಂದ ಗಂಡುಗಳಿಗಾಗಿ ಅಲ್ಲಿ ಇಲ್ಲಿ ಎಡತಾಕಿದ. ಈ ದಿನವೂ 'ಗಂಡು' ನೋಡಿ ಬರಲು ಹತ್ತಿರದ ತಾವರೆಕೆರೆಗೆ ಹೋಗಿದ್ದ. ಬರುವುದು ತಡವಾಯಿತು. ಹೊತ್ತಿಗೆ ಸರಿಯಾಗಿ ಬಸ್ಸು ಸಿಕ್ಕದೆ, ಕಾದು ಬರುವಷ್ಟು ಹೊತ್ತಿಗೆ ಏಳು ಗಂಟೆ ದಾಟಿತ್ತು. ಇಡೀ ಹಳ್ಳಿಯನ್ನು ಕತ್ತಲು ಮುಕುರಿತ್ತು. ಆದರೆ ಬೆಳ್ದಿಂಗಳ ರಾತ್ರಿಯಾಗಿದ್ದರಿಂದ

ಕಾಲುಹಾದಿಗಳು ಆಲೋಕಿತವಾಗಿಯೇ ಇತ್ತು. ಕೆರೆಏರಿ ಮೇಲೆ ನಡೆದು ಹೊಲಗಳ ಮೂಲಕ ನಡೆದು ಮನೆ ಸೇರುವ ವೇಳೆಗೆ ಸಾಕಷ್ಟು ದಣಿವಾಗಿತ್ತು. ಹೋಗಿ ಬಿದ್ದುಕೊಂಡರೆ ಸಾಕೆನಿಸಿತ್ತು. ನೋಡಲು ಹೊರಟ ಗಂಡೂ ಮನಸ್ಸಿಗೆ ಅಷ್ಟಾಗಿ ಹಿಡಿಸದಿದ್ದ ಕಾರಣ, ಮನಸ್ಸಿಗೆ ಆದ ಬೇಸರವೂ ಒಂದು ಕಡೆ ದಣಿವನ್ನು ಹೆಚ್ಚಿಸಿತ್ತು. ಆದರೆ ಮನೆಗೆ ಬಂದಾಗ ಚಂದ್ರಣ್ಣನಿಗೆ ಕಂಬನಿ ದುಂಬಿ ಹೊಸ್ತಿಲಲ್ಲಿ ನಿಂತಿದ್ದ ಮಡದಿಯನ್ನು ನೋಡಿ ಗಾಬರಿಯಾಯಿತು. ಯಾವುದೋ ಒಂದು ಮೂಲೆಯಲ್ಲಿ ಉರಿಯುತ್ತಿದ್ದ ದೀಪವೊಂದು ಬಿಟ್ಟರೆ ಮನೆಯಲ್ಲಿ ಬೇರೆಲ್ಲೂ ದೀಪ ಹಚ್ಚಿರಲಿಲ್ಲ. ಹೆಂಡತಿಯನ್ನು ಮಾತನಾಡಿಸಲೂ ಹೆದರಿಕೆಯಾಯಿತು. ಕೇಳಿದರೆ ಯಾವ ದುಃಖದ ಸುದ್ದಿಯನ್ನು ಹೇಳುತ್ತಾಳೋ ಎಂಬ ಭೀತಿ. ಆದರೂ ಮೆಲ್ಲಗೆ ಅವಳ ಬಳಿ ಸರಿದು, ಮುಟ್ಟಿ ಮಾತನಾಡಿಸಲು ಪ್ರಯತ್ನಿಸಿದ. ಚಂದ್ರಣ್ಣ ಮಾತನಾಡಿಸುವುದನ್ನೇ ಕಾಯುತ್ತಿದ್ದಳೋ ಎಂಬಂತೆ, ಪಾರ್ವತಿ ಗಂಡನ ಕೊರಳಿಗೆ ಜೋತು ಬಿದ್ದು ಒಂದೇ ಸಮನೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಚಂದ್ರಣ್ಣನಿಗೆ ದಿಕ್ಕು ತೋಚದಂತಾಯಿತು. "ಪಾರ್ವತಿ, ಪಾರ್ವತಿ, ಏನಾಯಿತು ಪಾರ್ವತಿ? ಯಾಕೆ ಹೀಗೆ ದೀಪ ಹಚ್ಚೋ ವೇಳೆಯಲ್ಲಿ ಹೊಸ್ತಿಲಿಗೆ ಅಡ್ಡ ನಿಂತು ಅಳ್ತಿದ್ದೀಯ?" – ಎಂದು ಎಷ್ಟೇ ಒತ್ತಾಯಿಸಿ, ಪುಸಲಾಯಿಸಿ ಕೇಳಿದರೂ ಅವಳಿಂದ ಸಮಾಧಾನ ದೊರೆಯಲಿಲ್ಲ. ಹತ್ತಿರದಲ್ಲೇ ಬೆದರಿದ ಜಿಂಕೆಗಳಂತೆ ಒಬ್ಬರಿಗೊಬ್ಬರು ಒತ್ತಿಕೊಂಡು ಕುಳಿತಿದ್ದ ಮಕ್ಕಳ ಕಡೆ ಪ್ರಶ್ನಿಸುವಂತೆ ನೋಡಿದ. ಮಕ್ಕಳಿಬ್ಬರಿಗೂ ತಂದೆಯ ಪ್ರಶ್ನೆ ಅರ್ಥವಾಯಿತು. ಪ್ರಮೀಳ ಶಾಂತಳನ್ನು ತಿವಿದು ವಿಷಯ ಹೇಳುವಂತೆ ಸೂಚಿಸಿದಳು. "ಹೇಳಮ್ಮ ಏನಾಯ್ತು?" ಪುಸಲಾಯಿಸುವಂತೆ ಕೇಳಿದ. "ಅಣ್ಣ, ಶಂಕರಣ್ಣ ಬೆಳಗಿನಿಂದಲೂ ಮನೆಗೆ ಬಂದಿಲ್ಲ. ಊರೆಲ್ಲ ಹುಡುಕಿಸಿದ್ದಾಯಿತು. ಆದರೆ ಅಣ್ಣನ ಸುಳಿವೇ ಇಲ್ಲ. ಅದಕ್ಕೆ ಅಮ್ಮ ಇಷ್ಟೊಂದು ಅಳ್ತಿದ್ದಾಳೆ" ಎಂದಳು ಶಾಂತ.

ಚಂದ್ರಣ್ಣ ದೀರ್ಘ ನಿಟ್ಟುಸಿರೆಳೆದು ಹೇಳಿದ : "ಅಯ್ಯೋ ಹುಚ್ಚಿ! ಅಷ್ಟೇನಾ? ನಾನು ಇನ್ನೇನು ಆಗಿದೆಯೋ ಅಂತ ಹೆದರಿದ್ದೆ. ಅವನದು ಇದೆಲ್ಲಾ ಮಾಮೂಲೇ. ಈ ಥರ ಎಷ್ಟು ಸಲ ಮಾಡಿಲ್ಲ. ಇವತ್ತೇನೋ ಹೊಸದಾಗಿರೋ ಹಾಗೆ ಗಾಬರಿಯಾಗ್ತಿದ್ದೀಯಲ್ಲ. ಒಂದೆರಡು ದಿನ ಅಲ್ಲಿ ಇಲ್ಲಿ ಅಲೀತಾನೇ: ಆಮೇಲೆ ಹೊಟ್ಟೆ, ತಲೆ, ಚುರುಗುಟ್ಟಿದರೆ ಬಂದೇಬರ್‍ತಾನೆ. ಅದಕ್ಯಾಕೆ, ಏನೋ ಭೂಮಿ ತಲೆಮೇಲೆ ಬಿದ್ದಂಗೆ ಹೆದರ್‍ತೀಯ? ನಡಿ ನಡಿ. ನನಗೆ ತುಂಬಾ ಹಸಿವಾಗಿದೆ; ಸುಸ್ತಾಗಿದೆ. ಸ್ವಲ್ಪ ಬೇಗ ಮಲಗಿಕೊಳ್ಳಬೇಕು" ಎಂದ, ಏನೂ ಆಗದವನಂತೆ.

ಗಂಡನ ರೀತಿ ಪಾರ್ವತಿಗೆ ವಿಸ್ಮಯ ತರಿಸಿತು. ಶಂಕರನ ಕೊರಗಿನಿಂದ ಸೊರಗುತ್ತಿರುವ ಗಂಡನ ವಿಚಾರ ತನಗೆ ತಿಳಿಯದ್ದೇ! ಆದರೆ ಈಗ ಮಾತಾಡ್ತಿರೋ ರೀತಿ!! ತನಗೆ ನಂಬುವುದಕ್ಕೇ ಆಗಲಿಲ್ಲ. ಇಲ್ಲ ಇಲ್ಲ. ಇದು ಗಂಡನ ಆತ್ಮವಂಚನೆ.

ಬೆಳಗಿನ ಭಾವನೆಗಳಿಗೆ ತೊಡಿಸುತ್ತಿರುವ ಮಾತಿನ ವೇಷ. ತನ್ನ ದುಃಖವನ್ನು ಮರೆಸಲು ಸ್ವಂತ ದುಃಖದ ವಿಷವನ್ನು ನುಂಗಿಕೊಳ್ಳುತ್ತಿದ್ದಾನೆ ಎನಿಸಿತು. ಇನ್ನಷ್ಟು ಹಗರಣ ಮಾಡಿ ಗಂಡನ ಮನಸ್ಸನ್ನು ಕಲಕಲು ಇಷ್ಟಪಡದೆ ಒತ್ತರಿಸಿ ಬರುತ್ತಿದ್ದ ಅಳುವನ್ನು ಹತ್ತಿಕ್ಕಿಕೊಂಡಳು.

ಸದ್ಯಕ್ಕೆ ಶಂಕರ ನೆನಪಾಗಿ ಕಾಡತೊಡಗಿದ. ಎದುರಿಗಿದ್ದು ಒಂದು ಥರ ಕಾಡಿದರೆ, ಕಾಣೆಯಾಗಿ ಮತ್ತೊಂದು ತೆರ ಕಾಡತೊಡಗಿದ.

* * *

ದಿನಗಳು ಉರುಳಿದವು. ಶಂಕರನ ಸುಳಿವೇ ಇಲ್ಲ. ಅವನ ನೆನಪಾದಷ್ಟೂ ಮನಸ್ಸಿನ ಕ್ಷೋಭೆ ಹೆಚ್ಚುತ್ತಾ ಹೋಗುತ್ತಿತ್ತು. ಆದ್ದರಿಂದ ಅವನನ್ನು ಮರೆಯಲು ಪ್ರಯತ್ನಿಸಬೇಕು. ಇಲ್ಲವಾದಲ್ಲಿ ಆಗಬೇಕಾದ ಮುಂದಿನ ಕೆಲಸಗಳು ಆಗುವುದು ಸಾಧ್ಯವಿರಲಿಲ್ಲ. ಇರುವ ಹೆಣ್ಣು ಮಕ್ಕಳ ಸುಖಕ್ಕಾಗಿಯಾದರೂ ಶಂಕರನಿಂದಾದ ದುಃಖವನ್ನು ಮರೆಯಬೇಕಿತ್ತು.

ಇಷ್ಟರಲ್ಲಿ ಚಂದ್ರಣ್ಣನ ಅಕ್ಕ ಜಾನಕಿಯಿಂದ ಪತ್ರಬಂತು. ಪಾರ್ವತಿಗೆ ಆಶ್ಚರ್ಯ! ಎಷ್ಟೋ ದಿವಸಗಳಿಂದ ಜಾನಕಿಯಿಂದ ಪತ್ರವೇ ಇರಲಿಲ್ಲ. ಪಾರ್ವತಿ ತನ್ನ ಕಷ್ಟಗಳನ್ನು ಹೇಳಿಕೊಳ್ಳಲು ಜಾನಕಿಯೊಬ್ಬಳೇ ಆತ್ಮೀಯಳೆಂದು ಭಾವಿಸಿದ್ದರಿಂದ, ನಾದಿನಿಗೆ ಅನೇಕ ಸಲ ಪತ್ರ ಬರೆದಿದ್ದಳು. ಆದರೆ ಆಗೆಲ್ಲ, ಅವುಗಳಿಗೆ ಉತ್ತರವೇ ಇರಲಿಲ್ಲ. ಅಂಥಾದ್ದರಲ್ಲಿ ಈಗ ಅವಳಿಂದ ಪತ್ರ ಬಂದಿದೆಯೆಂದರೆ ಆಶ್ಚರ್ಯಪಟ್ಟದ್ದರಲ್ಲಿ ಅರ್ಥವಿತ್ತು.

ಪ್ರಮೀಳ, ಶಾಂತ ಇಬ್ಬರಿಗೂ ಅತ್ತೆಯಿಂದ ಪತ್ರ ಬಂದದ್ದು ಕುತೂಹಲಕ್ಕೆ ಕಾರಣವಾಯಿತು. ಏನು ಬರೆದಿದ್ದಾಳೋ ಕೇಳಿ ತಿಳಿದುಕೊಳ್ಳುವ ಆತುರ. ಪ್ರಮೀಳ ಕೇಳೇಬಿಟ್ಟಳು. "ಏನಮ್ಮ ಬರೆದಿದ್ದಾಳೆ ಪತ್ರದಲ್ಲಿ ಅತ್ತೆ?" "ನನಗೇನೇ ಗೊತ್ತು. ಇನ್ನೂ ಓದೋಕೇ ಇಲ್ಲ ಆಗಲೇ ಕೇಳಿದರೆ ಏನೂಂತ ಹೇಳ್ಲಿ?" ಅಂದವಳೇ ಪತ್ರ ಓದುತ್ತಿದ್ದಂತೆ ಮುಖ ಗೆಲುವಾಯಿತು. ಏನೋ ಸಂತೋಷದ ಸುದ್ದೀನೇ ಇರಬೇಕಂತ ಪ್ರಮೀಳ, ಶಾಂತ ಭಾವಿಸಿದರು.

ಜಾನಕಿ ತುಂಬಾ ಆಪ್ತವಾಗಿ ಪತ್ರ ಬರೆದಿದ್ದಳು. ಪ್ರಮೀಳ ಶಾಂತರನ್ನು ಒಂದೆರಡು ದಿವಸದ ಮಟ್ಟಿಗಾದರು ಕಳಿಸಿಕೊಡುವಂತೆ ಕೇಳಿದ್ದಳು. ಜಾನಕಿಯ ಹಿರಿಯ ಮಗ ಪ್ರಕಾಶ ವಿದೇಶದಿಂದ ಬರಲಿರುವ ಸುದ್ದಿ – ಮಕ್ಕಳನ್ನು ಕಳಿಸಿಕೊಡಲು ಪ್ರಾರ್ಥನೆ! ಇದೆಲ್ಲಾ ಒಂದಕ್ಕೊಂದಕ್ಕೆ ಸಂಬಂಧವಿರುವಂತೆ ಪಾರ್ವತಿಗೆ ಅನಿಸಿತು. ಎಲ್ಲಕ್ಕಿಂತ ಹೆಚ್ಚಾಗಿ ಹೃದಯ ತುಂಬಿ ಬರಲು ಕಾರಣವಾದದ್ದೆಂದರೆ, ಶಂಕರನ ವಿಚಾರವಾಗಿ ಬರೆದ ಮಾತು. ಅವನ ಯೋಗ ಕ್ಷೇಮವನ್ನು ವಿಚಾರಿಸಿ ಬರೆದದ್ದೇ ಅಲ್ಲದೆ, ಅವನನ್ನು ಊರಿಗೆ ಕಳಿಸಿಕೊಟ್ಟ ಪಕ್ಷದಲ್ಲಿ, ಪ್ರಕಾಶನ ಗೆಳೆಯರನೇಕರು ತಜ್ಞ

ವೈದ್ಯರಿರುವುದರಿಂದ, ಪ್ರಕಾಶ, ಶಂಕರನನ್ನು ಅವರಲ್ಲಿಗೆ ಕರೆದೊಯ್ದು ಚಿಕಿತ್ಸೆ ಮಾಡಿಸುತ್ತಾನೆ. ಈ ವಿಷಯದಲ್ಲಿ ತಡಮಾಡದೇ ಕೂಡಲೇ ಅವನನ್ನು ಕಳಿಸಿಕೊಡುವಂತೆ ಪದೇ ಪದೇ ಹೇಳಿ ಬರೆದಿದ್ದಳು.

ಪಾರ್ವತಿ ಮಕ್ಕಳಿಬ್ಬರಿಗೂ ಇವೆಲ್ಲವನ್ನೂ ವಿವರಿಸಿ ಹೇಳಿದಳು. ಆದರೆ... ಆದರೆ... ಆದರೆ... ಶಂಕರನು ಇದ್ದರಲ್ಲವೆ? ಅವನ ದೇಶಾಂತರ ಹೋಗಿರುವ ಸುದ್ದಿ ಆಕೆಗೇನು ಗೊತ್ತು, ಪಾಪ!! ಅಂದುಕೊಂಡಳು.

ಜಾನಕಿಯ ಪತ್ರ ನೋಡಿದಾಗಿನಿಂದ, ಪಾರ್ವತಿಯ ಮನಸ್ಸಿನಲ್ಲಿ ಆಸೆಯ ಮಿಂಚೊಂದು ಹೊತ್ತಿತ್ತು. ಜಾನಕಿ ಮನೆಯವರು ಊರಿಗೇ ಭಾರಿ ಕುಳಗಳು. ಅವರ ಪರಿಚಯವೆಲ್ಲ ದೊಡ್ಡ ದೊಡ್ಡವರೊಂದಿಗೆ! 'ಒಂದು ವೇಳೆ ಅವಳು ನೋಡುವ ಗಂಡುಗಳು ನಮ್ಮ ಮಕ್ಕಳನ್ನು ಒಪ್ಪಿ, ಮದುವೆ ಕುದುರಿದರೆ ಚೆನ್ನಾಗಿರುತ್ತೆ ಅಲ್ವೆ!' ಎಂದು ಆಲೋಚಿಸುತ್ತಿದ್ದಳು. ಅಷ್ಟರಲ್ಲಿ ಬಾಗಿಲು ಬಡಿವ ಸದ್ದು ಅವಳನ್ನು ಬೆಚ್ಚುವಂತೆ ಮಾಡಿತು. ಯಾರಿರಬಹುದು? ಅವರೇ ಬಂದಿರಬೇಕು. ಅವರಿಗೂ ಈ ಪತ್ರದ ವಿಷಯ ತಿಳಿಸಬೇಕು ಎಂದುಕೊಳ್ಳುತ್ತಲೇ ಎದ್ದು ಹೋಗಿ ಬಾಗಿಲ ಅಗುಳಿಯ ಮೇಲೆ ಕೈಯಿರಿಸುತ್ತಿದ್ದಂತೆ 'ಅಮ್ಮ' ಎಂಬ ಕೂಗು ಕೇಳಿಸಿತು. ಇದೇನಿದು? ಇದು ಶಂಕರನ ದನಿಯಂತಿದೆಯಲ್ಲ!!... ಛೆ! ಛೆ! ಇರಲಾರದು. ಇದು ಕೇವಲ ನನ್ನ ಭ್ರಮೆ. ಮನೆ ಬಿಟ್ಟು ಹೋದವನು, ಅವನ್ಯಾಕೆ ಬರುತ್ತಾನೆ? ಎಂದು ವಿಚಾರಿಸುತ್ತಲೇ ಬಾಗಿಲು ತೆರೆದಳು. ಇಲ್ಲ ಇಲ್ಲ ಇದು ಭ್ರಮೆಯಲ್ಲ, ಶಂಕರ ನನ್ನ ಶಂಕರ ಎಷ್ಟು ದಿವಸಗಳ ನಂತರ 'ಅಮ್ಮ' ಎಂಬುದು ಅಮೃತ ದನಿಯಂತೆ ಕೇಳುತ್ತಿದೆ ಎಂದು ಅವನನ್ನು ಎಳೆದು ಬಿಗಿದಪ್ಪಿಕೊಂಡಳು. ಚೆನ್ನಾಗಿ ಬಿಸಿಲಲ್ಲಿ ಸುತ್ತಾಡಿ ಬಂದಿರಬೇಕು. ಮುಖ ಕೆಂಪಗಾಗಿತ್ತು. ಬೆವರು ಸುರಿಯುತ್ತಿತ್ತು. ನೋಡಿದಂತೆ ಕರುಳು ಚುರುಗುಟ್ಟಿತು. "ಎಷ್ಟು ದಿವಸಗಳ ಮೇಲೆ ಈ ಮನೆಯ ನೆನಪಾಯ್ತೊ ಶಂಕರ? ಎಲ್ಲಿ ಹೋಗಿದ್ದೆಯೋ? ಏನು ಮಾಡ್ತಿದ್ದೆಯೋ...?" ಎಂದು ಒಂದೇ ಸಮನೆ ಪ್ರಶ್ನೆಗಳ ಸುರಿಮಳೆಗರೆದಳು. ಪಾರ್ವತಿಯ ಪ್ರಶ್ನೆಗಳನ್ನು ಕೇಳುತ್ತಿದ್ದ ಶಂಕರ ಒಂದು ಸಲ ಕಣ್ಣೆತ್ತಿ ನೋಡಿದ. ಪಾರ್ವತಿಯ ಕಣ್ಣುಗಳಲ್ಲಿ ಸಂತೋಷ, ವಾತ್ಸಲ್ಯಗಳು ತುಂಬಿದ್ದವು. ನೀರೂರಿದ ಕಣ್ಣುಗಳಲ್ಲಿ ಅವ್ಯಕ್ತವಾದ ನೋವಿನ ಛಾಯೆಯೂ ಇದ್ದಂತೆನಿಸಿತು. ಶಂಕರನೆಂದೂ ತಾಯಿಯನ್ನು ದಿಟ್ಟಿಸಿ ನೋಡಿರಲಿಲ್ಲ. ಇಷ್ಟು ದಿವಸ ಅವನಲ್ಲಿ ತೋರದ ಭಾವನೆಗಳು ಈಗ ಅವನ ಹೃದಯವನ್ನು ತುಂಬಿದವು. ಹಿಂದೆಂದೂ ಕಾಣದ ಅನುಭವ ಅವನಿಗಾದಂತಾಯಿತು.

ಮನಸ್ಸಿನಲ್ಲಿ ಹೇಗೆ ಹೇಗೋ ಆಯಿತು. 'ಇಷ್ಟು ದಿವಸ ತಾನು ವಿಹ್ವಲನಾಗಿ, ವಿಕ್ಷುಬ್ಧನಾಗಿ ಇದ್ದುದೇಕೆ?' ಎಂದುಕೊಂಡ. ತಾಯಿ ತನಗೆ ಒಂದು ದಿವ್ಯಶಕ್ತಿಯಾಗಿ ಕಾಣಿಸಿದಳು. ಪಾಳುಗುಡಿಯಲ್ಲಿ ಬಿಚ್ಚು ಬಯಲಲ್ಲಿ ಅರಸಿ ಅರಸಿ ಕಾಣದ ಒಂದು

ವಿಚಿತ್ರ ಅನುಭೂತಿ ತನಗಾಗುತ್ತಿರುವಂತೆ ಭಾಸವಾಯಿತು. ತಲೆ ಸುತ್ತಿ ಬಂದಂತಾಯಿತು. ಅಸ್ಪಷ್ಟವಾದ ದನಿಗಳು – ಕರ್ಕಶವಾಗಿ – ಶೂಲಗಳಾಗಿ ತನ್ನನ್ನು ಇರಿದಂತಾಗುತ್ತಿದೆ. ನೋವಿನಿಂದ ಗಟ್ಟಿಯಾಗಿ 'ಅಮ್ಮ, ಅಮ್ಮ' ಎಂದು ಕಿರುಚಿ ಪಾರ್ವತಿಯ ಮೇಲೆ ವಾಲಿದ.

ಪಾರ್ವತಿ ಗಾಬರಿಯಿಂದ ಮಕ್ಕಳಿಬ್ಬರನ್ನೂ ಕೂಗಿ ಕರೆದಳು. ಹಾಗೆಯೇ ನೀರು ತರುವಂತೆ ಆಜ್ಞಾಪಿಸಿದಳು. ಪ್ರಮೀಳ ಕೈಲಿದ್ದ ನೀರಿನ ಲೋಟವನ್ನು ತೆಗೆದುಕೊಂಡು ಪಾರ್ವತಿ, ಸ್ವಲ್ಪ ಸ್ವಲ್ಪವಾಗಿ ನೀರು ಚಿಮುಕಿಸಿದಳು. ಶಾಂತ ಅಮ್ಮನ ಸಹಾಯದಿಂದ ಅಣ್ಣನನ್ನು ಮೆತ್ತಗೆ ಮಲಗಿಸಿದಳು. ಪ್ರಮೀಳ ಗಾಳಿ ಹಾಕಿದಳು. ಹತ್ತು ಹದಿನೈದು ನಿಮಿಷಗಳ ತರುವಾಯ ಶಂಕರ ಚೇತರಿಸಿಕೊಂಡು ಮೆಲ್ಲಗೆ ಕಣ್ಣು ಬಿಟ್ಟು, ತನ್ನ ಸುತ್ತ ಕುಳಿತಿರುವ ತಾಯಿ, ತಂಗಿಯರನ್ನು ಕಂಡು ಹೃದಯ ತುಂಬಿ ಬಂತು. ತನಗೇನಾಗುತ್ತಿದೆ?... ತಾನೇಕೆ ಇವರೆಲ್ಲರ ಪ್ರೀತಿ ವಾತ್ಸಲ್ಯಗಳ ಕೊರಳು ಹಿಂಡಿ ಹೀಗಾಡುತ್ತಿದ್ದೇನೆ? ನನಗೂ ಎಲ್ಲರಂತೆ, ಎಲ್ಲರ ಜೊತೆಗೆ ಪ್ರೀತಿ ವಿಶ್ವಾಸಗಳ ಸಂಕೋಲೆಯೊಂದಿಗೇ ಬದುಕಬೇಕೆನಿಸುತ್ತದೆ. ಆದರೆ ಹಾಗಾಗಬೇಕೆಂದು ನಿರ್ಧರಿಸುವ ವೇಳೆಗೆ ಏನೇನೋ ಕಲ್ಪನೆಗಳು....! ಭ್ರಮಾ ದೃಶ್ಯಗಳು – ನನ್ನ ಮನಸ್ಸನ್ನು ವಿಚ್ಛಿದ್ರಗೊಳಿಸಿ ನಾನು ನಾನೇ ಅಲ್ಲದಂತೆ ಮಾಡುತ್ತವೆ. ಯಾರಿಗೆ ಹೇಳಿಕೊಳ್ಳಲಿ ನನ್ನ ಸಂಕಟವನ್ನು? ಯಾರೂ ನನ್ನನ್ನು ನಾನು ಹೇಳುವುದನ್ನು ನಂಬುವುದಿಲ್ಲ. ನನ್ನನ್ನು ಹುಚ್ಚನೆಂದೇ ಭಾವಿಸುತ್ತಾರೆ? ಇದಕ್ಕೆ ನಾನು ಹೇಗೆ ಸಮಜಾಯಿಷಿ ನೀಡಲಿ? ಎಂದು ಯೋಚಿಸುತ್ತಿರುವಷ್ಟರಲ್ಲಿಯೇ ತಾಯಿ ಗಾಬರಿ ಆತಂಕಗಳಿಂದಲೇ ಕೇಳಿದಳು:

"ಏನಾಯ್ತು ಶಂಕರ? ಯಾಕೆ ಹಾಗೆ ಕಿರುಚಿದೆ?"

"ಏನೂ ಆಗಿಲ್ಲಮ್ಮ. ಯಾಕೋ ಕಣ್ಣು ಕತ್ತಲು ಬಂತು ಅಷ್ಟೆ" ಎಂದು ಸಮಾಧಾನದಿಂದಲೇ ಉತ್ತರಿಸಿದ.

"ಹೂಂ! ಎಷ್ಟು ದಿವಸವಾಯ್ತೋ ಏನೊ ಹೊಟ್ಟೆಗೆ ಬಿದ್ದು. ಇನ್ನೇನಾಗುತ್ತೆ ಕಣ್ಣು ಕತ್ತಲು ಬರದೆ? ನಾವು ಹೇಳಿದ ಮಾತು ಕೇಳಿದರೆ ತಾನೆ?".... ಎಂದು ಹುಸಿಮುನಿದು ಮಾತಾಡುತ್ತಲೇ, ಶಾಂತಳಿಗೆ ಊಟ ತರುವಂತೆ ಸನ್ನೆಯಿಂದ ತಿಳಿಸಿದಳು. ಶಾಂತ ತಟ್ಟೆಯಲ್ಲಿ ಕಾಯಿ ಪಲ್ಲೆ, ಉಪ್ಪಿನಕಾಯಿ, ಅನ್ನ ತಂದಿಟ್ಟು, ಹುಳಿ ಬಡಿಸತೊಡಗಿದಳು. ಶಂಕರ ಒಂದಿಷ್ಟೂ ಪ್ರತಿಭಟನೆಯಿಲ್ಲದೆ ಜಾಣ ಮಗುವಿನಂತೆ ಸವಿದು ಸವಿದು ತಿನ್ನತೊಡಗಿದ. ಅವನು ತಿನ್ನುವುದನ್ನು ನೋಡುತ್ತಿದ್ದ ತಾಯಿಯ ಹೃದಯ ಹಿಗ್ಗಿತು. ಶಾಂತ ಪ್ರೀತಿಯಿಂದ ಅಣ್ಣನಿಗೆ ಮತ್ತೆ ಮತ್ತೆ ಒತ್ತಾಯ ಮಾಡಿ ಬಡಿಸುತ್ತಿದ್ದಳು.

"ಅಣ್ಣ, ಈ ಪಲ್ಯ ಸ್ವಲ್ಪ ಹಾಕ್ಕೊಳ್ಳಣ್ಣ. ತುಂಬಾ ಚೆನ್ನಾಗಿದೆ" ಎಂದಳು.

"ಬೇಡ ಶಾಂತ ಸಾಕು" ಎಂದು ಕೈ ಅಡ್ಡ ಮಾಡಿದ.

"ಅಣ್ಣ, ಹುಳಿ ಚೆನ್ನಾಗಿದೆಯೇನಣ್ಣ?" ಆಸಕ್ತಿಯಿಂದ ಕೇಳಿದಳು.

"ಹೂಂ! ನೀ ಮಾಡಿರಬೇಕು ಅದಕ್ಕೇ ಹಾಗೆ ಕೇಳ್ತಿದ್ದೀಯ. ಹೌದಲ್ಲ!"

"ಹೋಗಣ್ಣ" ಎಂದು ಹುಸಿ ಮುನಿದಳು.

ಶಂಕರ ಊಟಮಾಡಿ ಕೈ ತೊಳೆದು ಎದ್ದ. ಪಾರ್ವತಿಗೆ ಎದೆಯ ಮೇಲಿನ ಭಾರ ಇಳಿದಂತಾಯಿತು. ಆದರೂ ಶಂಕರ ಮರಳಿ ಬಂದುದರ ಸಮಾಧಾನವಂತೂ ಹೊಳೆಯಲಿಲ್ಲ. ನಿಜವಾಗಿಯೂ ಅವನು ಬದಲಾಗಿದ್ದಾನೆಯೇ? ಅಥವಾ ಇದೂ ಒಂದು ನಟನೆಯೇ?... ನಂಬುವುದಕ್ಕೆ ಮನಸ್ಸು ಒಪ್ಪದಿದ್ದರೂ, ಅವನು 'ಅಮ್ಮ' ಎಂದು ಕರೆದುದರಲ್ಲಿ ಪ್ರಾಮಾಣಿಕ ಆತ್ಮೀಯತೆ ಇದ್ದಂತಿತ್ತು. ಅದು ತನ್ನ ಅನುಭವಕ್ಕೆ ಬರದೆ ಹೋಗಲಿಲ್ಲ. ಕೇವಲ ವ್ಯವಹಾರದಂತಿದ್ದ ಅವನ ರೀತಿ, ಇಷ್ಟು ಆತ್ಮೀಯವಾಗಲು ಸಾಧ್ಯವೇ?... ಯೋಚಿಸಿದಷ್ಟೂ ಅಸಂಬದ್ಧವಾಗಿ ಕಂಡಿತು, ಶಂಕರನ ರೀತಿ.

ಅಸಮಾಧಾನ, ಅಸಂತೃಪ್ತಿಗಳಿಂದ ಕ್ಷುಬ್ಧವಾಗಿದ್ದ ಬದುಕಿನಲ್ಲಿ ಈ ಒಂದು ದಿನ ಪರ್ವದಿನವೆನಿಸಿತು. ಒಟ್ಟೊಟ್ಟಿಗೆ ಎರಡು ಸಂತಸದ ಸಂದರ್ಭಗಳು!... ಗಂಡನಿಗೆ ಎರಡು ವಿಷಯಗಳನ್ನೂ ತಿಳಿಸಬೇಕೆನ್ನುವ ಆತುರ ಪಾರ್ವತಿಗೆ!

ಶಂಕರ ಊಟಮಾಡಿ ಎದ್ದವನೇ ಹೊರಗೆ ನಡೆದ. ಬಿಸಿಲುಮಚ್ಚಿನಲ್ಲಿ ನಿಂತಿದ್ದ ಪ್ರಮೀಳ ಅಣ್ಣ ಹೊರಗೆ ಹೋಗುವುದನ್ನು ನೋಡಿ, 'ಅಣ್ಣಾ, ಎಲ್ಲಿ ತೋಟದ ಕಡೆ ಹೊರಟೆಯಾ ಈ ಬಿಸಿಲಲ್ಲಿ?" – ಎಂದು ಕೇಳಿದಳು.

ಪ್ರಶ್ನೆ ಬಂದ ದಿಕ್ಕಿನತ್ತ ನೋಡಿದ ಶಂಕರ "ಇಲ್ಲ, ಅಪ್ಪನನ್ನು ಊಟಕ್ಕೆ ಕರೆಯಲು ಹೋಗುತ್ತಿದ್ದೀನಿ" ಎಂದ.

ಪ್ರಮೀಳ ಆಶ್ಚರ್ಯದಿಂದ ಕಣ್ಣರಳಿಸಿ, "ಏನು ಅಪ್ಪನನ್ನು ಕರೆಯಲು ಹೋಗುತ್ತಿದ್ದೀಯಾ?... ಅಮ್ಮನ್ನು ಕೇಳಿದೆಯಾ?" ಎಂದು ಪ್ರಶ್ನಿಸಿದ್ದಕ್ಕೆ.

"ಹೋಗೆ, ಅಪ್ಪನನ್ನು ಊಟಕ್ಕೆ ಕರೆಯೋದಕ್ಕೆ ಅಮ್ಮನ ಅಪ್ಪಣೆ ಬೇಕೇನೆ?" ಎಂದು ಮರುಪ್ರಶ್ನೆ ಹಾಕಿದವನೇ, ಅಲ್ಲಿಂದ ಸರಸರ ಹೊರಟು ರಸ್ತೆ ಅಂಚಿನಲ್ಲಿ ನಡೆಯತೊಡಗಿದ. ಅಷ್ಟು ಹೊತ್ತಿಗೆ ಸರಿಯಾಗಿ ಚಂದ್ರಣ್ಣನೂ ಮನೆ ಕಡೆಗೇ ಹೊರಟಿದ್ದ. ಚಂದ್ರಣ್ಣ ಜತೆಯಲ್ಲಿದ್ದ ಮಲ್ಲನಗೌಡ ತಮ್ಮ ರಸ್ತೆಗೆ ಎದುರಾಗಿ ಬರುತ್ತಿದ್ದ ಶಂಕರನನ್ನು ನೋಡಿದ. ದಿಗ್ಭ್ರಮೆಯಿಂದ ಅವಾಕ್ ಆಗಿ ಕ್ಷಣಕಾಲ ನಿಂತುಬಿಟ್ಟವನು, ನಂತರ ಸಾವರಿಸಿಕೊಂಡು ಚಂದ್ರಣ್ಣನಿಗೆ ತಿವಿದು ಹೇಳಿದ: ಚಂದ್ರಣ್ಣ "ನೋಡು ಅಲ್ಲಿ ದೂರದಲ್ಲಿ ಶಂಕರಪ್ಪ ಇದ್ದಂಗವ್ನೆ" ಎಂದ. ಚಂದ್ರಣ್ಣನಿಗೆ ಉರಿಯುವ ಬಿಸಿಲಲ್ಲಿ ಯಾರೆಂಬುದು ತಿಳಿಯಲಿಲ್ಲ. ಹಣೆಯ ಮೇಲೆ ನೆರಳಿನಂತೆ ಕೈಯಿಟ್ಟು ನೋಡಿದ. ಶಂಕರ!... ತನ್ನ ಕಣ್ಣನ್ನೇ ನಂಬದಾದ. ಅದಕ್ಕೆ ಕೇಳಿದ ಸಂದೇಹದ ದನಿಯಲ್ಲಿ.

"ನನ್ನ ಮಗ ಶಂಕರ ಅಲ್ವೆ?" – ಎಂದ.

"ಯಾಕಪ್ಪ ನಿನ್ನ ಮಗನ ಗುರುತು ನಿನಗೆ ಸಿಗಲಿಲ್ವಾ?"

"ಗುರುತು ಸಿಗುತ್ತೆ. ಆದರೆ ಕೆಲವೊಮ್ಮೆ ಸಿಕ್ಕಿದ ಗುರುತೂ ಮೋಸ ಮಾಡುತ್ತೆ."

"ಇತ್ಲಾಗೇ ಬರ್‍ತಾವ್ನೆ"

"ಸರಿ, ಎಲ್ಲೋ ಸಾಯೋಕೆ ಹೋಗುತ್ತೇಂತ ಕಾಣುತ್ತೆ" ಸಿಡುಕಿ ನುಡಿದ.

"ಹಂಗೆಲ್ಲ ಅನ್ಬೇಡ, ಚಂದ್ರಪ್ಪ. ಕೆಟ್ಟಮಾತು ಮಕ್ಕಳ ಆಯಸ್ಸನ್ನು ಕಡಿಮೆ ಮಾಡುತ್ತೆ" – ತಿಳಿಸಿ ಹೇಳುವಂತೆ ನುಡಿದ.

"ಅವನ ಆಯಸ್ಸು ಹೆಚ್ಚಾಗಿ ಅವನಿಂದ ಆಗಬೇಕಾದ್ದೇನಿದೆ?" ಎಂದು ನಿಟ್ಟುಸಿರೆಳೆದ.

ಚಂದ್ರಣ್ಣನ ನಿಟ್ಟುಸಿರಿನಲ್ಲಿದ್ದ ನೋವಿನ ಪ್ರಮಾಣ ಮಲ್ಲಣ್ಣನಿಗೆ ಅರ್ಥವಾಯಿತು. ಆದರೂ ಸ್ವಂತ ಮಗನ ವಿಚಾರದಲ್ಲಿ ಅಶ್ರೇಯಕರವಾದ್ದನ್ನು ನುಡಿಯುವುದು ಯಾವ ತಂದೆ ತಾಯಿಗೂ ಸರಿಯೆನಿಸುವುದಿಲ್ಲ ಎಂದು ಭಾವಿಸಿ

"ಇದೇನ್ಮಾತು ಬಿಡು. ಲಕ್ಷಣವಾಗಿ ಒಬ್ಬ ಮಗ ಇದ್ದಾನೆ. ಅವನ ವಿಚಾರದಲ್ಲಿ ಇಷ್ಟು ಕಟುವಾದರೆ ಹೇಗೆ?" ಎಂದು ಪ್ರಶ್ನಿಸಿದ.

"ಮಲ್ಲಣ್ಣ, ನನಗೆ ನನ್ನ ಮಗ ಅಂತ ಪ್ರೀತಿ ವಾತ್ಸಲ್ಯ ಇರೋದಿಲ್ವೆ? ಆದರೆ ಇವನಿಂದ ನನ್ನ ಕುಟುಂಬಕ್ಕೆ, ನನಗೆ ಹತ್ತಿರುವ ಚಿಂತೆ ಎಂಥಾದ್ದು ಅಂತ ತಿಳಿದರೆ, ನನ್ನ ಮನಸ್ಸು ನಿನಗೆ ಅರ್ಥವಾಗುತ್ತೆ. ವಿಚಿತ್ರವಾದ ಅವನ ವರ್ತನೆ ಅಪ್ಪ ಅಮ್ಮ ಅನ್ನೋ ಪ್ರೀತಿ, ನಂಟು, ಜೀವನದ ಬಗ್ಗೆ ಜವಾಬ್ದಾರಿ ಯಾವುದೂ ಪುರುಷಾರ್ಥವಾದರೂ ಏನು?" ಎಂದು ಅತೀವ ವೇದನೆಯಿಂದ ನುಡಿದ.

"ಚಂದ್ರಣ್ಣ, ನಿನ್ನ ನೋವು ಏನೂಂತ ನಾನು ಊಹಿಸಬಲ್ಲೆ. ಆದರೆ ಯಾವಾಗಲೂ ಒಂದೇ ಥರ ಇರೊಲ್ಲ. ಯಾರೊಬ್ಬರ ವಿಚಾರದಲ್ಲೂ ದಿಢೀರ್ ಅಂತ ನಿರ್ಣಯಕ್ಕೆ ಬರುವುದು ತಪ್ಪು. ಒಂದಲ್ಲ ಒಂದು ದಿನ ಅವನು ಸರಿಹೋಗಬಹುದು. ಅಲ್ಲಿಯವರೆಗೂ, ನಾವು ಗಳಿಸಿದ ಕರ್ಮ ವಿಶೇಷವೆಂದು ಇದನ್ನು ಅನುಭವಿಸಬೇಕು. ಅವರದೂ ತಪ್ಪಲ್ಲ. ವಿಧಿ ಅವರನ್ನು ಹಾಗೆ ಆಡಿಸುತ್ತದೆ, ಅಷ್ಟೆ" ಎಂದು ವೇದಾಂತಿಕವಾಗಿ ಮಾತನಾಡಿದ. ಚಂದ್ರಣ್ಣನಿಗೆ ಮಲ್ಲಣ್ಣನ ವೇದಾಂತ ಕೇಳಿಸಿಕೊಳ್ಳುವ ಸಹನೆ ಇರಲಿಲ್ಲ. ಮಗನ ಮೇಲಿನ ಕೋಪ ಅತಿಯಾಗಿತ್ತು. ಅವನ ಮುಖವನ್ನೂ ನೋಡಬಾರದೆಂದು ನಿಷ್ಠುರವಾಗಿದ್ದರೂ, ತೀರ ಹತ್ತಿರಕ್ಕೆ ಬಂದು', "ಅಪ್ಪಾ, ಅಮ್ಮ, ಪ್ರಮೀ, ಶಾಂತ ನಿಮಗಾಗಿ ಊಟಕ್ಕೆ ಕಾಯ್ತಾ ಇದ್ದಾರೆ. ಬೇಗ ಬನ್ನೀಪ್ಪಾ" ಎಂದು

ನಿರ್ಮಲಾಂತಃಕರಣದಿಂದ, ಪ್ರೀತಿ ತುಂಬಿದ ದನಿಯಿಂದ ಕರೆದಾಗ, ಚಂದ್ರಣ್ಣ ಕರಗಿಹೋದ. ಮಲ್ಲಣ್ಣ ಚಂದ್ರಣ್ಣನ ಮುಖದಲ್ಲಾದ ಬದಲಾವಣೆ ಗಮನಿಸಿ ವಿಜಯದ ನಗೆ ನಕ್ಕ. ಮಗನ ಬಗ್ಗೆ ಕಠೋರ ನುಡಿಯಲು ಮನಸ್ಸು ಒಪ್ಪಲಿಲ್ಲ. ಮೆಲ್ಲಗೆ ಮೃದುವಾಗಿ ಕೇಳಿದ:

"ನೀನು ಮನೆಗೆ ಹೋಗಿದ್ದೆಯಾ?"

"ಹೂಂ! ನಾನು ಊಟಮಾಡಿ ಬಂದೆ. ನೀವಿನ್ನೂ ಬಂದಿಲ್ಲ ಅನ್ನೋ ವಿಚಾರ ತಿಳಿದು ನಾನೇ ಬಂದೆ" ಎಂದು ದೊಡ್ಡ ಸಾಹಸವನ್ನು ಮಾಡಿದಂತೆ ನುಡಿದ.

ಚಂದ್ರಣ್ಣನಿಗೆ, ರಸ್ತೆಯಲ್ಲೇ ಎಲ್ಲ ವಿಷಯಗಳನ್ನು ಕೇಳುವುದು ಸರಿಯಲ್ಲವೆನಿಸಿ, ಶಂಕರನ ಜೊತೆಗೆ ನಡೆದ. ಮಲ್ಲಣ್ಣ, ನಾಳೆ ಸಂಜೆ ಕಾಣುವುದಾಗಿ ಹೇಳಿ ಬೇರೆ ದಿಕ್ಕಿಗೆ ತಿರುಗಿದ. ಚಂದ್ರಣ್ಣನ ಮನಸ್ಸಿನಲ್ಲಿ, ನೂರೆಂಟು ಸಂದೇಹಗಳು ತಲೆಹಾಕಿದವು. ಮಗನ ಋಣವೇ ತೀರಿ ಹೋಯಿತೆಂದು ಭಾವಿಸಿ, ಮನೆ ಬಿಟ್ಟು ಓಡಿದ ಶಂಕರನನ್ನು ಹುಡುಕಿಸಿ ಸಿಗಲಾರದ್ದಕ್ಕೆ ಮರೆಯುವ ಪ್ರಯತ್ನದಲ್ಲಿ ತೊಡಗಿದ್ದರು. ಅಂಥಾದ್ದರಲ್ಲಿ ದಿಢೀರ್ ಅಂತ ಇವನು ಮತ್ತೆ ಪ್ರತ್ಯಕ್ಷನಾದುದ್ದು ಏಕೆ? ಎಲ್ಲೆಲ್ಲಿ ಸುತ್ತಾಡಿದ? ಹೇಗೆ ಇಷ್ಟು ದಿವಸ ಜೀವಂತವಾಗಿದ್ದ? ಊಟ ಉಪಚಾರಕ್ಕೇನು ಮಾಡಿದ? ಹೀಗೆ ಲೆಕ್ಕವಿಲ್ಲದ ಪ್ರಶ್ನೆಗಳು! ಇವುಗಳನ್ನು ತುಂಬಿಕೊಂಡು ಮನೆಯ ಒಳಗೆ ಪ್ರವೇಶಿಸುತ್ತಿದ್ದಂತೆಯೇ ಪಾರ್ವತಿ, ಪ್ರಮೀಳ ಎದುರಾದರು. ಪಾರ್ವತಿಯೇ ಮುಂದಾಗಿ ಕೇಳಿದಳು.

"ಯಾಕ್ರಿ, ತಡಮಾಡಿದಿರಿ? ಪಾಪ ಹೆಣ್ಮಕ್ಕಳು ಊಟ ಮಾಡದೆ ನಿಮ್ಮ ದಾರಿ ಕಾಯ್ತಿದ್ದಾರೆ. ಬೇಗ ನಡೀರಿ" ಎಂದು ಆತುರಪಡಿಸಿದಳು.

ಚಂದ್ರಣ್ಣನು ಆಕೆಯನ್ನು ಸೂಕ್ಷ್ಮವಾಗಿ ಗಮನಿಸಿದ. ಎಷ್ಟೋ ದಿವಸಗಳ ನಂತರ ಅವಳ ಮುಖದ ಮೇಲೆ ನಗೆ ನವಿಲು ಕುಣಿದಂತಿತ್ತು. ಸ್ವಲ್ಪ ಛೇಡಿಸುವ ಮನಸ್ಸಾಯಿತು. "ಏನು, ಇವತ್ತು ಇಷ್ಟೊಂದು ಗೆಲುವಿನಿಂದ ಇದ್ದೀರಿ? ಏನಾದರೂ ವಿಶೇಷ ಸುದ್ದಿ ಸಂಗತಿಗಳು.....?" ಎಂದು ಅನುಮಾನಿಸುತ್ತ ಕೇಳುತ್ತಿರುವಷ್ಟರಲ್ಲಿ ಪ್ರಮೀಳ, "ಅಣ್ಣ ಅಣ್ಣ ಒಟ್ಟೊಟ್ಟಿಗೆ ಎರಡೆರಡು ಸಂತೋಷದ ಸುದ್ದಿ ಅಮ್ಮ ನಿನಗೆ ಹೇಳ್ತಾಳೆ" ಎಂದು ನಕ್ಕಳು. ಪಾರ್ವತಿ ಹುಸಿ ಮುನಿದು ಪ್ರಮೀಳೆಯ ಕಡೆಗೆ ನೋಡಿದಳು. "ಥೂ ಹರಕುಬಾಯಿ ಮುಂಡೇದು! ಒಂದಾದರೂ ಗುಟ್ಟು ನಿಲ್ಲೋದೆ ಇಲ್ಲ, ಇನ್ನೂ ಬರೋಕೇ ಇಲ್ಲ, ಆಗಲೇ ವಾಯಾಡಿತನ! – ಒಂದು ನಿಮಿಷ ತೆಪ್ಪಗೆ ಬಾಯ್ಮುಚ್ಚಿ ಇರೋದೇ ಸಾಧ್ಯವಿಲ್ಲ" ಎಂದು ಜರಿದಳು.

"ಯಾಕೆ ಅವಳನ್ನು ಹಾಗೆಲ್ಲ ಬೈತೀಯ? ಅವಳು ಹೇಳಿದ್ದರಲ್ಲಿ ತಪ್ಪೇನು? ನಿನ್ನ ಸಂತೋಷಾನ ನಾವು ಹಂಚಿಕೊಳ್ಳೋಣ. ಅದೇನು ಮೊದಲು ಹೇಳು. ಆಮೇಲೆ ಬೇಕಾದರೆ ಹೊಟ್ಟೆ ತುಂಬಾ ಊಟ ಮಾಡಿದರಾಯಿತು" ಎಂದ. ವಿಧಿ ಇಲ್ಲದೆ ಪಾರ್ವತಿ ಬಾಯಿ ಬಿಟ್ಟಳು:

"ಏನಿದೇಂದ್ರೆ? – ಒಂದು ನಿಮಗೆ ಗೊತ್ತೇ ಇದೆ. ನಿಮ್ಮ ಮಗ ಶಂಕರ ಮನೆಗೆ ಹಿಂತಿರುಗಿರೋದು. ಇನ್ನೊಂದು ನಿಮ್ಮಕ್ಕ ಕಾಗದ ಬರೆದಿದ್ದಾಳೆ ಅಷ್ಟೇ" ಎಂದಳು.

ಗಂಡನಿಗೆ ಈ ಸುದ್ದಿಗಳೆರಡೂ ಅಂಥಾ ಗೆಲುವನ್ನು ತಂದಂತೆ ಕಾಣಲಿಲ್ಲ. ಚಂದ್ರಣ್ಣ ನಿರ್ಲಿಪ್ತನಾಗಿಯೇ ನುಡಿದ:

"ಓಹೋ – ಏನಂತೆ? ಇಷ್ಟು ದಿವಸದ ಮೇಲೆ ತಮ್ಮನ ನೆನಪಾಯಿತೋ ಆಕೆಗೆ?"

"ಛೆ! ಛೆ! ಹಾಗೆಲ್ಲ ಏನಿಲ್ಲ. ತುಂಬ ನೊಂದುಕೊಂಡು ಪತ್ರ ಬರೆದಿದ್ದಾಳೆ. ನಮ್ಮನ್ನೆಲ್ಲಾ ನೋಡಲೇಬೇಕು ಅಂತ ತುಂಬಾ ಆಸೆ ಎಳೀತಿದೆಯಂತೆ. ಈ ವಿಷಯಾನ ನಿಮಗೆ ಹೇಳೋಕೆ ಹೇಳಿದ್ದಾಳೆ."

'ಈಗ ಹೇಳಿದರೆ ಏನು ಬಂತು? ಆಗಾಗ ಒಂದು ಕಾಗದ ಬರೆಯೋಕೂ ಆಗೊಲ್ವೆ?" ಆಕ್ಷೇಪಣೆಯ ದನಿಯಲ್ಲಿ ಹೇಳಿದ.

"ಸರಿ ಒಪ್ಪಿಕೊಂಡೆ. ಆಕೆ ಬರೀಲಿಲ್ಲ ಅಂದ್ರೆ, ನೀವಾದರೂ ಬರೀ ಬಹುದಾಗಿತ್ತಲ್ಲ – ನಿಮಗೂ ಅವರ ಮೇಲೆ ಅಭಿಮಾನ ಇದ್ದಿದ್ದೇ ಆದರೆ ನೀವೇ ಬರೀತಿದ್ರಿ!" – ಅತ್ತಿಗೆಯ ಪರವಾಗಿ ವಾದಿಸಿದಳು.

"ಓಹೋಹೋ! ಏನು? ಅತ್ತಿಗೇನ ವಹಿಸಿಕೊಂಡು ಇಷ್ಟೊಂದು ಮಾತಾಡ್ತಿದ್ದಿ! ಲಂಚಗಿಂಚ ಏನಾದರೂ ಕೊಟ್ಟಿದ್ದಾಳೋ ಹೇಗೆ?" ವ್ಯಂಗ್ಯವಾಗಿಯೇ ಕೇಳಿದ.

"ನೋಡಿ, ಸ್ವಂತ ಅಕ್ಕನ ವಿಷಯದಲ್ಲಿ ಹಾಗೆಲ್ಲ ಮಾತಾಡೋದು ಸರಿಯಲ್ಲ. ಅವಳೇನು ನಮ್ಮಿಂದ ಬಯಸಿಲ್ಲ. ಬದಲಾಗಿ, ನಮ್ಮ ವಿಚಾರದಲ್ಲಿ ಎಷ್ಟೊಂದು ಕಳಕಳಿಯಿಂದ ಬರೆದಿದ್ದಾಳೆ, ಗೊತ್ತೇನು?

ಇನ್ನೂ ಒಂದು ವಿಚಾರ ಬರೆದಿದ್ದಾಳೆ. ರಜೆಗೆ ನಮ್ಮ ಮಕ್ಕಳನ್ನು ಕಳಿಸಿಕೊಡಬೇಕಂತೆ. ವಿದೇಶದಿಂದ ಪ್ರಕಾಶನೂ ಬರ್‍ತಿದ್ದಾನಂತೆ. ಅವರ ಊರಲ್ಲೇ ನಮ್ಮಿಬ್ಬರು ಮಕ್ಕಳಿಗೆ ಗಂಡುಗಳಿವೆ ಅಂತ ಬರೆದಿದ್ದಾಳೆ. ಇವರು ಅಲ್ಲಿಗೆ ಹೋದರೆ ಹಾಗೇ ತೋರಿಸಬಹುದೂಂತ್ಲೂ ಹೇಳಿದ್ದಾಳೆ."

"ಬೇರೆ ಗಂಡುಗಳನ್ನು ಹುಡುಕೋಕೆ ನಮಗೆ ಆಗೊಲ್ವೇನು? ಅವಳ ಮಗನೇ ಇದ್ದಾನಲ್ಲ; ಯಾರಾದರೂ ಒಬ್ಬರನ್ನು ತಂದುಕೊಂಡರೆ ಆಗೊಲ್ವೆ?"

"ಅಲ್ಲಾಂದ್ರೆ, ಅವರ ಅಂತಸ್ತಿಗೂ ನಮಗೂ ಎಲ್ಲಿ ಹೊಂದುತ್ತೆ! ಅಲ್ದೆ ಅಷ್ಟೊಂದು ಓದಿರುವ ಹುಡುಗನಿಗೆ ಹಳ್ಳಿ ಮುಕ್ಕರಾದ ನಮ್ಮ ಹುಡುಗೀರ ಬಗ್ಗೆ ಯೋಚನೆ ಮಾಡೋದಾದ್ರೂ ಹೇಗೆ? ವಿದ್ಯೆ, ಅಂತಸ್ತು ಯಾವುದೂ ಇಲ್ದೆ – ಹೇಗೇಂತ ಅದನ್ನು ಆಲೋಚಿಸೋದು?"

ಇದನ್ನೆಲ್ಲಾ ಕೇಳ್ತಾ ಕೂತಿದ್ದ ಶಂಕರ ಗಹಗಹಿಸಿ ನಗತೊಡಗಿದ. ಎಲ್ಲರೂ ಬೆರಗಾಗಿ ನೋಡಿದರು. ಚಂದ್ರಣ್ಣ ಸಿಟ್ಟಿನಿಂದಲೇ ಕೇಳಿದ: "ಯಾಕೋ ಹಾಗೆ ದೆವ್ವ ಹಿಡಿದವರಂತೆ ನಗ್ತಿದ್ದೀಯ?"

"ನೀವು ಆಸ್ತಿ ಅಂತಸ್ತು ಅಂತ ಮಾತಾಡಿದ್ದನ್ನು ನೋಡಿ ನಗು ಬಂತು." "ನಗುವಂಥಾದ್ದು ಏನಿದೆಯೋ?"

"ಹಾಗಲ್ಲಪ್ಪ, ನಾವೇ ಶಾಶ್ವತವಲ್ಲ ಅಂದ ಮೇಲೆ ಈ ಆಸ್ತಿ-ಅಂತಸ್ತಿನ ಬಗ್ಗೆ ಯೋಚನೆ ಮಾಡೋದು ದಡ್ಡತನವಲ್ಲವೇ?"

"ಅದು ಹೇಗೆ ದಡ್ಡತನವಾಗುತ್ತೆ? ಬದುಕಿ ಇರುವವರೆಗಾದರೂ ಇದೆಲ್ಲ ಬೇಕೇ ಬೇಕಾಗುತ್ತೆ. ಇವೆಲ್ಲ ಇಲ್ಲದಿದ್ದ ಮನುಷ್ಯ ಬದುಕಿದ್ದೂ ಸತ್ತಹಾಗೆ. ಸಮಾಜದಲ್ಲಿ ನಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳೋದಕ್ಕೆ ಇವೆಲ್ಲಾ ತುಂಬ ಮುಖ್ಯವಾಗುತ್ತೆ ಎಂದು ತಿಳಿಸಿ ಹೇಳುವಂತೆ ನುಡಿದ."

"ವ್ಯಕ್ತಿಯನ್ನು ಗುರುತಿಸುವುದಕ್ಕೆ ಇವುಗಳ ಅವಶ್ಯಕತೆಯಾದರೂ ಇದೆಯೇ? ಒಂದು ವೇಳೆ ಇವೇ ಮನುಷ್ಯನ ವ್ಯಕ್ತಿತ್ವವನ್ನು ಅಳೆಯುವಂತಾದರೆ, ಅಂತಹ ವ್ಯಕ್ತಿಯ ವ್ಯಕ್ತಿತ್ವ ಅರ್ಥಹೀನವಾದ್ದು ಮತ್ತು ಕೇವಲ ವಂಚನೆಯಾಗುತ್ತೆ, ಅಷ್ಟೆ" - ಎಂದ.

ಚಂದ್ರಣ್ಣನಿಗೆ ಶಂಕರನ ತಿಳಿವನ್ನು ಕಂಡು ಹೆಮ್ಮೆ ಎನಿಸಿತು. ಅವನು ಕೇಳಿಯೇ ಬಿಟ್ಟ, ತನ್ನ ಕುತೂಹಲವನ್ನು ತಡೆಯಲಾರದೆ,

"ಶಂಕರ, ಇದೆಲ್ಲ ನಿನಗೆ ಹೇಗೆ ಗೊತ್ತೋ? ಏನೂ ತಿಳಿಯದ ಬೋಳಾ ಶಂಕರನ ಹಾಗೆ ಇರುವವನು ಇದನ್ನೆಲ್ಲಾ ಎಲ್ಲಿಂದ ಕಲಿತೆಯೋ?" ಸಂತೋಷಾತಿರೇಕವಿತ್ತು ಚಂದ್ರಣ್ಣನ ಪ್ರಶ್ನೆಯಲ್ಲಿ.

"ಅಪ್ಪ ಯಾರಿಗೆ ಯಾರು ಕಲಿಸಬೇಕು? ಪ್ರತಿಯೊಂದು ವಸ್ತುವಿಗೂ ಅದರದರ ಗುಣಧರ್ಮ ಇದ್ದೇ ಇರುತ್ತೆ. ಹೂವಿಗೆ ಅರಳುವುದನ್ನೂ, ಚಿಕ್ಕಿಗೆ ಹೊಳೆಯುವುದನ್ನು, ನೀರಿಗೆ ಹರಿಯುವುದನ್ನೂ ಯಾರು ಹೇಳಿಕೊಡಬೇಕಪ್ಪ?"

"ಅಬ್ಬ! ನನ್ನ ಶಂಕರ...." ಹೆಮ್ಮೆಯಿಂದ ಕೂಗಿದಳು ಪಾರ್ವತಿ. ಮತ್ತೆ ಗಂಡನ ಕಡೆ ತಿರುಗಿ ಹೇಳಿದಳು.

"ನೋಡಿದಿರಾ..... ನಮ್ಮ ಶಂಕರ ಎಷ್ಟು ಬುದ್ಧಿವಂತನಾಗಿದ್ದಾನೆ. ಅನ್ಯಾಯವಾಗಿ ಇವನನ್ನು ಬೆಪ್ಪು ಗಿಪ್ಪು ಅಂತ ಆಡಿಕೊಳ್ತಿರ್ತೀರಿ..... ನನಗೆ ಗೊತ್ತಿದೆ ರೀ ನನ್ನ ಶಂಕರ ಸಾಮಾನ್ಯನಲ್ಲ. ಅವನು ನಾವೆಲ್ಲರೂ ತಿಳಿದುಕೊಂಡಿರುವುದಕ್ಕಿಂತ ಎತ್ತರದವನು. ಅವನನ್ನು ಅರ್ಥಮಾಡಿಕೊಳ್ಳಲು ನಾವೇ ಸೋತಿದ್ದೀವಿ. ಈಗಲಾದರೂ ನಮ್ಮ ಶಂಕರ ಏನೂಂತ ತಿಳೀತಲ್ಲ" ಎಂದು ಹಂಗಿಸುವ ದನಿಯಲ್ಲಿ ಪ್ರಶ್ನಿಸಿದಳು.

"ಏನೋ ಕಣೇ, ನನಗಂತೂ ಎಲ್ಲವೂ ಅಯೋಮಯವಾಗಿ ಕಾಣಿಸುತ್ತೆ. ಯಾವುದು ಸತ್ಯ ಯಾವುದು ಸುಳ್ಳು? – ಎನ್ನುವುದೇ ತಿಳಿಯದಂತಾಗಿದೆ" ಎಂದು ಸೋಲನ್ನು ಒಪ್ಪಿಕೊಂಡ. ಗಂಡ ಹೆಂಡಿರ ನಡುವೆ ನಡೆಯುತ್ತಿದ್ದ ಮಾತುಕತೆಯನ್ನು ಕೇಳುತ್ತಿದ್ದ ಶಂಕರನಿಗೆ ಒಳಗೊಳಗೇ ನಗು ಬರುತ್ತಿತ್ತು. ಒಂದು ದೀರ್ಘ ನಿಟ್ಟುಸಿರೆಳೆದು ಹೇಳಿದ:

"ಅಮ್ಮ ಒಂದೇ ಸಲಕ್ಕೆ ನಿನ್ನ ಮಗನ ವಿಚಾರದಲ್ಲಿ ಇಷ್ಟೊಂದು ಹಿಗ್ಗಿಬಿಡಬೇಡ. ತಂದೆ–ತಾಯಿ–ಮಕ್ಕಳು ಈ ಸಂಬಂಧಗಳೆಲ್ಲಾ ಬರೀ ಭ್ರಮೆ. ಪರಸ್ಪರ ಪ್ರೀತಿ ಅಧಿಕವಾದಷ್ಟೂ ನೋವು ತೀಕ್ಷ್ಣವಾಗುತ್ತೆ. ಈಗ ನೋಡು ನನ್ನ ಬಗ್ಗೆ ಇಷ್ಟೊಂದು ವಹಿಸಿಕೊಂಡು ಮಾತನಾಡುತ್ತಿದ್ದೀ. ನಾಳೆ ನನ್ನಿಂದ ನಿನ್ನ ಮನಸ್ಸಿಗೆ ಹಿಡಿಸದ ಹಿತವಾಗದ, ಏನಾದರೂ ಸಂಭವಿಸಿದರೆ ಅದನ್ನು ತಡೆದುಕೊಳ್ಳುವ ಶಕ್ತಿ ಇರುತ್ತದೆಯೇ? ಅದಕ್ಕೆ ನಾನು ಹೇಳೋದು, ಯಾರನ್ನೂ ಅಷ್ಟಾಗಿ ಹಚ್ಚಿಕೊಳ್ಳಬೇಡ. ಇವತ್ತು ನಿನ್ನ ನನ್ನ ನಡುವೆ ಅಮ್ಮ ಮಗ ಎನ್ನುವ ನಂಟು ಕಾಣುತ್ತಿದೆ. ನಾಳೆ ಈ ನಂಟು ಕಡಿದು ಬೀಳುವ ಪ್ರಸಂಗ ಬಂದರೆ?....." ಸಂದೇಹಿಸಿ ಕೇಳಿದ.

"ಏನೋ ಇದು? ಶಂಕರ ಕ್ಷಣದ ಹಿಂದಿನ ಭಾವನೆಗಳನ್ನೇ ಕತ್ತು ಹಿಚುಕಿ ಕೊಲ್ಲುವಂತಹ ಮಾತನಾಡುತ್ತಿದ್ದೀಯ? ಬದಲಾಗುತ್ತಿರುವ ನಿನ್ನನ್ನು ನೋಡಿ ನಾವಿಬ್ಬರೂ ಗರ್ವದಿಂದ ಬೀಗುವಂತಾಗಿದ್ದೆವು. ಈಗ ಇದ್ದಕ್ಕಿದ್ದಂತೆ ನಿನ್ನ ಮಾತಿನ ಧಾಟಿಯೇ ಬೇರೆಯಾಗತ್ತಿದೆಯಲ್ಲೋ" ಅಳುವ ದನಿಯಲ್ಲಿ ನುಡಿದಳು.

ಚಂದ್ರಣ್ಣನಿಗೆ ಮಾತನಾಡುವ ಮನಸ್ಸಾಗಲಿಲ್ಲ. ಊಟ ಮಾಡುತ್ತಿದ್ದವನು ಅರ್ಧಕ್ಕೆ ಎದ್ದುಹೋದ. ಕ್ಷಣಮಾತ್ರದಲ್ಲಿ ಗೆಲುವಿನ ವಾತಾವರಣದಲ್ಲಿ ನಿಸ್ತಬ್ಧ ಕವಿಯಿತು. ಪ್ರಮೀಳಾನೇ ಮುಂದಾಗಿ ಎಲ್ಲರ ಪರವಾಗಿ ಮಾತನಾಡಿದಳು.

"ಯಾಕಣ್ಣಾ ಹೀಗೆಲ್ಲಾ ಮಾತಾಡಿ ಎಲ್ಲರ ಮನಸ್ಸನ್ನು ಕೆಡಿಸ್ತೀಯ. ನಿನ್ನ ವಾದದ ರೀತಿ, ನಿನ್ನ ಬುದ್ಧಿವಂತಿಕೆಯ ಮಾತೂ ಅವರಿಗೆ ಅರ್ಥವಾಗುವುದಿಲ್ಲ. "ನಿನ್ನ ದೊಡ್ಡ ದೊಡ್ಡ ವಿಚಾರಗಳು ಅಮ್ಮನ ಬುದ್ಧಿಗೆ ಹೊಳೆಯುವುದಾದರೂ ಹೇಗೆ? ಇಷ್ಟೆಲ್ಲಾ ಹೇಳುವುದರಿಂದ ನಿನಗೆ ದೊರೆಯುವ ಲಾಭವಾದರೂ ಏನು?.... ನಮ್ಮನ್ನು ಗೋಳಾಡಿಸದೆ, ನಮ್ಮಂತೆಯೇ ನಮ್ಮ ಮಧ್ಯೆ ಇರುವುದಕ್ಕೆ ಪ್ರಯತ್ನಪಡು!" ಎಂದಳು. ಶಂಕರನಿಗೆ ತಂಗಿಯ ಮಾತಿನಲ್ಲಿ ಅರ್ಥವಿದೆ ಎನಿಸಿತು. ಆದರೆ ತಾನು ಉದ್ದೇಶಪೂರ್ವಕವಾಗಿ ಯಾರ ಮನಸ್ಸನ್ನು ನೋಯಿಸಲು ಮಾತನಾಡುವುದಿಲ್ಲ. ತನಗೆ ತಾನೇ ಬರುತ್ತದೆ. ತನ್ನೊಳಗಿನವರು ಯಾರೋ ಮಾತನಾಡುತ್ತಾರೆ. ಇದನ್ನೆಲ್ಲಾ ಅವರಿಗೆ ತಿಳಿಸಿ ಹೇಳುವುದಾದರೂ ಹೇಗೆ?" ಎಂದು ಆಲೋಚಿಸಿದ.

"ಪ್ರಮೀಳ, ನನ್ನಿಂದ ನಿಮಗೆಲ್ಲಾ ನೋವಾದ್ದಕ್ಕೆ ನನ್ನನ್ನು ಕ್ಷಮಿಸುವಂತೆ ಹೇಳು. ನಾನು ಬರುತ್ತೇನೆ" ಎಂದು ಹೇಳಿದವನೇ ಅಲ್ಲಿಂದ ಎದ್ದು ಹೊರಗೆ ನಡೆದ.

ಎರಡು ಮೂರು ದಿನ ಹೇಳಿಕೊಳ್ಳುವಂತಹ ಯಾವ ಪ್ರಸಂಗವೂ ನಡೆಯಲಿಲ್ಲ. ಶಂಕರನೂ ತನ್ನ ಪಾಡಿಗೆ ತಾನು ಇದ್ದುಬಿಟ್ಟ. ಬೆಳಿಗ್ಗೆ ಹೊರಟರೆ ಕತ್ತಲಾದ ಮೇಲೆ ಮನೆ ಸೇರುತ್ತಿದ್ದ. ಯಾರೂ ಅವನನ್ನು ಎಲ್ಲಿಗೆ ಹೋಗ್ತೀ ಏನು ಮಾಡ್ತಿ, ಅಂತ ಕೇಳಲಿಲ್ಲ. ಯಾಂತ್ರಿಕವಾಗಿ, ಮನೆಯ ವ್ಯವಹಾರಗಳು ನಡೆಯುತ್ತಿದ್ದವು. ಪ್ರಮೀಳ, ಶಾಂತರಿಗಂತೂ ಮನೆಯ ವಾತಾವರಣ ಉಸಿರು ಕಟ್ಟುವಂತಾಗಿತ್ತು. ಮನೆಯ ನಾಲ್ಕು ಗೋಡೆಗಳ ಮಧ್ಯೆಯೇ ಜೀವನ ಸಮಾಧಿಯಾಗುವುದೇನೋ ಎಂಬ ಭೀತಿ ಅವರನ್ನು ಮುಸುಕಿತ್ತು. ದಿನೇದಿನೇ ಕ್ಷೀಣಿಸುತ್ತಿದ್ದ ತಾಯಿಯ ದೇಹಸ್ಥಿತಿಯನ್ನು ಕಂಡು ಮತ್ತಷ್ಟು ಅಧೀರರಾಗುತ್ತಿದ್ದರು.

ಮೊದಲೇ ಸೊರಗಿ ನವೆದ ದೇಹ ನೆಲ ತಾಕಿದರೆ ಸಾಕು ನಿದ್ದೆಗೆ ಬದಲಾಗಿ ತಲೆತುಂಬ ಆಲೋಚನೆಗಳೇ, ಪಾರ್ವತಿಗೆ ತನ್ನ ದೌರ್ಭಾಗ್ಯಕ್ಕೆ ತಾನೇ ತನ್ನನ್ನು ನಿಂದಿಸಿಕೊಂಡಳು. ತನ್ನ ಹಣೆ ಬರಹಕ್ಕೆ ತಾನೇ ಹೊಣೆಯೆಂದು ಭಾವಿಸಿ, ಸಮಾಧಾನ ತಂದುಕೊಳ್ಳಲು ಪ್ರಯತ್ನಿಸಿದಳು.

ಈರನ ಮಗ ಪುಟ್ಟ. ಶಂಕರನ ಸಮವಯಸ್ಸಿನವನು. ಮನೆಯ ಹೊರಗಿನ ಕೆಲಸಗಳಲ್ಲಿ ಚಂದ್ರಣ್ಣನಿಗೆ ಸಹಾಯವಾಗಿದ್ದನು. ಪ್ರತಿದಿನ ತಪ್ಪದೆ ಮನೆಗೆ ಬಂದು ಪಾರ್ವತಿಯನ್ನು ಮಾತನಾಡಿಸಿಕೊಂಡು, 'ಏನಾದರೂ ಸಹಾಯ ಬೇಕೇ' ಎಂದು ಕೇಳಿಕೊಂಡು ಹೋಗುತ್ತಿದ್ದ. ಪುಟ್ಟನ ಆಪ್ತತೆ, ತಮ್ಮ ಮನೆಯ ಬಗ್ಗೆ ಅವನಿಗಿರುವ ಕಾಳಜಿ, ಅಪ್ಪನ ನಿಷ್ಠೆ ಮನೆಯವರ ವಿಚಾರದಲ್ಲಿ ಇರುವ ಅಕ್ಕರೆ ಇದನ್ನೆಲ್ಲಾ ನೋಡುತ್ತಿದ್ದರೆ ಪಾರ್ವತಿ, ಚಂದ್ರಣ್ಣನಿಗೆ ಹೃದಯ ತುಂಬಿ ಬರುತ್ತಿತ್ತು. ಅದರಲ್ಲೂ ಒಮ್ಮೆ ಪುಟ್ಟ 'ಅಯ್ಯ, ಸುಮ್ಮನೆ ಶಂಕರನ ವಿಚಾರವಾಗಿ ನೀವು ನೊಂದುಕೊಳ್ಳಬ್ಯಾಡಿ. ಅದನ್ನು ನೋಡಿದ್ರೆ ನಂಗೆ ಅಳು ಉಕ್ಕಿ ಬರುತ್ತೆ. ನೀವೇ ನನಗೆ ತಂದೆ ತಾಯಿ ಅಂತ ನಮ್ಮಪ್ಪ ಸಾಯುವಾಗ ಹೇಳಿ ಹೋಗಿದ್ದಾನೆ. ನನ್ನನ್ನೇ ನಿಮ್ಮಗ ಅಂದ್ಕೊಳ್ಳಿ ಅಯ್ಯ' ಎಂದು ನುಡಿದು ಕಣ್ಣೀರಿಟ್ಟಿದ್ದ. ಅವನ ಸಕ್ಕರೆಯಂತ ಮಾತು ಕಿವಿಗೆ ಎಷ್ಟು ರುಚಿಯಾಗಿತ್ತೆಂದರೆ, ಚಂದ್ರಣ್ಣ ಕ್ಷಣಕಾಲ ತನ್ನ ಮತ್ತು ಪುಟ್ಟನ ನಡುವಿನ ಅಂತರವನ್ನೇ ಮರೆತು ಅಪ್ಪಿ ತಬ್ಬಿಕೊಂಡ. ಚಂದ್ರಣ್ಣನ ರೀತಿಯಿಂದ ಕಕ್ಕಾಬಿಕ್ಕಿಯಾಗಿದ್ದ ಪುಟ್ಟ ಹೆದರಿಕೆಯಿಂದಲೇ ಕೇಳಿದ.

"ಅಯ್ಯಾ, ನೀವು ಮಾಡ್ತಿರೋದೇನು? ನಾನೆಲ್ಲಿ? ನೀವೆಲ್ಲಿ?" ಎಂದು ಬಿಡಿಸಿಕೊಂಡು ದೂರ ಸರಿದಿದ. "ಹೆದರಬೇಕಾದ್ದಿಲ್ಲ ಪುಟ್ಟ, ನನಗೂ ಒಬ್ಬ ಮಗನಿದ್ದರೂ ಮಗನ ಅಪ್ಪುಗೆಯ ಆನಂದದ ಅನುಭವವಿಲ್ಲ. ಮನಸ್ಸು ಮಮತೆಗಳಲ್ಲಿ ಮಗನನ್ನೂ

ಮೀರಿಸಿರುವ ನಿನ್ನಿಂದ ಮಗನಪ್ಪುಗೆಯ ಆನಂದದ ಆ ಅನುಭವವನ್ನು ಪಡೆಯುತ್ತಿದ್ದೇನೆ. ಇದು ನನ್ನ ಸ್ವಾರ್ಥವೇ ಹೌದು" ಎಂದು ನುಡಿದಿದ್ದ.

ಒಂದು ಬೆಳಿಗ್ಗೆ, ಎಲ್ಲರೂ ಎದ್ದಿದ್ದರೂ, ಶಂಕರನು ಎದ್ದಂತೆ ಕಾಣಲಿಲ್ಲ. ಅವನ ವಿಷಯದ ಬಗ್ಗೆ ಯೋಚನೆ ಮಾಡೋದೇ ಬೇಡ ಅಂತ ಎಲ್ಲರೂ ನಿರ್ಧಾರ ಮಾಡುತ್ತಿದ್ದರೂ ಯಾರಿಗೂ ಹಾಗೆ ನಿಷ್ಠುರವಾಗಿ ಇರಲು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲಿಯೂ ಹೆತ್ತ ಕರುಳಂತೂ ಸುಲಭವಾಗಿ ಕರಗಿ ಹೋಗುತ್ತಿತ್ತು. ತನಗೇ ಸ್ವಸ್ಥವಿಲ್ಲದಿದ್ದರೂ ಶಂಕರನು ಬೆಳಿಗ್ಗೆ ಕಣ್ಣಿಗೆ ಕಾಣದೆ ಹೋಗಲು ಚಡಪಡಿಸಿತು ಮನಸ್ಸು. ಶಾಂತಳನ್ನು ಕರೆದು ಕೇಳಿದಳು: ಶಾಂತ "ಸ್ವಲ್ಪ ಹೋಗಿ ನೋಡೆ, ಶಂಕರಣ್ಣ ಇನ್ನೂ ಎದ್ದಿದ್ದಾನೋ ಇಲ್ಲವೋ ಯಾಕೋ ಇಷ್ಟು ಹೊತ್ತಾದರೂ ಹೊರಗೇ ಬಂದಂತಿಲ್ಲ" ಎಂದು ಹೇಳಿ ಕಳಿಸಿದಳು.

ಶಾಂತ ಹೋಗಿ ಬಾಗಿಲು ಬಡಿದು "ಅಣ್ಣ, ಅಣ್ಣ" ಎಂದು ಮೂರು ನಾಲ್ಕು ಸಲ ಕೂಗಿ ಕರೆದಳು; ಒಳಗಿಂದ ಉತ್ತರ ಬರಲಿಲ್ಲ. ಆದರೆ ಮುಲುಗುವ ಧ್ವನಿ ಕೇಳಿಬಂತು. ಶಾಂತ ಸ್ವಲ್ಪ ಜೋರಾಗಿ ಒದ್ದು ಬಾಗಿಲು ತೆಗೆದಳು. ನೋಡಿ ಬೆಚ್ಚಿಬಿದ್ದಳು. ಶಂಕರ ನರಳುತ್ತಾ, ಛಳಿಯಿಂದ ಗಡಗಡ ನಡುಗುತ್ತಿದ್ದ. ಅವನ ಮೈಮೇಲೆ ಪ್ರಜ್ಞೆ ಇದ್ದಂತಿರಲಿಲ್ಲ. ಹತ್ತಿರ ಹೋಗಿ ಹಣೆ ಮುಟ್ಟಿ ನೋಡಿದಳು. ಕೆಂಡದಂತೆ ಸುಡುವ ಜ್ವರ! 'ಅಮ್ಮ ಅಮ್ಮ' ಅಂತ ಗಾಬರಿಯಿಂದ ಓಡಿ ಅಮ್ಮನಿಗೆ ಹೇಳಿದಳು. ಸುದ್ದಿ ಕಿವಿಗೆ ಬೀಳುವುದಕ್ಕೆ ಮೊದಲೇ ತನ್ನ ಅಸ್ವಸ್ಥತೆಯನ್ನು ಮರೆತು ಹೋದದ್ದನ್ನು ಒದ್ದು, ಶಾಂತಳ ಜೊತೆ ಕಾತರಾತುರಗಳಿಂದ ಶಂಕರನ ಕೋಣೆಗೆ ಬಂದಳು. ಅವನ ಸ್ಥಿತಿ ನೋಡಿ ಎದೆ ನಡುಗಿತು. ಕ್ಷಣಮಾತ್ರದಲ್ಲಿ ಮನಸ್ಸು ಆಶಂಕಿತವಾಯಿತು. ಅನಿಷ್ಟಗಳ ಕಲ್ಪನೆಯಿಂದ ನಡುಗಿದಳು. ಅವಳ ಕಣ್ಮುಂದೆ ವಿಶ್ವನ ಸಾವಿನ ಚಿತ್ರದ ಪುನರಾವರ್ತನೆಯಾಯಿತು. "ದೇವರೇ! ನನ್ನ ಮಗನನ್ನು ಉಳಿಸು" ಎಂದು ಮನಸ್ಸಿನಲ್ಲಿಯೆ ದೈನ್ಯವಾಗಿ ಪ್ರಾರ್ಥಿಸಿದಳು.

ಮನೆಯಲ್ಲಿ ಗಾಬರಿಯ ವಾತಾವರಣ ತುಂಬಿತು. ಪುಟ್ಟ ಹಿತ್ತಿಲಲ್ಲೇ ಇದ್ದ. ತೋಟದ ಕಡೆಗೆ ಆಗಲೇ, ನಸುಕಿನಲ್ಲಿಯೇ ಎದ್ದು ಹೊರಟಿದ್ದ ಚಂದ್ರಣ್ಣನಿಗೆ ಹೇಳಿಕಳಿಸಿದ್ದಾಯಿತು. ಪಂಡಿತರನ್ನು ಕರೆಸುವುದೇ ಇಲ್ಲ. ಪಕ್ಕದ ಹಳ್ಳಿಯಲ್ಲಿಯೆ ಒಬ್ಬ ವೈದ್ಯರು ಹೊಸದಾಗಿ ಬಂದಿರುವುದನ್ನೂ, ಸರಕಾರಿ ಆಸ್ಪತ್ರೆ ಇರುವುದನ್ನು ಪುಟ್ಟ ಹೇಳಿದ. ಹೆಚ್ಚು ಹೊತ್ತು ದೂಡುವುದರಿಂದ ತೊಂದರೆ ಜಾಸ್ತಿಯಾಗುತ್ತೆ ಅಂತ ಭಾವಿಸಿದ ಚಂದ್ರಣ್ಣ ಆಸ್ಪತ್ರೆಗೆ ಕರೆದೊಯ್ಯಲು ನಿರ್ಧರಿಸಿ ಪುಟ್ಟನಿಗೆ ಗಾಡಿ ಕಟ್ಟುವಂತೆ ಹೇಳಿದ.

ಪುಟ್ಟ ಚಂದ್ರಣ್ಣನ ಮಾತಿನಂತೆ ಬೇಗ ಗಾಡಿ ಕಟ್ಟಲು ಹೊರಟ. ಪಾರ್ವತಿ ತಾನೂ ಅವರ ಜೊತೆ ಬರುವುದಾಗಿ ಹೇಳಿದಳು. ಆದರೆ ಚಂದ್ರಣ್ಣ ಒಪ್ಪಲಿಲ್ಲ.

ಅವಳಿಗೇ ಆರೋಗ್ಯ ಸರಿಯಿಲ್ಲದಿರುವಾಗ ಅವಳು ಬಂದಾದರೂ ಏನು ಮಾಡಿಯಾಳು? ಎಂದು ಆಲೋಚಿಸಿ, ಅವಳಿಗೆ ಸಮಾಧಾನದಿಂದಲೇ ಬೇಡವೆಂದು ಹೇಳಿದ. ಪುಟ್ಟ ಜೊತೆ ಇರುವಾಗ, ಹತ್ತು ಜನ ಜೊತೆಗಿದ್ದಂತೆ ಚಂದ್ರಣ್ಣನಿಗೆ!

ಪುಟ್ಟನ ಸಹಾಯದಿಂದ ಶಂಕರನನ್ನು ಗಾಡಿಯಲ್ಲಿ ಮಲಗಿಸಿದ್ದಾಯಿತು. ಗಾಬರಿಪಡುವಂಥಾದ್ದೇನೂ ಇಲ್ಲ. ತಾವು ಬೇಗ ಆಸ್ಪತ್ರೆಗೆ ಹೋಗಿ ತೋರಿಸಿಕೊಂಡು ಬಂದುಬಿಡುವುದಾಗಿ ಹೇಳಿದರು ಚಂದ್ರಣ್ಣ ಮತ್ತು ಪುಟ್ಟ.

ಗಾಡಿ ಗಡಗಡ ಸದ್ದು ಮಾಡುತ್ತಾ ಸಾಗಿತು.

ತಾಯಿ ಮಕ್ಕಳು ಅವರು ಕಣ್ಮರೆಯಾಗುವವರೆಗೂ ನೋಡುತ್ತಲೇ ನಿಂತರು. ಇಪ್ಪತ್ತು ದಿವಸಗಳು ಹಾಸಿಗೆ ಹಿಡಿದವನು ಈಗೀಗ ಸ್ವಲ್ಪ ಚೇತರಿಸಿಕೊಳ್ಳತೊಡಗಿದ ಶಂಕರ. ಸ್ವಲ್ಪ ಸ್ವಲ್ಪವಾಗಿ ಜೀವ ಕಳೆ ಮರುಕಳಿಸುತ್ತಿತ್ತು. ಸದ್ಯಕ್ಕೆ ಶಂಕರನ ಶುಶ್ರೂಷೆ, ಆರೈಕೆಗಳೇ ಮುಖ್ಯವಾಗಿ ಬೇರೆ ಸಮಸ್ಯೆಗಳಿಗೆ ಅಷ್ಟಾಗಿ ಅವಕಾಶವಿರಲಿಲ್ಲ. ಪುಟ್ಟನಂತೂ ಪೂರ್ತಿಯಾಗಿ ಇಲ್ಲಿಯೇ ಉಳಿದುಬಿಟ್ಟ, ಗೆಳೆಯನ, ಪಾರ್ವತಮ್ಮನ ಮತ್ತು ದಣಿಯಾದ ಚಂದ್ರಣ್ಣನ ಸೇವೆಯಲ್ಲಿಯೇ ತನ್ನನ್ನು ತೊಡಗಿಸಿಕೊಂಡು ದುಡಿಯತೊಡಗಿದ. ಆದರೆ ಚಂದ್ರಣ್ಣ ಮಾತ್ರ ಸಂಸಾರದ ಹೊರೆಯಿಂದ, ಹೆಣ್ಣು ಮಕ್ಕಳ ಚಿಂತೆಯಿಂದ ಸೊರಗಿಹೋಗುತ್ತಿದ್ದ.

ಈ ಮಧ್ಯೆ ಜಾನಕಿಯಿಂದ ಮತ್ತೊಂದು ಪತ್ರ ಬಂದಿತ್ತು. ಎಲ್ಲರನ್ನೂ ನೋಡಬೇಕೆಂದು ಮನಸ್ಸು ಎಳೀತಿರುವುದರಿಂದ ತಾನೇ ತನ್ನ ಪ್ರಕಾಶನನ್ನು ಕರೆದುಕೊಂಡು ಬರುವುದಾಗಿ ಬರೆದಿದ್ದಳು. ಆದರೆ ಶಂಕರನ ಹಗರಣದಲ್ಲಿ ಪತ್ರದ ವಿಚಾರವೇ ಮರೆತುಹೋಗಿತ್ತು. ತಕ್ಷಣ ನೆನಪಾಗಿ ನೋಡಿದರೆ ಅವಳು ಬರುವ ದಿನ ಬಂದೇ ಬಂತು. ಇನ್ನೇನು ಬೆಳಗಾಗುತ್ತಿದ್ದಂತೆ ಜಾನಕಿ ಬಂದಿಳಿಯುತ್ತಾಳೆ. ಪಾರ್ವತಿಗೆ, ಮಕ್ಕಳಿಗೆ ಜಾನಕಿ ಬರುತ್ತಿರುವುದು ಸಂಭ್ರಮವೋ ಸಂಭ್ರಮ. ಕರಡುಗಟ್ಟಿದ ಆ ಮನೆಯಲ್ಲಿ ಹೊಸ ಗಾಳಿಯೊಂದು ಬೀಸುವ ಅನುಭವ.

ಪಾರ್ವತಿ ನಸುಕಿನಲ್ಲಿಯೇ ಎದ್ದು, ಕಂಬಳಿ ಹೊದ್ದು ಮಲಗಿದ್ದ ಮಕ್ಕಳಿಬ್ಬರನ್ನೂ ಎಬ್ಬಿಸಿದಳು. ಶಾಂತ ಹೆಚ್ಚು ಹೇಳಿಸಿಕೊಳ್ಳದೆ ಎದ್ದುಬಿಟ್ಟಳು. ಆದರೆ ಪ್ರಮೀಳ ಅಷ್ಟು ಸುಲಭವಾಗಿ ಏಳಲಿಲ್ಲ. ಶಾಂತ, ಅವಳು ಹೊದ್ದ ಕಂಬಳಿಯನ್ನು ಗಟ್ಟಿಯಾಗಿ ಎಳೆದು ಪಕ್ಕಕ್ಕೆ ಬಿಸಾಡಿ ಬಿರುಸಾಗಿ ಪ್ರಮೀಳಳನ್ನು ಅಲುಗಿಸಿದರೂ, ಕುಂಭಕರ್ಣನಂತೆ ಮಲಗಿದ್ದವಳು ಏಳುವ ಸೂಚನೆಯನ್ನೇ ತೋರಲಿಲ್ಲ. ಶಾಂತ ಇವಳಿಗೆ ತಕ್ಕ ಶಾಸ್ತಿ ಮಾಡಬೇಕೆಂದು ಒಂದು ಲೋಟದಲ್ಲಿ, ಕೊರೆವ, ತಣ್ಣಗಿನ ನೀರನ್ನು ತಂದು ಚಿಮುಕಿಸಿದ ಕೂಡಲೇ ಥಳಿಗೆ ನಡುಗಿ ನಿದ್ದೆಯಲ್ಲಿಯೇ ಸಿಟ್ಟಿಗೆದ್ದು, "ಥೂ ಹಾಳಾದ್ದು. ನಿದ್ದೆಗೂ ಅವಕಾಶವಿಲ್ಲ ಈ ಮನೆಯಲ್ಲಿ" ಎಂದು ಸಿಡುಕಿದಳು.

"ಏಳೇ ಪ್ರಮೀ, ಯಾರೋ ಬರ್ತಾರಂತೆ" ಅಂದಳು ಶಾಂತ.

"ಹೋಗೆ, ಯಾರು ಬಂದರೆ ನನಗೇನು? ಸುಮ್ಮನೆ ನನಗೆ ಹಿಂಸೆ ಮಾಡಬೇಡ. ನನಗೆ ಇನ್ನೂ ಮಲಗಬೇಕಿದೆ" ಎಂದು ಹೇಳುತ್ತಾ ಕಂಬಳಿ ಸೆಳೆದುಕೊಂಡಳು.

"ಏಳೇ ಪ್ರಮೀ, ಇನ್ನೂ ಹೊತ್ತಾಗಿಲ್ಲವೇನೆ? ಇನ್ನೂ ಮಲಗಿದ್ದರೆ ಅಮ್ಮನಿಂದ ಬೈಸಿಕೋತೀಯ" ಎಂದಳು ಶಾಂತ.

"ಅಬ್ಬಬ್ಬ ಏಳು! ಏಳು! ಏಳೂಂತ ಒಂದೇ ಸಮ ಪ್ರಾಣಃ ತೆಗೀತಾರೆ" ಎಂದು ಎಲ್ಲರಿಗೂ ಅನ್ವಯಿಸುವಂತೆ ನುಡಿದಳು.

"ಲೇ ಪ್ರಮಿ, ಯಾರು ಬರೋದು ಗೊತ್ತೇನೆ? ಜಾನಕತ್ತೆ, ಪ್ರಕಾಶ ಭಾವ ಬರ್ತಾರಂತೆ! ಎಂದು ಸಂಭ್ರಮದಿಂದ ನುಡಿದಳು.

"ಹಾಂ! ಏನಂದೆ? ಜಾನಕತ್ತೆ!" ಎಂದು ಅಚ್ಚರಿಯಿಂದ ಬಾಯಿ ತೆಗೆಯುತ್ತ ಛಂಗನೆ ಎದ್ದು ಕುಳಿತಳು.

"ಹೂಂ! ಹೂಂ! ಏನೇ ಅತ್ತೆ ಬರ್ತಾರೆ ಅಂದ ತಕ್ಷಣವೇ ಮೊಸಳೆ ಹಾಗೆ ಇಷ್ಟಗಲ ಬಾಯಿ ತೆಗೀತಿದ್ದೀಯಲ್ಲ! ಏನು ಸಮಾಚಾರ" ಛೇಡಿಸುವಂತೆ ಕೇಳಿದಳು.

"ಭಾವಾನೂ ಬರ್ತಾರಂತೇನು?" – ಮುಗ್ಧವಾಗಿ ಕೇಳಿದಳು ಪ್ರಮೀಳ.

"ಓಹೋ ಬರ್ತಾರೆ ಅಂದ್ರೇನೇ ನೀನು ಏಳೋದು ಅತ್ತೆ ಬರೋದು ಮುಖ್ಯವಲ್ಲ ನಿನಗೆ ಹಾಗಾದರೆ?" ಕೀಟಲೆ ಮಾಡಿದಳು.

"ಹೋಗೆ ನೀನೊಬ್ಬಳು– ಏನೇನೊ ಮಾತಾಡ್ತೀಯ ಕೇಳಿದ್ದಕ್ಕೆಲ್ಲ ತಪ್ಪು ತಪ್ಪಾಗಿ ಅರ್ಥ ಮಾಡ್ತೀಯ? ಸರಿಯಮ್ಮ, ನಾನು ಕೇಳಿದ್ದು ತಪ್ಪಾಯ್ತು.... ಆಯ್ತಾ?" ಅಪರಾಧಿಯಂತೆ ನುಡಿದಳು.

"ತಪ್ಪೇನಿಲ್ಲ. ಎಲ್ಲಾ ಸರಿಯಾಗಿಯೇ ಇದೆ.... ಮೊದಲು ನೀನೆದ್ದು ರೆಡಿಯಾಗು" ಎಂದು ಮುಸಿ ಮುಸಿ ನಕ್ಕಳು.

ಕೊಚ್ಚಿಹೋಗುವ ಪ್ರವಾಹದಲ್ಲಿ ದೋಣಿಯ ನೆರಳೂ ಸುಂದರ, ಆಶಾದಾಯಕವೆಂಬಂತೆ ಇವರಿಬ್ಬರ ಮಾತು ನಡೆಯಿತು. ಪಾರ್ವತಮ್ಮ ಆಗಲೇ ಸ್ನಾನ ಗೀನ ಮುಗಿಸಿ, ಇವರು ಏಳುವುದಕ್ಕೆ ಕಾದಿದ್ದರು. ಇಷ್ಟು ಹೊತ್ತಾದರೂ ಇನ್ನೂ ಬಾರದಿದ್ದುದನ್ನು ಗಮನಿಸಿ ಇಬ್ಬರ ಹೆಸರು ಹಿಡಿದು ಕೂಗಿದಳು.

ಇವರ ಗಲಭೆಯಿಂದ ಎಚ್ಚರಗೊಂಡ ಚಂದ್ರಣ್ಣ, "ಏನ್ರೇ ಇದು, ಇಷ್ಟು ನಸುಕಿನಲ್ಲಿ ನಿಮ್ಮ ಕಾರುಭಾರ. ಮದುವೆ, ಮುಂಜಿ, ಏನಾದ್ರೂ ಇದೆಯೇನು? ಸೂರ್ಯ ಕಣ್ಣು ಬಿಡುವುದಕ್ಕೆ ಮುಂಚೇನೇ ಎದ್ದು ಗಲಾಟೆ ಮಾಡಿ ಅವನನ್ನೂ ಕಣ್ಣು ಬಿಡಿಸುವ

ಹಾಗಿದೆಯಲ್ಲಾ. ಸುಮ್ಮನೆ ಏಳೋದೇ ಇಲ್ಲ ಊರಿಗೆಲ್ಲಾ ಗೊತ್ತಾಗಬೇಕು ನೀವು ನಸುಕಿನಲ್ಲಿ ಎದ್ದಿರುವುದು" ಎಂದು ಹಾಸಿಗೆಯ ಮೇಲೆ ಹೊರಳಾಡುತ್ತಲೇ ಹೇಳಿದ.

ಪಾರ್ವತಮ್ಮ ಒಳಗಿನಿಂದ ಬಂದು, ಗಂಡನನ್ನೂ ಏಳುವಂತೆ ಹೇಳಿದಳು.

"ಈಗ ಸರಿಹೋಯ್ತು, ಅದಕ್ಕೆ ಹೇಳೋದು, ಹೆಂಗಸರು ಮುದುಕಿಯರಾದರೆ ತುಂಬಾ ತಾಪತ್ರಯ. ಅವರಿಗೆ ನಿದ್ದೆ ಬರೊಲ್ಲ. ಬಂದವರನ್ನ ಬಿಡೋಲ್ಲ. ಎಲ್ಲಿಯ ಕರ್ಮಾ ಬಂತಪ್ಪ!" ಎಂದು ಹೇಳಿದ. ಚಂದ್ರಣ್ಣನ ಮಾತಿನಲ್ಲಿ ತಮಾಷೆ ಇತ್ತೋ ನಿಜ ಇತ್ತೋ ತಿಳಿಯಲಿಲ್ಲ.

"ಹಾಗಲ್ಲಾಂದ್ರೆ, ನಿಮ್ಮಕ್ಕ ಜಾನಕಿ ಬರ್ತೀನಂತ ಬರೆದಿದ್ದರು. ಅವರು ಬಂದಾಗ ಎಲ್ಲರೂ ಮೈಚಾಚಿ ಸೋಮಾರಿಗಳ ಹಾಗೆ ಮಲಗಿರೋದು ಚೆನ್ನಾಗಿರೊಲ್ಲಾಂತ ಎಬ್ಬಿಸಿದೆ."

"ಮತ್ತೆ ನನಗೆ ಸುದ್ದೀನೇ ಇಲ್ಲ. ನನ್ನಕ್ಕ ಬರೋದು ನನಗೆ ಗೊತ್ತಿಲ್ಲಾಂದ್ರೆ?"

"ನಿಮಗೆ ತಿಳಿಸಬೇಕಂತಲೇ ಇದ್ದೇ. ಆದರೆ ಎದುರುಬಿದ್ದ ಪರಿಸ್ಥಿತಿ ಆ ವಿಷಯವನ್ನೇ ಮರೆಸಿತ್ತು."

"ನೀನು ಕಾಗದ ಬರೆದಿದ್ದೆಯಾ ಅವರಿಗೆ?"

"ಇಲ್ಲ, ಅವರೇ ನಿಮ್ಮನ್ನು ತುಂಬಾ ನೋಡಬೇಕಂತ ಅನಿಸಿದೆ. ಬರ್ತೀನಿ. ತಮ್ಮನಿಗೆ ತಿಳಿಸು ಅಂತ ಬರೆದಿದ್ದರು." ಸುಳ್ಳನ್ನೇ ಹೇಳಿದಳು.

"ಒಬ್ಬಳೇ ಬರ್ತಿದ್ದಾಳಾ ಇಲ್ಲ ಯಾರಾದರೂ ಜೊತೆಗೆ ಬರ್ತಿದ್ದಾರ?"

"ಪ್ರಕಾಶನನ್ನು ಕರ್ಕೊಂಡು ಬರ್ತೀನೀಂತ ಬರೆದಿದ್ದರು."

"ಸರಿ ಹಾಗಾದರೆ, ಇನ್ನು ಎದ್ದು ಸಿದ್ಧಾಗಿ, ಬಸ್‌ಸ್ಟ್ಯಾಂಡಿಗೆ ಹೋಗುವಷ್ಟು ಹೊತ್ತಿಗೆ ಸರಿಹೋಗುತ್ತೆ.... ಟೈಂ ಎಷ್ಟಾಯಿತೋ ನೋಡು" ಎಂದು ಚಂದ್ರಣ್ಣ ಕೇಳಲು, ಪಾರ್ವತಿ ಪರಿಮಳಳನ್ನು ವಿಚಾರಿಸಿದಳು. ಪರಿಮಳ ಎದ್ದಿದ್ದರೂ ಇನ್ನೂ ಆಕಳಿಸುತ್ತಾ ಮೈ ಮುರಿಯುತ್ತಿದ್ದಳು. ಅಪ್ಪ ಎದ್ದದ್ದು ಕೇಳಿಸಿ, ಸ್ವಲ್ಪ ಚುರುಕಾದಳು. ದೇವರ ಕಟ್ಟೆಯ ಮೇಲೆ ಇಟ್ಟಿದ್ದ ಅಪ್ಪನ ಕೈಗಡಿಯಾರ ನೋಡಿ ಆರು ಗಂಟೆ ಎಂದಳು.

ಚಂದ್ರಣ್ಣ ಎದ್ದು ಬಚ್ಚಲು ಮನೆಗೆ ನಡೆದ. ಪ್ರಮೀಳ ಟವೆಲನ್ನು ತೆಗೆದು ಕೊಟ್ಟಳು. ಹತ್ತು ನಿಮಿಷದಲ್ಲಿ ಚಂದ್ರಣ್ಣ ಸ್ನಾನಮಾಡಿ ಬಂದ. ಶಾಂತ ಪರಿಮಳರು ಬೇಗ ಬೇಗ ಹಾಸಿಗೆಗಳನ್ನು ಸುತ್ತಿಟ್ಟು ಗುಡಿಸಿ, ಹಜಾರವನ್ನು ಕೋಣೆಗಳನ್ನು ಶುಭ್ರಗೊಳಿಸಿದರು. ಪರಿಮಳ ಶಂಕರನ ಕೋಣೆಯಲ್ಲಿ ಇಣುಕಿದಳು. ಶಂಕರ ಇನ್ನೂ

ನಿದ್ದೆ ಮಾಡುತ್ತಿದ್ದ. ಸದ್ದು ಮಾಡದೆ ಹಿಂತಿರುಗಿದಳು. ಮೆಲ್ಲನೆ ಬಂದು ಪಾರ್ವತಮ್ಮನನ್ನು ಕೇಳಿದಳು.

"ಅಮ್ಮ ಅಣ್ಣನನ್ನು ಎಬ್ಬಿಸಲೇ" ಎಂದು.

"ಬೇಡ ಪ್ರಮೀ, ಅವನು ಮಲಗಿರಲಿ. ಅದರಿಂದ ನಿನಗೇನೂ ತೊಂದರೆಯಿಲ್ವಲ್ಲ?" ಪೂರ್ತಿ ಮಾತಿಗೆ ಕಾಯಲಿಲ್ಲ. ನೆಟ್ಟಗೆ ಅವಳೂ ಸ್ನಾನಕ್ಕೆ ಹೋದಳು.

"ಏನೂಂದ್ರೆ ಬಸ್ ಬರುವುದು ಎಷ್ಟು ಹೊತ್ತಿಗೆ?" ಒಳಗಿಂದಲೇ ಪಾರ್ವತಮ್ಮ ಕೇಳಿದಳು.

"ಏಳೂವರೆ, ಎಂಟಾಗಬಹುದು. ಈ ಬಸ್ಸಿನ ವಿಷಯ ಹೇಳಲು ಬರುವುದಿಲ್ಲ. ಹೊತ್ತಿಗೆ ಸರಿಯಾಗಿ ಬಂದರೆ ಬಂತು, ಇಲ್ಲವಾದರೆ ಇಲ್ಲ. ಆದರೂ ನಾನು ಇನ್ನೇನು, ಹೊರಟೆ" ಎಂದು ಹೇಳಿದ.

ಚಂದ್ರಣ್ಣ ಆ ಮಾತು ಹೇಳುತ್ತಿದ್ದಂತೆ ಶಾಂತ ಕಾಫಿ ಹಿಡಿದು ತಂದಳು.

"ಓಹೋ ಆಗಲೇ ಕಾಫಿ ರೆಡಿಯಾಯ್ತೊ? ಏನಮ್ಮ ಅತ್ತೆ ಬರುತ್ತಾಳೆಂದರೆ ಇಷ್ಟೊಂದು ಸಂಭ್ರಮ ನಿಮಗೆಲ್ಲಾ? ಏನಾದರೂ ಮಸಲತ್ತು ಮಾಡಿ, ನಿಮ್ಮಮ್ಮ, ನನ್ನಕ್ಕನನ್ನು ಬೀಗಿತಿ ಮಾಡ್ಕೊಳ್ತಾಳಾ ಹೇಗೆ" ಎಂದನು ನಗುತ್ತ.

"ನಂಗೊತ್ತಿಲ್ಲಪ್ಪ. ಅಮ್ಮನ ಹತ್ತಿರವೇ ಕೇಳು" ಎಂದು ಹುಸಿಮುನಿದು ಅಲ್ಲಿಂದ ಜಾರಿದಳು.

ಚಂದ್ರಣ್ಣ ಕಾಫಿ ಕುಡಿದು ಮುಗಿಸಿದ. ಹಜಾರದಲ್ಲಿ ಗೋಡೆಗೆ ಹಾಕಿದ್ದ ಗಡಿಯಾರ ನೋಡಿದ. ಇನ್ನೂ ಐದರಲ್ಲೇ [illegible]ತ್ತು. ತಕ್ಷಣ ಗಡಿಯಾರ ಕೆಟ್ಟುಹೋಗಿದ್ದುದರ ನೆನಪಾಗಿ, "ಪ್ರಮೀಳ, ನನ್ನ ಗಡಿಯಾರ ತೆಗೆದುಕೊಂಡು ಬಾ" – ಎಂದು ಕೂಗಿ ಹೇಳಿದ. ಪ್ರಮೀಳ ಸ್ನಾನ ಮಾಡಲು ಹೋಗಿದ್ದರಿಂದ ಶಾಂತಳೇ ತಂದೆಗೆ ಕೈಗಡಿಯಾರ ತಂದು ಕೊಟ್ಟಳು. ಗಂಟೆ ನೋಡಿದ. ಏಳು ಗಂಟೆ ಸರಿಯಾಗಿ. ಇನ್ನು ಕಾಲುನಡಿಗೆಯಲ್ಲಿ ಬಸ್‌ಸ್ಟಾಂಡಿಗೆ ಹೋಗುವಷ್ಟು ಹೊತ್ತಿಗೆ ಸರಿಹೋಗುತ್ತದೆಂದು ಲೆಕ್ಕ ಹಾಕಿದ.

"ನಾನಿನ್ನು ಬರ್ತೇನೆ ಶಾಂತ. ಅಮ್ಮನಿಗೆ ಹೇಳಿಬಿಡು". ಎಂದು ಹೊರಬಾಗಿಲಿನತ್ತ ನಡೆದ. ಪಾರ್ವತಿ ದೇವರ ಪೂಜೆಗೆ ಕುಳಿತಿದ್ದಳು. ಅದಕ್ಕೆಂದೇ ಶಾಂತಳೂ ಅಮ್ಮನಿಗೆ ಹೇಳಿ ಹೋಗೆಂದು ಹೇಳಲಿಲ್ಲ.

ಮುಟ್ಟ ಬಂದು, ಹಾಲನ್ನು ಕರೆದು ಕೊಟ್ಟ. ಒಳಗೆ ಬರುವಾಗಲೇ ಚಂದ್ರಣ್ಣನನ್ನು ನೋಡಿದ. ಹೊರಗೆ ಹೋಗುವಾಗ ಕೇಳುವುದು ಸರಿಯಲ್ಲವೆಂದು ಸುಮ್ಮನಿದ್ದ. ಈಗ ಹಾಲಿನ ತಂಬಿಗೆಯನ್ನು ತೆಗೆದುಕೊಳ್ಳುತ್ತಿದ್ದ ಶಾಂತಳನ್ನೇ ಕೇಳಿದ.

"ಇಷ್ಟು ಬೆಳಿಗ್ಗೇನೇ ಅಯ್ಯ ಹೋದದ್ದು ಎಲ್ಲಿಗೆ ಶಾಂತಕ್ಕ?" ಮೆಲ್ಲಗೆ ಕೇಳಿದ.

"ಜಾನಕತ್ತೆ ಬರ್ತಾರಂತೆ ಊರಿಂದ ಕರೆತರೋದಕ್ಕೆ ಅಪ್ಪ ಬಸ್‌ಸ್ಟಾಂಡಿಗೆ ಹೋಗಿದ್ದಾರೆ."

"ನನಗೆ ಹೇಳಿದರೆ ನಾನೇ ಹೋಗುತ್ತಿದ್ದೆನಲ್ಲ?"

"ಹೋಗಲಿ ಬಿಡು. ಅಕ್ಕನನ್ನು ಸ್ವತಃ ಅಪ್ಪನೇ ಕರೆತರಲು ಹೋದದ್ದು ಒಳ್ಳೆಯದೇ ಆಯಿತು" ಎಂದು ಹೇಳಿ. ಹಾಲಿನ ತಂಬಿಗೆಯನ್ನು ಒಳಕ್ಕೆ ತೆಗೆದುಕೊಂಡು ಹೋದಳು. ಪುಟ್ಟ ಹೋಗುತ್ತೇನೆಂದು ಹೇಳಿ ಹೊರಟು ಅರ್ಧ ಗಂಟೆಯಾದ ಮೇಲೆ ಪ್ರಮೀಳ ಈಗ ಸ್ನಾನ ಮುಗಿಸಿ ಬಂದಿದ್ದಾಳೆ. ಅವಳಿಗೂ ಅತ್ತೆಯ ಬರವಿನಿಂದ ಹೇಳಲಾಗದ ಉಲ್ಲಾಸ. ಒಳಗೇನೋ ಖುಷಿ!

ಆ ದಿನ ಸ್ವಲ್ಪ ಶ್ರದ್ಧೆಯಿಂದ ಅಲಂಕರಿಸಿಕೊಂಡಳು, ಕನ್ನಡಿ ಮುಂದೆ ಕುಳಿತು ತನ್ನನ್ನು ಮತ್ತೆ ಮತ್ತೆ ನೋಡಿಕೊಂಡು ಹಿಗ್ಗಿದಳು. 'ನಿಜವಾಗಿಯೂ ತಾನು ರೂಪವತಿ' ಎಂದು ಭಾವಿಸಿದ್ದಾಳೆ. ಮುಖಕ್ಕೊಪ್ಪುವ ತಿಳಿ ಗುಲಾಬಿ ಬಣ್ಣದ ಸೀರೆಯುಟ್ಟಳು. ಪ್ರಮೀಳ ವಿಶೇಷವಾದ ಅಲಂಕಾರದಿಂದ ಮುದ್ದಾಗಿಯೇ ಕಾಣುತ್ತಿದ್ದಳು.

ಅಪರೂಪದ ಈ ಗುಲಾಬಿ ಬಣ್ಣದ ಸೀರೆಯನ್ನು ಕಂಡು ಶಾಂತ, "ಏನು ಅಮ್ಮಾವರು ಯಾವುದಾದರೂ ಮದುವೆಗೆ ಹೊರಟಿದ್ದೀರೇನು?" ಎಂದು ಚುಡಾಯಿಸಿದಳು. ಪ್ರಮೀಳಾಗೆ ಮಾತು ಕಲಿಸಿಕೊಡಬೇಕಾದ್ದಿರಲಿಲ್ಲ. ತಟಕ್ಕನೆ "ಹುಂ! ಹೌದು ನಮ್ಮಕ್ಕನ ಮದುವೆಗೆ" ಎಂದು ಉತ್ತರಿಸಿ, ಶಾಂತಳ ಬಾಯಿ ಮುಚ್ಚಿಸಿದಳು. ಚಂದ್ರಣ್ಣ ಬಸ್‌ಸ್ಟಾಂಡಿಗೆ ಹೋದ ಅರ್ಧ ಗಂಟೆಯ ನಂತರ ಬಸ್ ಬಂತು. ಅದೇ ಅದೃಷ್ಟ ಇಲ್ಲವಾದರೆ, ಮಾಮೂಲಾಗಿ ಗಂಟೆಗಟ್ಟಲೆ ಕಾಯಬೇಕಾಗುತ್ತಿತ್ತು. ತುಂಬಾ ದಿನಗಳೇ ಆಗಿದ್ದವು ಜಾನಕಿಯನ್ನು ನೋಡಿ. ಅದರಲ್ಲಿಯೂ ಜಾನಕಿಯ ಮಗನನ್ನು ನೋಡಿ ಯುಗಗಳೇ ಆಗಿದ್ದವು. ಚಂದ್ರಣ್ಣನೂ ಅವರನ್ನು ನೋಡಲು ಕಾತುರನಾಗಿಯೇ ಇದ್ದ.

ಬಸ್ ಬರುತ್ತಿದ್ದಂತೆ ಜನರೆಲ್ಲ ಉತ್ಸಾಹದಿಂದ ಚುರುಕಾದರು. ಕಲ್ಲು ಬೆಂಚಿನ ಮೇಲೆ ಕುಳಿತಿದ್ದ ಚಂದ್ರಣ್ಣ ಎದ್ದು ನಿಂತ. ಬಸ್ ತುಂಬಾ ಜನ. ಒಳಗಿರುವವರು ಸರಿಯಾಗಿ ಕಾಣಲಿಲ್ಲ. ಒಬ್ಬೊಬ್ಬರೇ ಇಳಿಯತೊಡಗಿದರು. ಎಲ್ಲರಿಗಿಂತ ಕೊನೆಗೆ ಇಳಿದವರೆಂದರೆ ಜಾನಕಮ್ಮ, ಪ್ರಕಾಶ, ತಕ್ಷಣ ಚಂದ್ರಣ್ಣ ಬಳಿಗೆ ಸಾರಿ ಜಾನಕಿಯ ಕೈಲಿದ್ದ ಸಾಮಾನುಗಳನ್ನು ಈಸಿಕೊಂಡ. ಜಾನಕಿಯನ್ನು ಹಿಂಬಾಲಿಸಿ ಪ್ರಕಾಶ ಇಳಿದ. ಚಂದ್ರಣ್ಣ, "ಇನ್ನೇನೂ ಸಾಮಾನು ಬಸ್‌ನಲ್ಲಿ ಬಿಟ್ಟಿಲ್ಲ ತಾನೇ?" ಎಂದು ಕೇಳಿದ್ದಕ್ಕೆ, ಏನಿಲ್ಲ, ಎಲ್ಲಾ ಸರಿಯಾಗಿಯೇ ಇವೆ ಎಂದು ಜಾನಕಿ ಉತ್ತರಿಸಿದಳು.

"ಏನೋ ಚಂದ್ರು ಒಂದೆರಡು ಕ್ಷೇಮ ಸಮಾಚಾರ ಬರೆಯುವುದಕ್ಕೂ ಆಗುತ್ತಿರಲಿಲ್ಲವೇನೋ?" ಮೆಲ್ಲನೆ ಹೆಜ್ಜೆ ಹಾಕುತ್ತಲೇ ಆಕ್ಷೇಪಣೆಯ ದನಿಯಲ್ಲಿ ಮಾತಾಡಿದಳು.

"ಬರೆಯುವುದಕ್ಕೆ ಯಾಕೋ ಆಗಲಿಲ್ಲ. ಅಕ್ಕ" ಎಂದು ಸುಮ್ಮನಿದ್ದ. ಒಂದೆರಡು ನಿಮಿಷಗಳ ತರುವಾಯ, "ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೇನು? ಭಾವ ಹೇಗಿದ್ದಾರೆ? ಅವರನ್ನೂ ಕರೆತರಲು ಆಗ್ತಿರಲಿಲ್ಲವೇನಕ್ಕ? ಮಕ್ಕಳೆಲ್ಲಾ ಚೆನ್ನಾಗಿದ್ದಾರೆ?" ಎಂದು ಪ್ರಶ್ನೆಗಳ ಮಳೆಗರೆದ.

"ಓಹೋ... ಅವರಿಗೇನು? ಚೆನ್ನಾಗಿಯೇ ಇದ್ದಾರೆ. ಬರಬೇಕಂತಲೇ ಅವರಿಗೆ ಆಸೆ. ಆದರೆ ಸ್ಕೂಲು ಕಾಲೇಜು ಪ್ರಾರಂಭವಾಯಿತಲ್ಲ!"

"ಅಲ್ಲ, ಪ್ರಕಾಶ ದೊಡ್ಡ ಗಂಡಸಾಗಿ ಬಿಟ್ಟಿದ್ದಾನೆ! ಚೋಟುದ್ದವಿದ್ದಾಗ ನೋಡಿದ್ದು" ಎಂದು ನಗುತ್ತಾ ಹೇಳಿದ. ಇಲ್ಲಿಯವರೆಗೆ ಅಕ್ಕ ತಮ್ಮ ಆತ್ಮೀಯವಾಗಿ ಮಾತನಾಡುತ್ತಿದ್ದರು. ಈಗ ಇದ್ದಕ್ಕಿದ್ದಂತೆ ಮಾತು ಪ್ರಕಾಶನ ಕಡೆ ಹರಿದದ್ದು, ಅವನ ಗಮನ ಸೆಳೆಯಿತು.

"ಏನು ಮಾವ, ಈಗಲಾದರೂ ನನ್ನ ಗುರುತು ಸಿಕ್ತಾ? ಇಷ್ಟು ಹೊತ್ತೂ ನೀವು ಮಾತಾಡದಿದ್ದುದಕ್ಕೆ, ಬಹುಶಃ ನನ್ನ ಗುರುತು ನಿಮಗೆ ಇರಲಾರದು ಎಂದುಕೊಂಡಿದ್ದೆ." ನಗುತ್ತಲೇ ಕೀಟಲೆಯ ದನಿಯಲ್ಲಿ ಹೇಳಿದ.

ಚಂದ್ರಣ್ಣನಿಗೆ ಅವನ ಮಾತಿನಿಂದ, ತುಂಬಾ ಬುದ್ಧಿವಂತ ಹುಡುಗ ಅನಿಸಿತು. ಪ್ರಕಾಶನ ಮಾತಿಗೆ ನಕ್ಕು

"ಚೆನ್ನಾಗಿ ಹೇಳಿದೆ. ನಾನು ನಿನ್ನನ್ನು ಮರೆತುಬಿಡುವುದೇ? ವಿದೇಶಕ್ಕೆ ಹೋಗಿ ಬಂದಿರುವ ಅಳಿಯನನ್ನು ಹೇಗಪ್ಪ ಮರೆಯುವುದು?.... ಅದ್ಸರಿ, ವಿದೇಶದ ಅನುಭವ ಚೆನ್ನಾಗಿತ್ತಾ?" ಎಂದು ಪ್ರಶ್ನಿಸಿದ.

"ಚೆನ್ನಾಗೇನೋ ಇರುತ್ತೆ. ಆದರೇನು ಯಾಂತ್ರಿಕ ಬದುಕು. ಮನುಷ್ಯನ ಭಾವನೆಗಳಿಗಿಂತ, ಅವನ ಆಸ್ತಿ, ಹಣವೇ ಮುಖ್ಯ. ಪ್ರತಿಯೊಬ್ಬರೂ ದುಡ್ಡು ಮಾಡುವ ಯೋಚನೆಯಲ್ಲಿರುತ್ತಾರೆಯೇ ಹೊರತು, ಬೇರೇನೂ ಅವರ ತಲೆಯಲ್ಲಿ ಸುಳಿಯುವುದಿಲ್ಲ ಅಷ್ಟೇ" ಎಂದ.

ಎತ್ತರವಾಗಿ, ಸುಂದರವಾಗಿ ಕೆಂಪಗೇ ಇರುವ ಪ್ರಕಾಶ ಚಂದ್ರಣ್ಣನಿಗೆ ತುಂಬಾ ಆಕರ್ಷಕವೆನಿಸಿದ ಬುದ್ಧಿ, ರೂಪ, ವಿನಯ, ವಿಧೇಯತೆಯೆಲ್ಲಾ ಅವನಲ್ಲಿದ್ದವು.... ತನ್ನ ಮಗನ ನೆನಪು ಅಡ್ಡ ಸುಳಿಯಿತು. ಹೋಲಿಕೆಯಲ್ಲಿ ಇಬ್ಬರೂ ನಿಂತಾಗ ಪ್ರಕಾಶ ಪ್ರಭಾವಿ ವ್ಯಕ್ತಿಯಾಗಿ ಕಂಡ. ಮತ್ತೊಮ್ಮೆ ಅವನನ್ನು ತಿರುಗಿ ನೋಡಿ ನಿಟ್ಟುಸಿರು ಬಿಟ್ಟ.

ಪ್ರಕಾಶನಿಗೆ ಮಾವನ ನಿಟ್ಟುಸಿರು ಕೇಳಿಸಿತು. ಯಾಕಿರಬಹುದೆಂದು ಯೋಚಿಸಿದ. ಈಗ ತಾನೇ ಎಷ್ಟೋ ದಿನಗಳ ಮೇಲೆ ಭೇಟಿಯಾಗುತ್ತಿರುವಾಗ ವೈಯಕ್ತಿಕ ವಿಚಾರಗಳನ್ನು ಕೇಳಬಾರದೆಂದುಕೊಂಡ.

ಜಾನಕಿಗೆ ತಮ್ಮ ತುಂಬಾ ಬಡಕಲಾದಂತೆನಿಸಿತು. ಪಾರ್ವತಿಯೇ ಮನೆ ವಿಚಾರಗಳನ್ನು ಸವಿವರವಾಗಿ ಬರೆದಿದ್ದಳು. ಮತ್ತೆ ತಮ್ಮನಲ್ಲಿ ಮನೆಯ ವಿಷಯ ಪ್ರಸ್ತಾಪ ಮಾಡುವುದು, ಅವನ್ನು ಮರೆತಿರಬಹುದಾದ ಕಹಿಯನ್ನು ನೆನಪಿಸಿದಂತಾಗುತ್ತದೆ, ಎಂದುಕೊಂಡು ಸುಮ್ಮನೆ ಚಂದ್ರಣ್ಣ ಪ್ರಕಾಶರೊಂದಿಗೆ ಹೆಜ್ಜೆ ಹಾಕುತ್ತಿದ್ದಳು.

ಮನೆ ಸೇರುವ ವೇಳೆಗೆ ಒಂಬತ್ತು ಗಂಟೆಯಾಗಿತ್ತು. ಪಾರ್ವತಮ್ಮ ಹಂಡೆಯ ತುಂಬಾ ಬಿಸಿ ಬಿಸಿ ನೀರನ್ನು ಕಾದಿರಿಸಿದಳು. ತಿಂಡಿಯೆಲ್ಲಾ ಅಣಿಗೊಳಿಸಿ ಇರಿಸಿದ್ದಳು. ಶಂಕರನನ್ನು ಎಬ್ಬಿಸಿ ಸ್ನಾನಕ್ಕೆ ಕಳಿಸಿದಳು. ಶಂಕರನ ಜ್ವರ ಕಡಿಮೆಯೇನೋ ಆಗಿತ್ತು. ಆದರೆ ನಿಸ್ಸತ್ವ ಇನ್ನೂ ಬಿಟ್ಟಿರಲಿಲ್ಲ. ಮಾಮೂಲಿನಂತೆ ಆಗಬೇಕಾದರೆ ತಿಂಗಳುಗಳೇ ಬೇಕಾಗಿದ್ದವು.

ಜಾನಕಿ, ಪ್ರಕಾಶ, ಚಂದ್ರಣ್ಣ ಬರುವುದನ್ನೇ ಕಾಯುತ್ತಿದ್ದ ಪಾರ್ವತಿ, ಅವರು ಬರುತ್ತಿದ್ದಂತೆ ಮುಖವರಳಿಸಿ ಸ್ವಾಗತಿಸಿದಳು.

'ಚೆನ್ನಾಗಿದ್ದೀಯ ಪಾರ್ವತಿ?.... ಎಲ್ಲಿ ಮಕ್ಕಳು ಕಾಣ್ತಿಲ್ವಲ್ಲ?.... ಎಂದು ಹೇಳುತ್ತಾ ಸುತ್ತಲೂ ನೋಡಿದಳು.

"ಒಳಗಿದ್ದಾರೆ ಅತ್ತಿಗೆ ಕರೀತೇನೆ", ಎಂದು ಹೇಳಿ ಇಬ್ಬರನ್ನೂ ಕೂಗಿದಳು. ಶಾಂತಿ, ಪ್ರಮೀಳ ಇಬ್ಬರೂ ಒಟ್ಟಿಗೇ ಬಂದರು.

"ಏನ್ರೇ, ಈ ಜಾನಕತ್ತೆಯ ಗುರುತು ಸಿಕ್ಕಿತಾ?.... ನೋಡ್ರಿ ನಿಮ್ಮ ಭಾವ ಬಂದಿದ್ದಾನೆ. ಚೆನ್ನಾಗಿ ನೋಡ್ಕೊಂಡು ಆರೈಕೆ ಮಾಡ್ಬೇಕು... ಎಂದು ನಕ್ಕಳು.

ಸುಮ್ಮನಿದ್ದ ಪ್ರಕಾಶ,

"ಸರಿಯಾಗಿ ಹೇಳಿದೆ ಬಿಡು. ಇಬ್ಬರೂ ಸೇರಿ ಆರೈಕೆಗೆ ಶುರು ಮಾಡಿ ಬಿಟ್ಟರೆ ನನ್ನ ಕತೆ ಮುಗಿದ ಹಾಗೆ. ಒಬ್ಬೊಬ್ಬರೂ ಅರ್ಧಅರ್ಧ ತಿಂದುಹಾಕ್ತಾರೆ" ಎಂದ.

ಅವನ ಮಾತಿಗೆ ಎಲ್ಲರೂ ಬಿದ್ದು ನಕ್ಕರು. ಆದರೆ ಪರಿಮಳ, ಶಾಂತ ಮಾತ್ರ ನಗಲಿಲ್ಲ! ಸುಮ್ಮನೆ ಮೌನವಾಗಿ ತಲೆಬಗ್ಗಿಸಿ ನಿಂತಿದ್ದರು.

"ಏನತ್ತೆ, ಇವರಿಗೆ ಮಾತು ಬರೊಲ್ಲ? ಸರಿಹೋಯ್ತು. ಈ ಮೂಕಿಗಳನ್ನು ಕಟ್ಟಿಕೊಂಡವನು ಗೋವಿಂದ!" ಎಂದು ಕೈ ಮುಗಿದ. ಪ್ರಮೀಳ ಬಾಯಿ ತೆರೆಯದೆ ಇದ್ದುದೇ ಆಶ್ಚರ್ಯ. ಈಗ ಈ ಮಾತು ಆಡಿದ ಮೇಲೂ ಸುಮ್ಮನಿರೋದು

ಹಿಂಸೆಯಾಗಿತ್ತು. ಆದರೆ ಮಗಳಿಗೆ ಮೊದಲೇ, ಬಂದವರ ಮುಂದೆಲ್ಲಾ ಬಾಯಹರಕುತನ ಮಾಡಬಾರದೆಂದು ಎಚ್ಚರಿಸಿದ್ದರು. ಆ ಭೀತಿಯಿಂದ ಹಲ್ಲು ಕಚ್ಚಿಕೊಂಡು ಸುಮ್ಮನಿದ್ದಳು. ಇಲ್ಲವಾಗಿದ್ದಲ್ಲಿ, ಮಾತಿನಿಂದ ಪ್ರಕಾಶನನ್ನು ಧೂಳಿಪಟ ಮಾಡಿಬಿಡುತ್ತಿದ್ದಳು. ಚಂದ್ರಣ್ಣ 'ನಿನ್ನಿಷ್ಟ' ಎಂದು ಸುಮ್ಮನಾದರು. ಜಾನಕಿ ಮಾತ್ರ ಪಾರ್ವತಮ್ಮನೊಂದಿಗೆ ಹೋದಳು.

ಇಷ್ಟೆಲ್ಲಾ ಮಾತಾಡುತ್ತಿದ್ದರೂ ಶಂಕರ ಕೋಣೆಯಿಂದ ಹೊರಗೆ ಬರಲಿಲ್ಲ. ಯಾವುದೋ ಪುಸ್ತಕವನ್ನು ಓದುತ್ತಾ ಕುಳಿತಿದ್ದ. ಜಾನಕಿ ಶಂಕರನ ವಿಚಾರವನ್ನೇ ಕೇಳಲಿಲ್ಲ. ಚಂದ್ರಣ್ಣ, ಪಾರ್ವತಿಯರ ಹೃದಯಕ್ಕೆ ನೋವಾದೀತೆಂದು ಹೆದರಿ ವಿಚಾರಿಸಲಿಲ್ಲ. ಶಂಕರ ಮನೆ ಬಿಟ್ಟು ಹೋಗಿರುವ ಸುದ್ದಿ ತಿಳಿದಿತ್ತೇ ವಿನಹ ಅವನು ಮನೆಯಲ್ಲಿಯೇ ಇರುವುದು ಗೊತ್ತಿರಲಿಲ್ಲ.

ಬಿಡುವಾಗಿ ಪಾರ್ವತಿ – ಜಾನಕಿಯರು ಪರಸ್ಪರ ತಮ್ಮ ಕುಟುಂಬಗಳ ವಿಚಾರ ಮಾತನಾಡಿಕೊಂಡರು.

"ಅತ್ತಿಗೆ, ನಿನ್ನ ಬಳಿ ಮುಚ್ಚಿಡ ಬೇಕಾದ ವಿಷಯವೇನೂ ಇಲ್ಲ. ನಿಮ್ಮ ತಮ್ಮ ಒಬ್ಬರು ಬಿಟ್ಟರೆ ಬೇರೆ ದಿಕ್ಕಿಲ್ಲ. ಶಂಕರನ ವಿಚಾರವಾಗಿ ಅವರಿಗೆ ತಲೆಯೇ ಸರಿಯಿಲ್ಲ. ಒಂದು ಕ್ಷಣವಿರುವಂತೆ ಇನ್ನೊಂದು ಕ್ಷಣವಿರುವುದಿಲ್ಲ ಅವರ ಮನಸ್ಥಿತಿ, ಈ ಹೆಣ್ಣು ಮಕ್ಕಳಿಗೆ ದಾರಿಯೊಂದಾಗಿದ್ದರೆ ನಾನು ಅಷ್ಟು ಚಿಂತಿಸುವುದಿಲ್ಲ. ಮೊದಲಿಗೆ ತುಂಬಾ ಓಡಾಡಿದರು, ಆದರೆ ಈಗ ಕೇಳುವುದಕ್ಕೆ ಭಯ. ಚೆನ್ನಾಗಿ ನಗುನಗುತ್ತಲೇ ಇರುತ್ತಾರೆ, ಯಾವುದೋ ಕ್ಷಣದಲ್ಲಿ ಸಿಡಿದೇಳುತ್ತಾರೆ. ಕೈಗೆ ವಯಸ್ಸಿಗೆ ಬಂದ ಮಗನಿದ್ದರೂ, ನಮ್ಮ ಪಾಲಿಗೆ ಮರೆಯಲು ಪ್ರಯತ್ನಿಸಿದರು. ಇನ್ನೇನು ಅವನ ನೆನಪು ಪೂರ್ತಿ ಮಾಸಿ ಹೋಗುತ್ತಿದೆ ಎಂದುಕೊಂಡರು. ಮನೆಗೆ ಬಂದರೆ ಸೇರಿಸಬಾರದೆಂಬ ತೀರ್ಮಾನಕ್ಕೆ ಬಂದಿದ್ದರೂ, ಅವನ ಸ್ಥಿತಿ ನೋಡಿ ಕರಗಿದರು. ಹಳೆಯ ತಪ್ಪನ್ನು ಮರೆತು ಅವನನ್ನು ಮನೆಗೆ, ಮನಸ್ಸಿಗೆ ಕರೆದುಕೊಂಡರು. ಚಿಕಿತ್ಸೆ ಮಾಡಿಸಿದರು. ಈಗೀಗ ಚೇತರಿಸಿಕೊಳ್ಳುತ್ತಿದ್ದಾನೆ. ಆದರೆ ಮಾನಸಿಕ ಬದಲಾವಣೆ ಮಾತ್ರ ಅಷ್ಟಾಗಿ ಆಗಿಲ್ಲ. ಅವನಿಂದ ಸಹಾಯವೇನಾದರೂ ಆಗುತ್ತದೆಂದು ಭಾವಿಸುವುದು ದೂರದ ಮಾತೇ ಆಯಿತು.

"ಅಲ್ಲ ಪಾರ್ವತಿ, ಶಂಕರ ಮನೆ ಬಿಟ್ಟು ಹೋದನೆಂದು ಬರೆದಿದ್ದೆಯಲ್ಲ. ಅವನು ಬಂದದ್ದಾದರೂ ಯಾವಾಗ?"

"ನಿಮ್ಮ ಉತ್ತರ ಸೇರಿದ ದಿವಸವೇ. ಅವರಿಗೂ ತಿಳಿಸಬೇಕೆಂದು ಕೊಂಡಿದ್ದೆ, ಅಷ್ಟರಲ್ಲಿ ಶಂಕರನ ಪ್ರಕರಣ ಪ್ರಾರಂಭವಾಯಿತು. ಅವನು ಬಂದಾಗಿನ ಸ್ಥಿತಿಯನ್ನು ನೋಡಿದ್ದರೆ, ಅತ್ತಿಗೆ ನಿಜವಾಗಿಯೂ ನಿಮ್ಮ ಕರುಳುರಿಯುತ್ತಿತ್ತು" ಎಂದು ಪಾರ್ವತಿ ಪೂರ್ತಿಯಾಗಿ ಶಂಕರನು ಬಂದ ದಿನದ ಕಥೆಯನ್ನು ವಿವರಿಸಿದಳು.

"ಏನೋ ಪಾರ್ವತಿ ಅಮ್ಮನಿಗಿದ್ದದ್ದು ಒಬ್ಬನೇ ಮಗ ಚಂದ್ರು. ಅವನ ದುರಾದೃಷ್ಟವನ್ನು ನೋಡಿದ್ದರೆ, ಅಮ್ಮನಿಗೆ ಎದೆಯೊಡೆಯುತ್ತಿತ್ತು. ಸದ್ಯಕ್ಕೆ ಬದುಕಿಲ್ಲದಿರುವುದೇ ಒಂದು ರೀತೀಲಿ ಒಳ್ಳೆದು.... ನೀನೇನೂ ಮನಸ್ಸಿಗೆ ಹಚ್ಚಿಕೋಬೇಡ ಎಲ್ಲಾ ಸರಿಹೋಗುತ್ತೆ. ಅವನಿಗೂ ಧೈರ್ಯ ಹೇಳ್ತೀನಿ.... ಎಂದಳು ಭರವಸೆಯ ದನಿಯಲ್ಲಿ.

"ಅದೆಲ್ಲಾ ಸರಿ ಅತ್ತಿಗೆ, ಈ ಮಕ್ಕಳ ಮದುವೆ ವಿಷಯವಾಗಿ ಸ್ವಲ್ಪ ಆಸಕ್ತಿ ವಹಿಸುವಂತೆ ನಿಮ್ಮ ತಮ್ಮನಿಗೆ ಹೇಳಿ. ಅಷ್ಟಾದರೆ ಸಾಕು" ಎಂದು ಪ್ರಾರ್ಥಿಸಿದಳು.

ಪಾರ್ವತಿಗೆ ಮನಸ್ಸಿನಲ್ಲಿ, ಜಾನಕಿಯ ಮಗನಿಗೇ ತನ್ನ ಮಕ್ಕಳಲ್ಲಿ ಒಬ್ಬರನ್ನು ತಂದುಕೊಳ್ಳಲು ಕೇಳೋಣವೆಂದೆನಿಸಿದರೂ ಯಾಕೋ ಬಾಯಿ ಕಟ್ಟಿದಂತಾಯಿತು. ಕೇಳಿ, 'ಇಲ್ಲ' ಎನ್ನುವಂತಾದರೆ, ಆಗುವ ಅವಮಾನದ ಕಲ್ಪನೆ ಅವಳನ್ನು ಹಿಂಜರಿಯುವಂತೆ ಮಾಡಿತು. ಆದರೆ ಸ್ವಲ್ಪ ಹೊತ್ತು ಯೋಚಿಸಿ,

"ಅತ್ತಿಗೆ, ಪ್ರಕಾಶನಿಗೆ ಮದುವೆ ಮಾಡುವ ಯೋಚನೆಯಿದೆಯೇ? ನೇರಾಗಿ ಪಾರ್ವತಿಯ ಪ್ರಶ್ನೆ ಪ್ರಕಾಶನ ಕಡೆ ತಿರುಗಿದ್ದು ಜಾನಕಿಗೆ ಅಚ್ಚರಿಯಾಗಿಸಿದರೂ, ಅವಳ ಈ ಪ್ರಶ್ನೆಯ ಆಳದಲ್ಲಿನ 'ಅಂತರಂಗ' ಅರ್ಥವಾಯಿತು. ಆದರೂ ತೋರಿಸಿಕೊಳ್ಳದೆ,

"ಆಂ, ಸದ್ಯಕ್ಕೇನೂ ಯೋಚನೆ ಮಾಡಿಲ್ಲ. ಅವನ ತಂಗಿಗೆ ಗಂಡು ಸಿಕ್ಕಿದರೆ ಆಮೇಲೆ ಮಾಡೋಣವೆಂದುಕೊಂಡೆವು. ಆದರೆ ಒಳ್ಳೆ ಹುಡುಗಿಯೇನಾದರೂ ಸಿಕ್ಕಿದರೆ ವಿಚಾರ ಮಾಡಬಹುದು. ಯಾವುದಾದರೂ ಹೆಣ್ಣಿದ್ದರೆ ಮನಸ್ಸಿನಲ್ಲಿ, ಹೇಳು ಪಾರ್ವತಿ. ನಮ್ಮ ಪ್ರಕಾಶನಿಗೆ ತಂದುಕೊಳ್ಳೋ ಹುಡುಗಿ, ಸ್ವಲ್ಪ ಬೆರೆಯುವ ಸ್ವಭಾವದವಳಾದರೆ ಒಳ್ಳೇದು. ಅವನನ್ನು ನೀನೇ ನೋಡಿದ್ದೀಯಲ್ಲ? ಸ್ವಲ್ಪಾನೂ ಸಂಕೋಚವಿಲ್ಲದೆ, ಸ್ವಚ್ಛಂದವಾಗಿ ಎಲ್ಲರ ಜೊತೆ ಬೆರೆಯುತ್ತಾನೆ" ಅಂತ ಮಾತು ಮುಗಿಸುತ್ತಿದ್ದಂತೆ ಪ್ರಕಾಶ, ಪುಟ್ಟನ ಜೊತೆಗೆ ಬಂದ. ತನ್ನ ಹೆಸರನ್ನು ಕೇಳಿ, ಪ್ರಕಾಶ,

"ಏನೂ ನಿಮ್ಮ ಹರಟೇಲೂ ನನ್ನ ಹೆಸರು ಬಂದಿದೆ, ಅಂದ್ರೆ ನಾನು ಸ್ವಲ್ಪ ಪ್ರಧಾನ ವ್ಯಕ್ತೀನೇ ಆಗಿರಬೇಕು.... ಏನಮ್ಮ ಹೇಳ್ತಿದ್ದೆ ನನ್ನ ವಿಚಾರಾನಾ?

"ನಿಮ್ಮಮ್ಮ ನಿನ್ನ ಮದುವೆ ವಿಚಾರ ಮಾತಾಡ್ತಿದ್ಲು" ನಕ್ಕು ಪಾರ್ವತಿ ಹೇಳಿದಳು.

"ನನಗೇ ಗೊತ್ತಿಲ್ಲದೆ ನನ್ನ ಮದುವೆ ನಿಶ್ಚಯಿಸಿಬಿಡ್ತಿರೋ ಹಾಗಿದೆ?"

"ಹೂಂ ನನಗೆ ಅಷ್ಟೂ ಸ್ವತಂತ್ರವಿಲ್ಲವಾ?" ಜಾನಕಿ ಕೇಳಿದಳು.

"ಹುಡುಗೀನ ನೋಡಿ ಒಪ್ಪಿದ ಮೇಲೆ ನಿನಗೇ ಸ್ವಾತಂತ್ರ್ಯ, ಸರೀನಾ? ......

ಅಂದಹಾಗೆ. ಹುಡುಗೀನ್ನೂ ಹುಡುಕಿ ಇಟ್ಟುಬಿಟ್ಟಿದ್ದೀರಾ ಹೇಗೆ?" ಮುಗುಳುನಗುತ್ತಾ ಕೇಳಿದ.

"ಹೌದು" – ಜಾನಕಿ ಹೇಳಿದಳು.

"ಆಂ", ಎಂದು ಪಾರ್ವತಿ, ಪ್ರಕಾಶ ಇಬ್ಬರೂ ಬೆಚ್ಚಿ ಬಾಯಿ ಬಿಟ್ಟರು.

"ಯಾಕೆ? ನಿಮಗೆ ತಿಳೀದೇ ಹುಡುಗೀನಾ ಗೊತ್ತು ಮಾಡಬಾರದಾ?..... ಹೋಗಲಿ ಪ್ರಮೀಳಾಂಥ ಹುಡುಗಿ ಸಿಕ್ಕಿದರೆ ಹೇಗೆ?"

"ಪ್ರಮೀಳಳಂಥ ಹುಡುಗಿ ಯಾಕೇ? ಪ್ರಮೀಳನೇ ಆದರೆ ವಾಸಿ" ಎಂದು ನಕ್ಕ.

"ಏನೋ ಆಗಲೇ ಪ್ರೀತಿ ಗೀತಿ ಪ್ರಾರಂಭಿಸಿಬಿಟ್ಟಿಯಾ ಹೇಗೆ?"

"ಅದು ಹಾಗಲ್ಲಮ್ಮ. ಅವಳಾದರೆ, ಮನೆ ಬೋರ್ ಅನ್ನಲ್ಲ. ಅವಳ ಜಗಳ ಮಸಾಲೆ ತರಹ ಇರುತ್ತೆ. ನನಗೆ ಜಗಳ ಮಾಡ್ತಿರೋಕೆ ಒಂದು ಪಾರ್ಟಿ ಸಿಗುತ್ತೆ." ಇದ್ದಕ್ಕಿದ್ದಂತೆ ಮಾತು ತನ್ನ ಬಯಕೆಯಂತೆ, ಈ ತಿರುವನ್ನು ಪಡೆದದ್ದು ಪಾರ್ವತಿಗೆ ಸಂತೋಷವೇ ಆದರೂ, ಇದು ಬರೀ ತಮಾಷೆಯಾಗಿಯೇ ಉಳಿದುಬಿಟ್ಟರೆ? ಎಂಬ ಯೋಚನೆ ನಿರಾಸೆಯನ್ನೇ ಹೆಚ್ಚಿಸಿತು.

"ನಿನ್ನ ಸಮರ್ಥನೆ ಚೆನ್ನಾಗಿದೆ! ಅವಳನ್ನು ಮದುವೆಯಾಗೋದು. ದಿನಾ ಅವಳ ಹತ್ತಿರ ಜಗಳಕ್ಕಾ ಹೇಗೆ?"

"ಹೂ! ಜಗಳ ಆಡ್ತಿದ್ದರೆ ಮನೆ ತುಂಬಿದ ಹಾಗಿರುತ್ತೆ. ನನಗೇನು ಗೊತ್ತು? ಸಿಡುಕು ಮೂತಿ ಅಂದವಾಗಿ ಕಾಣುತ್ತೆ..... ಏನತ್ತೆ, ನಿಮ್ಮ ಪ್ರಮೀಳಾನ ನಾನು ಮದುವೆಯಾಗ್ತೀನಿ, ಕೊಡ್ತೀಯಾ?" ಎಂದು ಬಿದ್ದು ಬಿದ್ದು ನಕ್ಕ.

"ಸಾಕು, ಸುಮ್ಮನಿರು, ಪ್ರಕಾಶ. ತಮಾಷೆಗೊಂದು ಮಿತಿಯಿದೆ" ಎಂದು ಜಾನಕಿ ಗದ್ದರಿಸಿದಳು.

"ತಮಾಷೆಯೇ ಅಲ್ಲ. ನಾನು ಸೀರಿಯಸ್ಸಾಗೇ ಹೇಳ್ತಿದ್ದೀನಿ". ಗಂಭೀರವಾಗಿಯೇ ನುಡಿದ. ಇಲ್ಲಿಯವರೆಗೆ ಸುಮ್ಮನಿದ್ದ ಪುಟ್ಟ,

"ಹೌದರವ್ವ, ಪ್ರಮೀಳನ್ನು ಈ ಅಯ್ಯ ಮದುವೆಯಾದರೆ ಚೆನ್ನಾಗಿರುತ್ತೆ!" ಎಂದು ಹಲ್ಲು ಬಿಟ್ಟ. ಪಾರ್ವತಿಗೆ ಪರಿಸ್ಥಿತಿ ಗಂಭೀರವಾಗುತ್ತಿದೆಯೆನಿಸಿತು. ಮಾತನ್ನು ಮರಳಿಸಬೇಕು ಎಂದುಕೊಂಡು,

"ಹೋಗಲಿ ಬಿಡಿ ಅತ್ತಿಗೆ ಅದಕ್ಯಾಕೆ ಸಿಟ್ಟಾಗ್ತೀರಿ? ತಮಾಷೆಗೆಂದರೆ ಏನಾಯ್ತು? ಅಲ್ಲದೆ ಅವರವರ ಹಣೇಲಿ ಬರೆದದ್ದು ಅವರವರಿಗೆ. ನಾವು ಅಂದುಕೊಂಡರೂ ನಮ್ಮ ಆಸ್ತಿ, ಅಂತಸ್ತುಗಳು ಹೊಂದಿ ಬರಬೇಡವೇ?" ಎಂದು ಫಿಲಾಸಫಿ ಮಾತಾಡಿದಳು.

"ಅದ್ಯಾಕೆ ಹಾಗಂತೀ ಪಾರ್ವತೀ? ಮನುಷ್ಯನಿಗೆ ಹಣವೊಂದೇ ಮುಖ್ಯವಲ್ಲ. ಎಲ್ಲಕ್ಕಿಂತ ಹೆಚ್ಚಿನದು ಋಣಾನುಬಂಧ! ನನ್ನ ತಮ್ಮನ ವಂಶ ಬೆಳೀಬೇಕು, ಬೆರೀಬೇಕು ಅಂತ ನನಗೂ ಅನಿಸುತ್ತೆ. ಪ್ರಕಾಶ ಗಂಭೀರವಾಗಿ ಮಾತಾಡಿದರೆ, ನನಗೆ ಅವನ ಇಷ್ಟಕ್ಕೆ ಅಭ್ಯಂತರವಿರಲಾರದು" ಎಂದಳು. ಪಾರ್ವತಿ ಪ್ರಕಾಶನ ಕಡೆ ನೋಡಿದಳು. ಪ್ರಕಾಶ ಅಮ್ಮನನ್ನು, ಅತ್ತೆಯನ್ನು ನೋಡಿದ. ಅತ್ತೆಯ ಕಣ್ಣಲ್ಲಿ ಯಾತನೆ, ಯೋಚನೆಗಳಿದ್ದಂತೆ ಕಂಡುಬಂದವು. ತಾಯಿಯ ಕಣ್ಣಲ್ಲಿ ತನ್ನ ಮಾತಿನಲ್ಲಿ ನಿಜವೆಷ್ಟೆಂದು ತಿಳಿಯುವ ಕುತೂಹಲವಿದ್ದಂತೆ ಕಾಣಿಸಿತು. ಪುಟ್ಟನತ್ತ ನೋಡಿದರೆ ಅವನಿಗೇನೂ ಅರ್ಥವಾಗದಂತೆ ಎಲ್ಲರನ್ನೂ ಗಮನಿಸುತ್ತಿದ್ದಾನೆ.

ಪ್ರಕಾಶ ನಿರ್ಧಾರ ಮಾಡಿದ. ಆ ಮನೆಯ ಪರಿಸ್ಥಿತಿ, ಅಸಹಾಯಕ ಹೆಣ್ಣು ಮಕ್ಕಳ ಅಂತರಾಳದ ಆಸೆಗಳು! ಒಂದಕ್ಕೊಂದು ಹೊಂದದಂತೆ ಇತ್ತು. ತನ್ನಿಂದ ಇವರ ನೋವು ಒಂದಿಷ್ಟು ಕಡಿಮೆಯಾಗಬಹುದಾದರೆ? ಎಂದು ಯೋಚಿಸಿ, ಹೇಳಿದ.

"ಅಮ್ಮ, ಅತ್ತೆ ಇಲ್ಲಿ ನೋಡಿ. ನಾನು ಆಡಿದ ಈ ಮಾತೇ ಕೊನೆ. ಇದರಲ್ಲಿ ಏನೂ ವಿನೋದವಿಲ್ಲ. ನಾನು ಪ್ರಮೀಳಳನ್ನು ಮದುವೆಯಾಗುತ್ತೇನೆ. ಎಂದ, ನಿರ್ಧಾರದ ದನಿಯಲ್ಲಿ. "ನೋಡಿದೆಯಾ ಪಾರ್ವತಿ ನನ್ನ ಮಗ!" ಹೆಮ್ಮೆಯಿಂದ ಹೇಳಿದಳು. "ನಿನಗೆ ಸಮಾಧಾನವಾಯಿತಾ?"

"ಅತ್ತಿಗೆ ನಿಮ್ಮ ಮಗನಿಗೆ ನಾನು ಹೇಗೆ ಕೃತಜ್ಞತೆಯನ್ನು ತಿಳಿಸಬೇಕೋ ನನಗರ್ಥವಾಗದು." ಎಂದು ಹೇಳುತ್ತಾ ಕಂಬನಿ ದುಂಬಿದಳು.

"ಇದರಲ್ಲಿ ಕೃತಜ್ಞತೆಯ ಪ್ರಶ್ನೆಯೇ ಇಲ್ಲ. ನನಗೆ ಹುಡುಕಾಟವಿಲ್ಲದೆ ಸೊಸೆ ಸಿಕ್ಕಿದಳು. ಅಷ್ಟೆ!"

"ಅತ್ತಿಗೆ, ಇನ್ನೊಂದು ಸ್ವಾರ್ಥ. ಚಿಕ್ಕವಳಿಗೆ ವರ ಗೊತ್ತಾಗಿ, ದೊಡ್ಡವಳು ಹಾಗೇ ಉಳಿದರೆ ಜನ ಏನೆಂದುಕೊಂಡಾರು ಹೇಳು?"

"ಇನ್ನು ನೀವು ಯೋಚನೆ ಬಿಡಿ ಅತ್ತೆ. ನನ್ನ ಗೆಳೆಯನೇ ಇದ್ದಾನೆ. ಆದರೆ ಅವನಿಗೆ ತಂದೆ ತಾಯಿ ಯಾರೂ ಇಲ್ಲ. ಅಕ್ಕನ ಮನೇಲಿ ಹುಡುಗ ಇರುವುದು. ನೋಡೋಕೆ ತುಂಬಾ ಚೆನ್ನಾಗಿದ್ದಾನೆ. ನನ್ನ ಮಾತಿಗೆ ಬೇಡಾ ಅನ್ನೋಲ್ಲ. ಶಾಂತಳನ್ನು ಅವನಿಗೆ ಗೊತ್ತುಮಾಡ್ತೀನಿ. ಹುಡುಗ ಬುದ್ಧಿವಂತ. ಅಲ್ಪಸ್ವಲ್ಪ ಆಸ್ತಿ ಇದೆ. ಮೊನ್ನೆ ತಾನೇ ಎಂ.ಡಿ. ಮುಗಿಸಿದ್ದಾನೆ! ಕೆಲಸಾನೂ ಸಿಗುವ ಅವಕಾಶ ಇದೆ."

"ಪ್ರಕಾಶ.... ಪ್ರಕಾಶ, ನನ್ನ ಹೃದಯವೇ ಒಡೆಯುತ್ತೇನೋ ಎನಿಸಿದೆ. ಇಷ್ಟೊಂದು ಸಂತೋಷ ತಡೆಯುವ ಶಕ್ತಿಯಿಲ್ಲ, ನನಗೆ..." ಎಂದು ಹೇಳುತ್ತಿದ್ದರೆ – ಗಂಟಲು ತುಂಬಿ ಬಂತು.

ಎಲ್ಲರಿಗಿಂತ ಹೆಚ್ಚಾಗಿ ಪುಟ್ಟನ ಮುಖದಲ್ಲಿ ನಗುವೊಡೆದದ್ದು ಕಂಡಿತು.

"ಅಯ್ಯ ನೀವು ಎಷ್ಟು ಒಳ್ಳೆಯವರು! ಇಷ್ಟೊಂದು ಓದಿದ್ದೀರಿ ಆದರೂ ಅಹಂಕಾರ ಇಲ್ಲ. ಈ ತಾಯಿಯ ಎದೆಗೆ ತಂಪೆರೆದಿದ್ದೀರಿ" ಎಂದು ಕೈ ಹಿಡಿದುಕೊಂಡ.

"ಹೋಗೋ ಹುಚ್ಚ. ಸಿನೀಮಾ ಹೀರೋನ ಹೊಗಳಿದ ಹಾಗೇ ಹೊಗಳುತ್ತೀರಲ್ಲ?" ಎಂದು ಗೇಲಿ ಮಾಡಿದ ಪ್ರಕಾಶ.

ಪಾರ್ವತಿಗೆ ಹಾಲು ಜೇನು ಉಂಡಂತಾಯಿತು. ಚಂದ್ರಣ್ಣನ ತಲೆಯ ಮೇಲಿನ ಭಾರ ಇಳಿಯಿತು. ಜಾನಕಿಯ ಹೃದಯ ವೈಶಾಲ್ಯದ ಅರಿವು ಚಂದ್ರಣ್ಣನಿಗೆ ಮನದಟ್ಟಾಯಿತು. 'ಹೋಗಲಿ, ನನ್ನ ಅಕ್ಕ – ತಮ್ಮನಿಗಾಗಿ ಅಷ್ಟು ಮಾಡಿದಳಲ್ಲಾ' ಎಂದುಕೊಂಡು ತೃಪ್ತಿಪಟ್ಟ. ಪ್ರಕಾಶನನ್ನು ಅಪ್ಪಿಕೊಂಡು ಮುದ್ದಾಡಬೇಕೆನಿಸಿತು ಚಂದ್ರಣ್ಣನಿಗೆ.

ಖಂಡಿತವಾಗಿಯೂ ತನ್ನಿಂದ ಈ ಕೆಲಸ ಆಗಲಾರದೆಂದು ಭಾವಿಸಿದ್ದ, ಚಂದ್ರಣ್ಣನಿಗೆ ನಿರಾಯಾಸವಾಗಿ, ಕೆಲಸ ಕೂಡಿಬಂತು.

ಜಾನಕಿಗೆ, ತಮ್ಮ ಕುಟುಂಬಕ್ಕೆ ತನ್ನಿಂದ ಸ್ವಲ್ಪವಾದರೂ ಒಳ್ಳೆಯದಾಯಿತಲ್ಲ ಎನ್ನುವ ಸಮಾಧಾನ. ಹೆಣ್ಣು ಮಕ್ಕಳ ಭಾರವನ್ನು ಕಳೆದೆನೆಂದುಕೊಂಡರೂ, ಶಂಕರನ ವಿಚಾರವಾಗಿ ಏನೂ ಮಾಡಲಾರದಾದಳು. ಅವನನ್ನು ಮಾತಾಡಿಸಬೇಕೆಂದು ಜಾನಕಿ ಎಷ್ಟು ಪ್ರಯತ್ನಿಸಿದರೂ, ಶಂಕರ ಮುಖ ಕೊಟ್ಟು ಮಾತಾಡಲಿಲ್ಲ.

ಪ್ರಕಾಶನಿಗೆ, ಶಂಕರನ ದೇಹಸ್ಥಿತಿ ಸರಿಯಿಲ್ಲದಿರುವ ವಿಚಾರ ತಿಳಿಸಿ ಅವನನ್ನು ಪರೀಕ್ಷಿಸಲು ಜಾನಕಿ ಹೇಳಿದಳು. ಪ್ರಕಾಶನೇನೋ ಶಂಕರನನ್ನು ಪರೀಕ್ಷಿಸಿದ. ಆದರೆ ದೇಹಕ್ಕೆ ಸಂಬಂಧಿಸಿದಂತೆ ಯಾವ ಕಾಯಿಲೆಯೂ ಕಾಣಲಿಲ್ಲ. ಅವನಿಗೆ, ಶಂಕರನ ರೀತಿಯನ್ನು ನೋಡುತ್ತಿದ್ದಂತೆ, ಮಾನಸಿಕ ರೋಗವೆಂಬುದೇ ಖಚಿತವಾಯಿತು.

ಮಾತನಾಡಿಸಲು ಹೋದರೆ, ಶಂಕರ ವಿಚಿತ್ರವಾಗಿ ನಗುತ್ತಾನೆ. ತನ್ನನ್ನು ನೋಡಲು ಬಂದವರು. ತನ್ನ ಮುಂದೆ ಕ್ಷುದ್ರ ಅನ್ನುವಷ್ಟು ತಾತ್ಸಾರದ ದೃಷ್ಟಿಯಿಂದ ನೋಡುತ್ತಾನೆ. ಇಲ್ಲವಾದರೆ ತನಗೂ ಅವರಿಗೂ ಸಂಬಂಧವಿಲ್ಲದವರಂತೆ ನಿರ್ಲಿಪ್ತನಾಗಿ ಮೇಲೆ ನೋಡುತ್ತಿರುತ್ತಾನೆ.

ಪ್ರಕಾಶ ಅಲ್ಲಿ ಇದ್ದಷ್ಟೂ ದಿವಸ ಶಂಕರನ ಚಟುವಟಿಕೆಗಳನ್ನು ಗಮನಿಸಿದ. ಯಾರಿಗೂ ತೊಂದರೆಯಿಲ್ಲದಂತೆ ತನ್ನ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಾನೆ. ಊಟಕ್ಕೆ ಬರುವುದೇ ಇಲ್ಲ. ಬಾ ಶಂಕರ ಎಂದು ಬಲವಂತದಿಂದ ಎಳೆದೊಯ್ದರೆ ಬಂದು ಕೂರುತ್ತಾನೆ. ಮಾತುಕತೆಯಿಲ್ಲದೆ ಊಟಮಾಡಿ ಎದ್ದು ಹೋಗಿ ಕೋಣೆ ಸೇರುತ್ತಾನೆ.

ಪ್ರಕಾಶನಿಗೆ, ಶಂಕರನನ್ನು ಯಾವುದೋ ಸುಪ್ತ ಪ್ರಜ್ಞೆ ಕಾಡುತ್ತಿರಬಹುದೆನಿಸಿತು. ಹೇಳಿಕೊಳ್ಳಲಾಗದ ಪ್ರಜ್ಞೆಯಾಳದ ಆಸೆಯನ್ನು ಆಕಾಂಕ್ಷೆಯನ್ನು, ವಿಚಾರಗಳನ್ನು ಕಂಡುಕೊಳ್ಳಲಾಗದ ಸ್ಥಿತಿಯಲ್ಲಿದ್ದಾನೆ ಎನಿಸಿತು. ಮನುಷ್ಯ ಮಾತ್ರರಿಂದ ದೂರ ನಿಲ್ಲುವ, ಅವರಿಂದ ತಲೆಮರೆಸಿಕೊಳ್ಳುವ ಅವನ ರೀತಿ, ಪ್ರೀತಿ, ವಾತ್ಸಲ್ಯಗಳ ಸಂವೇದನೆಗಳಿಲ್ಲದ ಶುಷ್ಕ ಮನಃಸ್ಥಿತಿ ಪೂರ್ಣವಾಗಿ ಮಾನಸಿಕ ಅಸ್ತವ್ಯಸ್ತತೆಯ ಪರಿಣಾಮವೇ ಎಂದುಕೊಂಡ.

ಜಾನಕಿ, ಪ್ರಕಾಶರು ಹೊರಟು ನಿಂತ ದಿನ, ಚಂದ್ರಣ್ಣನನ್ನು ಕರೆದು ಪ್ರಕಾಶ ಹೇಳಿದ.

"ಮಾವ, ಶಂಕರನನ್ನು ಬೆಂಗಳೂರಿನ ಮೆಂಟಲ್ ಆಸ್ಪತ್ರೆಗೆ ಕರೆದೊಯ್ಯಿರಿ. ನನ್ನ ಗೆಳೆಯ ಮುರುಳೀಧರ ಅಂತ ಒಬ್ಬ ಸೈಕಿಯಾಟ್ರಿಸ್ಟ್ ಇದ್ದಾನೆ. ಅವನಿಗೆ ನನ್ನ ಪರಿಚಯ ಹೇಳಿ. ಮಿಕ್ಕದ್ದನ್ನು ಅವನೇ ನೋಡಿಕೊಳ್ಳುತ್ತಾನೆ. ಗಾಬರಿಯಾಗುವಂತಹ ಪರಿಸ್ಥಿತಿಯೇನೋ ಇಲ್ಲ. ಮನಸ್ಸಿಗೆ ಸಂಬಂಧಪಟ್ಟ ಖಾಯಿಲೆ ಅಷ್ಟೆ. ಇಂತಹವರ ಅಂತರಾಳವನ್ನು ನಮಗೆ ತಿಳಿಯಲು ಆಗುವುದಿಲ್ಲ. ಒಂದೆರಡು ತಿಂಗಳ ಚಿಕಿತ್ಸೆ ನೀಡಿದರೆ ಎಲ್ಲಾ ಸರಿಹೋಗುತ್ತೆ. ಇವೆಲ್ಲ ಬಹಳ ಸಿಂಪಲ್" ಎಂದ. "ನೊಡ್ತೇನೆ ಪ್ರಕಾಶ್, ಆದರೆ ಅವನನ್ನು ಒಪ್ಪಿಸಿ ಕರೆದೊಯ್ಯುವುದೇ ದೊಡ್ಡ ಸಮಸ್ಯೆ" ಎಂದು ಅಸಹಾಯಕ ದನಿಯಲ್ಲಿ ಹೇಳಿದ ಚಂದ್ರಣ್ಣ. "ನಿಮ್ಮ ಕೈಲಿ ಆಗುವ ಪ್ರಯತ್ನ ನೀವು ಮಾಡಿ, ಆಗಲಿಲ್ಲವೆಂದರೆ, ಇನ್ನೊಮ್ಮೆ ನಾನಿಲ್ಲಿಗೆ ಬಂದಾಗ, ಹೇಗಾದರೂ ಮನವೊಲಿಸಿ ಅವನನ್ನು ನಾನೇ ಕರೆದೊಯ್ಯುತ್ತೇನೆ" ಭರವಸೆಯಿಂದ ನುಡಿದ ಪ್ರಕಾಶ್.

ಜಾನಕಿ, ಪ್ರಕಾಶ್‌ರು ಎಲ್ಲರಿಗೂ ಮತ್ತೊಮ್ಮೆ "ಹೋಗಿ ಬರುತ್ತೇವೆ" ಎಂದು ಹೇಳಿ ಪುಟ್ಟ ತಂದಿದ್ದ ಗಾಡಿ ಹತ್ತಿದರು.

ಚಂದ್ರಣ್ಣನೂ ಅಕ್ಕನನ್ನು ಬಿಟ್ಟು ಬರಲು ತಾನೂ ಅವರೊಂದಿಗೆ ಹೊರಟ. ಗಾಡಿ ಹೊರಡುವಾಗಲೂ ಜಾನಕಿ, ಪಾರ್ವತಿಗೆ, "ಪಾರ್ವತಿ ನೀನೂ ಯಾವುದಕ್ಕೂ ಯೋಚಿಸಬೇಡ. ನಾನು ಹೇಳಿದ ಹುಡುಗರ ವಿಷಯದಲ್ಲಿ ನಿಮ್ಮ ಅಭಿಪ್ರಾಯ ಏನು ಅನ್ನುವುದನ್ನು ಅವನ ಜೊತೆ ಮಾತಾಡಿ, ನನಗೆ ಬರಿ" ಎಂದು ಹೇಳುತ್ತಲೇ ಇದ್ದಳು. ಪ್ರಮೀಳ, ಶಾಂತ ಬಾಗಿಲಲ್ಲಿ ನಿಂತಿದ್ದರು. ಪ್ರಮೀಳ, ಶಾಂತಳ ಬೆನ್ನ ಹಿಂದೆ ನಿಂತು ಕದ್ದು ಪ್ರಕಾಶನನ್ನು ನೋಡುತ್ತಿದ್ದಳು. ಪ್ರಕಾಶನ ಸೂಕ್ಷ್ಮದೃಷ್ಟಿಗೆ ಇದು ಬೀಳದೆ ಹೋಗಲಿಲ್ಲ. ಅವನಿಗೂ ಸ್ವಲ್ಪ ಕೀಟಲೆ ಮಾಡಬೇಕೆನಿಸಿತು. ಎಂತಲೇ–

"ಕದ್ದು ನೋಡುವ ಅತ್ತೆ ಮಗಳೆ, ನಿನಗೊಬ್ಬ ಸವತೀನ ತಂದ ಮೇಲೆ ನಿನ್ನನ್ನು ಕರೆದೊಯ್ತೀನಿ. ಅಲ್ಲೀವರೆಗೆ ಏನೂ ಚಿಂತೆಮಾಡದೆ ದಾರಿ ನೋಡ್ತಿರು" ಎಂದು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಕೂಗಿ ಹೇಳಿದ. ಅದನ್ನು ಕೇಳಿ ಎಲ್ಲರೂ

ನಕ್ಕರು. ಪ್ರಮೀಳಾಗೆ ಅಪಮಾನವಾದಂತಾಗಿ ದುಮುದುಮುಗುಟ್ಟಿದಳು. ಕಿಸಿ ಕಿಸಿ ನಗುತ್ತಿರುವ ಶಾಂತಳನ್ನು ನೋಡಿದ ಮೇಲೆ ಅವಳ ಸಿಟ್ಟು ಇನ್ನೂ ಏರಿತು.

* * *

ಜಾನಕಿ ತನ್ನ ಮಾತಿನಂತೆ ನಡೆದುಕೊಂಡಳು. ಜಾನಕಿಯ ಗಂಡನೂ ಈ ಸಂಬಂಧಕ್ಕೆ ಅನುಮೋದನೆ ನೀಡಿದ. ಹೆಚ್ಚು ಆಡಂಬರವಿಲ್ಲದೆ ಪ್ರಮೀಳ ಶಾಂತಾರ ಮದುವೆಯಾಯಿತು. ಪ್ರಕಾಶನ ಗೆಳೆಯ ಗಿರೀಶ ಶಾಂತಾಗೆ ಹೇಳಿ ಮಾಡಿಸಿದ ಜೊತೆಯಂತಿದ್ದ. ಇಬ್ಬರದೂ ಒಂದು ಬಗೆಯ ಸಂಕೋಚ ಸ್ವಭಾವ. ಬುದ್ಧಿವಂತ, ಗುಣವಂತ ಸಹ್ಯಾದ್ರಿ ನರ್ಸಿಂಗ್ ಹೋಂನಲ್ಲಿ ಕೆಲಸ. ಸಂಬಳ ಕೂಡಾ ಚೆನ್ನಾಗಿಯೇ ಬರುತ್ತಿತ್ತು. ಇದಕ್ಕಿಂತ ಉತ್ತಮ ಸಂಬಂಧ ಬಹುಶಃ ಇನ್ನೊಂದು ಜನ್ಮದಲ್ಲೂ ಸಾಧ್ಯವಿರಲಿಲ್ಲ. ಚಂದ್ರಣ್ಣ ಪಾರ್ವತಿಯರಿಗಂತೂ ಬೆಟ್ಟದಂತಹ ಕಷ್ಟಗಳು ಮಂಜಿನಂತೆ ಕರಗಿ ಹೋದಂತೆನಿಸಿತು.

ಇಷ್ಟು ಒಳ್ಳೆಯ ಸಂಬಂಧವನ್ನು ಹುಡುಕಿಕೊಟ್ಟ ಪ್ರಕಾಶನನ್ನು ಎಷ್ಟು ಅಭಿನಂದಿಸಿದರೂ ಪಾರ್ವತಮ್ಮನಿಗೆ ಸಾಕಾಗುತ್ತಿರಲಿಲ್ಲ. ನೆನೆದಷ್ಟೂ ಕೃತಜ್ಞತೆಯ ಭಾವ ಹೆಚ್ಚಾಗುತ್ತಿತ್ತು. ಮೆದು, ಭೀರು ಸ್ವಭಾವದ ಶಾಂತಳಿಗೆ ತುಂಬಾ ಅನುರೂಪನಾದ ಹುಡುಗನಾಗಿದ್ದ ಗಿರೀಶ.

ಪ್ರಕಾಶನಿಗೆ ಮರಳಿ ವಿದೇಶಕ್ಕೆ ಹೋಗಬೇಕಿತ್ತು. ಅದಕ್ಕೆ ಅವನೂ ಅಲ್ಲಿ ನಿಲ್ಲದೆ ತಂದೆತಾಯಿಯ ಜೊತೆಗೆ ಪ್ರಮೀಳಳನ್ನೂ ಕರೆದುಕೊಂಡು ಹೊರಟು ಬಿಟ್ಟ. ಗಿರೀಶ, ಶಾಂತರೂ ಹೊರಟುನಿಂತರು. ಮಕ್ಕಳನ್ನು ಬೀಳ್ಕೊಟ್ಟ ಮೇಲೆ ಪಾರ್ವತಿಗೆ ದಿಕ್ಕೇ ತೋಚುತ್ತಿರಲಿಲ್ಲ. ಶಂಕರ ಇದ್ದೂ ಇಲ್ಲದಂತಿದ್ದ. ಚಂದ್ರಣ್ಣ ಹೊರಗೆ ಹೋದರೆ, ಒಬ್ಬಳೇ ಇರಬೇಕಾಗಿ ಬಂದ ಪಾರ್ವತಿಗೆ ಮನೆ ಹಾಳು ಸುರಿವಂತೆನಿಸುತ್ತಿತ್ತು. ಏನನ್ನೋ ಕಳೆದುಕೊಂಡಂತೆ ಎನಿಸುತ್ತಿತ್ತು. ಪ್ರಮೀಳಳ ನಗು, ಸಿಟ್ಟು ಸೆಡವುಗಳೂ ಕೂಡ ನೀರಸ, ಯಾಂತ್ರಿಕ ಬದುಕಿಗೆ ಒಂದು ಸ್ವಲ್ಪ ಬದಲಾವಣೆಯನ್ನಾದರೂ ತರುತ್ತಿತ್ತು.

ಈಗ ಪಾರ್ವತಿಗೆ ತನ್ನ ಒಂಟಿತನದ ಬದುಕಿನ ಭೀಕರತೆ ಅಸಹನೀಯವೆನಿಸುತ್ತಿತ್ತು. ಪುಟ್ಟ, ರಂಗಿ ಬಂದಾಗ ಮಾತ್ರವೇ ಮಾತಿಗೆ ಜೊತೆ ಇಲ್ಲವಾದಲ್ಲಿ ತಲೆ ಚಿಟ್ಟೆನಿಸುವಂತಹ ವಿಕ್ಷುಬ್ಧತೆ. ಒಬ್ಬಳೇ ಇದ್ದಷ್ಟೂ ತಲೆತುಂಬಾ ವಿಚಾರಗಳೇ!! ಅದರಲ್ಲಿಯೂ ಮರೆಯಬೇಕೆಂದಷ್ಟೂ ಧುತ್ ಧುತ್ತೆಂದು ಮುತ್ತಿ ಬರುವ ಶಂಕರನ ಆಲೋಚನೆಗಳು! 'ಸರಿಯಾಗಿದ್ದರೆ, ಅವನಿಗೂ ಒಂದು ಮದುವೆ ಮಾಡಿ ಮನೆಗೆ ಸೊಸೆಯನ್ನು ತುಂಬಿಸಿಕೊಂಡಿದ್ದರೆ, ಈ ಮನೆಯಲ್ಲೂ ಸಂದಣಿ, ಸಂಭ್ರಮಗಳು ಇದ್ದೇ ಇರುತ್ತಿದ್ದವು' ಎಂದೆಲ್ಲಾ ಯೋಚಿಸಿದಳು. ಆದರೆ ಶಂಕರ?.... ತನ್ನನ್ನು ತಾನು ಏಕಾಂತ ಸಮಾಧಿ ಮಾಡಿಕೊಳ್ಳುತ್ತಿದ್ದಾನೆ!! ಅವನ ಮನಸ್ತತ್ವವೇ ಒಂದು ಬಗೆಹರಿಸಲಾಗದ ಒಗಟಾಗಿದೆ.

ಇದಕ್ಕೆ ಎಂದಾದರೂ ಸಮಾಧಾನ ದೊರೆಯುವುದೇ ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಳ್ಳುತ್ತಿದ್ದಳು.

ಒಮ್ಮೊಮ್ಮೆ ಪ್ರಕಾಶನ ಭರವಸೆಯ ಮಾತುಗಳು ಮಾರ್ದನಿಸಿ ಆಸೆಯ ಮಿಂಚೊಂದು ಮೂಡಿ ಮರೆಯಾಗುತ್ತಿತ್ತು. ಅವನು ಹೇಳಿದಂತೆ ಒಳ್ಳೆ ವೈದ್ಯರಿಗೆ ತೋರಿಸಿದರೆ ಅವನು ಸರಿಯಾಗಿ, ಅವನಿಗೂ ಒಂದು ಮದುವೆ ಮಾಡಿದರೆ ವಂಶದ ಕುಡಿಯನ್ನಾದರೂ ಕಾಣಬಹುದು – ಆದರೆ ಆದರೆ – ಆ ಅದೃಷ್ಟ ತಮ್ಮ ಪಾಲಿಗೆಲ್ಲಿ? ಶಂಕರನಷ್ಟೇ ವಯಸ್ಸಿನವನಾದ ಪುಟ್ಟನಿಂದ ರಂಗಿಗೆ ಅದು ಲಭ್ಯವಾಗಿದೆ.... ನಮಗೆ....? ಎಂದು ಪ್ರಶ್ನಿಸಿಕೊಂಡು ನಕ್ಕಳು. ಅದರಲ್ಲಿದ್ದದ್ದು ವ್ಯಂಗ್ಯದ ನೆರಳೋ ದ್ವೇಷದ ಭಾವನೆಯೋ ತಿಳಿಯಲಿಲ್ಲ.

ಚಂದ್ರಣ್ಣ, ಪ್ರಕಾಶ ಹೇಳಿದಂತೆ, ಶಂಕರನನ್ನು ಆಸ್ಪತ್ರೆಗೆ ಕರೆದೊಯ್ದು ತೋರಿಸಬೇಕೆಂದುಕೊಂಡ ಪ್ರಕಾಶ ಈಗ ವಿದೇಶದಲ್ಲಿದ್ದಾನೆ. ಆದರೆ ಶಾಂತಳ ಗಂಡನ ನೆರವು ಪಡೆಯಬಹುದೆಂದುಕೊಂಡು, ಗಿರೀಶನಿಗೆ ಪತ್ರ ಬರೆದ. ಗಿರೀಶನೂ ಮಾವನ ನೆರವಿಗೆ ಬಂದ. ನಿಶ್ಚಿತವಾದ ದಿನ ಚಂದ್ರಣ್ಣ ಶಂಕರನನ್ನು ಪ್ರೀತಿಯಿಂದ ಕರೆದು ಪುಸಲಾಯಿಸಿ, ತನ್ನೊಂದಿಗೆ ಕರೆದೊಯ್ದ.

ಒಂದೆರಡು ದಿನಗಳು ಬೆಂಗಳೂರಿನಲ್ಲೇ ಉಳಿಯಬೇಕಾಯಿತು. ಶಂಕರನು ಯಾವ ಪ್ರತಿಭಟನೆಯೂ ಇಲ್ಲದೆ ವೈದ್ಯರ ಪರೀಕ್ಷೆಗೆ ಒಳಗಾದ. ಆದರೆ ಅವರು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಲಿಲ್ಲ. ವೈದ್ಯರಿಗೆ ನಿಶ್ಚಿತವಾಗಿ ಏನೆಂದು ಹೇಳಲು ಆಗಲಿಲ್ಲ. ಗಿರೀಶ ಶಂಕರನ ವಿಚಾರವಾಗಿ ಡಾಕ್ಟರುಗಳು ಪ್ರಶ್ನಿಸಿದರು.

"ಡಾ॥ ಗಿರೀಶ ಇವನ ಚಟುವಟಿಕೆಗಳ ಬಗ್ಗೆ ಏನಾದರೂ ಹೇಳುತ್ತೀರಾ?" ಎಂದು ಡಾ॥ ಸಿಂಹ ಕೇಳಿದರು.

ಗಿರೀಶನಿಗೆ ಶಂಕರನ ಚಟುವಟಿಕೆಗಳ ಬಗ್ಗೆ ಏನೆಂದು ಹೇಳಲೂ ಆಗಲಿಲ್ಲ. ಮಾವನ ಕಡೆ ತಿರುಗಿ ಕೇಳಿದ್ದಕ್ಕೆ, ಚಂದ್ರಣ್ಣ ಡಾಕ್ಟರುಗಳಿಗೆ ಶಂಕರನ ಚಿಕ್ಕಂದಿನಿಂದ ಹಿಡಿದು ಇಲ್ಲಿವರೆಗಿನ ಇತಿಹಾಸವನ್ನು ವಿವರಿಸಿದರು. ಎಲ್ಲವನ್ನೂ ಕೇಳಿದ ಡಾಕ್ಟರುಗಳು, ಸ್ವಲ್ಪ ಹೊತ್ತು ಯೋಚಿಸಿ ಹೇಳಿದರು.

"ಚಂದ್ರಣ್ಣನವರೇ, ನೀವೀಗ ನಿಮ್ಮ ಮಗನೊಂದಿಗೆ ಬೇಕಾದರೆ ಊರಿಗೆ ಹೋಗಿ. ಇನ್ನೊಂದೆರಡು ದಿನ ಬಿಟ್ಟು ರಿಪೋರ್ಟನ್ನು ನಿಮ್ಮ ಅಳಿಯನ ಮೂಲಕ ಕಳುಹಿಸುತ್ತೇವೆ ಎಂದರು.

"ಗಿರೀಶ, ನೀವು ಅವರು ಹೇಳುವ ಹಾಗೆ ರಿಪೋರ್ಟನ್ನು ತೆಗೆದಿರಿಸಿ. ನಾನು ಈ ದಿನ ಸಂಜೆಗೇ ಶಂಕರನನ್ನು ಕರೆದೊಯ್ಯುತ್ತೇನೆ" ಎಂದರು ಚಂದ್ರಣ್ಣ.

"ಅದ್ಯಾಕೆ ಮಾವ, ಹೇಗಿದ್ದರೂ ಬಂದಿದ್ದೀರಿ. ಇನ್ನೊಂದೆರಡು ದಿನ ನಮ್ಮ ಮನೇಲಿದ್ದು ನೀವೇ ತೆಗೆದುಕೊಂಡು ಹೋಗಬಹುದಲ್ಲ? ಬರುವುದಂತೂ ಅಪರೂಪವಾಯಿತು. ಈಗ ಬಂದಿರುವಾಗ ಇದ್ದು ಹೋಗಿ ಶಾಂತಳಿಗೂ ಸಮಾಧಾನವಾಗುತ್ತೆ" ಎಂದ ಗಿರೀಶ.

"ಇಲ್ಲ ಗಿರೀಶ, ಸಾಧ್ಯವೇ ಇಲ್ಲ. ಪಾಪ ನಿಮ್ಮತ್ತೆ, ಎಷ್ಟು ಗಾಬರಿಪಟ್ಟಿರುತ್ತಾಳೋ ಏನೋ? ಹೇಳದೆ ಕೇಳದೆ ಇಷ್ಟು ದಿನ ಉಳಿದುಬಿಟ್ಟೆ. ನಾನು ಇವತ್ತು ಹೋಗಲೇಬೇಕು" ಎಂದು ಚಂದ್ರಣ್ಣ ಪಟ್ಟು ಹಿಡಿದ. ವಿಧಿಯಿಲ್ಲದೆ ಗಿರೀಶ ಮಾವನನ್ನು ಅಂದೇ ಕಳಿಸಿಕೊಡುತ್ತೇನೆಂದು ಭರವಸೆ ನೀಡಿದ.

"ಡಾ॥ ಸಿಂಹ, shall I come tomorrow for the report?" ಎಂದು ಗಿರೀಶ ಪ್ರಶ್ನಿಸಿದ.

"Yes defenitely. But I think there is not much to worry about. It is the effect of deep buried desire. I am sure, but the kind of desire seems rather obscure, the symptoms refer not to one particular. There is a bit of incoherence...." ಎಂದು ಹೇಳಿದರು.

ಗಿರೀಶ ಅವರಿಗೆ ಧನ್ಯವಾದ ಹೇಳಿ ಮಾವನನ್ನು, ಶಂಕರನನ್ನು ಕರೆದೊಯ್ದ. ಶಾಂತಳಿಗೆ ತಂದೆಯನ್ನು ನೋಡಿ ವರ್ಷಗಳಾದಂತೆನಿಸಿತ್ತು. ಈ ಎರಡು ದಿನಗಳೂ ತಂದೆಗೆ ಮನ ತುಂಬಿ ಸೇವೆ ಮಾಡಿದಳು. ತಾಯಿಯನ್ನು ಕರೆದಿದ್ದರೆ ಚೆನ್ನಾಗಿತ್ತೆಂದಳು.

ತನ್ನ ಅಣ್ಣ ಶಂಕರನಿಗೆ ಖಾಯಿಲೆ ವಾಸಿಯಾದರೆ ಅಮ್ಮ ಅಪ್ಪನ ಮನಸ್ಸಿಗೆ ನೆಮ್ಮದಿ ಸಿಗಬಹುದು ಎಂದು ಆಸೆ ಹೊತ್ತಳು.

ಚಂದ್ರಣ್ಣನಿಂದ ಗಿರೀಶನಿಗೆ ಉತ್ತರ ಬಂದಾಗಿನಿಂದ, ಶಾಂತ ಗಂಡನನ್ನು ಶಂಕರನ ಚಿಕಿತ್ಸೆಗಾಗಿ ಒಳ್ಳೆ ವೈದ್ಯರ ಬಳಿಗೆ ಕರೆದುಕೊಂಡು ಹೋಗಲು ಒತ್ತಾಯಿಸುತ್ತಿದ್ದಳು. ಸದ್ಯಕ್ಕೆ ಅಂತಹ ಗಂಭೀರವಾದ ಖಾಯಿಲೆ ಏನೂ ಇಲ್ಲವೆಂದು ಗಿರೀಶ ತಿಳಿಸಿದಾಗ ಅವಳಿಗಾದ ಸಂತೋಷ ಅಷ್ಟಿಷ್ಟಲ್ಲ. ದೇವರುಗಳಿಗೆಲ್ಲ ಹರಿಸಿಕೊಂಡಳು!

ಮೂವರು ಮನೆ ಸೇರುವ ಹೊತ್ತಿಗೆ ಸಾಕಷ್ಟು ವೇಳೆಯಾಗಿತ್ತು. ಚಂದ್ರಣ್ಣ, ಗಿರೀಶರಿಗೆ ಹೊಟ್ಟೆ ಚುರುಗುಟ್ಟುತ್ತಿತ್ತು. ಊಟಕ್ಕಾಗಿ ಗಿರೀಶ ಆತುರಪಡಿಸಿದ. ಶಂಕರ ಮಾತ್ರ ಏನನ್ನೂ ಕೇಳಲಿಲ್ಲ. ಅವನಿಗೆ ಹಸಿವು ಬಾಯಾರಿಕೆಗಳ ಪರಿವೆಯೇ ಇಲ್ಲದಂತೆ ಇದ್ದ. ಇಬ್ಬರೂ ಊಟಕ್ಕೆ ಕುಳಿತರೂ ಶಂಕರ ಮಾತ್ರ ಬರಲಿಲ್ಲ. ಶಾಂತಾ ಅವನಿಗೂ ಬಡಿಸಿದ್ದಳು. ಆದರೆ ಅವನಾಗಿ ಹೋಗಿ ಕುಳಿತುಕೊಳ್ಳಲಿಲ್ಲ. ಶಾಂತಾ ತಾನೇ ಅವನ ಬಳಿಗೆ ಹೋಗಿ,

"ಬಾಣ್ಣ, ಊಟಕ್ಕೆ ಬಡಿಸಿ ಎಷ್ಟು ಹೊತ್ತಾಯಿತು. ಅವರು ಕಾದಿದ್ದಾರೆ ಬೇಗೇಳು ಎಂದಳು.

'ಆಂ!' ಎಂದು ಬಾಯಿಬಿಟ್ಟ ಶಂಕರ.

"ಊಟಕ್ಕೆ ಬಾಣ್ಣ – ಎಂದೆ" ಎಂದು ಹೇಳಿದಳು.

ಶಂಕರ 'ಹೂಂ' ಗುಟ್ಟುತ್ತಾ ಎದ್ದು ಅವಳನ್ನು ಅನುಸರಿಸಿದ.

ಚಂದ್ರಣ್ಣ, ಗಿರೀಶರು ನಗುನಗುತ್ತಾ, ಮಾತಾಡುತ್ತಾ, ಊಟ ಮಾಡುತ್ತಿದ್ದರು. ಶಂಕರ ಅವರತ್ತ ಒಂದೇ ಸಮನೆ ನೋಡುತ್ತಿದ್ದ. ಗಿರೀಶನಿಗೆ ಅವನ ದೃಷ್ಟಿಯಿಂದ ಸಂಕೋಚವಾಯಿತು. ಪಾಪ! ಅವನನ್ನು ಅರ್ಥ ಮಾಡಿಕೊಳ್ಳದೆ ನಮ್ಮ ಸಂತೋಷದಲ್ಲಿ ನಾವಿದ್ದುಬಿಟ್ಟರೆ ಹೇಗೆ! ಎಂದು ಆಲೋಚಿಸಿದ. ಊಟ ಮಾಡದೆ ಸುಮ್ಮನೆ ಅನ್ನದೊಳಗೆ ಬೆರಳಾಡಿಸುತ್ತಾ ಏನೇನೋ ಗೀಚುತ್ತಿದ್ದ.

"ಊಟ ಮಾಡು ಶಂಕರ, ಅಡಿಗೆ ಚೆನ್ನಾಗಿಲ್ಲವೇನು?" ಎಂದು ಸರಳವಾಗಿ ಮಾತಾಡಿದ, ಗಿರೀಶನ ಮಾತಿಗೆ ಉತ್ತರವಾಗಿ ತಲೆಬಗ್ಗಿಸಿ ಇನ್ನಷ್ಟು ಬಿರುಸಾಗಿ ಅನ್ನ ಕಲಸತೊಡಗಿದ. ತುತ್ತು ಶಂಕರನಿಗೆ ಗಂಟಲಲ್ಲಿ ಇಳಿಯಲಿಲ್ಲ. ತಟ್ಟೆಯ ಪಕ್ಕದಲ್ಲಿದ್ದ ನೀರಿನ ಲೋಟ ಎತ್ತಿಕೊಂಡು ಗಟಗಟ ಕುಡಿದು, ಮಿಕ್ಕ ನೀರಿನಲ್ಲಿ ಕೈತೊಳೆದೆದ್ದ.

"ಅಪ್ಪ, ಅಣ್ಣ ಊಟವನ್ನೇ ಮಾಡಲಿಲ್ಲ" ನೊಂದು ಹೇಳಿದಳು ಶಾಂತ.

"ಸಾಯಲಿ ಬಿಡು, ಅವನಿಗೆ ಯಾರು ಹೇಳುವವರು?" ಎಂದರು ಅಸಮಾಧಾನದಿಂದ.

"ಮಾವ, ನೀವು ಹಾಗೆಲ್ಲ ಅಸಮಾಧಾನ ಪಟ್ಟುಕೊಳ್ಳಬಾರದು. ಆದಷ್ಟೂ ಅವರೊಂದಿಗೆ ಸಹಾನುಭೂತಿಯಿಂದ ನಡೆದುಕೊಂಡರೆ ಪರಿಣಾಮ ಒಳ್ಳೆಯದಾಗುತ್ತೆ. ಅವರ ಮನಸ್ಸಿನ ಅರಕೆಗಳಿಂದ ಅವರು ಹಾಗಾಡುತ್ತಾರೆ. ನಾವು ಹೀಗೆಲ್ಲಾ ಮಾತಾಡಿದಷ್ಟೂ ಹೃದಯಕ್ಕೆ ಘಾಯವಾಗುತ್ತೆ. ಪರಿಸ್ಥಿತಿ ಹದಗೆಡುತ್ತೆ ಅಷ್ಟೆ" ಎಂದಳು.

ಚಂದ್ರಣ್ಣ ಮತ್ತೇನನ್ನೂ ಮಾತಾಡಲಿಲ್ಲ. ಇಬ್ಬರೂ ಊಟಮಾಡಿ ಎದ್ದರು. ಚಂದ್ರಣ್ಣ ಆ ಕೂಡಲೇ ಊರಿಗೆ ಹೋಗುವುದಾಗಿ ಮಗಳು ಅಳಿಯ ಇಬ್ಬರಿಗೂ ತಿಳಿಸಿದ. ಶಾಂತಳಿಗೆ ತಂದೆಯನ್ನು ಉಳಿಸಿಕೊಳ್ಳಬೇಕೆಂದೇನೋ ಆಸೆಯಿತ್ತು. ಆದರೆ ಚಂದ್ರಣ್ಣನ ಸ್ವಭಾವ ತಿಳಿದಿದ್ದರಿಂದ, ತಂದೆಯ ಮಾತಿಗೆ ಒಪ್ಪಿಗೆ ಕೊಟ್ಟಳು.

ಮಧ್ಯಾಹ್ನ ೨–೩೦ಕ್ಕೆ ಬಸ್ಸಿತ್ತು. ಈಗಾಗಲೇ ೨ ಗಂಟೆಯಾಗಿತ್ತು. ಗಿರೀಶ ಮಾವನನ್ನು ಬಸ್‌ಸ್ಟಾಂಡಿಗೆ ಬಿಟ್ಟುಬರಲು ನಡೆದ. ಶಂಕರ 'ಊರಿಗೆ' ಹೋಗೋಣವೆಂದಾಗ ಹಿಗ್ಗಿದ. ಮಗಳಿಗೆ, ಚಂದ್ರಣ್ಣ ಹೋಗಿಬರುವುದಾಗಿ ತಿಳಿಸಿ ಗಿರೀಶ ತಂದ ಆಟೋ ಹತ್ತಿದ. ಹಿಂದಿನಿಂದ ಗಿರೀಶ ಸ್ಕೂಟರಿನಲ್ಲಿ ಆಟೋವನ್ನು ಅನುಸರಿಸಿದ.

* * *

ಚಂದ್ರಣ್ಣ ಮನೆ ಸೇರುವ ವೇಳೆಗೆ ರಾತ್ರಿ ಎಂಟುಗಂಟೆಯಾಗಿತ್ತು. ಪಾರ್ವತಿ ಎದ್ದು ಬರಲಿಲ್ಲ. ಬದಲಾಗಿ ರಂಗಿಯ ಸೊಸೆ ಎದ್ದು ಬಂದು ಬಾಗಿಲು ತೆರೆದಳು. "ಪಾರ್ವತಿ ಮನೇಲಿ ಇಲ್ಲವೇನಮ್ಮ?" ಎಂದು ಪ್ರಶ್ನಿಸಿದ.

"ಒಳಗೆ ಅವ್ರೆ ಅಯ್ಯ. ನೀವು ಹೋದ ದಿನದಿಂದ ಅವ್ವಾವ್ರಿಗೆ ಮೈಯಾಗ ಹುಸಾರಿಲ್ಲ. ಒಂದೇ ಸಮ್ಕೆ ಕೆಂತಾವ್ರೆ, ಕೆಮ್ಮು ಓಗಾಕೇಂತ, ಅತ್ತೆ ಒಂದೆಲ್ಡು ತರ ಸೊಪ್ಪಿನ ರಸ ತೆಗೆದುಕೊಟ್ಟವ್ಳೆ. ಆದ್ರೂ ಓಗೇ ಇಲ್ಲ. ರಾತ್ರಿಯೆಲ್ಲಾ ನಿದ್ದಿ ಕೂಡ ಇಲ್ದೆ ಸಾಯೋ ಅಂಗೆ ಕೆಂತಿದ್ರು ಅಯ್ಯ" ಎಂದಳು.

ಅಷ್ಟರಲ್ಲಿ ಮತ್ತೆ ಪಾರ್ವತಿಯ ಕೆಮ್ಮು ಕೇಳಿ ಬಂತು.

ಚಂದ್ರಣ್ಣ, ಶಂಕರನಿಗೆ ಪೆಟ್ಟಿಗೆಯನ್ನು ಕೋಣೆಯಲ್ಲಿ ಇಡಲು ಹೇಳಿದ. ಶಂಕರ ಮರುಮಾತಿಲ್ಲದೆ ಒಳಗೆ ತೆಗೆದುಕೊಂಡು ಹೋದ.

ಚಂದ್ರಣ್ಣ ಮಡದಿಯ ಹಾಸಿಗೆಯ ಬಳಿಗೆ ನಡೆದು ಮೆಲ್ಲಗೆ 'ಪಾರ್ವತಿ' ಎಂದು ಕರೆದ.

ಬೆಳಗಿನಿಂದ ಒಂದೇ ಸಮನೆ ಕೆಮ್ಮಿ, ಸುಸ್ತಾಗಿ ಸೋತು ಮಲಗಿದ್ದ ಪಾರ್ವತಿ, ಗಂಡನ ಕರೆಯನ್ನು ಕೇಳಿ ಕಣ್ಣು ಬಿಟ್ಟಳು. ಯಾಕೋ ಗಂಡನನ್ನು ನೋಡುತ್ತಿದ್ದಂತೆ ಪಾರ್ವತಿಯ ಕಣ್ಣು ಒದ್ದೆಯಾಯಿತು. ಚಂದ್ರಣ್ಣನಿಗೋ ಏನೆನಿಸಿತೋ, ಅವನ ಕಣ್ಣಲ್ಲೂ ನೀರೊಡೆಯಿತು. ಆದರೂ ಸಾವರಿಸಿಕೊಂಡು, ಅವಳಿಗೆ ಕಾಣದಂತೆ ಪಕ್ಕಕ್ಕೆ ಮುಖ ಮಾಡಿ ಕಂಬನಿಯೊರಸಿಕೊಂಡ.

"ಯಾಕೆ ಪಾರ್ವತಿ ಅಳುತ್ತಿರುವುದು?" ಮೆದುವಾಗಿ ಕೇಳಿದ. ಎಷ್ಟು ವರ್ಷಗಳ ನಂತರ ಗಂಡ ಹೃದಯ ತುಂಬಿ ಮಾತನಾಡುತ್ತಿದ್ದಾನೆ. ಅವನ ಮಾತಿನಲ್ಲಿನ ಮೃದುತೆ, ಎದೆಯಾಳದಿಂದ ಹೊರಬಂದ ಪ್ರಶ್ನೆ ಪಾರ್ವತಿಯನ್ನು ತಡವರಿಸಿತು. ಮಾತಿಗೆ ಮಾತಿಲ್ಲ; ಪ್ರಶ್ನೆಗೆ ಉತ್ತರವಿಲ್ಲ; ಬಿಕ್ಕಿ ಬಿಕ್ಕಿ ಅಳತೊಡಗಿದಳು. ಚಂದ್ರಣ್ಣ ಹೆಂಡತಿಗೆ ಹೊಂದಿಕೊಂಡು ಕುಳಿತು, ಮೆಲ್ಲನೆ ತಲೆನೇವರಿಸಿ ಕೇಳಿದ.

"ಪಾರ್ವತಿ, ನೀನು ಅತ್ತರೆ ನನ್ನದೆಯೊಡೆಯುತ್ತದೆ. ನಿನಗೇ ತಿಳಿದಿದೆ. ನನ್ನ ಹೃದಯ ಅಸಮಾಧಾನ, ಅಸಂತೃಪ್ತಿಯ ಕುಲುಮೆಯಾಗಿದೆ. ನಿನ್ನ ಸಂತೋಷವೊಂದೇ ನನಗೆ ನೆರಳು. ನಿನ್ನ ಆಸರೆಯೊಂದೇ ಈ ಮುದಿಯೊಡಲಿಗೆ ಊರುಗೋಲು. ಹಣ್ಣು ಹಕ್ಕಿಗಳು ನಾವು ಪಾರ್ವತಿ, ನಮಗೆ ಯಾರೂ ಈಗ ದಿಕ್ಕಿಲ್ಲ" ಎಂದು ಎಳೆಯ ಮಗುವಿನಂತೆ ಪಾರ್ವತಿಯ ಮೇಲೆ ಬಿದ್ದ. ಹೃದಯ ಸ್ಪರ್ಶಿಯಾದ ದೃಶ್ಯ. ಒಬ್ಬರಿಗೊಬ್ಬರು ಸಮಾಧಾನ ಹೇಳಿಕೊಳ್ಳಬೇಕಷ್ಟೆ. ತನ್ನ ಹೃದಯದ ಉರಿವ ಆಸೆಗಳು ಎಷ್ಟೇ ಇದ್ದರೂ, ಅದನ್ನು ಹೇಳಿಕೊಳ್ಳಲಿಲ್ಲ ಪಾರ್ವತಿ. ಗಂಡನ ಸ್ಪರ್ಶ, ಆ ಮುದಿ ಮೈಯಲ್ಲೂ ರೋಮಾಂಚನವನ್ನು ಕೆರಳಿಸಿತು. ತನಗೆ ಗಂಡನಿಂದ ಸಮಾಧಾನ

ಸಿಗಬಹುದೆಂದುಕೊಂಡಿದ್ದ ಪಾರ್ವತಿಗೆ ಗಂಡನ ರೀತಿ ಕಸಿವಿಸಿಯನ್ನುಂಟುಮಾಡಿತು. ಅವಳೇ ಗಂಡನಿಗೆ ಸಮಾಧಾನ ಹೇಳಬೇಕಾದ ಸ್ಥಿತಿ ಬಂತು.

"ನೋಡೀಂದ್ರೆ, ನೀವು ಹೀಗಾದರೆ ನನ್ನ ಧೈರ್ಯವೇ ಕುಸಿಯುತ್ತೆ. ನನ್ನ ಮಾತು ಸ್ವಲ್ಪ ಕೇಳಿ." – ಎಂದು ಬೇಡಿದಳು.

ಚಂದ್ರಣ್ಣ ಸೋತು ಕಣ್ಣು ಹಾಯಿಸಿದ ಅವಳತ್ತ. ಅವಳು ಹೇಳುವ ಮಾತಾವುದೋ – ಎಂಬ ಕುತೂಹಲ ಪ್ರಶ್ನೆಯಂತೆ ಇದ್ದಿತು ಅವನ ಆ ದೃಷ್ಟಿ.

"ನಮ್ಮ ಶಂಕರನ ವಿಚಾರವೇನಾಯಿತು? ಡಾಕ್ಟರು ಏನು ಹೇಳಿದರು? ಅವನು ಸರಿ ಹೋಗುತ್ತಾನೆಯೆ? ನಮ್ಮ ನೆರವಿಗೆ ಇರುತ್ತಾನೆಯೇ?" ಎಂದು ಬಡ ಬಡ ಪ್ರಶ್ನಿಸಿದಳು.

"ಒಂದೇ ಸಮನೆ ಹೀಗೆ ಕೇಳಿದರೆ ನಾನೇನು ಹೇಳಲಿ? ಡಾಕ್ಟರೇನೋ, ನಮ್ಮ ಶಂಕರನಿಗೆ ಅಂಥಾ ಗಂಭೀರವಾದ ಖಾಯಿಲೆ ಏನೂ ಇಲ್ಲಾಂತ ಹೇಳಿದರು. ಅವನ ಖಾಯಿಲೆಯೆಲ್ಲಾ ಮನಸ್ಸಿಗೆ ಸಂಬಂಧಪಟ್ಟದ್ದು – ಅಂತ ಮಾತ್ರ ತಿಳಿಯಿತು. ಅಳಿಯನ ಜೊತೆ ಇಂಗ್ಲೀಷಿನಲ್ಲಿ ಏನೇನೋ ಮಾತಾಡಿದರು. ನನಗೆ ಅರ್ಥವಾಗಲಿಲ್ಲ. ರಿಪೋರ್ಟ್ ಗಿರೀಶನ ಕೈಗೆ ಕೊಡ್ತಾರಂತೆ. ಆದರೆ ನಾವೇನೂ ಗಾಬರಿಯಾಗುವ ಪ್ರಸಂಗವಿಲ್ಲಾಂತ ನನಗೆ ಡಾಕ್ಟರು ಅಂದರು.

"ಸದ್ಯಕ್ಕೆ ಬದುಕಿದೆ. ನಂಗೊತ್ತು ನಮ್ಮ ಶಂಕರನಿಗೆ ಯಾವ ಖಾಯಿಲೆನೂ ಇಲ್ಲ. ಏನೋ ಭೂತಚೇಷ್ಟೆ ಇದ್ದರೂ ಇರಬಹುದು. ಇಲ್ಲ ಭಯ ಬಿದ್ದಿರಬಹುದು. ಹೊತ್ತಲ್ಲದ ಹೊತ್ತಲ್ಲಿ ಊರು ಕಾಡು, ಮೇಡು ಸುತ್ತಿದರೆ, ಯಾವ ದೆವ್ವಾನೋ, ಪಿಶಾಚಿನೋ ಕಾಣಿಸಿಕೊಂಡು ಭಯಬಿದ್ದಿರಬೇಕು, ಅಷ್ಟೇ" ಎಂದು ಅವನ ರೀತಿಗೆ, ವಿಚಿತ್ರ ಸ್ವಭಾವಕ್ಕೆ ತಾನೇ ಕಾರಣವನ್ನು ನಿರ್ಧರಿಸಿ ಬಿಟ್ಟಳು. ಮಾತನ್ನು ಮುಂದುವರೆಸಲು, 'ಏನೂಂದ್ರೆ' – ಎಂದು ಪ್ರಾರಂಭಿಸುವಷ್ಟರಲ್ಲಿ ಮತ್ತೆ ಕೆಮ್ಮಿನ ಹಾವಳಿ ಶುರುವಾಯಿತು.

ರಂಗಪ್ಪನ ಸೊಸೆ, ಚಂದ್ರಣ್ಣ ಒಳಗೆ ಬಂದಾಗಿನಿಂದ ಹೊರಗೇ ನಿಂತಿದ್ದಳು. ಪಾರ್ವತಿಯ ಕೆಮ್ಮು ಕೇಳಿ ಬಳಿಗೆ ಬಂದು, "ಅಯ್ಯ ಏನಾದ್ರೂ ಕುಡಿಯಲು ತಂದುಕೊಂಡಲೇ?" ಎಂದು ಕೇಳಿದಳು.

ಏದುಸಿರು ಬಿಡುತ್ತಿದ್ದ ಪಾರ್ವತಿ ಬೇಡವೆಂದು ಸನ್ನೆ ಮಾಡಿದಳು. ಕಷ್ಟ ಪಡುತ್ತಿದ್ದ ಪಾರ್ವತಿಯನ್ನು ಚಂದ್ರಣ್ಣ ಎಬ್ಬಿಸಿ ಗೋಡೆಗ ಒರಗಿಸಿ ಕುಳ್ಳಿರಿಸಿದ. "ಲಕ್ಷ್ಮಿ, ನೀನು ಹೋಗಿ, ಒಂದು ಚೂರು ಏನಾದ್ರೂ ತಂದುಕೊಡು, ಅವಳು ಹೇಳ್ತಾಳೆ, ಏನೂ ಬೇಡಾಂತ" ಎಂದು ಚಂದ್ರಣ್ಣ ಲಕ್ಷ್ಮಿಗೆ ಹೇಳಿದ. ಲಕ್ಷ್ಮಿ ಬೇಗನೇ ಒಂದು ಲೋಟ ಕಾಫಿ ಮಾಡಿಕೊಂಡು ಬಂದಳು. ಚಂದ್ರಣ್ಣ ಮೆಲ್ಲಗೆ, ಪಾರ್ವತಿಗೆ ಗುಟುಕು ಗುಟುಕಾಗಿ ಕುಡಿಸಿದ. ಪಾರ್ವತಿ ಬೇಡವೆಂದು ಕೊಸರಾಡಿದರೂ, ಚಂದ್ರಣ್ಣನ ಒತ್ತಾಯಕ್ಕೆ ಕುಡಿದಳು.

ಬಿಸಿಕಾಫಿ ಗಂಟಲಲ್ಲಿ ಇಳಿಯುತ್ತಿದ್ದಂತೆ ಸ್ವಲ್ಪ ಹಿತವೆನಿಸಿತು ಪಾರ್ವತಿಗೆ.

ಚಂದ್ರಣ್ಣ ಕೇಳಿದ "ಆರಾಮಾಗಿದೆಯಾ ಪಾರ್ವತಿ?"

"ಏನು ಆರಾಮೂಂದ್ರೆ? ನನಗೆ ಸಾವೇಕೆ ಬರಲಿಲ್ಲಾಂತ ಯೋಚಿಸ್ತಿದ್ದೀನಿ?" ನರಳುತ್ತಾ ಹೇಳಿದಳು.

"ಎಂಥಾ ಮಾತಾಡ್ತಿ ಪಾರ್ವತಿ. ನನಗೆ ನೀನಿರಬೇಕು. ನೀನಿಲ್ಲದೆ ನನ್ನ ಜೀವನಕ್ಕೆ ಅರ್ಥವಿದೆಯೇ?"

"ಅದಲ್ಲ ಕೈಗೆ ಬಂದ ಮಗ ಇದ್ದಾನೆ. ಅವನು ಸರಿಯಾಗಿದ್ದರೆ, ಅವನಿಗೂ ಮದುವೆ ಮಾಡಿ, ಕಣ್ತುಂಬ ಸೊಸೇನ ನೋಡ್ಬೇಕಂತ ಇದ್ದೆ. ಆದರೆ ಆ ಅದೃಷ್ಟ ನಮಗೆಲ್ಲಿಯದೂಂದ್ರೆ?"

"ನೀನಷ್ಟು ನಿರಾಶಳಾಗಬೇಕಿಲ್ಲ ಪಾರ್ವತಿ. ಡಾಕ್ಟರ್ ರಿಪೋರ್ಟ್ ಬಂದ ಮೇಲೆ ವಿಚಾರ ಮಾಡೋಣ. ಅವರ ಹತ್ತಿರಲೇ ಅವರೇನಾದರೂ ಮದುವೆ ಮಾಡಬಹುದೆಂದರೆ, ನಿನ್ನಾಸೆ ನೆರವೇರಿಸಲು ಎಷ್ಟು ಹೊತ್ತು ಪಾರ್ವತಿ?" ನಂಬಿಸುವಂತೆ ನುಡಿದ.

"ಖಂಡಿತ ನಿಮ್ಮ ಮಾತು ನಿಜವಾಗುತ್ತದೆಯೇ?... ನನಗೆ ಕೈಲಾಗದಂತಾಗಿದೆ. ಏನೋ ಶಂಕರನಿಗೆ ಹೆಂಡತಿ ಬಂದರೆ ಮನೆ ತುಂಬಾ ಓಡಾಡಿಕೊಂಡು ಕೆಲಸಮಾಡುತ್ತಿದ್ದರೆ ನನಗೆಷ್ಟೋ ಸಂತೋಷ" ಎಂದು ಆಸೆ ತುಂಬಿದ ದನಿಯಲ್ಲಿ ಹೇಳಿದಳು.

"ದೇವರು ಕಣ್ಣು ಬಿಟ್ಟರೆ ಎಲ್ಲಾ ಆಗುತ್ತೆ ಬಿಡು. ಗಿರೀಶನೂ ಪಾಪ! ನಮ್ಮ ಶಂಕರನಿಗಾಗಿ ತುಂಬಾ ಕಷ್ಟಪಟ್ಟಿದ್ದಾನೆ. 'ನೀವೇನೂ ಯೋಚ್ನೆ ಮಾಡ್ಬೇಡಿ ಮಾವ, ಶಂಕರನಿಗೆ ಎಲ್ಲಾ ಸರಿಹೋಗುತ್ತೆ. ಇದೆಲ್ಲಾ ಅಂಥಾ ಸೀರಿಯಸ್ಸೇನೂ ಅಲ್ಲ ಅಂತ ಹೇಳಿದ್ದಾನೆ."

"ಧರ್ಮಕ್ಕೆ ನಮ್ಮ ಹೆಣ್ಣು ಮಕ್ಕಳಿಗೆ ಒಳ್ಳೆ ಗಂಡಂದಿರು ಸಿಕ್ಕಿದರು"

"ಅದೆಲ್ಲಾ, ನಿನ್ನ ಪುಣ್ಯ ಪಾರ್ವತಿ. ಆದರೆ ಕಿಂಚಿತ್ ಪಾಪಶೇಷದಿಂದ ಶಂಕರ ಮಗನಾಗಿ ಹುಟ್ಟಿ ನಮ್ಮನ್ನು ಕಾಡುತ್ತಿದ್ದಾನೆ ಅಷ್ಟೆ!" ಎಂದ ಚಂದ್ರಣ್ಣ.

"ಹಾಗೆ ನಾವು ತಿಳಿದಿರೋದು ತಪ್ಪೇನೋ ಅನ್ಸತ್ತೇಂದ್ರೆ, ಪಾಪ ಶಂಕರ ನಮ್ಮನ್ನೇನೂ ಹಿಂಸೆ ಮಾಡಿಲ್ಲ. ಅವನ ಪಾಡಿಗೆ ಅವನು ಇರುವಾಗ, ಅವನ ವಿಚಾರಮಾಡಿ ಕೆಟ್ಟದ್ದನ್ನು ಆಲೋಚಿಸುವುದು ಸರಿಯಲ್ಲ" ತಾಯಿಯ ಹೃದಯ ಮಗನ ವಿಚಾರದ ಅಸಮಾಧಾನವನ್ನು ಮರೆತು ಹೇಳಿತು.

"ಹೂಂ! ಇಷ್ಟಾದರೂ ಮಗನನ್ನು ಬಿಟ್ಟುಕೊಡೊಲ್ಲವಲ್ಲ? ಇಪ್ಪತ್ತೈದನ್ನೂ ಮೀರಿರುವ ಮಗ ಜವಾಬ್ದಾರಿಯಿಲ್ಲದೆ, ನಿಷ್ಪ್ರಯೋಜಕನಾಗಿ ಬದುಕುತ್ತಿರುವುದು ಯಾವ ತಂದೆ ತಾಯಿಗಳ ಹೃದಯಕ್ಕೆ ಬೇನೆಯಾಗುವುದಿಲ್ಲ ಹೇಳು?" ಆವೇಶವಿತ್ತು ದನಿಯಲ್ಲಿ.

"ತಂದೆ ತಾಯಿಯಾಗಿದ್ದಕ್ಕೆ, ನಮ್ಮ ಕರ್ತವ್ಯ ನಿರ್ವಹಿಸಿದೆವು. ಅವರಿಂದ ನಾವೇಕೆ ಪ್ರತಿಫಲ ಅಪೇಕ್ಷಿಸಬೇಕು. ಮಗನ ಋಣ ನಮಗಿದ್ದಿದ್ದರೆ ಬಹುಶಃ ಅವನು ನಮ್ಮ ಮುದಿಗಾಲಕ್ಕೆ ಆಗುತ್ತಿದ್ದನೇನೋ?.... ಈಗಲೂ ಏನಾಯ್ತು ಹೇಳಿ? ಒಂದು ಮದುವೆ ಮಾಡಿದ್ರೆ, ತಾನಾಗಿಯೇ ಜವಾಬ್ದಾರಿ ಮೇಲೆ ಬಿದ್ದು ಎಚ್ಚೆತ್ತುಕೊಳ್ಳುತ್ತಾನೆ. ಮಡದಿ ಮಕ್ಕಳು ಅನ್ನುವ ಭಾವನೆ ಅವನಿಗೇನೂ ಬರುವುದಿಲ್ಲವೆ?" ಎಂದು ಮಗನ ಪರವಹಿಸಿ ಮಾತಾಡಿದಳು.

"ಹೆತ್ತ ತಾಯಿಯನ್ನೇ ತಾಯಿಯಲ್ಲ ಅಂದವನಿಗೆ, ಹೆಂಡತಿ, ಮಕ್ಕಳ ಕಲ್ಪನೆ ಬರುವುದಾದರೂ ಹೇಗೆ? ನೀನೇ ಯೋಚನೆ ಮಾಡು.

"ಅದು ಕೆಲವು ವರ್ಷಗಳ ಹಿಂದೆ, ಬುದ್ದಿಯಿಲ್ಲದೆ ಅಂದ ಮಾತಿಗೆ, ಪ್ರಾಧ್ಯಾನ್ಯ ಕೊಟ್ಟು ಇಲ್ಲೀವರೆಗೆ ಪೋಷಿಸಿಕೊಂಡು ಬಂದು ಆ ಮಾತಿನಿಂದಲೇ ಅವನ ಬೆಲೆ ಕಟ್ಟೋದು ನಮಗೆ ಉಚಿತ ಅಲ್ಲ."

ಪಾರ್ವತಿಯ ಮಾತುಗಳು ಚಂದ್ರಣ್ಣನನ್ನು ಯೋಚಿಸುವಂತೆ ಮಾಡಿದವು. ಒಂದು ರೀತಿಯಲ್ಲಿ ಪಾರ್ವತಿ ಹೇಳುವುದು ಸರಿ. ಒಬ್ಬ ವ್ಯಕ್ತಿ ಹುಟ್ಟಿನಿಂದ ಸಾಯುವವರೆಗೂ ಒಂದೇ ರೀತಿ ಇರುವುದಿಲ್ಲ. ಕಾಲಕಾಲಕ್ಕೆ, ಅವನು ಬೆಳೆದಂತೆ ಅವನ ಸ್ವಭಾವದಲ್ಲಿಯೂ ಪರಿವರ್ತನೆ ಬರಬಹುದು. ಚಂದ್ರಣ್ಣ ಶಂಕರನನ್ನು ಎಂದೂ ಪ್ರೀತಿಯಿಂದ ಮಾತಾಡಿಸಿದ್ದಿಲ್ಲ. ಅದ್ಯಾಕೋ ಅವನ ವಿಚಾರವಾಗಿ ಪೂರ್ವಾಗ್ರಹ ಪೀಡಿತನಾಗಿದ್ದ. ಅವನ ಮನಸ್ಸಿನಲ್ಲಿ ಮಗ ನಿಷ್ಪ್ರಯೋಜಕ, ಒಂದು ರೀತಿಯ ಹುಚ್ಚು ಎನ್ನುವ ಭಾವನೆಯೇ ಊರಿಬಿಟ್ಟಿತ್ತು. ಅವನಿಂದ ಈ ಮುದಿವಯಸ್ಸಿನಲ್ಲಿ ತಮಗೆ ಉಪಯೋಗವಿಲ್ಲವೆಂದು ಬಾಧೆಪಡಿಸುವುದು ಅಸಮಂಜಸ. ಒಂದು ವೇಳೆ ಮಗನೇ ತಮಗೆ ಇಲ್ಲದಿದ್ದರೆ? – ಎಂದು ಆಲೋಚಿಸಿತು ಚಂದ್ರಣ್ಣನ ಮನಸ್ಸು. ಪಾರ್ವತಿಯನ್ನು ಮಲಗಿಸಲು ಪ್ರಯತ್ನಿಸಿ –

"ನೀನು ಮಲಗು ಪಾರ್ವತಿ. ನಾನು ಸ್ವಲ್ಪ ಆಚೆ ಕಡೆ ಹೊರಟು ಬರುತ್ತೇನೆ" ಎಂದು ಎದ್ದ.

"ಈಗ ತಾನೇ ಬರುತ್ತಿದ್ದೀರಿ. ಆಗಲೇ ಎಲ್ಲಿಗೆ ಹೊರಟಿರಿ. ನೀವು ಬಂದಕೂಡಲೇ ನಿಮ್ಮನ್ನು ಆದರಿಸಿ, ತಿಂಡಿ, ತೀರ್ಥ ಕೊಡುವುದಕ್ಕೂ ಆಗಲಿಲ್ಲ. ಲಕ್ಷ್ಮಿಯನ್ನು ಸ್ವಲ್ಪ ಕರೆಯಿರಿ. ಅವಳನ್ನೇ ಒಂದಿಷ್ಟು ಅನ್ನ ಬೇಯಿಸಿ ಹಾಕಲು ಹೇಳುತ್ತೇನೆ" ಎಂದಳು.

"ನೀನೇನೂ ಯೋಚ್ನೆ ಮಾಡಬೇಡ. ನಾವು ಹೇಗೋ ಮಾಡ್ಕೊಳ್ತೇವೆ" ಎಂದು ಬಾಗಿಲಿನ ಕಡೆಗೆ ನಡೆದ.

ಪಾರ್ವತಿಯ ತಲೆ ತುಂಬಾ ಶಂಕರನ ಮದುವೆಯ ಯೋಚನೆಯೆ! ಯಾರೂ ಇಲ್ಲದಾಗ ಈ ಮನೆ ಅವಳಿಗೆ ಭಯಂಕರವೆನಿಸಿತು. ಒಂಟಿತನ ವಾಕರಿಕೆ ಬರಿಸುವಂತಿತ್ತು. ಈ ತನ್ನ ಒಂಟಿತನದ ಭೀತಿಯಿಂದ ಪಾರಾಗಬೇಕಾದರೆ, ಮನೆಯಲ್ಲಿನ ಅಸಹ್ಯಶೂನ್ಯತೆಯನ್ನು ತುಂಬಬೇಕಾದರೆ ಶಂಕರನ ಮದುವೆ ಅನಿವಾರ್ಯ. ಜೊತೆಗೆ ಅವನ ಬುದ್ಧಿಯೂ ಸರಿಹೋದೀತೆಂಬ ಆಸೆ. ಚಂದ್ರಣ್ಣ ಊರಲ್ಲಿಲ್ಲದಿರುವಷ್ಟೂ ದಿನವೂ, ಪಾರ್ವತಿಯ ತಲೆ ತುಂಬಾ ಶಂಕರನ ಮದುವೆ, ಸೊಸೆ – ಮೊಮ್ಮಕ್ಕಳು – ಅವರ ಕೇಕೆ – ನಗು – ಸಂಭ್ರಮ ಇವುಗಳ ಕಲ್ಪನೆಯೇ ತುಂಬಿತ್ತು.

ಶಂಕರ ಊರಿಂದ ಬಂದಿದ್ದರೂ ತನ್ನನ್ನು ನೋಡಲು ಬರಲಿಲ್ಲ ಎಂದು ನೋವಾದರೂ, ಅವನ ಸ್ವಭಾವವೇ ಅಷ್ಟೆಂಬ ವಿಚಾರ ಹೊಳೆದು ಸಮಾಧಾನ ತಂದು ಕೊಂಡಳು. ಆದರೆ ಅವಳ ಮನಸ್ಸು ಮಾತ್ರ ಸುಮ್ಮನಿರಲಿಲ್ಲ. ಶಂಕರನನ್ನು ನೋಡಿ ಮಾತಾಡಿಸಬೇಕೆಂದು ಬಯಸಿತು. ಕಷ್ಟಪಟ್ಟುಕೊಂಡು ಎದ್ದಳು. ಕಾಲೆಳೆಯುತ್ತಾ ಶಂಕರನ ಕೋಣೆಯ ಬಳಿಗೆ ಬಂದಳು. ಮೆಲ್ಲನೆ 'ಶಂಕರ, ಶಂಕರ' ಎಂದು ಕರೆದಳು. ಶಂಕರ ತನ್ನ ಹೆಸರು ಹಿಡಿದು ಕೂಗಿದವರು ಯಾರೆಂದು ದಣಿದ ರೆಪ್ಪೆಗಳನ್ನು ಬಿಡಿಸಿ ನೋಡಿದ. ಬಳಲಿದ ತಾಯಿಯು ಹೊಸ್ತಿಲಲ್ಲಿ ನಿಂತುದನ್ನು ನೋಡಿದ. ಪಾರ್ವತಿಗೆ ಮಗನ ಕಣ್ಣಲ್ಲಿ ಕಂಡದ್ದು ಮುಗ್ಧತೆ ಮತ್ತು ಹೇಳಿಕೊಳ್ಳಲಾಗದ ದೈನ್ಯತೆ ಮಾತ್ರ.

ಊರಿಂದ ಬಂದ ಬಟ್ಟೆಗಳಲ್ಲೇ ಶಂಕರ ಕುಳಿತಿದ್ದ. ಒಬ್ಬನೇ ಕುಳಿತು ಇವನು ಏನು ಮಾಡುತ್ತಿದ್ದರಿಬಹುದೆನಿಸಿತು. ಕೇಳುವ ಮನಸ್ಸಾಯಿತು. ಆದರೆ ಅವನಿಂದ ಏನು ಉತ್ತರ ಬರುವುದೋ ಎಂದು ಹಿಂಜರಿದಳು. ಅದಕ್ಕೆಂದೇ ಅವನನ್ನು ಬೇರೆ ವಿಧದಲ್ಲಿ ಮಾತಿಗೆಳೆಯಲು ಆಲೋಚಿಸಿದಳು. ಅಷ್ಟರಲ್ಲಿ ಲಕ್ಷ್ಮಿ ಬಂದು ದೊಡ್ಡ ಪೊಟ್ಟಣವನ್ನು ತಂದು,

"ಅವ್ವ, ತಗೊಳ್ಳಿ, ನಮ್ಮ ಅತ್ತೆ ಕೊಟ್ಟು ಕಳಿಸವ್ರೆ, ತುಂಬಾ ಚೆನ್ನಾಗಿತ್ತು ಅಂತ ನಿಮಗೆ ಕೊಡಲು ಹೇಳಿ ಕಳ್ಸವ್ರೆ" ಎನ್ನುತ್ತಾ ಹಲಸಿನ ತೊಳೆಗಳ ಪೊಟ್ಟಣವನ್ನು ಪಾರ್ವತಮ್ಮನ ಮುಂದೆ ಚಾಚಿದಳು.

"ಏನೇ ಲಕ್ಷ್ಮಿ, ಎಷ್ಟು ಸಲ ನಿನಗೆ ಹೇಳಿಲ್ಲ, ಈ ರೀತಿ ತರಬೇಡಾಂತ. ದಿನಾ ಏನಾದ್ರೂ ತರ್ತಲೇ ಇರ್ತಿ, ಯಾವ ಋಣವೋ ಏನೋ" ಎಂದಳು.

"ಅವ್ವ, ತುಂಬಾ ಒತ್ತಾಯ್ತು, ನಾನಿನ್ನು ಮನೆಗೆ ಓಯ್ತೀನಿ" ಎಂದು ಸಂಕೋಚದಿಂದಲೇ ಕೇಳಿದಳು.

"ಹೋಗು ಲಕ್ಷ್ಮಿ, ಇನ್ನು ಪರವಾಗಿಲ್ಲ. ಅಯ್ಯ, ಶಂಕರ, ಇಬ್ಬರೂ ಬಂದ್ರಿಟ್ಟವ್ರೆ. ಏನೂ ಯೋಚನೆಯಿಲ್ಲ. ನೀನು ಹೋಗು. ಬೇಕಾದ್ರೆ ಶಂಕರ ನಿನ್ನನ್ನು ಬಿಟ್ಟು ಬರ್‍ತಾನೆ. ಕತ್ತಲೇಲಿ ಒಬ್ಬಳೇ ಹೋಗೋದು ಬೇಡ. ಶಂಕರ ಸ್ವಲ್ಪ ಲಕ್ಷ್ಮೀನಾ ಮನೇತಂಕ ಬಿಟ್ಟು ಬರ್‍ತೀಯಾ?" ಎಂದು ಕೇಳಿದಳು ಶಂಕರನನ್ನು.

ತಾಯಿಯ ಮಾತಿಗೆ ಶಂಕರ ಮಿಕ ಮಿಕ ನೋಡಿದ. ಪಾರ್ವತಿ ಮತ್ತೆ ಹೇಳಿದಳು "ನನ್ನನ್ನೇನು ನೋಡ್ತಿ. ಅವಳನ್ನ ಬಿಟ್ಟು ಬಾ ಎಂದೆ" ಎಂದಳು.

"ಬೇಡೀವ್ವ ಪಾಪ! ಚಿಕ್ಕಯ್ಯನಿಗೆ ಯಾಕೆ ತೊಂದರೆ? ಮನೆ ಏನೂ ದೂರವಿಲ್ಲ. ಎರಡು ನಿಮಿಷದೊಳಗೆ ಸೇರ್‍ಕೋತ್ತೀನಿ" ಎಂದು ನಡೆದಳು. ಶಂಕರನಿಗೆ ಏನು ಅರ್ಥವಾಯಿತೋ – ಎದ್ದು ಚಪ್ಪಲಿ ಮೆಟ್ಟಿಕೊಂಡು ಅವಳ ಹಿಂದೆ ಹೊರಟ. ಪಾರ್ವತಿ ತೃಪ್ತಿಯ ನಗೆ ನಕ್ಕಳು. ಹಾಗೇ ಲಕ್ಷ್ಮಿಯ ಹೆಸರಿಡಿದು ಕೂಗಿ ನಾಳೆ ಬೆಳಿಗ್ಗೆ ಬೇಗನೆ ಬರುವಂತೆ ನೆನಪಿಸಿದಳು.

ಮಗ ಇಷ್ಟರಮಟ್ಟಿಗೆ ಅರ್ಥ ಮಾಡಿಕೊಂಡವ್ನಲ್ಲ! – ಅದೇ ಅವಳಿಗೆ ಸಂತೋಷ. ವಯಸ್ಸಿನಲ್ಲಿರುವ ಶಂಕರನಿಗೆ ಆಸೆಗಳೇನೂ ಇರುವುದಿಲ್ಲವೇ?... ಪಾಪ ಮೂಕ ಪ್ರಾಣಿ! ಇದ್ದರೂ ಹೇಳಿಕೊಳ್ಳುವುದಿಲ್ಲ. ಹೆಂಡತಿ ಬಂದರೆ ತಾನಾಗಿ ಮಾತಾಡುವುದನ್ನು ಅಭ್ಯಾಸ ಮಾಡಿಕೊಳ್ತಾನೆ – ಎಂದೆಲ್ಲಾ ಆಲೋಚಿಸಿದಳು.

ಶಂಕರ ಲಕ್ಷ್ಮಿಯನ್ನು ಬಿಟ್ಟು ಬರುವುದಕ್ಕೂ, ಚಂದ್ರಣ್ಣ ಹೊರಗಿನಿಂದ ಬರುವುದಕ್ಕೂ ಸರಿಹೋಯಿತು. ಮೂದೇವಿಯಂತೆ ಮೂಲೆ ಸೇರಿ ಕೂರುತ್ತಿದ್ದ ಶಂಕರ, ಅಷ್ಟು ಹೊತ್ತಿನಲ್ಲಿ ಗೆಲುವಿನಿಂದ ಹೊರಗಿಂದ ಬಂದದ್ದನ್ನು ನೋಡಿ ಕೇಳಿದ "ಎಲ್ಲಿಗೆ ಹೋಗಿದ್ದ ಪಾರ್ವತಿ, ಶಂಕರ?"

ಅವನನ್ನೇ ಕೇಳಿ, "ಹೇಳ್ತಾನೆ" – ಎಂದಳು ಹೆಮ್ಮೆಯಿಂದ.

"ಎಲ್ಲಿಗೆ ಹೋಗಿದ್ದೆಯೋ ಶಂಕರ?" – ಚಂದ್ರಣ್ಣ ಕೇಳಿದ.

"ಅಮ್ಮ ಲಕ್ಷ್ಮಿಯನ್ನು ಬಿಟ್ಟು ಬಾ ಎಂದಳು ಅದಕ್ಕೇ ಹೋಗಿದ್ದೆ"

"ನಿಜವಾಗಿಯೂ?" – ಆಶ್ಚರ್ಯ, ಸಂಶಯ ಮಿಶ್ರಿತ ದನಿಯಲ್ಲಿ ಕೇಳಿದ.

"ಹೂಂ!" ಎಂದು ಉತ್ತರಿಸಿ ಶಂಕರ ಅಲ್ಲಿ ನಿಲ್ಲದೆ ತನ್ನ ಕೋಣೆ ಸೇರಿದ. ಇಷ್ಟು ಹೊತ್ತೂ ಚಂದ್ರಣ್ಣನ ಗಮನಕ್ಕೆ ಬಂದಿರಲಿಲ್ಲ. ಪಾರ್ವತಿ ನಿಂತಿದ್ದುದು!

"ನೀನ್ಯಾಕೆ ಎದ್ದು ಬಂದೆ ಪಾರ್ವತಿ! ಮೈ ಹುಷಾರಿಲ್ಲಾ ಅಂತ – ಹೀಗೆಲ್ಲಾ ಎದ್ದು ಬರೋದು ಸರೀನಾ? ನಡಿ ಒಳಗೆ ಮಲಗುವಂತೆ" ಎಂದು ಮೆದುವಾಗಿಯೇ ಗದ್ದರಿಸಿದ.

"ನೀವು ಹೇಳುವುದು ಸರಿಹೋಯ್ತು. ಎದ್ದೋ ಬಿದ್ದೋ ಮಾಡಬೇಕಾದ ಕೆಲಸ ಮಾಡಲೇಬೇಕಲ್ಲ? ಕೈಲಾಗುವುದಿಲ್ಲ. ಅಂತ ಮಲಗಿದರೆ ಮಾಡುವವರು ಯಾರು?" ಎಂದು ಪ್ರಶ್ನಿಸಿದಳು.

ಚಂದ್ರಣ್ಣನಿಗೆ ಪಾರ್ವತಿಯ ಪ್ರಶ್ನೆಗೆ ಉತ್ತರ ಕೊಡಲು ಆಗಲಿಲ್ಲ. ಹೆಣ್ಣು ಮಕ್ಕಳು ಮನೆ ಬಿಟ್ಟು ಹೋದದ್ದು ಹೆಗಲು ಮುರಿದಂತಾಗಿತ್ತು. ಮಾಡುವವರಿಲ್ಲದೆ ಮನೆ ಹಾಳು ಬಿದ್ದಿತ್ತು. ಕಷ್ಟಪಟ್ಟು ಪಾರ್ವತಿ ಒಂದಿಷ್ಟು ಅನ್ನ ಬೇಯಿಸಿ ಹಾಕುತ್ತಿದ್ದಳು. ಪುಟ್ಟನ ಹೆಂಡತಿ ಲಕ್ಷ್ಮಿ ದಿನಾ ಬಂದು ಮೇಲಿನ ಕೆಲಸಗಳನ್ನು ಮಾಡಿಡುತ್ತಿದ್ದಳು.

ಪುಟ್ಟ, ಲಕ್ಷ್ಮಿ ಇಬ್ಬರೂ ಇಲ್ಲದಿದ್ದರೆ ಇವರ ಗತಿ ಬೇರಾಗುತ್ತಿತ್ತು. ಬೀಜ ಬಿತ್ತುವುದು ಮೊದಲ್ಗೊಂಡು, ದವಸಧಾನ್ಯ ಮನೆ ಸೇರುವವರೆಗಿನ ಕೆಲಸಗಳನ್ನೆಲ್ಲಾ ಪುಟ್ಟನೇ ನೋಡಿಕೊಳ್ಳುತ್ತಿದ್ದ.

ಇತ್ತೀಚೆಗೆ ಒಂದೆರಡು ಬಾರಿ ಪುಟ್ಟನ ಜೊತೆ ಶಂಕರನೂ ಹೋಗಿ ಬಂದಿದ್ದ. ಆದರೆ ಅವನಿಗೆ ಈ ವ್ಯವಹಾರಗಳ ಬಗ್ಗೆ ಆಸಕ್ತಿಯೇನೂ ಇದ್ದಂತೆ ಕಾಣಲಿಲ್ಲ. ಚಂದ್ರಣ್ಣನೇ ಒತ್ತಾಯಿಸಿ ಪ್ರತಿದಿನಾ ಶಂಕರನನ್ನು ಪುಟ್ಟನೊಂದಿಗೆ ಕಳುಹಿಸಲು ಪ್ರಯತ್ನಿಸುತ್ತಿದ್ದ. ಒಂದೊಂದು ದಿನ ಏನನ್ನೂ ಕೇಳಿಸಿಕೊಳ್ಳದವನಂತೆ ವರ್ತಿಸುತ್ತಿದ್ದರೂ, ಪುಟ್ಟನೊಂದಿಗೆ ಆಗಾಗ ಶಂಕರನೂ ಹೊಲ, ಗದ್ದೆಯ ಕಡೆಗೆ ಹೋಗಿ ಬರುತ್ತಿದ್ದ.

ಒಮ್ಮೆ ಚಂದ್ರಣ್ಣ ಹಿತ್ತಲಿನಲ್ಲಿ ಕಟ್ಟಿ ಹಾಕಿದ್ದ ಎಳೆಯ ಕರುವನ್ನು ನೇವರಿಸುತ್ತಾ ಗಂಭೀರವಾಗಿ ಆಲೋಚಿಸುತ್ತಿದ್ದ. ಶಂಕರ, ಚಂದ್ರಣ್ಣನ ಹಿಂದೆ ನಿಂತಿದ್ದ. ಎಷ್ಟು ಹೊತ್ತು ಅಲ್ಲಿ ನಿಂತಿದ್ದರೂ ಚಂದ್ರಣ್ಣ ತಿರುಗಿ ನೋಡಲಿಲ್ಲ. ಶಂಕರನೇ – "ಅಪ್ಪ, ಗದ್ದೆ ಕಡೆ ಹೋಗಿ ಬರ್ತೀನಿ" ಎಂದ. ಚಂದ್ರಣ್ಣ ಯೋಚನಾ ಭಂಗವಾದ್ದರಿಂದ ತಿರುಗಿ ನೋಡಿದ. ಶಂಕರ ನಿಂತಿದ್ದ. ಅವನ ಮಾತು ಕೇಳಿಸಿತು.

"ಇವತ್ತು ಹೋಗುವ ಅವಶ್ಯಕತೆಯಿಲ್ವಲ್ಲ ಶಂಕರ. ಕೊಯ್ಲೆಲ್ಲಾ ಮುಗಿದು ಹೋಗಿದೆ – ಎಂದ ಚಂದ್ರಣ್ಣ.

"ಗೊತ್ತು, ಆದರೂ ಒಂದು ಸಲ ಸುತ್ತಾಡಿ ಬರ್ತೇನೆ" ಎಂದ.

"ಅಮ್ಮನಿಗೆ ಹೇಳಿ ಹೋಗು ಶಂಕರ, – ಅನಿರೀಕ್ಷಿತ ಮೃದುತೆಯಿತ್ತು" ಚಂದ್ರಣ್ಣನ ಮಾತಿನಲ್ಲಿ. ಶಂಕರ, "ಬೇಗ ಬಂದ್ಬಿಡ್ತೇನೆ ಅಪ್ಪ" ಎಂದು ಹೊರಟ.

ಚಂದ್ರಣ್ಣನ ಯೋಚನೆ ಶಂಕರನ ಸುತ್ತ ತಿರುಗಿತು. ಅವನ ತನ್ನ ನಡುವಿನ ವ್ಯವಹಾರವನ್ನು ಕುರಿತು ಆಲೋಚಿಸಿದಾಗ, ತಾನೆಷ್ಟುಮಟ್ಟಿಗೆ ಮಗನ ವಿಷಯದಲ್ಲಿ ಆಸಕ್ತಿ ವಹಿಸಿದ್ದೇನೆ ಎಂದು ಪ್ರಶ್ನಿಸಿಕೊಂಡಾಗ, ಈ ಸುಮಾರು ವರ್ಷಗಳಿಂದ, ಮಗನೊಂದಿಗೆ ಪ್ರೀತಿಯಿಂದ ಒಂದು ಮಾತನ್ನಾಡಿದ್ದಿಲ್ಲ. ಅವನ ನಿರ್ಲಿಪ್ತ, ಅನಾಸಕ್ತ

ರೀತಿಯನ್ನು ತಾನು ತಾತ್ಸಾರದಿಂದ ಕಂಡದ್ದು, ಮಾತು ಮಾತಿಗೆ ಅವನ ಹೆಸರನ್ನು ಕೇಳಿದ ಕ್ಷಣವೇ ಉರಿದೇಳುತ್ತಿದ್ದದ್ದು ಮನಸ್ಸಿಗೆ ಹೊಳೆದು ನಾಚುವಂತಾಯಿತು. ತನ್ನದು ಒಮ್ಮುಖ ಯೋಚನೆ.

ಮಗನ ಜೊತೆಗೆ ತನ್ನ ನಿಲುವನ್ನೇ ಬದಲಿಸಿಕೊಂಡು ನೋಡಬೇಕು. ಪ್ರೀತಿ ವಾತ್ಸಲ್ಯಗಳನ್ನು ಕೊಟ್ಟು ನೋಡಿದರೆ ಸುಧಾರಿಸಿಯಾನೇನೊ – ಎಂದು ಚಂದ್ರಣ್ಣನ ಮನಸ್ಸು ಹೇಳಿತು. ಪಾರ್ವತಿ ಅವನೊಂದಿಗೆ. ತನ್ನನ್ನೇ ಅವನ ಆ ಸ್ವಭಾವಕ್ಕೆ ಕಾರಣವಿರಬೇಕೆಂದು ನಿರ್ಧರಿಸಿಕೊಂಡ. ಅಂದಿನಿಂದ ಚಂದ್ರಣ್ಣ ಶಂಕರನನ್ನು ಪ್ರೀತಿಯಿಂದಲೇ ಮಾತನಾಡಿಸುತ್ತಿದ್ದ. ಅವನ ಹಾದಿಗೇ ನಾವು ಹೋಗಿ ತಿದ್ದಬೇಕೆಂದು ವಿಚಾರ ಮಾಡಿದ.

ಪಾರ್ವತಿಯ ಮುಂದಿದ್ದ ಹಲಸಿನ ತೊಳೆಗಳ ಪೊಟ್ಟಣವನ್ನು ನೋಡಿ, "ಯಾರು ಬಂದಿದ್ದರು ಪಾರ್ವತಿ?" – ಎಂದು ಕೇಳಿದ.

"ಈ ಮನೇಗೆ ಯಾರು ಬರ್ತಾರೆ ಹೇಳಿ. ಇದೊಂದು ನಿರ್ವಾಸಿತ ಮನೆಯಂತೆ. ನೆಂಟರು ಗಿಂಟರು ಯಾರೂ ಬರುವುದಿಲ್ಲ. ಬಂದರೆ ನಮ್ಮ ಮಕ್ಕಳು ಮಾತ್ರ ಬರಬೇಕು" ಎಂದು ನಿಟ್ಟುಸಿರು ಬಿಟ್ಟಳು.

"ಅಷ್ಟೆಲ್ಲಾ ವೇದಾಂತದ ಪೀಠಿಕೆ ಯಾಕೆ? ಇದನ್ನು ತಂದುಕೊಟ್ಟವರು ಯಾರು? ಅಂತ ಮಾತ್ರ ಕೇಳಿದೆ."

"ರಂಗಿ, ಹಣ್ಣು ಚೆನ್ನಾಗಿದೆ. ರುಚಿಯಾಗಿದೇಂತ ಹೇಳಿ ಕೊಟ್ಟು ಕಳಿಸಿದ್ದಾಳೆ. ಅವಳ ಹೃದಯದಲ್ಲಿ ನಮ್ಮ ಬಗ್ಗೆ ಎಷ್ಟು ಕಳಕಳಿ ಇದೆ ನೋಡಿ."

"ಹೌದು. ನಮಗೆ ನೆಂಟರು ಗಿಂಟರು ಯಾರೂ ಆಗಿಲ್ಲ. ಏನೋ ಅದೃಷ್ಟವಶಾತ್ ನಮ್ಮ ಜಾನಕಿ ನಮ್ಮಿಂದ ಒಂದು ದೊಡ್ಡ ಹೊರೆಯ ಭಾರವನ್ನು ಇಳಿಸಿದಳು. ಪದ್ಮಳಿಗಂತೂ ನಾವು ಮರೆತೇಹೋಗಿದ್ದೇವೆ. ಅವಳಿಗೆ ಶ್ರೀಮಂತಿಕೆಯ ಗರ ಹೊಡೆದಿದೆ. ಸತ್ತಿದ್ದೀಯಾ ಬದುಕಿದ್ದೀಯಾಂತಲೂ ವಿಚಾರಿಸೊಲ್ಲ. ಸಂಬಂಧ, ನೆಂಟಸ್ತಿಕೆ ಇಲ್ಲದ ಈ ಕುಟುಂಬದ ಜನ ನಮಗಾಗಿ ದುಡೀತಿದ್ದಾರೆ.

"ಲಕ್ಷ್ಮಿನೂ ನೋಡಿ, ಮನೆಕೆಲಸ ಬಿಟ್ಟು ಇಲ್ಲಿ ನಮ್ಮಲ್ಲಿ ಕೆಲಸ ಮಾಡಿಕೊಡ್ತಾಳೆ. ರಂಗಿ, ಸೊಸೇನ ಈ ಮನೆ ಮಗಳ ಹಾಗೆ ಮಾಡಿಬಿಟ್ಟವ್ಳೆ. ನಾವು ಹೇಗಾದರೂ ಮನೇಲಿ ಮಾಡ್ಕೋತೇವೆ ನೀನು ಅವ್ವಾವ್ರಿಗೆ ಕೆಲಸ ಮಾಡ್ಕೊಂಡಿರು – ಅಂತ ದಿನಾ ಬೆಳಿಗ್ಗೇನೇ ಕಳಿಸಿಬಿಡ್ತಾಳೆ."

"ನೀನು ಬಾ ಪಾರ್ವತಿ. ತುಂಬಾ ಹೊತ್ತಿಂದ ಹೀಗೇ ನೀನು ನಿಂತು ಮಾತಾಡ್ತಿದ್ರೆ ಬಿದ್ದುಗಿದ್ದೀಯ. ಹೊತ್ತಾಯ್ತು. ಇನ್ನು ಮಲಗು ಹೋಗು" ಎಂದು ಅಸಮಾಧಾನದಿಂದ ಹೇಳಿದ.

"ನೀವು ಊಟಕ್ಕೇನು ಮಾಡ್ತೀರೀಂದ್ರೆ?" ಆತಂಕದಿಂದ ಕೇಳಿದಳು.

"ಊಟದ ಅವಶ್ಯಕತೆಯಿಲ್ಲ. ಶಾಂತ ಸ್ವಲ್ಪ ತಿಂಡಿ ಕಟ್ಟಿಕೊಟ್ಟಿದ್ದಾಳೆ. ಹಲಸಿನ ಹಣ್ಣು ಬೇರೆ ಇದೆ. ತಿಂದು ಮುಗಿಸಿದರೆ ಆಯ್ತು."

"ಪುಟ್ಟ ಸಂಜೆ ಕರೆದಿಟ್ಟಿರೋ ಹಾಲಿದೆ. ಆ ತಂಬಿಗೇಲಿ ಲಕ್ಷ್ಮೀನೇ ಕಾಯಿಸಿ ಇಟ್ಟಿದ್ದಾಳೆ. ಶಂಕರ, ನೀವು ಇಬ್ಬರೂ ಒಂದೊಂದು ಲೋಟ ತೆಗೆದುಕೊಳ್ಳಿ."

"ನೀನೇನೂ ತೆಗೆದುಕೊಳ್ಳುವುದಿಲ್ಲವೇ ಪಾರ್ವತಿ?"

"ಬೇಡ, ಸ್ವಲ್ಪ ನೆಮ್ಮದಿಯಿಂದ ಮಲಗಿದರೆ ಸಾಕು."

"ನೀನು ಮಲಗು ಹೋಗು. ನಾನು ಶಂಕರ ಉಂಡು ಮಲಗ್ತೇವೆ." ಎಂದು ಅವಳನ್ನು ಹೋಗಿ ಮಲಗಲು ಆತುರಪಡಿಸಿದ. ಪಾರ್ವತಿಗೂ ನಿದ್ದೆ ಎಳೆಯುತ್ತಿತ್ತು. ಮೈಚಾಚಿದರೆ ಸಾಕೆನಿಸಿತ್ತು. ಕಾಲೆಳೆದುಕೊಂಡು ನಡೆದಳು.

ಚಂದ್ರಣ್ಣ, ಶಂಕರನನ್ನು ಕರೆದು, ತನ್ನ ಮತ್ತು ಅವನ ತಟ್ಟೆಯಲ್ಲಿ ತಿಂಡಿಗಳನ್ನಿಟ್ಟ. ಮೂರು ಮೂರು ಹಲಸಿನ ತೊಳೆಗಳನ್ನೂ ಬಿಡಿಸಿಟ್ಟ. ತಂದೆಯ ಕರೆಗೆ ಓಗೊಟ್ಟು ಬಂದ ಶಂಕರ, ತನ್ನ ಮುಂದಿದ್ದ ತಟ್ಟೆಯನ್ನು ಎಳೆದುಕೊಂಡು ಗಬಗಬನೆ ತಿಂದ. ತುಂಬಾ ಹಸಿದಂತಿತ್ತು. ತಿಂದಾದ ಮೇಲೆ, "ಅಮ್ಮ ಎಲ್ಲಿ?" ಎಂದು ಕೇಳಿದ.

"ಮಲಗಿರಬೇಕು ಹೋಗಿ ನೋಡು. ಈಗ್ಯಾಕೆ ನಿನಗೆ ಅಮ್ಮ?... ಮಲಗಿದ್ದರೆ ಎಚ್ಚರಿಸ ಬೇಡ" ಎಂದು ತಿಳಿಸಿದ.

ಶಂಕರ ತಿಂದು ಹೋದ. ಚಂದ್ರಣ್ಣ ತಾನೂ ತಿಂದದ್ದು ಮುಗಿಸಿ ಅವುಗಳನ್ನೆಲ್ಲಾ ಒಳಗೆ ತೆಗೆದುಕೊಂಡು ಹೋಗಿಟ್ಟ. ಎದ್ದು ಹೋಗಿ. ಹಿತ್ತಿಲಬಾಗಿಲು, ಮುಂದಿನ ಬಾಗಿಲುಗಳ ಹಾಕಿದೆಯೇ ಎಂದು ಪರೀಕ್ಷಿಸಿ ಬಂದ,

ಹಜಾರದಲ್ಲಿಯೇ ತನ್ನ ಹಾಸಿಗೆಯನ್ನು ತಂದು ಹಾಸಿಕೊಂಡ. ಶಂಕರನನ್ನೂ ತನ್ನ ಬಳಿಯೇ ಮಲಗಲು ಹೇಳಿದ. ಆದರೆ ಶಂಕರ ತಾನು ಕೋಣೆಯ ಒಳಗೇ ಮಲಗುವುದಾಗಿ ತಿಳಿಸಿದ. ದೊಡ್ಡದಾಗಿ ಉರಿಯುತ್ತಿದ್ದ ಲಾಂದ್ರದ ಬತ್ತಿಯನ್ನು ತೀರಾ ಚಿಕ್ಕದು ಮಾಡಿ ಮಲಗಿದ. ಹಾಸಿಗೆಗೆ ಒರಗಿದ ಎರಡು ನಿಮಿಷಗಳಲ್ಲಿಯೇ ನಿದ್ದೆ ಅವನನ್ನು ಆವರಿಸಿತು.

ಶಂಕರನೂ ತನ್ನ ಪಾಡಿಗೆ ತಾನು ಮಲಗಿದ.

* * *

ಕೋಳಿ ಕೂಗಿದಾಗ ಎಚ್ಚರವಾಯಿತು ಚಂದ್ರಣ್ಣನಿಗೆ. ರಾತ್ರಿಯೆಲ್ಲಾ ಪಾರ್ವತಿ ಕೆಮ್ಮುತ್ತಿದ್ದರೂ, ವಿಪರೀತ ನಿದ್ದೆಯಿಂದಾಗಿ ಚಂದ್ರಣ್ಣನಿಗೆ ಎಚ್ಚರಿಕೆಯಾಗಲೇ ಇಲ್ಲ. ಬೆಳಗಿನ ಜಾವದಲ್ಲೇ ಪಾರ್ವತಿಗೆ ನಿದ್ರೆ ಹತ್ತಿದ್ದರಿಂದ ಇನ್ನೂ ಮಲಗಿಯೇ ಇದ್ದಳು. ಏಳುವ ಮನಸ್ಸಾಗದ ಚಂದ್ರಣ್ಣ ಹಾಸಿಗೆಯ ಮೇಲೇ ಹೊರಳಾಡುತ್ತಿದ್ದ.

ಹೊರಗಡೆ ಹೆಜ್ಜೆ ಸಪ್ಪಳದಂತಾಯಿತು. 'ಯಾರದು?' – ಎಂದು ಒಳಗಿನಿಂದಲೇ ಕೇಳಿದ ಚಂದ್ರಣ್ಣ.

"ನಾನಯ್ಯ ಲಕ್ಷ್ಮಿ. ಸ್ವಲ್ಪ ಬಾಗಿಲು ತೆಗೀತೀರಾ?" ಎಂದಿತು ದನಿ. ಚಂದ್ರಣ್ಣ, ರಾಮಕೃಷ್ಣ, ಗೋವಿಂದ, ಎನ್ನುತ್ತಾ, ಎದ್ದು ಕೈಯುಜ್ಜಿಕೊಂಡು ಹಜಾರದ ಗೋಡೆಗೆ ಹಾಕಿದ ಶ್ರೀರಾಮಚಂದ್ರನ ಪಟ್ಟಾಭಿಷೇಕದ ಪೋಟೋವಿನತ್ತ ನೋಡಿ, ಕಣ್ಣೊರಸಿಕೊಂಡು ಕೈಮುಗಿದ.

ಹೊದ್ದ ಕಂಬಳಿಯನ್ನೆಸೆದು, ಎದ್ದು ಹೋಗಿ ಬಾಗಿಲು ತೆಗೆದ. "ಇದೇನು ಲಕ್ಷ್ಮಿ ಇಷ್ಟು ಹೊತ್ತಿಗೇ ಬಂದುಬಿಟ್ಟದೀ!" ಎಂದ ಚಂದ್ರಣ್ಣ. ಲಕ್ಷ್ಮಿಮನೆಯ ಮುಂದಿನ ಅಂಗಳ ತೋರಿಸಿದಳು. ಅಷ್ಟು ನಸುಕಿನಲ್ಲಿಯೇ ಬಂದು ಗುಡಿಸಿ, ಸಾರಿಸಿ, ರಂಗವಲ್ಲಿ ಬಿಡಿಸಿದ್ದಳು. ಲಕ್ಷ್ಮಿಯನ್ನು ನೋಡುತ್ತಿದ್ದಂತೆ ಚಂದ್ರಣ್ಣನಿಗೆ ಚಿಕ್ಕಿಯ ನೆನಪಾಯಿತು. ಅವಳಷ್ಟೇ ಮೋಹಕತೆ, ಅವಳಂತೆಯೇ ಚುರುಕು. ಬಿಡಿಸಿದ ರಂಗವಲ್ಲಿಯನ್ನೇ ನೋಡುತ್ತಾ ನಿಂತ.

ಹಿತ್ತಿಲಿನಿಂದ 'ಅಂಬಾ' ಎಂಬ ಕರುವಿನ ದನಿ ಕೇಳಿ ಬೆಚ್ಚಿಬಿದ್ದ ಚಂದ್ರಣ್ಣ. ಲಕ್ಷ್ಮಿ – "ಅಯ್ಯ, ಹಾಲು ಕರ್‍ಕಂಡು, ಕರಾನ ಬಿಡಬೇಕು. ನಾನು ಹಿತ್ತಿಲಿಗೆ ಹೋಗಲೇ?" ಎಂದು ಕೇಳಿದಳು.

"ಹೋಗು ಲಕ್ಷ್ಮಿ. ಪುಟ್ಟ ಬರಲಿಲ್ಲವಾ ಇವತ್ತು ಹಾಲು ಕರೆಯೋಕೆ?" –ಎಂದ.

"ಇಲ್ಲ ಬತ್ತಾರಂತೆ, ನೀನು ಮುಂದೆ ಓಗು, ನಾ ಇಂದಿಂದ ಬತ್ತೀನಿ ಅಂದ" ಎಂದು ಹೇಳುತ್ತಾ ಹಜಾರವನ್ನು ಹಾದು ಹಿತ್ತಿಲಿಗೆ ನಡೆದಳು.

ಸ್ವಲ್ಪ ಹೊತ್ತಿಗೆ ಪುಟ್ಟನೂ ಬಂದ. ಲಕ್ಷ್ಮಿ ಪುಟ್ಟ ಇಬ್ಬರೂ ಹಸುವಿನ ಕೆಚ್ಚಲು ತೊಳೆದು, ಹಾಲು ಕರೆದು, ಕರುವನ್ನು ತಾಯಿ ಹಸುವಿನೆಡೆಗೆ ಬಿಟ್ಟರು.

ಕೊರಳ ಹಗ್ಗ ಬಿಚ್ಚಿದ್ದೇ ಕರು ಕೆನೆಯುತ್ತಾ ತಾಯಿಯ ಬಳಿಗೆ ಓಡಿ ಕೆಚ್ಚಲಿಗೆ ಬಾಯಿಟ್ಟಿತು. ಪುಟ್ಟ, ಲಕ್ಷ್ಮಿಯತ್ತ ನೋಡಿ ನಕ್ಕ. ಲಕ್ಷ್ಮಿಗೆ ನಾಚಿಕೆಯೆನಿಸಿತು. ಸರಸರನೆ ಹಾಲಿನ ತಂಬಿಗೆಯನ್ನು ತೆಗೆದುಕೊಂಡು ಒಳಗೆ ನಡೆದಳು.

ಪಾರ್ವತಿ ಅಷ್ಟು ಹೊತ್ತಿಗೆ ಎದ್ದು ಮುಖ ತೊಳೆಯುತ್ತಿದ್ದಳು. ಲಕ್ಷ್ಮೀ ಪಾರ್ವತಿಯನ್ನು ಕಂಡು "ಹೇಗಿದೆ ಮೈಗೆ" ಬಂದು ವಿಚಾರಿಸಿದಳು. ಪಾರ್ವತಿಗೆ

ಸ್ವಲ್ಪ ಹಾಯೆನಿಸಿತ್ತು. "ಪರವಾಗಿಲ್ಲ ಲಕ್ಷ್ಮಿ, ಈಗೇನೂ ತೊಂದರೆಯಿಲ್ಲ"- ಎಂದು ಉತ್ತರಿಸಿದಳು.

ಮುಖ ತೊಳೆದ ಪಾರ್ವತಿ ಮನೆಕೆಲಸಗಳಲ್ಲಿ ತೊಡಗಿದಳು. ಪುಟ್ಟ, ಮನೆಗೆ ಮರಳಿದ. ಲಕ್ಷ್ಮಿ ಇಲ್ಲಿಯೇ ಉಳಿದಳು. ತರಕಾರಿ ಹೆಚ್ಚಿಕೊಡುವುದು ಮೊದಲಾಗಿ ಕೆಲಸಗಳನ್ನು ಮಾಡಿಕೊಟ್ಟಳು.

ಪಾರ್ವತಿ ಅಷ್ಟರಲ್ಲಿ ಬಿಸಿ ಬಿಸಿ ಕಾಫಿ ಮಾಡಿ ಎಲ್ಲರಿಗೂ ಕೊಟ್ಟಳು. ಚಂದ್ರಣ್ಣ ಕಾಫಿ ಕುಡಿದು ಮನೆಯ ಮುಂದಿನ ಜಗಲಿಯ ಮೇಲೆ ಕುಳಿತ. ಹೊತ್ತು ಹೋಗುವುದು ಕಷ್ಟವಾಗಿತ್ತು. ಕೊಯ್ಲೆಲ್ಲಾ ಮುಗಿದಿದ್ದರಿಂದ ಗದ್ದೆಯ ಕಡೆ ಹೋಗಬೇಕಾದ್ದೂ ಇರಲಿಲ್ಲ. ಬೆಳಗಿನಿಂದ ರಾತ್ರಿವರೆಗೆ ಹೊತ್ತು ಕಳೆಯುವುದು ಪ್ರಯಾಸವಾಗಿತ್ತು. ಊಟ, ತಿಂಡಿ, ಮಾತು, ನಿದ್ದೆಗಳಲ್ಲೇ ದಿನಗಳು ಉರುಳಬೇಕಿತ್ತು. ಜೀವನದಲ್ಲಿ ವೈವಿಧ್ಯವಿಲ್ಲ. ಒಂದೇ ರೀತಿಯ ಯಾಂತ್ರಿಕ ಬದುಕು ಬೇಸರ ತರಿಸುವಂತಿತ್ತು. ಆದರೂ ಬದುಕುವುದು ಅನಿವಾರ್ಯವಾಗಿತ್ತು.

ಚಂದ್ರಣ್ಣ ಕುಳಿತಿದ್ದ ಜಗುಲಿಯ ಮೇಲೆ ಸರಿಯಾಗಿ ಬಿದ್ದ ಸೂರ್ಯರಶ್ಮಿಯ ಹಿತವಾದ ಬಿಸಿಲು. ಇದರ ಅನುಭವ ಬೇಸರವನ್ನು ಕೊಂಚ ಕಳೆಯಿತು.

ಲಕ್ಷ್ಮಿ ಕಾಫಿ ಕುಡಿದು ಮುಗಿಸಿದಳು. ಪಾರ್ವತಮ್ಮನನ್ನು ಕೇಳಿ, ಅವಲಕ್ಕಿಯನ್ನು ಕುಟ್ಟತೊಡಗಿದಳು. ಒಲೆಯ ಮೇಲೆ ಅಡಿಗೆಗೆ ಇಟ್ಟು ಪಾರ್ವತಿ ಹಜಾರದೊಳಗೆ ಬಂದಳು. ಪಾರ್ವತಿ ಲಕ್ಷ್ಮಿಯನ್ನು ಮಾತಾಡಿಸಿದಳು.

"ಲಕ್ಷ್ಮಿ, ನಿನ್ನ ನಾದಿನಿಗೆ ಗಂಡು ಗೊತ್ತಾಯ್ತೇನೆ?" - ಎಂದಳು.

"ಇಲ್ಲವ್ವ, ಮೊನ್ನೆ ಮಂಚಳ್ಳಿ ಕಡೀಂದ ಒಂದು ಗಂಡು ಬಂದಿತ್ತು. ನೋಡಾಕೇನೋ ಚಂದಾಗವ್ನೆ. ಆದರೆ ಅವರಮ್ಮ ತುಂಬಾ ಬಜಾರೀಂತ ತಿಳಿದು ಬೇಡಾಂತ ಯೋಳ್ಬಿಟ್ವಿ."

"ಹೋಗಲಿ ಬಿಡು ಲಕ್ಷ್ಮಿ. ನಿಮ್ಮ ಚೆನ್ನಿ ಚೆನ್ನಾಗಿದ್ದಾಳೆ ನೋಡೋಕೆ. ಯಾರಾದ್ರೂ ಒಳ್ಳೇವ್ರು ಬಂದು ಮದ್ವೆ ಆಗ್ತಾರೆ" - ಎಂದಳು.

ಲಕ್ಷ್ಮಿಗೆ ಪಾರ್ವತಿಯ ಹತ್ತಿರ ಒಂದು ಮಾತು, ಶಂಕರನ ಮದುವೆ ವಿಚಾರವಾಗಿ ಹೇಳಬೇಕೆನಿಸಿತು. ಆದರೆ ತುಂಬಾ ಸಂಕೋಚವಾಯಿತು. ತಾನು ಚಿಕ್ಕವಳು. ದೊಡ್ಡವರಿಗೆ ಸಲಹೆ ಕೊಟ್ಟರೆ ಏನಾಗುವುದೋ ಎಂದು ಹಿಂಜರಿದಳು. ರಂಗಿ, ಲಕ್ಷ್ಮಿ, ಪಾರ್ವತಿಯ ಸಂಸಾರದ ಬಗ್ಗೆ ಎಷ್ಟೋ ಸಲ ಮಾತಾಡಿಕೊಂಡಿದ್ದರು. ಪಾರ್ವತಿಯ ಮನೆಯ ಒಳಗು ಹೊರಗೆಲ್ಲ ಅವರಿಗೆ ತಿಳಿದಿತ್ತು. 'ಪಾರ್ವತಿ, ಚಂದ್ರಣ್ಣರು ಇನ್ನಷ್ಟು ಮುದಿಯಾದಾಗ ಕೊನೆಗೆ ಮನೆಯಲ್ಲಿ ಬೇಯಿಸಿ ಹಾಕಲು ಒಂದು ಹೆಣ್ಣಾಳಾದರೂ ಇರಲೇಬೇಕಿತ್ತು. ಪಾಪ, ಪಾರ್ವತಮ್ಮ, ತೀರಾ ಹುಷಾರಿಲ್ಲದಾಗ ಮಾತ್ರ ಮುದುಡಿಕೊಂಡು

ಮಲಗುತ್ತಿದ್ದರೇ ಹೊರತು, ಸಣ್ಣಪುಟ್ಟ ಬೇನೆಗಳಿಗೆಲ್ಲ ಗಮನಕೊಡದೆ ದುಡಿಯುತ್ತಿದ್ದಳು. ಆದರೆ ಇದೂ ತುಂಬಾ ದಿನ ನಡೆಯುವ ಹಾಗಿಲ್ಲ. ಶಂಕರನಿಗೆ ಮದುವೆ ಮಾಡಿ ಒಂದು ಹೆಣ್ಣು ಮನೆಗೆ ಬಂದರೆ ಮನೆ ವ್ಯವಸ್ಥೆ ಸರಿಹೋಗುತ್ತೆ ಅಲ್ಲದೆ ಮುದಿ ಜೀವಗಳಿಗೆ ನೆಮ್ಮದಿ ಎನಿಸುತ್ತೆ." ಎಂದು ಎಷ್ಟೋ ಸಲ ಅನಿಸಿತ್ತು ಅವರಿಗೆ ರಂಗಿ ಪುಟ್ಟನಲ್ಲಿ ಹೇಳಿದ್ದಳು – "ಪುಟ್ಟ ನೀನಾದ್ರೂ ಅಯ್ಯ, ಅವ್ವಾವ್ರಿಗೆ ಶಂಕರನಿಗೆ ಒಂದು ಮದ್ವಿನಾದರೂ ಮಾಡೋಕೆ ಹೇಳೋ" ಎಂದು ಆದರೆ ಯಾಕೋ ಪುಟ್ಟ ದೊಡ್ಡವರಲ್ಲಿ ಇಂಥಾ ವಿಷಯ ಪ್ರಸ್ತಾಪಿಸುವುದು ಉದ್ಧಟತನವಾಗುತ್ತೇನೋ ಎಂದುಕೊಂಡು ಸುಮ್ಮನಿದ್ದ. ರಂಗಿ ಅವಕಾಶ ಬಿದ್ದರೆ, ತಾನೇ ಪ್ರಸ್ತಾಪಿಸುವುದಾಗಿ ಹೇಳಿದ್ದಳು. ತಾವು ಮಾತನಾಡಿಕೊಂಡ ವಿಷಯವನ್ನೇ ಹೇಳಬೇಕೆಂದುಕೊಂಡಳು.

"ಅವ್ವ, ನಿಮಗೆ ಒಂದ್ಮಾತು ಹೇಳ್ಲಾ? ನೀವೇನೂ ಅಂದ್ಕೊಳ್ಳಾಕಿಲ್ಲ ಅಂದ್ರೆ – ಯೋಳ್ತೀನಿ" – ಎಂದಳು ಸಂಕೋಚದಿಂದ.

"ಹೇಳು ಲಕ್ಷ್ಮಿ, ಅದೇನು ಹೇಳ್ಬೇಕೂಂತ ಇದ್ದೀಯೋ" ಎಂದು ಪ್ರೋತ್ಸಾಹಿಸಿದಳು.

"ನಮ್ಮ ಅತ್ತಿ, ನನ್ನ ಪುಟ್ಟ ಇಬ್ಬರೂ ಯೋಳ್ತಿದ್ರವ್ವ, ನಮ್ಮ ಶಂಕರಪ್ಪಗೆ ಒಂದು ಎಣ್ಣು ನೋಡಿ ಮದ್ವಿ ಮಾಡಿದ್ರೆ, ನಿಮ್ಮ ಕಷ್ಟ ಕಮ್ಮಿ ಆಗ್ತಾತೈತೆ ಅಂತ. ಹೌದ್ರವ್ವ ಬೆಳಗಿಂದ ನೀವೆಷ್ಟು ಕಷ್ಟಪಡ್ತೀರಿ. ನಿಮ್ಮ ಕೈಲಿ ಆಗಾಕಿಲ್ಲಾಂದ್ರೂ ಬಲವಂತವಾಗಿ ಮಾಡ್ಲೇ ಬೇಕಾಗಿದೆ. ಶಂಕರಪ್ಪನೂ ಮದ್ವಿ ಮಾಡ್ಕಂಡ್ರೆ ಸರಿ ಹೋಯ್ತಾನೆ" ಎಂದಳು. ಪಾರ್ವತಿ ನಿಟ್ಟುಸಿರು ಬಿಟ್ಟಳು. ಲಕ್ಷ್ಮಿಗೆ ಆ ನಿಟ್ಟುಸಿರಿನ ಅರ್ಥ ಹೊಳೆಯಿತು. ಪಾರ್ವತಿಯಿಂದ ಬರಬಹುದಾದ ಉತ್ತರಕ್ಕೆ ಎದುರು ನೋಡಿದಳು.

"ನೀವು ಹೇಳೋದು ಸರಿ ಲಕ್ಷ್ಮಿ. ನಾನೂ ಅವ್ರಿಗೆ ಇದೇ ಮಾತ್ನೇ ಹೇಳ್ತಾ ಇದ್ದೀನಿ. ಆದರೆ ಅವರು ಅದನ್ನು ಕಿವಿ ಮೇಲೆ ಹಾಕ್ಕೊಂಡು ಸಂಬಂಧ ಹುಡುಕಬೇಕಲ್ಲ! ನಾನು ಹೆಣ್ಣು ಏನು ಮಾಡ್ಕೊಕಾಗುತ್ತೆ ಹೇಳು?" ಅಸಹಾಯಕತೆಯನ್ನು ವ್ಯಕ್ತಪಡಿಸಿದಳು.

"ಯಾಕ್ರವ್ವ ನಿಮಗೆ ನೆಂಟರಿಲ್ಲವೇನೂ? ನಿಮ್ಮ ಅತ್ತಿಗೇರೆಲ್ಲಾ ಇದ್ದಾರಲ್ಲ ಅವರಿಗೆ ಯಾಕೆ ಕಾಯಿದ ಬರೆದು ಇಚಾರಿಸಬಾರದು?"

"ಇದ್ದಾರೆ ಊರತುಂಬಾ ಬೇಕಾದರೂ ನೆಂಟರಿದ್ದಾರೆ ಆದರೆ ನಮ್ಮ ಅವಸರಕ್ಕೆ ಆಗಬೇಕಲ್ಲ?"

"ಅಂಗಾರ ಚಿಕ್ಕ ಅಯ್ಯನ ಮದ್ವೆ ಆಗಾಕಿಲ್ಲಾಂತೀರಾ?" ಸಂಶಯದಿಂದ ಕೇಳಿದಳು.

"ಕಾಲ ಬಂದಾಗ ಆದೀತು ಅಷ್ಟೇ" – ನಿರಾಶೆಯ ದನಿಯಲ್ಲಿ ಹೇಳಿದಳು. ತಟ್ಟನೆ ಒಲೆಯ ಮೇಲೆ ಎಸರಿಟ್ಟಿದ್ದು ನೆನಪಾಯಿತು. "ಲಕ್ಷ್ಮಿ ಅದೆಲ್ಲಾ ಕುಟ್ಟಿದ್ದು ಆಗಿದ್ದರೆ, ಸ್ವಲ್ಪ ಕೇರಿಬಿಟ್ಟು ಆ ಹಿತ್ತಾಳೆ ಪಾತ್ರೆ ಒಳಗೆ ತುಂಬಿಡು.... ಜೊತೆಗೆ

ನಿನಗೇನಾದರೂ ಸಾಧ್ಯವಾದರೆ ರಾಗಿ ಒಂದೆರಡು ಸೇರಿದೆ, ಬೀಸಿಡು ಲಕ್ಷ್ಮಿ." ಎಂದು ಹೇಳಿ ಅಡಿಗೆ ಮನೆಯತ್ತ ನಡೆದಳು.

ಲಕ್ಷ್ಮಿ ಕುಟ್ಟುವುದನ್ನು ನಿಲ್ಲಿಸಿ ಒನಕೆ ಪಕ್ಕಕ್ಕೆ ಇಟ್ಟಳು. ಒರಳಲ್ಲಿ ತುಂಬಿದ್ದ ಅವಲಕ್ಕಿಯನ್ನು ತೆಗೆದು ಮೊರಕ್ಕೆ ಹಾಕಿಕೊಂಡು ಕೇರಿ ಕೇರಿ ಪಕ್ಕದಲ್ಲಿ ರಾಶಿ ಹಾಕಿದಳು. ಎಲ್ಲಾ ಆದ ಮೇಲೆ ಎದ್ದು ಹೋಗಿ ಪಾತ್ರೆ ತಂದು ಅದರೊಳಗೆ ತುಂಬಿಸಿಟ್ಟಳು. ಚೊಕ್ಕವಾಗಿ ಗುಡಿಸಿ ಕಸ ತೆಗೆದು ಹಿತ್ತಿಲಿಗೆ ತೆಗೆದುಕೊಂಡು ಹೋದಳು.

ಹೊರಗಡೆ ಚಂದ್ರಣ್ಣ, ಪುಟ್ಟ ಮತ್ತೆ ಇನ್ಯಾರೋ ಒಂದಿಬ್ಬರು ಗಂಡಸರು ಮಾತಾಡುತ್ತಿದ್ದದ್ದು ಕೇಳಿಸಿತು. ಕಸ ಎಸೆದು ಬಂದ ಲಕ್ಷ್ಮೀಗೆ ಗಂಡನ ದನಿ ಕೇಳಿಸಿ ಕುತೂಹಲವಾಗಿ ಹೊರಗೆ ಇಣಿಕಿ ನೋಡಿದಳು. ಪುಟ್ಟ ಲಕ್ಷ್ಮಿಯ ಮುಖ ನೋಡಿದ. ಚಂದ್ರಣ್ಣ ಇನ್ನೂ ಅವರೊಂದಿಗೆ ಮಾತಾಡುತ್ತಿದ್ದ. ಆಮೇಲೆ ಬನ್ನಿ ಒಳಗೆ ಎಂದು ಕರೆದು ಜಗುಲಿಯಿಳಿದು ಒಳಗೆ ಬರಬೇಕೆಂದುಕೊಳ್ಳುವಷ್ಟರಲ್ಲಿ ಲಕ್ಷ್ಮಿ ಕಾಣಿಸಿದಳು. "ಹೋಗು ಲಕ್ಷ್ಮಿ ಅವ್ವಾವ್ರಿಗೆ ಯಾರೋ ನೆಂಟರು ಬಂದವ್ರೆ ಅಂತ ತಿಳಿಸು" ಎಂದು ಹೇಳಿದ. ಲಕ್ಷ್ಮಿ 'ಆಯ್ತು' ಎಂದು ಗೋಣು ಅಲ್ಲಾಡಿಸಿ ಒಳಗೆ ಸರಿದಳು. ಅಡಿಗೆ ಮನೆಯ ಹೊಸ್ತಿಲಲ್ಲಿ ನಿಂತು, "ಪಾರ್ವತಮ್ಮ, ಯಾರೋ ನೆಂಟರು ಬಂದವ್ರಂತೆ. ಅಯ್ಯ ಹೇಳಿದರು" ಎಂದು ಕೂಗಿ ಹೇಳಿದಳು. ಪಾರ್ವತಿ ಅನ್ನದ ತಪ್ಪಲೆಯಲ್ಲಿ ಸೌಟು ಹಾಕಿ ತಿರುವುತ್ತಿದ್ದಳು. ಲಕ್ಷ್ಮಿಯ ಮಾತು ಕೇಳಿ ಸೌಟು ತೆಗೆದು ಪಕ್ಕಕ್ಕೆ ಇಟ್ಟು ಹೊಗೆ ಗೂಡಾಗಿದ್ದ ಒಲೆಯನ್ನು ಊದಿ, ಅದು ಭಗ್ಗೆಂದು ಉರಿಯುತ್ತಲೇ ಎದ್ದು, ಸೀರೆಯ ಸೆರಗಿಗೆ ಕೈಯೊರಸಿಕೊಂಡು ಹಜಾರಕ್ಕೆ ಬಂದಳು.

ಬಂದ ಪಾರ್ವತಿಯನ್ನು ನೋಡಿದ ಕೂಡಲೇ ಆ ಇಬ್ಬರು ವ್ಯಕ್ತಿಗಳಲ್ಲಿ ಹಿರಿಯ ವ್ಯಕ್ತಿ 'ಚೆನ್ನಾಗಿದ್ದೀಯಾ ಪಾರ್ವತಿ?..... ನಿನ್ನನ್ನು ನೋಡಿ ತುಂಬಾ ವರ್ಷಗಳೇ ಆಗಿದ್ದವು..... ಬಹುಶಃ ನಿನಗೆ ನಮ್ಮ ಗುರುತೂ ಸಿಗಲಾರದೇನೋ? ನಾನು ನಾರಾಯಣಪ್ಪ. ನಿಮ್ಮ ತಾಯಿ ಕಡೆಯಿಂದ ಸಂಬಂಧ.

ಒಂದು ಲೆಕ್ಕದಲ್ಲಿ ನಿನಗೆ ಮಾವ ಆಗಬೇಕು. ನಾನು ಮೊದಲು ನೋಡಿದಾಗ ಇಷ್ಟುದ್ದ ಹುಡುಗಿಯಾಗಿದ್ದೆ. ಆಮೇಲೆ ನಿನ್ನನ್ನು, ನಿನ್ನ ಮದುವೇಲೇ ನೋಡಿದ್ದು. ಮತ್ತೆ ಇಲ್ಲವೇ ಇಲ್ಲ. ನಿಮ್ಮೂರಿನ ಕಡೆ ಹೋದಾಗ 'ನೀತೂ'ನ ವಿಚಾರಿಸ್ತಿದ್ದೆ, ನಿನ್ನ ಬಗ್ಗೆ..... ಈ ಮಧ್ಯೆ ಅವಳೂ ತೀರ್ಕೊಂಡ್ಲಂತೆ? ಭಾಳ ಬೇಜಾರಾಯ್ತು." ಎಂದು ದುಃಖಪಟ್ಟ, ಪಾರ್ವತಿಗೆ ಮಸಕು ಮಸಕು ನೆನಪಿದ್ದದ್ದು ಸ್ಪಷ್ಟವಾಯಿತು.

"ಗೊತ್ತಾಯ್ತು. ನೀವು ನಾರಾಯಣಮಾವ ಅಲ್ಲವೇ?" ಎಂದು ಕೇಳಿದಳು.

"ಹೂಂ! ಪರವಾಗಿಲ್ಲವೇ ಗುರುತು ಹಿಡಿದುಬಿಟ್ಟೆ!" ಅಚ್ಚರಿಯಿಂದ ಹೇಳಿದರು.

"ಹೌದು, ನೀವೆಲ್ಲಾ ಅಷ್ಟಾಗಿ ಬರುತ್ತಲೇ ಇರಲಿಲ್ಲ. ಹೇಗೆ ತಾನೇ ನೆನಪಿದ್ದೀತು? ಅಮ್ಮ ಇದ್ದಾಗಲೇ ಅಪರೂಪ. ಇನ್ನು ಅಮ್ಮ ಹೋದ ಮೇಲೆ ಹೇಳಲೇ ಬೇಕಾಗಿಲ್ಲ? ಅಮ್ಮ ಹೋಗಿ ಸುಮಾರು ವರ್ಷಗಳೇ ಆಗಿಹೋದವು. ಅಮ್ಮ ಸತ್ತಾಗಿಂದ ಅಪ್ಪನ ಸುಳಿವೇ ಇಲ್ಲ. ಎಷ್ಟು ಹೇಳಿದರೂ ನಮ್ಮ ಜೊತೆ ಬರಲೇ ಇಲ್ಲ ಅಪ್ಪ. ನಾನೂ ಆ ಕಡೆ ಹೋಗಲಿಲ್ಲ..... ಅದ್ಸರಿ, ಇಷ್ಟು ವರ್ಷಗಳ ಮೇಲೆ ಇದೇನು ಮಾವ ಈ ಹಳ್ಳಿ ಕೊಂಪೆ ಕಡೆ ಬಂದಿದ್ದೀರಿ?"

"ನಿಂಗೊತ್ತಿಲ್ಲ ನಮ್ಮ ಅತ್ತೆ ತಮ್ಮನ ಮಗನಿಗೆ ಈ ಊರಿನ ಸಂಬಂಧವೇ ಆಗಿರುವುದು. ಜಮೀಂದಾರ ಕಿಟ್ಟಪ್ಪನ ಮಗಳನ್ನು ತಂದುಕೊಂಡಿದ್ದಾರೆ. ಈತನೇ ನಮ್ಮ ಅತ್ತೆಯ ತಮ್ಮ. ಸೊಸೇನ ಕರೆದೊಯ್ಯ ಬೇಕೂಂತ ಬಂದ್ವಿ, ಮಾತಿಗೆ ಮಾತು ಬಂದು ನಿಮ್ಮ ವಿಚಾರ ಹೇಳಿದರು. ಹೆಸರು, ಸಂಬಂಧ ಹೇಳಿದ ಮೇಲೆ ನಮ್ಮ ಪಾರ್ವತೀನೇ ಇರಬೇಕೆನಿಸಿ. ಹುಡುಕ್ಕೊಂಡು ಬರ್ತಿದ್ವಿ, ಎದುರಿಗೆ ಸಿಕ್ಕು ಕರ್‍ಕೊಂಡು ಬಂದ." ಎಂದು ಕತೆ ಹೇಳಿ ಮುಗಿಸಿದ.

"ಬಹಳ ಸಂತೋಷವಾಯ್ತು, ಮಾವ. ಮನೇಲಿ ಅತ್ತೆ ಮಕ್ಕಳು ಹೇಗಿದ್ದಾರೆ!"

ಎಲ್ಲಾ ಚೆನ್ನಾಗಿದ್ದಾರೆ. ನಿನ್ನ ವಿಷಯ ಹೇಳ್ಲೇ ಇಲ್ವಲ್ಲ. ಎಷ್ಟು ಜನ ಮಕ್ಕಳು! ಎಲ್ಲಿದ್ದಾರೆ ಅವರೆಲ್ಲಾ? ಎಂದು ಪ್ರಶ್ನಿಸಿದ.

ಇವರ ಮಾತುಕತೆಯ ನಡುವೆ ತಾನಿರುವುದು ಸರಿಯಲ್ಲ, ಎಂದು ಲಕ್ಷ್ಮಿ ಪಾರ್ವತಿಗೆ ಆಮೇಲೆ ಬರುವುದಾಗಿ ಹೇಳಿ ಹೊರಟಳು. ಪಾರ್ವತಿ ನಾರಾಯಣಪ್ಪನ ಪ್ರಶ್ನೆಗೆ, ನಕ್ಕು,

"ನನಗೇನು ಮಾವ, ದೇವರೆಲ್ಲಾ ಚೆನ್ನಾಗಿ ಕೊಟ್ಟಿದ್ದಾನೆ. ಇಬ್ಬರು ಹೆಣ್ಣು ಮಕ್ಕಳು, ಒಬ್ಬ ಮಗ. ದೊಡ್ಡಮಗ ಚಿಕ್ಕವನಿರುವಾಗಲೇ ತೀರಿಕೊಂಡ. ಇಬ್ಬರು ಹೆಣ್ಣು ಮಕ್ಕಳಿಗೂ ಮದುವೆಯಾಗಿದೆ" ಎಂದಳು.

"ಅಳಿಯಂದಿರು ಎಲ್ಲಿಯವರು ಏನ್ಮಾಡಿದ್ದಾರೆ?"

"ಇಬ್ಬರೂ ಡಾಕ್ಟರುಗಳೆ. ಚಿಕ್ಕ ಮಗಳ ಗಂಡ ನಮ್ಮ ಅತ್ತಿಗೆ ಮಗನೆ. ಮಗಳು ಅಳಿಯ ಇಬ್ಬರೂ ವಿದೇಶದಲ್ಲಿದ್ದಾರೆ. ದೊಡ್ಡವಳು ಬೆಂಗಳೂರಿನಲ್ಲಿದ್ದಾಳೆ. ಆ ಅಳಿಯನಿಗೆ ಅಲ್ಲಿನ ನರ್ಸಿಂಗ್ ಹೋಂನಲ್ಲೇ ಕೆಲಸ. ಇನ್ನು ಇರೋದು ಒಬ್ಬನೇ ಮಗ."

"ಅವನಿಗಿನ್ನೂ ಮದುವೆ ಇಲ್ಲವೇನು?"

"ಇಲ್ಲ ಮಾವ ಯಾವುದಾದರೂ ಒಳ್ಳೇ ಸಂಬಂಧ ಬಂದರೆ ಮಾಡೋಣಾಂತ. ಪಾರ್ವತಿ ಈ ಅವಕಾಶವನ್ನು ಉಪಯೋಗಿಸಿಕೊಂಡು ಹೇಳಿದಳು. ಹಿರಿಯನೇ ಮಾತನಾಡುವ ಜವಾಬ್ದಾರಿ ಹೊತ್ತಂತೆ ಕಾಣಿಸಿತು. ಚಂದ್ರಣ್ಣ, ಕಿರಿಯ ನೆಂಟ

ಪರಸ್ಪರ ಲೋಕಾಭಿರಾಮವಾಗಿ ಮಾತಾಡುತ್ತಿದ್ದರು. ಚಂದ್ರಣ್ಣನಿಗೆ ಹೆಂಡತಿಯ ಮಾತು ಮುಗಿಯುವಂತೆ ಕಾಣಲಿಲ್ಲ. ಅದಕ್ಕೆಂದೇ,

"ಏನು ಪಾರ್ವತಿ, ಬಂದವರಿಗೆ ಕಾಫಿ, ತಿಂಡಿ ಏನೂ ಕೊಡದೆ ಮಾತಲ್ಲೇ ಕೂರಿಸಿಬಿಟ್ಟೆಯಲ್ಲ."

ಚಂದ್ರಣ್ಣ ಹೇಳಿದ್ದಕ್ಕೆ, ಗಕ್ಕೆಂದು, ಅನ್ನ ಬೇಯುತ್ತಿದ್ದುದರ ನೆನಪಾಯಿತು. "ಬಂದೆ ಮಾವ. ಒಂದು ನಿಮಿಷ" ಎಂದು ಆತುರವಾಗಿ ನಡೆದಳು. ಹೋಗುವಷ್ಟರಲ್ಲಿ ಅನ್ನ ಕೊತ ಕೊತ ಕುದಿಯುತ್ತಿತ್ತು. ಸರಸರನೆ ಒಲೆಯ ಮೇಲಿಂದ ಇಳಿಸಿದಳು. ಒಂದು ತಟ್ಟೆ ಮುಚ್ಚಿ ಪಾತ್ರೆಗೆ ಬಗ್ಗಿಸಿದಳು. ಕಾಫಿಗೆ ಎಸರಿಟ್ಟು ಪುಡಿಯ ಡಬ್ಬಿಯನ್ನು ತೆಗೆಯಬೇಕೆಂದು ಅಲಮಾರಿನ ಬಾಗಿಲು ತೆರೆದಳು. 'ಅಮ್ಮ, ಅಮ್ಮ' ಎಂದು ಕರೆಯುತ್ತಾ ಶಂಕರ ಅಡಿಗೆ ಮನೆ ಬಾಗಿಲಲ್ಲಿ ನಿಂತ. ಬಂದು ಚೀಲದಲ್ಲಿ ತಂದಿದ್ದ ಅಲಸಂದಿ ಕಾಯಿಗಳನ್ನು ನೆಲದ ಮೇಲೆ ಸುರಿದ. ಕೈಲಿದ್ದ ಮಲ್ಲಿಗೆ ಹೂಗೊಂಚಲನ್ನು ತೆಗೆದಿರಿಸಿದ. ಪಾರ್ವತಿ ರೆಪ್ಪೆ ಮಿಟುಕಿಸದೆ ನೋಡುತ್ತಿದ್ದಳು. "ಇದೆಲ್ಲಾ ಯಾರು ಕೊಟ್ಟರೋ ಶಂಕರ?" ಎಂದು ಕೇಳಿದಳು.

"ಯಾರು ಯಾಕೆ ಕೊಡಬೇಕು? ಬೆಳಿಗ್ಗೆ ಸುತ್ತಾಡಬೇಕೆಂದು ಗದ್ದೆಯ ಕಡೆ ಹೋದೆ. ದಾರಿಯಲ್ಲಿ ಇವು ಕಣ್ಣಿಗೆ ಬಿದ್ದವು. ಕಿತ್ತು ತಂದೆ. ಲಚ್ಚನ ಕೈಯಿಂದ ಚೀಲ ತರಿಸಿ ತುಂಬಿಕೊಂಡೆ" ಎಂದ.

ಮಗ ಇಷ್ಟು ಮಾತಾಡಿದ್ದು ತಾತನಗೆ ಮಾತು ಬಂದಂತೆನಿಸಿತು. ಮಗನ ಜೊತೆ ಮಾತಾಡುತ್ತಿದ್ದಂತೆ ಕಾಫಿ ಸಿದ್ಧ ಮಾಡಿದಳು. ಎರಡು ಲೋಟಕ್ಕೆ ಬಗ್ಗಿಸಿ, ಶಂಕರನ ಕೈಲಿ ಕೊಡುತ್ತಾ,

"ಹೋಗು ಶಂಕರ ಮನೆಗೆ ಬಂದಿರೋ ಆ ಇಬ್ಬರಿಗೂ ಕಾಫಿ ಕೊಟ್ಟು ಬಾ" ಎಂದಳು.

ಎಂದೂ ಕೆಲಸಮಾಡಿ ಅಭ್ಯಾಸವಿಲ್ಲದ ಶಂಕರ, "ಇಲ್ಲಮ್ಮ, ನಾನು ಹೋಗೋಲ್ಲ. ನಂಗೆ ಯಾರ್ನೂ ನೋಡೋಕೆ ಇಷ್ಟವಿಲ್ಲ" ಎಂದುಬಿಟ್ಟ, ಕಡ್ಡಿ ಮುರಿದಂತೆ.

ಇನ್ನು ಅವನ ಜೊತೆಗೆ ವಾದಕ್ಕೆ ನಿಂತರೆ ಪ್ರಯೋಜನವಿಲ್ಲವೆಂದು ತಿಳಿದು ತಾನೇ ಸುಮ್ಮನೆ ತೆಗೆದುಕೊಂಡು ಹೋಗಿ ಕೊಟ್ಟು ಬಂದಳು.

"ಅಲ್ಲ ಶಂಕರ ಇಷ್ಟು ವಯಸ್ಸಾಯಿತು ನಿನಗೆ, ನಾಲ್ಕು ಜನರ ಜೊತೆ ಬೆರೆತು ಮಾತಾಡಿ ಚಟುವಟಿಕೆಯಿಂದ ಇದ್ದರೆ ತಾನೇ ನಾಳೆ ಯಾರಾದರೂ ಹೆಣ್ಣು ಗಿಣ್ಣು ಕೊಟ್ಟಾರು?" ಬುದ್ಧಿವಾದ ಹೇಳುವಂತೆ ಮಾತಾಡಿದಳು.

"ಹೆಣ್ಣು – ಗಿಣ್ಣು ಮಾತೇಕೆ? ನನಗೆ ಈ ಜನದ ಜೊತೆಗೆ ಕೆಲಸವಿಲ್ಲ ನನ್ನವರು ಬೇರೆಯೇ ಆಗಿದ್ದಾರೆ. ಅವರು ಬಂದಾಗ ಅವರನ್ನು ಕಂಡು ಮಾತಾಡ್ತೀನಿ." ನಿರ್ದಾಕ್ಷಿಣ್ಯವಾಗಿ ಹೇಳಿದ.

"ಹಾಗೆಲ್ಲ ಹೇಳಬೇಡ. ಬಂದಿರುವವರು ದೂರದಿಂದ ನನಗೆ ಮಾವ ಆಗಬೇಕು ಅಂದ್ರೆ – ನಿನಗೆ ವರಸೆಯಲ್ಲಿ ತಾತ ತಿಳೀತ? ದೊಡ್ಡವರು. ಹೋಗಿ ಮಾತನಾಡಿಸಿ ಬಾ" ಎಂದಳು.

"ಅದೆಲ್ಲಾ ಸಾಧ್ಯವಾಗದು. ದಯವಿಟ್ಟು ನನ್ನನ್ನು ಪ್ರದರ್ಶಿಸಬೇಡಮ್ಮ" ಎಂದು ಅಂಗಲಾಚಿದ.

"ಹೋಗಲಿ ಬಿಡು ಶಂಕರ. ನಿನಗಿಷ್ಟವಿಲ್ಲದ್ದನ್ನ ನಾನು ಮಾಡೊಲ್ಲ" ಸೋತು ಹೇಳಿದಳು ಪಾರ್ವತಿ. ಆದರೂ ಅವಳ ಮನಸ್ಸು ಅಲ್ಲಿಗೇ ಸುಮ್ಮನಾಗಲು ಒಪ್ಪಲಿಲ್ಲ. ಶಂಕರನಲ್ಲಿ ಸ್ವಲ್ಪವಾದರೂ ತಮ್ಮ ಅಂತರಂಗವನ್ನು ನಿವೇದಿಸಿಕೊಳ್ಳೋಣವೆನಿಸಿತು. ಅದಕ್ಕೆಂದೇ ಅತ್ಯಂತ ದೈನ್ಯವಾಗಿ ಮಾತು ಮುಂದುವರೆಸಿದಳು.

"ಶಂಕರ, ನಮ್ಮ ಯಾವೊಂದು ಮಾತನ್ನೂ ನಡೆಸಿಕೊಡಲಿಲ್ಲವೆಂದು ನಿನ್ನ ಮೇಲೆ ಸಿಟ್ಟಾದುದಿಲ್ಲ. ಆದರೆ ನಮಗೆಲ್ಲಾ ಇರುವವನು ನೀನೊಬ್ಬನೇ. ನೀನೇ ನಮ್ಮ ಬದುಕಿನ ಚುಕ್ಕಾಣಿ. ನಿನ್ನ ಸಂತೋಷದಲ್ಲಿ ನಮ್ಮ ಸಂತೋಷವನ್ನು ಕಾಣುವ ಹಂಬಲ ನಮಗಿದೆ. ನೀನೂ ಎಲ್ಲರಂತೆ ಒಬ್ಬ ಸಂಸಾರವಂತನಾದರೆ ನಮ್ಮ ಈ ಬರಡು ಬಾಳಿನಲ್ಲಿ ಕೊನೆಗಾಲದಲ್ಲಿಯಾದರೂ ಗೆಲುವಿನ ಬುಗ್ಗೆಯೊಂದು ಕಾಣಸಿಗಬಹುದೆಂಬ ಆಸೆ ನಮ್ಮದು. ನಿನಗೆ ಇದೆಲ್ಲ ನಮ್ಮ ಸ್ವಾರ್ಥವೆಂದೇ ಅನ್ನಿಸಬಹುದು. ಆದರೆ ಆ ಸ್ವಾರ್ಥದ ಮೂಲದಲ್ಲಿ ಮಕ್ಕಳ ಭವಿಷ್ಯದ ಹಿತ ಚಿಂತನೆಯ ಬೇರುಗಳು ಅಡಗಿವೆಯೆನ್ನುವುದನ್ನು ನೀನು ಅರ್ಥಮಾಡಿಕೊಳ್ಳಬೇಕು. ಅದಕ್ಕಾಗಿ ನಿನ್ನನ್ನು ನಾನು, ನಿನ್ನ ತಾಯಿ, ಒಂದು ಮಾತನ್ನು ನಡೆಸಿಕೊಡುವಂತೆ ಯಾಚಿಸುತ್ತಿದ್ದೇನೆ. ಅದನ್ನು ನಡೆಸಿಕೊಡಲಾರೆಯಾ ಶಂಕರಾ?" ಎಂದು ಅವನ ಕೈಹಿಡಿದು ಬೇಡುವುದಕ್ಕೆ ಹೊರಡುವಷ್ಟರಲ್ಲಿ ಚಂದ್ರಣ್ಣ, ಪಾರ್ವತಿಯನ್ನು ಕೂಗಿ ಕರೆದ. ಪಾರ್ವತಿ ಕೂಡಲೇ ಅಲ್ಲಿಂದ ಧಾವಿಸಿ ನಡೆದಳು. ಅಲ್ಲಿಯೇ ನಿಂತಿದ್ದ ಶಂಕರ ಅಡಿಗೆಯ ಮನೆಯ ತೊಲೆಗಳನ್ನೇ ನೋಡತೊಡಗಿದ.

"ನೋಡು ಪಾರ್ವತಿ, ನಮ್ಮ ಶಂಕರನಿಗೆ ಯಾವುದೋ ಸಂಬಂಧ ಇದೆ ಅಂತ ನಿಮ್ಮ ಮಾವ ಹೇಳ್ತಿದ್ದಾರೆ" ಎಂದು ಪೀಠಿಕೆ ಹಾಕಿದ.

ಉಕ್ಕಿ ಬರುತ್ತಿದ್ದ ಸಂತೋಷವನ್ನು ತಡೆಯಲಾಗದೆ ಕೇಳಿದಳು – "ನಿಜವಾಗಿಯೂ, ಹೌದಾ ಮಾವ?!"

"ಹೌದು ಪಾರ್ವತಿ. ನನ್ನ ಸ್ನೇಹಿತ ಮತ್ತು ದೂರದ ನೆಂಟನೊಬ್ಬನಿದ್ದಾನೆ. ಅವನಿಗೆ ನಾಲ್ಕು ಜನ ಹೆಣ್ಮಕ್ಕಳು. ಅವರಲ್ಲಿ ಮೂರು ಹೆಣ್ಮಕ್ಕಳಿಗೆ ಮದುವೆ ಆಗಿದೆ. ಉಳಿದಿರುವವಳು ಕೊನೆಯವಳೊಬ್ಬಳೇ. 'ನಾಗರತ್ನ' ಅಂತ ಹೆಸರು. ತುಂಬಾ ಚೂಟಿ ಹುಡುಗಿ. ಆ ಜಮೀನು ಬಿಟ್ಟರೆ ಬೇರೇನೂ ಆಸ್ತಿಯಿಲ್ಲ. ಇಬ್ಬರು ಚಿಕ್ಕ ಚಿಕ್ಕ ಗಂಡು ಮಕ್ಕಳಿದ್ದಾರೆ. ಮಗಳಿಗೆ ಮದುವೆ ಮಾಡಬೇಕೂಂತ ವರನ್ನ ಹುಡುಕ್ತಿದ್ದಾರೆ. ಹೆಚ್ಚಾಗೇನೂ ಕೊಡದಿದ್ದರೂ ಸರಿ ಮದುವೇನಾ ಚೆನ್ನಾಗಿ ಮಾಡಿಕೊಡ್ತಾರೆ ಇದ್ದುದರಲ್ಲಿ. ಅವನಿಗೇನು? – ಹುಡುಗ ಚೆನ್ನಾಗಿದ್ದು, ಉಣ್ಣೋಕೆ, ಉಡೋಕೆ ತೊಂದರೆಯಿಲ್ಲದಿರುವ ಮನೆಯಾದರೆ ಸಾಕು...... ನೋಡು ಯೋಚ್ನೆ ಮಾಡು. ಇಷ್ಟವಾದರೆ ನಾನು ಅವರ ಹತ್ತಿರ ಮಾತಾಡ್ತೇನೆ. ..... ಏನು ಚಂದ್ರಣ್ಣ. ಸರಿ ತಾನೇ?" ಎಂದು ಚಂದ್ರಣ್ಣನನ್ನೂ ಕೇಳಿದರು. ಪಾರ್ವತಿ ಚಂದ್ರಣ್ಣನ ಮುಖ ನೋಡಿದಳು. ಚಂದ್ರಣ್ಣ, "ಏನು ಹೇಳೋದು ಪಾರ್ವತಿ?" ಅಂತ ಪ್ರತಿಯಾಗಿ, ಪಾರ್ವತಿಯನ್ನೇ ಕೇಳಿಬಿಟ್ಟ.

ಪಾರ್ವತಿಗೆ ತಟ್ಟನೆ ಏನುತ್ತರ ಕೊಡಬೇಕೆಂದು ಹೊಳೆಯಲಿಲ್ಲ. ಅದಕ್ಕೆಂದೇ "ಮಾವ, ಯಾವುದಕ್ಕೂ ನನ್ನ ಮಗನನ್ನ ಒಂದು ಮಾತು ಕೇಳಿ ಹೇಳ್ತೇನೆ" ಎಂದು ತಪ್ಪಿಸಿಕೊಂಡಳು. ಆದರೆ ಚಂದ್ರಣ್ಣ ಪಾರ್ವತಿಯ ಆ ಮಾತಿಗೆ –

"ಅವನನ್ನೇನು ಕೇಳುವುದು? ಅಪ್ಪ, ಅಮ್ಮ ಹೇಳೋದು ಮುಖ್ಯ. ಅವರು ಒಪ್ಪಿದರೆ ಅವನನ್ನು ಕೇಳಬೇಕಾದ ಅವಶ್ಯಕತೆಯಿಲ್ಲ" ನಿಷ್ಠುರವಾಗಿಯೇ ನುಡಿದ.

"ಅದಲ್ಲಾಂದ್ರೆ. ಮದುವೆಯಾಗುವವನು ಅವನಾಗಿರುವಾಗ, ಅವನ ಇಷ್ಟಾನಿಷ್ಟಗಳನ್ನು ತಿಳಿಯುವುದು ಬೇಡವೇ?" ಎಂದು ಮಗನ ಪ್ರತಿ ವಾದಿಸಿದಳು.

"ಇಷ್ಟವೂ ಇಲ್ಲ ಅನಿಷ್ಟವೂ ಇಲ್ಲ. ನೀವು ಅವಳ ಮಾತು ಕೇಳಬೇಡಿ. ನಿಮ್ಮ ಪಾಡಿಗೆ ನೀವು ಆ ಹುಡುಗಿಯ ತಂದೆಯಲ್ಲಿ ವಿಚಾರಿಸಿ ಹೇಳಿ. ಒಟ್ಟಿನಲ್ಲಿ ಸಂಪ್ರದಾಯ, ಹುಡುಗಿ ಒಳ್ಳೆಯದಿದ್ದರೆ ಮುಗೀತು, ಯಾರದೂ ಏನೂ ಮಾತಿಲ್ಲ" ಎಂದು ಖಚಿತವಾಗಿ ನುಡಿದ.

"ಪಾರ್ವತಿ, ಚಂದ್ರಣ್ಣ ಹೇಳೋದೂ ಸರೀನೇ. ಹುಡುಗಿಯನ್ನು ನೋಡಿ ಮಾತಾಡೋಣ. ಆಮೇಲೆ ಬೇಕಾದರೆ ಇಷ್ಟವಿದ್ದರೆ ಮುಂದುವರೆಯೋಣ." ಎಂದು ನಾರಾಯಣಪ್ಪ ಚಂದ್ರಣ್ಣನ ಮಾತನ್ನು ಅನುಮೋದಿಸಿದ.

"ಹೌದು. ಮಾವ ಹೇಳಿದ ಹಾಗೆ ಮಾಡಬಹುದು. ಇಷ್ಟವಾದರೆ ಒಪ್ಪುವುದು ಇಲ್ಲವಾದರೆ ಬಿಟ್ಟುಬಿಡೋದು" ಎಂದು ಕಿರಿಯ ಹೇಳಿದ.

ತಾಯಿಗಾಗಿ ಕಾದು, ತುಂಬಾ ಹೊತ್ತಾದರೂ ಬರದಿದ್ದುದ್ದಕ್ಕಾಗಿ ಶಂಕರ ಹಜಾರವನ್ನು ಹಾದು ಕೋಣೆಯತ್ತ ನಡೆದ. ಚಂದ್ರಣ್ಣನ ಹದ್ದುಗಣ್ಣಿಗೆ ಶಂಕರ ಬಿದ್ದ.

"ಬಾ ಇಲ್ಲಿ ಶಂಕರ." ಆಜ್ಞೆ ಮಾಡುವ ದನಿಯಲ್ಲಿ ಹೇಳಿದ.

ಶಂಕರ ಬಂದು ಅಪರಾಧಿಯಂತೆ ತಲೆಬಾಗಿ ನಿಂತ. ಚಂದ್ರಣ್ಣ ಅವರಿಗೆ ಇವನನ್ನು ತೋರಿಸುತ್ತಾ, "ಇವನೇ ನನ್ನ ಏಕೈಕ ಪುತ್ರ, ಸ್ವರ್ಗ ಕಾಣಿಸುವವನು" ಎಂದು ಗಹಗಹಿಸಿ ನಕ್ಕು ಹೇಳಿದ. ಚಂದ್ರಣ್ಣನ ನಗು ಶಂಕರನಿಗೆ ಮುಳ್ಳಿನ ಇರಿತದಂತೆನಿಸಿತು. ಅಲ್ಲದೆ ಅವನಿಗೆ ಇದರಿಂದ ತೀರಾ ಕಸಿವಿಸಿ ಆಯಿತು. ತಾನೊಂದು ಪ್ರದರ್ಶನದ ವಸ್ತುವಿನಂತೆ ನಿಂತಿರುವುದು ಅಸಹ್ಯವೆನಿಸಿತು. "ನಾನು ಹೋಗ್ತೀನಪ್ಪ" ಎಂದು ಹೇಳುತ್ತಾ ಹೊಸಬರುತ್ತ ನೋಡದೆಯೇ ಹೊರಟುಹೋದ. ಬಂದವರು ಮಗನ ರೀತಿಗೆ ಏನೆಂದುಕೊಂಡಾರೋ ಎಂಬ ಭೀತಿ ಪಾರ್ವತಿಯ ಮನಸ್ಸನ್ನು ಚುಚ್ಚಿತು.

"ಅವನಿಗೆ ತುಂಬಾ ಸಂಕೋಚ ಮಾವ. ಯಾರನ್ನೂ ಮಾತಾಡೊಲ್ಲ" ಎಂದು ಮಗನನ್ನು ವಹಿಸಿಕೊಂಡು ಮಾತಾಡಿಸಿದಳು.

"ಪರವಾಗಿಲ್ಲ ಬಿಡು. ಈಗಿನ ಕಾಲದ ಹುಡುಗರು. ಅವರ ರೀತೀನೇ ನಮಗೆ ಅರ್ಥವಾಗೋದಿಲ್ಲ" ಎಂದು ಲೋಕಾರೂಢಿಯಾಗಿ ಹೇಳಿದ.

"ಸದ್ಯ ನೀನು ಹೀಗೆ ತಿಳಿದ್ಕೊಂಡೆಯಲ್ಲ. ಬೇರೆಯವರಾದರೆ ಏನೆಲ್ಲ ಮಾತಾಡ್ತಾರೆ. ಇಷ್ಟ ಬಂದ ಹಾಗೆ ಆಡ್ಕೋತಾರೆ." ಎಂದಳು.

ಕಿರಿಯವ, ನಾರಾಯಣಪ್ಪ (ಹಿರಿಯ)ನಿಗೆ ಹೋಗೋಣವೆಂದು ಎಚ್ಚರಿಸಿದ. ನಾರಾಯಣಪ್ಪನಿಗೆ ಮಾತಿನಲ್ಲಿ ಹೊತ್ತು ಹೋದದ್ದೇ ತಿಳಿಯುತ್ತಿರಲಿಲ್ಲ. ಈತ ಎಚ್ಚರಿಸಿದ ಮೇಲೆ, ಗಂಟೆ ನೋಡಿಕೊಂಡು, "ಹೌದು, ತುಂಬಾ ಹೊತ್ತಾಯ್ತು ಇನ್ನು ಹೋಗೋಣ" ಎಂದು ಒಪ್ಪಿಕೊಂಡ.

ಪಾರ್ವತಿ ಇವರಿಬ್ಬರೂ ಹೋಗುವ ಚಡಪಡಿಕೆ ಇರುವುದನ್ನು ಗಮನಿಸಿ "ಊಟಕ್ಕಿದ್ದು ಹೋಗಿ ಮಾವ. ಎಷ್ಟೋ ವರುಷಗಳ ಮೇಲೆ ಅಪರೂಪಕ್ಕೆ ಬಂದಿದ್ದೀರಿ" ಎಂದು ತುಂಬಾ ಒತ್ತಾಯಿಸಿದಳು.

"ಇಲ್ಲಮ್ಮ, ಇನ್ನೊಮ್ಮೆ ಬಂದಾಗ ಖಂಡಿತ ನಿಮ್ಮಲ್ಲೇ ಉಳೀತೇನೆ." ಎಂದ.

"ಏನು ಬರ್ತೀರೋ ಏನೋ. ಇಲ್ಲೀವರೆಗೆ ಬಂದ ಹಾಗೆ ತಾನೇ?" ಆಕ್ಷೇಪಿಸಿ ಕೇಳಿದಳು.

"ಅದ್ಯಾಕೆ ಹ್ಯಾಗೆ ಹೇಳ್ತಿ, ಪಾರ್ವತಿ? ಇನ್ನು ನಿನ್ನ ಮಗನ ಮದುವೆಗೇ ಬರಲೇಬೇಕಲ್ಲ?... ಎರಡೂ ಕಡೆ ಸಂಬಂಧ. ಇದು ನಿಶ್ಚಯವಾದರೆ ನಮಗೆ ಕೇಳಲೇಬೇಕಲ್ಲ? ಬೀಗರಂತೆ ಉಪಚಾರ ಮಾಡಿಸಿಕೊಳ್ಳಬಹುದು!" ಎಂದು ನಕ್ಕ.

ಚಂದ್ರಣ್ಣ ಪಾರ್ವತಿಯರು ಇವರನ್ನು ಬೀಳ್ಕೊಟ್ಟರು. ಚಂದ್ರಣ್ಣ ಆ ಸಂಬಂಧದ ಬಗ್ಗೆ ವಿಚಾರಿಸುವಂತೆ ಮತ್ತೊಮ್ಮೆ ಎಚ್ಚರಿಸಿದ. ಪಾರ್ವತಿಗೆ ಒಂದು ಕಡೆ ಸಂಭ್ರಮ ಮತ್ತೊಂದು ಕಡೆ ವಿಭ್ರಮ! ಗಂಡ ತಾನಾಗಿ ಇಷ್ಟೊಂದು ಆಸಕ್ತಿ ತೋರಿಸುತ್ತಿರುವುದು ನಂಬಲಾಗದ ನಿಜವಾಗಿತ್ತು!

ಚಂದ್ರಣ್ಣನ ಮನಸ್ಸಿನಲ್ಲಿ ಏನಿರುವುದೋ ಯಾರಿಗೂ ಹೇಳಲಾಗುವುದಿಲ್ಲ ಎಂದುಕೊಂಡಿತು ಪಾರ್ವತಿಯ ಮನಸ್ಸು.

* * *

ಶಂಕರನಿಗೆ ದಿನದಿನಕ್ಕೆ ತಲೆ ಬಿಸಿಯೇರುತ್ತಿತ್ತು. ಮನೆ ಅಸಹ್ಯವೆನಿಸುತ್ತಿತ್ತು. ಬಾನು ಬಯಲುಗಳ ಸಾಹಚರ್ಯವನ್ನೇ ಬಯಸಿ ಅರಸುತ್ತಿದ್ದ. ಮನೆಯಲ್ಲಿ ತನ್ನೊಂದಿಗೆ ಕಾದಾಡುವ ಅಕ್ಕ ತಂಗಿಯರಾಗಲಿ; ಅಣ್ಣ ತಮ್ಮಂದಿರಾಗಲೀ ಇರಲಿಲ್ಲ. ಆದರೂ ಮನೆ ಅವನಿಗೆ ಸಂಕೋಲೆಯ ನೆನಪನ್ನು ತರುತ್ತಿತ್ತು.

ಗೊತ್ತು ಗುರಿಯಿಲ್ಲದೆ ಬೆಳಗಿನಿಂದ ಸಂಜೆವರೆಗೆ ಸುತ್ತಿ ಸುತ್ತಿ ಬಳಲಿ ಬರುವಂತಾಗುತ್ತಿದ್ದರೂ, ಅಲೆದಾಟವನ್ನು ಬಿಡಲಿಲ್ಲ. ಎದೆ, ಮನಸ್ಸುಗಳು ಪ್ರಕ್ಷುಬ್ಧ, ಜ್ವಾಲಾಮುಖಿಗಳಂತಾಗಿದ್ದವು.

"ಅವ್ಯಕ್ತ ನೋವಿನಿಂದ ಚಡಪಡಿಸುತ್ತಿದ್ದ. ಏನನ್ನೋ ಕಳೆದುಕೊಂಡ ಅಸಹಾಯಕನಂತೆ ನಿಂತಿದ್ದ ಸ್ವಲ್ಪ ದಿವಸ ನೆಮ್ಮದಿಯನ್ನು ತಂದಿದ್ದ ಶಂಕರ ಮತ್ತೆ ಮಾಮೂಲಿನಂತೆ ಸಮಸ್ಯೆಯಾದ.

ಗಿರೀಶನಿಂದ ಉತ್ತರ ಬಂತು. 'ಮದುವೆ ಮಾಡಿದರೆ ಬಹುಶಃ ಅವನ ಮನಃಸ್ಥಿತಿ ಹದಕ್ಕೆ ಬಂದೀತು' ಎಂದು ಬರೆದಿತ್ತು. ಇನ್ನೇನು, ಅವನನ್ನು ಕಟ್ಟಿಹಾಕಬೇಕಾದರೆ, ಹಾದಿಗೆ ಹಚ್ಚಬೇಕಾದರೆ ಅದೊಂದೇ ದಾರಿಯೆಂದು ನಿರ್ಧರಿಸಿದರು.

ನಾರಾಯಣಪ್ಪನಿಗೆ ಉತ್ತರ ಬರೆದು ವಿಚಾರಿಸಲು, ಹುಡುಗಿಯ ತಂದೆ ಬಂದು ಮಾತಾಡುವರೆಂದು ಮಾರುತ್ತರ ಬಂತು, ಅಂದಂತೆ ಕೇಶವಯ್ಯ ಊರಿಗೆ ಬಂದ. ಚಂದ್ರಣ್ಣನ ಮನೆ, ಮನಸ್ಸುಗಳನ್ನು ನೋಡಿ ಸಂತೋಷಪಟ್ಟು ಮಗಳನ್ನು ಕೊಡಲು ಒಪ್ಪಿದ. ಶಂಕರನನ್ನು ನೋಡಿದನಷ್ಟೇ ಕೇಶವಯ್ಯ; ಮಾತಾಡಿಸಲಿಲ್ಲ. ಮಗಳು ಸಂತೋಷವಾಗಿ ಬಾಳುವುದಕ್ಕಾದರೆ ಸಾಕೆಂದು ಬಯಸಿದ್ದ ಕೇಶವಯ್ಯ.

"ಚಂದ್ರಣ್ಣನವರೇ, ನೀವು ಒಮ್ಮೆ ಬಂದು ನನ್ನ ಮಗಳನ್ನು ನೋಡಿಕೊಂಡು ಬನ್ನಿ" ಎಂದು ಆಹ್ವಾನಿಸಿದ.

"ಆಗಲಿ ಕೇಶವಯ್ಯನವರೇ, ಮುಂದಿನ ವಾರ ನನ್ನ ಅಳಿಯ ಮಗಳು ಬರುವವರಿದ್ದಾರೆ. ಅವರು ಬಂದ ಕೂಡಲೇ, ತಮಗೆ ತಿಳಿಸಿ, ಬರ್ತೇವೆ" ಎಂದ ಚಂದ್ರಣ್ಣ.

"ಅವರು ಬರುವವರೆಗೆ ಯಾಕೆ? ಈಗ ನೀವು ನನ್ನೊಟ್ಟಿಗೇ ಬನ್ನಿ. ಆಮೇಲೆ ಬೇಕಾದರೆ ಅವರನ್ನೂ ಕರೆತರಬಹುದು." ಎಂದ.

ಚಂದ್ರಣ್ಣ ಪಾರ್ವತಿಯನ್ನು ಕೇಳಿದ. ಪಾರ್ವತಿ. "ಅವರು ಹೇಳಿದ ಹಾಗೇ ಮಾಡಿ. ಈಗ ನೀವು ನೋಡಿ ಬನ್ನಿ" ಎಂದಳು.

ಹೆಂಡತಿ ಸಲಹೆ ಸಿಕ್ಕಿದ ಮೇಲೆ ಚಂದ್ರಣ್ಣ ಕೇಶವಯ್ಯನೊಂದಿಗೆ. ಅವರ ಮಗಳನ್ನು ನೋಡಿ ಬರಲು ಹೊರಟ.

"ನಾಳೆ ಬಂದ್ಬಿಡ್ತೇನೆ. ಲಕ್ಷ್ಮಿಯನ್ನು ಮನೆಯಲ್ಲಿರಿಸಿಕೋ. ಶಂಕರನಿಗೆ ಎಲ್ಲೂ ಹೋಗಬೇಡಾಂತ ಹೇಳು'' ಎಂದು ಜಾಗರೂಕತೆಯಿಂದ ಇರಲು ತಿಳಿಸಿದ್ದ ಹೋಗುವಾಗ.

ಚಂದ್ರಣ್ಣನಿಗೆ ಹುಡುಗಿ ತುಂಬಾ ಹಿಡಿಸಿದಳು. ನೋಡಿದರೇನೇ ಮೆದು ಸ್ವಭಾವದವಳೆಂದು ತಿಳಿಯುತ್ತಿತ್ತು. ಪಾರ್ವತಿಗೆ ಭಾವೀ ಸೊಸೆಯ ವಿಚಾರವನ್ನು ಬಣ್ಣಿಸಿ ಹೇಳಿದ. ಕೇಳುತ್ತಿದ್ದಂತೆಯೇ ಪಾರ್ವತಿಯ ಹೃದಯ ಹಿಗ್ಗಿತು. ಈ ದಿನಕ್ಕಾಗಿಯೇ ಅಲ್ಲವೇ ಅವಳ ನೋವಿನ ತಪಸ್ಸು! 'ಬಿಕೋ' ಎನ್ನುವ ಮನೆತುಂಬ ನಗೆ ಹೂವು ಅರಳಿದಾಗಲಲ್ಲವೇ ಹೆತ್ತೊಡಲ ಕಾವು ತಣಿಯುವುದು.

ಆಗಲೇ ಮನೆಗೆ ಸೊಸೆ ಬಂದಂತೆ ಚಿತ್ರಿಸಿಕೊಂಡಳು. 'ಶಂಕರನಿಗೆ ಸಂತೋಷವಾಗಬಹುದು. ನಾಚಿಕೆಯಿಂದ ಈ ಸುದ್ದಿಯನ್ನು ಸ್ವೀಕರಿಸದಿದ್ದರೂ, ನಿಜವಾಗಿಯೂ ಒಳಗೊಳಗೇ ಖುಷಿಪಟ್ಟಾನೆಂದು ತಿಳಿದು ರೋಮಾಂಚಗೊಂಡಳು!

ಮುಂದಿನವಾರ ಮಗಳು ಬಂದರೆ, ಶಂಕರನ ಮದುವೆಯಾಗುವವರೆಗೆ ಕಳುಹಿಸಬಾರದು. ಇಲ್ಲಿಯೇ ಉಳಿಸಿಕೊಳ್ಳಬೇಕು. ವಿದೇಶದಿಂದ ಪರಿಮಳ, ಪ್ರಕಾಶ ಬರುತ್ತಾರೆ. ಜಾನಕಿಗೂ ತುಂಬಾ ಸಂತೋಷವಾಗುತ್ತೆ' ಎಂದೆಲ್ಲಾ ಆಲೋಚಿಸಿದಳು.

ಪ್ರಕಾಶನ ಮದುವೆಯಾದ ಮೇಲೆ ಎರಡು ಮೂರು ಬಾರಿ ಬಂದಿದ್ದಳು. ಜಾನಕಿ ಶಂಕರನ ವಿಚಾರವಾಗಿ ಅವಳೂ ತುಂಬಾ ನೊಂದಿದ್ದಳು. ಈಗ ಶಂಕರ ಬದುಕಿಗೆ ಲಾಯಕ್ಕಾದನೆಂದು ತಿಳಿದರೆ ನಿಜವಾಗಿಯೂ ಸಂತೋಷಪಡುತ್ತಾಳೆ ಎಂದೆಲ್ಲಾ ಲೆಕ್ಕಾಚಾರ ಹಾಕಿದಳು.

ಮುಹೂರ್ತ ನಿಶ್ಚಯಿಸಿ ಪತ್ರ ಬರೆಯುತ್ತೇನೆಂದು ಕೇಶವಯ್ಯ ತಿಳಿಸಿದಂತೆ ಪತ್ರ ಬರೆದ. ಸರಿಯಾಗಿ ಅಂದಿನಿಂದ ಒಂದು ತಿಂಗಳಿಗೆ ಮದುವೆ! ಪಾರ್ವತಮ್ಮನಿಗೆ

ಸ್ವರ್ಗ ಮೂರೇ ಗೇಣು! ಬೀದಿಯಲ್ಲಿದ್ದವರಿಗೆಲ್ಲಾ ಹೇಳಿಕೊಂಡು ಬಂದಳು. ಇವರಷ್ಟೇ ಈ ಸುದ್ದಿಯಿಂದ ಖುಷಿಪಟ್ಟವರೆಂದರೆ ಪುಟ್ಟನ ಸಂಸಾರ. ರಂಗಿಗಂತೂ ಸಂತೋಷದಿಂದ ಕಣ್ಣು ತುಂಬಿ ಬಂತು. ಸುದ್ದಿ ಕಿವಿ ಮುಟ್ಟಿದ್ದೇ. ಪಾರ್ವತಮ್ಮನ ಮನೆಗೆ ಓಡಿ ಬಂದಳು.

"ಪಾರ್ವತಮ್ಮ! ಇಸಯ ತಿಳೀತು, ಬುಡು. ನಿನ್ನ ಚಿಂತೀ ಎಲ್ಲ ದೂರಾಯ್ತು. ಶಂಕರಪ್ಪ ಸಂಸಾರಸ್ತ ಆದಾಂದ್ರೆ ನಿಮಗೇನೂ ಕಷ್ಟ ಇರಾಕಿಲ್ಲ. ಚಂದಾಕವ್ಳೇನು ಸೊಸೆ?" ಎಂದಳು ಬರುತ್ತಾ.

"ಬಾ ರಂಗಿ. ನಿನಗೆ ನಾನೇ ಹೇಳಿ ಕಳಿಸಬೇಕೆಂದಿದ್ದೆ. ನೀನೇ ಬಂದೆ. ದೇವರು ದೊಡ್ಡವನು. ನಾನು, ಅವನು ನಮ್ಮ ಕೈಬಿಟ್ಟವನೇಂತಲೇ ಭಾವಿಸಿದ್ದೆ. ಆದರೆ ಯಾವ ಹೊತ್ತಲ್ಲಿ ಏನ್ಮಾಡ್ತಾನೇ ಅನ್ನೋದು ಗೊತ್ತಾಗೋದಿಲ್ಲ ಅನ್ನೋ ಸತ್ಯ ಈಗ ಅರ್ಥವಾಯ್ತು.... ಸೊಸೆ ಚೆನ್ನಾಗಿದ್ದಾಳೇಂತ, ಅವರು ಹೇಳಿದರು. ಹೆಣ್ಣು ನೋಡಲು ನಾನು ಹೋಗಿರಲಿಲ್ಲ. ಹ್ಯಾಗಿದ್ದರೇನು ರಂಗಿ. ಮನೆಗೆ ಹೊಂದಿಕೊಂಡಲು ಬಾಳೋದು ತಿಳಿದಿದ್ದರೆ ಸಾಕು....." ಎಂದಳು.

"ನೀವು ಯೋಳೋದು ಸರಿ. ರೂಪ ಇದ್ದು ಬುದ್ಧಿ ನೆಟ್ಟಗೆ ಇಲ್ದಿದ್ರೋದ್ರೆ ಏನ್ಮಾಡೋಕಾಯ್ತದೆ...... ಅಂದಂಗೆ ಲಗ್ನ. ಯಾವಾಗ ಪಾರ್ವತವ್ವ?"

"ಸರಿಯಾಗಿ ತಿಂಗಳಿದೆ ರಂಗಿ."

"ಮನೆಯಾಗೇ ಪುಟ್ಟನ್ನಂತೂ ಮಾತಾಡಿಸಾಕೇ ಆಗಾಕಿಲ್ಲ. ಚಿಕ್ಕಯ್ಯನ ಮದುವೆ ಅಂಗ ಮಾಡ್ಬೇಕು, ಇಂಗ ಮಾಡ್ಬೇಕಂತ ಲೆಕ್ಕಾಚಾರ ಆಕ್ತಾವ್ನೆ."

"ನೀವೆಲ್ಲ ಇದ್ರೆ ತಾನೇ ರಂಗಿ ಲಗ್ನ ಜರುಗೋದು. ಈ ಮುದಿಗೊಡ್ಡು ಏನು ತಾನೇ ಮಾಡೀತು?... ಲಕ್ಷ್ಮೀನಾ ಮದುವೆ ಮುಗಿಯುವ ತಂಕ ನಾ ಮನೇಲಿ ಇರಿಸ್ಕೋತೇನೆ ರಂಗಿ!" ಎಂದಳು.

"ನೀವು ಅದನ್ನ ಕೇಳಬೇಕ್ರಾ? ಅವಳೂ ನಿಮ್ಮ ಎಣ್ಮಗಳು ಇದ್ದಂಗೆ. ಈಗ ಮಾತ್ರ ಅವಳೆಲ್ಲಿರ್ತಾಳೆ ಮನೇಲಿ? ಮುಕ್ಕಾಲು ಮೂರು ಪಾಲು ಇರೋದು, ಉಣ್ಣೋದು ಇಲ್ಲೇ ಅಲ್ವ!" ಎಂದಳು ಸಂತೋಷದಿಂದ.

"ನಮ್ಮ ಶಾಂತಳೂ ಬರ್ತಾಳೆ. ಜೊತೆಗಿದ್ದ ಹಾಗೆ ಆಗುತ್ತೆ" ಎಂದಳು.

"ಪಾರ್ವತಮ್ಮ ಶಾಂತವ್ವನಿಗೇನಾದರೂ ತಿಂಗಳು ತಪ್ಪೈತಾ?" ಎಂದಳು ಮೆಲ್ಲನೆ ಕೇಳಿದಳು.

"ಹೌದು ರಂಗಿ. ನಿಂಗೆ ನಾನು ಹೇಳ್ಲಿಲ್ಲ ಮೊನ್ನೆ ಶಾಂತ ಕಾಗದದಲ್ಲಿ ತಿಳಿಸಿದ್ದಳು, ಮೂರು ತಿಂಗಳಾಗಿದೆ ಅಂತ."

"ನಿಮ್ಮದು ಅದೃಷ್ಟ ಪಾರ್ವತಮ್ಮ. ಸೀ ಸುದ್ದಿ ಮೇಲೆ ಸುದ್ದಿ. ಓಗಲಿ ಬುಡವ್ವ, ಕಡೀಕೆ ದ್ಯಾವರು ಒಳ್ಳೇದ್ಮಾಡಿದ" ಎಂದು ತೃಪ್ತಿಯಿಂದ ಹೇಳಿ ಹೋಗಿದ್ದಳು.

ಪಾರ್ವತಿಗೆ ದಿನ ಬೆಳಗಾದರೆ ಮದುವೆ ವಿಚಾರವೇ. ಮದುವೆ ಸಿದ್ಧತೆಗಳ ಆರಂಭವನ್ನು ಮಾಡಿದಳು. ಚಂದ್ರಣ್ಣ ಶಂಕರನನ್ನು ಕರೆದು, ಸುತ್ತಾಡಿ ಬರೋಣವೆಂದ. ಶಂಕರನಿಗೆ ಮೊದಲಿನಿಂದಲೂ ಸುತ್ತಾಟವೆಂದರೆ ಪ್ರಾಣ. ಚಂದ್ರಣ್ಣ ಕರೆದದ್ದೇ ಹೊರಟುನಿಂತ. ಪಾರ್ವತಿಗೆ ಹೇಳಿ ಹೊರಟರು ಇಬ್ಬರೂ ತಂದೆಮಕ್ಕಳನ್ನು ಒಟ್ಟಿಗೆ ನೋಡಿ ಪಾರ್ವತಿಯ ಹೃದಯ ಅರಳಿತು.

ನಡೆದಷ್ಟೂ ದಾರಿ ಸವೆದಂತೆನಿಸಲಿಲ್ಲ. ಹೊಲ ಗದ್ದೆಗಳನ್ನೆಲ್ಲಾ ಹಾದೂ ಕೆರೆಯಾಚೆಯ ಹನುಮಂತರಾಯನ ಗುಡ್ಡದ ಬಳಿಗೆ ಬಂದರು. ಅಲ್ಲಿಗೆ ತಲುಪುತ್ತಿದ್ದಂತೆ ಶಂಕರನ ಮೈ ರೋಮಾಂಚನಗೊಂಡಿತು. "ಅಪ್ಪ ಗುಡ್ಡ ಏರಿ ಬರ್ತೇನೆ" ಎಂದು ಕೇಳಿದ.

"ಬೇಡ ಶಂಕರ ಗುಡ್ಡ ಏರುವುದಕ್ಕೆ ಈಗ ಹೊತ್ತಲ್ಲ. ನಿನ್ನ ಹತ್ತಿರ ಮುಖ್ಯವಾದ ವಿಷಯ ಮಾತಾಡಬೇಕೆಂದು ಕರೆತಂದೆ. ಬಾ ಇಲ್ಲೆ ಈ ಬುಡದಲ್ಲಿ ಕೂರೋಣ" ಎಂದು ಕರೆದ.

ಶಂಕರ ಮೂಕ ಬಸವನಂತೆ, ತಂದೆಯನ್ನನುಸರಿಸಿ ಕುಳಿತ.

'ಶಂಕರ, ಬಹುಶಃ ನಿನಗೆ ತಿಳಿದಿರಬಹುದು, ನಿನ್ನ ಲಗ್ನ ಗೊತ್ತಾಗಿದೇಂತ! ನಮ್ಮ ಮರ್ಯಾದೆ ನಿನ್ನ ಕೈಯಲ್ಲಿದೆ. ಬಂದವರ ಎದುರು ಬೆಪ್ಪನಂತೆ ವರ್ತಿಸಬೇಡ. ನಿನ್ನ ಕೈ ಹಿಡಿದು ಕೇಳಿಕೊಳ್ತೇವೆ, ಈ ಮದುವೆಯನ್ನು ತಿರಸ್ಕರಿಸಬೇಡ. ಇದೆಲ್ಲಾ ನಿನ್ನ ಕ್ಷೇಮಕ್ಕೆ. ನಾವೆಷ್ಟು ದಿನ ನಿನ್ನ ನೋಡ್ಕೊಳ್ಳೋಕಾಗುತ್ತೆ ಹೇಳು?.........'

ನಿನಗೆ ತಿಳಿದಿಲ್ಲ ಶಂಕರ, ಒಂದು ಗಂಡು ಮಗುವಿಗಾಗಿ ನಾವೆಷ್ಟು ಹಂಬಲಿಸಿದ್ದೇವೆ ಅಂತ. ನಿನ್ನ ಅಣ್ಣ ಒಬ್ಬ ಇದ್ದ. ವಿಶ್ವ ಅಂತ ಹೆಸರು. ಆ ರೀತಿಯ ಮಗುವನ್ನು ಬಹುಶಃ ನಾವು ಇನ್ನೆಂದೂ ನೋಡಲಾರೆವು. ಮುದ್ದಾಗಿ, ಕಣ್ಣಾಗಿ, ಹಣ್ಣಾಗಿ ಸಾಕಿದೆವು. ನಮ್ಮ ಕನಸುಗಳನ್ನು ಅವನೊಂದಿಗೆ ಹೆಣೆದೆವು. ಪ್ರಾಣಕ್ಕಿಂತ ಅಮೂಲ್ಯವೆಂಬಂತೆ ರೆಪ್ಪೆ ಕಾವಲಲ್ಲಿ ಕಾಪಾಡಿದೆವು. ಆದರೆ ಸಾವು ಕರಾಳ ಕೈಗಳಿಂದ ಆ ಮುದ್ದಾದ ಮಗುವನ್ನು ಚುಕ್ಕು ಚೂರಾಗಿಸಿತು. ನಮ್ಮ ಕನಸುಗಳನ್ನೆಲ್ಲಾ ಒರೆಸಿ ಹಾಕಿತು. ಆ ದಿನದಿಂದ ಎದೆಯಲ್ಲಿ ಉರಿವ ಚಿತೆಯನ್ನು ಹೊತ್ತುಕೊಂಡೇ ಉಸಿರಾಡಿದೆವು.... ನಿನ್ನ ಅಜ್ಜಿಯರು ತಾತ – ಎಲ್ಲಾ ನಮ್ಮನ್ನು ಅನಾಥರಂತೆ ಬಿಟ್ಟು ಸಾವನ್ನು ಅಪ್ಪಿದರು. ಆದರೂ ನಾವು ಯಾವ ಪ್ರೇರಣೆಯಿಂದಲೋ ಬದುಕುತ್ತಾ ಬಂದೆವು.

ಹಾಳು ಸುರಿವ, ಭಯಂಕರವೆನಿಸುವ ಜೀವನದಲ್ಲಿಯೂ ಸಂತೋಷ ಸಿಕ್ಕೀತೆಂಬ ಆಸೆಯಿಂದ, ಅಷ್ಟೆಲ್ಲಾ ವ್ಯಥೆಯ ನಂಜನ್ನೂ ಅರಗಿಸಿಕೊಂಡು ಉಳಿದೆವು.

ಕೊನೆಗೆ ನೀನು ನಮ್ಮ ಆಸೆಗಳ ದೀಪದ ಕುಡಿಯಾಗಿ ಬಂದೆ. ಕವಿದಿದ್ದ ನಿರಾಶೆಯನ್ನು ಒದ್ದು ನಿನಗಾಗಿ ಗೆಲುವನ್ನು ತಂದುಕೊಂಡೆವು. ಆದರೆ ಬೆಳೆ ಬೆಳೆಯುತ್ತಿದ್ದಂತೆ ನಿನ್ನಲ್ಲಿನ ವಿಚಿತ್ರ ರೀತಿ ನಮ್ಮೆದೆಗಳನ್ನು ಸೀಳಿತು. ನೀನು ನಿಮ್ಮ ತಾಯಿಯನ್ನು, ತಾಯಿಯಲ್ಲವೆಂದು ಹೇಳಿ ಹೊರಟಾಗ, ನಿಮ್ಮ ತಾಯಿಗಾದ ಆಘಾತದ ಕಲ್ಪನೆ ನಿನಗಿರಲಾರದು..... ಮನೆ ಬಿಟ್ಟು ಹೋದೆ. ನಿನಗಾಗಿ ಸೊರಗಿ, ಕೊರಗಿ ಬಡವಾದಳು. ಮತ್ತೆ ನೀನು ಮರಳಿ ಬಂದಂದಿನಿಂದ ಸ್ವಲ್ಪ ಗೆಲುವಾಗಿದ್ದಾಳೆ..... ಅವಳಿಗೂ ಎಲ್ಲ ತಾಯಂದಿರಂತೆ ಮಕ್ಕಳ ಬಗ್ಗೆ ಏನೇನೋ ಆಸೆಗಳನ್ನು ಬೆಳೆಸಿಕೊಂಡಿದ್ದಾಳೆ. ಹೆಣ್ಣು ಮಕ್ಕಳ ಮದುವೆಯಾದುದಕ್ಕಿಂತ ಹೆಚ್ಚಾಗಿ ಮಗನ ಮದುವೆಯಾಗಬೇಕೆಂದು ಹಂಬಲಿಸಿದಳು. ನಿನ್ನ ವಿಚಾರವಾಗಿ ಅವಳು ಹೊತ್ತ ಆಸೆ ನೆರವೇರದಿದ್ದರೆ ಅವಳು ಬದುಕಲಾರಳೇನೋ ಎನಿಸುತ್ತೆ. ಅವಳ ತೃಪ್ತಿಗಾಗಿಯಾದರೂ ನೀನು ಮದುವೆಯಾಗಲೇ ಬೇಕು" ಎಂದು ಹೇಳಿ ಕಥೆ ಮುಗಿಸುವಷ್ಟರಲ್ಲಿ ಚಂದ್ರಣ್ಣ ಗದ್ಗದಿತನಾಗಿದ್ದ. ಕಣ್ತುಂಬ ಕಂಬನಿಯ ಸೆಲೆಯೊಡೆದಿತ್ತು. ಚಂದ್ರಣ್ಣ ಕಥೆ ಹೇಳುತ್ತಿದ್ದಂತೆ, ಶಂಕರ ತಲೆ ಬಗ್ಗಿಸಿಕೊಂಡು ಕೆಳಗೆ ಬಿದ್ದಿದ್ದ ಜೋಳದ ಕಡ್ಡಿಯ ಚೂರಿನಿಂದ ಮರಳಿನ ಮೇಲೆ ಏನೇನೋ ಬರೆಯುತ್ತಿದ್ದ. ಚಂದ್ರಣ್ಣನ ದುಃಖ ತಡೆಯಲಾಗಲಿಲ್ಲ. ಶಂಕರ ಕೈ ಹಿಡಿದುಕೊಂಡು "ಶಂಕರ, ಇದೊಂದು ನಡೆಸಿಕೊಡು" ಎಂದು ಮತ್ತೆ ಬೇಡಿದ.

ತಲೆ ಎತ್ತಿ ನೋಡಿದ. ತಂದೆ ಅಳುತ್ತಿದ್ದಾನೆ! ವಿಚಿತ್ರ ಎನಿಸಿತು. ಕಲ್ಲು ಕರಗಿದಷ್ಟೇ ಅಚ್ಚರಿಯೆನಿಸಿತ್ತು. ಇವನ ದುಃಖ ಸಾಮಾನ್ಯವಾಗಿ ಚಂದ್ರಣ್ಣನ ಮಾತಿನ ಧೋರಣೆ, ಹೃದಯವೇ ಇಲ್ಲವೇನೋ ಎನ್ನುವ ಅಭಿಪ್ರಾಯವನ್ನು ಎದುರಿಗಿರುವವರಲ್ಲಿ ಮೂಡಿಸುತ್ತಿತ್ತು. ಅಷ್ಟೇಕೆ? 'ಬುದ್ಧಿ ಬಂದಂದಿನಿಂದ ತನ್ನನ್ನು ಪ್ರೀತಿಯಿಂದ ಕರೆದು ನಾಲ್ಕು ಮಾತಾಡಿಸಿದ್ದಿಲ್ಲ.... ಅಂಥಾದ್ದರಲ್ಲಿ, ತಂದೆಯ ಕಣ್ಣಲ್ಲಿ ನೀರು ಬರುತ್ತಿದೆಯೆಂದರೆ, ಅವರ ಮನಸ್ಸಿನ ವ್ಯಥೆಯಾಳ ಎಷ್ಟಿರಬಹುದೋ' ಎಂದುಕೊಂಡ ಶಂಕರ.

ಎಷ್ಟು ಹೊತ್ತಾದರೂ ಶಂಕರನಿಂದ ಯಾವ ಪ್ರತ್ಯುತ್ತರವೂ ಬರಲಿಲ್ಲ. "ಹೇಳು ಶಂಕರ. ನಮ್ಮ ಕೆಲಸಕ್ಕೆ ಒಪ್ಪಿಗೆ ಇದೆ ಅಂತ" ಅಂಗಲಾಚಿದ ಚಂದ್ರಣ್ಣ.

"ನನ್ನನ್ನು ಯಾಕೆ ನೀವು ಮದುವೆ ಬಂಧನದಲ್ಲಿ ಸಿಲುಕಿಸುತ್ತೀರಿ? ನನಗೆ ಮದುವೆಯೆಂದರೇನೆ ಅಸಹ್ಯ! ನನ್ನನ್ನು ಒಂಟಿಯಾಗಿರಲು ಬಿಡಿ" ಎಂದ.

ಚಂದ್ರಣ್ಣ ಹೌಹಾರಿದ. ಪ್ರಾರ್ಥನೆ. ಪ್ರೀತಿಗೆ ಬಗ್ಗುವ ಪಿಶಾಚಿಯಲ್ಲ ಇದು ಎಂದುಕೊಂಡ. ಕ್ಷಣಾರ್ಧದಲ್ಲಿ ಮುಖಭಾವ ಬದಲಾಯಿಸಿದ.

"ನಿನ್ನನ್ನು ಕೇಳಿ ಪ್ರಯೋಜನವಿಲ್ಲ. ನಿನ್ನಲ್ಲಿ ಮನುಷ್ಯತ್ವವೇ ಇಲ್ಲ ಶಂಕರ. ಅದಕ್ಕೇ ನಿನಗೆ ಮಾನವ ಹೃದಯಗಳ ಮೆದುಭಾವನೆಗಳು ಅರ್ಥವಾಗುವುದಿಲ್ಲ. ನಿನ್ನ ಮದುವೆಯನ್ನು ಮಾಡಿಯೇ ತೀರುತ್ತೇನೆ" ಎಂದು ಬುಸುಗುಡುತ್ತಾ ಚಂದ್ರಣ್ಣ ಹೇಳಿದ.

ಚಂದ್ರಣ್ಣನ ಹೆಡೆಯೆತ್ತಿದ ರೋಷವನ್ನು ಕಂಡು ಶಂಕರನಿಗೆ ನಗು ಬಂತು. ಅವರ ಸ್ವಾರ್ಥಕ್ಕೆ ತನ್ನ ಅಂತರಾತ್ಮವನ್ನು ಕೊಲೆ ಮಾಡುತ್ತಾರೆ ಎಂದುಕೊಂಡ.

ಚಂದ್ರಣ್ಣ ಹೊದ್ದ ಶಲ್ಲೆಯಿಂದ ಕಣ್ಣೊರೆಸಿಕೊಂಡು ಮೇಲೆದ್ದು, ಅದೇ ಶಲ್ಲೆಯನ್ನು ಝಾಡಿಸುತ್ತ ದಬದಬ ಹೆಜ್ಜೆ ಹಾಕಿದ. ಶಂಕರ, ಕಾದಿದ್ದ, ಗುಡ್ಡವನ್ನೇರಿದ.

ದಿನಗಳ ಮೇಲೆ ದಿನಗಳು ಉರುಳಿದವು. ಲಗ್ನದ ದಿನ ತೀರಾ ಹತ್ತಿರ ಬರತೊಡಗಿತು. ಮನೆ ತುಂಬಾ ನೆಂಟರು. ಜಾನಕಿ, ಶಾಂತ, ಪದ್ಮ ಎಲ್ಲರೂ ಬಂದಿದ್ದರು. ಪರಿಮಳ, ಪ್ರಕಾಶರು ಸಾಧ್ಯವಾದರೆ ಮದುವೆಗೆ ಬರುವುದಾಗಿ ಬರೆದಿದ್ದರು.

ಎಲ್ಲರಿಗೂ ಕೈ ತುಂಬಾ ಕೆಲಸ. ಮನೆ ಮಂದಿಗೆಲ್ಲ ಸಂಭ್ರಮವಾದಂತೆ, ಶಂಕರನ ಎದೆಯ ಭೀತಿ ಹೆಚ್ಚಾಯಿತು. ಗುಂಡಿಗೆ ಹೊಡೆದುಕೊಳ್ಳುತ್ತಿತ್ತು. ಇದಕ್ಕೆ ಕಾರಣವೇನೆಂದು ಯೋಚಿಸಿದರೂ, ಹೊಳೆಯಲಿಲ್ಲ.

ಚಂದ್ರಣ್ಣನ ಕೈಲಿ ಅಷ್ಟಾಗಿ ಓಡಾಡಿ ಕೆಲಸ ಮಾಡಲು ಸಾಧ್ಯವಿಲ್ಲವಾಗಿ, ಪುಟ್ಟ ಗಿರೀಶರೇ ಹೊರಗಿನ ಕೆಲಸಗಳನ್ನೆಲ್ಲಾ ನೋಡಿಕೊಳ್ಳುತ್ತಿದ್ದರು. ಆಹ್ವಾನ ಪತ್ರಿಕೆಗಳ ಹಂಚಿಕೆಯೂ ಆಗಿ ಹೋಯಿತು. ಎಲ್ಲರೂ ಚಟುವಟಿಕೆಯಿಂದ, ಉತ್ಸಾಹ ಗೆಲುವುಗಳಿಂದ ಓಡಾಡುತ್ತಿದ್ದಾರೆ.

ಶಂಕರ ಮಾತ್ರ ತನ್ನ ಪಾಡಿಗೆ ತಾನು ಯೋಚನೆಯಲ್ಲಿ ಮುಳುಗಿದ್ದಾನೆ. ವ್ಯಥೆ ತೀರಾ ಎದೆ ತುಂಬಿ ಬಂದಾಗ, ತಡೆಯಲಾಗದೆ ಒಬ್ಬನೇ ಕುಳಿತು ಅಳುತ್ತಿದ್ದಾನೆ. ಯಾರಿಗೂ ಅವನ ಮನಸ್ಸನ್ನು ತಿಳಿಯುವ ತಾಳ್ಮೆ ಇಲ್ಲವಾಗಿದೆ.

ಮದುವೆಯ ದಿನವೂ ಬಂತು. ಶಂಕರನಿಗೆ ಎಣ್ಣೇ ಸ್ನಾನ ಮಾಡಿಸಿ ದಿಬ್ಬಣದೊಂದಿಗೆ ಹೆಣ್ಣಿನ ಊರಿಗೆ ಕರೆದೊಯ್ದರು. ಶಂಕರನ ಮುಖದಲ್ಲಿ ಗೆಲುವು ಕಾಣಲಿಲ್ಲ. ನಿಸ್ತೇಜನಾಗಿದ್ದ. ಯಾಂತ್ರಿಕವಾಗಿ ಮದುವೆಯ ವಿಧಿಗಳಿಗೆಲ್ಲಾ ತಲೆಬಾಗಿದ. ಒಮ್ಮೆಯಾದರೂ ವಧುವಿನತ್ತ ಆಸೆಯಿಂದ ನೋಡಲಿಲ್ಲ. ಬಂದಿದ್ದವರೆಲ್ಲ ಉಂಡು ಹೋದರು. ಮದುವೆ ಶಾಸ್ತ್ರಗಳೆಲ್ಲಾ ಮುಗಿದವು. ಸೊಸೆಯನ್ನು ತಮ್ಮೊಡನೆ ಕರೆದೊಯ್ದು ಅಲ್ಲಿ 'ಪ್ರಸ್ತ'ದ ಕಾರ್ಯಕ್ರಮ ನಡೆಸುವುದಾಗಿ ತೀರ್ಮಾನಿಸಿದರು.

ವಧುವಿನೊಂದಿಗೆ ಆಕೆಯ ತಂದೆತಾಯಿ ಅಕ್ಕಂದಿರು ಬಂದರು. ಬೀಗರೊಂದಿಗೆ ಪಾರ್ವತಮ್ಮ, ಚಂದ್ರಣ್ಣ ವಧೂ-ವರರನ್ನು ಮನೆಗೆ ಕರೆತಂದರು. ಮಾರನೆಯ ದಿನ

ಕಾರ್ಯಕ್ರಮವಿತ್ತು. ಮಧ್ಯಾಹ್ನ ಎಲ್ಲರಿಗೂ ಸಿಹಿಯೂಟವಾಯಿತು. ರಾತ್ರಿಗೆ ಆರತಿ ಮತ್ತು ಪ್ರಸ್ತದ ಕಾರ್ಯಕ್ರಮವಿಟ್ಟುಕೊಂಡರು.

ಆರತಿ ಮುಗಿದು ಆಹ್ವಾನಿತರೆಲ್ಲ ಹೊರಡುವ ಹೊತ್ತಿಗೆ ರಾತ್ರಿ ಹತ್ತು ಗಂಟೆಗೂ ಮೀರಿತ್ತು. ಶಂಕರನ ಕೋಣೆಯನ್ನೇ ಮಲಗುವ ಕೋಣೆಯಾಗಿ ಮಾಡಲಾಗಿತ್ತು.

ಹೆಣ್ಣು ಗಂಡನ್ನು ಹೊಗಿಸಿ ಹೊರಗಿನಿಂದ ಬಾಗಿಲನ್ನು ಬಿಗಿದರು. ಹೊರಗೆ ಸೇರಿದ್ದ ನೆಂಟರ ಕಿಲ ಕಿಲ ನಗು, ಚೇಷ್ಟೆಯ ಮಾತುಗಳು ಅಲೆ ಅಲೆಯಾಗಿ ಹರಡಿ ಕೇಳಿ ಬರುತ್ತಿತ್ತು...... ಕ್ರಮೇಣ ಎಲ್ಲ ಸದ್ದೂ ಅಡಗಿತು. ಟಿಕ್.... ಟಿಕ್.... ಟಿಕ್.... ಎಂದು ಹಜಾರದಲ್ಲಿನ ಗಡಿಯಾರದಲ್ಲಿನ ಮುಳ್ಳುಗಳ ಚಲನೆಯ ಶಬ್ದ ಕೇಳಿ ಬರುತ್ತಿದೆ. ಭರ್ಜರಿ ಊಟ, ಮದುವೆಯ ಆಯಾಸದಿಂದಾಗಿ ಮೈ ಚಾಚಿದ ಕೂಡಲೇ ಎಲ್ಲರಿಗೂ ಮಂಪರು ಕವಿದು, ನಿದ್ದೆ ಆವರಿಸಿತು.

ಪಾರ್ವತಮ್ಮ, ಜಾನಕಿ, ಶಾಂತ, ಬೀಗತಿ ಎಲ್ಲಾ ಹಜಾರದಲ್ಲಿ ಮಲಗಿದ್ದರು. ಬೇಸಿಗೆಯ ದಿನವಾದ್ದರಿಂದ ಗಂಡಸರೆಲ್ಲಾ ಜಗುಲಿಯ ಮೇಲೇ ಬಿದ್ದುಕೊಂಡಿದ್ದರು.

ತಮ್ಮ ಪಾಡಿಗೆ ತಾವು ನಿರಾತಂಕ ಗಡಿಯಾರದ ಮುಳ್ಳುಗಳು ಪರಿಭ್ರಮಿಸುತ್ತಿದ್ದವು.

ಎಲ್ಲರಿಗೂ ನಿದ್ದೆ ಹತ್ತಿದರೂ ಪಾರ್ವತಮ್ಮನು ಎವೆ ಮುಚ್ಚಲಿಲ್ಲ. ಮಂದ ಬೆಳಕನ್ನೇ ಪಿಳ ಪಿಳ ಕಣ್ಣುಗಳಿಂದ ನೋಡುತ್ತಿದ್ದಳು. ಹೊರಗಿನಿಂದ ಗಂಡಸರ ಗೊರಕೆಯ ಶಬ್ದ ಕೇಳಿ ಬರುತ್ತಿತ್ತು.

ಹನ್ನೆರಡು ಹೊಡೆಯಿತು. ಪಾರ್ವತಿ ಗಂಟೆಗಳ ಲೆಕ್ಕವಿಟ್ಟಳು. ಶಂಕರ ಮಲಗಿರಬೇಕು! ಎಂದುಕೊಂಡಳು ತೃಪ್ತಿಯಿಂದ.

ಹನ್ನೆರಡೂವರೆ.... ಒಂದು... ಒಂದೂವರೆ.... ಎರಡು ಗಂಟೆಯೂ ಆಯಿತು. ಆಗ ತಾನೇ ಪಾರ್ವತಿಯ ದಣಿದ ರೆಪ್ಪೆಗಳು ಮುಚ್ಚಿದವು.

ದಡದಡ ಬಾಗಿಲು ತಟ್ಟುವ ಶಬ್ದವಾಯಿತು. ಮಾದಕ ನಿದ್ದೆಯಲ್ಲಿ ಮೈಮರೆತಿದ್ದವರಿಗೆ ಬೇಗನೆ ಎಚ್ಚರವಾಗಲಿಲ್ಲ. ಇನ್ನಷ್ಟು ಜೋರಾಯಿತು ಬಡಿತ. 'ಅತ್ತೆ ಅತ್ತೆ' ಎಂದು ಕೂಗಿದಂತಾಯಿತು. ಬೆಚ್ಚಿಬಿದ್ದು ಕಣ್ಣು ತೆರೆದಳು. ಏನೋ ಅನಿಷ್ಟ ಕನಸು. ಸೊಸೆ ಅಳುತ್ತಿದ್ದಾಳೆ, ತನ್ನನ್ನು ಕೂಗುತ್ತಿದ್ದಾಳೆ; ಅಯ್ಯಮ್ಮ ಎಂದು ನಿಟ್ಟುಸಿರು ಬಿಡುವಷ್ಟರಲ್ಲಿ ಮತ್ತೆ ಬಡಿತ.... ಅತ್ತೆ ಅತ್ತೆ ಎಂಬ ಕೂಗು. ಪಾರ್ವತಿ ಎದ್ದು ಕುಳಿತು, ಅತ್ತಿಗೆ ಜಾನಕಿಯನ್ನು ಎಬ್ಬಿಸಿದಳು. ಗಾಬರಿಯಿಂದ ಎದ್ದಳು ಜಾನಕಿ. "ಅತ್ತಿಗೆ ಸ್ವಲ್ಪ ಕೇಳು, ನಾಗರತ್ನಳ ಕೂಗು ಇದ್ದ ಹಾಗಿದೆ" ಎಂದಳು. ಅಳುತ್ತಿರುವುದು ಸ್ಪಷ್ಟವಾಯಿತು. ಜಾನಕಿ ಪಾರ್ವತಿ ಇಬ್ಬರೂ ಮೆಲ್ಲನೆ ಎದ್ದು ಲಾಂದ್ರದ ಬೆಳಕನ್ನು ದೊಡ್ಡದು ಮಾಡಿದರು. ಶಂಕರನ ಕೋಣೆಯ ಬಳಿಗೆ ಹೋಗಿ 'ಶಂಕರ, ಶಂಕರ'

ಎಂದು ಕೂಗಿದರು. ಶಂಕರನಿಂದ ಉತ್ತರವಿಲ್ಲ. ಪ್ರತಿಯಾಗಿ ನಾಗರತ್ನಳ ಅಳು ಕೇಳಿ ಬಂತು. ಹೊರಗಿನ ಚಿಲಕ ತೆಗೆದರು. ಬಾಗಿಲು ತೆರೆದುಕೊಂಡಿತು, ಬಾಗಿಲ ಬಳಿ ನಾಗರತ್ನ ನಿಂತಿದ್ದಾಳೆ. ಪಾರ್ವತಿ ಮೆಲ್ಲಗೆ ಬಳಿ ಸಾರಿ ತಲೆನೇವರಿಸಿ ಕೇಳಿದಳು – "ಏನಾಯ್ತಮ್ಮ ನಾಗರತ್ನ, ಯಾಕೆ ಹೀಗೆ ಅಳ್ತಿದ್ದೀ?" ಎಂದು.

"ನೋಡಿ ಅತ್ತೆ ಅವರು ಹೇಗೆ ಸುಡ್ತಿದ್ದಾರೆ?" ಎಂದು ಹೇಳಿದಳು. ಜಾನಕಿ ಈ ಮಾತು ಕೇಳುತ್ತಿದ್ದಂತೆಯೇ ಶಂಕರನ ಬಳಿಗೆ ಹೋಗಿ ಹಣೆ, ಮೈ, ಮುಟ್ಟಿದಳು. ವಿಪರೀತ ಜ್ವರ. ಕೆಂಡದಂತೆ ಸುಡುತ್ತಿದೆ. "ಪಾರ್ವತಿ, ಶಂಕರನ ಮೈ ಎ. ್ಟ ಸುಡ್ತಿದೆ ನೋಡು" ಎಂದು ತೋರಿಸಿದಳು. ಪಾರ್ವತಮ್ಮನೂ ಮಗನನ್ನು ಪರೀಕ್ಷಿಸಿ ನೋಡಿ, "ಏನ್ಮಾಡೋದು ಅತ್ತಿಗೆ ಇಷ್ಟು ರಾತ್ರೀಲಿ" ಎಂ಼ು ಆತಂಕ ಪಟ್ಟಳು. ಗಿರೀಶನ ನೆನಪೇ ಬರಲಿಲ್ಲ! ಜಾನಕಿಯೇ ನೆನಪು ಮಾಡಿದಳು. ಹೊರಗೆ ಮಲಗಿದ್ದ ಗಿರೀಶನನ್ನು ಎಬ್ಬಿಸುವುದು ಹೇಗೆಂದು ಯೋಚಿಸಿದಳು. ಬೀಗರೆಲ್ಲಾ ಜೊತೆಗೆ ಮಲಗಿದ್ದಾರೆ. ಶಾಂತಳನ್ನು ಎಬ್ಬಿಸಿ ಹೇಳಿದರು. ಕಣ್ಣುಜ್ಜುತ್ತಾ ಶಾಂತ ಎದ್ದು! "ಯಾಕಮ್ಮ ಎಬ್ಬಿಸಿದೆ? ಒಳ್ಳೇ ನಿದ್ದೆ ಬಂದಿತ್ತು" ಎಂದಳು. "ಶಾಂತ ನಿನ್ನ ಗಂಡನನ್ನು ಎಬ್ಬಿಸು, ಅಣ್ಣನಿಗೆ ವಿಪರೀತ ಜ್ವರ" ಎಂದಳು. 'ಜ್ವರ' ಶಬ್ದ ಕಿವಿ ತಾಕಿದಂತೆ ಚಂಗನೆ ಎದ್ದು ನಿಂತಳು.

ಜಗುಲಿಯ ಬಳಿಗೆ ಬಂದಳಾದರೂ ಹೊದ್ದು ಮಲಗಿದ್ದವರಲ್ಲಿ ಯಾರು ತನ್ನ ಗಂಡನೆಂದು ಕತ್ತಲಲ್ಲಿ ಗುರುತಿಸಲಾರದೆ ಹೋದಳು. 'ಅಪ್ಪ-ಅಪ್ಪ' ಎಂದು ಅಪ್ಪನನ್ನೇ ಕೂಗಿ ಎಬ್ಬಿಸಿದಳು. ತಂದೆಗೆ ಶಾಂತ ವಿಷಯ ಹೇಳಿದಳು.

ಚಂದ್ರಣ್ಣ ತನ್ನಿಂದ ಮೂರನೇ ಜಾಗದಲ್ಲಿ ಮಲಗಿದ್ದ ಗಿರೀಶನನ್ನು ಎಬ್ಬಿಸಿ ವಿಷಯ ತಿಳಿಸಿದ. "Oh! God" ಎನ್ನುತ್ತಾ ಗಿರೀಶ ಆತುರವಾಗಿ ಎದ್ದು ಬಂದ. "ಬೇಗ ಬನ್ನಿ ಮಾವ. ಪಾಪ! ಏನಾಗಿದೆಯೋ ನೋಡೋಣ" ಎಂದು ಹಜಾರ ದಾಟಿ ಶಂಕರನ ಕೋಣೆಯ ಬಳಿಗೆ ಬಂದ. ಒಳಗೆ ಜಾನಕಿ, ಪಾರ್ವತಿ ಎಲ್ಲಾ ಇದ್ದರು. ಮೂಲೆಯಲ್ಲಿ ಭಯಭೀತಳಾಗಿ ಮದುವೆ ಹೆಣ್ಣು ನಿಂತಿದ್ದಳು.

ಗಿರೀಶ ನಾಡಿಯನ್ನು ಪರೀಕ್ಷಿಸಿದ. ಶಂಕರನ ಮೂಗಿನ ಬಳಿ ಕೈಯಿಟ್ಟ. ಬಿಸಿಯುಸಿರು ಕೈ ತಾಕಿತು. ಶಂಕರನಿಗೆ ಜ್ವರದ ತಾಪದಿಂದ ಪ್ರಜ್ಞೆ ತಪ್ಪಿತ್ತು. ಗಿರೀಶ ಹೆಂಡತಿಗೆ ಸೂಟುಕೇಸಿನಲ್ಲಿಟ್ಟಿರುವ ಔಷಧಿಗಳ ಚಿಕ್ಕ ಚೀಲವನ್ನು ತೆಗೆದುಕೊಂಡು ಬರಲು ಹೇಳಿದ. ಶಾಂತ ಎರಡು ನಿಮಿಷದಲ್ಲಿ ತಂದು ಕೊಟ್ಟಳು. ಗಿರೀಶ ಚೀಲದಿಂದ ಔಷಧಿಗಳನ್ನು ಹೊರತೆಗೆದು ಅದರೊಳಗಿನಿಂದ ಇಂಜಕ್ಷನ್ ಟ್ಯೂಬೊಂದನ್ನು ತೆಗೆದಿಟ್ಟುಕೊಂಡು ಮತ್ತೆ ಹೆಂಡತಿಯ ಕೈಗೆ ಸಿರಿಂಜನ್ನು ಕೊಟ್ಟು, ಬಿಸಿನೀರಲ್ಲಿ ಕುದಿಸಿ ತರಲು ಹೇಳಿದ.

ಪಾರ್ವತಿ ಗಿರೀಶನನ್ನು 'ಏನಾಗಿದೆಯಪ್ಪ ಶಂಕರನಿಗೆ?" ಎಂದು ಆತಂಕದಿಂದ ಕೇಳಿದಳು. ಪಾರ್ವತಿಗೆ 'ಜ್ವರ'ದಿಂದ ಭಯಂಕರ ಕಹಿ ಅನುಭವವಾಗಿದೆ ಮತ್ತೆ ಈಗ ಅದೇ ರಾಕ್ಷಸ ಜ್ವರ! ಅನಿಷ್ಟ ಕಲ್ಪನೆಗಳು ಪಾರ್ವತಿಯನ್ನು ಮತ್ತಷ್ಟು ಅಧೀರಳನ್ನಾಗಿ ಮಾಡಿವೆ. ನಾಗರತ್ನ ಬೆದರಿದ ಬೆಕ್ಕಿನಂತೆ ಜಾನಕಿಯ ಎದೆಯಲ್ಲಿ ಅಳುತ್ತಾ ಹುದುಗಿದ್ದಾಳೆ. ಚಂದ್ರಣ್ಣನೂ ಅಸಹಾಯಕನಂತೆ ನಿಂತಿದ್ದಾನೆ ಗಿರೀಶನ ಪಕ್ಕದಲ್ಲಿ!

ಶಾಂತ ಕುದಿಸಿದ ಸಿರಿಂಜನ್ನು ತಂದಿಟ್ಟಳು. ಗಿರೀಶ, ಶಂಕರನಿಗೆ ಸೂಜಿ ಮದ್ದು ಕೊಟ್ಟು ಮಿಕ್ಕವರಿಗೆಲ್ಲಾ ಹೇಳಿದ. "ನೀವೆಲ್ಲಾ ಇನ್ನು ಹೋಗಿ ಮಲಗಿ. ಭಯಪಡಬೇಕಾದ್ದೇನೂ ಇಲ್ಲ. ಬೆಳಿಗ್ಗೆಗೆ ಜ್ವರ ಕಡಿಮೆಯಾಗುತ್ತೆ. ಬೇರೆ ಬೇರೆ ಔಷಧಿ ನಾಳೆ ಬೆಳಿಗ್ಗೆ ತರಿಸಿದರಾಯಿತು. ಸುಮ್ಮನೆ ಎಲ್ಲರನ್ನೂ ಎಬ್ಬಿಸಿ ಹಗರಣ ಮಾಡಬೇಡಿ. ಎಂದು ಎಲ್ಲರನ್ನೂ ಎಚ್ಚರಿಸಿದ.

ನಾಗರತ್ನ, ಅತ್ತೆ, ನಂಗೆ ಭಯವಾಗುತ್ತೆ. ನಾನಿಲ್ಲಿ ಇರುವುದಿಲ್ಲ." ಎಂದಳು.

"ಇಲ್ಲಮ್ಮ ನಾನೂ ನಿನ್ನೊಂದಿಗೇ ಇರುತ್ತೇನೆ" ಎಂದು ಅವಳನ್ನು ಎಳೆದಪ್ಪಿಕೊಂಡಳು. ಜಾನಕಿ, ಶಾಂತ, ಗಿರೀಶ, ಚಂದ್ರಣ್ಣ ಹಜಾರದೊಳಕ್ಕೆ ಬಂದರು. ಸದ್ಯಕ್ಕೆ ಉಳಿದವರು ಯಾರೂ ಎದ್ದಿರಲಿಲ್ಲ. ಬೆಳಗಾದರೆ ಸಾಕೆಂದು ಹಾರೈಸುತ್ತಿದ್ದರು. ಯಾರಿಗೂ ಮತ್ತೆ ನಿದ್ದೆ ಹತ್ತಲಿಲ್ಲ.

* * *

ಬಂದ ನೆಂಟರೆಲ್ಲ ಹೊರಟುಹೋದರು. ಕೇಶವಯ್ಯ, ಮಹಾಲಕ್ಷ್ಮಮ್ಮ ಮಗಳನ್ನೊಪ್ಪಿಸಿ ಹೊರಟುಹೋದರು. ಅಳಿಯನಿಗೆ ಮೈ ಹುಷಾರಿಲ್ಲವೆಂದು ಮಾತ್ರ ತಿಳಿದಿತ್ತು. ಸ್ವಲ್ಪ ಆತಂಕವೆನಿಸಿದರೂ, ಅದನ್ನೇ ಹೆಚ್ಚಾಗಿ ಹಚ್ಚಿಕೊಳ್ಳಲಿಲ್ಲ.

ನಾಗರತ್ನಳಿಗೆ ತಾಯಿ ತಂದೆಯನ್ನ ಬೀಳ್ಕೊಡಬೇಕಾದರೆ ಗಂಟಲು ತುಂಬಿ ಬಂತು. ಕೇಶವಯ್ಯ ಮಗಳಿಗೆ ಚೆನ್ನಾಗಿ ಬುದ್ಧಿ ಹೇಳಿ ಅತ್ತೆ ಮನೆಯವರೊಂದಿಗೆ ಹೊಂದಿಕೊಂಡು ಬಾಳಬೇಕೆಂದು ಎಚ್ಚರಿಸಿ ಹೊರಟು ಹೋದರು. ಗಿರೀಶ ತಾನೂ ಹೊರಡುವುದಾಗಿ ಹೇಳಿದ. ಚಂದ್ರಣ್ಣ ಇನ್ನೊಂದೆರಡು ದಿನ ಉಳಿಯುವಂತೆ ಕೇಳಿಕೊಂಡ. ಶಂಕರನ ಜ್ವರ ಕಡಿಮೆಯಾಗಿದ್ದರೂ, ಮತ್ತೆ ಮರುಕಳಿಸಿದರೆ ಏನು ಮಾಡುವುದೆಂದು ಚಿಂತಿಸಿದರು. ಗಿರೀಶ ಧೈರ್ಯ ಹೇಳಿದ. "ಏನೂ ಆಗುವುದಿಲ್ಲ ಮಾವ. ನೀವು ಕೊಡುತ್ತಿರುವ ಮಾತ್ರೆಗಳನ್ನೇ ಮುಂದುವರೆಸಿ, ಸರಿಹೋಗುತ್ತೆ" ಎಂದು ಗಿರೀಶ ಹೇಳಿದ.

ನಾಗರತ್ನ ಯೋಚಿಸಿದಳು. ಮೊದಲ ರಾತ್ರಿಯೇ ತನ್ನ ಬದುಕಿನಲ್ಲಿ ಕರಾಳ ಕತ್ತಲೆಯ ರಾತ್ರಿಯಾಗಿತ್ತು. ಈ ರಾತ್ರಿ ಅವಳ ಬದುಕಿನ ಆಸೆಗಳ ಸಂಜೀವಿನಿಯಾಗಬೇಕಿತ್ತು. ಆದರೆ ಆ ಹಾಳು ಜ್ವರ ಯಾವ ಕಾರಣಕ್ಕೋ ತನ್ನ ಮೇಲೆ ಸೇಡು ತೀರಿಸಿಕೊಂಡಿತ್ತು!

ಗಂಡನ ಬಳಿಗೆ ಹೋಗುವುದಕ್ಕೆ ಹಿಂಜರಿಯುತ್ತಿದ್ದಳು. ಒಂದು ಕಡೆ ಸಂಕೋಚ ಮತ್ತೊಂದು ಕಡೆ ಅವ್ಯಕ್ತ ಭೀತಿ.

ಪಾರ್ವತಿ ಸೊಸೆಯ ಮೌನವನ್ನು ಅರ್ಥಮಾಡಿಕೊಂಡಳು. ಅದು ಮೌನವಲ್ಲ. ಹೆಪ್ಪುಗಟ್ಟಿದ ವ್ಯಥೆ. ಮೊದಲ ರಾತ್ರಿಯೇ ಹಾಗಾದದ್ದು ಪಾರ್ವತಿಗೆ ತೀರಾ ಕೆಡುಕೆನಿಸಿತು. ಎಳೆಯ ಜೀವನ. ಹಸುರು ಕನಸುಗಳನ್ನು ಒಡೆದ ಪಾಪದ ಭೀತಿ ಅವಳನ್ನು ಚುಚ್ಚಿತು.

'ರತ್ನ' ಎಂದು ಮೃದುವಾಗಿ ಕರೆದಳು ಪಾರ್ವತಿ.

ಅತ್ತೆಯ ಕರೆ ಕೇಳಿ ನಾಗರತ್ನ ಬಂದು, 'ಏನತ್ತೆ ಕರೆದಿರಾ?' ಎಂದು ಕೇಳಿದಳು. "ನೋಡಮ್ಮ, ನೀನು ನನಗೆ ಸೊಸೆಯಲ್ಲ ಮಗಳು. ನೆನ್ನೆ ದಿನದ ಘಟನೆಯಿಂದ ನನಗೆ ತುಂಬಾ ನೋವಾಗಿದೆ. ನನ್ನನ್ನು ಕ್ಷಮಿಸಿಬಿಡಮ್ಮ" ಎಂದು ಕೈಹಿಡಿದು ಕೇಳಿಕೊಂಡಳು.

"ನೀವೇನು ಮಾಡುತ್ತೀರಿ ಅತ್ತೆ? ಅದು ನನ್ನ ಕರ್ಮ" ಎಂದಳು. ಆ ಮಾತುಗಳಲ್ಲಿ ನಿರಾಶೆ, ಪಶ್ಚಾತ್ತಾಪದ ಭಾವನೆಯಿತ್ತು. ಪಾರ್ವತಿಗೆ ಅರ್ಥದ ವಾಸನೆ ಹತ್ತಿತ್ತು.

"ಹಾಗೆಲ್ಲಾ ಹೇಳಬೇಡ ರತ್ನ. ಕರ್ಮ ಗಿರ್ಮ ಅಂತ ನೀನು ಭಾವಿಸಿಕೊಂಡರೆ ನಿನ್ನ ಕರ್ಮಕ್ಕೆ ನಾನೇ ಹೊಣೆಯೇನೋ ಅನಿಸುತ್ತೆ. ನನ್ನ ಮಗನಾಗಿ ಹುಟ್ಟಿದ್ದಕ್ಕೆ ನಾನು ಪಶ್ಚಾತ್ತಾಪಪಡಬೇಕಾಗಿದೆ" ಎಂದು ಕಣ್ಣೊರೆಸಿಕೊಂಡು ಹೇಳಿದಳು.

"ಇಲ್ಲ ಅತ್ತೆ. ಎಂದೂ ಆ ಮಾತನ್ನು ಹೇಳುವುದಿಲ್ಲ. ನಿಮ್ಮ ಮನಸ್ಸಿಗೆ ನೋವಾಗುವಂತೆ ಏನನ್ನೂ ಆಡುವುದಿಲ್ಲ."

ಅವಳ ಮಾತುಗಳಿಗೆ ಪಾರ್ವತಿಯ ಎದೆ ತುಂಬಿ ಬಂತು. ಕಂಬನಿಯೊಡೆದಿದ್ದರೂ ಮುಖದಲ್ಲಿ ನಗು ಮೂಡಿತು. ಬಿಗಿಯಾಗಿ ಸೊಸೆಯನ್ನು ಅಪ್ಪಿಕೊಂಡು ತಲೆ ನೇವರಿಸಿದರು. ಹೃದಯಕ್ಕೆ ಹತ್ತಿಸಿಕೊಂಡೇ, ಅವಳ ಬೆನ್ನು ತಡವುತ್ತಾ, "ರತ್ನ ನನಗಾಗಿ ಒಂದು ಉಪಕಾರ ಮಾಡ್ತೀಯಾ?" ಎಂದು ಪ್ರಾರ್ಥಿಸುವ ದನಿಯಲ್ಲಿ ಕೇಳಿದರು.

"ಹುಂ!" ಎಂದಳು ರತ್ನ.

"ನನ್ನ ಮಗನನ್ನು ನೀನು ಮಗುವಿನಂತೆ ಕಾಣಬೇಕು. ಅವನು ಮುಗ್ಧ ಅರಿಯದವ. ಸ್ವಭಾವಗಳ ವಕ್ರತೆ ಅವನಿಗೆ ತಿಳಿಯುವುದಿಲ್ಲ. ಅವನು ಹೇಗೇ ವರ್ತಿಸಲಿ, ನೀನು ಮನಸ್ಸಿಗೆ ಹಚ್ಚಿಕೊಳ್ಳದೆ ಅವನನ್ನು ಆದರಿಸುತ್ತೇನೆಂದು ಮಾತುಕೊಡು.' ಎಂದು ಬೇಡಿದಳು.

ರತ್ನ, ಪಾರ್ವತಿಯ ಅಪ್ಪಣೆಯಿಂದ ಬಿಡಿಸಿಕೊಂಡು, ಅತ್ತೆಯ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ಅವಳ ಎರಡೂ ಕಣ್ಣುಗಳು ವಾತ್ಸಲ್ಯದ ಮಡುವುಗಳಂತಯೆ ಇದ್ದವು. ರತ್ನಳಿಗೂ ತಡೆಯಲಾಗಲಿಲ್ಲ. ಅವಳೂ ಅತ್ತಳು.

ಅತ್ತೆಯನ್ನು ಯಾವುದೋ ಚಿಂತೆ ಕ್ರೂರವಾಗಿ ಬಾಧಿಸುತ್ತಿದೆ. ಇಲ್ಲವಾದಲ್ಲಿ ಈ ಸಣ್ಣ ವಿಚಾರಕ್ಕಾಗಿ ಇಷ್ಟೊಂದು ಪರಿತಪಿಸುವ ಅವಶ್ಯಕತೆಯಿರಲಿಲ್ಲ – ಎಂದು ಯೋಚಿಸಿದಳು.

"ಅತ್ತೆ, ನೀವು ನೆಮ್ಮದಿಯಾಗಿರಿ. ನನ್ನ ಗಂಡನನ್ನು ನಾನು ನೋಡಿಕೊಳ್ಳಲಾರೆನೆ?" ಎಂದಳು.

"ಸಾಕು ರತ್ನ ಅದೊಂದು ಭರವಸೆ ನನಗಾದರೆ, ನೆಮ್ಮದಿಯಿಂದ ಸಾಯುತ್ತೇನೆ. ಈ ಕ್ರೂರ ಪ್ರಪಂಚದಲ್ಲಿ ಏನೂ ಅರಿಯದ ನನ್ನ ಮಗ ಹೇಗೆ ಬದುಕುತ್ತಾನೆಂಬುದೇ ನನ್ನನ್ನು ಬಾಧಿಸುವ ಚಿಂತೆಯಾಗಿತ್ತು. ನೀನು ಆ ಮಾತು ನಡೆಸಿಕೊಟ್ಟರೆ ಸಾಕು" ಎಂದಳು.

ಚಿಕ್ಕ ವಯಸ್ಸಿನ ರತ್ನಳಲ್ಲಿದ್ದ ದೊಡ್ಡ ಹೃದಯ ಪಾರ್ವತಿಗೆ ಅದ್ಭುತವೆನಿಸಿತು. ತಮ್ಮ ಪುಣ್ಯದಿಂದಲೇ ಈ ರೀತಿಯ ಸೊಸೆ ಸಿಕ್ಕಿರುವಳೆಂದು ಸಮಾಧಾನಪಟ್ಟುಕೊಂಡಳು. ರತ್ನ, ಗಂಡನಿಗೆ ಹಾಲು ತೆಗೆದುಕೊಂಡು ಹೋಗಿ ಕೊಡುತ್ತೇನೆಂದು ಹೊರಟಳು.

ಶಂಕರನ ಮನಸ್ಸು ಕುದಿಯುತ್ತಿತ್ತು. ಇವರೆಲ್ಲಾ ತನ್ನನ್ನು ಬಲಿಪಶುವಿನಂತೆ ಮಾಡಿಬಿಟ್ಟಿದ್ದಾರೆಂದು ಭಾವಿಸಿದ್ದ. ಇವರಿಂದ ತಪ್ಪಿಸಿಕೊಂಡು ಓಡಿಹೋಗಬೇಕು. ಇಲ್ಲವಾದರೆ ಮತ್ತಷ್ಟು ಬಿಗಿಯಾದ ಸಂಕೋಲೆ ತೊಡಿಸುತ್ತಾರೆ. ಆದರೆ ಒಮ್ಮೆ ತಪ್ಪಿಸಿಕೊಂಡು ಹೋದವನು ಮತ್ತೇಕೆ ಬಂದು ಇಲ್ಲಿ ಸಿಕ್ಕಿಕೊಂಡೆನೋ ಎಂಬುದಕ್ಕೆ ಉತ್ತರ ದೊರೆಯಲಿಲ್ಲ... ಯೋಚಿಸುತ್ತಿದ್ದಂತೆ ಅನಾಯಾಸವಾಗಿ ನಾಗರತ್ನ ಕಣ್ಮುಂದೆ ಬಂದಳು. ಅವಳ ನೆನಪಿನಿಂದ ಪ್ರೀತಿ ಉಕ್ಕಲಿಲ್ಲ ಬದಲಾಗಿ ಕನಿಕರವೆನಿಸಿತು. ಅವಳು ಬಯಸುವುದನ್ನು ತಾನು ಕೊಡಲಾರೆನಿಸಿತು. ಅವಳಿಗೆ ಹೇಳಿಬಿಡಬೇಕು.... ಇಬ್ಬರೂ ಒಟ್ಟಿಗೆ ಬಾಳಲಾರೆವೆಂದು... ಎಂದುಕೊಳ್ಳುತ್ತಿದ್ದಂತೆ.

"ಒಳಗೆ ಬರಲೇ?" ಎಂದು ಕೇಳುತ್ತಾ ನಾಗರತ್ನ ಕೈಲಿ ಹಾಲಿನ ಲೋಟ ಹಿಡಿದು ಬಂದಳು.

ಶಂಕರ 'ಆ' ಅನ್ನಲಿಲ್ಲ, 'ಊಂ' ಅನ್ನಲಿಲ್ಲ. ಬದಲಾಗಿ ಅವಳತ್ತ ಭಾವಹೀನ ದೃಷ್ಟಿ ಬೀರಿದ.

"ಯಾಕೆ ಹಾಗೆ ಬೆಪ್ಪಾಗಿ ನೋಡುತ್ತೀರಿ?" – ಎಂದು ಪ್ರಶ್ನಿಸಿದಳು.

"ನಿನ್ನ ಪರಿಚಯವೇನಾದರೂ ನನಗಿದೆಯೇ ಎಂದು ಯೋಚಿಸುತ್ತಿದ್ದೀನಿ?" ಎಂದ.

"ಏನು ನನ್ನ ಪರಿಚಯವೇ?...." ಆಶ್ಚರ್ಯದಿಂದ ಕೇಳಿದಳು, ಕಣ್ಣರಳಿಸಿ.

"ಹೌದು" ಎಂದ.

"ಎರಡು ಮೂರು ದಿವಸದಿಂದಲ್ಲವೇ ನನ್ನ ಪರಿಚಯ ನಿಮಗಿರುವುದು?"

"ಈ ಪರಿಚಯವನ್ನಲ್ಲ. ಇದಕ್ಕೂ, ತುಂಬಾ ತುಂಬಾ ಮೊದಲಿಗೆ ನಿನ್ನನ್ನು ಎಲ್ಲೋ ಕಂಡಿದ್ದೇನೆ. ಅದು ನೆನಪಿಗೆ ಬರುತ್ತಿಲ್ಲ" ಎಂದ.

"ಬಹಳ ಚೆನ್ನಾಗಿದೆ.... ತುಂಬಾ ವಿಚಿತ್ರವಾಗಿ ಮಾತಾಡುತ್ತಿದ್ದೀರಲ್ಲ? ಎಂದಳು ನಗುತ್ತಾ. "ನಿನಗರ್ಥವಾಗೊಲ್ಲ. ಅಲ್ಲಿಂದ ತಪ್ಪಿಸಿಕೊಂಡು ಬಂದರೆ ಇಲ್ಲಿಯೂ ನೀನು ಗಂಟುಬಿದ್ದಿದ್ದೀ" ಎಂದು ಅಪವಾದದ ದನಿಯಲ್ಲಿ ಹೇಳಿದ.

ರತ್ನಳಿಗೆ ಗಂಡನ ಅಸಂಬದ್ಧವಾದ ಮಾತುಗಳು ವಿಚಿತ್ರವೆನಿಸಿದರೂ, ಅವನ ಮಾತಿನಲ್ಲಿ 'ತಾನು ಬಂದದ್ದು ಇಷ್ಟವಿಲ್ಲ' ಅನ್ನುವ ಅರ್ಥ ಹೊಳೆದಾಗ ದುಃಖವಾಯಿತು.

"ಅಂದರೆ ನಾನು ನಿಮಗೆ ಬೇಡವಾಗಿದ್ದೇನೇ?" ಎಂದು ಬಿಕ್ಕಿ ಬಿಕ್ಕಿ ಅತ್ತಳು.

"ಇಷ್ಟ ಅನಿಷ್ಟಗಳ ಪ್ರಶ್ನೆಯೇ ಇಲ್ಲ. ಯಾರೊಬ್ಬರೂ ನನಗೆ ಬೇಕಂತಲೂ ಇಲ್ಲ ಬೇಡವೆಂತಲೂ ಇಲ್ಲ. ನನ್ನ ಅವಧಿ ಮುಗಿಯುವವರೆಗೆ ನಾನು ನಿಮ್ಮೊಂದಿಗೆ ಇರಲೇಬೇಕು" ಎಂದು ಮಾತು ಮುಗಿಸುವಂತೆ ಹೇಳಿದ.

ನಾಗರತ್ನ ಶಂಕರನ ಬಳಿಗೆ ಸರಿದಳು. "ಹೀಗೆಲ್ಲಾ ಮಾತಾಡಬೇಡಿ. ನೀವು ನನಗೋಸ್ಕರ, ನಾನು ನಿಮಗೋಸ್ಕರ ಬದುಕಲೇ ಬೇಕು." ಎಂದಳು.

ಶಂಕರ ಗಹಗಹಿಸಿ ನಕ್ಕ. "ಯಾರು ಯಾರಿಗೋಸ್ಕರವೂ ಅಲ್ಲ. ಅದು ನಿನ್ನ ಹುಚ್ಚುತನ, ಹಾಗೆ ಭಾವಿಸೋದು."

"ಅದು ತಪ್ಪು ನಿಮ್ಮ ವಾದ ಸರಿ ಅಲ್ಲ. ನೀವು ನನಗಾಗಿ ಇಲ್ಲದಿದ್ದರೂ ನಾನು ನಿಮಗಾಗಿ ಇರುತ್ತೇನೆ" ಎಂದಳು ದೃಢವಾಗಿ.

"ಒಂದು ಮಾತು ಹೇಳುತ್ತೇನೆ, ಸುಮ್ಮನೆ ನನಗೇಂತ ನೀನು ನಿನ್ನ ಬದುಕನ್ನು ಹಾಳು ಮಾಡಿಕೊಳ್ಳಬೇಡ. ನಿನಗೂ ನನಗೂ ಸಂಬಂಧವೇ ಇಲ್ಲ. ನೀನು ಹೊರಟುಹೋಗು" ಎಂದ ಗದ್ದರಿಸುತ್ತಾ.

ಇದಕ್ಕಿದ್ದಂತೆ ಶಂಕರನಲ್ಲಿ ಆವೇಶ ಮೂಡುತ್ತಿತ್ತು. ನಾಗರತ್ನ ನಡುಗಿದಳು. ಆದರೂ ಕಾಲು ಹಿಡಿದು ಕೇಳಿಕೊಳ್ಳೋಣವೆಂದು ಕೈ ಚಾಚಿದಳು. ಸರಕ್ಕನೆ ಕಾಲೆಳೆದುಕೊಂಡು, "ಹೊರಟು ಹೋಗು. ಇಲ್ಲಿರಬೇಡ" ಎಂದು ಅಬ್ಬರಿಸಿದ.

ಇವನ ಅಬ್ಬರಕ್ಕೆ ಮನೆಯವರೆಲ್ಲಾ ಓಡಿಬಂದರು. ನಾಗರತ್ನ ಅಳುತ್ತಾ ನಡುಗುತ್ತಾ ದೂರದಲ್ಲಿ ನಿಂತಿದ್ದಳು. ಪಾರ್ವತಿ, ಚಂದ್ರಣ್ಣನಿಗೆ ಸನ್ನಿವೇಶ ಅರ್ಥವಾಯಿತು. ಶಂಕರ ಹಸಿದ ಹುಲಿಯಂತೆ ಅಬ್ಬರಿಸಿ, ಹಾವಿನಂತೆ ಬುಸುಗುಟ್ಟುತ್ತಿದ್ದ. ಉರಿವ ಕೆಂಡದುಂಡೆಗಳಂತೆ ಕಂಡವು ಕಣ್ಣುಗಳು. ಚಂದ್ರಣ್ಣನಿಗೆ ವಿಪರೀತ ಸಿಟ್ಟು ಬಂತು. ಮಗನ ಕೆನ್ನೆಗೆ ಛಳೀರೆಂದು ಏಟು ಕೊಟ್ಟ. 'ಅಬ್ಬ!' ಎಂದು ಶಂಕರ ಕುಂಯ್‌ಗುಟ್ಟಿ ಹುಲಿಯಂತೆ ಮಂಚದಿಂದ ಹಾರಿದ.

ಚಂದ್ರಣ್ಣ ಅವನನ್ನು ಹಿಡಿಯಲು ಪ್ರಯತ್ನಿಸಿದ. ಆದರೆ ಮುದಿಕೈಗಳಿಗೆ ಶಂಕರನು ಸಿಗಲಿಲ್ಲ. "ನೀವೆಲ್ಲಾ ಹೊರಟುಹೋಗಿ.... ಹೊರಟುಹೋಗಿ.... ನನ್ನನ್ನು ಸಾಯಿಸಬೇಡಿ" ಎಂದು ಭಯಂಕರವಾಗಿ ರೋದಿಸಿದ. ರತ್ನ ಅತ್ತು ಅತ್ತು, ನೀರು ಬತ್ತಿ, ಬಿಕ್ಕುತ್ತಿದ್ದಳು. ಶಾಂತ ಅತ್ತಿಗೆಯ ಆಸರೆಗೆ ಬಂದಳು. ಮೆಲ್ಲನೆ ಅವಳನ್ನು ಅಲ್ಲಿಂದ ಸಾಗಿಸಿದಳು. ನಿಂತು ನೋಡುತ್ತಿದ್ದ ಪಾರ್ವತಿ ನಿಂತಲ್ಲಿಯೇ ಕೆಳಗೆ ಕುಸಿದಳು. ರತ್ನ ಶಾಂತರಿಗೆ ಗಾಬರಿಯಾಯಿತು. ಚಂದ್ರಣ್ಣನೊಬ್ಬನಿಗೆ ಇಷ್ಟೆಲ್ಲವನ್ನೂ ಎದುರಿಸಲು ಸಾಧ್ಯವಾಗಲಿಲ್ಲ. ಶಂಕರನನ್ನು ನೋಡಿಕೊಳ್ಳಬೇಕಿತ್ತು. ಅವನು ಹಾಳಾದರಾಗಲೀ ಎಂದು ಮೊದಲಿಗೆ ಅಂದುಕೊಳ್ಳುತ್ತಿದ್ದಂತೆ ಈಗ ಅಂದುಕೊಳ್ಳಲು ಸಾಧ್ಯವಿಲ್ಲ. ಶಂಕರನನ್ನು ನೋಡಿಕೊಳ್ಳಬೇಕಿತ್ತು. ಅವನು ಹಾಳಾದರಾಗಲೀ ಎಂದು ಮೊದಲಿಗೆ ಅಂದುಕೊಳ್ಳುತ್ತಿದ್ದಂತೆ ಈಗ ಅಂದುಕೊಳ್ಳಲು ಸಾಧ್ಯವಿಲ್ಲ. ಶಂಕರನ ಬದುಕನ್ನು ಬೆಸೆದುಕೊಂಡ ಜೀವವೊಂದಿತ್ತು. ಅದಕ್ಕಾಗಿಯಾದರೂ ಶಂಕರನನ್ನು ತಡೆಯಬೇಕಿತ್ತು. ಚಂದ್ರಣ್ಣ ಶಾಂತಳಿಗೆ "ಶಾಂತ ಹೋಗು, ಎದುರುಮನೆ ಅಪ್ಪಾಸ್ವಾಮಿಯನ್ನು ಕರೆದು ಬಾ" ಎಂದ. ಶಾಂತ ಓಡಿದಳು.

ಅಪ್ಪಾಸ್ವಾಮಿ ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತು ನಶ್ಯವೇರಿಸುತ್ತಿದ್ದ. ಶಾಂತ ಹೋದ ಕ್ಷಣಕ್ಕೆ ಸರಿಯಾಗಿ ಒಂದು ಸೀನು ಸೀನಿದ."

"ಮಾವ, ಅಪ್ಪ ಕರೀತಿದ್ದಾರೆ. ಅರ್ಜೆಂಟ್ ಬರಬೇಕಂತೆ" ಎಂದಳು.

"ಏನಮ್ಮ ಅಂಥ ಅರ್ಜೆಂಟ್ ಕೆಲಸ ನಿಮ್ಮಪ್ಪನಿಗೆ?" ಎಂದು ಕೇಳಿದ.

"ಬೇಗ ಬನ್ನಿ ಮಾವ, ಅಣ್ಣನಿಗೆ ಏನೋ ಆಗಿದೆ" ಎಂದು ಆತುರ ಪಡಿಸಿದಳು.

"ನೀನು ನಡಿ ಶಾಂತಮ್ಮ, ಈಗಲೇ ಬಂದ್ಬಿಟ್ಟೆ" ಎಂದು ಅವಳನ್ನು ಕಳಿಸಿದ. ಅವಳ ಮುಖವಲ್ಲಿದ್ದ ಭಯ, ಆತುರಗಳನ್ನು ಗಮನಿಸಿದ ಅಪ್ಪಾಸ್ವಾಮಿ. ಏನು ಜರೂರು ಕೆಲಸಾನೋ ಅಂತ ಭಾವಿಸಿ ಒಳಗೆ ಹೋಗಿ ಟವಲೊಂದನ್ನು ಹೆಗಲ ಮೇಲೆ ಹಾಕಿಕೊಂಡು ಶಾಂತಳನ್ನು ಅನುಸರಿಸಿದ. ಶಾಂತ ಮನೆ ಪ್ರವೇಶಿಸುವಷ್ಟರಲ್ಲಿ ಅಪ್ಪಾಸ್ವಾಮಿ ಹಿಂದಿದ್ದ.

"ಅಪ್ಪ, ನೋಡು ಮಾವ ಬಂದರು" ಎಂದು ಶಾಂತ.

"ಅಪ್ಪಣ್ಣ, ಸ್ವಲ್ಪ ಬೇಗ ಬಾ" ಎಂದು ಒಳಗಿಂದಲೇ ಚಂದ್ರಣ್ಣ ಕಿರುಚಿದ. ಒಂದೇ ಹೆಜ್ಜೆಯಲ್ಲಿ ಅಪ್ಪಾಸ್ವಾಮಿ ಚಂದ್ರಣ್ಣ ಕರೆದ ಎಡೆಗೆ ಬಂದ. ಶಂಕರ ಬಿಡಿಸಿಕೊಳ್ಳಲು ಕೊಸರಾಡುತ್ತಿದ್ದಾನೆ. ಚಂದ್ರಣ್ಣನ ಮುದಿಕೈಗಳಲ್ಲಿ ಅಷ್ಟೊಂದು ಬಲವಿದ್ದುದೇ ಆಶ್ಚರ್ಯವಾಗಿತ್ತು.

"ಇಲ್ಲಿ ಬಂದು ಇವನನ್ನು ಸ್ವಲ್ಪ ಹಿಡಿ?" ಎಂದು ಚಂದ್ರಣ್ಣ ಕರೆದ.

ಅಪ್ಪಾ ಸ್ವಾಮಿ ಚಂದ್ರಣ್ಣನ ಕೈ ಬಿಡಿಸಿ ತಾನು ಹಿಡಿದುಕೊಳ್ಳಬೇಕೆನ್ನುಷ್ಟರಲ್ಲಿ ಶಂಕರ ತಪ್ಪಿಸಿಕೊಂಡು ಹಜಾರದಲ್ಲೆಲ್ಲಾ ಓಡಾಡಿದ. ತಲೆ ಕಿತ್ತುಕೊಂಡಿದ್ದ. ಕಟಕಟನೆ ಹಲ್ಲು ಕಡಿಯುತ್ತಿದ್ದ. ಅವನ ರೋಷಾವೇಶವನ್ನು ನೋಡಿ ಯಾರಿಗೂ ಧೈರ್ಯವಾಗಲಿಲ್ಲ. ಅವನನ್ನು ಸಮೀಪಿಸಲು. "ಬೇಡ ಬೇಡಾ. ನನ್ನ ಹತ್ತಿರ ಬರಬೇಡಿ" ಎಂದು ಕೂಗುತ್ತಿದ್ದ. ಅಪ್ಪಾಸ್ವಾಮಿ ಸುಮ್ಮನೆ ನಿಂತಿದ್ದವನು ಗಬಕ್ಕನೆ ಹಾರಿ ಅವನ ಕುತ್ತಿಗೆಯ ಕಾಲರನ್ನು ಹಿಡಿದ. ತಕ್ಷಣ ಶಂಕರ ಅಂಗಿಗೆ ಕೈಹಾಕಿ ಪರಪರನೆ ಹರಿದುಹಾಕಿದ. ಶಂಕರನ ಮೇಲೆ ದೆವ್ವ ಬಂದಂತೆಯೇ ಇತ್ತು. ಚಂದ್ರಣ್ಣನೂ ಅಪ್ಪಾಸ್ವಾಮಿಯ ಸಹಾಯಕ್ಕೆ ಬಂದ. ಇಬ್ಬರೂ ಸೇರಿ ಶಂಕರನನ್ನು ಹಗ್ಗಗಳಿಂದ ಬಿಗಿದರು. ವಿಲಿವಿಲಿ ಒದ್ದಾಡಿದ, ಕೈಬಿಡಿಸಿಕೊಳ್ಳಲು ಹೆಣಗಾಡಿದ, ಕೊನೆಗೆ ಸಾಧ್ಯವಾಗದೆ ಅಳತೊಡಗಿದ.

ಶಂಕರನನ್ನು ಕಟ್ಟಿಹಾಕಿ ಚಂದ್ರಣ್ಣ ಪಾರ್ವತಿ ಬಿದ್ದಿದ್ದ ಎಡೆಗೆ ಬಂದ. ರತ್ನ, ಶಾಂತ 'ಅಮ್ಮ, ಅಮ್ಮ' ಎಂದು ಕೂಗುತ್ತಿದ್ದರು. ಅವಳಿಗೆ ಹೋದ ಪ್ರಜ್ಞೆ ಮರಳಿರಲಿಲ್ಲ. ಶಾಂತಳಿಗೆ ನೀರು ತರಲು ಹೇಳಿದ ಚಂದ್ರಣ್ಣ.

ಮುಖದ ಮೇಲೆ ನೀರು ಚಿಮುಕಿಸಿ ಗಾಳಿ ಬೀಸಿದರು. ಐದು ನಿಮಿಷಗಳಾದರೂ ಪ್ರಜ್ಞೆ ಮರಳಲಿಲ್ಲ. ಚಂದ್ರಣ್ಣ ಪಾರ್ವತಿಯನ್ನು ಹಿಡಿದು ಅಲುಗಿಸಿ "ಪಾರ್ವತಿ, ಪಾರ್ವತಿ" ಎಂದು ಎಷ್ಟು ಕರೆದರೂ ಕದಲಲಿಲ್ಲ. ಚಂದ್ರಣ್ಣನ ಪ್ರಾಣವೇ ಹಾರಿಹೋದಂತಾಯಿತು. "ಅಪ್ಪಣ್ಣ, ನೋಡು, ನನ್ನ ಪಾರ್ವತಿಗೇನಾಗಿದೇಂತ!" ಎಂದು ಕೇಳಿದ ಎಳೆಯ ಮಗುವಿನಂತೆ.

ಅಪ್ಪಸ್ವಾಮಿ ಬಂದು, "ಎಲ್ಲಿ ದಾರಿ ಬಿಡು ಚಂದ್ರಣ್ಣ, ಏನಾಗಿದೆಯೋ ನೋಡ್ತೀನಿ" ಎಂದು ಪಾರ್ವತಿಯ ಬದಿಗೆ ಕುಳಿತುಕೊಂಡ. ಕೈಹಿಡಿದು ನಾಡಿ ನೋಡಿದ. ಗಾಬರಿಯಿಂದ ಅಂಗಾಲುಗಳನ್ನು ಉಜ್ಜಿದ. ಒಂದು ನಿಮಿಷ ನೋಡುತ್ತಿರು ಚಂದ್ರಣ್ಣ. ಈಗಲೇ ಬಂದುಬಿಟ್ಟೆ" – ಎಂದು ಆತುರವಾಗಿ ಎದ್ದು ಓಡಿದ.

ಐದು ನಿಮಿಷಗಳಲ್ಲಿ ಅಪ್ಪಾಸ್ವಾಮಿ ಯಾವುದೋ ಸೊಪ್ಪನ್ನು ಹಿಡಿದು ತಂದ. ಎಲೆಗಳನ್ನು ಬಿಡಿಸಿ ಅಂಗೈ ಮೇಲೆ ಇಟ್ಟುಕೊಂಡು ಚೆನ್ನಾಗಿ ಉಜ್ಜಿ ರಸ ತೆಗೆದು

ಮೂಗಿನೊಳಕ್ಕೆ ಬಿಟ್ಟ, ಸ್ವಲ್ಪ ಸೊಪ್ಪನ್ನು ಚಂದ್ರಣ್ಣನ ಕೈಗೆ ಕೊಟ್ಟು ಅಂಗಾಲ ಮೇಲೆ ಉಜ್ಜಲು ಹೇಳಿದ ಚಂದ್ರಣ್ಣ ಹಾಗೇ ಮಾಡಿದ.

ಶಾಂತಳಿಗೆ ಒತ್ತರಿಸಿ ಬರುತ್ತಿರುವ ದುಃಖವನ್ನು ತಡೆಯಲಾಗಲಿಲ್ಲ. "ಅಪ್ಪ, ಇನ್ನೂ ಯಾಕೆ ಅಮ್ಮ ಏಳುತ್ತಿಲ್ಲ" ಎಂದಳು. ಯಾರೂ ಅವಳ ಮಾತನ್ನು ಕೇಳಿಸಿಕೊಳ್ಳಲಿಲ್ಲ.

ನಾಗರತ್ನಳ ವೇದನೆಗಂತೂ ಕೊನೆಯೇ ಇಲ್ಲವಾಯಿತು. ಅತ್ತೆಗಾಗಿ ಅಳುವುದೇ ಇಲ್ಲ. ತನ್ನ ಬದುಕನ್ನೇ ಕ್ರೂರವಾಗಿ ಕೊಲ್ಲುತ್ತಿರುವ ಗಂಡನಿಗಾಗಿ ಅಳುವುದೇ? ಒಂದೂ ಹೊಳೆಯಲಿಲ್ಲ. ಅಳುವುದಕ್ಕೆ ಕಣ್ಣೀರು ಬತ್ತಿತ್ತು. ಬೆಚ್ಚಿ ಬೆಚ್ಚಿ ಕಟ್ಟಿಹಾಕಿದ ಗಂಡನ ಕಡೆ ನೋಡಿದಳು.

ಅಪ್ಪಾಸ್ವಾಮಿ ಕಾದು ನೋಡಿದ. ಪಾರ್ವತಿ ಏಳುವಂತೆ ಕಾಣಲಿಲ್ಲ. ಕಾಲುಗಳನ್ನು ಮುಟ್ಟಿ ನೋಡಿದ. ಮಂಜಿನಂತೆ ತಣ್ಣಗೆ ಕೊರೆಯುತ್ತಿದ್ದವು. ಎದ್ದು ಚಂದ್ರಣ್ಣನನ್ನು ಹೊರಕ್ಕೆ ಕರೆದ. ಚಂದ್ರಣ್ಣ ಮಗುವಿನಂತೆ ಅವನನ್ನು ಅನುಸರಿಸಿದ. ಅಪ್ಪಾಸ್ವಾಮಿಯ ಮುಖ ಸಪ್ಪಗಾಗಿತ್ತು.

"ಚಂದ್ರಣ್ಣ, ಪಾರ್ವತಕ್ಕನ ಕಥೆ ಮುಗೀತು. ಮುಂದಿನ ವ್ಯವಸ್ಥೆ ಮಾಡು" ಎಂದಷ್ಟೇ ಹೇಳಿ ಬೇಗನೆ ಅಲ್ಲಿ ನಿಲ್ಲದೆ ಹೊರಟುಹೋದ.

ಹಿಂದಿನಿಂದ "ಅಪ್ಪಣ್ಣ, ಅಪ್ಪಣ್ಣ" ಎಂದು ಚಂದ್ರಣ್ಣ ಕೂಗುತ್ತಿದ್ದರೂ ಅಪ್ಪಾಸ್ವಾಮಿ ನಿಲ್ಲಲಿಲ್ಲ.

ಕಣ್ಣು ಕತ್ತಲಾಯಿತು. ತಡವರಿಸುತ್ತಾ ಬಂದು ಪಾರ್ವತಿಯ ಮೇಲೆ ಬಿದ್ದು ರೋದಿಸತೊಡಗಿದ. ಚಂದ್ರಣ್ಣ.

ರತ್ನ ಶಾಂತರಿಗೆ ಈಗ ಅರ್ಥವಾಯಿತು.

ಇಡೀ ಮನೆಯಲ್ಲಿ ಸೂತಕದ ವಾತಾವರಣ ನೆಲೆಸಿತು.

ಮಧ್ಯೆ ಮಧ್ಯೆ ಅಮ್ಮ, ಅಮ್ಮ ಎಂದು ಅಳುತ್ತಿದ್ದ ಶಾಂತಳ ದನಿಯೊಂದಿಗೆ ಶಂಕರನ ವಿಕಟ ನಗೆ ಕೇಳಿ ಬರುತ್ತಿತ್ತು.

ಅಪ್ಪಾಸ್ವಾಮಿ ಕಾದು ನೋಡಿದ. ಪಾರ್ವತಿ ಏಳುವಂತೆ ಕಾಣಲಿಲ್ಲ. ಕಾಲುಗಳನ್ನು ಮುಟ್ಟಿ ನೋಡಿದ. ಮಂಜಿನಂತೆ ತಣ್ಣಗೆ ಕೊರೆಯುತ್ತಿದ್ದವು. ಎದ್ದು ಚಂದ್ರಣ್ಣನನ್ನು ಹೊರಕ್ಕೆ ಕರೆದ. ಚಂದ್ರಣ್ಣ ಮಗುವಿನಂತೆ ಅವನನ್ನು ಅನುಸರಿಸಿದ. ಅಪ್ಪಾಸ್ವಾಮಿಯ ಮುಖ ಸಪ್ಪಗಾಗಿತ್ತು.

"ಚಂದ್ರಣ್ಣ, ಪಾರ್ವತಕ್ಕನ ಕತೆ ಮುಗೀತು. ಮುಂದಿನ ವ್ಯವಸ್ಥೆ ಮಾಡು" ಎಂದಷ್ಟೇ ಹೇಳಿ ಬೇಗನೆ ಅಲ್ಲಿ ನಿಲ್ಲದೆ ಹೊರಟುಹೋದ.

ಹಿಂದಿನಿಂದ "ಅಪ್ಪಣ್ಣ, ಅಪ್ಪಣ್ಣ" ಎಂದು ಚಂದ್ರಣ್ಣ ಕೂಗುತ್ತಿದ್ದರೂ ಅಪ್ಪಾಸ್ವಾಮಿ ನಿಲ್ಲಲಿಲ್ಲ.

ಕಣ್ಣು ಕತ್ತಲಾಯಿತು. ತಡವರಿಸುತ್ತಾ ಬಂದು ಪಾರ್ವತಿಯ ಮೇಲೆ ಬಿದ್ದು ರೋದಿಸತೊಡಗಿದ ಚಂದ್ರಣ್ಣ.

ರತ್ನ ಶಾಂತರಿಗೆ ಈಗ ಅರ್ಥವಾಯಿತು.

ಇಡೀ ಮನೆಯಲ್ಲಿ ಸೂತಕದ ವಾತಾವರಣ ನೆಲೆಸಿತು.

ಮಧ್ಯೆ ಮಧ್ಯೆ ಅಮ್ಮ, ಅಮ್ಮ ಎಂದು ಅಳುತ್ತಿದ್ದ ಶಾಂತಳ ದನಿಯೊಂದಿಗೆ ಶಂಕರನ ವಿಕಟ ನಗೆ ಕೇಳಿ ಬರುತ್ತಿತ್ತು.

ಅಪ್ಪಾಸ್ವಾಮಿಯೇ ಮುಂದೆ ನಿಂತು ಚಂದ್ರಣ್ಣನಿಂದ ಕೆಲಸಗಳನ್ನು ಮಾಡಿಸಿದ.

ಗಿರೀಶ, ಜಾನಕಿ, ಪದ್ಮ ಬರುವಷ್ಟು ಹೊತ್ತಿಗೆ ಶವಸಂಸ್ಕಾರ ಮುಗಿದು ಹೋಗಿತ್ತು. ಬೀಗರೂ ಬಂದಿದ್ದರು.

ಮಗಳ ದುರಾದೃಷ್ಟಕ್ಕೆ ಮರುಗಿದರು.

* * *

ಶಂಕರನನ್ನು ಮನೆಯಲ್ಲಿರಿಸಿಕೊಳ್ಳುವುದು ಅಪಾಯವೆನಿಸಿತು. ದಿನದಿನಕ್ಕೆ ಅವನ ಹುಚ್ಚು ಉಲ್ಬಣಿಸುತ್ತಿತ್ತು. ತಿಂಡಿ ಕೊಟ್ಟರೆ ಎಸೆದುಬಿಡುತ್ತಿದ್ದ. ಬಟ್ಟೆ ಉಡಿಸಿದಷ್ಟೇ ವೇಗವಾಗಿ ಕಿತ್ತೆಸೆಯುತ್ತಿದ್ದ.

ಗಿರೀಶ ಶಂಕರನನ್ನು ಬೆಂಗಳೂರಿನ ಹುಚ್ಚಾಸ್ಪತ್ರೆಗೆ ಸೇರಿಸುವುದು ಕ್ಷೇಮವೆಂದು ತಿಳಿಸಿದ. ಜಾನಕಿಯ ಚಿಕ್ಕ ಮಗನೂ ಬಂದಿದ್ದ. ಅವರ ಕಾರು ಇದ್ದುದರಿಂದ ಕೆಲಸ ಸುಲಭವಾಯಿತು.

ಶಂಕರನನ್ನು ಕಾರು ಹತ್ತಿಸುವಷ್ಟಕ್ಕೆ ಸಾಕು ಸಾಕಾಯಿತು. ಭಾಸ್ಕರ ಕಾರನ್ನು ನಡೆಸುತ್ತಿದ್ದ. ಗಿರೀಶ ಭಾಸ್ಕರನ ಪಕ್ಕದಲ್ಲಿ ಕುಳಿತ. ಇದ್ದುದರಲ್ಲಿ ಕಟ್ಟುಮಸ್ತಾದ ವ್ಯಕ್ತಿಯೆಂದರೆ ಅಪ್ಪಾಸ್ವಾಮಿ. ಅವರೊಂದಿಗೆ ಅವನೂ ಹೊರಟ, ಹಿಂದಿನ ಸೀಟಿನಲ್ಲಿ ಶಂಕರನನ್ನು ಹಿಡಿದುಕೊಂಡು ಕುಳಿತು.

ರತ್ನ ತಾನೂ ಬರುವುದಾಗಿ ಹಟ ಮಾಡಿದಳು. ಅಲ್ಲಿದ್ದವರೆಲ್ಲಾ ಅವಳನ್ನು ತಡೆದು ಒಳಕ್ಕೆ ತಂದರು.

ರತ್ನಳ ಎದೆ ಸೀಳು ಸೀಳಾಯಿತು. 'ಯಾವ ತಪ್ಪಿಗೆ ಈ ಶಿಕ್ಷೆ ದೇವರೇ! ಎಂದು ಮೊರೆಯಿಟ್ಟಳು. ಹಚ್ಚಿಕೊಂಡ ಅರಿಶಿನದ ಕಂಪೂ ಕಂದಿಲ್ಲ. ಆಗಲೇ ವೈಧವ್ಯದ

ಅನುಭವವೇ. ಜೀವದಿಂದ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೆ! ಎಂಥಾ ಮೋಸವಾಯಿತು ತನಗೆ ಜೀವನದಲ್ಲಿ! ಗಂಡ ಹುಚ್ಚನೆಂದು ಯಾರೂ ಹೇಳಲಿಲ್ಲ. ಯಾಕೆ ಹೀಗಾಯಿತು?..... ಈ ಪ್ರಶ್ನೆಗೆ ಉತ್ತರ ಕೊಡುವವರು ಯಾರೋ – ತಿಳಿದಿಲ್ಲವಾಯಿತು!

ದೇವರಂಥ ಅತ್ತೆ ತನ್ನ ಪಾಲಿಗಿಲ್ಲ. ಗಂಡ ಬದುಕಿದ್ದರೂ ಜೊತೆಗಿಲ್ಲ.

ತನಗೆಲ್ಲ ಆಶ್ರಯವೆಂದು ಚಿಂತಿಸುತ್ತಿದ್ದಳು.

ಯಾರ ಆಶ್ರಯವೂ ಬೇಡ. ಸಾವೇ ನನಗೆ ಹಿತವಾಗಿರುತ್ತೆ ಎಂದು ಆಲೋಚಿಸಿದಳು.

ಕೇಶವಯ್ಯ ಮಗಳನ್ನು ತನ್ನೊಂದಿಗೆ ಬರಲು ಹೇಳಿದ. ಆದರೆ ರತ್ನ ಹೋಗುವುದಿಲ್ಲವೆಂದು ನಿರಾಕರಿಸಿಬಿಟ್ಟಳು. 'ತನ್ನ ಗಂಡ ವಾಸಿಯಾಗಿ ಬಂದೇ ಬರುತ್ತಾನೆ. ಆ ದಿನಕ್ಕಾಗಿ ತುದಿಗಾಲ ಮೇಲೆ ನಿಂತು ಕಾಯಬೇಕಾಗಿದೆ' ಎಂದುಕೊಂಡಳು.

ಭಾವನೆಗಳೆಲ್ಲಾ ಸುಟ್ಟು ಸ್ಮಶಾನ ಹೃದಯಿಯಾದ ಚಂದ್ರಣ್ಣ ತಲೆಯ ಮೇಲೆ ಕೈಯಿಟ್ಟುಕೊಂಡು ಕಂಬನಿ ಮಿಡಿಯುತ್ತಾ ಕುಳಿತಿದ್ದನು. ಜಾನಕಿ ತಮ್ಮನನ್ನು ನೋಡಿದಳು. ತನಗಿಂತ ಐದಾರು ವರುಷಗಳೇ ಚಿಕ್ಕವನಾದ ಚಂದ್ರಣ್ಣ, ಎಷ್ಟೋ ವರ್ಷ ಹಿರಿಯನಂತೆ, ಮುಪ್ಪನ್ನು ಹೊದ್ದು ಕುಳಿತಿದ್ದಾನೆ. ಮೆಲ್ಲನೆ ಮಾತನಾಡಿಸಿದಳು.

"ಚಂದ್ರು ಹೋದದ್ದಕ್ಕೆ ಹೀಗೆಲ್ಲಾ ಅಳುತ್ತಾ ಕೂತರೆ ಹೇಗೋ? ನೀನು ಹೀಗೆ ಕೂತು ಬಿಟ್ಟರೆ ಈ ಇಬ್ಬರು ಮಕ್ಕಳು ಏನು ಮಾಡಬೇಕು ಹೇಳು?.... ಸ್ವಲ್ಪ ಧೈರ್ಯ ತಂದುಕೋ."

"ಹೌದು ಚಂದ್ರು, ಅಕ್ಕನ ಮಾತು ಕೇಳು. ಹೊಸದಾಗಿ ಸೊಸೆಯಾಗಿ ಬಂದ ರತ್ನಳ ಗತಿಯನ್ನು ಆಲೋಚಿಸು. ಅವಳಿಗೆ ಧೈರ್ಯ ತುಂಬುವುದು ಬಿಟ್ಟು ನಿನ್ನ ಯೋಚನೆ ಮಾತ್ರ ಮಾಡುವುದು ನ್ಯಾಯವೇ?" ಎಂದು.

ಪದ್ಮಳೂ ಮಾತು ಸೇರಿಸಿದಳು. ಆದರೆ ಏನನ್ನೂ ಕೇಳಿಸಿಕೊಳ್ಳುತ್ತಿಲ್ಲ. ಚಂದ್ರಣ್ಣನಿಗೆ ವಿಸ್ಮೃತಿ ಕವಿದಿದೆ. ಎಲ್ಲವನ್ನೂ ಮರೆಯುತ್ತಿದ್ದಾನೆ. ಪಾರ್ವತಿಯಿಲ್ಲದ್ದು, ರೆಕ್ಕೆ ಹರಿದುಕೊಂಡ ಹಕ್ಕಿಯ ಸ್ಥಿತಿಯಂತಾಗಿದೆ. ಯಾರೆಷ್ಟು ಹೇಳಿದರೂ ಅವನ ಭಯಂಕರ ಏಕಾಕಿತನಕ್ಕೆ ಮದ್ದಿಲ್ಲವಾಗಿದೆ.

ಬಂದವರು ಎಷ್ಟು ದಿನ ತಾನೇ ಉಳಿದಾರು? ಅವರವರ ಪಾಡಿಗೆ ಅವರು ಹೊರಟುಹೋದರು. ಆದರೆ ಜಾನಕಿ ಮಾತ್ರ ಉಳಿದಳು.

ಮಗ, ಗಿರೀಶ ಬೆಂಗಳೂರಿನಿಂದ ಬಂದ ಮೇಲೂ, ಅವನನ್ನು ಕಳಿಸಿ ಬಿಟ್ಟು ಎರಡು ದಿನ ಇದ್ದು ಹೋಗೋಣವೆಂದು ತೀರ್ಮಾನಿಸಿದಳು.

ಶಂಕರನನ್ನು ಆಸ್ಪತ್ರೆಗೆ ಸೇರಿಸಿ ಗಿರೀಶ, ಭಾಸ್ಕರ, ಅಪ್ಪಾಸ್ವಾಮಿ ಮರಳಿದರು.

ಬರುತ್ತಲೇ ಜಾನಕಿ ವಿಚಾರಿಸಿದಳು. "ಏನಂತೆ ಗಿರೀಶ ಶಂಕರನಿಗೆ? ಹಾಗ್ಯಾಕೆ ಆಯಿತಂತೆ?" ಎಂದು ಕೇಳಿದಳು.

"ಅವನಿಗೆ ಮದುವೆ ವಿಚಾರದಲ್ಲಿ ಷಾಕ್ ಆಗಿದೆ ಎಂದರು ಡಾಕ್ಟರು. ಒಂದೆರಡು ತಿಂಗಳಾದರೂ ಆಸ್ಪತ್ರೆಯಲ್ಲಿ ಇರಬೇಕಂತೆ. ಆಮೇಲೆ ಸರಿಹೋಗುತ್ತೆ ಎಂದು ಹೇಳಿದ್ದಾರೆ" ಎಂದು ಗಿರೀಶ ತಿಳಿಸಿದಾಗ ಅಲ್ಲಿದ್ದವರಿಗೆ ಸ್ವಲ್ಪ ನಿರಾಳವೆನಿಸಿತು.

"ಏನೋ ಗಿರೀಶ, ಈ ಮನೆಗೇ ಯಾವುದೋ ಶಾಪ ತಟ್ಟಿದ ಹಾಗಿದೆ. ಎರಡು ದಿನ ನಕ್ಕರೆ ಜೀವನದುದ್ದಕ್ಕೂ ವಿಧಿ ಅಳಿಸುತ್ತೆ' ಎಂದು ವ್ಯಥೆಯಿಂದ ಜಾನಕಿ. ಗಿರೀಶ ಏನು ತಾನೇ ಉತ್ತರ ಕೊಡಬಲ್ಲ? ಸುಮ್ಮನೆ ಕೇಳಿಸಿಕೊಂಡ. ಅವನಿಗೆ ಶಾಂತಳನ್ನು ಇಲ್ಲಿಂದ ಕರೆದೊಯ್ಯುವುದು ಕ್ಷೇಮವೆನಿಸಿತು. ಏನಾದರೂ ಹೃದಯಕ್ಕೆ ನೋವಾದರೆ, ಅವಳ ಗರ್ಭಕ್ಕೆ ಅಪಾಯವಾದೀತು ಎಂದು ಹೆದರಿದ. ಮಾವನಿಗೆ ಹೇಳಿದರೂ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿಲ್ಲ. ಅದಕ್ಕೆಂದೇ, ಜಾನಕಿಗೆ, "ಚಿಕ್ಕಮ್ಮ, ನಾನು ಶಾಂತಳನ್ನು ಕರೆದೊಯ್ಯುತ್ತೇವೆ. ನೀವು ಮಾವನಿಗೆ ಸಮಯ ಬಂದಾಗ ಹೇಳಿಬಿಡಿ" ಎಂದ.

ಜಾನಕಿಗೂ ಗಿರೀಶನ ಮಾತು ಸರಿಯೆನಿಸಿತು. 'ಹಾಗೆಯೇ ಮಾಡು' ಎಂದಳು. ಶಾಂತ ಹೊರಡಲು ಸಿದ್ಧಳಾದಳು. ರತ್ನಳನ್ನು, "ಬನ್ನಿ ಅತ್ತಿಗೆ ಬೆಂಗಳೂರಿಗೇ ಹೋಗೋಣ. ಅಲ್ಲಿದ್ದರೆ ಅಣ್ಣನನ್ನು ಆಗಾಗ ನೋಡಬಹುದು" ಎಂದು ಹೇಳಿದಳು.

ಹೋಗಲು ಮನಸ್ಸಿರಲಿಲ್ಲವಾದರೂ ಗಂಡನನ್ನು ನೋಡಬಹುದೆಂಬ ಆಸೆ, ಅವಳನ್ನು ಒಪ್ಪಿಸಿತು. ಜಾನಕಿಯೂ ರತ್ನಳನ್ನು ಅವರೊಂದಿಗೆ ಕರೆದೊಯ್ಯುವುದೇ ಒಳ್ಳೆಯದೆಂದು ಹೇಳಿದಳು.

ರತ್ನ, ಗಿರೀಶ, ಶಾಂತ ಪ್ರಯಾಣಕ್ಕೆ ಸಿದ್ಧರಾದರು.

* * *

ಜಾನಕಿ ಬಂದವರನ್ನು ಕಳಿಸಿಕೊಟ್ಟು ಸುಮಾರು ಒಂದು ತಿಂಗಳು ಇಲ್ಲಿಯೇ ಉಳಿದಳು. ಇನ್ನೂ ಎಷ್ಟು ಕಾಲ ಉಳಿಯಲು ಸಾಧ್ಯ. ಗಂಡನನ್ನು ಮಕ್ಕಳನ್ನು ಅಡಿಗೆ ತಾಯರವ್ವನ ಜವಾಬ್ದಾರಿಯಲ್ಲಿ ಒಪ್ಪಿಸಿ ಬಂದಿದ್ದಾಳೆ. ಎರಡು ಬಾರಿ ಪೆರಾಲಿಸಿಸ್ ಹೊಡೆದು ಗಂಡನಿಗೆ ಕಾಲು ಸ್ವಾಧೀನದಲ್ಲಿಲ್ಲ. ಬೆಳೆದ ಹೆಣ್ಣು ಮಗಳೊಬ್ಬಳು ತಂದೆಯ ಜವಾಬ್ದಾರಿ ಹೊರುತ್ತಾಳೆಂದು ಧೈರ್ಯದಿಂದ ಇದ್ದಳು. ಆದರೆ ಇನ್ನೂ ಎಷ್ಟು ಕಾಲ ಮನೆ ಮಠ ಬಿಟ್ಟಿರಲು ಸಾಧ್ಯ! ಅದೂ ಅಲ್ಲದೆ ಚಂದ್ರಣ್ಣ ಮಾತನಾಡುವುದನ್ನೇ ಬಿಟ್ಟುಬಿಟ್ಟಿದ್ದಾನೆ. ಹೆಂಡತಿ ಕಳೆದು ಹೋಗಿದ್ದರೂ ಅವಳ ನೆನಪುಗಳು ಕಳೆದಿಲ್ಲ.

ಪುಟ್ಟ ಬಂದು ಬಂದು ಮಾತನಾಡಿಸಲು ಪ್ರಯತ್ನಿಸುತ್ತಾನಾದರೂ ಚಂದ್ರಣ್ಣ ಮಾತನಾಡುವುದಿಲ್ಲ.

ಜಾನಕಿ, ಚಂದ್ರಣ್ಣನನ್ನು ತನ್ನೊಂದಿಗೆ ಬರಲು ಒತ್ತಾಯಿಸಿದಳು. ಚಂದ್ರಣ್ಣ ಜಗ್ಗಲಿಲ್ಲ. ಇಲ್ಲಿಯೇ ಇರುತ್ತೇನೆಂದು ಹಟ ಹಿಡಿದ.

"ಇಲ್ಲಿ ಯಾರಿರ್ತಾರೆ ಚಂದ್ರು ನಿನಗೆ ಮಾಡಿ ಹಾಕಲು? ಅಲ್ಲಿಗೆ ಬಂದರೆ ಸ್ವಲ್ಪನಾದರೂ ಮರೆಯಲು ಸಾಧ್ಯವಾಗುತ್ತೆ, ಸ್ಥಳಾಂತರವಾದರೂ ಮನಸ್ಸಿಗೆ ಸ್ವಲ್ಪ ನೆಮ್ಮದಿಸಿಗುತ್ತೆ" ಎಂದೆಲ್ಲಾ ಹೇಳಿದಳು.

"ಅಕ್ಕ, ನನ್ನ ದಿನ ಎಲ್ಲಾ ಮುಗೀತು. ಅವಳಿದ್ದ ಈ ಜಾಗ ಬಿಟ್ಟು ಬಂದರೆ ಅವಳ ಮನಸ್ಸಿಗೆ ನೋವಾಗುವುದಿಲ್ಲವೆ?... ನನ್ನ ಮಗ ಮರಳಿ ಬರ್ತಾನೆ. ಬಂದಾಗ ಯಾರೂ ಇಲ್ಲವೆಂದು ತಿಳಿದು ಮತ್ತೆ ಹೊರಟುಹೋದರೆ?" ಎಂದನು.

"ಸ್ವಲ್ಪ ದಿವಸವಿದ್ದು ಬಂದುಬಿಡುವಿಯಂತೆ. ಅಲ್ಲಿಯೂ ಯಾರೂ ಇಲ್ಲ. ನಾನು ಇಲ್ಲಿ ಅಲ್ಲಿ ನೋಡಲು ಆಗುತ್ತದೆಯಾ ಚಂದ್ರು?"

"ಅದಕ್ಕೇ ನೀನು ಹೋಗು ನಾನೊಬ್ಬನೇ ಇರುತ್ತೇನೆ" ಎಂದ, ಎಂಥ ಹಟ ಈ ಚಂದ್ರುವಿನದು ಎನಿಸಿತು. ಜಾನಕಿಗೆ ದಿಕ್ಕೇ ತೋಚದಾಯಿತು. ಇಲ್ಲಿಯೂ ಬಿಡುವಂತಿಲ್ಲ, ಅಲ್ಲಿಯೂ ಬಿಡುವಂತಿಲ್ಲ. ಗಂಡ ಏನಾದರೂ ತಿಳಿದಾನು! ಎಂದು ಆಲೋಚಿಸಿದಳು.

ಇದಕ್ಕೆ ದಾರಿ.....? ಎಂದು ಯೋಚಿಸಿದಷ್ಟೂ, ಅಸ್ಪಷ್ಟವಾಗಿಯೇ ಉಳಿಯಿತು. ಪುಟ್ಟನನ್ನು ಕರೆಸಿದಳು. "ನೀನೇ ಹೇಳು ಪುಟ್ಟ, ಚಂದ್ರುವಿಗೆ ಮಗನಂತೆ ದುಡಿಯುತ್ತಿರುವವನು, ಹತ್ತಿರದಲ್ಲಿರುವವನು ನೀನೇ. ನಮ್ಮೂರಿಗೆ, ನಂಜೊತೆ ಬರ ಹೇಳಿದರೆ ಬರುವುದಿಲ್ಲ, ಇಲ್ಲೇ ಇರುತ್ತೇನೆನ್ನುತ್ತಾನೆ. ಇವನೊಬ್ಬನನ್ನು ಹೇಗೆ ಬಿಟ್ಟು ಹೋಗುವುದು? ಸ್ವಲ್ಪ ಯೋಚಿಸಿ ಹೇಳು" ಎಂದಳು.

ಪುಟ್ಟ ತಾನೇ ಏನು ಹೇಳಿಯಾನು? ಕೊನೆಗೆ ಯೋಚಿಸಿ ಒಂದು ತೀರ್ಮಾನಕ್ಕೆ ಬಂದ. "ಜಾನಕವ್ವ ನಿಮ್ಮ ಪಾಡಿಗೆ ನೀವು ಹೋಗಿ ನಾವು ಅಯ್ಯನ್ನ ನೋಡ್ಕೊಳ್ತೀವಿ. ಅವರ ಚಿಂತೆ ಬೇಡ ನಿಮಗೆ" ಎಂದನು.

ಜಾನಕಿಗೆ ಬೇರೆ ದಾರಿಯೇ ಇರಲಿಲ್ಲ. ಇದನ್ನೇ ತೀರ್ಮಾನಿಸಿದಳು. ಕಾಗದ ಬರೆದು ಮಗನನ್ನು ಕರೆಸಿಕೊಂಡಳು.

ಹೋಗುವ ದಿನ ಬಂದಾಗ, "ಚಂದ್ರು, ನಿನ್ನನ್ನ ಒಬ್ಬಂಟಿಗನಾಗಿ ಬಿಟ್ಟು ಹೋಗಲೇ ಬೇಕಾಗಿದೆ. ನನ್ನನ್ನು ಕ್ಷಮಿಸು. ನಮ್ಮ ಜೊತೆ ಬಾ ಎಂದರೆ ನೀನು ಬರುತ್ತಿಲ್ಲ. ಆಗಾಗ ಬಂದು ಹೋಗುತ್ತಿರುತ್ತೇನೆ" ಎಂದಳು.

"ಯಾಕೆ ಮಾವ ಅಮ್ಮ ಹೇಳಿದಂತೆ ನಮ್ಮ ಜೊತೆ ಬರಬಾರದು? ಯಾರು ಇಲ್ದೆ ನೀವೊಬ್ಬರೇ ಇರೋದು ಬೇಸರ ಬರಿಸೊಲ್ಲವೇ?" ಎಂದು ಹೇಳಿದ.

"ಬೇಸರವಾದರೆ ಏನು ಮಾಡುವುದು ಹೇಳು? ಅನುಭವಿಸಲೇ ಬೇಕು. ನಿಮ್ಮತ್ತೆ ಇದ್ದ ಜಾಗ ಬಿಡಬಾರದು. ಅವಳ ಮನಸ್ಸಿಗೆ ನೋವಾಗುತ್ತೆ" ಎಂದು ತಿಳಿಸಿದ.

ಭಾಸ್ಕರನಿಗೆ, ಅಣ್ಣ, ಅತ್ತಿಗೆಯು ಬರೆದ ಪತ್ರದ ನೆನಪಾಯಿತು. ತೆಗೆದು ತೋರಿಸಿದ. ಚಂದ್ರಣ್ಣನಿಗೆ ಅದರಲ್ಲಿ ಆಸಕ್ತಿಯಿದ್ದಂತೆ ಅನಿಸಲಿಲ್ಲ.

"ಯಾರು ಪತ್ರ ಬರೆದು ಏನಾಗಬೇಕಿದೆ ಹೇಳು?.... ಕೈ ಹಿಡಿದ ಹೆಂಡತಿ ಬಿಟ್ಟರೆ ಮಿಕ್ಕ ಮಕ್ಕಳೂ ಆಗುವುದಿಲ್ಲ. ತಾಯಿಯ ಸಾವನ್ನು ಕೇಳಿಯೂ ಅವಳು ಬರಲಿಲ್ಲ. ಇನ್ನು ತಂದೆಯ ಸಾವಿಗೂ ಬರಲಾರಳು. ಮದುವೆ ಆದಂದೇ ಅವಳಿಗೆ ತಂದೆ ತಾಯಿ ಮರೆತುಹೋಯಿತು" ಎಂದು ನಿಟ್ಟುಸಿರು ಬಿಟ್ಟ.

"ಚಂದ್ರು, ಎಂಥಾ ಅನಿಷ್ಟದ ಮಾತು ಹೇಳ್ತೀ? ದೂರದಲ್ಲಿ ಇರುವವರು ಅವರ ಪರಿಸ್ಥಿತಿ ಹೇಗಿತ್ತೋ ಏನೋ? ಯಾರಿಗೆ ಗೊತ್ತು?" ಎಂದು ಅವರ ಪರವಾಗಿ ಮಾತನಾಡಿದಳು.

"ಅಕ್ಕ ಯಾರನ್ನೂ ನಾನು ದೂಷಿಸೊಲ್ಲ..... ನೀನೂ ಈಗ ಹೊರಟುಹೋಗ್ತಿದ್ದಿ. ಆದರೆ ಒಂದ್ಮಾತು ನಡೆಸಿಕೊಡಬೇಕು. ಇನ್ನೊಮ್ಮೆ ನಿನ್ನ ನನ್ನ ಭೇಟಿ ಆಗುತ್ತೋ ಇಲ್ಲವೋ ಹೇಳಲಾರೆ." ಎಂದ.

"ಯಾಕೆ ಚಂದ್ರು ಹೀಗೆಲ್ಲಾ ಮಾತಾಡಿ ನಮ್ಮ ಕರುಳುರಿಸುತ್ತೀ? ನಾವೆಲ್ಲ ನಿನ್ನ ಪಾಲಿಗೆ ಇಲ್ಲಾಂತ್ಲೇ ನೀನು ಅಂದುಕೊಂಡಿರೋ ಹಾಗಿದೆಯಲ್ಲ" ಎಂದು ದೂರಿದಳು.

"ಅದಲ್ಲಕ್ಕ, ಈಗಿರುವವರು ಇನ್ನೊಂದು ಕ್ಷಣಕ್ಕೆ ಇರುವುದಿಲ್ಲ. ಅಂಥಾದ್ದರಲ್ಲಿ ಏನನ್ನು ತಾನೇ ನಂಬಿಕೊಂಡಿರಲು ಸಾಧ್ಯ! ನಮಗೆ ತೀರಾ ಪ್ರಿಯವಾದ್ದನ್ನೇ ತಾನೇ ನಮ್ಮಿಂದ ದೇವರು ಕಸಿದುಕೊಳ್ಳೋದು?...." ಎಂದು ಒಂದು ಕ್ಷಣ ಸುಮ್ಮನಿದ್ದ. ಮತ್ತೆ ಮುಂದುವರೆಸಿದ.

"ನಾನು ಸತ್ತ ಮೇಲೆ ಇರುವ ಈ ಸ್ವಲ್ಪ ಭೂಮಿಯನ್ನು ನನ್ನ ಮಗನಿಗೆ ಒಪ್ಪಿಸಿಬಿಡು. ಅವನ ಭಾರ ನಿನ್ನ ಮೇಲೆ. ಅವನ ಹುಚ್ಚು ಸುಧಾರಿಸಿ ಬಂದಾಗ ನೀನೇ ಅವನ ಜವಾಬ್ದಾರಿಯನ್ನು ಹೊರಬೇಕು.... ಒಂದು ವೇಳೆ ಅವನು ಬರಲಿಲ್ಲವೆಂದರೆ ನಮ್ಮ ಪುಟ್ಟನಿಗೆ ಕೊಟ್ಟುಬಿಡು. ಮಗನಿಗಿಂತ ಹೆಚ್ಚಾಗಿ ನಮ್ಮ ಸೇವೆ ಮಾಡಿದ್ದಾನೆ" ಎಂದು ನುಡಿದು ತೀರ್ಮಾನಿಸಿದ. ನ್ಯಾಯಾಧೀಶನಂತೆ.

"ನಿನ್ನಿಷ್ಟದಂತೆ ಆಗಲಿ ಚಂದ್ರು" ಎಂದು ಹೇಳಿ ಜಾನಕಿ ಹೊರಟಳು.

ಭಾಸ್ಕರನೂ ಚಂದ್ರಣ್ಣನಿಗೆ ಹೋಗಿ ಬರುವುದಾಗಿ ಹೇಳಿದ. ಬಾಗಿಲ ಬಳಿ ಕೈ ಕಟ್ಟಿ ನಿಂತಿದ್ದ ಪುಟ್ಟನಿಗೆ,

"ಪುಟ್ಟ, ತಂದೆಯಾದರೂ, ಒಡೆಯರಾದರೂ, ನನ್ನ ತಮ್ಮನ ಹೊಣೆ ನಿಂದು ಅವನನ್ನು ಚೆನ್ನಾಗಿ ನೋಡ್ಕೋ ನನಗೆ ಕಾಗದ ಬರೆಯುತ್ತಿರು" ಎಂದು ಪದೇ ಪದೇ ಹೇಳಿ ಹೋದಳು.

ಪುಟ್ಟ, ಗೋಣಾಡಿಸುತ್ತಾ ಅವರನ್ನು ಒಂದಷ್ಟು ದೂರ ಬಿಟ್ಟು ಬಂದ.

* * *

ಚಂದ್ರಣ್ಣ ಒಂಟಿತನದಿಂದ ತುಂಬಾ ನರಳಿದ. ತಾನೂ ಮಡದಿಯನ್ನು ಹಿಂಬಾಲಿಸಿದ್ದರೆ, ಚೆನ್ನಾಗಿತ್ತೆಂದು ಹಾರೈಸುತ್ತಿದ್ದ. ಆದರೆ ಅವನ ನರಳಾಟಕ್ಕೆ ಕೊನೆ ಇಲ್ಲದೆ ಹೋಯಿತು. ಪಾರ್ವತಿ ಸತ್ತ ಮೂರು ತಿಂಗಳಿಗೆ ಸರಿಯಾಗಿ ಚಂದ್ರಣ್ಣನೂ ಮನೆ ಬಿಟ್ಟು ಎಲ್ಲಿಯೋ ಹೊರಟುಹೋದ. ಮತ್ತೆ ಎಷ್ಟು ವರುಷಗಳಾದರೂ ಅವನು ಹಿಂತಿರುಗಲಿಲ್ಲ. ಯಾವ ಅದೃಷ್ಟವನ್ನು ಅರಸಿ ಹೊರಟನೋ ಏನೋ? ದಿನಗಳು ಉರುಳಿದವು. ಪುಟ್ಟ ಮನೆಗೆ ಕಾವಲಿದ್ದ. ಚಿಕ್ಕಯ್ಯ ಬಂದಾನೇನೋ ಎಂದು ದಿನದಿನವೂ ಕಾದ. ಬರಲಿಲ್ಲ. ಬೆಂಗಳೂರಿಗೇ ಹೋಗಿ ಸುದ್ದಿ ತಿಳಿದು ಬರೋಣವೆಂದು, ಶಾಂತಳ ಮನೆಗೆ ಬಂದ.

ಗಿರೀಶ, ಶಾಂತ ಪುಟ್ಟನಿಗೆ ಬಾಯಿ ತುಂಬಾ ಉಪಚಾರ ಮಾಡಿದರು. ಪುಟ್ಟ ಬಂದದ್ದು ಶಾಂತಳಿಗೆ ತುಂಬಾ ಸಂತೋಷವಾಯಿತು. "ಇಷ್ಟು ದಿನದ ಮೇಲೆ, ಅದೇನು ಪುಟ್ಟ ಅಪರೂಪವಾಗಿ ಬಂದುಬಿಟ್ಟೆ" ಎಂದಳು ಶಾಂತ.

"ನಿಮ್ಮನ್ನೆಲ್ಲಾ ನೋಡಿದ ಹಾಗಾಗುತ್ತೆ, ಜೊತೆಗೆ ಚಿಕ್ಕಯ್ಯನ ವಿಷಯ ತಿಳಿದ ಹಾಗೂ ಆಗುತ್ತೇಂತ ಬಂದೆ" ಎಂದ.

"ಹೋಗಲಿ, ಇಷ್ಟು ದಿವಸಕ್ಕಾದರೂ ನಮ್ಮ ನೆನಪು ಬಂತಲ್ಲ?" ಎಂದಳು ಆಕ್ಷೇಪದ ದನಿಯಲ್ಲಿ.

"ಶಾಂತಕ್ಕ, ನಿಜ ಹೇಳಬೇಕಂದರೆ, ನಾನು ಬಂದದ್ದು ಚಿಕ್ಕಯ್ಯನಿಗಾಗಿ ..... ಆ ಮನೆ ಹಾಳು ಸುರೀತಿದೆ ಶಾಂತಕ್ಕ. ಒಳಗೆ ಹೋದರೆ ದುಃಖವಾಗುತ್ತೆ. ಅದನ್ನು ನೋಡಬೇಕೆಂದರೇನೇ ತುಂಬಾ ಮನಸ್ಸಿಗೆ ಕಷ್ಟವಾಗುತ್ತೆ. ಚಿಕ್ಕಯ್ಯನ ಮೈಗೆ ಹುಷಾರಾಗಿದ್ದರೆ ಕರ್ಕಂಡು ಹೋಗೋಣಾಂತ ಬಂದೆ...." ಎಂದು ಹೇಳಿ ಸುತ್ತಲೂ ಯಾರನ್ನೋ ಹುಡುಕಾಡತೊಡಗಿದ.

ಶಾಂತ, ಅವನನ್ನು ಗಮನಿಸಿದಳು. ಅವನ ದೃಷ್ಟಿ ಅರ್ಥವಾಯಿತು.

"ಯಾರನ್ನು ಹಾಗೆ ಹುಡುಕುತ್ತಿದ್ದೀಂತ ನನಗೆ ಗೊತ್ತು ಪುಟ್ಟಣ್ಣ.... ಅತ್ತಿಗೇನ ತಾನೇ?" ಎಂದಳು.

"ಹೂಂ! ಶಾಂತಕ್ಕ" ಎಂದ.

"ಅವರಿಲ್ಲ ತವರಿಗೆ ಹೊರಟುಹೋದರು."

"ಅದ್ಯಾಕೆ ಶಾಂತಕ್ಕ? ಚಿಕ್ಕಯ್ಯನ ಜೊತೆ ಬರುವುದಿಲ್ಲವೇ ಮನೆಗೆ? ಎಂದು ಕೇಳಿದ ಆಶ್ಚರ್ಯದಿಂದ.

"ಶಂಕರಣ್ಣ ಎಲ್ಲಿ ಹೋದರೋ ಗೊತ್ತಿಲ್ಲ ಪುಟ್ಟ" ಗಿರೀಶ ದುಃಖದಿಂದ ಹೇಳಿದ.

"ಏನಂದ್ರಿ?... ಅವರು ಇಲ್ಲವೇ? ಆಸ್ಪತ್ರೇಲಿದ್ದರಲ್ಲ? ವಾಸಿಯಾಗಿ ಬರಲಿಲ್ಲವಾ ಅಯ್ಯ?" ಸಂದೇಹದಿಂದ ಕೇಳಿದ.

"ಆಸ್ಪತ್ರೆಯಿಂದಲೇ ತಪ್ಪಿಸಿಕೊಂಡು ಓಡಿ ಹೋಗಿದ್ದಾರೆ ನಿಮ್ಮ ಚಿಕ್ಕಯ್ಯ."

"ಹೌದಾ ಅಯ್ಯ!" ಎಂದು ಗೊಳಗೊಳ ಅತ್ತ.

"ಹೌದು ಪುಟ್ಟ. ಮೈಯಲ್ಲಾ ಕಣ್ಣಾಗಿ ಕಾದಿದ್ದರೂ, ಅದು ಹೇಗೋ ಎಲ್ಲರ ಕಣ್ಣಿಗೆ ಮಣ್ಣೆರಚಿ ಓಡಿಹೋಗಿದ್ದಾರೆ. ಎಷ್ಟೆಷ್ಟೋ ಕಡೆ ಹುಡುಕಾಡಿದಿವಿ. ಪ್ರಯೋಜನವಾಗಲೇ ಇಲ್ಲ." ಎಂದ ವ್ಯಥೆಯಿಂದ.

"ರತ್ನವ್ವಂಗೆ ಈ ವಿಷಯ ಗೊತ್ತಾ?" ಪುಟ್ಟ ಕೇಳಿದ.

"ಗೊತ್ತಾದ ಮೇಲೆಯೇ ಅತ್ತಿಗೆ ತವರಿಗೆ ಹೋದದ್ದು." ಎಂದಳು ಶಾಂತ. ಬಂದ ಕೆಲಸವಾಗಲಿಲ್ಲ. ಪ್ರತಿಯಾಗಿ ಮತ್ತೊಂದು ದಾರುಣ ವಾರ್ತೆಯೇ ಕಿವಿಗೆ ಬಿತ್ತು. ಇನ್ನು ಅಲ್ಲಿದ್ದು ಪ್ರಯೋಜನವೇನೆಂದು ಭಾವಿಸಿ, ಶಾಂತ, ಗಿರೀಶರಿಂದ ಬೀಳ್ಕೊಂಡ. ಹೋಗುವಾಗ ಹೇಳಿದ: "ಶಾಂತಕ್ಕ, ನೀವು ಬಂದು ಆ ಮನೆ, ಗದ್ದೆ ಎಲ್ಲಾ ಏನಾದ್ರೂ ವ್ಯವಸ್ಥೆ ಮಾಡಿ. ನಾನು ಅಲ್ಲಿರುವುದಿಲ್ಲ. ಆ ಊರಿನಲ್ಲಿದ್ದರೆ ಉಪ್ಪುಂಡ ಮನೆಯ ದಾರುಣ ಕಥೆ ನೆನಪಿಗೆ ಬರುತ್ತೆ" ಎಂದ.

ಶಾಂತ ಹೇಳಿದಳು: "ಪುಟ್ಟಣ್ಣ. ಹಾಗೆಲ್ಲಾ ಮಾಡಬೇಡ. ನಮ್ಮ ತಂದೆಗೆ ಮಗನಂತೆ ಇದ್ದೆ. ಅವಕ್ಕೆಲ್ಲಾ, ಹಾಗೆ ನೋಡಿದರೆ, ನೀನೇ ಹಕ್ಕುದಾರ. ಆ ಆಸ್ತಿ ಬೇರೆಯವರ ಪಾಲಾಗಲು ಬಿಡಬೇಡ.... ಪುಟ್ಟಣ್ಣ. ತಂಗಿಯ ಈ ಪ್ರಾರ್ಥನೆ ನಡೆಸಿಕೊಂಡು" ಎಂದು ಅಳುತ್ತಾ ಕೇಳಿಕೊಂಡಳು.

"ನನಗ್ಯಾಕೆ ಶಾಂತಕ್ಕ ಈ ಶಿಕ್ಷೆ? ನಿಮ್ಮ ಕಷ್ಟದ ಮೇಲೆ ನಾನು ಸುಖವಾಗಿ ಜೀವಿಸುವುದೇ? ನನಗೇ ಬೇಡವೇ ಬೇಡ" ಎಂದು ಹಟದಿಂದ.

ಗಿರೀಶ ಒತ್ತಾಯಪಡಿಸಿ, ಒಪ್ಪಿಸಿ ಕಳಿಸಿಕೊಟ್ಟ.

ಪುಟ್ಟ ಜಿನುಗಿದ ಕಂಬನಿಯನ್ನು ಕಿರುಬೆರಳಿನಿಂದ ಒರೆಸಿ, ಭಾರವಾದ ಹೃದಯದಿಂದ ಹೆಜ್ಜೆ ಹಾಕಿದ.

ಶಂಕರನ ಸುಳಿವು ಪತ್ತೆಯಾಗದೆ ಉಳಿಯಿತು.

ಬಂಧುಗಳ ಹೃದಯದಲ್ಲಿನ ನೆನಪುಗಳು ಅಜ್ಞಾತ ಆಳದಲ್ಲಿ ಹುದುಗಿ ಹೋದವು.

* * *

ಭೀಮರಾಯರು ಬೆಳಿಗ್ಗೆ ಎದ್ದು ಹೊಲದ ಕಡೆ ಹೋಗಿ ಬರೋಣವೆಂದು ಬಾಗಿಲು ತೆರೆದರು. ಚಳಿಗಾಲವಾದ್ದರಿಂದ ಯಾರಿಗೂ ಏಳುವ ಮನಸ್ಸಾಗಿರಲಿಲ್ಲ. ಇನ್ನೂ ಮುದುಡಿಕೊಂಡೇ, ಮುಸುಕೆಳೆದು ಮಲಗಿದ್ದರು ಉಳಿದವರು. ಭಾಗೀರಥಮ್ಮ ಮಾತ್ರ ಗಂಡ ಎದ್ದದ್ದನ್ನು ನೋಡಿ ತಾನೂ ಎದ್ದಳು. ಅಷ್ಟೊಂದು ಬೆಳಕಾಗದಿದ್ದರೂ ಆರು ಗಂಟೆಯಾಗಿತ್ತು. ಭೀಮರಾಯರು ಮಡದಿಗೆ ಹೇಳಿ ಹೊರಗೆ ಬಂದರು.

ಮನೆಯ ಮುಂದಿನ ಅಂಗಳದಲ್ಲಿ ಒಬ್ಬ ವ್ಯಕ್ತಿ ಚಳಿಗೆ ನಡುಗುತ್ತಾ ಮಲಗಿದ್ದ. ಯಾರೋ ಭಿಕ್ಷುಕನಿರಬೇಕೆನಿಸಿ, ಗದ್ದರಿಸಿ, "ಏಯ್ ಮೇಲೇಳು" ಎಂದರು. ಆ ವ್ಯಕ್ತಿ ಏಳುವ ಸೂಚನೆ ಕಂಡುಬರಲಿಲ್ಲ. ಮತ್ತೆ ಎಚ್ಚರಿಸಿದರು. ಮುಲುಗುತ್ತಾ ಮಲಗಿದ್ದ ವ್ಯಕ್ತಿ ಎದ್ದು ಕುಳಿತು ಕಣ್ಣುಜ್ಜಿಕೊಂಡ.

"ಯಾರು ನೀನು? ಇಲ್ಲೇಕೆ ಮಲಗಿದ್ದೀಯ?" ಎಂದು ಕೇಳಿದರು ಭೀಮರಾಯರು. ಪ್ರಶ್ನೆಗೆ ಉತ್ತರ ಕೊಡದೆ ಸುಮ್ಮನೆ ದೈನ್ಯವಾಗಿ ಭೀಮರಾಯರತ್ತ ನೋಡಿದ. ಜಡೆಗಟ್ಟಿದ ಕೂದಲು, ಒಳಗೆ ಹೋದ ಕೆನ್ನೆಗಳು, ಪ್ರಪಾತದಾಳದ ಕಣ್ಣುಗಳು! ಆದರೆ ಅವುಗಳಲ್ಲಿದ್ದುದು ಶಲಾಕೆಯಂತಹ ದೀಪ್ತಿ. ನೋಡುವವರ ಹೃದಯಗಳನ್ನು ಕಲಕುವಂತಿತ್ತು. ಬಾಡಿ ಬತ್ತಿದ ತುಟಿಗಳು ಹರಿದು ಚಿಂದಿಯಾದ ಅಂಗಿ, ಮತ್ತು ಒಂದು ಖಾಕಿ ಚಡ್ಡಿ.... ಯಾಕೋ ಭೀಮರಾಯರಿಗೆ 'ಅಯ್ಯೋ ಪಾಪ' ಎನಿಸಿತು. ಗದ್ದರಿಸಿ ಹೇಳಬಾರದಾಗಿತ್ತೇನೋ – ಎನಿಸಿತು ಭೀಮರಾಯರಿಗೆ.

ಒಂದೆರಡು ನಿಮಿಷ ನೋಡಿದ ಆ ವ್ಯಕ್ತಿ ಅಲ್ಲಿಂದೆದ್ದು ತನ್ನ ಹರಕು ಕಂಬಳಿ, ತಗಡಿನ ಡಬ್ಬ, ಅಲ್ಯೂಮಿನಿಯಂ ತಟ್ಟೆಗಳನ್ನು ಸಂಗ್ರಹಿಸಿಕೊಂಡು ಬೀದಿಯ ಕಡೆಗೆ ನಡೆದ, ಭೀಮರಾಯರು ಅವನನ್ನು ಅನುಸರಿಸಿದರು. ಸರಸರನೆ ನಡೆಯುತ್ತಿದ್ದ ಅವನನ್ನು ಕೂಗಿ ತಡೆದರು.

"ನಿನ್ನ ಹೆಸರೇನಪ್ಪ?" ಎಂದರು. ಈಗ ಅವರ ಧ್ವನಿ ಮೆದುವಾಗಿತ್ತು. ಆ ವ್ಯಕ್ತಿಗೆ ಈ ಮೆದುದನಿ ಹಿಡಿಸಿರಬೇಕು. ಹಿಂತಿರುಗಿ ಹೇಳಿದ – "ಶಂಕರ" ಭೀಮರಾಯರೂ ಎರಡು ಹೆಜ್ಜೆ ವೇಗವಾಗಿ ಹಾಕಿ ಅವನ ಬದಿಗೆ ಬಂದರು. "ಎಲ್ಲಿಂದ ಬಂದಿದ್ದೀ?.... ಇಲ್ಲಿಗ್ಯಾಕೆ ಬಂದೆ? ಎಂದು ಕೇಳಿದರು. ಶಂಕರ ಆ ಪ್ರಶ್ನೆಗಳಿಗೆ ಉತ್ತರವನ್ನೇ ಕೊಡಲಿಲ್ಲ.

ಭೀಮರಾಯರು ಎಷ್ಟೇ ವಿಧವಾಗಿ ಪ್ರಶ್ನಿಸಿದರೂ ಶಂಕರ ಮೌನವಾಗಿಯೇ ನಡೆದ. ಅವರಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂಬಂತೆ ತನ್ನ ಪಾಡಿಗೆ ತಾನು ಏನನ್ನೋ ಗುಣಗುಣಿಸುತ್ತಾ ನಡೆದ.

ದಾರಿ ಕೊನೆಯಾಯಿತು. ಭೀಮರಾಯರಿಗೆ ಎಡಕ್ಕೆ ತಿರುಗಬೇಕಾಗಿತ್ತು. ಹೊಲ;ದ ಕಡೆ ಹೋಗಲು. ಶಂಕರ ನಿಂತ. ಯಾವ ದಾರಿ ಆರಿಸುವುದು ಎಂದು ಯೋಚಿಸಿದ, ಕಡೆಗೆ ಬಂದ ದಾರಿಯ ಕಡೆಗೇ ಮುಖ ಮಾಡಿದ. "ಎಲ್ಲಿ ಹೋಗ್ತೀಯೋ?' ಎಂದು ಭೀಮರಾಯರು ಕೇಳುತ್ತಿದ್ದರೂ ಕೇಳಿಸಿಕೊಳ್ಳದವನಂತೆ ನಡೆದುಬಿಟ್ಟ.

"ಯಾರೋ ಹುಚ್ಚ ಅಂತ ಕಾಣುತ್ತೆ" ಎಂದುಕೊಂಡರು ಭೀಮರಾಯರು. 'ಈತ ಈ ಊರಿನವನಲ್ಲ ಪಾಪ, ಎಲ್ಲಿಂದ ಬಂದನೋ ಏನೋ' ಎಂದು ಸಂತಾಪಗೊಂಡರು.

ಹೊಲದ ಆಚೆಗಿನ ದಟ್ಟವಾದ ಮರಗಳ ನಡುವೆ ಭೀಮರಾಯರು ಮರೆಯಾದರು.

ಮತ್ತೆ ಭೀಮರಾಯರು ಮನೆಗೆ ಮರಳುವ ವೇಳೆ, ಭಾಗೀರಥಮ್ಮ ಕಾಫಿ ಸಿದ್ಧ ಮಾಡಿಟ್ಟು, ತಿಂಡಿಗೆ ಅಣಿ ಮಾಡುತ್ತಿದ್ದರು. ಬರುತ್ತಿದ್ದಂತೆಯೇ ಭೀಮರಾಯರು."

"ಭಾಗೀರಥಿ, ಸ್ವಲ್ಪ ಚೊಂಬಿನಲ್ಲಿ ನೀರು ತಂದುಕೊಡು" ಅಂದರು. ಭಾಗೀರಥಮ್ಮ ಸ್ನಾನ ಮಾಡಿ ಮಡಿಯುಟ್ಟುಕೊಂಡಿದ್ದರು. ಮಗಳು ಗೌರಿಯನ್ನು ಕರೆದು ತಂದೆಗೆ ನೀರು ಕೊಡಲು ಹೇಳಿದಳು.

ಗೌರಿ ನೀರು ತಂದು ಕೊಟ್ಟಳು.

ಕಾಲು ತೊಳೆದುಕೊಂಡು ಭೀಮರಾಯರು ಒಳಗೆ ಬಂದರು. ಬರುವಾಗ ಹೊಲದಲ್ಲಿ ಬೆಳೆಸಿದ್ದ ಒಂದಷ್ಟು ತರಕಾರಿಗಳನ್ನು, ಸೊಪ್ಪನ್ನು ಕುಯಿದು ತಂದಿದ್ದರು. ಛಳಿಗೆಂದು ಹೊದ್ದುಕೊಂಡಿದ್ದ ಶಾಲುವಿನಲ್ಲಿ ಮೂಟೆ ಕಟ್ಟಿ ತಂದಿದ್ದರು ತರಕಾರಿಯನ್ನು.

ಗೌರಿ ನೀರು ಕೊಟ್ಟು, ಆ ಮೂಟೆಯನ್ನು ಒಳಗೆ ತೆಗೆದುಕೊಂಡು ಹೋದಳು. ಶಂಕರ ಊರೆಲ್ಲಾ ಸುತ್ತಾಡಿದ. ಸುತ್ತಾಡುವುದಕ್ಕೆ ಆ ಊರು ದೊಡ್ಡದೇನೂ ಅಲ್ಲವಾಗಿದ್ದರಿಂದ ಇರುವ ನಾಲ್ಕು ಬೀದಿಗಳನ್ನು ಮತ್ತೆ ಮತ್ತೆ ಸುತ್ತಿದ್ದ. ತನಗೆ ಆಶ್ರಯ ನೀಡುವ ದಾತರು ಯಾರಾದರೂ ಸಿಕ್ಕಾರೇನೋ ಎಂದು ಬಹುಶಃ ನೋಡಿರಬೇಕು. ಆದರೆ ಎಲ್ಲಿಂದಲೋ ಆಗಂತುಕ ವ್ಯಕ್ತಿಯಾಗಿ ಬಂದ ಆತನ ಬಗ್ಗೆ ಯಾರಿಗೂ ಅಂತಹ ಕಾಳಜಿ ವಹಿಸಬೇಕೆನಿಸಲಿಲ್ಲ. ಊರಿಗೆ ಇವನು ಬಂದದ್ದು ಎಲ್ಲರಿಗೂ ತಿಳಿದುಹೋಯಿತಾದರೂ ಯಾರೂ ಅವನನ್ನು ಕರೆದು ಉಣಲು ಕೊಡಲಿಲ್ಲ.

ಕೊನೆಗೆ ಶಂಕರ ಅಲೆದಾಟ ಹಸಿವು ಛಳಿಗಳಿಂದ ದಣಿದು ನಂಜಮ್ಮನ ಚಾವಡಿಗೆ ಬಂದು ಕುಳಿತ.

ನಂಜಮ್ಮ, ಒಬ್ಬಳೇ ಮುದುಕಿ. ಯಾರ ಹಂಗೂ ಇಲ್ಲದೆ ಸುಮಾರು ಇಪ್ಪತ್ತು ವರ್ಷಗಳಿಂದ ಈ ಊರಿನಲ್ಲಿ ಒಬ್ಬಳೇ ಜೀವಿಸುತ್ತಿದ್ದಳು. ಅವಳಿಗಿದ್ದ ಆಸ್ತಿಯೆಲ್ಲ ಒಂದು ಹಸು, ಒಂದು ಗುಡಿಸಲು, ಅಷ್ಟೇ. ಒಬ್ಬ ಸಣ್ಣ ಹುಡುಗನನ್ನು ಕೆಲಸಕ್ಕೆ ಇಟ್ಟುಕೊಂಡಿದ್ದಳು. ಅವನು ಹಸು ಮೇಯಿಸುವುದು, ಹಾಲು ಕರೆಯುವ ಕೆಲಸಗಳನ್ನು ಮಾಡಿಕೊಡುತ್ತಿದ್ದ. ಇನ್ನು ಅಟ್ಟುವುದು ಅವಳ ಕೆಲಸ. ಇದ್ದ ಒಬ್ಬಳಿಗೆ ಏನೂ ಬೇಯಿಸಿದರೂ ಆಗುತ್ತಿತ್ತು. ಹೆಚ್ಚೆಂದರೆ ಕೆಲಸದ ಕರಿಯ ನಂಜಜ್ಜಿಯ ಜೊತೆಗೆ ಊಟಕ್ಕಿರುತ್ತಿದ್ದ.

ಈ ಎರಡು ಮೂರು ದಿನಗಳಿಂದ ಕರಿಯನಿಗೆ 'ಭೇದಿ'ಯಾದ್ದರಿಂದ ಕೆಲಸಕ್ಕೆ ಬಂದಿರಲಿಲ್ಲ. ಪಾಪ ನಂಜಜ್ಜಿ ಕೈಲಾದ ಮಟ್ಟಿಗೆ, ತಾನೇ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದಳು.

ರಾತ್ರಿ ಬೇಯಿಸಿದ ಅನ್ನವೋ ಮುದ್ದೆಯೋ ಇದ್ದರೆ ಅದನ್ನೇ ಬೆಳಿಗ್ಗೆ ಉಂಡು ಇದ್ದುಬಿಡುತ್ತಿದ್ದಳು. ಈಗ ಛಳಿಗಾಲ, ತಂಗಳು ತಿನ್ನಲು ಆಗುವುದಿಲ್ಲವೆಂದು ಅದನ್ನು ಯಾರಿಗಾದರೂ ಹಾಕೋಣವೆಂದು, ಹೊರಗೆ ಬಂದಳು.

ಶಂಕರ ಕುಳಿತಿದ್ದನ್ನು, ನೋಡಿ, ಭಿಕ್ಷುಕನೆಂದು ಭಾವಿಸಿ, "ಉಣ್ತೀಯ ಮಗ?" ಎಂದು ಕೇಳಿದಳು.

ಶಂಕರ ಹೂಂಗುಟ್ಟಿದ. ನಂಜಮ್ಮ ಹಾಕಿದ ತಂಗೂಳನ್ನು ಉಂಡು ತೃಪ್ತಿಯಿಂದ ಅವಳತ್ತ ನೋಡಿದ. ಅವನು ಆತುರವಾಗಿ ಉಣ್ಣುವುದನ್ನು ನೋಡಿದ ನಂಜಮ್ಮ, "ಪಾಪ ಏಟು ಅಸ್ಕೊಂಡವ್ನೋ ಏನೋ" ಎಂದು ಕನಿಕರ ತೋರಿದಳು. ಅವನನ್ನು ನೋಡುತ್ತಿದ್ದಂತೆ ಆಕೆಗೆ ತನ್ನ ಮಗನ ನೆನಪಾಯಿತು. ಅವನು ಬದುಕಿದ್ದರೆ ಸರಿಸುಮಾರು ಇದೇ ವಯಸ್ಸಿನವನಾಗಿರುತ್ತಿದ್ದ ಎನಿಸಿತು.

"ಮಗ, ಈ ಊರಿಗೆ ಒಸಬಾಂತ ಕಾಣಿಸ್ತೈತಿ, ಎಲ್ಲಿಂದ ಬಂದಿ?" ಎಂದು ವಾತ್ಸಲ್ಯದಿಂದ ಕೇಳಿದಳು.

"ತುಂಬಾ ದೂರದಿಂದ ಬಂದಿದ್ದೀನಿ." ಎಂದ.

"ಯಾಕಾ? ನಿಂಗೆ ಅಪ್ಪ ಅಮ್ಮ ಯಾರು ಇಲ್ವಾ?"

"ಇಲ್ಲ, ಇದ್ದಾರೆ" ಎಂದು ಒಗಟಾಗಿ ಹೇಳಿದ.

"ಅಂಗಂದ್ರೆ ಏನು? ಇಲ್ಲಾಂತಿ, ಇದಾರೇಂತಿ. ಇಚಿತ್ರವಾಗೈತೆ!-" ಎಂದಳು.

ಅಜ್ಜೀ, ನಾ ಇನ್ನು ಬರ್ತೀನಿ. ಉಂಡಾಯ್ತಲ್ಲ. ಎಂದ ತೃಪ್ತಿಯಿಂದ.

"ಯಾಕ್ಲಾ? ನಮ್ಮ ಅಟ್ಟಿ ಚಾವಡ್ಯಾಗಾ ಇರಾಕೆ ಇಷ್ಟ ಇಲ್ಲಾ?.... ಎಲ್ಲಂತ ಓಗ್ತೀ?" ಎಂದು ಪ್ರಶ್ನಿಸಿದಳು.

"ನಂಗೇ ನಜ್ಜ. ಎಲ್ಲಂದ್ರೂ ಆಯ್ತು.... ನಿನ್ನ ಕೈ ಹಿಟ್ಟು ತಿಂದದ್ದಾಯ್ತಲ್ಲ. ಇನ್ನು ಹೋಗ್ತೀನಿ" ಎಂದು ಎದ್ದ.

ಮುದುಕಿ ನಂಜಮ್ಮನಿಗೆ ಅವನನ್ನು ಮಾತನಾಡಿಸಿದಷ್ಟೂ ಹಿತವೆನಿಸುತ್ತಿತ್ತು. ಎಷ್ಟೋ ವರ್ಷಗಳ ಹಿಂದೆ ಸತ್ತ ಮಗನನ್ನು ನೋಡಿದಷ್ಟೇ ಸಂತೋಷವೆನಿಸಿತು. ತಾನು ಇರುವವಳು ಒಬ್ಬಳು. ಈ ಚಾವಡಿಯಲ್ಲಿ ಬಿದ್ದುಕೊಂಡಿದ್ದರೂ ಅವನ ಪಾಡಾಯ್ತು. "ನಂದು ಗಂಟೇನೂ ಒಗಾಕಿಲ್ಲ. ಇಲ್ಲೇ ಇರುವಂತೆ ಯೋಳ್ತೀನಿ" ಅಂದುಕೊಂಡಳು.

"ಮಗ, ನಿನ್ನ ನೋಡಿದ್ರೆ ನನ್ನ ಮಗನಾ! ಅನಿಸ್ತದೆ. ಈ ಚಾವಡಿಯಾಗೇ ಇದ್ದುಬಿಡು. ನಂಗೂ ಯಾರೂ ಇಲ್ಲ" ಎಂದು ಹೇಳಿ, ಹಟ್ಟಿಯ ಪಕ್ಕದಲ್ಲಿ ಹಾಕಿದ್ದ ಒಂದು ಬಣಬೆಯನ್ನು ತಲೆಯ ಮೇಲೆ ಹೊತ್ತುಕೊಂಡಳು. ಶಂಕರ ಮುದುಕಿ ಹೊರುತ್ತಿದ್ದುದನ್ನು ನೋಡಿ, "ಇಲ್ಲಿ ಕೊಡು ಅಜ್ಜಿನ ನಾ ಹೊರ್ತೀನಿ ಎಂದು ಅವಳ ಕೈಯಿಂದ ಬಣಬೆಯನ್ನು ಇಸಿದುಕೊಂಡು ತಾನು ಹೊತ್ತು, 'ಎಲ್ಲಿ ಹಾಕಬೇಕೆಂದು ಕೇಳಿದ. ದಿಢೀರನೆ ತನ್ನ ಕೈಯಿಂದ ಕಿತ್ತುಕೊಂಡು ತಾನು ಹೊತ್ತ ಶಂಕರನನ್ನು ಕಂಡು ಮುದುಕಿಗೆ ಅಚ್ಚರಿಯಾಯಿತು. "ಇದೇನ್ಲಾ ಇಂತ ಕೆಲಸ ಮಾಡಿದಿ. ಇಂದಾ ಮನಿ ಆತ್ರಕ್ಕೆ ಬಂದಿ. ಆಗಲೇ ನಂಗೆ ಸಾಯಾಮಾಡ್ಯಾಕೆ ಬಂಬೂಟಿ? ಎಂದು ಕೇಳಿದಳು.

"ನೀನು ನಂಗೆ ಮಗಾ ಅಂತ ಕರೆದೆ. ಅದಕ್ಕೇ ನಿನಗೆ ಸಹಾಯ ಮಾಡೋಕೆ ಹೊರಟದ್ದು" ಎಂದು ಹೇಳುತ್ತಿದ್ದಂತೆ,

ಭೀಮರಾಯರು ಅತ್ತ ಬಂದರು. "ಏನು 'ನಂಜವ್ವ' ಇಲ್ಲಿಗೆ ಬಂದು ವಕ್ರಿಸಿದನಾ ಇವನು?" ಎಂದು ನಕ್ಕು ಕೇಳಿದರು.

ಬೆರಗಾಗಿ ನೋಡುತ್ತಾ ನಿಂತ ನಂಜಮ್ಮ, "ಅಂಥಾ ಮಾತಾಡಬ್ಯೇಡ ಭೀಮಣ್ಣ. ಒಳ್ಳೆಯವನಾಗಿ ಕಾಣಿಸ್ತಾನೆ. ನಿಯೊತ್ತಾ ಇವೆ?" ಎಂದು ಕೇಳಿದಳು.

"ಹೂಂ! ಬೆಳಿಗ್ಗೆದ್ದು ಮೊಟ್ಟ ಮೊದಲು ನೋಡಿದ್ದು ಇವನ ಮಾರಿನೇ!.... ಎಲ್ಲಿಯವನಂತ ವಿಚಾರಿಸಿದರೆ ಏನೂ ಹೇಳಿಲ್ಲ. ಮೂಕ ಇದ್ದಂಗೆ ಇರ್ತಾನೆ" ಎಂದರು.

"ಏಯ್, ಏನ್ಮಾತಾಡ್ತಿ ಭೀಮಣ್ಣ? ಈಗ ತಾನೇ ಏಟು ಚಂದ ಮಾತಾಡ್ತಾ ಇದ್ದ. ನಂಗ ಅವನ ಮಾತು ನನ್ನ ಮಗ 'ಬಸವ'ನ ಮಾತಾ ಇದ್ದಾಂಗ ಇರ್ತಾದ" ಎಂದಳು.

ಭೀಮರಾಯರು ಬಂದದ್ದು ನೋಡಿಯೇ ಸಂಕೋಚವಾಯಿತು ಶಂಕರನಿಗೆ. ನಾಚಿಕೆಪಡುತ್ತಲೇ "ಅಜ್ಜಿ ಎಲ್ಲಿ ಹಾಕಲಿ?" ಎಂದು ಕೇಳಿದ. "ಹಿತ್ತಿಲ ಕೊಟ್ಟಿಗೆ ವಳಗ ಆಕ. ನಾ ಬತ್ತೀನಿ ತೋರಿಸ್ತೀನಿ ಎಂದು ಶಂಕರನನ್ನು ಕರೆದೊಯ್ದಳು. ಭೀಮರಾಯ ಮುದುಕಿಗೆ 'ಬರ್ತೀನಜ್ಜಿ' ಎಂದು ಹೇಳಿ ಹೊರಟರು.

ಆ ದಿನವೆಲ್ಲಾ ಶಂಕರ ನಂಜಮ್ಮನ ಚಾವಡಿಯಲ್ಲೇ ಇದ್ದ. ನಂಜಮ್ಮ ಇಬ್ಬರಿಗೂ ಅಡುಗೆ ಮಾಡಿದಳು.

ಈ ಪುಟ್ಟ ಊರಲ್ಲಿ ಏನು ಘಟಿಸಿದರೂ, ಯಾರು ಬಂದರೂ ಆ ಇಡೀ ಊರಿಗೇ ತಿಳಿದುಹೋಗುತ್ತಿತ್ತು. ಇದ್ದದ್ದೇ ಮುಖ್ಯವಾಗಿ ನಾಲ್ಕು ಬೀದಿಗಳು, ಅವೂ ಒಂದಕ್ಕೊಂದು ಅಂಟಿದಂತೆ. ಊರೊಳಕ್ಕೆ ಬರಬೇಕಾದರೆ ಕಟ್ಟೆಯ ಮೇಲೆ ನಡೆದು ಬರಬೇಕಿತ್ತು. ಕಟ್ಟೆಯ ಎಡಗಡೆಗೆ ದೊಡ್ಡ ಕೆರೆ, ಬಲಗಡೆಗೆ ಬತ್ತದ ಗದ್ದೆಗಳು. ಈ ಕೆರೆಯ ನೀರೆ ಆಚೆ ಕಡೆಯ ಗದ್ದೆಗಳಿಗೆ ಸರಬರಾಜಾಗುತ್ತಿದ್ದುದು. ಈ ಗದ್ದೆಗಳಿಗೆ ಅಂಟಿಕೊಂಡಂತೆ, ಕಟ್ಟೆಯ ಅರ್ಧ ದಾರಿಗೆ ಸರಿಯಾಗಿ ಒಂದು ಮಂಜುನಾಥನ ಸಣ್ಣ ಗುಡಿ. ಅದಕ್ಕೆಂದೂ ಪೂಜೆ ಪುರಸ್ಕಾರಗಳು ನಡೆಯುತ್ತಿದ್ದುದಿಲ್ಲ. ವರ್ಷಕ್ಕೆ ಒಂದೆರಡು ಬಾರಿ ಪೂಜೆ ನಡೆಯುವುದೇ ಅಪರೂಪ. ಉಳಿದೆಲ್ಲಾ ದಿನಗಳಲ್ಲೂ ಗುಡಿಯ ಬಾಗಿಲಿಗೆ ಬೀಗ ಮುದ್ರೆ ಇರುತ್ತಿತ್ತು. ಮುಂದುಗಡೆ ಐದು ಅಡಿಯ ಧ್ವಜಸ್ತಂಭ. ಅದರ ನಂತರ ಚಿಕ್ಕದೊಂದು ಬಸವನ ವಿಗ್ರಹ.

ಕಟ್ಟೆಯೇ ಜನಕ್ಕೆ ಕಾಲುದಾರಿಯಾಗಿತ್ತು. ಹಾಗಾಗಿ ಈ ಕಾಲು ದಾರಿಯಲ್ಲಿ ಓಡಾಡುವವರೆಲ್ಲಾ, ಅನಿವಾರ್ಯವಾಗಿ ಈ ಗುಡಿಯ ಮುಂದೆ ನಿಂತು ನಮಸ್ಕರಿಸಿ, ಬಾಗಿಲ ಸಂದಿಯಿಂದಲೇ ದೇವರ ದರ್ಶನ ಮಾಡಿ ಹೋಗುತ್ತಿದ್ದರು.

ಕಾಲುದಾರಿ ಕೊನೆಯಾಗಿ ಊರು ಪ್ರಾರಂಭವಾಗಿತ್ತು. ಅದಕ್ಕೂ ಆಚೆ ಅಂದರೆ ಕೆರೆಯ ಇನ್ನೊಂದು ಕೊನೆಗೆ ಗ್ರಾಮದೇವತೆ ರೇಣುಕೆಯ ಗುಡಿಯಿತ್ತು. ಈ ದೇವತೆಯ ಬಗ್ಗೆ ಆ ಊರಿನ ಜನರ ಭಯ ಭಕ್ತಿಗಳು ಹೆಚ್ಚು. ಊರಿಗೆ ಯಾವ ಕಾಯಿಲೆ ಕಸಾಲೆ ಬಾರದಂತೆ ನೋಡಿಕೊಂಡು, ಅಲ್ಲಿನ ಜನರನ್ನು ತುಂಬು ಜಾಗರೂಕತೆಯಿಂದ ರಕ್ಷಿಸುತ್ತಿದ್ದಾಳೆಂದು ಆ ಗ್ರಾಮದ ಜನರ ಆಳವಾದ ನಂಬಿಕೆ. ಅದಕ್ಕೆಂದೇ ವರ್ಷಕ್ಕೊಮ್ಮೆ ಈ ಊರಿನ ಜನ ಆ ದೇವತೆಯ ಹೆಸರಿನಲ್ಲಿ ಸುಮಾರು ಮೇ ತಿಂಗಳ ಮಧ್ಯೆ ಮೂರು ದಿನಗಳ ಜಾತ್ರೆ ನಡೆಸುತ್ತಿದ್ದರು. ಆ ಊರಷ್ಟೇ ಅಲ್ಲದೆ ಸುತ್ತಮುತ್ತಲಿನ ಊರಿನವರೆಲ್ಲಾ ಈ ಜಾತ್ರೆಗೆ ಬಂದು ಸೇರಿ ತಮ್ಮ ತಮ್ಮ ಮುಡಿಪುಗಳನ್ನು ಸಲ್ಲಿಸುತ್ತಿದ್ದರು. ಈ ಗ್ರಾಮದೇವತೆಯ ಮಹಿಮೆಯ ಬಗ್ಗೆ ಅವರೆಲ್ಲರಿಗೂ ಇಷ್ಟೇ ಅಪಾರವಾದ ನಂಬಿಕೆಯಿತ್ತು.

ಇಂಥಾ ಹಳ್ಳಿಗೆ 'ಶಂಕರ' ಬಂದದ್ದು ಎಲ್ಲರಿಗೂ ತಿಳಿಯಿತಾದರೂ ಅವನ ಬಗ್ಗೆ ಅಷ್ಟೊಂದು ಕುತೂಹಲ ತೋರಲಿಲ್ಲ.

ದಿನಗಳು ಕಳೆದವು. ಶಂಕರ ಊರಿಗೆಲ್ಲಾ ಈಗ ಪರಿಚಿತನಾಗಿದ್ದ. ಪ್ರತಿಯೊಬ್ಬರಿಗೂ ತನಗಿಷ್ಟ ಬಂದ ಸಹಾಯ ಮಾಡುತ್ತಿದ್ದ. ಅವರೇನಾದರೂ ಕೊಟ್ಟರೆ ತಿನ್ನುತ್ತಿದ್ದ, ಇಲ್ಲವಾದರೆ ಸುಮ್ಮನಿದ್ದು ಬಿಡುತ್ತಿದ್ದ.

ಬೆಳಗಿನಿಂದ ಸಂಜೆವರೆಗೆ ಊರೆಲ್ಲಾ ಸುತ್ತಾಡಿದರೂ ರಾತ್ರಿಗೆ ಮಾತ್ರ ನಂಜಮ್ಮನ ಚಾವಡಿಯಲ್ಲಿ ಹಾಜರಾಗುತ್ತಿದ್ದ.

ಊರಿನ ಮಕ್ಕಳ ಜೊತೆಗೆ ಗೋಲಿ, ಬುಗುರಿ ಆಡುತ್ತಿದ್ದ. ದೊಡ್ಡವರ ಜೊತೆಗೆ ಕುಳಿತು ವೇದಾಂತ ಮಾತಾಡುತ್ತಿದ್ದ. ಅವರಿಗೆಲ್ಲಾ ಇವನ ಮಾತಿನ ರೀತಿ ನೋಡಿದರೆ ತುಂಬ ಬುದ್ಧಿವಂತ ಎನಿಸುತ್ತಿತ್ತು. ಆದರೆ ಒಮ್ಮೊಮ್ಮೆ ದಿನಗಟ್ಟಲೆ ಮಾತಾಡದೆ, ಊರ ಮೊದಲಲ್ಲೇ ಇರುವ ಅರಳಿ ಕಟ್ಟೆ ಮೇಲೆ ಬುದ್ಧನಂತೆ ಮೌನವಾಗಿ ಕುಳಿತುಬಿಡುತ್ತಿದ್ದ. ಆಗ ಅವನಿಗೆ ಊಟವೂ ಬೇಕಿರಲಿಲ್ಲ! ನಿದ್ದೆಯೂ ಬೇಕಿರಲಿಲ್ಲ.

ಊರಿನವರು ಯಾರಾದರೂ ಕನಿಕರದಿಂದ ಅಂಥ ಸಂದರ್ಭದಲ್ಲಿ ಅಲ್ಲಿಗೇ ಊಟವನ್ನು ಕಳಿಸಿದರೂ ಮುಟ್ಟುತ್ತಿರಲಿಲ್ಲ. ದಿನಗಟ್ಟಲೇ ಉಪವಾಸವಿದ್ದೂ, ಎಂದೋ ಒಂದು ದಿನ ಜ್ಞಾನೋದಯವಾದ ಬುದ್ಧನಂತೆ ಉಲ್ಲಾಸವಾಗಿ ಎಲ್ಲರೊಂದಿಗೆ ಮಾತಾಡುತ್ತಿದ್ದ. ಯಾರಾದರೂ ಏನಾದರೂ ಕೊಟ್ಟರೂ ಸಂಕೋಚವಿಲ್ಲದೆ ತಿನ್ನುತ್ತಿದ್ದ.

ಶಂಕರನ ರೀತೀನೇ ವಿಚಿತ್ರವಾಗಿತ್ತು. ಅದಕ್ಕೆ ಕೆಲವರು ಅವನನ್ನು 'ಹುಚ್ಚ ಶಂಕರ ಎಂದು ಕರೆಯ ತೊಡಗಿದರು.

ಮಕ್ಕಳೆಲ್ಲಾ ಕೀಟಲೆ ಮಾಡಿದರೂ ತಾನು ಮಾತ್ರ ಯಾರ ತಂಟೆಗೂ ಹೋಗದೆ ಅವರಂದದ್ದನ್ನು ನಗುತ್ತಲೇ ಸ್ವೀಕರಿಸುತ್ತಿದ್ದ.

ಒಮ್ಮೆ ಸಂಜೆ ಊರಿನ ಜನವೆಲ್ಲಾ ಕೆಲಸದಿಂದ ಮನೆಗೆ ಮರಳುತ್ತಿದ್ದಾರೆ. ಶಂಕರ ಕೆರೆಯ ದಂಡೆಯ ಮೇಲೆ ಕುಳಿತು, ತೊಟ್ಟ ಅಂಗಿಯನ್ನು ಬಿಚ್ಚಿ, ಚೂರು ಚೂರಾಗಿ ಹರಿದು ಒಂದೊಂದೇ ತುಂಡನ್ನು ಕೆರೆಯ ನೀರಿನಲ್ಲಿ ತೇಲಿ ಬಿಡುತ್ತಿದ್ದ. ಭೀಮರಾಯರ ಮನೆಯ ಆಳು ರಾಚ ಬರುವಾಗ, ಶಂಕರನನ್ನು ನೋಡಿದ. ಇವನಿಗೇನು ತಲೆ ಕೆಟ್ಟಿದೆ, ಹೀಗೆ ಬಟ್ಟೇನ ಹರಿದು ಹಾಕ್ತಿದ್ದಾನೆ? ಎನಿಸಿತು. "ಲೋ ಶಂಕರ, ಏನೋ ನಿಂದು ಹುಚ್ಚು? ಬಟ್ಟೆ ಬಿಸಾಡಿ ಬತ್ತಲು ಇರಬೇಕಂತ ಮಾಡಿಯೇನು?" ಎಂದು ಕೇಳಿದ. ಶಂಕರ, ತಿರುಗಿ ರಾಚನ ಕಡೆ ನೋಡಿ ಮುಗುಳುನಕ್ಕ. "ಬತ್ತಲು ಬತ್ತಲು, ಬರುವಾಗ ಬತ್ತಲು, ಇರುವಾಗ ಕತ್ತಲು, ಹೊರಟಾಗ ಬತ್ತಲು ಎಂದು ಹೇಳಿ ಕಿಲಕಿಲನಕ್ಕ. "ಎಲಾ ಇವನ! ಹಾಡು ಬ್ಯಾರೆ ಕಟ್ತಾನೆ!" ಎಂದು ಅಚ್ಚರಿ ಪಟ್ಟ.

"ಏಲ್ಲಾ ಹೋಗಾನ ಊರೊಳಕ್ಕ" ಎಂದು ಶಂಕರನ ರಟ್ಟೆ ಹಿಡಿದು ಎಬ್ಬಿಸಿದ. "ಅಯ್ಯಪ್ಪ", ಎಂದು ಶಂಕರ ಎದ್ದ. ರಾಚನಿಗೆ ಮಾತು ಎಂದರೆ ಬಲು ಇಷ್ಟ. ದಾರೀಲಿ ಬರುವಾಗ ಯಾರೂ ಇಲ್ಲದಿದ್ದರೆ 'ಮರ'ವನ್ನಾದರೂ ಮಾತಾಡಿಸಿ ಬರ್‍ತಾನೆ. ಅಂಥಾದ್ದರಲ್ಲಿ ಈಗ ಶಂಕರ ಸಿಕ್ಕ. ಎರಡು ಹೆಜ್ಜೆ ನಡೆದ ರಾಚ, "ಶಂಕರ, ನೀನು ಮದುವಿ ಆಗಾಕಿಲ್ವ? ಎಂದು ಕೀಟಲೆ ಮಾಡಿದ. ಶಂಕರನಿಗೇನು? ಎದುರಿನವರನ್ನು ಬೆಪ್ಪುಗೊಳಿಸುವ ಮಾತು ಇದ್ದೇ ಇತ್ತು. "ಮದುವೆ ಮಾಡಿದರು ನಂಗೆ ಮುತ್ತೀನ ಮಡದಿ ಕೊಟ್ಟು, ಬಂದೇನಿ ಬಿಟ್ಟವಳ ಬತ್ತಲ ತೊಟ್ಟು' – ಎಂದು ಟಕ್ಕೆಂದು ಉತ್ತರ ಕೊಟ್ಟ.

"ಯಾಕ್ಲಾ ಶಂಕರ ನಿಂಗೆ ಎಂಡ್ರು ಬೇಡಾನ್ಸಿತಾ?" ಎಂದು ಕೇಳಿದ.

"ರಾಚಣ್ಣ, ಬೇಕು ಬೇಡಾನ್ನೋರು ನಾವ್ಯಾರು? ಹೆಂಡ್ರು ಮಕ್ಕಳು, ತಂದೆ ತಾಯಿ ಎಲ್ಲಾ ಸುಳ್ಳು. ಎಲ್ಲಾ ಭ್ರಾಂತಿ! ಇದಕ್ಕೆ ನಾವು ಬೀಳಬಾರದು" ಎಂದ ಮುಗ್ಧ ವೇದಾಂತಿಯಂತೆ.

"ನಂಗೆ ಮಾತ್ರ ನನ್ನ ಹೆಂಡ್ರನ್ನ ಕಂಡರೆ ಪಿರಾಣ ಶಂಕರಪ್ಪ. ಅವರಿಲ್ದೆ ನಂಗೆ ಇರಾಕೆ ಆಗಾಣಿಲ್ಲ" ಎಂದ.

"ನಿಂದು ನಿನಗೆ, ನಂದು ನನಗೆ. ನನ್ನ ದಾರಿಯಲ್ಲಿ ನಾ ಹೋಗ್ತೀನಿ. ನೀವ್ಯಾರೂ ಬರೋಕೆ ಆಗೊಲ್ಲ" ಎಂದ ಒಗಟಾಗಿ.

"ಅದೇನಪ್ಪ ನಿಂದಾರಿ ಅಂಥಾದ್ದು?" ಎಂದು ಅಚ್ಚರಿಯಿಂದ ಕೇಳಿದ.

"ನೋಡಿದರೆ ಸರಿಯಾಗು ಕಾಣ್ಸುತ್ತೆ. ಇಲ್ಲ ಮತ್ತಷ್ಟು ದಾರಿ ತಪ್ಪುತ್ತೆ! ತಿಳೀತಾ?" ಎಂದ. ಮಾತಾಡುತ್ತಾ ನಡೆದದ್ದರಿಂದ ಬೇಗನೆ ಮನೆ ಸೇರಿದಂತಾಯಿತು. ರಾಚನ ಗುಡಿಸಲು ಸಿಕ್ಕಿತು. ರಾಚನ ಹೆಂಡತಿ 'ಮಲ್ಲಿ' ರಾಚ ಒಳಗೆ ಪ್ರವೇಶಿಸುತ್ತಿದ್ದಂತೆ "ರಾಚ, ರಾಚ ಅಲ್ಲೇ ನಿಲ್ಲು" ಎಂದು ಹೇಳುತ್ತಾ ಹೊರಗೆ ಬಂದಳು. "ಯಾಕಾ ಮಲ್ಲಿ ಒಳಗೆ ಬರಬಾರದಂತೆ ಒರಗಾ ನಿಲ್ಲಿಸಿದಿಯೇನಾ?" ಎಂದು ಕೇಳಿದ. ಹೊರಗೆ ಬಂದಿದ್ದ ಮಲ್ಲಿ, "ನಮ್ಮ ಸಣ್ಣುಡುಗಾ ಮನೀಗಾ ಬಂದಿಲ್ಲ ರಾಚ. ಈಗಾಗ್ಲೇ ಕತ್ತಲಾ ಕವಿದೇತಿ; ಮಧ್ಯಾಹ್ನ ಉಂಡು ಓದವ್ನು ಈಟೊತ್ತಾತು. ಇನ್ನೂ ಬಂದಾ ಇಲ್ಲ. ಕರಿಯ, ಚೆನ್ನ ಇವರ್ನೆಲ್ಲಾ ಕಳಿಸ್ಯೇನಿ. ಆದರೂ ಅಂವ ಬಂದಿಲ್ಲ. ನಂಗ ಭಾಳ ಭಯಾ ಆಗೈತಿ ರಾಚ.

ರಾಚ ಮಲ್ಲಿಯರ ಮಗ 'ಮಂಜ' ಒಂಬತ್ತು ವರ್ಷದವ. ರಾಚ ಗದ್ದೆ ಕೆಲಸಕ್ಕೆ ಬೆಳಗ್ಗೇನೆ ಹೊರಟುಹೋದ. ಮಧ್ಯಾಹ್ನ ಮಲ್ಲಿ ಮಂಜನಿಗೆ ಉಣಲಿಕ್ಕಿ, ರಾಚನಿಗೆ ಹಿಟ್ಟು ಹೊತ್ತುಕೊಂಡು ಹೊಲಕ್ಕೆ ಹೋದಳು. ತಾನು ಬರುವವರೆಪಿಗೂ ಮಂಜನ್ನ

ಗುಡಿಸಲಲ್ಲಿ ಇರಲು ಹೇಳಿ. ಪಕ್ಕದ ಗುಡಿಸಲ ಕರಿಯು, ಚೆನ್ನರನ್ನು ಸ್ವಲ್ಪ ನೋಡಿಕೊಂಡಿರುವಂತೆ ತಿಳಿಸಿ ಹೊರಟಿದ್ದಳು. ಹೊಲಕ್ಕೆ ಹೋದ ಮಲ್ಲಿ ಒಂದು ಗಂಟೆಯ ನಂತರ ಹಿಂತಿರುಗಿ ಬಂದು ಮಂಜನನ್ನು ಕೂಗಿದಳು. ಆದರೆ ಓಗೊಡಲಿಲ್ಲ. ಮಂಜ ಹತ್ತಿರದಲ್ಲಿ ಕರಿಯ ಚೆನ್ನರೂ ಕಾಣಿಸಲಿಲ್ಲ. ಅವರಿಗೆ ಮನೆ ಒಪ್ಪಿಸಿ ಹೋಗಿದ್ದಳು. ಮಂಜನೇನಾದರೂ ಒಳಗೆ ಮಲಗಿದ್ದಾನೇನೋ ಎಂದು ಹುಡುಕಾಡಿದಳು. ಆದರೆ ಮಂಜ ಇರಲಿಲ್ಲ. ಭಯವಾಯಿತು. ಮಂಜ ತುಂಬಾ ತುಂಟ ಹುಡುಗನಾಗಿದ್ದ. ಕಣ್ಣು ತಪ್ಪಿದರೆ ಸಾಕು ಪರಾರಿಯಾಗಿ ಬಿಡುತ್ತಿದ್ದ. ಯಾರ ಹೊಲದಲ್ಲಾದರೆ ಅಲ್ಲಿಗೆ ನುಗ್ಗಿಬಿಡುತ್ತಿದ್ದ. ಸರಸರ ಮರ ಏರಿ ಕುಳಿತುಬಿಡುತ್ತಿದ್ದ. ಅವನನ್ನು ಹಿಡಿಯುವುದೇ ಪ್ರಯಾಸವಾಗಿತ್ತು.

ಈಗ ನೋಡಿದರೆ ಮಂಜ ಇಲ್ಲ. ಕೇಳೋಣವೆಂದರೆ ಆ ಹುಡುಗರೂ ಇಲ್ಲ. ಕರಿಯನ ತಾಯಿ ವೆಂಕಿಯನ್ನು ಕೇಳಿದಳು. ವೆಂಕಿ, ತಾ–ಕಾಣೆನೆಂದು ಉತ್ತರವಿತ್ತಳು. ಚೆನ್ನನ ಮನೆ ಬಾಗಿಲು ಹಾಕಿತ್ತು. ಅಕ್ಕಪಕ್ಕದ ಎಲ್ಲಾ ಮನೆಗಳಲ್ಲೂ ವಿಚಾರಿಸಿದಳು. ಕೊನೆಗೆ ಭೀಮರಾಯರ ಮನೆಗೆ ಬಂದಳು. ಅವರ ಮೊಮ್ಮಕ್ಕಳ ಜತೆಗೇನಾದರೂ ಆಡಲು ಬಂದಿರಬಹುದೆಂದು ಭಾವಿಸಿದಳು. ಅವಳು ಬರುವ ಹೊತ್ತಿಗೆ, ಭೀಮರಾಯರೇ ತಮ್ಮ ಮೊಮ್ಮಕ್ಕಳೊಂದಿಗೆ ಚೌಕಾಭಾರ ಆಡುತ್ತಿದ್ದರು. ಮಲ್ಲಿ ಬಂದದ್ದನ್ನು ನೋಡಿ ಭೀಮರಾಯರೇ ಕೇಳಿದರು. "ಏನು ಮಲ್ಲಕ್ಕ, ಇಷ್ಟು ಮಧ್ಯಾಹ್ನದಲ್ಲಿ ಈ ಕಡೆ ರಾಚಂಗೆ ಊಟ ಕೊಡಲು ಹೋಗಲಿಲ್ಲವೇನು?... ಅವನಿಗೆ ಹೇಳು. ನಾಳೆ ಬೆಳಿಗ್ಗೆ ಗದ್ದೆ ಕಡೆ ಹೋಗುವಾಗ ಮನೆಗೆ ಬಂದು ಹೋಗಬೇಕಂತ" ಎಂದರು.

ಭಾಗೀರಥಮ್ಮ ಹಜಾರದೊಳಗೆ ಕುಳಿತು ಬತ್ತಿ ಹೊಸೆಯುತ್ತಿದ್ದರು. ಪಕ್ಕದಲ್ಲಿಯೇ ಗೌರಿ ಕುಳಿತು ಕಸೂತಿ ಬಿಡಿಸುತ್ತಿದ್ದಳು. ಮಲ್ಲಿಯನ್ನು ಮಾತಾಡಿಸುತ್ತಿದ್ದುದನ್ನು ಕೇಳಿಸಿಕೊಂಡು ಭಾಗೀರಥಮ್ಮ, "ಒಳಗೆ ಬಾ ಮಲ್ಲಿ, ಹೋಗುವಿಯಂತೆ" ಎಂದರು.

"ಇಲ್ಲವ್ವ ಈಗ ಬರಾಕಿಲ್ಲ. ನನ್ನ ಮಗ ಮಂಜ್ಯ ನಿಮ್ಮ ಮನೀಕಡೆ ಬಂದವ್ನೇನೋ ನೋಡಣಾಂತ ಬಂದಿ.... ಇಲ್ಲಿಗೇನಾರ ಬಂದಿದ್ನೇನು ಭಾಗೀರಥವ್ವ?" ಎಂದು ಕೇಳಿದಳು.

ಭಾಗೀರಥಮ್ಮ ತಾನು ಕಾಣೆನೆಂದಳು. ಆದರೆ ಭೀಮರಾಯರ ಮೊಮ್ಮಗ ಸೀನು, "ಪದ್ದಿ, ಸ್ವಲ್ಪ ಹೊತ್ತಿಗೆ ಮುಂಚೆ ಮಂಜ್ಯ ಚೆನ್ನನ ಜೊತೆ ಚೈನಾ ಮಿಠಾಯಿಯವನ ಹಿಂದೆ ಹೋದರು" ಎಂದು ಹೇಳಿದ.

ಮಲ್ಲಿ "ಹಂಗಾರ ನಾ ಓಗಿ ನೋಡ್ತೀನಿ. ಆಮ್ಯಾಲಿ ಬರ್ತೇನವ್ವ" ಎಂದು ಹೇಳಿ ಅಲ್ಲಿ ನಿಲ್ದೆ ಹೋದಳು.

ಊರೆಲ್ಲಾ ಹುಡುಕಿದರೂ ಮಂಜ್ಯ ಕಾಣಲಿಲ್ಲ. ಕತ್ತಲಾಗುವವರೆಗೂ ಹುಡುಕಿದಳು. ಕತ್ತಲಲ್ಲಿ ಮತ್ತೆ ತಾನೊಬ್ಬಳೇ ಹೋಗುವುದಕ್ಕೆ ಹೆದರಿ ರಾಚನಿಗಾಗಿ ಕಾದಿದ್ದಳು.

ಈಗ ಅವನು ಬಂದದ್ದನ್ನು ನೋಡಿ ಹಾಗೇ ಅವನ ಜೊತೆ ಊರ ಹೊರಗಿನ ಹೊಲಗದ್ದೆಗಳಲ್ಲಿ, ಬಸವನ ಗುಡ್ಡದ ಬುಡದಲ್ಲಿ ನೋಡಿ ಬರೋಣವೆಂದು ಹೇಳಿದಳು. ಶಂಕರ ಇವರಿಬ್ಬರ ಮಾತನ್ನೂ ಕೇಳಿದ್ದು ಮುಗಿಲತ್ತ ಮುಖ ಮಾಡಿ ನಕ್ಷತ್ರಗಳನ್ನು ಎಣಿಸುತ್ತಿರುವವನಂತೆ ಕಂಡ. ರಾಚನಿಗೂ ಮಂಜ್ಯ ಕಾಣದಾಗಿದ್ದನೆಂಬ ಸುದ್ದಿ ಗಾಬರಿಗೊಳಿಸಿತು. ಅವರಿಬ್ಬರಿಗೂ ಮಂಜ್ಯ ಒಬ್ಬನೇ ಮಗ. ಮದುವೆಯಾಗಿ ಹತ್ತು ವರ್ಷದ ಮೇಲೇ ಆಗಿತ್ತು. ಮೂರುನಾಲ್ಕು ಬಾರಿ ಮಲ್ಲಿಗೆ ಗರ್ಭಪಾತವಾಗಿತ್ತು. ಗ್ರಾಮದೇವತೆ ರೇಣುಕೆಗೆ, ಊರ ಮುಂದಿನ ಹನುಮಂತರಾಯನಿಗೆ ಕೆರೆಕಟ್ಟೆಯ ಮೇಲಿನ ಮಂಜುನಾಥೇಶ್ವರನಿಗೆ ಹರಕೆಗಳನ್ನು ಹೊತ್ತೂ ಹೊತ್ತು ಸಾಕಾಗಿ ಕೊನೆಗೆ ಐದನೆಯ ಮಗು 'ಮಂಜ್ಯ' ಉಳಿದಿದ್ದ.

ತಮಗಿದ್ದ ಬಡತನವನ್ನೂ ಮೀರಿ ಮಂಜ್ಯನನ್ನು ಮುದ್ದಿನಿಂದ ಬೆಳೆಸಿದರು. ಭಯಪಟ್ಟು ಇಲ್ಲ ಎನ್ನದಂತೆ ತಂದುಕೊಡುತ್ತಿದ್ದರು. ಅವನೇನು ತಪ್ಪು ಮಾಡಿದರೂ ಗದ್ದರಿಸದೆ ನಕ್ಕು ಸಂತೋಷಪಡುತ್ತಿದ್ದರು. 'ಮಂಜ್ಯ'ನಿಗೆ ಅವರ ಸಂತೋಷ ಪ್ರೋತ್ಸಾಹದಂತೆ ಕಂಡಿತು. ಹದ್ದು ಬಸ್ತಿಲ್ಲದೆ ಬೆಳೆಯುತ್ತಿದ್ದ. ಜತೆ ಮಕ್ಕಳನ್ನು ಹೊಡೆಯುತ್ತಿದ್ದ. ಹೋದ ಹೋದವರ ಮನೆಗಳಲ್ಲಿ ಏನು ಸಿಕ್ಕರೂ ಕದಿಯುತ್ತಿದ್ದ. ಪೋಲಿ ಬಸವನಂತೆ ಇಷ್ಟುದ್ದಾ ಹುಡುಗ ಕಂಡಕಂಡವರ ಹೊಲಗಳಿಗೆ ನುಗ್ಗಿ ಸಿಕ್ಕಿದ ಕಾಳು ಕಡ್ಡಿ ಕಾಯಿಗಳನ್ನು ಧ್ವಂಸ ಮಾಡುತ್ತಿದ್ದ. ಇಷ್ಟಾದರೂ ಮಲ್ಲಿ, ರಾಚರು ಸುಮ್ಮನಿರುತ್ತಿದ್ದರು. ತನ್ನನ್ನು ಎದುರಿಸುವವರು ಇಲ್ಲವೆಂಬಂತೆ ಬೀದಿಗೂಳಿಯಂತಾದ.

ನಕ್ಷತ್ರಗಳ ಲೆಕ್ಕ ಹಿಡಿದ ಶಂಕರ, "ರಾಚಣ್ಣ, ನಿನ್ನ ಮಗ ಮಂಜ್ಯ ಆ ಚುಕ್ಕೆಗಳ ಮಧ್ಯೆ ಇದಾನೆ ನೋಡು" – ಎಂದ.

ರಾಚನಿಗೆ ಸಿಟ್ಟು ಬಂತು. "ದರಿದ್ರದವ, ಶುಭ ನುಡಿಯೆ ಶಕುನದ ಅಕ್ಕಿ ಅಂದ್ರೆ ಚಪ್ಪರದ ತುಂಬಾ ಬೋಳಿ ಮುಂಡ್ಯಾರು, ಅಂದಂಗ ಏನ್ಮಾತಾಡ್ತೀಯಪ್ಲಾ? ಉಚ್ಚುಮುಂಡೇದು ನಡಿ ಅತ್ಲಾಗ?" ಎಂದು ಗದ್ದರಿಸಿದ.

"ನಿಜ ಹೇಳಿದರೆ ನಂಬೊಲ್ಲ. ಕಣ್ಣಮುಂದಿಷ್ಟು ಬೆಳಕಿಲ್ಲ. ನಾ ಏನು ಮಾಡಲಿ? ನಿಮಗೇ ತಿಳಿದೀತು. ಬೆಳಗಾದರೆ ಅದು ಬೆಳಕು. ಇದು ಕತ್ತಲು ಎಂದು" ಎಂದು ಹೇಳಿ ಕೈಲಿದ್ದ ಅಲ್ಯೂಮಿನಿಯಂ ತಟ್ಟೆಯ ಬೆನ್ನಿಗೆ ತಮಟೆಯಂತೆ ನುಡಿಸುತ್ತಾ ನಂಜಮ್ಮನ ಹಟ್ಟಿ ಹತ್ತಿರಕ್ಕೆ ಬಂದ.

ನಂಜಮ್ಮ ಇವನಿಗಾಗಿ ಕಾದಿದ್ದಳು. ಅವನು ಉಣದಿದ್ದರೆ ನಂಜಮ್ಮನ ಕರುಳು ಚುರುಗುಟ್ಟುತ್ತಿತ್ತು. ಆದರೆ ದಿನಾ ಊಟದ ಹೊತ್ತಿಗೆ ಇಲ್ಲಿಗೆ ಬಾ ಎಂದು ಎಷ್ಟು

ಹೇಳಿದರೂ ಕೇಳುತ್ತಿರಲಿಲ್ಲ. 'ಯಾರು ತಾನೇ ಕೊಟ್ಟಾರು ಆ ಹುಚ್ಚನಿಗೆ' ಎಂದು ನಂಜಮ್ಮ ಅಂದುಕೊಳ್ಳುತ್ತಿದ್ದಳು.

ಅವಳು ಅಂದುಕೊಳ್ಳುತ್ತಿದ್ದುದು ಕೆಲವೊಮ್ಮೆ ನಿಜವೇ ಆಗಿತ್ತು. ಶಂಕರ ತಾನಾಗಿ ಯಾರನ್ನೂ ಕೇಳುತ್ತಿರಲಿಲ್ಲವಾಗಿ ಊರಿನವರು ಯಾರೂ ಒಂದೊಂದು ದಿನ, ಏನನ್ನೂ ಅವನಿಗೆ ಕೊಡುತ್ತಿರಲಿಲ್ಲ. ಅವರಾಗಿ ಕೇಳಿ ಕೊಟ್ಟರೆ ಉಂಟು ಇಲ್ಲ ಕೇಳುವುದು ಮರೆತುಬಿಟ್ಟರಂತೂ ಉಪವಾಸವೇ ಶಂಕರನಿಗೆ!

ಸಾಮಾನ್ಯವಾಗಿ ಭೀಮರಾಯರ ಮನೆಯಲ್ಲಿ ಇವನಿಗೆ ಏನಾದರೂ ಸಿಗುತ್ತಿತ್ತು. ಭೀಮರಾಯರೋ, ಭಾಗೀರಥಮ್ಮನೋ, ಇಲ್ಲ ಲಕ್ಷ್ಮಿಯೋ ಯಾರೇ ನೋಡಲಿ ಪ್ರೀತಿಯಿಂದ ಮಾತನಾಡಿಸಿ ಒಂದು ತುತ್ತು ಅನ್ನವನ್ನು ನೀಡಿಯೇ ನೀಡುತ್ತಿದ್ದರು.

ಮಾತೇ ಬಾರದ ಮೂಕನಂತಿದ್ದ ಶಂಕರ ಬರಬರುತ್ತಾ ಮಾತುಗಾರನಾಗಿ ಬಿಟ್ಟಿದ್ದ. ಬಿಡುವಿನ ವೇಳೆಯಲ್ಲಿ ಈ ಊರಿನ ಜನರಿಗೆ ಇವನಿಂದ ಸುಲಭವಾಗಿ ಕಾಲಕ್ಷೇಪವಾಗುತ್ತಿತ್ತು.

ಮೊದಮೊದಲಿಗೆ ಜನ ಅವನನ್ನು ಮಾತನಾಡಿಸಿ ಅವನ ತಂದೆ ತಾಯಿಗಳ ಬಗ್ಗೆ, ಊರಿನ ಬಗ್ಗೆ ಹೇಳುತ್ತಿದ್ದರು. ಆದರೆ ಶಂಕರ ಆ ವಿಚಾರವನ್ನು ಮಾತ್ರ ಯಾರೊಂದಿಗೂ ಹೇಳಲಿಲ್ಲ. ಕುತೂಹಲದಿಂದ ಮತ್ತೆ ಮತ್ತೆ ಯಾರಾದರೂ ಪ್ರಶ್ನಿಸಿದರೆ ಆ ವಿಚಾರವನ್ನೇ ತೇಲಿಸಿಬಿಡುತ್ತಿದ್ದ.

ಈಗ ಯಾರೂ ಅವನನ್ನು ಅವನ ಜೀವನದ ಬಗ್ಗೆ ಕೇಳುವುದನ್ನೇ ಬಿಟ್ಟು ಬಿಟ್ಟರು. ಬೆಳಿಗ್ಗೆ ತಿಂಡಿ ತಿಂದು ಗಂಡಸರೆಲ್ಲಾ ಹೊಲ, ಗದ್ದೆ ಕೆಲಸಗಳಿಗೆ ಹೊರಟುಹೋಗುತ್ತಿದ್ದರು. ಬೇಗ ಬೇಗ ಅಡುಗೆ ಕೆಲಸ ಮುಗಿಸಿದರೆ ಮನೆಯ ಹೆಂಗಸರಿಗೆ, ಗಂಡಸರು ಇನ್ನು ಊಟಕ್ಕೆ ಬರುವವರೆಗೂ ಸ್ವಲ್ಪ ಬಿಡುವಿರುತ್ತಿತ್ತು. ಆ ಹೊತ್ತಿನಲ್ಲಿ ನೆನೆಸಿಕೊಳ್ಳುತ್ತಿದ್ದಂತೆ ಶಂಕರ ಹಾಜರಿರುತ್ತಿದ್ದ. ಅವರ ಜೊತೆಗೆ ಮಾತಿಗೆ ಕುಳಿತಾಗ, ತನಗೆ ತಿಳಿದ ವೇದಾಂತ ಮಾತನಾಡಿ ಹೆಂಗಸರ ಮೆಚ್ಚಿಗೆ ಗಳಿಸುತ್ತಿದ್ದ. ಭಾಗೀರಥಮ್ಮ, ಲಕ್ಷ್ಮೀ ನರಸಮ್ಮ, ಮಂಜಮ್ಮ ಇವರಿಗೆಲ್ಲಾ ಇವನ ಮಾತು ತಮ್ಮ ಬುದ್ಧಿಗೆ ಮೀರಿದ್ದು ಎನಿಸುತ್ತಿತ್ತು. ಅವನೊಂದಿಗೆ ಮಾತನಾಡಿದರೆ ಪುಣ್ಯವಾದರೂ ಬರುತ್ತೆ ಎನ್ನುವ ಧೋರಣೆಯಿಂದ, ಈ ಹೆಂಗಸರೆಲ್ಲಾ ಭೀಮರಾಯರ ಅಂಗಳದಲ್ಲಿ ಸೇರುತ್ತಿದ್ದರು. ಅವರೊಂದಿಗೆ ಮಾತನಾಡುವುದು ಶಂಕರನಿಗೂ ಖುಷಿಯಾಗಿರುತ್ತಿತ್ತು.

ಸಂಜೆಯಾದರೆ ಗಂಡಸರೊಂದಿಗೆ ಕಾಡುಹರಟೆಯಲ್ಲೂ ಸೇರುತ್ತಿದ್ದ. ಸಮಯ ಬಿದ್ದಾಗ, ಸಣ್ಣಪುಟ್ಟ ಕೆಲಸಗಳನ್ನೂ ಮಾಡಿಕೊಡುತ್ತಿದ್ದ.

ಊರಿನ ಯಾವ ಬೀದಿಯನ್ನೂ ಬಿಡುತ್ತಿರಲಿಲ್ಲ. ಹೊಲೆಯರ ಕೇರಿ, ಬ್ರಾಹ್ಮಣರ ಕೇರಿ ಮತ್ತು ಉಳಿದ ಜಾತಿಗಳಿದ್ದ ಬೀದಿಗಳೆಲ್ಲಾ ಸುತ್ತಿ ಬರುತ್ತಿದ್ದ ಶಂಕರ ಜಾತ್ಯಾತೀತ ವ್ಯಕ್ತಿಯಾಗಿಬಿಟ್ಟಿದ್ದ.

ಮನಸ್ಸು ಬಂದರೆ ಶಂಕರ ಊರಾಚೆಯವರೆವಿಗೂ ಹೋಗಿ ಬರುತ್ತಿದ್ದ. ಅವನಿಗಿಷ್ಟವಾದದ್ದು ಬಸವನ ಗುಡ್ಡ, ಕೆರೆದಂಡೆ, ಭೀಮರಾಯರ ತೆಂಗಿನತೋಟ. ಒಮ್ಮೊಮ್ಮೆ ಊರೊಳಗಿಂದ ಮರೆಯಾಗಿ ಗಂಟೆಗಟ್ಟಲೆ ಇಂಥ ಕಡೆಗಳಲ್ಲೆಲ್ಲಾ ಅಲೆದಾಡುತ್ತಿದ್ದ. ತಿಂಡಿ ತೀರ್ಥ ಏನೂ ಬೇಕೆಂದು ಬಯಸುತ್ತಿರಲಿಲ್ಲ. ಮನೆಗೆ ಬಂದ ಕೂಡಲೇ ನಂಜಮ್ಮನಿಗೆ ತಿಳಿದುಬಿಡುತ್ತಿತ್ತು. ಅವನಿಗೆ ತಿಂಡಿ ಬಿದ್ದಿದೆ, ಇಲ್ಲ ಅನ್ನುವುದು. ಆದರೂ ಮಾಮೂಲಿನಂತೆ ಅವನನ್ನು ಕೇಳುವುದನ್ನು ಬಿಡುತ್ತಿರಲಿಲ್ಲ. ಬೆಳಿಗ್ಗೆ ಮನೆ ಬಿಟ್ಟು ಹೋದವನು ಈಗ ಬಂದಿದ್ದಾನೆ. ಹೊತ್ತೂ ಗೊತ್ತು ಒಂದೂ ಇಲ್ಲ – ಎಂದುಕೊಂಡು ನಂಜಮ್ಮ ಅವನನ್ನು, "ಈಟೊತ್ತು ಮಾಡ್ಕಂಡು ಬಂದಿಯಕ್ಕ! ಉಂಡು ಗಿಂಡು ಬಂದೀಯ ಎಲ್ಲಾರ? ಇಲ್ಲ, ಉಣ್ತೀಯ ಇಲ್ಲಿ?" ಎಂದು ಕೇಳಿದಳು.

"ಹಸಿವೇನೋ ಆಗಿದೆ. ಆದರೆ ಉಣ್ಣೋಕೆ ಮನಸಾಗ್ತಿಲ್ಲ ಅಜ್ಜಿ" ಎಂದು ಹೇಳಿದ.

ನಂಜಮ್ಮ ನೋಡಿದಳು. ಶಂಕರ ಎಂದಿನಂತೆ ಗೆಲುವಿನಿಂದ ಇಲ್ಲ. ಮುಖ ಸಪ್ಪಗಿದೆ. ಏನೋ ಬೇಜಾರಾಗಿರಬೇಕೆಂದು ಭಾವಿಸಿದಳು. ಅವನು ಊಟ ಬೇಡವೆಂದದ್ದು ನಂಜಮ್ಮನ ಮನಸ್ಸಿಗೆ ನೋವಾಯಿತು. ಹಸಿವಾಗಿದ್ದರೂ ಊಟಕ್ಕೆ ಮನಸ್ಸಿಲ್ಲ ಎಂದದ್ದು ನಂಜಮ್ಮನ ವಾತ್ಸಲ್ಯವನ್ನು ಹೊಡೆದೆಬ್ಬಿಸಿತು. ಪಾಪದ್ದು! ಏನಾಯಿತೋ ಏನೋ ಎಂದು ಚಿಂತಿಸಿದಳು. ಅವನನ್ನು ಹೇಗಾದರೂ ಊಟಕ್ಕೆ ಎಬ್ಬಿಸಬೇಕು. ಹಸಿದಿದ್ದೂ ಮಲಗುವುದು ನಂಜಮ್ಮನ ಮನಸ್ಸಿಗೆ ಸರಿಯೆನಿಸಲಿಲ್ಲ. "ಅಂಗೆಲ್ಲಾ ಅಸ್ಕೊಂಡಿದ್ದೂ ಉಪಾಸ ಮಲಗಿದ್ರೆ ಪರಮಾತನು ಮುನಿಸ್ಕೋತಾನೇ ಏಳು ಮಗಾ" ಎಂದು ಕೇಳಿಕೊಂಡಳು ವಾತ್ಸಲ್ಯದಿಂದ.

"ನಂಗೆ ಬೇಡಾಜ್ಜಿ. ಪಾಪ! ರಾಚನ ಮಗಾ ಹಾವು ಕಚ್ಚಿ ಸತ್ತೋಗವ್ನೆ. ರಾಚಣ್ಣ ತಿಳೀದೆ ಇನ್ನೂ ಊರೆಲ್ಲಾ ಹುಡುಕ್ತಾವ್ನೆ!" ಎಂದು ನಿಟ್ಟುಸಿರು ಬಿಟ್ಟ.

"ಇದೇನ್ಲಾ ಮಗ ನೀ ಯೋಳಾದು! ಮಧ್ಯಾನ್ನ ಮಲ್ಲಿ ಅಟ್ಟೀತಾಕ ಬಂದು 'ಮಂಜ್ಯನ್ನ' ಇಚಾರಿಸಿದ್ದಲು. ನಾ ಅಂವ ಬಂದಿಲ್ಲಾಂದೆ. ಎಲ್ಲೋ ಕಳೆದೋಗವ್ನೆ ಬತ್ತಾನೆ ಅಂದ್ಕೊಂಡಿವ್ನಿ" ಅಂದಳು.

"ಹೌದಜ್ಜಿ, ನೀವು ಅಂದ್ಕೊಂಡಂತೆ ಕಳೆದೇ ಹೋಗಿರೋದು, ನಿಜವಾಗಿ ಕಳೆದು ಹೋದವರು ಮತ್ತೇ ಬರಲಾರರು ತಾನೇ? 'ಮಂಜ್ಯ ಕಳೆದು ಹೋಗವ್ನೆ.' ಹುಡುಕಿದರೂ ಸಿಗಲಾರದಷ್ಟು ದೂರ ಕಳೆದುಹೋಗವ್ನೆ?" ಎಂದು ಹೇಳಿ ಮೌನವಹಿಸಿದ.

ನಂಜಮ್ಮ, "ಅಯ್ಯೋ ಪಾಪ! ಅಬ್ಬರಕ್ಕೆ ಮಗ ಅಂತ ಸಾಕಿದ್ರು, ಈಗ ನೋಡಿದ್ರೆ ದ್ಯಾವರು ಇಂಗ ಮಾಡ್ಯಾನ. ಏನ್ ಸಾಸ್ವತ ಜೀವನ್ದಾಗೆ!" ಎಂದು ತನಗೆ ತಿಳಿದಂತೆ ವೇದಾಂತವನ್ನು ಆಲೋಚಿಸಿದಳು.

ಶಂಕರ ಹಾಗೇ ಮೈ ಚಾಚಿದ. ಮುದುಕಿ ಶಂಕರ ಮಲಗಿದ್ದನ್ನು ಗಮನಿಸಿ ಒಳಗೆದ್ದು ಹೋಗಿ ಬಾಗಿಲು ಹಾಕಿಕೊಂಡಳು.

* * *

ಬೆಳಗಾಗೆದ್ದು ರಾಚನ ಮನೆಯ ಮುಂದೆ ಗುಂಪು ಜನ ಸೇರಿದ್ದಾರೆ. ಮಂಜ್ಯನ ಹೆಣದ ಮೇಲೆ ಮಲ್ಲಿ ಬಿದ್ದು ಬಿದ್ದು ಅಳುತ್ತಿದ್ದಾಳೆ. "ನನ್ನ ಬಸಿರಾಗೆ ಬೆಂಕಿ ಬೀಳ! ಇದಕಾ ನಂಗೆ ಮಗನಾಗಿ ಉಟ್ಟಿದೀ – ದ್ಯಾವರಂತೆ ದ್ಯಾವರು! ಇಷ್ಟು ಕರುಣಾ ಇಲ್ಲ. ಕೊಟ್ಟಾ ತಗೊಂಡ. ಇದಕ್ಯಾಕೆ ನಂಗೆ ಈ ಮಗೂನ ಕೊಟ್ಟೆ? ನನ್ನ ಒಟ್ಟೆ ಉರಿಸಾಕಾ ದ್ಯಾವರು ಯೋಚಿಸ್ಯಾನ! ಮಂಜ್ಯ, ಮಂಜ್ಯ, ನನ್ನ ಚಿನ್ನ" ಎಂದು ಗೋಳೋ ಎಂದು ಅತ್ತಳು.

ರಾಚನೂ ವಿಲಪಿಸಿದ. ಊರ ಹಿರಿಯರೆಲ್ಲಾ ರಾಚನನ್ನು, ಮಲ್ಲಿಯನ್ನು ಸಮಾಧಾನಪಡಿಸಿದರು.

ಈ ಗುಂಪಿನಿಂದ ದೂರಕ್ಕೆ ನಿಂತಿದ್ದ ಶಂಕರ. ಆಗುವುದನ್ನೆಲ್ಲಾ ಸಾಕ್ಷಿಪ್ರಜ್ಞೆಯಂತೆ ಗಮನಿಸುತ್ತಿದ್ದ. ರಾಚನ ಬಂಧುಗಳು. ಮಂಜ್ಯನ ಹೆಣವನ್ನು ಎತ್ತಿದರು. ರಾಚ ಎಳೆಯ ಮಗುವಿನಂತೆ ಎತ್ತಬೇಡವೆಂದು ಹಟಮಾಡುತ್ತಿದ್ದ. ಮಲ್ಲಿ 'ತನ್ನ ಮಗನನ್ನು ತನಗೆ ಬಿಟ್ಟುಬಿಡಿ' ಎಂದು ಅಂಗಲಾಚುತ್ತಿದ್ದಳು. ಜನ ಚದುರಿದರು. ರಾಚ ತೂರಾಡುತ್ತಾ ಮಗನ ಹೆಣವನ್ನು ಹಿಂಬಾಲಿಸಿದ. ಮಧ್ಯೆ ಮಧ್ಯೆ ಬಾಯಿ ಬಡಿದುಕೊಂಡು ಹುಯಿಲಿಡುತ್ತಿದ್ದ. ರಾಚನ ರಭಸದ ಓಟವನ್ನು ನೋಡಿದ ಒಂದಿಬ್ಬರು ಅವನ ರಟ್ಟೆಗಳನ್ನು ಹಿಡಿದುಕೊಂಡರು. ಅತೀವ ವೇದನೆಯಿಂದ ತುಂಬಿದ ಕಣ್ಣುಗಳಿಂದ ಶಂಕರ ಈ ದೃಶ್ಯವನ್ನು ಗಮನಿಸಿದ. ರಾಚನ ಕಣ್ಣಿಗೆ ಶಂಕರ ಬಿದ್ದದ್ದೆ, ರಾಚ ಮಿಂಚಿನಂತೆ ಹಾರಿ ಅವನ ಮೇಲೆ ಬಿದ್ದ. "ಮುಂಡೇಗಂಡ. ಅಪಶಕುನ ನುಡಿದ್ಯೇನ್ಲಾ? ನನ್ನ ಮಗ ಸತ್ತವ್ನೆ ಅಂತ ಯೋಳಿದ್ಯಲ್ವೇನ್ಲಾ?" ಎಂದು ಅವನನ್ನು ಗುದ್ದಿದ. ಶಂಕರ ಪ್ರತಿಭಟಿಸಲಿಲ್ಲ. ನೋಡುತ್ತಿದ್ದ ಜನ ಶಂಕರನನ್ನು ರಾಚನಿಂದ ಬಿಡಿಸ, ರಾಚನಿಗೆ ಛೀಮಾರಿ ಹಾಕಿದರು. ರಾಚನನ್ನು ಎಳೆದೊಯ್ದು ಅವನ ಗುಡಿಸಲಲ್ಲಿಕ್ಕಿ ಕದ ಮುಚ್ಚಿದರು.

ಹಿಂತಿರುಗಿ ಬಂದು "ಏಟು ಬಿತ್ತೇನಪ್ಪ ಶಂಕರ" ಎಂದು ಕೇಳಿದರು.

"ಉಹುಂ!" ಎಂದಷ್ಟೇ ಹೇಳಿ ತಲೆ ತೂಗಿದ.

"ನೀ ಯಾಕೆ ಇಲ್ಲಿ ಬಂದೆ? ಅವನ ಮೈಯಲ್ಲಿ ದೆವ್ವ ಹೊಕ್ಕಿದೆ. ನೀ ಸುಮ್ಮನೆ ಇಲ್ಲಿ ನಿಲ್ಲೇಡ" ಎಂದರು ಗುಂಪಿನಲ್ಲಿದ್ದ ಪುಟ್ಟಾಚಾರಿ.

ಈ ಗಲಾಟೆ ಕೇಳಿ ಅಲ್ಲಿಗೆ ಬಂದಿದ್ದ ಭೀಮರಾಯರು, ಸಮಾಚಾರವೇನೆಂದು ವಿಚಾರಿಸಿದರು. ಪುಟ್ಟಾಚಾರಿ ಭೀಮರಾಯರಿಗೆ ಏನಿಲ್ಲ. ರಾಚನ ಮಗ ಮಂಜ್ಯ ಸತ್ತುಹೋಗಿದ್ದಾನೆ, ಹಾವು ಕಚ್ಚಿ. ಅವನಿಗೆ ಮಗನನ್ನು ಕಳೆದುಕೊಂಡದ್ದು, ಹುಚ್ಚು ಬರಿಸಿದಂತಾಗಿದೆ. ಶಂಕರ, ನೆನ್ನೆಯೇ ಮಂಜ್ಯನ ಸಾವಿನ ಸುದ್ದಿಯನ್ನು ತಿಳಿಸಿದ್ದನಂತೆ. ಅಪಶಕುನ ನುಡಿದಿದ್ದರಿಂದ ಹಾಗಾಯ್ತೂಂತ ಸಿಟ್ಟಿನಿಂದ ಇವನ್ನ ಅವನು ಹೊಡೀತಿದ್ದ ಅಷ್ಟೇ" ಎಂದು ಮುಗಿಸಿದರು ಕತೆಯನ್ನು.

ಭೀಮರಾಯರಿಗೆ ಶಂಕರನ ವಿಚಾರವಾಗಿ ಆಶ್ಚರ್ಯವಾಯಿತು. ಇವನಿಗೆ ಹೇಗೆ ತಿಳಿದಿತ್ತೆಂದು ವಿಚಾರ ಮಾಡಿದರು. ಶಂಕರನನ್ನೇ ಕೇಳಬೇಕೆನಿಸಿದರೂ ಅದು ಸರಿಯಾದ ಸಂದರ್ಭವಲ್ಲ ಎಂದು ಭಾವಿಸಿ ಸುಮ್ಮನಾದರು.

ಪುಟ್ಟಾಚಾರಿ ಕೇಳಿದ ಭೀಮರಾಯರನ್ನು – "ಎಲ್ಲೀವರೆಗೆ ರಾಯರ ಪ್ರಯಾಣ?" ಎಂದು.

"ಇಲ್ಲೇ ಹಾಲಳ್ಳಿ ಕಡೆ ಹೋಗಿಬರ್ತೀನಿ" ಎಂದ.

"ಸರಿ, ನಂಗೂ ಜೊತೆಯಾಯ್ತು. ನಾನು ಬರ್ತೀನಿ ತಮ್ಮ ಜೊತೆ" ಎಂದು ಭೀಮರಾಯರ ಜೊತೆಗೆ ಆತನೂ ಹಾಲಳ್ಳಿ ಕಡೆ ಹೊರಟ.

ಸೇರಿದ್ದ ಜನವೆಲ್ಲಾ ಕರಗಿದರು. ಮಲ್ಲೀ ರಾಚರು ಅತ್ತೂ ಅತ್ತೂ ಮೆತ್ತಗಾದರು. ಬಂದಿದ್ದ ನೆಂಟರೆಲ್ಲಾ ಇವರಿಬ್ಬರಿಗೂ ಧೈರ್ಯ ಹೇಳಿ ಹೊರಟು ಹೋದರು.

ಶಂಕರ ಮಾತ್ರ ಇನ್ನೂ ರಾಚನ ಗುಡಿಸಿಲಿನ ಕಡೆಯೇ ನೋಡುತ್ತಾ ನಿಂತ.

* * *

ಮಂಜ್ಯ ಸತ್ತ ದಿನ ಶಂಕರನಿಗೆ ಊಟವೇನೂ ಇಲ್ಲ. ರಾಚನ ಮನೆಯ ಮುಂದೆ ನಿಂತಿದ್ದವನು ಎಲ್ಲಿಯೋ ಹೊರಟುಹೋದ. ಹೋಗುತ್ತಿದ್ದುದನ್ನು ಒಂದಿಬ್ಬರು ನೋಡಿದರು. ಆದರೆ ಅವರೇನೂ ಅವನು ಹೋಗುವುದಕ್ಕೆ ಪ್ರಾಮುಖ್ಯತೆಯನ್ನು ಕೊಡಲಿಲ್ಲ.

ಆ ರಾತ್ರಿ ಶಂಕರ ಮರಳಲಿಲ್ಲ. ಮರುದಿನವೂ ಇಲ್ಲ. ಮೂರನೇ ದಿನವೂ ಇಲ್ಲ. ನಂಜಮ್ಮನಿಗೆ ಗಾಬರಿಯಾಯಿತು. 'ಆಳಾದ್ದು ಎಲ್ಲಿ ಓಯ್ತೋ, ಏನು ಮಾಡ್ಕೊಳ್ತೋ!' ಎಂದು ಪೇಚಾಡಿದಳು. ಭೀಮರಾಯರನ್ನು ವಿಚಾರಿಸಿದಳು. ಅವರು ತಮಗೆ ಗೊತ್ತಿಲ್ಲವೆಂದರು. ರಾಚನು ಶಂಕರನಿಗೆ ಹೊಡೆದ ಸುದ್ದಿ ನಂಜಮ್ಮನ ಕಿವಿಗೆ ಬಿತ್ತು.

ರಾಚನನ್ನು ಮನಸಾರೆ ಶಪಿಸಿದಳು. ಬಡಪಾಯಿ ಶಂಕರನ ಮೇಲೆ ಕೈ ಮಾಡಿದವರ ವಂಶ ನಿರ್ವಂಶವಾಗುತ್ತೆಂದು ಭವಿಷ್ಯ ನುಡಿದಳು. ಅದಕ್ಕೇ ದೇವರು ಅವನ ಮಗನ್ನ ಕಿತ್ತುಕೊಂಡದ್ದೆಂದಳು.

ಅರಿಯದ ಅನುಬಂಧಕ್ಕೆ ಸಿಲುಕಿದ ಮುದುಕಿ ಮೂರು ದಿವಸ ಶಂಕರನಿಗಾಗಿ ಕಾದು ಚಡಪಡಿಸಿದಳು. ನಾಲ್ಕನೆಯ ದಿನ, ಬೆಳಗಿನ ಜಾವ 'ಶಂಕರನ' ಕನಸು ಕಂಡಳು. ಶಂಕರ ಹಣೆಮೇಲಿನ ವಿಭೂತಿಯಿಂದ ಕಂಗೊಳಿಸುತ್ತಿದ್ದಾನೆ. ಮೃದು ಮಂದಹಾಸ ತುಟಿಗಳ ಮೇಲೆ ನೃತ್ಯ ಮಾಡುತ್ತಿದೆ. ಅವನ ತಲೆಯ ಹಿಂದುಗಡೆ ಒಂದು ಬೆಳಕಿನ ಚಕ್ರವಿದೆ. 'ಬಂದ್ಯಾ ಸಂಕರ' – ಎಂದು ಹೇಳಿಕೊಡುತ್ತಾ ಎಚ್ಚರಗೊಂಡಳು. ಆದರೆ ಶಂಕರನಿರಲಿಲ್ಲ. ಥುತ್! ಬರಿ ಕನಸಾಗೆ ಬರ್‍ತಾನೆ. ನಿಜವಾಗಿ ಬರಾಕಿಲ್ಲ. ಎಲ್ಲಿ ಆಳಾಗವ್ನೋ' ಎಂದು ಗೊಣಗಿದಳು.

ಕರಿಯ ಅಷ್ಟು ಹೊತ್ತಿಗೇ ಸೌದೆ ಕಟ್ಟೊಂದನ್ನು ತಂದು ಹಾಕಿದ. ಕೆಳಕ್ಕೆ ಕುಕ್ಕಿದ ದನಿಗೆ ನಂಜಮ್ಮ ಹೊರಗೆ ಬಂದು, "ನೀನಾ ಕರಿಯಾ! ನಾನು ಸಂಕರ ಬಂದವ್ನೇನೋ ಅಂದ್ಕೊಂಡೆ..... ಲೋ ಕರಿಯ ಎಲ್ಲಾರ ಸಂಕರನ್ನ ನೋಡಿದ್ಯೇನ್ಲಾ!" ಎಂದು ಕೇಳಿದಳು.

"ಅಜ್ಜಿ, ಮೂರು ದಿವಸಕ ಹಿಂದ, ಶಂಕರಪ್ಪ ಬಸವನ ಗುಡ್ಡದ ಮ್ಯಾಲೆ ಓಯ್ತಿದ್ದದ್ದನ್ನ ನಮ್ಮ ಮಾಮಾ ನೋಡ್ಯಾನಂತ. ಆಮ್ಯಾಕ ನಾವ್ಯಾರು ನೋಡ್ಲೇ ಇಲ್ಲ ಎಂದು ಹೇಳಿದ.

ನಂಜಮ್ಮ ಕೇಳಿದಳು. ಅವನು ಅಲ್ಲೇ ಏನಾದರೂ ಇರಬಹುದೇ? ಎಂದು ಯೋಚಿಸಿ, "ಲೋ ಕರಿಯಾ ನೀನು ಅತ್ಲಾಗ ವೋದ್ರೇ ಅವನ್ನೊಸಿ ನೋಡ್ಕಂಬತ್ತೀಯ? ನಿಂಗ ಕಂಡ್ರೆ ನಾ ಬಾರಂತ ಯೋಳಿವ್ನಿ ಅಂತ ಯೋಳು" ಎಂದಳು.

ಕರಿಯ ಹಿತ್ತಲಿಂದ ಕೊಟ್ಟಿಗೆಗೆ ಹೋಗಿ, ಹಾಲು ಕರೆದು ಕೊಟ್ಟು, ಹಸುವನ್ನು ಗೂಟದಿಂದ ಕೊರಳ ಹಗ್ಗ ಹಿಡಿದುಕೊಂಡು ಮೇಯಿಸಲು ಕರೆದುಕೊಂಡು ಹೋದ.

ನಂಜಮ್ಮ ಆ ದಿನ ಬರೀ ಗಂಜಿ ಬೇಯಿಸಿಕೊಂಡು ಕುಡಿದಳು. ಆ ದಿನವಾದರೂ ಶಂಕರ ಬಂದಾನೇನೋ ಎದುರುನೋಡಿ ಸುಸ್ತಾಗಿ ಮಲಗಿದಳು.

ಶಂಕರ ಮುರು ನಾಲ್ಕು ದಿನಗಳು ಹುಚ್ಚನಂತೆ ನಿರ್ಜನ ಪ್ರದೇಶಗಳಲ್ಲೆಲ್ಲಾ ಅಲೆದಾಡಿದ. ಮನಃಶಾಂತಿ ಸಿಕ್ಕಂತೆ ಕಾಣಲಿಲ್ಲ. ತೊಟ್ಟ ಅಂಗಿಯನ್ನು ಹರಿದು ಬಿಸಾಡಿದ, ಕೈ ಕೈ ಹೊಸಕಿಕೊಂಡ. ಅರ್ಥವಾಗದ ಆಲೋಚನೆಗಳು ತಲೆ ಸಿಡಿಸುತ್ತಿವೆ. ಉಸಿರು ಕಟ್ಟುವ ನಿರ್ಬಂಧದ ಅನುಭವವಾಗುತ್ತಿದೆ. ಎತ್ತರದ ಬಸವನ ಗುಡ್ಡದ ತುದಿಯೇರಿ ಸುತ್ತ ದೃಷ್ಟಿಹಾಯಿಸಿ ಊರನ್ನು ಪರಿವೀಕ್ಷಿಸಿದ. ಒಂದು ದಿಕ್ಕಿಗೆ ಮಾತ್ರ ದೃಷ್ಟಿನೆಟ್ಟ, ನಗು ಮಿಂಚಿತು. ಸರಸರನೆ ಗುಡ್ಡವಿಳಿದು ಊರೊಳಕ್ಕೆ ಪ್ರವೇಶಿಸಿ, ನೇರವಾಗಿ

ನಂಜಮ್ಮನ ಚಾವಡಿಯನ್ನು ಸೇರಿ ಕುಳಿತ. ನಂಜಮ್ಮ ನೆರಳು ಅಲುಗಿದರೂ ಅರಿಯುವ ಎಚ್ಚರದಿಂದ ಮಲಗಿದ್ದಳು. ಎಷ್ಟೇ ಮೆಲ್ಲಗೆ ಬಂದರೂ ನಂಜಮ್ಮನಿಗೆ ಸುಳಿವು ಹತ್ತಿತ್ತು. ಕನಸಿನಲ್ಲೀ ಶಂಕರನನ್ನೇ ಕಾಣುತ್ತಿದ್ದ ಆಕೆ – "ಯಾರು! ಸಂಕರ ಔದಲ್ಲ?" ಎಂದಳು ಮಲಗಿದಲ್ಲಿಂದಲೇ. ಈ ಮುದುಕಿ ಮೈಯೆಲ್ಲ ಕಿವಿಯಾಗಿ ಕೇಳುತ್ತಿರುವಂತಿದೆಯಲ್ಲ! – ಎಂದು ಶಂಕರನಿಗೆ ಆಶ್ಚರ್ಯವಾಯಿತು. ತನಗಾಗಿ ಇಷ್ಟೊಂದು ಆಸಕ್ತಿವಹಿಸುತ್ತಿರುವ ಈಕೆಗೂ ತನಗೂ ಯಾವ ರೀತಿಯ ಸಂಬಂಧವಿರಬಹುದೆಂದು ಯೋಚಿಸಿದ.... ತಕ್ಷಣ ಉಳಿಯದ ಸಂಬಂಧಗಳಿಗೆ ಇಷ್ಟೊಂದು ಅಂಟಿಕೊಳ್ಳುವುದು ತಪ್ಪೆಂದು ಹೊಳೆಯಿತು.... ಅವಳ ಮಾತಿಗೆ 'ಊಂ' ಗೊಡಲಿಲ್ಲ. ಇನ್ನು ಅಲ್ಲಿ ಉಳಿಯಬಾರದು. ಎಲ್ಲಿಯೂ ಹೆಚ್ಚು ದಿನ ಉಳಿಯಬಾರದು ಎಂದುಕೊಂಡ.... ಆದರೆ.... ಆದರೆ ಈ ನೆಲಕ್ಕೆ ತನಗೆ ಯಾವುದೋ ಸಂಬಂಧವಿದೆ. ಇದನ್ನು ಬಿಡುವುದು ಸಾಧ್ಯವಿಲ್ಲ – ಎನಿಸಿತು.

ನಂಜಮ್ಮ ಸಣ್ಣ ಬುಡ್ಡಿ ದೀಪವನ್ನು ಹಿಡಿದು ಬಂದಳು. ಅವಳು ಬರುವ ಸೂಚನೆ ಹತ್ತಿ ಶಂಕರ ಗಬಕ್ಕನೆ ಹೊದ್ದುಕೊಂಡು ಮಲಗಿದಂತೆ ನಟಿಸಿದ. ದೀಪವನ್ನು ಮುಖದ ಬಳಿ ತಂದಳು. ಸೌಮ್ಯವಾದ ಮುಖ. ತಾನು ಕನಸಲ್ಲಿ ಕಂಡದ್ದು ಇದೇ ಮುಖವಲ್ಲವೇ? ಅದ್ಯಾಕೆ ಶಂಕರ ದೇವರಂತೆ ಕಂಡ! ಎಂಬುದಕ್ಕೆ ನಂಜಮ್ಮನಿಗೆ ಉತ್ತರ ಹೊಳೆಯಲಿಲ್ಲ.

ನಿದ್ದೆ ಮಾಡುತ್ತಿರುವವನನ್ನು ಎಬ್ಬಿಸುವುದು ಪಾಪವೆನಿಸಿ, 'ಮಲಗಲಿ ಬಿಡು ಬೆಳಗಿನಾಗೆ ಎದ್ದು ಇಲ್ಲೇ ತಾನೇ ಇರ್ತಾನ. ಇಚಾರಿಸಿದರಾತು' ರಂದುಕೊಂಡು ಒಳಗೆ ಹೋಗಿ ಬಾಗಿಲೆಳೆದುಕೊಂಡು, ದೀಪವಾರಿಸಿ ಮಲಗಿದಳು.

ಶಂಕರನಿಗೆ ನಂಜಮ್ಮ ಅತ್ತ ಹೋದದ್ದು ಕನಸಿನಂತೆ ಮಾತ್ರ ತೋರಿತು. ನಟನೆಗಾಗಿ ಮುಚ್ಚಿದ ಕಣ್ಣುರೆಪ್ಪೆ – ನಿದ್ದೆಯಿಲ್ಲದೆ ನಾಲ್ಕು ದಿನದಿಂದ ಅಲೆದು ದಣಿದಿದ್ದ ಕಾರಣ ಅವನಿಗರಿವಿಲ್ಲದೆ ಹಾಗೆಯೇ ಬಿಗಿದುಕೊಂಡವು. ಶಂಕರ ಈ ಊರಿನಲ್ಲಿ ನೆಲೆಸಿ ಏಳೆಂಟು ವರ್ಷಗಳೇ ಸಂದವು. ಕಾಲಪ್ರವಾಹದಲ್ಲಿ ಲೆಕ್ಕಕ್ಕೆ ಬಾರದಂತೆ ಇವನ ಬದುಕಿನ ದಿನಗಳು ಕರಗಿಹೋದವು.

ಶಂಕರ ಊರಿನವರೊಂದಿಗೆ ಹೊಂದಿ ಹೋಗಿದ್ದ. ಅವನು ಊರಿನ ಮಗುವಿನಂತಾಗಿಬಿಟ್ಟಿದ್ದ. ಊಟಕ್ಕೆ, ಬಟ್ಟೆಗೆ ಯಾರಲ್ಲಿಯೂ ಬೇಡಬೇಕಾದ ಅವಶ್ಯಕತೆಯಿರಲಿಲ್ಲ. ಅವರಾಗಿ ಕರೆದು ಕೊಡುವಮಟ್ಟಿಗೆ ಆತ್ಮೀಯನಾಗಿದ್ದ.

ಯುವಕ ಮಂದಿಯೊಂದಷ್ಟು ಶಂಕರನೊಂದಿಗೆ ಸಂಜೆ ಹೊತ್ತು ವಿನೋದವಾಗಿ ಮಾತನಾಡುತ್ತಾ ಅವನನ್ನು ಚುಡಾಯಿಸುತ್ತಿದ್ದರು. ಶಂಕರ ಅದನ್ನೆಲ್ಲಾ ಕೇಳಿದರೂ ಸಿಟ್ಟಿಗೇಳದೆ ಸುಮ್ಮನೆ ನಗುವಿನ ಪ್ರತಿಕ್ರಿಯೆಯನ್ನಷ್ಟೇ ತೋರಿಸುತ್ತಿದ್ದ. ಗೋಪಾಲ,

ಮೂರ್ತಿ, ಜಗದೀಶ, ಕೆಂಚ, ಸುಬ್ಬ, ಕಿಟ್ಟ ಇವರೆಲ್ಲರಿಗೂ ಶಂಕರನೆಂದರೆ ಒಂದು ರೀತಿಯ ಖುಷಿ. ಇವರಲ್ಲಿ ಯಾರೇ ಶಂಕರನಿಗೆ ಚಹ ಕುಡಿಯಲು ಕಾಸು ಕೊಡುತ್ತಿದ್ದರು.

ಆ ಊರಿನ ಕಾಕಾನ ಚಹದಂಗಡಿಗೆ ಶಂಕರ ಮಾಮೂಲು ಗಿರಾಕಿ. ಕಾಕಾ ಶಂಕರ ಕಾಸು ಕೊಟ್ಟಾಗ ತೆಗೆದುಕೊಳ್ಳುತ್ತಿದ್ದ. ಇಲ್ಲವಾದಲ್ಲಿ ಮುಫತ್ತಾಗಿಯೇ ಒಂದು ಲೋಟ ಚಹವನ್ನು ಕೊಟ್ಟುಬಿಡುತ್ತಿದ್ದ.

ಈಗೊಂದು ವರ್ಷದಿಂದ ಶಂಕರನ ರೀತಿಯೇ ಬದಲಾಗಿಬಿಟ್ಟಿದೆ. ಅಷ್ಟಾಗಿ ಮೊದಲಿನಂತೆ ಮಾತುಕತೆಯಿಲ್ಲ. ಅನಿವಾರ್ಯವಾಗಿ ಮಾತಾಡಲೇ ಬೇಕಾದ ಸಂದರ್ಭ ಬಂದರೆ ಒಂದೋ ಎರಡೋ ಶಬ್ದಗಳು. ಊರಲ್ಲಿ ಅವನು ಕಾಣುವುದು ಕಡಿಮೆಯಾಗಿಬಿಟ್ಟಿದೆ. ಆದರೆ ಎಲ್ಲಿಗೆ ಹೋಗಿ ಬರುತ್ತಾನೆಂಬುದು ಯಾರಿಗೂ ಗೊತ್ತಿಲ್ಲ! ಅದೊಂದು ರಹಸ್ಯ!

ಬೆಳಿಗ್ಗೆ ಎದ್ದು ಕೆರೆಯಲ್ಲಿ ಸ್ನಾನ ಮಾಡಿ, ಮನಸ್ಸಾದರೆ ದಂಡೆಯ ಮೇಲಿನ ಮಂಜುನಾಥನ ದರ್ಶನ ಮಾಡುತ್ತಾನೆ. ಇಲ್ಲವಾದಲ್ಲಿ ನೆಟ್ಟಗೆ ಬಂದು ಅರಳೀ ಕಟ್ಟೆಯ ಮೇಲೆ ಬಂದು ಕುಳಿತುಬಿಡುತ್ತಾನೆ. ಯಾರು ಹೋಗಬೇಕಾದರೂ ಬರಬೇಕಾದರೂ ಅರಳಿ ಕಟ್ಟೆಯನ್ನು ಹಾದುಹೋಗಲೇಬೇಕು. ಬೆಳ್ಳಂಬೆಳಗೆ ಶಂಕರ ಅರ್ಧನಿಮೀಲಿತ ನೇತ್ರನಾಗಿ ಕುಳಿತುಬಿಟ್ಟಿರುವುದನ್ನು ನೋಡಿ, ನಗುತ್ತಾ 'ಈ ಶಂಕರನಿಗೆ ಈ ಮಧ್ಯೆ ಅರೆಮರುಳಾಗಿ ಬಿಟ್ಟಿದೆ' ಎಂದುಕೊಂಡು ಹೋಗುತ್ತಿದ್ದರು ಜನ. ಇಲ್ಲ ಕೀಟಲೆಗೆ ಯಾರಾದರೂ 'ಏನು ಶಂಕರ ಬೆಳಿಗೆದ್ದು ತಪಸ್ಸಿಗೆ ಕುಳಿತು ಬಿಟ್ಟೆಯಾ?' ಎಂದು ಕೇಳಿದರೂ ಗಂಭೀರವಾಗಿ ನಗುತ್ತಿದ್ದ ಮಾತ್ರ.

ನಂಜಮ್ಮ ಮಾತ್ರ ತಾನುಣಲು ಏನು ಬೇಯಿಸಿದ್ದರೂ ಮರೆಯದೆ ಶಂಕರನಿಗೆ ತಂದು ಇಡುತ್ತಿದ್ದಳು.

ಭೀಮರಾಯರ ಮನೆಯಲ್ಲಾಗಲೀ, ರಾಚನ ಮನೆಯಲ್ಲಾಗಲೀ ಏನೇ ಹಬ್ಬ ಹರಿದಿನವಾಗಲೀ ಶಂಕರನಿರಲೇ ಬೇಕಿತ್ತು. ರಾಚನಿಗಂತೂ ಶಂಕರನೆಂದರೆ ಪ್ರಾಣ. ಆ ದಿನ ಮಂಜ್ಯ ಸತ್ತ ದಿನ ಆವೇಶದಲ್ಲಿ, ದುಃಖೋದ್ವೇಗದಲ್ಲಿ ರಾಚನೇನೋ ಹೊಡೆದುಬಿಟ್ಟ. ಆದರೆ ಉದ್ವೇಗ ಕಡಿಮೆಯಾಗಿ ಅವನ ಬುದ್ಧಿ ಎಚ್ಚೆತ್ತಾಗ ರಾಚನಿಗೆ ತನ್ನ ಕೃತಿಯ ಬಗ್ಗೆ ತೀರಾ ಕೆಡುಕೆನಿಸಿತು. ತಾನ್ಯಾಕೆ ಹಾಗೆ ನಡೆದುಕೊಂಡೆನೆಂದು ಪರಿತಪಿಸಿದ..... ಜೊತೆಗೆ ಸಮಾಧಾನದಿಂದ ಅವನ ಮಾತನ್ನು ಆಲೋಚಿಸಿದಾಗ, ಶಂಕರನಲ್ಲಿ ಏನೋ ಮಹಿಮೆಯಿರಬೇಕೆಂದು ರಾಚನ ಮುಗ್ಧ ಮನಸ್ಸು ಯೋಚಿಸಿತು.

ಶಂಕರ ಹುಚ್ಚನಂತೆ ಕಾಣುತ್ತಿದ್ದರೂ ಪ್ರಾಸಂಗಿಕವಾಗಿ ಅವನಾಡುವ ಮಾತುಗಳು ಕೇಳುವವರಿಗೆ ಒಗಟೆನಿಸುತ್ತಿತ್ತು. ಆದರೂ ಅಷ್ಟಾಗಿ ಜನ ಅವುಗಳನ್ನು ಗಂಭೀರವಾಗಿ

ತೆಗೆದುಕೊಳ್ಳುವ ಕೆಲಸಕ್ಕೆ ಹೋಗಲಿಲ್ಲ. ಅವನಾಡುವ ಮಾತುಗಳನ್ನು ಕೇಳುವಷ್ಟು ಹೊತ್ತೇ ನೆನಪು, ಆಮೇಲೆ ಪೂರ್ತಿಯಾಗಿ ಅವುಗಳನ್ನು ಮರೆಯುತ್ತಿದ್ದರು.

ರಾಚನಿಗೆ ಶಂಕರನೇಕೆ ಆ ಮಾತನ್ನು ಹೇಳಿದ?.... ಅವನಿಗೆ ವಿಷಯ ತಿಳಿದದ್ದಾದರೂ ಹೇಗೆಂದು ಯೋಚಿಸಿದಷ್ಟೂ ಹೊಳೆಯಲಿಲ್ಲ. ಶಂಕರ ಆಮೇಲೆ ಸಿಕ್ಕಾಗ. "ಶಂಕರಪ್ಪ ನನ್ನ ಮ್ಯಾಗೆ ದೊಡ್ಡ ಮನಸ್ಸು ಮಾಡಪ್ಪ. ನಿನ್ನ ಸುಮ್ಮಸುಮ್ಕೆ ಒಡೆದೆ. ಸಿಟ್ಟಾಗಬ್ಯಾಡ...." ಎಂದು ಕೈ ಹಿಡಿದುಕೊಂಡು ಕೇಳಿಕೊಂಡ. ಶಂಕರ ಉತ್ತರ ಕೊಡಲಿಲ್ಲ. ಸುಮ್ಮನೆ ರಾಚನನ್ನು ನೋಡಿ ನಕ್ಕ. ಆದರೆ ಆ ನಗು ತೀರಾ ಅರ್ಥಗರ್ಭಿತವಾಗಿತ್ತು. 'ನೀನು ಮೂರ್ಖ' ಎಂಬುದನ್ನು ಹೇಳುತ್ತಿದ್ದಂತೆ ಇತ್ತು ಆ ನಗು.... ರಾಚ ಬಿಡಲಿಲ್ಲ. ಅವನನ್ನೇ ಹಿಂಬಾಲಿಸಿ ನಡೆದ.

"ಶಂಕರಪ್ಪ ನನ್ನ ಮಂಜ್ಯ ಸತ್ತಾನಂತ ನಿಂಗೆ ಎಂಗ ತಿಳೀತು?..... ನೀನದನ್ನ ಕಂಡ್ಯ?" ಎಂದು ಕೇಳಿದ.

ಶಂಕರ 'ಹೂಂ' ಗುಟ್ಟಿದ.

"ಎಲ್ಲಿ" ಎಂದು ರಾಚ ಕೇಳಿದ ಪ್ರಶ್ನೆಗೆ ಆಕಾಶದೆಡೆ ಮುಖ ಮಾಡಿದ. ರಾಚ ಬೆಪ್ಪಾಗಿ ಮೇಲೆ ನೋಡಿದ ಅಷ್ಟೇ. ಅವನಿಗೇನೂ ಕಾಣಲಿಲ್ಲ.

ರಾಚನ ಮನಸ್ಸಿಗೆ ಮಾತ್ರ "ಶಂಕರ ನಮ್ಮಂಥ ಸಾಮಾನ್ಯ ವ್ಯಕ್ತಿಯಲ್ಲ" ಎಂಬ ಅಭಿಪ್ರಾಯ ಚೆನ್ನಾಗಿ ಬೇರು ಬಿಟ್ಟಿತ್ತು.

ಕ್ರಮೇಣ ಕಾಲ ಕಳೆದಂತೆ 'ಮಂಜ್ಯನ ಸಾವು' ರಾಚನ ದುಃಖವನ್ನು ಕರಗಿಸಿತು. ಕೇವಲ ಅದು ನೆನಪಾಗಿ ಉಳಿಯಿತು.

ಮೊದಲಿಗಿಂತ ಹೆಚ್ಚಿನ ಸ್ನೇಹದಿಂದಿದ್ದ ಶಂಕರನೊಂದಿಗೆ.

* * *

ಪ್ರತಿ ವರ್ಷವೂ ಮಾಮೂಲಿನಂತೆ ಗ್ರಾಮದೇವತೆಯ ಜಾತ್ರೆ ನಡೆಯುತ್ತಿತ್ತು. ಊರಿಗೆ ಊರೇ ಸಂಭ್ರಮದಿಂದ ಆ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಿತ್ತು. ಆ ಜಾತ್ರೆಯ ಮೂರು ದಿನವೂ ಊರು ಬಣ್ಣಗಟ್ಟಿ ಕಾಣುತ್ತಿತ್ತು. ಒಂದು ಸಾಮೂಹಿಕ ಹಬ್ಬವಾದ್ದರಿಂದ ಎಲ್ಲರೂ ಜಾತ್ರೆಯ ಸಿದ್ಧತೆಗಳಲ್ಲಿ ಹೆಚ್ಚು ಹೆಚ್ಚು ಆಸಕ್ತರಾಗಿರುವಾಗ, ಶಂಕರ ಮಾತ್ರ ಅಜ್ಞಾತ ಶಂಕರನಾಗಿದ್ದು ಬಿಡುತ್ತಿದ್ದ.

ಊರಿನ ಪ್ರಮುಖರಿಂದ ಹೊರ ಊರುಗಳಿಂದ ಬರುವ ಮಂದಿಗೆ ಸಂತರ್ಪಣೆಯ ಏರ್ಪಾಟು ನಡೆಯುತ್ತಿತ್ತು.

ಭೀಮರಾಯರ ಮನೆಯಲ್ಲಿ ನೆಂಟರಿಗಂತೂ ಕೊನೆಯೇ ಇರಲಿಲ್ಲ. ಆ ಮೂರು ದಿನಗಳು ಭಾಗೀರಥಮ್ಮನಿಗೆ ಮಾಡಿ ಮಾಡಿ ಸಾಕಾಗುತ್ತಿತ್ತು. ಮನೆಗೆ ಇಬ್ಬರು ಸೊಸೆಯರು ಬಂದಿದ್ದರೂ ಊರಿನಲ್ಲಿ ಇರಲಿಲ್ಲ. ಗಂಡುಮಕ್ಕಳಿಬ್ಬರೂ ಕೆಲಸದ ಮೇಲೆ ಬೇರೆ ಬೇರೆ ಊರುಗಳಲ್ಲಿದ್ದರು. ಬಂದವರ ಆತಿಥ್ಯವನ್ನು ನೋಡಿಕೊಳ್ಳುವುದಕ್ಕೆ ಸಾಕಾಗುತ್ತಿತ್ತು ಅವರ ಶಕ್ತಿ.

ಊರಿಗೇ ಊರೇ ಸಂಭ್ರಮದಲ್ಲಿ ಪಾಲ್ಗೊಂಡರೂ ಶಂಕರ ನಿರ್ಲಿಪ್ತನಂತೆ, ಊರಿನ ಜಾತ್ರೆಯ ಉತ್ಸಾಹದಲ್ಲಿ ಪಾಲುಗೊಳ್ಳದೆ ತನ್ನ ಜಾಗವಾದ ಅರಳೀಕಟ್ಟೆಯನ್ನೇರಿ ಕುಳಿತುಬಿಡುತ್ತಿದ್ದ. ಮೌನಧರಿಸಿ, ಶೂನ್ಯದಲ್ಲಿ ಕಣ್ಣುನೆಟ್ಟು ಕುಳಿತು ಅವನ ಭಂಗಿ ಸಾಧೂ ಸನ್ಯಾಸಿಗಳಂತೆ ಇರುತ್ತಿತ್ತು. ಜಾತ್ರೆಗೆ ಬಂದವರ್ಯಾರಾದರೂ ಕರುಣೆಯಿಂದ ಅವನು ಕಾಸಿಗೆ ಕುಳಿತಿರುವನೆಂದು ಕಾಸನ್ನು ಅವನ ಮುಂದೆ ಎಸೆದರೆ, ಕೂಡಲೇ ಬೇಡವೆಂದು ಸನ್ನೆ ಮಾಡಿ ಮುಂದೆ ಬಿದ್ದ ಕಾಸುಗಳನ್ನು ಮರಳಿಸಿಬಿಡುತ್ತಿದ್ದ. "ಇವನೆಂತಹ ಪೆದ್ದ! ಕಾಸು ಕೊಟ್ಟರೆ ಬೇಡವೆಂದು ಹಿಂತಿರುಗಿಸುವವನು!" ಎಂದು ಜನ ಅಚ್ಚರಿಪಡುತ್ತಿದ್ದರು.

ಜಾತ್ರೆಯ ಮೂರುದಿನಗಳಲ್ಲಿ ಒಂದು ದಿನ ಭೀಮರಾಯರ ಮನೆಯದೇ ಸಂಪೂರ್ಣ ಸತ್ಕಾರ. ಆ ದಿನದಂದು ಭೀಮರಾಯರು ಮರೆಯದೇ ಶಂಕರನಿಗೆ ಹೇಳಿ ಕಳುಹಿಸುತ್ತಿದ್ದರು.

ಭೀಮರಾಯರ ಆಳೇ ರಾಚ. ಅವನೇ ಹೋಗಿ ಕರೆತರುತ್ತಿದ್ದ ಶಂಕರನನ್ನು. ಊರೆಲ್ಲಾ ಉಂಡು ಹೋದರೂ ಶಂಕರನು ಉಣ್ಣದಿದ್ದರೆ ಭೀಮರಾಯರಿಗೆ ತೃಪ್ತಿಯೇ ಇರುವುದಿಲ್ಲ. ಭಾಗೀರಥಮ್ಮನಿಗೂ ಅಷ್ಟೇ! ಇಲ್ಲದ ಕರುಣೆ ಅವನ ಮೇಲೆ.

ಎಷ್ಟೋ ಬಾರಿ, ಬೆಂಡೆಕಾಯಿ ಹುಳಿ, ಬಸ್ಸಾರು, ಮುದ್ದೆ ಮಾಡಿದಾಗ ಭಾಗೀರಥಮ್ಮ, ಶಂಕರನಿಗೆ ಇಷ್ಟವೆಂದು ತಿಳಿದು ಹೇಳಿ ಕಳುಹಿಸುತ್ತಿದ್ದಳು.

ಇತ್ತೀಚೆಗೆ ಅಲ್ಲಿಗೂ ಶಂಕರ ಬರುವುದು ಅಪರೂಪವಾಗಿ ಹೋಯಿತು. ಭಾಗೀರಥಮ್ಮ ಭೀಮರಾಯರನ್ನು ವಿಚಾರಿಸಿದಳು...

"ಏನೂಂದ್ರೆ, ಇತ್ತೀಚೆಗೆ ಯಾಕೋ ಶಂಕರ ಮನೆಕಡೆ ಬರೋದೇ ಇಲ್ಲ. ನೀವೇನಾದ್ರೂ ಕಂಡುಕೊಳ್ಳಬಾರದ?" ಎಂದಳು.

"ಅವನೆಲ್ಲಿ ಹೋಗ್ತಾನೆ ಅನ್ನುವುದೇ ತಿಳೀತಿಲ್ಲ ಭಾಗೀರಥಿ. ಒಂದೆರಡು ಸಲ ಒಂದೊಂದು ಕಡೆ ಇರ್ತಾನೆ. ಹೆಚ್ಚಾಗಿ ಅವನು ಬಸವನ ಗುಡ್ಡದ ಮೇಲೇ ಸಾಯ್ತಿರ್ತಾನೆ. ಇಲ್ಲ ಹನುಮಂತರಾಯನ ಗುಡಿಯ ಜಗುಲಿಯ ಮೇಲೆ ಮಲಗಿರ್ತಾನೆ. ಮೊನ್ನೆ ಯಾರೋ ಹೇಳಿದರು. ಪಕ್ಕದ ಹಾಲಳ್ಳೀಲಿ ಕೂಡಾ ಅವನ್ನ ನೋಡಿದ್ರಂತೆ. ಈಚೀಚೆಗೆ ಅವನ ರೀತೀನೇ ಅರ್ಥವಾಗೋಲ್ಲ" ಎಂದರು.

"ನನಗನಿಸುತ್ತೇಂದ್ರೆ, ಅವನಲ್ಲಿ ಏನೋ ಮಹಿಮೆ ಇದೇಂತ!" ಎಂದಳು ಭಾಗೀರಥಿ.

"ನಿನ್ನ ತಲೆ. ನಿನಗೆ ಕಂಡವರೆಲ್ಲೆಲ್ಲಾ ಮಹಿಮೇನೇ ಕಾಣುತ್ತೆ! – ಈ ಹುಚ್ಚ ಏನೇನೋ ಹೇಳಿ ನಿನ್ನ ತಲೆ ಕೆಡಿಸಿರಬೇಕು!" ಎಂದು ನಕ್ಕರು.

"ಛೇ ಛೇ ಹಾಗೆಲ್ಲ ಹೇಳ್ಬೇಡಿ. ಪಾಪ! ಅವನೇನೂ ಹೇಳ್ಲಿಲ್ಲ. ಮೊನ್ನೆ ಒಂದು ವಿಷಯ ನಡೀತು. ನಿಮಗೆ ಹೇಳಿದರೆ ನೀವು ನಗ್ತೀರಿ!" ಎಂದಳು.

"ಅದೇನಪ್ಪ ಅದು? ಅವನು ಹೇಳಿದ್ದು?" ಎಂದು ಆಶ್ಚರ್ಯದಿಂದ ಕೇಳಿದಳು. ಭಾಗೀರಥಮ್ಮನಿಗೆ ಹೇಳಬೇಕೋ ಬೇಡವೋ ಎಂಬ ಸಂದೇಹ ಬಂತು.

"ಅದೇನು ಹೇಳು ವಿಷಯ?" ಎಂದು ಭೀಮರಾಯರು ಆತುರಪಡಿಸಿದರು.

"ನಿಮಗೆ ನೆನಪಿದೆಯಾ, ನಮ್ಮ ಲಕ್ಷ್ಮೀನ ಬಂದು ನೋಡಿಕೊಂಡು ಹೋದರಲ್ಲ ಹುಡುಗನ ಕಡೆಯವರು, ಅವರು ಬಂದು ಹೋದ ಮೇಲೆ ಶಂಕರ ಬಂದ. ಲಕ್ಷ್ಮಿ ಇನ್ನೂ ಅಲಂಕಾರ ಮಾಡಿಕೊಂಡೇ ಇದ್ದಳು. ಲಕ್ಷ್ಮಿಯನ್ನು ನೋಡಿದ. ಲಕ್ಷ್ಮವ್ವ ಸ್ವಲ್ಪಬಾ ಇಲ್ಲಿ' ಎಂದು ಕರೆದ. ಲಕ್ಷ್ಮಿ ಹೋದಳು. 'ಏನು ಶಂಕರಪ್ಪ. ಏನಾರಬೇಕಾ?– ಎಂದಳು. 'ಇಲ್ಲ – ಏನೂ ಬೇಡ' ಎಂದ. 'ಮತ್ಯಾಕೆ ಕರೆದೆ?' – ಎಂದು ಲಕ್ಷ್ಮಿ ಪ್ರಶ್ನಿಸಿದ್ದಕ್ಕೆ, ಕಣ್ಣಲ್ಲಿ ಕನಿಕರ ತಂದುಕೊಂಡು, 'ನೋಡವ್ವ, ನೀನು ಇನ್ನೂ ಎಳೇ ಹುಡುಗಿ. ಬಾಳಿ ಬದುಕಬೇಕಾದವಳು. ಅದಕ್ಕೇ ಹೇಳ್ತೀನಿ, ಈ ಸಂಬಂಧ ಬೇಡವೆಂದು ನಿಮ್ಮವ್ವನಿಗೆ ಹೇಳಿಬಿಡು' ಎಂದು ಹೇಳಿದ.

ನಾನು ಅಲ್ಲೇ ಬಾಗಿಲ ಹತ್ತಿರ ನಿಂತಿದ್ದೆ. 'ಇದ್ಯಾಕೋ ಶಂಕರ ನೀನು ಹೀಗೆ ಹೇಳ್ತಿ. ಎಷ್ಟು ಒಳ್ಳೆ ಸಂಬಂಧ ಇದು ಬಂದಿರುವಾಗ ಬಿಟ್ಟರೆ ಆಮೇಲೆ ಎಲ್ಲಿ ಸಿಗುತ್ತೋ?' – ಎಂದು ಕೇಳಿದೆ.

ಅದಕ್ಕೆ ಅವನು ನಕ್ಕು, 'ಇದಕ್ಕಿಂತ ಒಳ್ಳೆ ಸಂಬಂಧವೊಂದು ಬರುತ್ತೆ. ಅದೇ ಖಾಯಂ ಆಗುತ್ತೆ. ಆದರೆ ಈ ಸಂಬಂಧ ಬೇಡ. ಲಕ್ಷ್ಮವ್ವನ ಹಸುರು ಬಾಳನ್ನು ಹಾಳು ಮಾಡಬೇಡಿ' ಎಂದಷ್ಟೇ ಹೇಳಿದ.

ನನ್ನ ಮನಸ್ಸಿನಲ್ಲಿ ಈ ಮಾತು ಒಂದು ರೀತಿಯ ಭಯವನ್ನು ಹುಟ್ಟಿಸಿತು. ನಿಮಗೆ ಹೇಳಿದರೆ ಛೀಮಾರಿ ಬಿದ್ದೀತೆಂದು ಹೆದರಿ ಸುಮ್ಮನಾದೆ. ಲಕ್ಷ್ಮಿಯೂ ಮುಖ ಸಪ್ಪಗೆ ಮಾಡಿಕೊಂಡಳು.

ಅವರಿಂದೇನೋ ಒಪ್ಪಿಗೆಯ ಪತ್ರ ಬಂತು. ಆದರೆ ನನಗೆ ಒಳಗೊಳಗೇ ಭಯ ಕಾಡುತ್ತಿತ್ತು. ನೀವೂ ಒಪ್ಪಿದಿರಿ. ಮೂರ್ತೀನೂ ಒಪ್ಪಿದ.

ಮತ್ತೆ ಶಂಕರನನ್ನು ಕಂಡಾಗ ಹೇಳಬೇಕೆಂದು ಕಾಯುತ್ತಲೇ ಇದ್ದೆ. ಅದೃಷ್ಟಕ್ಕೆ ಅವನೇ, 'ಅಮ್ಮ, ನನಗೆ ಈವೊತ್ತು ನಿಮ್ಮನೆಯ ಊಟದ ಯೋಗವಿದೆ. ತಪ್ಪಿಸಲಾರಿರಿ ಅಲ್ವಾ' ಎಂದು ಹೇಳುತ್ತಾ ಬಂದ.

'ನಿನಗಿಲ್ಲಾಂತೀನ? ಬಾರೋ ಶಂಕರ' ಎಂದು ಕರೆದು ಅವನಿಗೆ ಅನ್ನವಿಟ್ಟೆ. ತೃಪ್ತಿಯಿಂದ ಊಟ ಮಾಡತೊಡಗಿದ. ಹುಳಿಯನ್ನ ಕಲೆಸುತ್ತಾ, ಹೇಳಿದ – ಈ ಸಂಬಂಧ 'ಕುದುರಿದೆ ತಾನೇ?' ಎಂದ. ನನಗೆ ತುಂಬಾ ಆಶ್ಚರ್ಯವಾಯಿತು. 'ಲೋ ಶಂಕರ, ಇದೆಲ್ಲಾ ನಿಂಗೆ ಹೇಗೆ ಗೊತ್ತೋ' ಎಂದು ಕೇಳಿದೆ. ಅದಕ್ಕೆ ಅವನು ನಗುತ್ತಾ, 'ಇಷ್ಟು ಸಣ್ಣ ವಿಷಯ ತಿಳಿಯದಿದ್ದರೆ ಹೇಗೆ?' – ಎಂದು ಮರು ಪ್ರಶ್ನಿಸಿದ.

'ಲೋ ಶಂಕರ ನಿನ್ನ ಮಾತು ಬಹಳ ವಿಚಿತ್ರವಾಗಿ ಅನ್ನಿಸಿದೆ ಕಣೋ. ಆವೊತ್ತು ಈ ಸಂಬಂಧ ಬೇಡಾನ್ನಿ' ಎಂದೆ. ಈಗ ಕುದುರಿದೆಯಾ?' ಎಂದು ವಿಚಾರಿಸ್ತಿದ್ದಿಯ. ನನಗೊಂದೂ ಅರ್ಥವಾಗೊಲ್ಲ. ಬದಲಾಗಿ ಸುಮ್ಮನೆ ಭಯತಂದಿಟ್ಟೆ ಎಂದು ದೂರಿದಳು.

ಶಂಕರ ಗಹಗಹಿಸಿ ನಕ್ಕು ಹೇಳಿದ. 'ಭಯಪಡೋ ಅವಶ್ಯಕತೆಯೇ ಇಲ್ಲ. ಅವರಾಗಿಯೇ ಈ ಸಂಬಂಧ ಬೇಡವೆಂದು ಬರೀತಾರೆ. ನೀವೇ ನೋಡ್ತಿರಿ!' ಎಂದು ಹೇಳಿ ತಟ್ಟೆಯಲ್ಲಿದ್ದ ಅನ್ನವನ್ನು ಬೇಗ ತಿಂದು ಮುಗಿಸಿ ತಟ್ಟೆಯನ್ನು ತೊಳೆಯಲು ತೆಗೆದುಕೊಂಡು ಹೋದ.

ಹಾಗೇ ಹೇಳಿದ ಒಂದು ವಾರಕ್ಕೆ ಅವರಿಂದ ಈ ಮದುವೆ ಬೇಡವೆಂದು ತಂತಿ ಬಂದದ್ದು!" ಎಂದು ಹೇಳಿ ಕಥೆ ಮುಗಿಸಿದಳು.

"ಸರಿ ಸರಿ, ಅದೇನು ಮಹಾ ದೊಡ್ಡ ವಿಷಯ. ಹುಡುಗನ ಗುಟ್ಟು ಗೊತ್ತಾಗಿಹೋಗುತ್ತೆ ಅಂತ ಈ ಮದುವೆ ಬೇಡವೆಂದರು. ಅದರಲ್ಲಿ ಅವನದೇನು ಭವಿಷ್ಯ?" ಎಂದರು.

ಗೌರಿಗೆ ಗೊತ್ತಾಗಿದ್ದ ಹುಡುಗನಿಗೆ ಮೂರ್ಛೆ ರೋಗ ಬರುತ್ತಿತ್ತು. ಅದು ತಿಳಿದಿರಲಿಲ್ಲ. ಅವರು ಒಪ್ಪಿಕೊಂಡು ಪತ್ರ ಬರೆದ ನಾಲ್ಕೈದು ದಿನಗಳಿಗೆ ಆ ಹುಡುಗನಿಗೆ ಅಪಘಾತ ಸಂಭವಿಸಿತು. ಮಧ್ಯೆ ರಸ್ತೆಯಲ್ಲಿ ಬರುವಾಗ, ಮೂರ್ಛೆ ಬಂದು ಬೀಳುವುದಕ್ಕೂ, ಒಂದು ಕಾರು ದಿಢೀರನೆಂದು ಬರುವುದಕ್ಕೂ ಸರಿಹೋಯಿತು. ಬಂದದ್ದೆ ಜೋರಾಗಿ ಅವನಿಗೆ ಡಿಕ್ಕಿ ಹೊಡೆಯಿತು. ಅದೃಷ್ಟಕ್ಕೆ ಪ್ರಾಣ ಉಳಿಯಿತು. ಆದರೆ ಕಾಲು ಮಾತ್ರ ಮುರಿದುಹೋಯಿತು. ಅಲ್ಲಿ ಸೇರಿದ್ದ ಗುಂಪಿನಲ್ಲಿ ಆ ಹುಡುಗನ ಪರಿಚಯದವನೊಬ್ಬನಿದ್ದ. ಅವನು ಮತ್ತು ಇನ್ನಿಬ್ಬರು ವ್ಯಕ್ತಿಗಳು ಸುದ್ದಿಯನ್ನು ತಂದೆ ತಾಯಿಗೆ ಮುಟ್ಟಿಸಿದರು.

ಆ ಹುಡುಗನ ತಂದೆ ತಾಯಿಯರು ತಮ್ಮ ದುರಾದೃಷ್ಟಕ್ಕೆ ಹಲುಬಿದರು. ಡಾಕ್ಟರು ಹುಡುಗನ ಕಾಲು ಬಹುಶಃ ಸರಿಹೋಗಲಾರದು ಎಂದು ತಿಳಿಸಿದರು. ವಿಧಿಯಿಲ್ಲದೆ ಭಾವೀ ಬೀಗರಿಗೆ ಪತ್ರ ಬರೆದು ಮದುವೆಯ ನಿಶ್ಚಯವನ್ನು ಮುರಿದಿದ್ದರು. ಆಮೇಲೆ ಭೀಮರಾಯರು ತಿಳಿದವರನ್ನು ವಿಚಾರಿಸಿದಾಗ, ಆ ಹುಡುಗನಿಗೆ ಮೂರ್ಛೆ ರೋಗವಿದ್ದುದು ತಿಳಿದು ಬಂದಿತ್ತು.

ಭಾಗೀರಥಮ್ಮನ ಮಾತುಗಳು ಭೀಮರಾಯರನ್ನು ಯೋಚಿಸುವಂತೆ ಮಾಡಿದವು. ಆದರೆ ಒಂದೈದು ನಿಮಿಷಗಳಲ್ಲಿ ಮಾಮೂಲು ಆಲೋಚನೆಗಳೇ ಅವರ ತಲೆ ತುಂಬಿದವು. ಕೆಲಸಗಳ ಮಧ್ಯೆ ಇದೆಲ್ಲಾ ಮರೆತುಹೋಯಿತು.

* * *

ಎಂದಿನಂತೆ ಆ ವರ್ಷವೂ ಜಾತ್ರೆ ನಡೆಯಿತು. ಊರಿನಲ್ಲಿ ದೇವಿಯ ಉತ್ಸವ ಮೂರ್ತಿಯನ್ನು ಹೊತ್ತು ನಡೆದರು. ಕಿಕ್ಕಿರಿದ ಜನಸಂದಣಿಯ ನಡುವೆ ರೇಣುಕೆಯ ವಿಗ್ರಹ ಮೂರ್ತಿ ರುದ್ರಭಯಂಕರವಾಗಿದೆ. ಅಗಲವಾದ ಕಣ್ಣುಗಳು ಹೊರಚಾಚಿದ ನಾಲಗೆ, ಕಿವಿ ಮೂಗುಗಳಿಗೆ ದೊಡ್ಡದಾದ ಆಭರಣಗಳು. ಹಣೆಯ ಮೇಲೆ ರಕ್ತ ರಂಜಿತ ಕುಂಕುಮಬೊಟ್ಟು. ಕೆಂಪು ಪೀತಾಂಬರವನ್ನು ಉಡಿಸಲಾಗಿದೆ. ನೋಡುವವರ ಎದೆ ಝಲ್ಲೆನಿಸುವಂತಿದೆ. ಅಮ್ಮನವರ ವಿಗ್ರಹವನ್ನು ಹೊತ್ತಿರುವ ಪಲ್ಲಕ್ಕಿಯ ಹಿಂದೆ ರುದ್ರಾವೇಶದ ಭಕ್ತರ ಗುಂಪು. ಅಗಲವಾದ ಕುಂಕುಮ ಹಣೆಯ ಮೇಲೆ ಧರಿಸಿ ಅರೆನಗ್ನರಾಗಿ, ಬತ್ತಲು ಎದೆಯ ಮೇಲೆ ಎರಡೂ ಕೈಗಳಲ್ಲಿ ಹಿಡಿದ ಚೂರಿಗಳಿಂದ ಕೆರೆದುಕೊಳ್ಳುತ್ತಾ, ಅಮ್ಮನವರ ಉತ್ಸವವನ್ನು ಹಿಂಬಾಲಿಸುತ್ತಿದ್ದಾರೆ. ಢೋಲು, ಮದ್ದಲೆ, ಶಂಖವಾದ್ಯಗಳ ಭೋರ್ಗರೆತ. ಅವುಗಳ ವೇಗವಾದ ಬಡಿತಕ್ಕೆ ಅಮ್ಮನವರ ಈ ಬಂಟರ ಆವೇಶದ ಹೆಜ್ಜೆ ಕುಣಿತ! ಅವರ ಹಿಂದೆ ಊರಿನ ಹೆಣ್ಣು ಮಕ್ಕಳು ಕಣ್ಣು ಕೋರೈಸುವ ಉಡುಪುಗಳನ್ನು ಧರಿಸಿ, ಆಭರಣಗಳನ್ನು ತೊಟ್ಟು ತಲೆಯ ಮೇಲೆ ರಾಗಿ ಮೊಳಕೆಗಳ ತಟ್ಟೆಗಳನ್ನು ಹಿಡಿದು ನಡೆದಿರುವವರು ಕೆಲವರಾದರೆ ಮತ್ತೆ ಕೆಲವು ಹೆಣ್ಣು ಮಕ್ಕಳು ತಂಬಿಟ್ಟಿನ ದೀಪಗಳನ್ನು ಹೊತ್ತಿಸಿ ಹಿಡಿದುಕೊಂಡು ಆ ಬಂಟರನ್ನು ಹಿಂಬಾಲಿಸಿದ್ದಾರೆ.

ಈ ಜಾತ್ರೆಯಿಂದಲೇ ಊರಿಗೊಂದು ಪ್ರಾಮುಖ್ಯ ಬಂದಂತಿದೆ. ಉತ್ಸವ ಪಲ್ಲಕ್ಕಿ ಊರನ್ನು ಹೀಗೆ ಸುತ್ತಿ ಬಂತು. ಸೂಜಿಮೊನೆಯಷ್ಟು ಎಡೆಯಿಲ್ಲದಂತೆ ಜನ ತುಂಬಿದ್ದಾರೆ. ಎಲ್ಲರೂ ಅಮ್ಮನವರ ದರ್ಶನಕ್ಕೆಂದು ತುದಿಗಾಲಲ್ಲಿ ನಿಂತಿರುವವರು. ಪಲ್ಲಕ್ಕಿ ಸುತ್ತಿ ಮತ್ತೆ ಗುಡಿಯನ್ನು ಸೇರಿತು. ಆಗಲೇ ಮೂರು ಗಂಟೆಗೂ ಮೀರಿತ್ತು ವೇಳೆ! ಶೂದ್ರರೂ ಹೊಲೆಯರೂ, ರೈತರೂ, ಬ್ರಾಹ್ಮಣರೂ, ವೈಶ್ಯರೂ ಹೀಗೆ ಎಲ್ಲಾ ಜಾತಿಯ ಜನರ ಆರಾಧ್ಯ ದೈವವಾಗಿದ್ದಾಳೆ ರೇಣುಕೆ. ಹರಕೆ ಹೊತ್ತವರು ಬಂಡಿಗಟ್ಟಲೆ ಅನ್ನವನ್ನು ತಂದು ನೈವೇದ್ಯಕ್ಕೆ ಇಟ್ಟು, ಬಂದಂತಹವರಿಗೆ ಪ್ರಸಾದದಂತೆ ವಿನಿಯೋಗಿಸುತ್ತಿದ್ದಾರೆ.

ಕೆಲವರು ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಪಾನಕ, ನೀರಮಜ್ಜಿಗೆಗಳನ್ನು ತುಂಬಿ ತಂದು ಹಂಚುತ್ತಿದ್ದಾರೆ. ಎಲ್ಲರಿಗೂ ಕೈ ತುಂಬಾ ಕೆಲಸ.

ಅಮ್ಮನವರು ಆ ಗ್ರಾಮರಕ್ಷಕಿಯಾಗಿ ಊರನ್ನು ಕಾಯಿಲೆ ಕಸಾಲೆಗಳಿಂದ ಕಾಯುತ್ತಿದ್ದಾಳೆಂಬ ನಂಬಿಕೆಯಿಂದ, ಮರೆಯದೆ ಅಲ್ಲಿನ ಜನ ತಮ್ಮ ಭಕ್ತಿ ಗೌರವ ಸೂಚಕವಾಗಿ ಪ್ರತಿ ವರ್ಷವೂ ಈ ಜಾತ್ರೆಯನ್ನು ನಡೆಸುತ್ತಾರೆ.

ಶಂಕರ ಮಾತ್ರ ಅಲ್ಲಿಂದ ಕದಲಲಿಲ್ಲ. ಗ್ರಾಮ ದೇವತೆಗೆ ಮಣಿಯಲೂ ಇಲ್ಲ. ಉತ್ಸವ ಅರಳೀ ಕಟ್ಟೆಯನ್ನು ಸಮೀಪಿಸುತ್ತಿದ್ದಂತೆ, ದೂರದಿಂದ ವಿಗ್ರಹಮೂರ್ತಿಯನ್ನು ಕಂಡ ಶಂಕರ ಮುಗುಳುನಕ್ಕು ಏನನ್ನೋ ಗುಣುಗುಣಿಸಿದ. ಪಕ್ಕದಲ್ಲಿದ್ದ ಯಾರಿಗೂ ಅದೇನೆಂದು ಸರಿಯಾಗಿ ಕೇಳಿಸಲಿಲ್ಲ. ಗಟ್ಟಿಯಾಗಿ ತಲೆಯಾಡಿಸಿದ. ಆದರೆ ಯಾರೂ ಅವನ ಚರ್ಯೆಯನ್ನು ಗಮನಿಸಲಿಲ್ಲ. ಅರಳೀಕಟ್ಟೆಯನ್ನು ಹಾದುಹೋಗಬೇಕಿದ್ದ ಉತ್ಸವ ಪಲ್ಲಕ್ಕಿ ಸರಿಯಾಗಿ ಅಲ್ಲಿ ನಿಂತುಬಿಟ್ಟಿತು. ಪಲ್ಲಕ್ಕಿಯನ್ನು ಹೆಗಲ ಮೇಲೆ ಹೊತ್ತವರು, ಭಾರವನ್ನು ಹೊರಲಾರದಂತಾದರು. ಇಷ್ಟು ದೂರ ಹೊತ್ತು ಬಂದವರು, ಇಲ್ಲಿ ಮಾತ್ರ ಬಸವಳಿದು, ಹೊರಲಾರವೆಂಬಂತೆ ನಿಂತುಬಿಟ್ಟರು. ಇಷ್ಟೊಂದು ಹತ್ತಿರದಲ್ಲಿ ಬಂದು ನಿಂತಿದ್ದ ಉತ್ಸವವನ್ನು ಜನರು ಖುಷಿಯಿಂದ ನೋಡಿದರು. ಎದ್ದು ನಿಂತು ಭಕ್ತಿಯಿಂದ ತಾಯಿಗೆ ಅಡ್ಡ ಬಿದ್ದರು. ಶಂಕರ ಮಾತ್ರ ಕದಲದೆ ತನ್ನ ಜಾಗದಲ್ಲಿ ಬೇರುಬಿಟ್ಟು ನಗುತ್ತಿದ್ದ.

ಊರ ಪ್ರಮುಖರಾದ ಚೆನ್ನಾರೆಡ್ಡಿ, ಹನುಮೇಗೌಡ, ಭಿಮರಾಯರು ಎಲ್ಲಾ ಉತ್ಸವದ ಮುಂಭಾಗದಲ್ಲಿದ್ದರು. ಶಂಕರನ ರೀತಿಯನ್ನು ಗಮನಿಸಿ ಭೀಮರಾಯರು ಹೇಳಿದರು – "ನಮಸ್ಕಾರ ಮಾಡು ಶಂಕರ. ಅಮ್ಮನವರಿಗೆ ಕೋಪ ಬಂದೀತು' ಎಂದರು.

"ಈಗಲೇ ಅಮ್ಮನವರಿಗೆ ನನ್ನ ಮೇಲೆ ಕೋಪ. ಯಾಕಂತ ನನಗೇ ಗೊತ್ತಿಲ್ಲ" – ಎಂದು ಸುಮ್ಮನಾದ.

ಹನುಮಗೌಡ ಹೇಳಿದರು – "ಬಿಡಿ ರಾಯರೆ, ಅವನ ಜೊತೆಗೇನು ಮಾತು? ಅವನಿಗೇನು ಗೊತ್ತಾಗುತ್ತೆ? ಮನಸ್ಸು ಬಂದರೆ ಉಂಟು, ಇಲ್ಲವಾದರೆ ಮರುಳನೇ!" ಎಂದು ಭೀಮರಾಯರನ್ನು ಸುಮ್ಮನಿರಿಸಿದರು. ಎಷ್ಟು ಹೊತ್ತಾದರೂ ಪಲ್ಲಕ್ಕಿಯನ್ನು ಮೇಲೆತ್ತಲು ಆಗಲಿಲ್ಲ. ಎಲ್ಲರೂ ಕೈಕೊಟ್ಟರೂ ಮೇಲೇಳಲಿಲ್ಲ. ಶಂಕರ ಕೂತಲ್ಲಿಂದ ಕದಲಿಲ್ಲ. ನಗುವನ್ನು ನಿಲ್ಲಿಸಲಿಲ್ಲ. ಅಷ್ಟು ಜನ ಕಷ್ಟಪಡುತ್ತಿದ್ದರೂ ನಗುತ್ತಾ ಶಂಕರನನ್ನು ಕಂಡಾಗ ಸ್ವಲ್ಪ ಸಿಟ್ಟಾಯಿತು. ಪೂಜಾರಿ ಗದ್ದರಿಸೋಣವೆಂದುಕೊಂಡ. ಅಷ್ಟರಲ್ಲಿ ಶಂಕರನಿಗೇ ಏನನಿಸಿತೋ ಎದ್ದು ಬಂದು ಬೋಯಿಗಳ ಜೊತೆಗೆ ಹೆಗಲು ಕೊಟ್ಟನೋ ಇಲ್ಲವೊ ಹೊತ್ತ ಪಲ್ಲಕ್ಕಿಯ ಭಾರವೇ ತಿಳಿಯದಂತಾಯಿತು. ನಿರಾಯಾಸವಾಗಿ ಬೋಯಿಗಳು ಹೊತ್ತು ಸರಸರನೆ ನಡೆದರು.

ಗುಂಪಿನಲ್ಲಿ ಗುಸಗುಸ ಪ್ರಾರಂಭವಾಯಿತು. ಊರಿನವರು, "ಶಂಕರ ಹೆಗಲು ಕೊಟ್ಟಿದ್ದಕ್ಕೆ ಪಲ್ಲಕ್ಕಿ ಭಾರವೇ ಕಡಿಮೆಯಾಯಿತಂತೆ" ಎಂದು ಅಚ್ಚರಿಯಿಂದ ಹೇಳಿಕೊಂಡರೆ, ಊರಾಚೆಯವರು, "ಯಾವನೋ ಊರಿನ ಹುಚ್ಚನ ಮಹಿಮೆಯಿಂದ ಉತ್ಸವ ಪಲ್ಲಕ್ಕಿಯನ್ನು ಹೊರಲು ಆಯಿತಂತೆ" ಎಂದು ಮಾತಾಡಿಕೊಂಡರು ಪರಸ್ಪರ.

ಈ ಘಟನೆ ಅಲ್ಲಿಗೇ ಮುಗಿಯಿತು. ಜಾತ್ರೆಯ ಸಂಭ್ರಮ ಕುಂದಿತು. ಜನಸಂದಣಿ ಕರಗಿತು. ದೇವತೆ ಗುಡಿ ಸೇರಿದಳು.

ಭೀಮರಾಯರು ಬಂದವರಿಗೆ ಆತಿಥ್ಯ ನೀಡಿ ಬೀಳ್ಕೊಟ್ಟರು. ಬಂದವರೆಲ್ಲ ಹೊರಟುಹೋದ ಮೇಲೆ ತಮ್ಮ ನೆರವಿಗೆ ನಿಂತ ರಾಚನನ್ನು ಕೇಳಿದರು.

"ಏನೋ ರಾಚ, ಇಷ್ಟು ಮಂದಿ ಬಂದು ಉಂಡು ಹೋದರೂ ಶಂಕರ ಬಂದಹಾಗೆ ಕಾಣಲಿಲ್ಲವಲ್ಲ?" ಎಂದು.

"ಹೌದು ಬುದ್ಧಿ. ನಾನು ಗಮನಿಸಿಯೇ ಇರಲಿಲ್ಲ. ಈಗ ನೀವು ಹೇಳಿದ ಮ್ಯಾಲೆ ನೆಪ್ಪಿಗೆ ಬಂತು. ಅಂವ ಬರಲೇ ಇಲ್ಲ. ಜಾತ್ರೆ ವೊತ್ತಿನಂಗೆ ಆ ಅರಳೀಕಟ್ಟೆ ಮ್ಯಾಲೆ ಕುಂತಿದ್ದನಲ್ಲ. ಪಲ್ಲಕ್ಕಿ ಹೊತ್ತನಂತ ಜನಯೋಳ್ತಿದ್ರು" ಎಂದ.

"ಆಗ ನಾನು ಅಲ್ಲಿಯೇ ಇದ್ದೆ. ಗಡಿಬಿಡಿಯಲ್ಲಿ ಅವನ್ನ ಕರೆಯೋದು ಮರೆತುಬಿಟ್ಟೆ. ಎಷ್ಟೊಂದು ಜನ ಉಂಡು ಹೋದ್ರು, ಪಾಪ! ಅವನೇನು ಮಾಡಿದ್ದಾನೆ. ಹೋಗಿ ನಾನು ಬರಹೇಳಿದೆ ಅಂತ ತಿಳಿಸಿ ಕರೆದುಕೊಂಡು ಬಾ" ಎಂದರು.

ರಾಚ, ಸದ್ಯ ಸ್ವಲ್ಪ ಬಿಡುಗಡೆ ಸಿಕ್ಕಿತಲ್ಲಾ. ಅನ್ನೋ ಸಂತೋಷದಿಂದ, ಇದ್ದ ಕೆಲಸಾನ ಹಾಗೇ ಬಿಟ್ಟು ಓಡಿ ಹೋದವನು ಕೇವಲ ಐದು ನಿಮಿಷಗಳಲ್ಲಿ ಹಿಂತಿರುಗಿ ಬಂದ. ಭೀಮರಾಯರು, "ಯಾಕೆ ಬರಲಿಲ್ಲವಾ?" ಎಂದು ವಿಚಾರಿಸಿದರು.

"ಅವನು ಕುಂತಿದ್ದ ಕಡೆ ವೋಗಿ ನೋಡಿವ್ನಿ ಬುದ್ಧಿ ಬಂದಿರಲಿಲ್ಲ. ಹೊಲೇರ ಮಾದ ಹೇಳಿದ್ದ. ಪಕ್ಕದ 'ಆಲಳ್ಳಿ' ಜನರ ಗುಂಪಿನ ಇಂದೆ ಓಯ್ತಿದ್ದನಂತೆ" ಎಂದು ಹೇಳಿದ.

"ಸರಿ ಹೋಗಲಿ ಬಿಡು. ನಮ್ಮ ಮನೆ ಅನ್ನದ ಋಣ[illegible]ಲ್ಲ ಅವನಿಗೆ ಇವತ್ತು" ಎಂದು ನಿಟ್ಟುಸಿರು ಬಿಟ್ಟರು.

* * *

ಜಾತ್ರೆಯ ಅಬ್ಬರ ಅಡಗಿ ಹೋಗಿ ಮಾಮೂಲು ಜೀವನಕ್ರಮಕ್ಕೆ ತಿರುಗಿದರು ಜನ. ಶಂಕರ ಬರಬರುತ್ತಾ ತೀರಾ ಅಂತರ್ಮುಖಿಯಾಗತೊಡಗಿದ. ಮಾತಾಡಲು ಬರುವುದೇ ಇಲ್ಲವೇನೋ ಎನ್ನುವಷ್ಟು ಮೌನಿಯಾದ.

ಊರಿನವರೂ ಶಂಕರನ ವಿಚಾರವಾಗಿ ನಿರಾಸಕ್ತರಾದರು. ಕಣ್ಣಿಗೆ ಬಿದ್ದರೆ ಕರೆದು ಮಾತಾಡುವುದು, ಇದ್ದರೆ ಏನಾದರೂ ಉಣಲಿಡುವುದು, ಇಲ್ಲವಾದರೆ ಸುಮ್ಮನಾಗುವರು.

ಜನ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಈಗಂತೂ ಬಿತ್ತನೆ ಕೆಲಸ ಆರಂಭವಾಗಿ ಜನ ತುಂಬಾ ಚಟುವಟಿಕೆಯಿಂದಿದ್ದರು. ಬಿಡುವು ಸಿಗುವುದು ಸ್ವಲ್ಪ ಕಷ್ಟವೇ ಆಗಿತ್ತು.

ಮೊನ್ನೆ ಶುಕ್ರವಾರ ಗ್ರಾಮ ದೇವತೆಯ ಪೂಜೆಯನ್ನು ಮುಗಿಸಿ ಪೂಜಾರಪ್ಪ ಮಂಗಳಾರತಿಯನ್ನು ಮಾಡತೊಡಗಿದ. ಶುಕ್ರವಾರವಾದ್ದರಿಂದ ಏಳೆಂಟು ಜನ ಹೆಂಗಸರು ಮೂರು ನಾಲ್ಕು ಜನ ಗಂಡಸರು ಇದ್ದರು. ಮಂಗಳಾರತಿ ಎತ್ತುತ್ತಿದ್ದ ಪೂಜಾರಪ್ಪನ ಕೈ ನಡುಗತೊಡಗಿತು. ಮೈ ಬೆವರಿತು. ಕ್ರಮೇಣ ಪೂಜಾರಪ್ಪನ ಕಣ್ಣು ಕೆಂಪಗಾಗತೊಡಗಿತು. ಮಂಗಳಾರತಿ ಕೆಳಗೆ ಬಿದ್ದೀತೆಂಬ ಭಯದಿಂದ ಅಲ್ಲಿದ್ದವರು ಅದನ್ನು ಪೂಜಾರಪ್ಪನ ಕೈಯಿಂದ ತೆಗೆದು ಕೆಳಗಿಟ್ಟರು. ಆಂ! ಊಂ ಎಂದು ಪೂಜಾರಪ್ಪ ತೂರಾಡತೊಡಗಿದ. 'ಅಮ್ಮನವರು ಮೈ ಮೇಲೆ ಬಂದವರೆ! ಮೈ ಮೇಲೆ ಬಂದವರೆ!' ಎಂದು ಕೂಗಿದರು. 'ನಿಮ್ಮೂರಲ್ಲಿ ನನ್ನ ಪ್ರತಿಸ್ಪರ್ಧಿ ಇದ್ದಾನೆ. ಅವನನ್ನು ಕಳಿಸಿಬಿಡಿ ಕಳಿಸಿ ಬಿಡಿ' ಎಂದು ಹಾರಾಡಿದ ಪೂಜಾರಪ್ಪ. ಭಯದಿಂದ ಹೆಂಗಸರು ಗಂಡಸರು ನಡುಗುತ್ತಾ ಕೈ ಕಟ್ಟಿ ನಿಂತರು. ಅವರಲ್ಲಿ ಸ್ವಲ್ಪ ವಯಸ್ಸಾದ ದ್ಯಾವರಾಜಪ್ಪ ಇದ್ದ. ಧೈರ್ಯಮಾಡಿ ಹತ್ತಿರ ಬಂದು, "ಯಾರಮ್ಮ ನಿನ್ನ ಪ್ರತಿಸ್ಪರ್ಧಿ?" ಎಂದು ಕೇಳಿದ. "ನಿಮಗೇ ಗೊತ್ತಾಗುತ್ತೆ ಯಾರಂತ!" ಎಂದ ಪೂಜಾರಪ್ಪ. "ನಿನಗೆ ಪ್ರತಿಸ್ಪರ್ಧಿ ಇರೋದು ಸಾಧ್ಯವೇ ತಾಯಿ? ಯಾರೇ ಬಂದರೂ ನಿನ್ನ ಮರೆಯೋದು ಸಾಧ್ಯವೇ ಇಲ್ಲ" ಎಂದ ದ್ಯಾವರಾಜಪ್ಪ. 'ಯಾರಿಗ್ಗೊತ್ತು ನನ್ನ ಮರೆಯೋದಿಲ್ಲಾಂತ ಹೇಗೆ ಹೇಳೋದು? ಎಂದ ಪೂಜಾರಪ್ಪ. ನಿನ್ನ ಮಹಿಮೇನ ತಿಳಿದಿರುವ ನಮಗೆ ನಿನ್ನಲ್ಲಿ ಯಾವ ಕಾಲಕ್ಕೂ ಭಯಭಕ್ತಿ ಇದ್ದೇ ಇದೆ. ನಿನ್ನ ಸತ್ವದ ವಿಚಾರ ನಿನಗೇ ತಿಳಿದಿರುವಾಗ ಪ್ರತಿಸ್ಪರ್ಧಿಗಳ ಭೀತಿ ನಿನಗ್ಯಾಕೆ ತಾಯಿ?... ಅಲ್ಲದೆ ನೀನು ಹೇಳಿದಂತೆ ನಿನ್ನ ಸ್ಪರ್ಧಿಯನ್ನು ಕಳುಹಿಸಿಬಿಟ್ಟರೆ ನಿನ್ನ ಹೆಸರಿಗೇ ಅವಮಾನ. ಜನ, 'ನೀನು ಆತನಿಗೆ ಹೆದರಿದೆ' ಅಂದುಕೊಳ್ಳೊಲ್ಲವೆ?" ಎಂದು ಸಮಾಧಾನವಾಗಿಯೇ ಹೇಳಿದ ದ್ಯಾವರಾಜಪ್ಪ.

ಗಿರಗಿರ ತಲೆ ತೂಗುತ್ತಲೇ ಇದ್ದ ಪೂಜಾರಪ್ಪ. "ಹಾಂ! ಹೂಂ!... ಹೌದು ಹೌದು... ಇರಲಿ ಮುಂದೆ ನೋಡ್ತೇನೆ..." ಎಂದು ತೂರಾಡುತ್ತಾ ಬಿದ್ದು ಬಿಟ್ಟ. ಐದು ನಿಮಿಷಗಳ ತರುವಾಯ ಪೂಜಾರಪ್ಪನಿಗೆ ಸ್ಮೃಹೆ ಬಂದು ಕಣ್ಣು ಬಿಟ್ಟರೆ ಭಕ್ತರು ಬೆದರಿದಂತೆ ನಿಂತಿದ್ದಾರೆ. ಪ್ರತಿ ದಿನಾ ಬರುವ ಭಕ್ತರು ಇಂದೇಕೆ ಹಾಗಿದ್ದಾರೆಂದು ಯೋಚಿಸಿದ. ಪೂಜಾರಪ್ಪ ವಿಚಾರಗ್ರಸ್ತನಾಗಿದ್ದುದನ್ನು ಗಮನಿಸಿ ದ್ಯಾವರಾಜಪ್ಪ ಎಲ್ಲಾ

ವಿವರಿಸಿದ. ಪೂಜಾರಪ್ಪನಿಗೆ ತನ್ನ ಮೇಲೆ ದೇವಿಯ ಆವಾಹನೆಯಾಗಿತ್ತೆಂದು ತಿಳಿದು ಆಶ್ಚರ್ಯಪಟ್ಟ, ಅಮ್ಮನವರೇ, ತನಗೆ ಪ್ರತಿಸ್ಪರ್ಧಿಯೆಂದು ಭಾವಿಸಿ ಹೆದರಿರುವ ಆ ವ್ಯಕ್ತಿ ಯಾರೆಂದು ಪೂಜಾರಪ್ಪ ಕೇಳಿದ್ದಕ್ಕೆ, ದ್ಯಾವರಾಜಪ್ಪ 'ನಿಮಗೆ ಯಾರೂಂತ ಗೊತ್ತಾಗುತ್ತೆ' ಎಂದು ಹೇಳಿದ. ದೇವತೆಯ ಮಾತುಗಳನ್ನೇ ಒಪ್ಪಿಸಿದ. ಪೂಜಾರಪ್ಪ ಮತ್ತೆ ಯೋಚನೆಗೆ ಬಿದ್ದ. ಎಷ್ಟು ಆಲೋಚಿಸಿದರೂ ಯಾರೆಂದು ಆ ಊರಿನಲ್ಲಿ, ಹೊಳೆಯಲಿಲ್ಲ. ಬಂದವರೆಲ್ಲ ಮಂಗಳಾರತಿ ಮಾಡಲು ಆತುರಪಡಿಸಿದರು. ಮಂಗಳಾರತಿ ಆದ ಮೇಲೆ ಜನ ಅವರವರ ಪಾಡಿಗೆ ಅವರವರು ಹೊರಟುಹೋದರು. ಆದರೆ ಘಟನೆ ಊರಿಗೆಲ್ಲಾ ಪ್ರಚಾರವಾಯಿತು. ಎಲ್ಲರೂ, ಇದು ನಿಜವೇ! ಎಂದು ಅಚ್ಚರಿಯಿಂದ ಬಾಯಿಬಿಟ್ಟರು.

ಜಾತ್ರೆ ನಡೆದು ಒಂದು ತಿಂಗಳಾಗಿದೆ ಪಶ್ಚಿಮ ದಿಗಂತದ ಕೆಂಪುಕೊಳದಲ್ಲಿ ಪಥಶ್ರಾಂತನಾದ ಭಾನು, ಇಳಿದು ಮೈತೊಳೆದುಕೊಳ್ಳುತ್ತಿದ್ದಾನೆ. ಚಿಲಿಪಿಲಿ ರವರೊಂದಿಗೆ ಹಕ್ಕಿಗಳು ಹಾರುವ ಚುಕ್ಕೆಗಳಂತೆ, ಚಿತ್ತಾರವನ್ನು ಬಿಡಿಸುತ್ತಾ ಹಾರುತ್ತಾ ಗೂಡುಗಳತ್ತ ನಡೆದಿವೆ. ಮೇಯಲು ಹೋದ ದನಗಳು ಧೂಳನ್ನೆಬ್ಬಿಸುತ್ತಾ ದಿನದ ಸ್ವಚ್ಛಂದ ಬದುಕನ್ನು ಮೆಲುಕು ಹಾಕುತ್ತಾ ಕೊಟ್ಟಿಗೆಗಳತ್ತ ನಡೆದಿವೆ.

ಕೆಲಸಕ್ಕೆಂದು ಹೋದ ಗಂಡಸರು ಉಳಿ, ಪಿಕಾಸಿ, ಸನಿಕೆ, ನೇಗಿಲುಗಳೊಂದಿಗೆ ಮರಳಿ ಮನೆಯತ್ತ ಬರುತ್ತಾರೆ. ಸಂಜೆಯಾಯಿತೆಂದು ಹೆಣ್ಣುಮಕ್ಕಳು ಮನೆಯ ಮುಂದಿನ ಅಂಗಳವನ್ನು ಚೊಕ್ಕವಾಗಿ ಗುಡಿಸಿ ಸಗಣಿ ನೀರನ್ನು ಚೆಲ್ಲಿ ಬಗೆಬಗೆಯ ರಂಗವಲ್ಲಿಗಳನ್ನು ಬಿಡಿಸಿ, ಹಬ್ಬದ ಪರಿಸರವನ್ನೇ ಉಂಟು ಮಾಡಿದ್ದಾರೆ.

ವಯಸ್ಸಾದವರೆಲ್ಲಾ ತಮ್ಮ ಮನೆ ಜಗುಲಿಗಳನ್ನು ಏರಿ ಕುಳಿತು ಮಾತಿಗೆ ತೊಡಗಿದ್ದಾರೆ. ಒತ್ತೊತ್ತಾಗಿ ಇರುವ ಮನೆಗಳಾದ್ದರಿಂದ ತಮ್ಮ ಮನೆಗಳಿಂದಲೇ ಎದುರು ಮನೆಗಳವರೊಂದಿಗೆ ಮಾತಾಡಬಹುದಿತ್ತು. ಎದುರುಬದುರು ಮನೆ ಸಾಲುಗಳು ಕೇವಲ ಆರೇಳು ಅಡಿಗಳ ಅಂತರದಲ್ಲಿವೆ. ಕೆಲಸ ಮುಗಿದರೆ ಸಾಕು. ಹರಟೆಗೆ ಬೀದಿ ಬಾಗಿಲಿಗೆ ಬಂದುಬಿಡುತ್ತಿದ್ದರು. ಹೆಂಗಸರೂ ಮನೆಗಳೊಳಗಿಂದಲೇ ಕಿಟಕಿ ಮೂಲಕವಾಗಿ ಮಾತಾಡಬಹುದಿತ್ತು.

ರಾತ್ರಿ ಅಡಿಗೆಯ ಆತುರದಲ್ಲಿ ಹೆಂಗಸರು ಮನೆಗಳೊಳಗೇ ಇದ್ದಾರೆ. ಕಟ್ಟೆಯ ಮೇಲಿಂದಲೇ ಕೊರವಂಜಿಯೊಬ್ಬಳು, 'ಕಣಿಯೋಳೀನಿ ಕಣಿ ಕೇಳ್ರವ್ವ...' ಎಂದು ಕೂಗುತ್ತಾ ಬಂದಳು.

ಹೊತ್ತು ಕಳೆಯುವುದಕ್ಕೆ ಈ ಜನಕ್ಕೆ ಏನಾದರೂ ಒಂದು ನೆವ ಬೇಕಾಗಿತ್ತು. ಮನೆಯ ಮುಂದಿನ ಬೀದಿಯಲ್ಲಿ ಆಡುತ್ತಿದ್ದ ಹುಡುಗರೆಲ್ಲ, ಕೊರವಂಜಿಯ ದನಿ ಕೇಳಿ, ಏನಿರಬಹುದೆಂಬ ಕುತೂಹಲದಿಂದ ಅವಳನ್ನು ಮುತ್ತಿದರು. ಎಲ್ಲಕ್ಕಿಂತ ಆ

ಮಕ್ಕಳಿಗೆ ಅವಳ ವಿಚಿತ್ರ ವೇಷ ಆಕರ್ಷಕವೆನಿಸಿತು. ಒಬ್ಬರು ಓಡಿದ್ದನ್ನು ನೋಡಿ ಮಕ್ಕಳೆಲ್ಲಾ ಆಟ ಆಡುವುದು ಬಿಟ್ಟು ಓಡಿದರು. ಮಕ್ಕಳೆಲ್ಲಾ ಹೀಗೆ ಓಡಿದ್ದನ್ನು ನೋಡಿದ ಗಂಡಸರು ತಾವು ಮಾತಾಡುವುದನ್ನು ಬಿಟ್ಟು ಅಲ್ಲಿ ಗುಂಪುಗೂಡಿದರು.

ಕೊರವಂಜಿಯ ಮಾತಿನ ಚಾಲಾಕಿತನಕ್ಕೆ ಹಿರಿಯರೆಲ್ಲಾ ತಲೆತೂಗಿದರು. ಎಲ್ಲರಿಗೂ ತಮ್ಮ ಭವಿಷ್ಯವನ್ನು ತಿಳಿದುಕೊಳ್ಳುವ ಆಸೆ. ಸಾವಿನ ಸಮೀಪದಲ್ಲಿದ್ದ ಮುದುಕರಿಗೂ ಕೈ ತೋರಿಸಿ ತಮ್ಮ ಭವಿಷ್ಯವನ್ನು ತಿಳಿದುಕೊಳ್ಳುವ ಉತ್ಸಾಹವನ್ನು ತೋರಿದರು. ಅವರ ಉತ್ಸಾಹ ಆಸಕ್ತಿಯನ್ನು ನೋಡಿದ ಕೊರವಂಜಿ ಮುಸಿ ಮುಸಿ ನಕ್ಕಳು. ತನಗೇನಾಗಬೇಕು, ಕಾಸುಗಿಟ್ಟಿದರೆ ಸಾಕೆಂದು ರಾಗವಾಗಿ ಹಾಡಿನ ದಾಟಿಯಲ್ಲಿ ಒಬ್ಬೊಬ್ಬರ ಕೈಯನ್ನೇ ನೋಡಿ ಭವಿಷ್ಯವನ್ನು ಹೇಳತೊಡಗಿದಳು.

ಅಷ್ಟರಲ್ಲಿ ಮನೆಗೆ ಕೆಲಸದಿಂದ ಮರಳಿದ ಗಂಡಸರು ಕೈಕಾಲು ಮುಖ ತೊಳೆದುಕೊಂಡು ಕಾಫಿ ಹೀರಿ ತಾವು ತಮಾಷೆಯೇನೆಂದು ನೋಡಲು ಅಲ್ಲಿಗೆ ಧಾವಿಸಿದರು.

ಕೊರವಂಜಿಯ ನಿರೀಕ್ಷೆಗಿಂತ ಚೆನ್ನಾಗಿಯೇ ವರಮಾನ ಬಂತು. ಬಂದದ್ದಕ್ಕೆ ಅದೃಷ್ಟ ಖುಲಾಯಿಸಿತೆಂದು ಹಿಗ್ಗಿದಳು.

ಕೈ ತೋರಿಸಿಕೊಂಡು ಒಬ್ಬೊಬ್ಬರೇ ಅಲ್ಲಿಂದ ಕದಲಿದರು. ಅಷ್ಟರಲ್ಲಿ ರಾಜಾ ಅಲ್ಲಿಗೆ ಬಂದು ನಿಂತು ತಮಾಷೆ ನೋಡುತ್ತಿದ್ದ. ಕೊರವಂಜಿ ಅರಳಿ ಕಟ್ಟೆಯನ್ನೇ ಆರಿಸಿಕೊಂಡಿದ್ದಳು. ಇನ್ನು ಸ್ವಲ್ಪ ಆ ಕಡೆಗೆ ಶಂಕರ ಕೂತಿದ್ದ. ಈ ಗಲಾಟೆಗೂ ತನಗೂ ಸಂಬಂಧವಿಲ್ಲದ ನಿರ್ಲಿಪ್ತನಂತೆ ಪರಧ್ಯಾನಾಸಕ್ತನಾಗಿ ಕುಳಿತಿದ್ದ.

ರಾಜಾ ಅಲ್ಲಿ ನೆರೆದಿದ್ದ ಗುಂಪನ್ನೂ ಶಂಕರನನ್ನು ನೋಡಿದ. 'ಒಳ್ಳೇ ಜಡಭರತನಂತೆ ಕುಳಿತುಬಿಟ್ಟಿದ್ದಾನಲ್ಲ! ಇರಲಿ, ಒಂದು ತಮಾಷೆ ಮಾಡೋಣವೆನಿಸಿ ಕೊರವಂಜಿಯನ್ನು ಕುರಿತು, 'ಏನಮ್ಮ ಅಲ್ನೋಡು ಆಯಪ್ಪನಿಗೆ ಕೈನೋಡೀಯಾ?' ಎಂದು ಕೇಳಿದ. ಕೊರವಂಜಿ ಅತ್ತ ನೋಡಿದಳು 'ಏಯ್, ಓಗು ಸ್ವಾಮಿ ಆ ತಿರಪೆಯವನಿಗೆ ಯಾರು ಕೈ ನೋಡ್ತಾರೆ?' ಎಂದು ಮೂತಿ ತಿರುವಿದಳು. ನಿಜಕ್ಕೂ 'ಶಂಕರ' ಇತ್ತಚೆಗೆ ನೋಡಲು ತಿರುಪೆಯವನಿಗಿಂತ ಕಡೆಯಾಗಿಯೇ ಇದ್ದ. ಎಷ್ಟೋ ದಿನಗಳಿಂದ ಸ್ನಾನ ಕಾಣದ ಮಾಸಲು ಮಾಸಲು ಮುಖ, ಮಣ್ಣಿನ ಬಣ್ಣಕ್ಕೆ ತಿರುಗಿದ ಚಿಂದಿ ಚಿಂದಿಯಾದ ಉಡುಪು. ದಟ್ಟವಾಗಿ ಪೊದೆಯಾಗಿ ಮುಖವನ್ನೇ ಮರೆಸುವ ಗಡ್ಡಮೀಸೆಗಳು ಹೂತುಹೋಗಿರುವ ಕಣ್ಣುಗಳು, ಪಾತಾಳ ಬಾವಿಗಳಂತೆ ಕಾಣುತ್ತಿದ್ದವು.

ಕೊರವಂಜಿ ಶಂಕರನ ಕೈ ನೋಡಲು ತಿರಸ್ಕರಿಸಿದ್ದಕ್ಕೆ ರಾಜನಿಗೆ ಸಿಟ್ಟು ಬಂತು. "ಏಯ್ನ್ ನೋಡ್ತೀಯಾ ಇಲ್ಲವಾ?" ಎಂದು ಗದ್ದರಿಸಿ ಕೇಳಿದ.

"ಓಗಯ್ಯ ನಾ ಯೋಳಾಕೆಲ್ಲ" ಎಂದಳು.

"ನಿಂಗೇನ್ಬೇಕು? ಕಾಸುತಾನೇ ಬಿಸಾಕ್ತೀನಿ, ತಗೋ" ಎಂದು ಎಂಟಾಣೆ ಬಿಲ್ಲೆಯನ್ನು ಅವಳ ಮುಂದೆ ಎಸೆದ. ನಿಬ್ಬೆರಗಾಗಿ ನೋಡಿದಳು ಕೊರವಂಜಿ.

ಅಲ್ಲಿದ್ದ ಕೆಲವರಿಗೆ ಇದು ವಿನೋದವಾಗಿ ಕಂಡಿತು. "ಹೇಳಮ್ಮ, ಅವನ ಕೈನೋಡಿ" ಎಂದು ಪ್ರೋತ್ಸಾಹಿಸಿದರು. ಕೊರವಂಜಿ ಈಗ ನಿರುತ್ತರಳಾದಳು. "ತತ್ತಾ ಕೈನ ಇತ್ತ" ಎಂದಳು. ರಾಜಾ ಶಂಕರನನ್ನು ಎಬ್ಬಿಸಿಕೊಂಡು ಎಳೆದು ತಂದ. ಅವನು ಬರುವುದಿಲ್ಲವೆಂದು ಕೊಸರಾಡಿದರೂ ರಾಜಾ ಬಿಡಲಿಲ್ಲ. ಮುಖ ಸಿಂಡರಿಸಿಕೊಂಡೇ ಶಂಕರನ ಕೈಯನ್ನು ತನ್ನ ಕೈಗೆ ತೆಗೆದುಕೊಂಡಳು. ಕೈಯೊಳಗಿನ ಕೋಲನ್ನು ಕೈರೇಖೆಗಳ ಮೇಲೆ ಓಡಾಡಿಸಿದಳು. ಒಂದೆರಡು ಕ್ಷಣಗಳಲ್ಲಿಯೇ ಕೆಂಡ ತುಳಿದಂತಾಗಿ ಕೈ ಬಿಟ್ಟಳು. ನಡುಗುತ್ತಾ ಒಂದೆರಡು ಹೆಜ್ಜೆ ಹಿಂದೆ ಸರಿದು ಕೈ ಮುಗಿದು, "ಅಯ್ಯಾ ಈ ಸಾಮಿಯ ಇಚಾರ ನಾ ಯೋಳಾಕೆ ನಂಕೈಲಿ ಆಗಾಕಿಲ್ಲ. ದ್ಯಾವರು ಬುದ್ದೀ ಈ ಸಾಮಿ, ದ್ಯಾವರು! ಇನ್ನು ತಿಂಗಳಿಗೆ ಸಿವನತಾವ್ಕೆ ಒಂಟೋಗ್ತಾನೆ ಎಂದು ಹೇಳಿ ಅವನ ಸುತ್ತ ಒಂದು ಪ್ರದಕ್ಷಿಣೆ ಹಾಕಿ ವೇಗವಾಗಿ ಅಲ್ಲಿಂದ ಹೊರಟುಹೋದಳು.

ಅಲ್ಲಿ ನೆರೆದ ಜನಕ್ಕೆ ಆಶ್ಚರ್ಯವಾಯ್ತು. ಕೊರವಂಜಿ ಹೇಳಿದ ಮಾತನ್ನು ನಂಬಬೇಕೇ ಬಿಡಬೇಕೆ? ಅರ್ಥವಾಗದೆ ಮೂಕರಂತೆ ನಿಂತರು.

ಮನೆಗೆ ಮರಳಿದ ಮೇಲೆ ಎಲ್ಲರೂ ಅವಳ ಭವಿಷ್ಯದ ವಿಚಾರವಾಗಿಯೇ ಮಾತನಾಡಿಕೊಂಡರು.

ಶಂಕರ ಕೊರವಂಜಿಯ ಮಾತುಗಳನ್ನು ಕೇಳಿಸಿಕೊಂಡಂತೆ ಕಾಣಲಿಲ್ಲ. ಅವನತ್ತ ಜನ ದುರುದುರು ನೋಡಿದಾಗ ಅವನಿಗೆ ಸಂಕೋಚವೆನಿಸಿತು. ಇನ್ನೂ ಹುಡುಗರು ಅಲ್ಲಿಯೇ ಗುಸುಗುಸು ಮಾತಾಡಿಕೊಳ್ಳುತ್ತಿದ್ದರು. ಮೆಲ್ಲನೆ ಅಲ್ಲಿಂದ ಜಾರಿದ ಶಂಕರ.

ಭೀಮರಾಯರ ಮಗಳು ಗೌರಿ ಚೊಚ್ಚಲು ಹೆರಿಗೆಗೆಂದು ಊರಿಗೆ ಬಂದಿದ್ದಳು. ಒಂಭತ್ತು ತಿಂಗಳು ತುಂಬಿ ದಿನಗಳನ್ನು ಎಣಿಸುತ್ತಿದ್ದಳು. ಭಾಗೀರಥಮ್ಮ ಮಗಳಿಗೆ ಬಯಕೆಯಾದ್ದನ್ನೆಲ್ಲಾ ಮಾಡಿಟ್ಟರು. ಗೌರಿ ಮಾತ್ರ ಆರೋಗ್ಯವಾಗಿದ್ದು ಇನ್ನೂ ಚಟುವಟಿಕೆಯಿಂದ ಕೆಲಸಗಳನ್ನು ಮಾಡಿಕೊಂಡೇ ಇದ್ದಳು.

ಭೀಮರಾಯರಿಗಿದ್ದವಳು ಒಬ್ಬಳೇ ಮಗಳು. ಮಗಳು ತಾಯಿಯಾಗಲಿರುವ ವಿಚಾರ ಅವರಿಗೆ ತಣಿಯಲಾರದ ಸಂತೋಷವನ್ನು ತಂದಿತ್ತು. ಮೊಮ್ಮೊಕ್ಕಳೂ ಈಗ ಮನೆಯಲ್ಲಿಲ್ಲದೆ ಮನೆ ಭಣಭಣ ಗುಟ್ಟುತ್ತಿತ್ತು. ಮಗಂದಿರಿಬ್ಬರೂ ತಮ್ಮ ಮಕ್ಕಳನ್ನು ತಮ್ಮಲಿಗೇ ಕರೆಸಿಕೊಂಡುಬಿಟ್ಟರು. ಹಳ್ಳಿಯಲ್ಲಿ ಒಳ್ಳೆಯ ಓದಿಗೆ ಅನುಕೂಲವಿರಲಾರದೆಂದು ತಮ್ಮ ಮಕ್ಕಳನ್ನು ಅವರು ಕರೆಸಿಕೊಂಡುಬಿಟ್ಟಿದ್ದರು. ಭಾಗೀರಥಮ್ಮನಿಗೆ

ಮೊಮ್ಮಕ್ಕಳೊಂದಿಗೆ ತೀರಾ ಹೊಂದಿಕೆಯಾಗಿಬಿಟ್ಟಿತ್ತು. ಈಗ ಅವರಿಲ್ಲದೆ ತುಂಬಾ ಬೇಸರವೆನಿಸಿತ್ತು.

* * *

ಮಗಳು ಹೆರಿಗೆಗೆಂದು ಬಂದದ್ದು ಸ್ವಲ್ಪ ಸಮಾಧಾನವೆನಿಸಿತು. ಕೈ ತುಂಬಾ ಕೆಲಸವಿರುತ್ತಿದ್ದುದರಿಂದ ಅಷ್ಟಾಗಿ ಬೇಸರಕ್ಕೆ ಅವಕಾಶವಿರಲಿಲ್ಲ.

ಇದ್ದದ್ದು ಮೂರೇ ಮಂದಿಯಾದರೂ ಮನೆಯಲ್ಲಿ ಅಡುಗೆ ಮಾತ್ರ ಹೆಚ್ಚಾಗಿಯೇ ಇರುತ್ತಿತ್ತು. ಆಳುಕಾಳುಗಳಿಗೂ ಸೇರಿಸಿ ಮಾಡಬೇಕಾಗುತ್ತಿತ್ತು. ಬೆಳಿಗ್ಗೆ ತಿಂಡಿ, ಕಾಫಿ, ಮಧ್ಯಾಹ್ನ ಅಡುಗೆ ಮುಗಿಸುವ ಹೊತ್ತಿಗೆ ಭಾಗೀರಥಮ್ಮನಿಗೆ ಕೆಲಸ ಸಾಕಾಗುತ್ತಿತ್ತು.

ಒಂದು ಮಧ್ಯಾಹ್ನ ಭಾಗೀರಥಮ್ಮ ಅಡುಗೆ ಮುಗಿಸಿ ಪಕ್ಕದ ಮನೆಯ ಸಿಹಿ ನೀರ ಬಾವಿಯಿಂದ ನೀರು ತರಲು ಹೊರಟರು. ಮನೆಯಲ್ಲಿ ಲಕ್ಷ್ಮಿಯೊಬ್ಬಳೇ ಹಜಾರದಲ್ಲಿ ಕುಳಿತು ಹುಣಿಸೆ ತೊಳೆಗಳಿಂದ ಬೀಜಗಳನ್ನು ಬಿಡಿಸುತ್ತಿದ್ದಾಳೆ.

'ಅಮ್ಮ, ಅಮ್ಮ' ಎಂದು ಕರೆದ ಶಂಕರ ಬಾಗಿಲಲ್ಲಿ ನಿಂತು. ಶಂಕರ ಗುರುತು ಸಿಗಲಾರದಷ್ಟು ಬದಲಾಯಿಸಿಬಿಟ್ಟಿದ್ದ. ಹಜಾರದೊಳಗಿಂದಲೇ ನೋಡಿದ ಲಕ್ಷ್ಮಿಗೆ ಗುರುತು ಹತ್ತದೆ, 'ಯಾರಪ್ಪಾ?' ಎಂದು ಕೇಳಿದಳು.

ಶಂಕರ ನಕ್ಕು, "ಏನು ಗೌರಕ್ಕ ಮರೆತುಬಿಟ್ಟಿಯಾ?" ಎಂದ. ಅಷ್ಟರಲ್ಲಿ ಭಾಗೀರಥಮ್ಮ ನೀರಿನ ಕೊಡವನ್ನು ಕಂಕುಳಲ್ಲಿರಿಸಿಕೊಂಡು ಒಳಗೆ ಬರುತ್ತಾ, "ಏನು ಶಂಕರ, ಅಪರೂಪವಾಗಿ ಬಂದು ಬಿಟ್ಟೆ?" ಎಂದು ಕೇಳಿದರು.

"ನಾನು ನಮ್ಮೂರಿಗೆ ಹೋಗ್ತಿದ್ದೀನಿ, ಹೇಳಿ ಹೋಗೋಣಾಂತ ಬಂದೆ" ಎಂದ. ಭಾಗೀರಥಮ್ಮನಿಗೆ ಆಶ್ಚರ್ಯವಾಯಿತು.

"ಏನು ನಿಮ್ಮೂರೇ?.... ಯಾವುದೂಂತ ಕೇಳಿದರೆ ಹೇಳೇ ಇರಲಿಲ್ಲ. ನಂಗೋತ್ತಿಲ್ಲ ಎಂದಿದ್ದೆ?" ಎಂದು ಆಕ್ಷೇಪಿಸಿದರು.

"ಹೌದು ನಮ್ಮೂರು ಹೆಸರಿಲ್ಲದ ಜಾಗವೇ ನಮ್ಮೂರು" ಎಂದ.

"ಯಾಕೆ ಶಂಕರ, ಇಷ್ಟು ವರ್ಷಗಳು ಈ ಊರಲ್ಲಿದ್ದೆ. ಇದ್ದಕ್ಕಿದ್ದಂತೆ ಈಗ ನಮ್ಮೂರಿಗೆ ಹೋಗ್ತೀನಂತೀ? ಈ ಊರು ಬೇಸರವಾಯಿತಾ?" ಎಂದು ಕೇಳಿದರು.

ನೀರಿನ ಕೊಡದ ಭಾರ ಸೊಂಟದ ಮೇಲೆ ಹೆಚ್ಚಾದುದರಿಂದ "ಒಂದ್ನಿಮಿಷ ಇರು. ಇದನ್ನು ಒಳಗೆ ಇಟ್ಟು ಬಂದ್ಬಿಡ್ತೇನೆ" ಎಂದು ಒಳಗೆ ನಡೆದಳು.

"ಗುರುತೇ ಸಿಗೊಲ್ವಲ್ಲ ಶಂಕರಪ್ಪ" ಎಂದು ಗೌರಿ ವಿಚಾರಿಸಿದಳು.

"ಹಾಗೇನಿಲ್ಲಕ್ಕ. ನೀನು ಅತ್ತೆ ಮನೆಗೆ ಹೊರಟುಹೋಗಿ ಮರೆತುಬಿಟ್ಟಿರಬೇಕು ಅಷ್ಟೇ!" ಅಂದ.

ಭಾಗೀರಥಮ್ಮ, ಒಳಗೆ ನೀರಿಟ್ಟು ಬರುವಾಗ ಎಲೆಯಲ್ಲಿ ಅನ್ನ, ಹುಳಿ, ಪಲ್ಯೆಯನ್ನು ತಂದಿಟ್ಟು, "ತಿನ್ನು ಶಂಕರ" ಎಂದಳು. ಶಂಕರ ವಾಸನೆಯೆಳೆಯುತ್ತಾ, "ಭಾಳ ಚೆನ್ನಾಗಿರುವ ಹಾಗಿದೆ ಬೆಂಡೆಕಾಯಿ ಹುಳಿ" ಎಂದ.

ಭಾಗೀರಥಮ್ಮನಿಗೆ ಆಶ್ಚರ್ಯವಾಯಿತು. "ಲೋ, ಇನ್ನು ನಿನಗೆ ಬಡಿಸಲೇ ಇಲ್ಲ, ಆಗಲೇ ಬೆಂಡೆಕಾಯಿ ಹುಳೀಂತ ಹೇಗೆ ಹೇಳಿದೆಯೋ?" ಎಂದಳು.

"ನಂಗೆ ಗೊತ್ತಾಗುತ್ತೆ ಎಲ್ಲಾ ಗೊತ್ತಾಗುತ್ತೆ. ಬೇಕಾರೆ ನೆನ್ನೆ ನಿಮ್ಮ ಮನೇಲಿ ಏನ್ಮಾಡಿದ್ದು ಹೇಳ್ಲಾ?" ಎಂದ ನಗುತ್ತಾ.

"ಹೂಂ, ಹೇಳು ನೋಡೋಣ" ಎಂದರು ಭಾಗೀರಥಮ್ಮ ಪರೀಕ್ಷಿಸುವವರ ಹಾಗೆ.

"ನೆನ್ನೆ ನಿಮ್ಮ ಮನೆಯಲ್ಲಿ ಹೀರೇಕಾಯಿ ತೊವ್ವೆ, ಹೌದಲ್ಲ?" ಎಂದ.

"ಎಲಾ!.... ಲೋ ಶಂಕರ, ನಿಜ ಹೇಳು, ನಿನಗೆ ಬರೀ ಬೆಂಡೆಕಾಯಿ ಹುಳಿ, ಹೀರೇಕಾಯಿ ತೊವ್ವೆ ವಿಚಾರ ಮಾತ್ರ ಗೊತ್ತಾಗುತ್ತಾ ಇಲ್ಲ ಇನ್ನೂ ಏನಾದರೂ ಗೊತ್ತಾಗುತ್ತಾ?" ಎಂದು ಕೇಳಿದರು.

ಮೌನವಾಗಿದ್ದು ನಂತರ ಮೆಲ್ಲನೆ ಅನ್ನ ಕಲೆಸುತ್ತಾ ನುಡಿದ

"ನನಗೆ ಎಲ್ಲಾ ಗೊತ್ತಾಗುತ್ತೆ. ನೀವು, ನಾನು.... ಎಲ್ಲರ ವಿಚಾರವೂ ತಿಳಿಯುತ್ತೆ..... ಆದರೆ ಇನ್ನೊಂದು ತಿಂಗಳ ನಂತರ ಯಾರಿಗೆ ಏನು ಬೇಕಾದರೂ ಹೇಳ್ತೀನಿ, ಏನು ಬೇಕಾದರೂ ಮಾಡ್ತೀನಿ." ಎಂದ ಗೆಲುವಿನಿಂದ.

ಭಾಗೀರಥಮ್ಮನಿಗೆ ಶಂಕರ ಈ ದಿನ ವಿಶೇಷ ಗೆಲುವಿನಿಂದ, ಸಂತೋಷದಿಂದ ಇದ್ದಾನೆ' ಎನಿಸಿತು.

"ಯಾಕೋ ಶಂಕರ, ಇವತ್ತು ತುಂಬಾ ಖುಷುಯಾಗಿರುವಂತೆ ಕಾಣ್ತೀದ್ದೀ?" ಎಂದರು.

"ಹೇಳಿದೆನಲ್ಲಮ್ಮ ನಾನು ನಮ್ಮೂರಿಗೆ ಹೋಗ್ತೀನಂತ"

"ಅದ್ಸರಿ. ಇದ್ದಕ್ಕಿದ್ದಂತೆ ಇಷ್ಟು ದಿನಾ ಇಲ್ಲದಿರುವ ನಿಮ್ಮೂರಿನ ಯೋಚ್ನೆ ಬಂದ್ಬಿಡ್ತಾ?" ಹಂಗಿಸಿದಂತಿತ್ತು ದನಿ.

"ಹೌದಮ್ಮ, ಈಗಾಗಲೇ ಇಲ್ಲಿಗೆ ಬಂದು ತುಂಬಾ ವರ್ಷವಾಗಿ ಹೋಯಿತು. ಬಂದವನು ಕೆಲಸ ಕಾರ್ಯ ಬಿಟ್ಟು ಇಲ್ಲೇ ಇದ್ದುಬಿಟ್ರೆ ಹೇಗೆ? ನಮ್ಮಪ್ಪ, ನಮ್ಮಮ್ಮ

ನನಗಾಗಿ ಪಾಪ! ಎಷ್ಟು ಚಿಂತಿಸ್ತಾ ಇರ್ತಾರೋ ಏನೋ? ನಾನಂತೂ ಖಂಡಿತ ಹೋಗಲೇಬೇಕು!" ನೋವು, ಗಾಂಭೀರ್ಯ ಎರಡೂ ಇತ್ತು ಆ ಮಾತಿನಲ್ಲಿ.

ಭಾಗೀರಥಮ್ಮನಿಗೆ ಒಂದು ಕಡೆ ನಗು, ಮತ್ತೊಂದು ಕಡೆ ಪಾಪ! ಎನಿಸುತ್ತಿತ್ತು. ಅವಳ ದೃಷ್ಟಿಯಲ್ಲಿ ಅವನು ಒಮ್ಮೊಮ್ಮೆ ಹುಚ್ಚ, ಒಮ್ಮೊಮ್ಮೆ ಪ್ರವಾದಿ. ಅವನ ಮಾತುಗಳು ಅರ್ಥವಾಗದ ಒಗಟುಗಳು. ವ್ಯರ್ಥಾಲಾಪಗಳು. ಆದರೂ ಇನ್ನೂ ಸ್ವಲ್ಪ ಕೆದಕಿ ಕೇಳಬೇಕೆನಿಸಿತು.

"ನಿಮ್ಮಪ್ಪ, ಅಮ್ಮ ಎಲ್ಲಿದ್ದಾರೆ! ಅವರ ನೆನಪಿದೆಯಾ ನಿನಗೆ?" ಎಂದು ಕೇಳಿದರು ಭಾಗೀರಥಮ್ಮ.

"ಇದೇನಮ್ಮ ಹೀಗೆ ಹೇಳ್ತೀರಿ? ಅವರು ನನಗೆ ಗೊತ್ತಿರೊಲ್ವೆ? ಅವರೇ ಇಲ್ಲಿಗೆ ನನ್ನನ್ನು ಕಳಿಸಿದ್ದು. ಅವರ ಕೆಲಸ ಮುಗಿಯಿತು. ಇನ್ನು ಹೋಗಬೇಕು ಅಷ್ಟೆ! ಅದೂ ಅಲ್ದೆ ಅವರನ್ನು ಮರೆಯುವುದಕ್ಕೆ ಆಗುತ್ಯೇ? ಗೌರಕ್ಕ ನಿಮ್ಮನ್ನು ಎಂದಾದರೂ ಮರೀತಾರೆಯೇ?" ಎಂದು ಮರು ಪ್ರಶ್ನಿಸಿದ.

ಭಾಗೀರಥಮ್ಮನಿಗೆ ನಂಬಲಾಗಲಿಲ್ಲ. ಶಂಕರ ತಿಳಿದವನಂತೆ ಮಾತಾಡುತ್ತಿದ್ದಾನೆ. ಅವನ ಮಾತಿನಲ್ಲಿ ಬೇರೊಂದು ಧ್ವನಿಯೇ ಇದ್ದಂತಿದೆ. ಅವನ ರೀತಿಯೂ ಮಾಮೂಲಿಗಿಂತ ಭಿನ್ನವಾಗಿದೆ! ಎಂದು ಆಲೋಚಿಸಿದರು.

ಬಡಿಸಿದಷ್ಟೂ ಉಂಡಿದ್ದ. "ಇನ್ನು ಸ್ವಲ್ಪ ಬಡಿಸಲೇ?" ಎಂದು ಕೇಳಿದರು. ಶಂಕರ ಅಷ್ಟೇ ಸಾಕೆಂದು ಹೇಳಿ, ಎಲೆಯನ್ನು ಎತ್ತಿ ಆಚೆ ಕಡೆಯ ತಿಪ್ಪೆಯ ಗುಂಡಿಯೊಳಗೆ ಎಸೆದು ಬೊಗಸೆಯಲ್ಲಿ ನೀರನ್ನು ಹಾಕಿಸಿಕೊಂಡು ಕುಡಿದ.... "ದೇವರು ನಿಮಗೆ ಒಳ್ಳೇದು ಮಾಡಲಿ.... ಬರ್ತೀನಮ್ಮ. ಬಹುಶಃ ನಿಮ್ಮ ಊಟದ ಋಣ ಇನ್ನೂ ತೀರಿಲ್ಲವೆಂದು ಕಾಣುತ್ತೆ. ಇನ್ನು ಸ್ವಲ್ಪವೇ ದಿನ, ನಮ್ಮೂರಿಗೆ ಹೋಗುವವರೆಗೂ" ಎಂದ.

ಇದ್ಯಾಕೆ ಇವನಿಗೆ ಊರಿಗೆ ಹೋಗುವ ಯೋಚನೆ ಬಂತೋ! ಒಂದೇ ಸಮನೆ ಊರಿಗೆ ಹೋಗುತ್ತೇನೆಂದು ಹೇಳುತ್ತಿದ್ದಾನೆ – ಎಂದು ಭಾಗೀರಥಮ್ಮ ಯೋಚಿಸಿದಂತೆ ಮನಸ್ಸಿಗೆ ಏನೋ ಕಸಿವಿಸಿ ಎನಿಸಿತು. ಯಾಕೋ ಮನಸ್ಸಿಗೆ ಅವನನ್ನು ಬೀಳ್ಕೊಡುವುದು ಸಮ್ಮತವೆನಿಸಲಿಲ್ಲ. ಹಾಳದವನು ಎಲ್ಲಿಗೆ ಹೋಗ್ತಾನೋ? ಹೇಗಿರ್ತಾನೋ? ಎಂದು ಮನಸ್ಸು ಆತಂಕಪಟ್ಟಿತು. ತಕ್ಷಣವೇ, ಎರಡು ವರ್ಷಗಳ ಹಿಂದೆ ಶಂಕರನ ಊರಿನವರು ಯಾರೋ ಇಲ್ಲಿಗೆ ಬಂದಿದ್ದಾಗ ಅವನ ಇತಿಹಾಸವನ್ನೆಲ್ಲಾ ಹೇಳಿ, ಇವನ ಯೋಚನೆಯಿಂದ ತಂದೆಯು ದೇಶಾಂತರ ಹೋದ, ತಾಯಿಯು ತೀರಿಹೋದ ಸಂಗತಿಯನ್ನೂ ವಿವರಿಸಿದ್ದರು. ಅದು ನೆನಪಾಗಿ, ಪಾಪ! ಇದಕ್ಕೆ ಅಪ್ಪ, ಅಮ್ಮನ ವಿಷಯ ತಿಳಿದಿಲ್ಲಾಂತ ಕಾಣುತ್ತೆ. ವಿಷಯ ತಿಳೀದೆ ಅವರನ್ನು ಹೋಗಿ ನೋಡುವ

ಸಂಭ್ರಮದಲ್ಲಿದ್ದಾನೆ!..... ಅವನಿಗೆ, ತಿಳಿಯದ ಈ ವಿಷಯವನ್ನು ಹೇಳಿದರೆ ಏನಾಗುವುದೋ? ಹೋಗಿ ಬರಲಿ. ಅವನ ಸಂಭ್ರಮಕ್ಕೆ ಯಾಕೆ ಅಡ್ಡ ಬರಬೇಕೆಂದು ಯೋಚಿಸಿ ನೊಂದುಕೊಂಡು ಸುಮ್ಮನಾದರು. ಆದರೆ ಒಂದೆರಡು ನಿಮಿಷದ ನಂತರ "ಶಂಕರ, ಊರಿಗೆ ಹೋಗಿ ಬೇಗ ಬಂದುಬಿಡ್ತೀಯಾ?" ಎಂದು ಕೇಳಿದರು ಮರುಕದಿಂದ.

"ಓಹೋ! ಹೀಗೆ ಹೋಗಿ ಹಾಗೆ ಬಂದುಬಿಡ್ತೇನೆ. ನಿಮ್ಮೂರಲ್ಲೂ ಇರ್ತೇನೆ. ನಮ್ಮೂರಲ್ಲೂ ಇರ್ತೇನೆ. ಯಾರನ್ನೂ ಬಿಡೊಲ್ಲ" ಎಂದು ದೃಢವಾಗಿ ಅರ್ಥಗರ್ಭಿತವಾಗಿ ಮಾತನಾಡಿದ.

"ಏನೋ ಶಂಕರ, ನಿನ್ನ ಮಾತು ಒಂದೂ ಅರ್ಥವಾಗೊಲ್ಲ" ಎಂದಳು ಸೋಲಿನ ದನಿಯಲ್ಲಿ ಭಾಗೀರಥಮ್ಮ.

"ಅರ್ಥವಾಗದೆ ಏನಮ್ಮ? ಊರಿಗೆ ಹೋಗಿ ಬರ್ತೀನಿ ಅಂದದ್ದಕ್ಕೆ ಅಷ್ಟೊಂದು ವಿಚಾರಮಾಡ್ತಿದ್ದೀರಿ!" ಎಂದು ಹೇಳಿ ನಕ್ಕ.

"ಬೇಗ ಬಂದುಬಿಡು ಶಂಕರ" – ಎಂದರು ಭಾಗೀರಥಮ್ಮ.

"ಆಯ್ತು ನೀವು ಹೇಳಿದಂತೆ ಬಂದು ಇಲ್ಲಿಯೇ ಇದ್ದು ಬಿಡ್ತೇನೆ" – ಎಂದು ಹೇಳಿ ಹೆಜ್ಜೆ ಹಾಕಿದ.

* * *

ಒಂದು ವಾರದಿಂದ ಶಂಕರ ಯಾರ ಮನೆಯ ಕಡೆಯೂ ಸುಳಿಯಲಿಲ್ಲ. ನಂಜಮ್ಮನ ಚಾವಡಿಯಲ್ಲೇ ಮಲಗುತ್ತಾ ಬಿದ್ದುಕೊಂಡಿದ್ದ. ಹೊಟ್ಟೆ ನೋವಿನಿಂದ ನರಳುತ್ತಿದ್ದ. ದಿನ ದಿನಕ್ಕೆ ನೋವು ವಿಪರೀತವಾಯಿತು.

ಊರ ಮಂದಿಗೆಲ್ಲಾ ವಿಷಯ ತಿಳಿದು ಹೋಗುವಾಗ ಬರುವಾಗ ಬಂದು ಮಾತನಾಡಿಸಿಕೊಂಡು ಹೋಗುತ್ತಿದ್ದರು. ಭೀಮರಾಯರ ಮನೆಯಿಂದ ಹಾಲು, ಗಂಜಿಯ ವ್ಯವಸ್ಥೆ ಆಗಿತ್ತು. ಶ್ರೀನಿವಾಸ ಪಂಡಿತರು ಗುಳಿಗೆಗಳನ್ನು ತಂದು ಕೊಟ್ಟರು. ಆದರೂ ನೋವು ತಗ್ಗಲಿಲ್ಲ. 'ಅಯ್ಯೋ ಪಾಪ!' ಎಂದರು ಜನ. ಆಸುಪತ್ರೆಗಾದರೂ ಕರೆದೊಯ್ಯುವ ಎಂದು ಊರಿನ ಜನ ನಿರ್ಧರಿಸಿದರು. ಆದರೆ ಶಂಕರ ಒಪ್ಪಲಿಲ್ಲ.

ಭೀಮರಾಯರು ಸ್ವತಃ ಬಂದು ಮಾತನಾಡಿಸಿಕೊಂಡು, ಆಸ್ಪತ್ರೆಗೆ ಬರುವುದಿಲ್ಲವೆಂಬ ಅವನ ಹಟವನ್ನು ಟೀಕಿಸಿದರು. ಶಂಕರ ಆ ನೋವಿನಲ್ಲೂ ನಕ್ಕ. ಅವನು ನಗು ಅವನ ಸುತ್ತ ಒಂದು ಪ್ರಭಾವಳಿಯನ್ನು ನಿರ್ಮಿಸಿದಂತಿರುತ್ತಿತ್ತು. "ಅಯ್ಯ ಹೋಗಬೇಕಾದವನಿಗೆ ಆಸ್ಪತ್ರೆ ಗೊಡವೆಯಾಕೆ?" ಎಂದು ಕೇಳಿದ. "ನೋವು ಹಾಗೆಯೇ ಉಳಿದಿರುವಾಗ ಆಸ್ಪತ್ರೆಗೆ ಹೋಗದೆ ಹೇಗೆ?" ಎಂಬ ಭೀಮರಾಯರ ಪ್ರಶ್ನೆಗೆ, ಶಂಕರ

"ಅದೊಂದು ನಿಮಿತ್ತ ಅಷ್ಟೆ. ಯಾವ ಜೀವಿಯೂ ನಿಮಿತ್ತವಿಲ್ಲದೆ ಸಾಯಬಾರದಲ್ಲ!" ಎಂದು ಹೇಳಿ ಮುಗುಳ್ನಕ್ಕ. ಭೀಮರಾಯರು ಅವನ ಮಾತಿನಿಂದ ಬಾಯಿ ಮುಚ್ಚಿದ್ದರು. ಅವನಿಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿ, ಮತ್ತೆ ಬರುವುದಾಗಿ ತಿಳಿಸಿ ಅಲ್ಲಿಂದ ಹೊರಟರು. ನಂಜಮ್ಮನಿಗೆ, ಅವನ ಕಡೆ ಲಕ್ಷ್ಯವಿರಲೆಂದು ಎಚ್ಚರಿಸಿ ಹೇಳುವುದನ್ನು ಮರೆಯಲಿಲ್ಲ.

ನಂಜಮ್ಮನಿಗೆ ಕಣ್ಣು ಸರಿಯಾಗಿ ಬೇರೆ ಕಾಣುತ್ತಿರಲಿಲ್ಲ. ಅಂತಹುದರಲ್ಲಿಯೂ ಶಂಕರನನ್ನು ಮಗನಿಗಿಂತ ಹೆಚ್ಚಾಗಿ, ಮೈಯೆಲ್ಲಾ ಕಣ್ಣಾಗಿ ಕಾಯ್ದಳು. ಆ ರಾತ್ರಿ ಶಂಕರ ನರಳಾಟವಿಲ್ಲದೆ ಮಲಗಿದ. ನಂಜಮ್ಮನಿಗೆ ಗಾಬರಿ ಕಡಿಮೆಯಾಯಿತು. ಪರವಾಗಿಲ್ಲ ನಿದ್ದೆ ಹತ್ತಿದೆ, ಎಂದು ಸಮಾಧಾನಗೊಂಡು ತಾನು ಹಾಗೆಯೇ ಕಣ್ಣು ಮುಚ್ಚಿದಳು.

* * *

ಬೆಳಿಗ್ಗೆ ಕರಿಯ ಬಂದು ಎಬ್ಬಿಸಿದಾಗಲೇ ಎಚ್ಚರವಾದದ್ದು ನಂಜಮ್ಮನಿಗೆ! ನಿದ್ದೆ ಹೋದದ್ದೇ ತಿಳಿದಿರಲಿಲ್ಲ. ಚೆನ್ನಾಗಿ ನಿದ್ದೆ ಬಂದದ್ದರಿಂದ ಬೆಳಿಗ್ಗೆ ಹೊತ್ತೇರಿದ್ದುದು ಗೊತ್ತಾಗಲೇ ಇಲ್ಲ. ಕರಿಯನ ಕೂಗಿನಿಂದ ಎದ್ದ ಮುದುಕಿ ನಂಜಮ್ಮ ಬಚ್ಚಲು ಮನೆಗೆ ಹೋಗಿ ಮುಖ ತೊಳೆದುಕೊಂಡು ಬಂದು ಶಂಕರನನ್ನು ಎಬ್ಬಿಸತೊಡಗಿದಳು. "ಮಗಾ ಶಂಕರ ಏಳಪ್ಪಾ. ವೊಟ್ಟೆ ಬ್ಯಾನಿ ಎಂಗೈತೆ!" ಎಂದು ಎರಡು ಮೂರು ಬಾರಿ ಕರೆದು ಕೂಗಿದಳು. ಶಂಕರ ಏಳುವಂತೆ ಕಾಣಲಿಲ್ಲ. "ಶಂಕರ, ಶಂಕರ" ಎಂದು ಮತ್ತೊಮ್ಮೆ ಗಟ್ಟಿಯಾಗಿ ಕರೆದಳು. ಸದ್ದಿಲ್ಲ, "ಲೋ ಕರಿಯ ಬಾರ್ಲಾ ಇತ್ತಾ" ಎಂದು ನಂಜಮ್ಮ ಕರಿಯನನ್ನು ಕರೆದಳು. ಓಡಿ ಬಂದ, "ಕರಿಯ ವೋಗಿ ಯಾರ್ನಾನಾ ಕರ್ಕಂಬಾ ಕರಿಯ. ನಂಗ್ಯಾಕೊ ಒಂದು ಥರಾ ಅನ್ನಿಸೈತೆ" ಎಂದು ಮುದುಕಿ ಹೆದರಿದ ದನಿಯಲ್ಲಿ ಹೇಳಿದಳು.

"ಈಗಲೇ ಕರ್ಕಂಬತ್ತೀನಿ" ಎಂದು ಕರಿಯ ಒಂದೇ ಓಟ ಓಡಿದ. ಹತ್ತು ಹದಿನೈದು ನಿಮಿಷಗಳಲ್ಲಿ ರಾಚ, ಭೀಮರಾಯರು, ಪುಟ್ಟಾಚಾರಿ, ನಂಜುಂಡಶಾಸ್ತ್ರಿ ಕಾಳೇಗೌಡ ಎಲ್ಲರೂ ಸೇರಿದರು.

ರಾಚ ಶಂಕರನ ಬಳಿ ಸಮೀಪಿಸಿ ಕದಲಿಸಿದ. ಮರಗಟ್ಟಿತ್ತು ದೇಹ. ಮಧ್ಯರಾತ್ರಿಯೇ ಎಲ್ಲೋ ಕಣ್ಮುಚ್ಚಿರಬೇಕೆನಿಸಿತು.

ಕಾಡ್ಗಿಚ್ಚಿನಂತೆ ಸುದ್ದಿ ಹರಡಿತು. ಹಿಂಡು ಹಿಂಡು ಜನ ಸೇರಿದರು. ಭೀಮರಾಯರು, ರಾಚ ಮೊದಲಾದವರು ಮೌನವಾಗಿ, ಪಂಚೆಯ ತುದಿಯಿಂದ ಕಣ್ಣೀಳಿದ ಕಂಬನಿಯನ್ನು ಒರೆಸಿಕೊಂಡರು. ಹೊರಗೆ ಹುಚ್ಚನಂತೆ ಬಾಳಿದರೂ ಒಳಗೆ ಏನೇನು ವಿಚಾರಗಳಿದ್ದವೋ,

ಯಾರಿಗೂ ತಿಳಿಯದಂತೆ ಅವನೊಂದಿಗೇ ಚಿರಸಮಾಧಿಯಾದವು. ನಂಜಮ್ಮನ ಮುದಿ ಕಣ್ಣುಗಳೂ ತುಂಬಿದವು!

ಊರಿನ ಪ್ರಮುಖರೆಲ್ಲಾ ಸೇರಿ, ಊರಿನ ಕೆರೆಗೆ ಅಂಟಿಕೊಂಡಂತೆ ಇರುವ ಹುಣಿಸೆ ಮರದ ಎದುರು ಬಯಲಲ್ಲಿ ಇವನನ್ನು ಸಮಾಧಿ ಮಾಡಬೇಕೆಂದು ನಿರ್ಧರಿಸಿದರು. ಆದಷ್ಟೂ ಬೇಗ ಕೆಲಸ ನಡೆಯಬೇಕಿತ್ತು. ಇಲ್ಲವಾದಲ್ಲಿ ಊರಿನಲ್ಲಿನ ಜನ ಒಲೆ ಹೊತ್ತಿಸಲು ಸಾಧ್ಯವಾಗಲಿಲ್ಲವೆಂದು ತಿಳಿದು, ಭೀಮರಾಯರೇ ಮುಂದೆ ನಿಂತು, ಒಂದಷ್ಟು ಜನ ಕೂಲಿಗಳನ್ನು ಕರೆಸಿ ನೆಲ ಅಗಿಸಿದರು. ಶಂಕರನ ಶವವನ್ನು ತೆಗೆದುಕೊಂಡು ಹೋಗಿ ಹೂಳುವುದಷ್ಟೇ ಬಾಕಿಯಿತ್ತು.

ಬೇಗನೆ ಶವವನ್ನು ಹೊರೆಸಿಕೊಂಡು ಹೋಗಿ ತೆಗೆದು ಕುಣಿಯಲ್ಲಿಳಿಸಿ ಮಣ್ಣು ಮುಚ್ಚಿ ಚಪ್ಪಡಿ ಕಲ್ಲನ್ನು ಎಳೆದರು. ಮೇಸ್ತ್ರಿ ವೆಂಕಟನನ್ನು ಕರೆದು ಅದರ ಮೇಲೊಂದು ಸಮಾಧಿಯನ್ನು ನಿರ್ಮಿಸಬೇಕೆಂದು ಕೇಳಿಕೊಂಡರು ಹಿರಿಯರು. ಆದರೆ ವೆಂಕಟ, ಗೌರಿ ಹಸು ಮೂರು ದಿನಗಳಿಂದಲೂ ಕಾಣದ ಚಿಂತೆಯಲ್ಲಿದ್ದ. ಸದ್ಯಕ್ಕೆ ತಾನು ಬರುವುದಿಲ್ಲವೆಂದು, ಹೇಳಿ ಕಳುಹಿಸಿದ. ಆದರೆ ನಂಜುಂಡಶಾಸ್ತ್ರಿಗಳು ಬೈದು ಹೇಳಿದ್ದಕ್ಕೆ, ಇವತ್ತೆಲ್ಲಾ ಹಾಗೇ ಇರಲಿ. ನಾಳೆ ನಾಳಿದ್ದು ನೀವ್ಯಾರೂ ಹೇಳದಿದ್ದರೂ, ನನ್ನ ಹಸು ಮನೆಗೆ ಮರಳಿದರೆ, ನಾನೇ ಸಮಾಧಿ ಕಟ್ಟುತ್ತೇನೆ. ಆದರೆ ಅದಕ್ಕೆ ತಗಲುವ ಖರ್ಚನ್ನು ಕೊಡಬೇಕೆಂದನು.

ಅಲ್ಲಿ ನೆರೆದಿದ್ದ ಹಿರಿಯರು ಈ ಷರತ್ತಿಗೆ ಒಪ್ಪಿಕೊಂಡರು. ಊರಿನವರಿಂದ ಚಂದಾ ಎತ್ತಿ, ಬಂದ ಹಣವನ್ನು ವೆಂಕಟನಿಗೆ ಕೊಟ್ಟುಬಿಟ್ಟರು.

ಅಲ್ಲಿನ ಕೆಲಸ ಮುಗಿಸಿ, ಕೆರೆಯಲ್ಲಿ ಸ್ನಾನ ಮಾಡಿ ಮರಳಿದರು ಜನ. ನಂಜುಂಡಶಾಸ್ತ್ರಿಗಳು ಕರುಣೆಯಿಂದ, ಅವನ ಹೆಸರಿನಲ್ಲಿ ಮಂಜುನಾಥನ ಗುಡಿಯಲ್ಲಿ ಒಂದು ಅರ್ಚನೆ ಮಾಡಿಸಿದರು.

ಊರಿಗೆ ಊರೇ ಬಿಕೋ ಎನ್ನಿಸಿತು. ಕೆಲವು ದಿನಗಳವರೆಗೆ ಆ ಊರೇ ಸೂತಕದ ಮನೆಯಂತೆ ಕಂಡಿತು.

ಮಾರನೇ ದಿನ, ಅಚ್ಚರಿಯೆನಿಸುವಂತೆ ವೆಂಕಟ ಸಮಾಧಿ ನಿರ್ಮಾಣ ಕೆಲಸಕ್ಕೆ ಕೈ ಹಚ್ಚಿ, ಮೂರು ದಿನಗಳಲ್ಲಿ ಸುಂದರವಾದ ಸಮಾಧಿಯನ್ನು ನಿರ್ಮಿಸಿದ.

ಊರಿನವರಿಗೆ ಆಶ್ಚರ್ಯ! ತನ್ನ ಹಸು ಕಳೆದಿದೆ, ಎಂದು ನೆಪವೊಡ್ಡಿದ ವೆಂಕಟ ತಾನೇ ಬಂದು ಕಟ್ಟಿದ್ದನ್ನು ನೋಡಿ ಪುಟ್ಟಾಚಾರಿ ಕೀಟಲೆಗೆ ಕೇಳಿದ: "ಏನೋ ವೆಂಕಟ ಇದ್ದಕ್ಕಿದ್ದ ಹಾಗೆ ಹಿರಿಯರ ಮಾತಿಗೆ ಬೆಲೆ ಬಂದ್ಬಿಡ್ತಾ?" ಎಂದರು. ಅದಕ್ಕೆ ಅವನು, "ಅಂಗೇನಲ್ಲ. ನೆನ್ನೆ ಕನಸಿನಾಗೆ ಯಾರೋ, ಆ ಸಮಾಧಿ ಪೂರೈಸು ನಿನ್ನ

ಅಸ ನಿಮ್ಮ ಮನಿಗೇ ಬರುತ್ತೆ ಮೂರು ದಿವಸದಾಗೆ" ಎಂದಂಗಾತು. "ಅದಕ್ಕೆ ಕಟ್ಟಿಲಿಕ್ಕೆ ಬಂದೀನಿ" ಎಂದ.

"ಹುಂ! ಅಂತೂ ಕನಸಿಗಾದರೂ ಬೆಲೆ ಕೊಟ್ಟೆಯಲ್ಲ!" ಎಂದು ನಕ್ಕು ಹೊರಟುಹೋದ ಪುಟ್ಟಾಚಾರಿ ಕನಸಿನಲ್ಲಿ ಹೇಳಿದ್ದಂತೆ ಸರಿಯಾಗಿ, ಮೂರನೇ ದಿನ ಸಂಜೆ ಹೊತ್ತಿಗೆ, ದನಗಳೆಲ್ಲಾ ಮರಳುವಾಗ, ವೆಂಕಟನ ಉಳಿದ ಹಸುಮಂದೆಯಲ್ಲಿ ಗೌರಿ ಹಸುವೂ ಸೇರಿಹೋಯಿತು. ಮನೆ ತಲುಪುತ್ತಲೇ 'ಅಂಬಾ' ಎಂಬ ಗೌರಿ ಹಸುವಿನ ದನಿ ಕೇಳಿ ವೆಂಕಟನ ಹೆಂಡತಿ ಚೆನ್ನಮ್ಮ ಹೊರಗೆ ಬಂದು ಹುಡುಕಾಡಿದಳು. ಮಂದೆಯ ನಡುವೆ ಗೌರಿ ಹಸುವೂ ಇತ್ತು. ಗಂಡನನ್ನು ಆತುರವಾಗಿ ಎಳೆದು ತಂದು ತೋರಿಸಿದಳು. ವೆಂಕಟನಿಗೆ ತನ್ನ ಕಣ್ಣನ್ನೇ ನಂಬಲಾಗಲಿಲ್ಲ. 'ಗೌರಿ' ಎಂದು ಕರೆದ. ಗೌರಿ ಮಂದೆಯ ನಡುವಿಂದ ಬಂದು ವೆಂಕಟನ ಮುಂದೆ ನಿಂತಿತು. ವೆಂಕಟ ಮೆಲ್ಲಗೆ ಅದರ ಮೈಯನ್ನು ನೇವರಿಸಿದ.

* * *

ಶಂಕರ ಸತ್ತು ಐದಾರು ತಿಂಗಳುಗಳೇ ಆಗಿವೆ. ಊರಿನ ಜನರ ನೆನಪಿನಿಂದ ಕೊಂಚ ಕೊಂಚವೇ ಕರುಗುತ್ತಿದ್ದಾನೆ. ಆದರೆ ಅವನ ಸಮಾಧಿಯನ್ನು ಕಂಡಾಗ ಅನಾಯಾಸವಾಗಿ ಹೂತು ಹೋದ ಅವನ ನೆನಪೂ ಸಿಡಿದೇಳುತ್ತದೆ.

ಊರಿಂದ ಹೋಗುವ ಬರುವ ಜನರು ಸಮಾಧಿಯನ್ನು ಹಾದುಹೋಗಲೇ ಬೇಕಿತ್ತು. ಜೊತೆಗೆ ಹುಣಿಸೇ ಮರದ ಜಾಗವೇ ಬಸ್ ನಿಲ್ದಾಣ. ಎದುರಿಗೇ ಸಮಾಧಿ ಅಕ್ಕಪಕ್ಕದೂರುಗಳಿಂದ ಹೋಗಿ ಬರುವ ಜನ ಹೊತ್ತಲ್ಲದ ಹೊತ್ತಲ್ಲಿಯೂ ಓಡಾಡುತ್ತಿದ್ದರು. ಅವರ ನಂಬಿಕೆಗಳೂ, ವಿಚಾರಗಳು ಮುಗ್ಧವಾದವು. ಕಲ್ಲು, ಮರ, ಮಣ್ಣನ್ನು ದೈವವೆಂದು ಭಾವಿಸಿ ನಮಿಸುವಂತಹರು, ಈ ಸಮಾಧಿಯನ್ನು ಸಂತನ ಸಮಾಧಿ ಎನ್ನುವ ಭ್ರಮೆಯಿಂದಲೋ, ಅಥವಾ ಗುಡಿ ಎನ್ನುವ ಅಜ್ಞಾನದಿಂದಲೋ ಕೈ ಮುಗಿದರು; ಕಾಯಿ ಹೊಡೆದರು; ಹೂವಿಟ್ಟರು; ಕಾಣಿಕೆ ಇಟ್ಟರು.

ಬರಬರುತ್ತಿದ್ದಂತೆ ಈ ಪದ್ಧತಿಯೇ ಮುಂದುವರೆಯಿತು. ಯಾವ ಹೊತ್ತಿನಲ್ಲಿ ನೋಡಿದರೂ ಆ ಸಮಾಧಿಯ ಮುಂದೆ ಹೂವು, ಹಣ್ಣು, ಕುಂಕುಮವಿರುವುದು ಮಾಮೂಲಾಯಿತು. ಕಾಣಿಕೆಗೆಂದು ಒಂದು ಹುಂಡಿ ಅಲ್ಲಿ ಸಿದ್ಧವಾಗಿ ಕುಳಿತಿತ್ತು. ಯಾರು ವ್ಯವಸ್ಥೆ ಮಾಡಿದರೆಂಬುದು ಮಾತ್ರಾ ತಿಳಿಯಲಿಲ್ಲ.

ಜನ ನಂಬತೊಡಗಿದರು. ಸಮಾಧಿಗೊಂದು ಶಕ್ತಿ ಕೊಟ್ಟರು. ಊರಿನ ಜನ ಎಚ್ಚೆತ್ತುಕೊಂಡರು.

ಸಮಾಧಿಸ್ಥನಾದ ಶಂಕರನನ್ನು ನಂಬಿದ್ದಕ್ಕೆ ಆವಾಯಿತು. ಇದಾಯಿತು ಎಂದು ವದಂತಿಗಳು ಊರತುಂಬಾ ಹರಡಿದವು.

ಊರ ಜನಕ್ಕಿಂತ ಹೊರಗಿನ ಜನರ ನಂಬಿಕೆಯೇ ಬಲವಾಯಿತು.

ಇದ್ದಕ್ಕಿದ್ದಂತೆ ಆ ಜಾಗವೇ ಅಪರಿಚಿತವೆನ್ನುವಷ್ಟು ರೂಪಾಂತರಗೊಂಡಿತು. 'ಜನ ಮರಳೋ ಜಾತ್ರೆ ಮರಳೋ!' ಎಂಬಂತಾಯಿತು.

ಊರ ಜನ ಬೆಕ್ಕಸ ಬೆರಗಾದರು. ನಮ್ಮ ಶಂಕರ ಊರ ದೈವವಾದನೇ! ಎಂದು ಮೂಗೇರಿಸುವಂತಾಯಿತು. ತಂಡ ತಂಡಗಳಲ್ಲಿ ಜನ ಬರುವಾಗ ಊರ ಜನ ನಂಬದಿರುವುದು ಹೇಗೆ?

ಮೈಯಲ್ಲಿನ ರೋಗಗಳು, ಮನದಲ್ಲಿನ ಬಾಧೆಗಳು, ಬದುಕಿನಲ್ಲಿನ ಸಮಸ್ಯೆಗಳು ಎಲ್ಲವೂ ಶಂಕರನಿಂದ ಪರಿಹಾರ ಕೋರಿದವು.

ನಂಜುಂಡ ಶಾಸ್ತ್ರಿಗಳು, ಭೀಮರಾಯರು ಶಂಕರನ ಮಹಿಮೆಯ ಬಗ್ಗೆ ಕೇಳಿದಷ್ಟೂ ಮೂಕರಾದರು.

ಸುತ್ತಮುತ್ತಲಿನ ಹಳ್ಳಿಗಳಿಂದ ರೋಗಿಗಳು, ದೆವ್ವ ಹಿಡಿದವರು ಬಂದರು. ಶಂಕರನ ಸಮಾಧಿಯ ಮುಂದೆ ಗಂಟೆಗಟ್ಟಲೆ, ದಿನಗಟ್ಟಲೆ ಬೇರುಬಿಟ್ಟು ಕುಳಿತರು. ತಮ್ಮ ಖಾಯಿಲೆ ವಾಸಿಯಾಗದ ಹೊರತು ಅಲ್ಲಿಂದ ಕದಲುವುದಿಲ್ಲವೆಂಬಂತೆ ಝುಂಡಾ ಊರಿ ಕುಳಿತುಬಿಟ್ಟರು.

ದೆವ್ವ ಹಿಡಿದವರಾದರೋ ಭಯಂಕರವಾಗಿ ಕಿರುಚುತ್ತಾ, ಕೆದರಿದ ಕೂದಲಿಂದ ತಲೆಗಳನ್ನು ಬಿರುಸಾಗಿ ತೂಗಿದರು. ಸುತ್ತಿದರು. ಸರಸರನೆ ಸಮಾಧಿಯ ಅಕ್ಕಪಕ್ಕಗಳಲ್ಲಿದ್ದ ಹುಣಿಸೇ ಮರಗಳನ್ನು, ತೆಂಗಿನ ಮರಗಳನ್ನು ಏರಿ ಕುಳಿತುಬಿಡುತ್ತಿದ್ದರು. ಹಿಡಿದ ದೆವ್ವ ಬಿಟ್ಟ ಕೂಡಲೇ, ಅವರನ್ನು ಅಲ್ಲಿಂದ ಇಳಿಸುವುದೇ ಪ್ರಯಾಸವಾಯಿತು.

ಸಮಾಧಿಯ ಪಕ್ಕದಲ್ಲಿದ್ದ ಹುತ್ತದ ಮಣ್ಣೂ ಪವಿತ್ರವಾಯಿತು. ಬಂದ ಭಕ್ತರು, ಶಂಕರನ ಆರಾಧಕರು ಅದರ ಮಣ್ಣನ್ನೂ ಉಳಿಯಗೊಡಲಿಲ್ಲ. ಕೆರೆ ಕೆರೆದು ಪ್ರಸಾದವೆಂದು ನೀರಲ್ಲಿ ಕಲಸಿ ಕುಡಿದರು; ನುಂಗಿದರು!

ಹುತ್ತ ಮರೆಯಾಗಿ ಆಳವಾದ ಹಳ್ಳ ಏರ್ಪಟ್ಟಿತು!

ಊರ ಪ್ರಮುಖರು ಇದನ್ನು ಗಮನಿಸಿದರು. ಅಕಸ್ಮಾತ್ತಾಗಿ ಬರುವ ಜನ ಅಪ್ಪಿತಪ್ಪಿ ಅದರಲ್ಲಿ ಬಿದ್ದರೆ ಕೈಕಾಲು ಮುರಿಯುವ ಸಂಭವಗಳಿವೆಯೆಂದರಿತು ಬಂಡಿಗಟ್ಟಲೆ ಮಣ್ಣನ್ನು ತರಿಸಿ ತುಂಬಿದರು ಹಳ್ಳವನ್ನು.

ಆದರೂ ಉಳಿಯಲಿಲ್ಲ. ಮಣ್ಣು ದಿನದಿನಕ್ಕೆ ಕರಗಿ ಮಾಯವಾಗುತ್ತಿತ್ತು. ಭೀಮರಾಯರು, ಪುಟ್ಟಾಚಾರಿ, ಚೆನ್ನಾರೆಡ್ಡಿ, ಬಂದವರಿಗೆ ಏನಾದರೂ ಆಘಾತವಾದರೆ ಊರಿಗೆ ಕೆಟ್ಟ ಹೆಸರೆಂದು ತಿಳಿದು, ಪ್ರತಿ ವಾರವೂ ಒಂದು ಬಂಡಿ ಮಣ್ಣನ್ನು ಅಲ್ಲಿ ತುಂಬುವ ವ್ಯವಸ್ಥೆ ಮಾಡಿದರು.

ಪಕ್ಕದ ಹಾಲಳ್ಳಿ ಮಾಯಣ್ಣನಿಗೆ ಮೈಯಲ್ಲಾ ಚರ್ಮರೋಗ. ಗುಪ್ತ ಎಡೆಗಳಲ್ಲೆಲ್ಲಾ ಚರ್ಮ ಒಡೆದು ಕೀವು ರಕ್ತ ಕಾರುತ್ತದೆ. ಏಳು ತಲೆಮಾರಿಗೆ ಆಗುವಷ್ಟು ಹಣವಿದ್ದೂ ಈ ನರಳಾಟದಿಂದ ಜೀವನವೇ ಬೇಸರವೆನಿಸಿತ್ತು. ಆತ ಕಾಣದ ವೈದ್ಯರಿಲ್ಲ; ವೈದ್ಯವಿಲ್ಲ; ಕೈ ಮುಗಿಯದ ದೇವರಿಲ್ಲ. ಕಲ್ಲು ಮಣ್ಣಿಗೂ ಹರಕೆ ಹೊರೆಂದರೂ ಹೊರುವುದಕ್ಕೆ ಸಿದ್ಧನಿದ್ದ. ಲೆಕ್ಕವಿಲ್ಲದ ಮಂದಿ ಬಂದು ಶಂಕರನನ್ನು ನಂಬಿ ವಾಸಿಯಾಯಿತೆಂದು ಹಿಗ್ಗಿ ಹೋಗುತ್ತಿರುವ ಸುದ್ದಿ. ಎಲ್ಲರಿಗಿಂತ ಮೊದಲು ಮುಟ್ಟಿದ್ದು ಮಾಯಣ್ಣನನ್ನು. ಕೇಳಿದ ಕ್ಷಣದಲ್ಲಿಯೇ ಕಾಲುನಡಿಗೆಯಲ್ಲೇ ಓಡಿ ಬಂದ. ಯಾವ ಹುತ್ತದಲ್ಲಿ ಯಾವ ಹಾವೋ! ಇಷ್ಟೆಲ್ಲಾ ದೈವಗಳಿಗೆ ಮುಗಿದ ಕೈಗಳು ನಿರಾಯಾಸವಾಗಿ ಶಂಕರನಿಗೆ ಮುಗಿದವು. ಶಂಕರನನ್ನು ಬದುಕಿದ್ದಾಗ ತಾನು ನೋಡದವನೇನೂ ಅಲ್ಲ. ಅವನನ್ನು ನೋಡಿದಾಗಲೆಲ್ಲಾ ಉದಾರವಾಗಿ ಪಾವಲಿಯೋ, ಹತ್ತು ಪೈಸೆ ಬಿಲ್ಲೆಯನ್ನೋ ನೀಡಿದ್ದುಂಟು. ಆತ ಇಂದು ದೈವವಾಗಿ ಕೂತಿದ್ದಾನೆ. ಅವನಿಂದ ತನ್ನ ರೋಗ ವಾಸಿಯಾದರೆ ಗುಡಿ ಕಟ್ಟಿಸುವುದಾಗಿ ಹರಕೆ ಹೊತ್ತ. ದಿನಗಳು ಕಳೆದಂತೆ, ತನ್ನ ಕಣ್ಣನ್ನೇ ನಂಬಲಾಗದಂಥ ಸತ್ಯ ಪರಿಣಾಮ ಮಾಯಣ್ಣನನ್ನು ಅವಾಕ್ಕಾಗಿಸಿತು. ಸ್ವಲ್ಪ ಸ್ವಲ್ಪವೇ ರೋಗ ಮಾಯುತ್ತಿತ್ತು. ಮಾಯಣ್ಣ ಕುಣಿದಾಡಿದ. ತನ್ನ ಉಳಿದ ಬದುಕನ್ನು ಶಂಕರನ ಸೇವೆಗೆ ಮುಡಿಪೆಂದು ನಿರ್ಧರಿಸಿದ.

ಮಾತಿನಂತೆ ಸಮಾಧಿಯ ಸುತ್ತ ಪ್ರಾಕಾರವೇರ್ಪಟ್ಟು, ಮೇಲೆ ಛಾವಣಿ ಬಿದ್ದು ಗುಡಿಯಾಗಿ ರೂಪನ್ನು ಪಡೆಯಿತು. ಹೆಸರಾಂತ ಜ್ಯೋತಿಷ್ಯರ ಸಲಹೆಯಂತೆ, ನಿಶ್ಚಿತ ಸುತ್ತಳತೆಯೊಳಗೆ ಗುಡಿಯ ಪ್ರಾಕಾರದ ಬುನಾದಿ ಬಿದ್ದಿತು. ನೂರು ವರ್ಷಗಳವರೆಗೆ ಈ ಸ್ಥಳದ ಮಹಿಮೆ ನಡೆಯುವುದೆಂದು ಜ್ಯೋತಿಷ್ಯರ ತೀರ್ಮಾನವಾಯಿತು.

ಮಾಯಣ್ಣನಂತಹ ದೊಡ್ಡ ವ್ಯಕ್ತಿಯ ನಂಬಿಕೆ ಉಳಿದವರಿಗೆ ಸ್ಫೂರ್ತಿಯಾಯಿತು. ಹಿರಿಯ ಶ್ರೀಮಂತವರ್ಗದವರು ನಂಬಿದ ಮೇಲೆ ಶಂಕರನಿಗೆ ದಾರಿದ್ರ್ಯತೆಯ ಕರ್ಮವಿರಲಿಲ್ಲ. ಭಕ್ತರು ಹಾಕುವ ಕಾಣಿಕೆಗಳಿಗೆ ಸಣ್ಣ ಹುಂಡಿ ಸಾಕಾಗಲಿಲ್ಲ. ಆಳೆತ್ತರದ ಹುಂಡಿಯೇ ಬೇಕಾಯಿತು.

ತುಂಬಿದ ಹುಂಡಿಯ ಶ್ರೀಮಂತಿಕೆಗೆ ಜವಾಬ್ದಾರಿ ಹೊರುವ ವ್ಯಕ್ತಿಗಳು ಬೇಕಾದರು! ಊರೊಳಗಿನ, ಊರ ಹೊರಗಿನ ಪ್ರತಿಷ್ಠಿತ ವ್ಯಕ್ತಿಗಳ ಟ್ರಸ್ಟಿಯೊಂದರ ನಿರ್ಮಾಣವಾಯಿತು. ಟ್ರಸ್ಟಿಯಲ್ಲಿನ ಸದಸ್ಯತ್ವಕ್ಕೆ ಆಗಲೇ ಸ್ಪರ್ಧೆ ಪ್ರಾರಂಭವಾಯಿತು. ಪವಿತ್ರ ಉದ್ದೇಶ ಪಕ್ಕ ಸರಿದು, ರಾಜಕೀಯದ ಹೊಲಸು ತಲೆ ಹಾಕಿತು!

ಭೀಮರಾಯರು, ನಂಜುಂಡಶಾಸ್ತ್ರಿಗಳು, ರಾಚ (ತನ್ನ ಕುಲದ ಪ್ರತಿನಿಧಿಯಾಗಿ) ಚೆನ್ನಾರೆಡ್ಡಿ ಮೊದಲಾಗಿ ಊರ ಪ್ರಮುಖರು ಜೊತೆಗೆ ಮುಖ್ಯ ಕುಟುಂಬಗಳಿಂದ ಒಬ್ಬೊಬ್ಬರು 'ಶಂಕರಪ್ಪ'ದ ಕಮಿಟಿಯ ಸದಸ್ಯರಾದರು. ಮಾಯಣ್ಣ ಕಮಿಟಿಯ ಅಧ್ಯಕ್ಷರಾದರು.

ತಮ್ಮೂರಿನ 'ಶಂಕರನ ನಿಧಿಗೆ' ಪಕ್ಕದೂರಿನ ವ್ಯಕ್ತಿಯೊಬ್ಬ ಅಧ್ಯಕ್ಷನಾಗಿರುವುದು ಊರಿನ ಕೆಲವರಿಗೆ ಹಿಡಿಸಲಿಲ್ಲ. ಒಳಗೊಳಗೇ ಮಸೆದಾಟ ಪ್ರಾರಂಭವಾಯಿತು. ಪರಸ್ಪರ, ಹಣದ ದುರ್ವಿನಿಯೋಗವಾಗುತ್ತಿದೆಯೆಂದು ಆರೋಪಿಸಿದರು. ಪವಿತ್ರ ಉದ್ದೇಶದಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ಆರಂಭವಾದ ವ್ಯವಸ್ಥೆ ವ್ಯಕ್ತಿಗಳ ವೈಯಕ್ತಿಕ ಕೀಳು ಮನೋಭಾವಗಳಿಂದ ಕಿಕ್ಕಿರಿಯಿತು. ಆದರೂ ಕೆಲವು ಸಾರ್ವಜನೋಪಯೋಗಿ ಕೆಲಸಗಳೂ ಆ ನಿಧಿಯಿಂದ ನಡೆದವು.

ದೂರದಿಂದ ಬರುವ ಭಕ್ತರ ನಿಲುಗಡೆಗಾಗಿ ಧರ್ಮಛತ್ರಗಳು ನಿರ್ಮಾಣವಾದವು. ಅವರ ಅನುಕೂಲಕ್ಕಾಗಿ ಹತ್ತಾರು ಬಾವಿಗಳನ್ನು ತೋಡಿಸಲಾಯಿತು. ಸಾಲು ಸಾಲಾಗಿ ಅಂಗಡಿಗಳು ಹುಟ್ಟಿಕೊಂಡವು.

ಕಾಫಿ ಕ್ಲಬ್ಬುಗಳೂ, ಹೋಟೆಲುಗಳೂ ತೆರೆದುಕೊಂಡವು. ಶಂಕರ ಸಮಾಧಿಯ ಸುತ್ತ ಊರು ಬೆಳೆಯುತ್ತಿದ್ದರೆ, ಊರು ಒಳಗೆ ಹಾಳು ಬೀಳುತ್ತಿತ್ತು!

ಹೊರಗಿನ ಪ್ರಪಂಚದೊಂದಿಗೆ ಅಷ್ಟಾಗಿ ಸಂಪರ್ಕವಿಲ್ಲದ ಈ ಮುಗ್ಧ ಹಳ್ಳಿಗರಿಗೆ, ಶಂಕರ ಮಹಿಮೆಯಿಂದ, ಅದರ ಪ್ರಾಬಲ್ಯದಿಂದ, ಶಂಕರಾಪುರವೆಂದು ಹೆಸರಾದ ಆ ಎಡೆ ಆಕರ್ಷಕವಾಗಿ ಕಂಡಿತು. ದಿನವಿಡೀ ಅಲ್ಲಿಗೆ ಬರುವ ಬಗೆಬಗೆಯ ಜನರನ್ನು ನೋಡುವುದೇ ಒಂದು ವಿನೋದ.

ಹೊಲ, ಗದ್ದೆಗಳಲ್ಲಿ ಬೆವರು ಸುರಿಸಿದರೂ ಹೊಟ್ಟೆ ಪಾಡಿಗೆ ಗಿಟ್ಟುವುದೇ ಕಷ್ಟವಾಗಿತ್ತು. ಅವರಿಗೂ ಆ ದುಡಿಮೆ ಬೇಸರ ಬರಿಸಿತ್ತು. ನಿರಂತರ ಪ್ರವಾಹದಂತೆ ಬರುವ ಜನರ ಅವಶ್ಯಕತೆಗಳ ಪೂರೈಕೆಯ ವಿಧಾನಗಳನ್ನು ಆಲೋಚಿಸಿದರು. ಒಂದು ರೂಪಾಯಿಯಿಂದ ನೂರು ರೂಪಾಯಿಗಳವರೆಗೆ ಬಂಡವಾಳವನ್ನು ಹಾಕಿದರು. ತೆಂಗಿನಕಾಯಿ ಅಂಗಡಿ, ಕಡ್ಡಿ ಕರ್ಪೂರದಂಗಡಿ, ಹೂವಿನಂಗಡಿ, ಚಕ್ಕುಲಿ, ಕೋಡುಬಳೆ, ವಡೆ, ಬೆಂಡು, ಬತ್ತಾಸು, ಪುರಿ, ಏನಂದರೆ ಅದೇ ಅಂಗಡಿಗಳನ್ನು ಇಟ್ಟುಕೊಂಡರು. ಕಣ್ಣಿಗೆ ಹಬ್ಬದಂತೆ ಕಾಣುವ ಜನ ಜಂಗುಳಿಯನ್ನು ನೋಡುತ್ತಾ ಕಾಲಕ್ಷೇಪವೂ ಆಗುವುದು, ಒಂದೆರಡು ಕಾಸು ಲಾಭವೂ ಬರುವುದೆಂಬ ಲೆಕ್ಕಾಚಾರದಿಂದ, ಇಲ್ಲಿಯೇ ನೆಲೆಸಿದರು.

ಹೆಜ್ಜೆಗೊಂದು ಕಾಫಿ ಬಾರು; ದೇಶೀ ಸಾರಾಯಿ ಗಡಂಗು!

ಊರು ನಿರ್ಜನವಾಯಿತು; ನಿರ್ಜನ ಪ್ರದೇಶ ಊರಾಯಿತು.

ಪ್ರಾಣ ಹೋದರೂ ಬೇಕೆಂದರೆ ಊರೊಳಗೊಬ್ಬ ಆಳು ಸಿಗುವುದು ದುರ್ಲಭವಾಯಿತು. ಹಾಲು ಮೊಸರುಗಳಂತೂ ಶಂಕರಾಪುರದ ಗಡಿ ದಾಟಿ ಊರೊಳಗೆ ಬರುವುದು ದುರ್ಲಭವಾಯಿತು. ಊರ ಹುಮ್ಮಸ್ಸೆಲ್ಲ ಊರಾಚೆಗೇ ಉಳಿಯಿತು.

ಕೊನೆ ಕೊನೆಗೆ ಮನೆಯ ಗಂಡಸರೂ ಬೆಳಿಗ್ಗೆ ಕಾಫಿ, ತಿಂಡಿ ಮುಗಿಸಿ ಶಂಕರಾಪುರಕ್ಕೆ ಹೊರಟರೆ ಮತ್ತೇ ಊಟಕ್ಕೇ ಬರುವುದು. ಅದೂ ಹೊತ್ತಿಗೆ ಸರಿಯಾಗಿ ಬರುವುದೇ ಅಪರೂಪವಾಗಿಬಿಟ್ಟಿತ್ತು.

ಮೊನ್ನೆ ಬೆಳಿಗ್ಗೆ ರಾಚನ ಹೆಂಡತಿ ಭೀಮರಾಯರ ಮನೆಗೆ ಹಾಲು ತಂದು ನೀಡಿದಳು. ಮುಖ ಕಳೆಕಳೆಯಿಂದ ಇತ್ತು. ಭಾಗೀರಥಮ್ಮ ವಿಚಾರಿಸಿದರು– "ಏನು ಮಲ್ಲಿ, ತುಂಬಾ ಸಂತೋಷವಾಗಿರುವ ಹಾಗಿದೆ?" ಎಂದು ಕೇಳಿದರು ನಗುತ್ತಾ.

ಮಲ್ಲಿಗೆ ಹೇಳಬೇಕೆನ್ನುವ ಕಾತರ. ಆದರೆ ಹೇಳುವುದಕ್ಕೆ ನಾಚಿಕೆ.

ಭಾಗೀರಥಮ್ಮನಿಗೆ ಮಲ್ಲಿಯ ಚರ್ಯೆ ಅರ್ಥವಾಯಿತು.

"ಏನಾದರೂ ಸಂತೋಷದ ಸುದ್ದಿ ಇದೆಯೇನೇ?" ಎಂದರು.

"ಹೌದ್ರವ್ವಾ!" ಎಂದಳು ಮತ್ತಷ್ಟು ನಾಚುತ್ತಾ

"ಏನೇ ಅದು?" ಆಶ್ಚರ್ಯದಿಂದ ಕೇಳಿದರು. ತಿಳಿಯದವರಂತೆ.

"ತಿಂಗಳು ತಪ್ಪೈತ್ರವ್ವ" – ಎಂದು ನಾಚಿನೀರಾದಳು.

"ಹೋಗಲಿ ಬಿಡು. ಎಷ್ಟು ತಪಸ್ಸು ಮಾಡಿದೆಯೋ ಏನೋ. ಈಗ ಫಲ ಸಿಕ್ಕಿದೆ" ಎಂದು ಭಾಗೀರಥಮ್ಮ.

"ಎಲ್ಲಾ ಆ ಶಂಕರಪ್ಪನ ಮಯಿಮಾ ಕಣವ್ವ! ಏಸುದ್ಯಾವರಿಗೆ ಅರಕೆ ಒತ್ಕೋಡಿದ್ನಿ ಮಂಜ್ಯನ್ನ ಕಳಂಡ್ಮ್ಯಾಕೆ ನಂಗೆ ಜೀವನಾ ಇರಲಿಲ್ಲ. ಏಟು ತಪಸ್ಸು ಮಾಡಿ ಅವನ್ನ ಪಡಿದಿದ್ನಿ. ಅಂಥಾದ್ರಾಗ ಅವನ್ನ ಸಿವ ನನ್ನಿಂದ ಕಿತ್ಕಂಡ.... ಸಾಯೋ ಅಂಗ ಅನ್ನಿಸಿಬಿಡ್ತು. ಅದರ ದೂರದ ಆಸೆ ಮ್ಯಾಗ ನಾ ಬದುಕಿದ್ನಿ. ಈಗೇನೋ ನಮ್ಮ ಸಂಕರ ಕಣ್ಣು ಬಿಟ್ಟವ್ನ ನೋಡ್ಬ್ಯಾಕು. ದಂಡಿ ಮುಟ್ಟಾಸ್ತಾ ನಾಂತ!" ಎಂದು ವೇದಾಂತ ಮಾತಾಡಿದಳು.

ಭಾಗೀರಥಮ್ಮ ಬಾಯಿ ಬಿಟ್ಟರು ಆಶ್ಚರ್ಯದಿಂದ! "ಏನು ನಮ್ಮ ಶಂಕರನಿಗೆ ಹರಕೆ ಹೊತ್ಕೊಂಡಿದ್ದಕ್ಕೆ ಆಯ್ತು?" ಎಂದರು.

"ಹೌದವ್ವ" ಎಂದಳು ಮಲ್ಲಿ.

"ಹುಂ! ಪರಮಾತ್ಮ ಯಾರಲ್ಲಿ ಹೇಗೆ ಯಾವ ರೂಪದಲ್ಲಿರ್ತಾನೋ!" ಎಂದು ನಿಟ್ಟುಸಿರು ಬಿಟ್ಟರು.

"ಸಂಕಳನ ಮೈಮಾ ಬಾಳ ಕೇಳಿವ್ನಿ.... ನಾ ಬತ್ತೀನವ್ವ ಈಗ ಒತ್ತಾಯ್ತು.... ಇನ್ಯಾವಾಗ್ಲಾದ್ರೂ ಇತ್ತ ಬಂದಾಗ ನಿಮ್ಮನೀಗ್ಬತ್ತೀನಿ" ಎಂದು ಖಾಲಿ ಹಾಲಿನ ತಂಬಿಗೆಯನ್ನು ತೆಗೆದುಕೊಂಡು ನಡೆದಳು.

ಭಾಗೀರಥಮ್ಮನಿಗೆ ಶಂಕರ ಬದುಕಿದ್ದಾಗಲೇ ಅವನು ಅಸಾಧಾರಣ ವ್ಯಕ್ತಿ. ನಮಗಿಂತ ಭಿನ್ನ ರೀತಿಯವನು ಅನಿಸಿತ್ತು. ಆದರೆ, ಯಾರೇ ಆಗಲಿ ಬದುಕಿರುವವರೆಗೂ ಬೆಲೆ ಗೊತ್ತಾಗುವುದಿಲ್ಲವೆನ್ನುವ ಮಾತು ಇವನ ವಿಚಾರದಲ್ಲಿಯೂ ನಿಜವಾಗಿತ್ತು.

ನಂಜಮ್ಮನಿಗಂತೂ ತುಂಬಾ ಪೇಚಾಟ. "ಇಂಥ ದ್ಯಾವರ್ನ, ಇದ್ದಾಗ, ಅದೂ ನನ್ಮೇಲಿ! – ನೋಡ್ಕಳ್ಳಿಲ್ಲವಲ್ಲ!" ಎಂದು ಕೈ ಕೈ ಹೊಸಕಿಕೊಂಡಳು.

ಊರಿನ ಯುವಕ ಮಂದಿಯೆಲ್ಲಾ, ಊರಿಗೊದಗಿದ ನಷ್ಟವನ್ನು ಕಂಡರು. ಜನರು ಊರೊಳಗೂ ಬರುವ ಆಕರ್ಷಣೆಗೆ ಸಿಗಬೇಕು. ಅದಕ್ಕಾಗಿ ಅವರೂ ಒಂದು ಕಮಿಟಿ ಮಾಡಿದರು. ಮೂರ್ತಿ, ರಾಜಾ, ಕಿಟ್ಟ, ಶಿವು, ಸಾಮಿ ಮೊದಲಾಗಿ ಎಲ್ಲಾ ಸೇರಿ ಒಂದು ವಾರ ತಲೆಕೆಡಿಸಿಕೊಂಡು ಆಲೋಚಿಸಿದರು.

ನಂಜಮ್ಮನನ್ನು ಸಾಮೂಹಿಕವಾಗಿ ಭೇಟಿಯಾಗಿ ಮಾತನಾಡಿಸಿದರು. ಶಂಕರನು ಮಲಗುತ್ತಿದ್ದ, ಮತ್ತು ಕೊನೆಯುಸಿರೆಳೆದ ಆಕೆಯ ಚಾವಡಿಯನ್ನು ಕೊಡಲು ಕೇಳಿದರು. "ಅಜ್ಜಿ, ಬರುವ ಜನಕ್ಕೆ ನಮ್ಮ ಶಂಕರಪ್ಪ ಕೊನೆಯುಸಿರೆಳೆದ ಪವಿತ್ರ ಜಾಗವನ್ನೂ ನೋಡಬೇಕೆಂದು ಆಸೆ ಇರುತ್ತೆ ಅಲ್ವ? ಅವರು ಇಲ್ಲಿಗೆ ಬಂದು ಆ ಜಾಗವನ್ನು ದರ್ಶಿಸಿಕೊಂಡು ಹೋಗಬೇಕಂತಾರೆ. ನೋಡು ನಿನಗೂ ಪುಣ್ಯ ಬರುತ್ತೆ. ನಮ್ಮ ಶಿವು ಶಂಕರಪ್ಪನ ಚಿತ್ರ ಬರೆದು ಕೊಡ್ತಾನೆ. ಅದನ್ನೂ ಇಟ್ಟು ಪೂಜೆ ಮಾಡ್ತೀವಿ. ಯೋಚನೆ ಮಾಡಜ್ಜಿ" – ಎಂದರು.

ಮುದುಕಿ ಒಂದು ಕ್ಷಣಕ್ಕೂ ಆಲೋಚನೆಗೆ ಎಡೆಯಿಲ್ಲದೆ, "ಅಯ್ಯೋ ಮಕ್ಳಾ ಅದಕ್ಕಾಗಿ ನಂತಾವ ಬಂದ ಕೇಳ್ಬಾಕಬೇಕಾ? ಅಂವ ನನ್ಮಗ್ನಿದ್ದಂಗೆ ಬದುಕಿದ್ದಾಗ ಅವರಿಗೆ ಏನೂ ಮಾಡ್ಲಿಲ್ಲ. ಈಗ್ಲಾದ್ರೂ ಒಸಿ ಪುಣ್ಯ ಮಾಡಾನ. ನಂಗೂ ಯಾರವ್ರೆ? ಮಾರಾಜಾಗಿ ತಕ್ಕೊಳ್ಳಿ. ನಾ ಸತ್ತಮ್ಯಾಗ ನನ್ನ ಮನೀನೂ ಆಯಪ್ಪಂಗಾ ಕೊಟ್ಟುಬುಡಿ." ಎಂದಳು.

ಮುದುಕಿಯ ಧಾರಾಳತನಕ್ಕೆ ಹುಡುಗರ ಎದೆ ತುಂಬಿಬಂತು. ತಮ್ಮ 'ಶಂಕರಸ್ಮಾರಕ ಯುವಕರ ಸಂಘಕ್ಕೆ ಒಳ್ಳೆ ಪ್ರಾರಂಭವೆಂದು ಕೊಂಡರು.'

ಶಂಕರಾಪುರದಲ್ಲಿ ತಮ್ಮೊಂದಷ್ಟು ಪ್ರತಿನಿಧಿಗಳನ್ನು ನಿಲ್ಲಿಸಿ, ಅಲ್ಲಿಗೆ ಬರುವ ಜನರಿಗೆ ಶಂಕರನು ಸತ್ತ ಸ್ಥಳ ಮಹಿಮೆಯನ್ನು ವಿವರಿಸತೊಡಗಿದರು. ಅಷ್ಟು ದೂರ ಬಂದಿರುವಾಗ ಊರೊಳಗಿನ ಆ ಸ್ಥಳವನ್ನು ನೋಡದೆ ಹೋಗಲು ಯಾರೂ ಇಚ್ಛಿಸುವುದಿಲ್ಲವಾದ್ದರಿಂದ, ಅವರ ನಿರೀಕ್ಷೆಯಂತೆ ಜನರು ಊರಿನೊಳಕ್ಕೂ ಬರತೊಡಗಿದರು. ಇಲ್ಲಿನ ಸ್ಥಳ ಪವಿತ್ರವಾಯಿತು.

ಶಂಕರನ ಮಹಿಮೆಗಳನ್ನು ವಿವರಿಸುವ ಜನ ಹೆಜ್ಜೆ ಹೆಜ್ಜೆಗೂ ಹುಟ್ಟಿಕೊಂಡರು. ಊರಿಗೆ ತಿರುಗುವ ಎಡೆಯಲ್ಲಿ ಬಾಣದ ಗುರುತಿನಿಂದ ಚಿಕ್ಕ ಶಂಕರಾಪುರಕ್ಕೆ

ದಾರಿಯನ್ನು ಸೂಚಿಸಿದರು. ಶಂಕರ ಸತ್ತ ಚಾವಡಿ ಕಾರಣದಿಂದ ಶಂಕರಾಪುರವೆಂದು ಒಳಗಿನ ಊರು ಪ್ರಸಿದ್ಧವಾಯಿತು. ಕಾಣಿಕೆಗಳೂ ಧಾರಾಳವಾಗಿ ಬಿದ್ದವು. ದೊಡ್ಡ ಶಂಕರಾಪುರದೊಂದಿಗೆ ಸ್ಪರ್ಧೆಯ ಪರಿಣಾಮವಾಗಿ ಚಿಕ್ಕ ಶಂಕರಾಪುರ ಹುಟ್ಟಿಕೊಂಡಿತ್ತು. ಅಲ್ಲಿನ ಆದಾಯ ಸಾವಿರಾರು ರೂಪಾಯಿಗಳನ್ನು ಮುಟ್ಟಿದ್ದರೆ ಚಿಕ್ಕ ಶಂಕರಾಪುರದ ಆದಾಯ ನೂರಾರಕ್ಕೂ ಮೀರಿತ್ತು.

ರಾತ್ರಿಯ ವೇಳೆ ನರಪಿಳ್ಳೆಯೂ ಓಡಾಡದಂತಹ ಭೀಕರ ನಿರ್ಜನ ಮೌನವೇ ಆವರಿಸಿರುತ್ತಿದ್ದ ಈ ಜಾಗ ಯಾತ್ರಾರ್ಥಿಗಳಿಂದ ಕಿಕ್ಕಿರಿದು ಹಗಲು ರಾತ್ರಿಗಳ ಅಂತರವನ್ನೇ ಮರೆಮಾಡಿತು.

ಹಾಡುವವರು, ಕುಣಿಯುವವರೂ, ಹರಿಕಥಾ ದಾಸರು ತಾವಾಗಿ ಶಂಕರ ಸೇವೆಗೆಂದು ಬಂದು ಠಾಣೆ ಹೂಡಿದರು. ಅಷ್ಟೊಂದು ಜನಸ್ತೋಮದ ಎದುರು ತಮ್ಮ ಕಲಾಪ್ರದರ್ಶನದಿಂದ ಸ್ವಾರ್ಥಪರಾರ್ಥಗಳೆರಡೂ ಸಾಧ್ಯವಾಗುವುದೆಂದೇ ಅವರ ಎಣಿಕೆ.

ಇಪ್ಪತ್ನಾಲ್ಕು ಗಂಟೆಗಳೂ ಕಥಾ ಕಾಲಕ್ಷೇಪ ಮಾಡುವ ದಾಸರುಗಳು ತಮ್ಮ ಸರದಿಗಾಗಿ ಸಹನೆಯಿಂದ ಕಾಯಬೇಕಿತ್ತು.

ವಿಚಿತ್ರ ವ್ಯಕ್ತಿಗಳು ; ವಿಚಿತ್ರ ಉದ್ದಿಮೆಗಳು!

ಬದುಕಿನ ಪ್ರದರ್ಶನಾಲಯದಂತೆ ಕಂಡಿತು ಶಂಕರಾಪುರ! ಹೊರಗಿನಿಂದ ಬರುವ ಜನ ಭಕ್ತ್ಯಾತಿರೇಕದಿಂದ ಮುಗ್ಧರಾದರು. ಶಂಕರ ಬದುಕಿದ್ದಾಗ ಎಲ್ಲಿ ಹೋಗುತ್ತಿದ್ದ, ಎಲ್ಲಿ ಕೂರುತ್ತಿದ್ದ. ಎಲ್ಲಿ ಮೀಯುತ್ತಿದ್ದ ಅನ್ನುವುದು ಯಾರಿಗೂ ಬೇಕಾದ ವಿಷಯಗಳಾಗಿರಲಿಲ್ಲವಾದರೂ ಈಗ ಅವನು ಮಿಂದದ್ದು ಇಲ್ಲೇ, ಎಂದು ಕೆರೆಯ ಒಂದು ಎಡೆಯನ್ನು ತೋರಿಸುವರು. ಅವನು ಬಟ್ಟೆ ಒಣಗಿಹಾಕುತ್ತಿದ್ದುದು ಇದೇ ಬಂಡೆಯ ಮೇಲೆ ಎಂದು ಬಂಡೆಗಲ್ಲನ್ನು ತೋರಿಸುತ್ತಿದ್ದರು. ಅವನು ಕೂರುತ್ತಿದ್ದ ಜಾಗವೇ ಇದು ಎಂದು ಅರಳೀಕಟ್ಟೆಯೆಡೆಗೆ ಕರೆದೊಯ್ಯುವರು.

ಆ ಊರಿನ ಪ್ರತಿಯೊಂದು ಜಾಗವೂ ಪುನೀತವೆಂದು ಸಿದ್ಧವಾಯಿತು. ಅಲ್ಲಿನ ಮಣ್ಣು, ಕಲ್ಲು, ನೀರು, ಗಾಳಿ ಶಂಕರನ ಸ್ಪರ್ಶದಿಂದ ಪವಿತ್ರವೆನಿಸಿಕೊಂಡಿತು.

ಇಡೀ ಊರೇ ಪುಣ್ಯಕ್ಷೇತ್ರವಾಯಿತು. ಆ ಊರಿನಲ್ಲಿ ನೆಲೆಗೊಂಡವರು ಪುಣ್ಯವಂತರೆಂದು ಕರುಬುವಂತಾಯಿತು ಜನ!

ಆದರೆ ಊರಿನ ಜನರ ಸಮಸ್ಯೆಗಳಿಗೆ ಪರಿಹಾರವಂತೂ ಇಲ್ಲದಾಯಿತು. ಮೊದಲಿಗಿಂತ ವಸ್ತುಸ್ಥಿತಿ ತಾರುಮಾರಾಯಿತೇ ವಿನಾ ಮತ್ತೇನೂ ಒಳ್ಳೆಯ ಪರಿಣಾಮ ಕಾಣಲಿಲ್ಲ!

ಕಾಲಿಲ್ಲದವರು, ಕಣ್ಣಿಲ್ಲದವರು, ಬಾಯಿಲ್ಲದವರು ಬಂದೇ ಬಂದರು. ತಿಂಗಳುಗಟ್ಟಲೆ ಶಂಕರನ ಸೇವೆ ಮಾಡಿದರು.

ಅಪ್ಪಾಜಪ್ಪನ ಮಗನಿಗೆ ಮೊನ್ನೆ ಅಪಘಾತದಲ್ಲಿ ಕಾಲಿನ ಎಲುಬು ಮುರಿದು ನಡೆಯುವುದೇ ಪ್ರಯಾಸವಾಯಿತು.

ಶಂಕರಾಪುರದ ಸುದ್ದಿ ಕೇಳಿದ್ದೇ ಧಾವಿಸಿದ್ದ. ಶಂಕರನ ಹೆಸರಿನಲ್ಲಿ ಒಂದು ದಿನ ಸಾವಿರ ಜನಕ್ಕೆ ಅನ್ನದಾನ ಮಾಡುವುದಾಗಿ ಹರಸಿಕೊಂಡ ಒಂದು ತಿಂಗಳು ಸರಿಯಾಗಿ ಅಪ್ಪಾಜಪ್ಪನ ಹೆಂಡತಿ ತನ್ನ ಮಗನೊಂದಿಗೆ ಇಲ್ಲಿಯೇ ಉಳಿದಳು. ದೇವಸನ್ನಿಧಿಯಲ್ಲಿದ್ದು ಆರಾಧಿಸಿದರೆ ಮನಸ್ಸು ಕರಗಬಹುದೇನೋ ಎನ್ನುವ ದೂರದ ಆಸೆ, ಆ ಜೀವಕ್ಕೆ ತಾಳ್ಮೆಯನ್ನು ಕೊಟ್ಟಿತು.

ಭಾವ ಬುದ್ಧಿಗಳ ಘರ್ಷಣೆಯಲ್ಲಿ ಒಮ್ಮೊಮ್ಮೆ ಭಾವನೇ ಗೆಲ್ಲುವುದೇನೋ ಎಂಬಂತೆ ಕಾಣುತ್ತದೆ.

ಕಾರ್ಯ ಕಾರಣ ಸಂಬಂಧವನ್ನು ಪ್ರಶ್ನಿಸುವ ಈ ಯುಗದಲ್ಲಿಯೂ ಸಾಕ್ಷೀ, ಪ್ರಮಾಣಗಳನ್ನು ಆಧರಿಸಿಯೇ ನಿರ್ಧರಿಸುವ ಈ ಶತಮಾನದಲ್ಲಿಯೂ ಅಗೋಚರ ಶಕ್ತಿಯ ಅಸ್ತಿತ್ವದ ವಿಚಾರದಲ್ಲಿ ಮಾತ್ರ ಬುದ್ಧಿ ಮೂಕವಾಗುತ್ತದೆ. ದೇವರು, ಧರ್ಮದ ಅಸ್ತಿತ್ವವನ್ನೇ ಪ್ರಶ್ನಿಸುವ ಅತಿರೇಕದ ಜನರ ನಡುವೆಯೂ ಕಾಣದ್ದನ್ನ, ಕೇಳಿದ್ದನ್ನು ನಂಬುವ ಜನಕ್ಕೆ ಕೊರತೆಯೇ ಇಲ್ಲವಾಗಿದೆ.

ನಮ್ಮ ಜನರ ಎದೆಗಳಲ್ಲಿ ನಂಬಿಕೆಗಳು ಬತ್ತುವುದೇ ಇಲ್ಲವೆನಿಸುತ್ತದೆ. ಹದಿನೈದು ದಿನಗಳ ಹಿಂದೆ ಒಬ್ಬ ಮುದುಕ ಮತ್ತು ಸುಮಾರು ಇಪ್ಪತ್ತೈದು ವರ್ಷಗಳ ಯುವತಿ ಊರೊಳಗೆ ಬಂದರು.

ಭೀಮರಾಯರು ಜಗುಲಿಯ ಮೇಲೆ ಕುಳಿತಿದ್ದರು. ಬರುವ ಹೋಗುವ ಜನಕ್ಕೆ ಕೊರತೆಯೇ ಇಲ್ಲವಾದ್ದರಿಂದ, ಯಾರೆಂದು ಅಷ್ಟಾಗಿ ಬಂದ ವ್ಯಕ್ತಿಗಳನ್ನು ಗಮನಿಸಲಿಲ್ಲ. ಆದರೆ ಅವರಲ್ಲಿ ಆ ಹೆಂಗಸು ತಾನೇ ಭೀಮರಾಯರನ್ನು ಸಮೀಪಿಸಿ –

"ನಮಸ್ಕಾರ. ನಾನು ಶಾರದಾ ಅಂತ. ನಿಮ್ಮ ಮನೇಲಿ ನನಗೆ ಸ್ವಲ್ಪ ಜಾಗ ಕೊಡ್ತೀರಾ?" ಎಂದರು.

ಭೀಮರಾಯರಿಗೆ ಏಕ್‌ದಂ ಹೀಗೆ ತನ್ನನ್ನು ಯಾರೋ ಅಪರಿಚಿತ ಹೆಂಗಸೊಬ್ಬಳು ಬಂದು ಕೇಳಿದ್ದಕ್ಕೆ ತಬ್ಬಿಬ್ಬಾದರು.

"ನೀನು ಯಾರಮ್ಮಾ? ಒಬ್ಬಳೇ ಬಂದಿದ್ದೀಯೇನು?" – ಎಂದರು.

"ಹುಂ! ಸ್ವಾಮಿ ಸೇವೆಗೆ ಒಬ್ಬಳೇ ಬಂದೆ. ಇಲ್ಲೇ ಇದ್ದು ಶಂಕರನ ಸೇವೆ ಮಾಡಬೇಕೆಂದಿದ್ದೇವೆ. ಪ್ಲೀಸ್!" ಎಂದು ದೈನ್ಯವಾಗಿ ಕೇಳಿದಳು. ಪಕ್ಕದಲ್ಲಿ ನಿಂತಿದ್ದ ಮುದುಕನನ್ನು ವಿಚಾರಿಸಿದರು.

"ಯಾರಪ್ಪಾ ಈಕೆ? ಹೀಗೆ ಒಬ್ಬಳೇ ಬಂದು ಕೇಳ್ತಿದ್ದಾಳೆ" ಎಂದರು.

"ಗೊತ್ತಿಲ್ಲ ಬುದ್ಧಿ ಆ ಜನದ ಜೊತೆಗೆ ಬಹಳ ಮಾತಾಡ್ತಿದ್ರು. ಎಲ್ಲರಿಗಿಂತ ಮೊದಲು ತಾನೇ ಒಳಗೆ ಹೋಗಬೇಕಂತ ನುಗ್ಗಿದಳು. ಕ್ಯೂನಲ್ಲಿ ಬಾ ಅಂತ ಅಲ್ಲಿ ನಿಂತಿದ್ದವರೆಲ್ಲ ಹೇಳಿದರು. ಅಷ್ಟೇ 'ನೀನ್ಯಾರು ಕೇಳೋಕೆ? ನಾನೇ ಮೊದಲು ದರ್ಶನ ಮಾಡ್ಬೇಕು' ಎಂದು ಗುಂಪನ್ನು ಒತ್ತಟ್ಟಿಗೆ ಸರಿಸಿ ನುಗ್ಗಿಯೇ ನುಗ್ಗಿಬಿಟ್ಟಳು. ಅಲ್ಲಿದ್ದವರೆಲ್ಲಾ ಗೊಣಗಿಕೊಂಡರು. 'ಯಾಕ್ರಿ ಬಿಟ್ಟಿರಿ ಒಳಗೆ' ಎಂದರು. ಗುಡಿಯ ಸಿಬ್ಬಂದಿಯೊಂದಿಗೆ ಜಗಳಕ್ಕೆ ನಿಂತರು. ಅಲ್ಲಿದ್ದ ಕೆಲವರು ಕನಿಕರದಿಂದ – ಅಯ್ಯೋ ಬಿಡ್ರಿ ಹೋಗಲಿ. ಹೆಂಗಸು ಅವರ ಜೊತೆಗೇನು ಮಾತು?' ಎಂದದ್ದಕ್ಕೆ ಸುಮ್ಮನಾದರು.

ಒಳಗೆ ಹೋದವರೇ ಯಾವು ಯಾವುದೋ ಹಾಡು ಹೇಳೋಕೆ ಆರಂಭಿಸಿ ಬಿಟ್ಟರು. ಅವರ ರೀತಿ ನೋಡಿದ್ರೆ ಬುದ್ಧಿ ನೆಟ್ಟಗಿಲ್ಲ ಅನ್ನಿಸ್ತು. ಎಷ್ಟು ಹೊತ್ತಾದ್ರೂ ಹೊರಕ್ಕೆ ಬರದೇ ಇದ್ದದ್ದಕ್ಕೆ, ಮತ್ತೆ ಜನ ರೊಚ್ಚಿಗೆದ್ದು ಹೊರಗೆ ಎಳೆದು ಹಾಕಿದರು. ಹೀನಾಮಾನವಾಗಿ ಬೈತಿದ್ರು. ನಾ ಸಮಾಧಾನ ಮಾಡಿ ಕರ್ಕೊಂಡು ಬಂದೆ ಬುದ್ಧಿ" ಎಂದು ಕೈಮುಗಿದ.

"ಪಾಪ! ಯಾರೋ ಏನೋ ಸದ್ಗೃಹಸ್ಥರ ಮನೆ ಹೆಂಗಸಂತೆ ಕಾಣಿಸ್ತಾಳೆ. ಈಗ ಸದ್ಯಕ್ಕೆ ಇರಲಿ. ಆಮೇಲೆ ವಿಚಾರಿಸಿದರೆ ಆಯ್ತು" ಎಂದು, ಮಡದಿಯನ್ನು ಕರೆದು, "ಲೇ ನೋಡೇ, ಈಕೆ ಒಂದೆರಡು ದಿವಸ ನಮ್ಮ ಮನೇಲಿ ಇರ್ತಾರೆ. ನೀನು ಈಕೇನ ಒಳಕ್ಕೆ ಕರ್ಕಂಡು ಹೋಗು" ಎಂದರು.

ಭಾಗೀರಥಮ್ಮನಿಗೆ ಇದೇನು ಇವರಿಗೆ ಬುದ್ಧಿ ನೆಟ್ಟಗಿದೆಯೋ ಇಲ್ಲವೋ ಎನಿಸಿತು. ಭೀಮರಾಯರತ್ತ ನೋಡಿದರು ಭಾಗೀರಥಮ್ಮ. ಭೀಮರಾಯರು ಸುಮ್ಮನೆ ನಕ್ಕು "ಕರ್ಕೊಂಡು ಹೋಗು" ಎಂದು ಹೇಳಿದರು.

ವಿಧಿಯಿಲ್ಲದೆ ಭಾಗೀರಥಮ್ಮ ಆಕೆಯನ್ನು ಕರೆದುಕೊಂಡು ಒಳಗೆ ಹೋದರು. ಶಾರದಾ ಆ ಮನೆಯವರೊಂದಿಗೆ ಹೊಂದಿಕೊಂಡಳು. ನಗುತ್ತಾ, ನಗಿಸುತ್ತಾ, ಹಾಡುತ್ತಾ, ಕುಣಿಯುತ್ತಾ, ವಯಸ್ಸಿನ ಅಂತರವನ್ನೂ ಮರೆತು ಚಿಕ್ಕಮಗುವಿನಂತೆ ಆ ಮನೆಯವರೊಂದಿಗೆ ಹೊಂದಿಕೊಂಡಿದ್ದಳು.

ದಿನ ದಿನದೊಂದಿಗೆ ಭಾಗೀರಥಮ್ಮನಿಗೆ ಆ ಹೆಂಗಸಿಗೆ ಬುದ್ಧಿ ಸರಿಯಿಲ್ಲವೆಂದು ತಿಳಿದುಬಂತು. ವಿಚಿತ್ರ ನಡವಳಿಕೆ ಬಿಟ್ಟರೆ ಬೇರಾವ ರೀತಿಯಿಂದಲೂ ಭಯ ಹುಟ್ಟಿಸುತ್ತಿರಲಿಲ್ಲ.

ಆಕೆ ಬಂದು ಹತ್ತು ದಿನಗಳಾದ ಮೇಲೆ ಆಕೆಯನ್ನು ಹುಡುಕಿಕೊಂಡು ಯಾರೋ ಬಂದರು. ಅಲ್ಲಿನ ಜನ ಅವರನ್ನು ಭೀಮರಾಯರ ಮನೆಗೆ ಕರೆದು ತಂದರು.

ಶಾರದಾ ಮನೆಯಲ್ಲಿರಲಿಲ್ಲ. ಪಕ್ಕದ ಮನೆಗೆ ಹೋಗಿದ್ದಳು. ಬಿಡುವಾಯಿತೆಂದರೆ ಸಾಕು ಊರಿನವರನ್ನೆಲ್ಲಾ ಮಾತಾಡಿಸಿಕೊಂಡು ಬರುತ್ತಿದ್ದಳು. ಎಲ್ಲರಿಗೂ 'ಶಾರದಾ' ಎಂದರೆ ಅನುಕಂಪವಿತ್ತು. ನೋಡಲು ಅಂದವಾಗಿರುವ ಆಕೆಗೊದಗಿದ ದುಃಸ್ಥಿತಿಗೆ ಮರುಗಿದರು.

ಭಾಗೀರಥಮ್ಮ ಬಂದವರನ್ನು ಯಾರು ಬೇಕೆಂದು ಕೇಳಿದಳು. ಆತ ಕೈ ಜೋಡಿಸಿ "ನಾನು ಶಾರದಾಳ ಅಣ್ಣ ಮೋಹನಾಂತ. ಎಂಟು ಹತ್ತು ದಿನಗಳಿಂದ ನನ್ನ ತಂಗಿಗಾಗಿ ಹುಡುಕಾಡಿದಿವಿ. ಪೋಲೀಸ್ ಕಂಪ್ಲೈಂಟ್ ಎಲ್ಲಾ ಕೊಟ್ಟಾಗಿತ್ತು. ಈಗ ಈ ಊರಲ್ಲಿ ಇದ್ದಾಳೆಂದು ಸುದ್ದಿ ಬಂತು. ಅದಕ್ಕಾಗಿ ಬಂದಿದ್ದೀನಿ. ದಯವಿಟ್ಟು ನನ್ನ ತಂಗೀನ ಕಳಿಸಿಕೊಡ್ತೀರಾ?" ಎಂದು ದೈನ್ಯದಿಂದ ಕೇಳಿದರು.

ಭಾಗೀರಥಮ್ಮ ಆತನನ್ನು ಕುಳಿತುಕೊಳ್ಳಲು ಹೇಳಿದರು. ಎರಡು ನಿಮಿಷಗಳಲ್ಲಿ ಪಕ್ಕದ ಮನೆಯಿಂದ ಶಾರದಾಳನ್ನು ಕರೆತಂದರು. ಹಾಗೆಯೇ ಗಂಡನಿಗೂ ಹೇಳೀ ಕಳುಹಿಸಿದರು.

ಅಣ್ಣನನ್ನು ನೋಡುತ್ತಿದ್ದಂತೆಯೇ ಶಾರದಾ ಸಿಟ್ಟಿನಿಂದ, "ನೋ ಕಮಿಂಗ್ ಸ್ವಾಮಿ ಸೇವೆ ಇನ್ನೂ ಫಿನಿಷ್ ಇಲ್ಲ. ನನ್ನ ಹಸ್‌ಬೆಂಡ್ ಬರ್ತಾರೆ – ನೀನು ಗೋ.... ಅಂಡರ್‌ಸ್ಟಾಂಡ್" – ಎಂದು ಏನೇನೋ ವಿಚಿತ್ರ ಇಂಗ್ಲೀಷ್‌ನಲ್ಲಿ ಮಾತಾಡಿದಳು.

"ಶಾರಿ ಹಾಗೆಲ್ಲಾ ಹೇಳಬೇಡ. ಅಪ್ಪ, ಅಮ್ಮ ನಿನಗಾಗಿ ಎಷ್ಟು ಕಾದಿದ್ದಾರೆ ಗೊತ್ತಾ? ಬಾಮ್ಮ ಹೋಗೋಣ" ಎಂದು ಅಂಗಲಾಚಿದ.

"ನನ್ನ ಅಪ್ಪ, ಅಮ್ಮ ಇಲ್ಲೇ ಇದ್ದಾರೆ. ಅಲ್ವೇ ನಮ್ಮ" ಎಂದು ಭಾಗೀರಥಮ್ಮನನ್ನು ಕೇಳಿದಳು.

ಭಾಗೀರಥಮ್ಮನಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಆದರೂ "ಹೋಗು ಶಾರದಮ್ಮ. ನಿಮ್ಮಣ್ಣ ನಿನ್ನನ್ನು ಎಷ್ಟು ಕರೀತಿದಾರೆ. ಅವರ ಮನಸ್ಸು ನೋಯಿಸಬೇಡಮ್ಮ" ಅಂದರು.

"ಇಲ್ಲ ಇಲ್ಲ. ಶಂಕರಪ್ಪ ಹೋಗೋಕೆ ಪರ್ಮಿಷನ್ ಕೊಟ್ಟಿಲ್ಲ. ಎಸ್. ನೋ....." ಎಂದು ತನಗೆ ತಾನೇ ಹೇಳಿಕೊಂಡಳು.

ಶಾರದಳ ಅಣ್ಣನಿಗೆ ಹೇಗೆ ಅವಳನ್ನು ಸಮಾಧಾನ ಪಡಿಸಬೇಕೋ ಅರ್ಥವಾಗಲಿಲ್ಲ. ಏನು ಮಾಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ, "ಅಮ್ಮ ನಾನೊಂದೆರಡು ಹಾಡು

ಹೇಳ್ತೇನೆ" ಎಂದು ಶಾರದಾ ಹಾಡುವುದಕ್ಕೆ ಆರಂಭಿಸಿ ಬಿಟ್ಟಳು. ಜೊತೆಜೊತೆಗೆ ಅಭಿನಯವನ್ನೂ ಶುರುಮಾಡಿದಳು.

ಅಣ್ಣನಿಗೆ ಅವಮಾನವಾದಂತಾಯಿತು. ಅವಳನ್ನು ನೋಡುತ್ತಿದ್ದಂತೆ ಕಂಬನಿ ತುಂಬಿ ಬಂತು. ಪಕ್ಕಕ್ಕೆ ಮುಖ ಮಾಡಿ ತೋಳಿನ ತುದಿಯಿಂದ ಕಣ್ಣೀರೊರೆಸಿಕೊಂಡ. ಭಾಗೀರಥಮ್ಮನಿಗೆ ಕಸಿವಿಸಿಯಾಯಿತು. ಈ ಅಣ್ಣ ತಂಗಿಯರ ಸಂಬಂಧವೇನು? ಆಕೆ ಮನೆಬಿಟ್ಟು ಬರಲು ಕಾರಣವೇನು? ಅವಳೇಕೆ ಹೀಗೆ ತಲೆಕೆಟ್ಟವಳಂತೆ ಆಡುತ್ತಿದ್ದಾಳೆ ಎಂಬುದೊಂದೂ ತಿಳಿಯದೆ ಹೋಯಿತು. ಅವಳನ್ನು ಕೇಳಿದ್ದರೂ ಅವಳ ಮಾತುಗಳು ಅರ್ಥವಿಲ್ಲದವು; ಒಂದಕ್ಕೊಂದು ಸಂಬಂಧವಿಲ್ಲದವು.... ಎಂದು ಆಲೋಚಿಸಿದರು.

ಮೋಹನ ಯೋಚಿಸುತ್ತಲೇ ನಿಂತಿದ್ದ. ಭಾಗೀರಥಮ್ಮ ಒತ್ತಾಯಿಸಿದರು. "ನೀವು ಕುಳಿತುಕೊಳ್ಳಿ. ಈಗಲೇ ಅವರು ಬರುತ್ತಾರೆ. ಮಾತನಾಡಿದ ಮೇಲೆ ಹೋಗುವಿರಂತೆ" ಎಂದರು.

ಭಾಗೀರಥಮ್ಮನ ಮಾತು ಮುಗಿಯುತ್ತಿದ್ದಂತೆ ಭೀಮರಾಯರು ಬಂದರು. ಅವರನ್ನು ಕಂಡಕೂಡಲೇ, ನಮಸ್ಕರಿಸಿದರು. ಭಾಗೀರಥಮ್ಮ ಸ್ವಲ್ಪದರಲ್ಲಿ ಅವರ ಪರಿಚಯ ಹೇಳಿದರು.

'ಮೋಹನ, ಒಂದು ನಿಮಿಷ ಬನ್ನಿ', ಎಂದು ಭೀಮರಾಯರನ್ನು ಹೊರಗೆ ಕರೆದೊಯ್ದು ಮಾತನಾಡಿದ. ಶಾರದೆಯ ಕಥೆ ಹೇಳಿದ.

"ಸಾವಿರಾರು ರೂಪಾಯಿ ಖರ್ಚುಮಾಡಿ ಮದುವೆ ಮಾಡಿದೆವು. ಆಕೆಯ ಗಂಡನೂ ತುಂಬಾ ಒಳ್ಳೆಯ ವ್ಯಕ್ತಿಯಾಗಿದ್ದ. ಜೊತೆಗೆ ಇಂಜಿನಿಯರ್. ನಮ್ಮ ತಂದೆತಾಯಿ ಇಂತಹ ಸಂಬಂಧ ದೊರೆತದ್ದೇ ತಮ್ಮ ಪುಣ್ಯವೆಂದು ಹಿರಿಹಿರಿ ಹಿಗ್ಗಿದರು. ಆದರೆ ದುರಾದೃಷ್ಟ ಮದುವೆಯಾದ ಎರಡು ವರ್ಷಗಳಲ್ಲಿ ಆಕೆಯ ರೀತಿಯೇ ಬದಲಾಯಿಸಿಬಿಟ್ಟಿತು. ಚೆನ್ನಾಗಿದ್ದ ಹುಡುಗಿ ಹುಚ್ಚಳಂತಾದಳು. ಯಂತ್ರ, ತಂತ್ರ, ಮಂತ್ರಗಳಾದವು ಚಿಕಿತ್ಸೆಯಾಯಿತು. ಏನೂ ಪ್ರಯೋಜನವಿಲ್ಲದೆ ಹೋಯಿತು.

ಇಂತಹ ಹುಚ್ಚು ಹೆಂಡತಿಯನ್ನಿಟ್ಟುಕೊಂಡು ಗಂಡ ತಾನೇ ಏನು ಮಾಡಿಯಾನು? ತವರಿಗೆ ಹೋಗೆಂದು ನಮ್ಮ ಮನೆಗೆ ಕಳುಹಿಸಿಬಿಟ್ಟ. ಎಲ್ಲೆಲ್ಲೋ ಜೋತಿಷ್ಯ ಕೇಳಿದ್ದಕ್ಕೆ, ಅವಳ ನಾದಿನಿಯ ಗಾಳಿ ಹಿಡಿದಿದೆಯೆಂದೂ ಕೆಲವರು ಹೇಳಿದರೆ ಮತ್ತೆ ಕೆಲವರು ಯಾರೋ ಮಾಟ ಮಾಡಿಸಿದ್ದಾರೆನ್ನುತ್ತಾರೆ. ಆದರೆ ಒಟ್ಟಿನಲ್ಲಿ ನಮ್ಮ ಕರ್ಮ. ನನ್ನ ತಂಗಿಯ ದೌರ್ಭಾಗ್ಯ.... ಇದ್ದಕ್ಕಿದ್ದಂತೆ ಎಲ್ಲೆಂದರಲ್ಲಿಗೆ ಹೇಳದೆ ಕೇಳದೆ ಬಂದು ಬಿಡುತ್ತಾಳೆ. ನಮಗೆ ಗಾಬರಿ. ತಿಳಿದವಳೂ ಅಲ್ಲ; ತಿಳಿಯದವಳೂ ಅಲ್ಲ. ಏನಾದರೂ ಆಘಾತವಾದರೆ ಹೊಣೆ ಯಾರು? ನಾವು ತಾನೇ? ಅದಕ್ಕೆಂದೇ ಅವಳಿಗೆ ಭದ್ರ

ಕಾವಲಿಟ್ಟಿದ್ದೆವು. ಅಂತಹುದರಲ್ಲಿಯೂ ಹೇಗೋ ತಪ್ಪಿಸಿಕೊಂಡು ಬಂದುಬಿಟ್ಟಿದ್ದಾಳೆ?"..... ಎಂದು ವ್ಯಥೆಯಿಂದ ನುಡಿದ.

ಭೀಮರಾಯರ ಮನಸ್ಸಿಗೂ ತುಂಬ ಕೆಡುಕೆನಿಸಿತು. 'ಬರುವುದೇ ಇಲ್ಲವೆಂದು' ಶಾರದೆ ಹಟ ಹಿಡಿದದ್ದನ್ನು ನೋಡಿ, "ಹೋಗಲಿ ನೀವು ಹೋಗಿ. ಏನೋ ನಮ್ಮ ಶಂಕರನನ್ನು ನಂಬಿದ್ದಾಳೆ. ಒಳ್ಳೆಯದಾದರೂ ಆಗಬಹುದು" ಎಂದು ನುಡಿದರು.

"ನಿಮಗೆ ತುಂಬಾ ತೊಂದರೆ ಕೊಡುತ್ತಿದ್ದಾಳೆ. ನೀವು ಅವಳ ತಂದೆತಾಯಿಯೆಂದು ತಿಳಿದು ಕ್ಷಮಿಸಬೇಕು. ಹೋಗಿ, ನಮ್ಮ ತಂದೆಯವರಿಗೆ ವಿಷಯ ತಿಳಿಸುತ್ತೇನೆ. ಆಗಾಗ ನಾನೂ ಬರುತ್ತಿರುತ್ತೇನೆ. ಅವಳು ಉಳಿದರೆ ಆಯಿತು. ಆದರೆ ಇಲ್ಲಿಂದ ಹೋಗದಂತೆ ನೋಡಿಕೊಳ್ಳುವುದೇ ಕಷ್ಟ" ಎಂದ. "ಬಹುಶಃ ಈ ಜಾಗ ಬಿಟ್ಟು ಆಕೆ ಹೋಗಲಾರಳು. ನಿಮ್ಮ ವಿಳಾಸವನ್ನು ಕೊಟ್ಟು ಹೋಗಿ. ಏನಾದರೂ ಸುದ್ದಿ ತಿಳಿಸಬೇಕಾದರೆ, ಉಪಯೋಗವಾಗುವುದು" ಎಂದರು ಭೀಮರಾಯರು.

ಇವರಿಬ್ಬರೂ ಮಾತನಾಡುತ್ತಿದ್ದರೆ ಶಾರದೆ ಗಜ್ಜುಗವಾಡುತ್ತಿದ್ದಳು. ಮೋಹನ ವಿಳಾಸವನ್ನು ಬರೆದು ಕೊಟ್ಟು "ಬರುತ್ತೇನೆ ಶಾರದ, ಸ್ವಲ್ಪ ಜಾಗರೂಕತೆಯಿಂದಿರು" ಎಂದು ಹೇಳಿ ಹೊರಡಲು ಅನುವಾದ.

"ಹುಂ! ನೀನು ಹೋಗಿ ಬಾ" ಎಂದಳು, ಬೇರೇ ಯಾರಿಗೋ ಹೇಳುವಂತೆ.

* * *

ಭೀಮರಾಯರ ಮನೆಯವರೊಂದಿಗೂ ಶಾರದೆಯ ಮನೆಯವರೊಂದಿಗೂ ಸಂಪರ್ಕವೇರ್ಪಟ್ಟಿತು. ಶಾರದೆ ಭೀಮರಾಯರ ಮನೆಯಲ್ಲಿಯೇ ಉಳಿದು ನಾಲ್ಕು ತಿಂಗಳುಗಳಾಗಿವೆ. ಭೀಮರಾಯ, ಭಾಗೀರಥಮ್ಮ – ಇವರಿಗೆ ಶಾರದೆಯ ಬದುಕಿನ ವಿಚಾರವಾಗಿ ಮೂಡಿದ ಕನಿಕರವೇ ಅವಳನ್ನು ತಮ್ಮಲ್ಲಿ ಉಳಿಸಿಕೊಳ್ಳುವುದಕ್ಕೆ ಪ್ರೇರಕವಾಯಿತು. ತಮ್ಮಲ್ಲಿ ಉಳಿದದ್ದಕ್ಕೆ ಆ ಮಗುವಿಗೆ ವಾಸಿಯಾಗಿ ಎಲ್ಲರಂತೆ ಹಸನಾದ ಬಾಳು ಅವಳದಾದರೆ ಅದೇ ಪುಣ್ಯವೆಂದು ಕೊಂಡರು. ಶಾರದೆಯೊಂದಿಗೆ, ಇವರಿಬ್ಬರ ಪ್ರೀತಿ, ವಾತ್ಸಲ್ಯ, ಅನುಕಂಪೆಗಳು ಅವರ ನಡುವಿನ ಅನುಬಂಧವನ್ನು ಅಗೋಚರವಾದ ರೀತಿಯಲ್ಲಿ ಬಿಗಿದವು.

ಹೊತ್ತಲ್ಲದ ಹೊತ್ತಲ್ಲಿಯೂ ಕೆರೆಯ ದಂಡೆಯುದ್ದಕ್ಕೂ ಓಡಾಡಿ ಬರುತ್ತಿದ್ದ ಶಾರದೆಯ ಬಗ್ಗೆ, ಮೊದಲಿಗೆ ಭೀತಿ ಹೊತ್ತ ಭಾಗೀರಥಮ್ಮ, ಕ್ರಮೇಣ ದೇವರ ಮೇಲೆ ಅವಳ ಭಾರ ಹೊರೆಸಿ ನೆಮ್ಮದಿಯಿಂದ ಇರತೊಡಗಿದರು. ಎಷ್ಟು ತಿಳಿಸಿ ಹೇಳಿದರೂ ತನ್ನ ರೀತಿಯನ್ನು, ಅಕಾಲ ತಿರುಗಾಟವನ್ನು ಬಿಡದ ಶಾರದೆಯ ಜವಾಬ್ದಾರಿ ತೀರಾ ಪ್ರಯಾಸಕರವಾಗುತ್ತಿತ್ತು. ಆದರೂ ವಿಧಿಯಿಲ್ಲದೆ, ಅವಳಿಷ್ಟದಂತೆ ಬಿಟ್ಟುಬಿಟ್ಟಿದ್ದರು.

ಒಂದು ದಿನ ಅಮಾವಾಸ್ಯೆಯ ಕಾರ್ಗತ್ತಲ ರಾತ್ರಿ, ಜೊತೆಗೆ ಬಿರುಸಾದ ಮಳೆ. ಮಳೆಯ ಕಾರಣದಿಂದ ಶಂಕರನ ಗುಡಿಯ ಪರಿಸರವೂ ಬೋಳು ಬೋಳಾಗಿದೆ. ಕೆರೆಯ ಕಟ್ಟೆಯ ಮೇಲೆ ನಡೆಯುವ ಜನರೂ ಇಲ್ಲವಾಗಿದ್ದಾರೆ. ಇಂತಹ ಮಳೆಯಲ್ಲಿ, ಕಟ್ಟೆಯ ಮೇಲೆ ನಡೆದು ಬರಬೇಕಾದರೆ ಸಾಹಸವೇ ಸರಿ! ಮಳೆಯಿಂದ ಕಟ್ಟೆಯ ಮಣ್ಣು ಕೊಚ್ಚೆಯಾಗಿ ಪರಿಣಮಿಸಿರುವುದರ ಕಾರಣ ಅದರ ಮೇಲೆ, ಇಕ್ಕಟ್ಟಾದ ಆ ಹಾದಿಯಲ್ಲಿ ನಡೆಯುವುದು ಅಪಾಯವನ್ನು ಸ್ವಾಗತಿಸುವುದಾಗಿರುತ್ತದೆ. ನಡೆಯುವವರು ಕೋಲೂರಿಕೊಂಡು ಬಲವಾದ ಹೆಜ್ಜೆಯಿಟ್ಟು ಎಚ್ಚರಿಕೆಯಿಂದ ನಡೆಯದಿದ್ದರೆ, ಈಚೆಕಡೆಯ ಕೆರೆಯೋ ಇಲ್ಲವೇ ಆಚೆ ಕಡೆಯ ಆಳದ ಗದ್ದೆಯೋ ಗತಿಯಾಗುವುದು ಖಂಡಿತ.

ಬೆಳಗಿನಿಂದಲೂ ಹಿಡಿದ ಮಳೆ ಬಿಡಲಿಲ್ಲ. ಭಾಗೀರಥಮ್ಮನಿಗೆ ಶಾರದೆಯ ಚಿಂತೆ ಹತ್ತಿತ್ತು. ಒಂದು ಕ್ಷಣವೂ ಮನೆಯಲ್ಲಿ ನಿಲ್ಲದೆ ಎಲ್ಲಿಗಂದರೆ ಅಲ್ಲಿಗೆ ಎದ್ದು ಬಿಡುತ್ತಿದ್ದಳು. ಮಾಮೂಲಾಗಿ ಶಂಕರನ ಸಮಾಧಿಯ ಸನ್ನಿಧಿಯಲ್ಲಿ ಹುಚ್ಚುಚ್ಚಾಗಿ ಹಾಡುತ್ತಾ, ಕುಣಿಯುತ್ತಾ, ಇಲ್ಲವೇ ಲೆಕ್ಕವಿಲ್ಲದಷ್ಟು ಬಾರಿ ಗುಡಿಯ ಸುತ್ತು ಸುತ್ತುತ್ತಾ ಇದ್ದುಬಿಡುತ್ತಿದ್ದಳು. ಎಂದೋ ಮನಸ್ಸು ಬಂದಾಗ ಮರಳುತ್ತಿದ್ದುದು ಮನೆಗೆ. ಶಂಕರಾಪುರವೇ ಅವಳಿಗೆ ಆತ್ಮೀಯವಾಗಿತ್ತು. ಅವಳ ಇತಿಹಾಸವು ಊರಿಗೆಲ್ಲಾ ತಿಳಿದುಹೋಗಿದ್ದರಿಂದ, ಸದ್ಗೃಹಸ್ಥ ಮನೆಯ ಹೆಂಗಸಾದ್ದರಿಂದ ಅಲ್ಲಿನವರೆಲ್ಲಾ ಅವಳ ಬಗ್ಗೆ ಅನುಕಂಪೆ ತೋರುತ್ತಿದ್ದರು. ಅವಳು ಬೇಕು ಬೇಕೆಂದು ಬಯಸಿದ್ದನ್ನೆಲ್ಲಾ ಅಲ್ಲಿನ ಅಂಗಡಿಯವರು ಸಾಲ ಬರೆದುಕೊಂಡು ಕೊಟ್ಟುಬಿಡುತ್ತಿದ್ದರು, ಆಗಾಗ ಶಾರದೆಯ ಅಣ್ಣ ಬಂದು, ಅವಳ ಲೆಕ್ಕದ ಸಾಲವನ್ನೆಲ್ಲಾ ತೀರಿಸಿ, ಅವಳ ವಿಚಾರವಾಗಿ ಗಮನವಿರಲೆಂದು ಹೇಳೀ ಹೋಗುತ್ತಿದ್ದ. ಹೀಗಾಗಿ ಯಾರಿಗೂ ಅವಳ ವಿಷಯವಾಗಿ ತೊಂದರೆಯಿಲ್ಲದಿದ್ದ ಕಾರಣ ಅವಳೊಂದಿಗೆ ಪ್ರೀತಿಯಿಂದಲೇ ನಡೆದುಕೊಳ್ಳುತ್ತಿದ್ದರು.

ಭಾಗೀರಥಮ್ಮನಿಗೂ ಈ ವಿಚಾರ ತಿಳಿದಿತ್ತು. ಆದರೆ ಇಂತಹ ರಾತ್ರಿಯಲ್ಲಿ ಶಾರದೆ ಮನೆಗೆ ಹೇಗೆ ಮರಳುತ್ತಾಳೆಂದೇ ಚಿಂತಿಸಿದರು. ಬೇಡ ಬೇಡವೆಂದು ಬೇಡಿಕೊಂಡರೂ, ಹೇಗೋ ಧೈರ್ಯದಿಂದ ಸಂಜೆ ಮನೆಬಿಟ್ಟು ಹೊರಟುಹೋಗಿದ್ದಳು. ಅವಳ ಬರವಿಗಾಗಿಯೇ ಭೀಮರಾಯರು, ಭಾಗೀರಥಮ್ಮ, ಮೈಯೆಲ್ಲಾ ಕಣ್ಣಾಗಿ ಕಾದು ಕುಳಿತರು. ಅವಳು ಮನೆ ಬಿಟ್ಟು ಹೋದ ಮೇಲೆ ಮಳೆ ಇನ್ನಷ್ಟು ಜೋರಾಗಿತ್ತು. 'ಧೋ, ಧೋ' – ಎಂದು ಬೀಳುತ್ತಿತ್ತು. ನರಪಿಳ್ಳೆಯೂ ಓಡಾಡುವ ಸಾಹಸ ಮಾಡುತ್ತಿರಲಿಲ್ಲ. ಅಂತಹ ವಾತಾವರಣದಲ್ಲಿ ಇವಳೇನಾದರೂ ಬುದ್ಧಿಗೆಟ್ಟು, ಸಾಹಸಪಟ್ಟರೆ, ಅಪಾಯ ಸಂಭವಿಸುವುದು ಖಾತ್ರಿ, ಪರಿವೆಯಿಲ್ಲದ ಅವಳ ಹುಚ್ಚು ಓಟ ಹೆಜ್ಜೆ ತಪ್ಪಿಸಿ ಖಂಡಿತ ಅವಳಿಗೆ ಅನಾಹುತ ಸಂಭವಿಸುವಂತೆ ಮಾಡುತ್ತದೆ. ಅದಕ್ಕಾಗಿ ಭಾಗೀರಥಮ್ಮ, ಭೀಮರಾಯರು ಹೆದರಿದರು. ಯಾರೂ ಹೋಗುವಂತಿಲ್ಲ, ಅವಳನ್ನು ಹುಡುಕಲು ಮಳೆಯೂ ನಿಲ್ಲುವಂತಿಲ್ಲ. ಗಂಟೆ ಎಂಟಕ್ಕೂ ಮೀರಿದೆ.

ಭೀತಿ ಹುಟ್ಟಿಸುವ ಈ ಕಾರ್ಗತ್ತಲ ರಾತ್ರಿಯಲ್ಲಿ ಕಟ್ಟೆಯ ಮೇಲೆ ಕೇಳಿಬರುತ್ತಿರುವ ಶಬ್ದವೆಂದರೆ ಮಳೆಯದೇ! ಹುಳು ಹುಪ್ಪಟಿಗಳ 'ಜುಯ್' ಶಬ್ದವಾಗಲೀ, ಕಪ್ಪೆಗಳ ವಟಗುಟ್ಟುವಿಕೆಯಾಗಲೀ ಕೇಳುತ್ತಿಲ್ಲ.

ಬರೀ ಕತ್ತಲು ಮರ, ಗಿಡ, ನೀರು – ಏನೂ ಕಾಣುವುದಿಲ್ಲ. ಎಲ್ಲವೂ ಕತ್ತಲ ಕಪ್ಪಿನಲ್ಲಿ ಕರಗಿಹೋಗಿದೆ.

ಶಾರದೆಗೆ ಇದ್ಯಾವುದರ ಪರಿವೆಯೂ ಇಲ್ಲ. ಮಳೆ, ಕತ್ತಲು – ಯಾವುದೂ ಅವಳ ಅನುಭವಕ್ಕೆ ಬರುತ್ತಿಲ್ಲ. ಅವಳ ಕಾಲುಗಳು ಯಾಂತ್ರಿಕವಾಗಿ ಅಭ್ಯಸ್ತ ಹಾದಿಯಾದ ಕಟ್ಟೆ ಮೇಲೆ ನಡೆದಿವೆ. ಯಾವುದೋ ಅಮಾನುಷ ಧೈರ್ಯ ಶಕ್ತಿಗಳು ಅವಳನ್ನು ಮುತ್ತಿ ಓಡತೊಡಗಿದಳು. ಕೆಸರೆಂದರೆ ಕೆಸರು ಜಾರುತ್ತಿದ್ದಾಳೆ; ಬೀಳುತ್ತಿದ್ದಾಳೆ. ಮತ್ತೆ ಏಳುತ್ತಿದ್ದಾಳೆ; ಓಡುತ್ತಿದ್ದಾಳೆ. ಯಾರೂ ಇಲ್ಲದ ಆ ನಿರ್ಜನ ಹಾದಿಯೇ ಇವಳ ಈ ಓಟದಿಂದ ಹೆದರಿದಂತಿದೆ. ಬಿದ್ದು ಸಾವರಿಸಿಕೊಂಡು ಓಡಲು ಹೆಜ್ಜೆ ಮುಂದೆ ಹಾಕಿದಳೋ ಇಲ್ಲವೋ ಜಾರಿದಳು. ಕಿಟ್ಟನೆ ಕಿರುಚಿದಳು. ಅಷ್ಟೇ! ಕೆರೆಯೊಳಗೆ ಬೀಳಲಿದ್ದ ಅವಳೊಡಲನ್ನು ಅದೃಶ್ಯ ಕೈಗಳು ಹಿಡಿದವು.

ಮಳೆ ಮಂಗ ಮಾಯವಾಯಿತು. ಶಾರದೆ ಊರ ತಿರುವಿನಲ್ಲಿ ನಿಂತಿದ್ದಳು. ವಿಪರೀತ ಭಯವಾಯಿತು ಅವಳಿಗೆ. ಇಂಥ ಅಪರಾತ್ರಿಯಲ್ಲಿ, ಕಾರ್ಗತ್ತಲಲ್ಲಿ ತಾನೇಕೆ ಇಲ್ಲಿ ನಿಂತಿದ್ದೇನೆಂದು ಯೋಚಿಸಿದಳು. ಛಿ! ಛಿ! ಎಂತಹ ನಾಚಿಕೆಗೇಡಿತನ? ಎಂದುಕೊಂಡು ಭಯ, ಸಂಕೋಚಗಳಿಂದ ಊರೊಳಗೆ ನಡೆದಳು. ಇದ್ದಕ್ಕಿದ್ದಂತೆ ಮಳೆ ನಿಂತಿದ್ದರಿಂದ, ಭೀಮರಾಯರು ತಮ್ಮಾಳು ರಾಚ, ಪಕ್ಕದ ಮನೆಯ ಬಸ್ಯಾನನ್ನು ಕರೆದು ಶಾರದೆಯನ್ನು ಹುಡುಕಿ ತರಲು ಹೇಳಿದರು. ಅವರಿಗೂ ಶಾರದೆಯ ವಿಚಾರವಾಗಿ ಕನಿಕರವೆನಿಸಿತ್ತು. ಭೀಮರಾಯರು ಹೇಳಿದ್ದೇ ತಡ, ಇಬ್ಬರೂ ಲಾಟೀನು ಹಚ್ಚಿಕೊಂಡು ಕೈಗಳಲ್ಲಿ ಒಂದೊಂದು ಕೋಲು ಹಿಡಿದು ನಡೆದರು.

ಮನೆಯಿಂದ ಒಂದಿಪ್ಪತ್ತು ಹೆಜ್ಜೆಯನ್ನೂ ಇಟ್ಟಿದ್ದರೋ ಇಲ್ಲವೋ, ಲಾಟೀನು ಬೆಳಕಿನಲ್ಲಿ ಯಾರೋ ತಮಗೆದುರಾಗಿ ಬರುತ್ತಿದ್ದುದನ್ನು ನೋಡಿದರು. ಯಾರಿರಬಹುದೆಂದು, ಲಾಟೀನು ಬೆಳಕನ್ನು ದೊಡ್ಡದು ಮಾಡಿ ನೋಡಿದರು. ಅರೆ! ಶಾರದವ್ವ ನಂತಿದ್ದಾರೆ! – ಎಂದು ಬೆರಗಿನಿಂದ ಬಾಯಿ ಬಿಟ್ಟರು. ಒಂದು ಕಡೆ ಆಶ್ಚರ್ಯ! ಮತ್ತೊಂದು ಕಡೆ ಸಂಶಯ! – ಕತ್ತಲರಾತ್ರಿಯಲ್ಲಿ, ಅವರಿಗೆ ಅದು ದೆವ್ವವಿದ್ದರೆ? – ಎನ್ನುವ ಯೋಚನೆ ಹೊಳೆದು ಕಂಪಿಸಿದರು. ಆದರೂ ಧೈರ್ಯ ತಂದುಕೊಂಡು ಮೆಲ್ಲಗೆ 'ಶಾರದವ್ವ! ಶಾರದವ್ವ' – ಎಂದು ಕೂಗಿದರು. ಇವರ ಕೂಗಿನಿಂದ ನಡೆದು ಬರುತ್ತಿರುವ ಶಾರದೆಯ ಕಾಲುಗಳಿಗೆ ಶಕ್ತಿ ಮತ್ತು ಧೈರ್ಯ ಬಂದಂತಾಗಿ ವೇಗವಾದ ಹೆಜ್ಜೆ ಹಾಕುತ್ತಾ ಎರಡು ನಿಮಿಷಗಳಲ್ಲಿ ಇವರ ಬಳಿಗೆ ಬಂದಳು. ಆದರೆ ಚಳಿಯಿಂದ ನಡುಗುತ್ತಿದ್ದಳು. ಜೊತೆಗೆ ಹೆದರಿದಂತೆಯೂ ಕಾಣಿಸಿದಳು.

ರಾಚ ಕೇಳಿದ, "ಶಾರದವ್ವ ಬೇಗ ಬನ್ನಿ, ಅಯ್ಯ, ಅವ್ವ ನಿಮಗಾಗಿ ಕಾಯುತ್ತಿದ್ದಾರೆ" ಎಂದು ಆತುರಪಡಿಸಿದ. ರಾಚನಿಗೆ, ಇಷ್ಟು ಮಳೆ, ಇಂಥ ರಾತ್ರಿಯಲ್ಲಿ ಇವಳೊಬ್ಬಳೇ ಕಟ್ಟೆಯ ಮೇಲೆ ಹೇಗೆ ಬಂದಳೆಂದು ಕೇಳುವ ಕುತೂಹಲ. ಆದರೆ ಈಗಲೇ ಅವಳನ್ನು ಮಾತಾಡಿಸಲು ಧೈರ್ಯ ಬರಲಿಲ್ಲ.

ಶಾರದೆ ರಾಚನನ್ನು ಹಿಂಬಾಲಿಸಿದಳು. ಇವರು ಮನೆ ಸೇರುವ ವೇಳೆಗೆ ಭೀಮರಾಯರು, ಭಾಗೀರಥಮ್ಮ ಎದುರು ಕಾಯುತ್ತಿದ್ದರು.

ಶಾರದೆಯನ್ನು ನೋಡಿದ ಕೂಡಲೇ ಭಾಗೀರಥಮ್ಮನಿಗೆ ಹೋದ ಜೀವ ಬಂದಂತಾಯಿತು. "ಬಂದೆಯಾ ಶಾರದ? ನಿನಗಾಗಿ ನಮ್ಮ ಪ್ರಾಣವೇ ಹಾರಿ ಹೋಗಿತ್ತು. ಈ ಮಳೆ, ಈ ರಾತ್ರೀಲಿ ಕಟ್ಟೆಯ ಮೇಲೆ ಹೇಗೆ ಬಂದೆ ಶಾರದ?" ಎಂದು ಬೆರಗಿನಿಂದ ಕೇಳಿದರು ಭಾಗೀರಥಮ್ಮ.

ಶಾರದೆ ಈ ಪ್ರಶ್ನೆಯಿಂದ, ತಾನೂ ವಿಚಾರಮಾಡುವಂತೆ ಕಾಣಿಸಿದಳು. ಕೊನೆಗೆ – "ಏನೋಮ್ಮ, ನನಗೊಂದೂ ತಿಳಿಯಲಿಲ್ಲ. ಅದು ಹೇಗೆ ಬಂದೆನೋ ಏನೋ ಒಂದೂ ಗೊತ್ತಿಲ್ಲ. ನನಗೆ ಎಚ್ಚರವಾದಾಗ ಊರಿನ ತಿರುವಿನಲ್ಲಿ ನಿಂತಿದ್ದೆ – ನನಗೆ ಭಯವಾಯಿತು. ಜೊತೆಗೆ ಅಲ್ಲಿಗೆ ನಾನೊಬ್ಬಳೇ ಹೇಗೆ ಬಂದೆನೆಂದು ವಿಚಾರಿಸಿದೆ. ಏನೂ ಹೊಳೆಯಲಿಲ್ಲ. ಆದರೆ ನನಗೊಂದು ಕನಸು ಬಿದ್ದಂತಾಯಿತು. 'ಕಟ್ಟೆಯ ಮೇಲೆ ನಡೆದು ಬರುತ್ತಿದ್ದೆ. ಭೀತಿ ಹುಟ್ಟಿಸುವ ನೀರವತೆ ಕವಿದಿತ್ತು. ಎಲ್ಲಿ ನೋಡಿದರೂ ಸೂಜಿ ಮೊನೆ ಬೆಳಕೂ ಕಾಣುತ್ತಿರಲಿಲ್ಲ. ಆದರೂ ನಡೆಯುತ್ತಿದೆ. ಇದ್ದಕ್ಕಿದ್ದಂತೆ ಮಳೆ ಬಂದದ್ದಕ್ಕೆ ಓಡಿದೆ. ಕಾಲು ಜಾರಿ ಕೆರೆಯಲ್ಲಿ ಬಿದ್ದೆ. ಭಯದಿಂದ ಚೀರಿದೆ. ಯಾವುದೋ ಬೆಳಕು ಮೂಡಿ ಬಂತು. ಅದಕ್ಕೆ ಕೈ ಕಾಲು ಹುಟ್ಟಿಕೊಂಡು ಮನುಷ್ಯಾಕಾರವನ್ನು ತಳೆಯಿತು. ಎರಡೂ ಕೈ ಮುಂದೆ ಬಂದು ನನ್ನನ್ನು ಹಿಡಿಯಿತು. 'ಹೆದರಬೇಡ ಮಗಳೆ ನಾನಿದ್ದೇನೆ, ಎಂದಂತಾಯಿತು. ಭೀತಿ ಕಳೆದು, ಕಣ್ಣು ಬಿಟ್ಟೆ. 'ನೀನರಸಿ ಬಂದ ಸಂಜೀವಿನಿ; ನಾನೊಂದು ಚೇತನ; ನಿಮ್ಮ ಶ್ರದ್ಧೆ, ನಂಬಿಕೆ, ವಿಶ್ವಾಸಗಳಿಂದಲೇ ಪುಷ್ಟಿ ಪಡೆಯುತ್ತಿರುವ ಅಮೃತ ತತ್ವ; ಪರಿಪೂರ್ಣ ಸತ್ವ. ನಿಮ್ಮ ಕರ್ಮಾನುಸಾರದಂತೆ ನಿಮಗೆ, ನಿಮ್ಮ ಸಮಸ್ಯೆಗಳಿಗೆ ಉಪಶಮನವೀಯುವ ಒಂದು ಬೆಳಕಿನ ಕಿಡಿ!.... ಮಗಳೆ, ಇನ್ನು ನೀನಿಲ್ಲಿ ನಿಲ್ಲಬೇಡ. ನಿನ್ನ ಕರ್ಮ ಸವೆದು ನಿನಗೆ ಈಗ ಗುಣಮುಖವಾಗಿದೆ. ನಿನ್ನ ಬೇನೆ, ಬೇಸರಗಳು ಮುಗಿದವು. ಇನ್ನು ಮರಳು' ಎಂದು ಹೇಳುತ್ತಾ ನನ್ನ ತಲೆ ನೇವರಿಸಿದಂತಾಯಿತು. ಅದರ ಮೇಲೆ ಏನಾಯಿತೋ ನನಗೆ ತಿಳಿಯಲಿಲ್ಲ. ಎಚ್ಚರವಾಗಿ ಕಣ್ಣು ಬಿಟ್ಟರೆ ತಿರುವಿನಲ್ಲಿ ಇದ್ದದ್ದು ಮಾತ್ರ ಅನುಭವವಾಯಿತು" –ಎಂದು ಕತೆಯಂತೆ ತನ್ನ ಕನಸನ್ನು ಹೇಳಿದಳು.

ಭಾಗೀರಥಮ್ಮ ಭೀಮರಾಯರು ರೋಮಾಂಚಿತವಾಗಿ ಕೇಳಿದರು. ನಿಜ. ಶಂಕರ ಅವಳಿಗೆ ಅನುಗ್ರಹಿಸಿದ್ದಾನೆ – ಎಂದುಕೊಂಡರು.

ಆ ರಾತ್ರಿ ಶಾರದೆ ಪ್ರಶಾಂತವಾಗಿ ಮಲಗಿದಳು.

ಮರುದಿವಸ ಪೂರ್ಣಗೆಲುವಿನಿಂದ ಶಾರದೆ ಎದ್ದು ಪೂರ್ಣಾಸಕ್ತಿಯಿಂದ ಅಲಂಕರಿಸಿಕೊಂಡಳು. ಪೂರ್ತಿಯಾಗಿ ತಾನಲ್ಲಿಗೆ ಬಂದುದರ ಕಾರಣವನ್ನು ಅರ್ಥಮಾಡಿಕೊಂಡು, ತನ್ನ ನಡತೆಗಾಗಿ ನಾಚಿದಳು. ಇನ್ನು ಅಲ್ಲಿದ್ದು ಅವರಿಗೆ ತೊಂದರೆ ಕೊಡುವುದು ಸರಿಯಲ್ಲವೆಂದು ತಿಳಿದು, ಅಂದು ತಾನು ತನ್ನೂರಿಗೆ ಹೋಗುವುದಾಗಿ ತಿಳಿಸಿದಳು. ಭೀಮರಾಯರು, ಭಾಗೀರಥಮ್ಮ ಈಕೆಯು ಆಕಸ್ಮಿಕವಾಗಿ ಗುಣಮುಖವಾದ್ದನ್ನು ನೋಡಿ ಮಂತ್ರಮುಗ್ಧರಂತಾದರು.

ಭೀಮರಾಯರಿಗೆ, ಶಂಕರನಲ್ಲಿ ಇಂತಹ ಅಮಾನುಷ ಶಕ್ತಿ ಇತ್ತೆ? ಎಂದು ಯೋಚಿಸಿದರು. ಬದುಕಿದ್ದಾಗ ಕೇವಲ ಈ ನೆಲದ ಮನುಷ್ಯನಂತೆ ಇದ್ದ. ಸಾವಿರಾರು ಮಂದಿಯ ನಂಬಿಕೆ, ಶ್ರದ್ಧೆಗಳು ಸುಳ್ಳಾಗಲಾರವು. ತಮ್ಮ ಕಣ್ಣ ಮುಂದೆಯೇ ಪರಪುಟ್ಟನಂತೆ ಬಾಳಿ ಬದುಕಿದ ಯಃಕಶ್ಚಿತ್ ಅರೆಮರುಳ ವ್ಯಕ್ತಿಯೊಬ್ಬ ಇಂದು ಸಾವಿರಾರು ಮಂದಿಯ ಆರಾಧ್ಯ ದೈವವಾಗಿ ಪ್ರತಿಷ್ಠಿತನಾಗಿದ್ದಾನೆ.... ನಿಜ ಪರಮಪುರುಷರ ಸೃಷ್ಟಿ ರಹಸ್ಯ ಅಭೇದ್ಯ. ಇವನು ನೆಲ–ಬಾನುಗಳ ಸೇತುವೆಯಾಗಿದ್ದಿರಬೇಕು.... ಖಂಡಿತ.... ಈ ಮರುಳ ಶಂಕರ ನೆಲದ ಹೂವು – ಆದರೆ ಅದಕ್ಕೆ ಇರುವುದು ದಿವ್ಯ ಕಂಪು; ಪೆಂಪು... ಎಂದೆಲ್ಲಾ ಯೋಚಿಸಿದರು. ಯೋಚಿಸಿದಷ್ಟೂ ಸಮಾಧಾನ, ಅಸಮಾಧಾನಕರವಾಗಿಯೇ ಪರಿಣಮಿಸಿತು. ಕೊನೆಗೆ, 'ಅದು ಹೇಗಾದರೂ ಇರಲಿ, ಬಂದಷ್ಟು ಮಂದಿಯಾದರೂ ಅವನಿಂದ ತಮ್ಮ ಬದುಕಿನಲ್ಲಿನ ಬೇನೆ, ಸಮಸ್ಯೆಗಳಿಗೆ ಪರಿಹಾರ ಪಡೆಯುತ್ತಿರುವರಲ್ಲ.... ಅಷ್ಟೇ ತೃಪ್ತಿ' ಎಂದುಕೊಂಡರು.

ಶಾರದೆಯೊಬ್ಬಳನ್ನೇ ಕಳಿಸಿಕೊಡುವುದು ಭೀಮರಾಯರ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಶಾರದೆಯ ಅಣ್ಣ, ಮೋಹನನಿಗೆ ತಂತಿ ಕೊಟ್ಟು ಕರೆಸಿದರು. ಮೋಹನ ತಂಗಿಗೆ ಏನಾಗಿದೆಯೋ – ಎಂಬ ಭೀತಿಯಿಂದಲೇ ಓಡೋಡಿ ಬಂದಿದ್ದ. ಆದರೆ ಬಂದ ಮೇಲೆ ಶಾರದೆಯಲ್ಲಿನ ಅದ್ಭುತ ಪರಿವರ್ತನೆಯನ್ನು ಕಂಡು ಮೋಹನನಿಗೆ ಆನಂದೋದ್ವೇಗದಿಂದ ಮಾತು ಹೊರಡದಾಯಿತು. ಕೂಡಲೇ ಆ ಭಾವನೆ ಕಂಬನಿಯ ಕಡಲಾಗಿ ಉಕ್ಕಿ ಹರಿಯಿತು. ಕೊಚ್ಚಿ ಹೋಗುವ ಸಂತೋಷದಿಂದ ಶಾರದೆಯನ್ನು ಬರಸೆಳೆದು ಬಿಗಿದಪ್ಪಿದ.

"ಶಾರಿ, ದೈವವನ್ನೇ ನಂಬದ ನನ್ನ ವಿಚಾರಗಳನ್ನೆಲ್ಲಾ ನಿನ್ನ ಶಂಕರ ಬುಡಮೇಲು ಮಾಡಿದನಲ್ಲೆ?! ನಿನ್ನ ಶಂಕರನಿಗೆ ಅಷ್ಟೊಂದು ಅದ್ಭುತ ಶಕ್ತಿಯಿರುವುದಾದರೆ, ಈ ಬದುಕನ್ನೇ ಖಂಡಿತವಾಗಿಯೂ ಕಿತ್ತೊಗೆಯಬಲ್ಲೆ. ಇರುವೊಬ್ಬ ತಂಗಿಯುನ್ನು ಉಳಿಸಿಕೊಟ್ಟನಲ್ಲಾ!! ನಿಜವಾಗಿಯೂ ಇವನೊಬ್ಬ ಪವಾಡ ಪುರುಷನೇ!!! ನೆಲದ ಬಸಿರೊಡೆದು ಬೇರು ಇಳಿಸಿ ಬೆಳೆದವನಾದರೂ ಅವನ ಹೂಮುಡಿ ಅರಳಿರುವುದು ಮಾತ್ರ ಬಾನಿನಂಗಳದಲ್ಲಿ. ಇವನೊಂದು ದೇವಮಂದಾರ! ಕೇವಲ ಕಂಪಿನ ಹನಿಯೊಂದನ್ನು ಹೀರಿದರೂ ಸಾಕು, ಬೇಸತ್ತ ಬದುಕುಗಳಿಗೆ ಸಂಜೀವಿನಿಯಾಗಬಲ್ಲುದು. ನೆಲ ಮುಗಿಲುಗಳನ್ನು ಸೇರಿಸುವ ಸೌರಭ ಸೇತುವೆಯಾಗಿದ್ದಾನೆ; ಮುಮುಕ್ಷುಗಳು ಮುಗಿಲಿಗೇರಲು ಏಣಿಯಾಗಿದ್ದಾನೆ' – ಎಂದೆಲ್ಲಾ ತೀರಾ ಭಾವುಕನಾಗಿ ನುಡಿಯ ತೊಡಗಿದ.

ಅಣ್ಣ – ತಂಗಿಯರ ಈ ಮಿಲನ ಸಂಭ್ರಮವನ್ನು ನೋಡುವುದೇ ಭಾಗೀರಥಿ, ಭೀಮರಾಯರ ಕಣ್ಣಿಗೆ ಹಬ್ಬವಾಯಿತು.

ಭಾಗೀರಥಮ್ಮ ಇಬ್ಬರನ್ನೂ ಊಟೋಪಚಾರಗಳಿಂದ ಸತ್ಕರಿಸಿದಳು. ಶಾರದೆಗೆ ಮಂಗಳ ದ್ರವ್ಯಗಳಿಂದ ಕೂಡಿದ ಬಾಗಿನವನ್ನು ಕೊಟ್ಟು "ನೂರ್ಕಾಲ ತುಂಬು ಬದುಕನ್ನು ಬಾಳು" ಎಂದು ಹೃದಯ ತುಂಬಿ ಹರಿಸಿದಳು.

ಅಣ್ಣ–ತಂಗಿಯರಿಬ್ಬರೂ ಅವರಿಗೆ ನಮಸ್ಕರಿಸಿ, ತಮ್ಮ ಕೃತಜ್ಞತೆಯನ್ನು ತಿಳಿಸಿ ಹೊರಟರು. ಅಷ್ಟರಲ್ಲಿ ಗುಡಿಯ ಗಂಟೆಗಳು ನುಡಿದವು. – "ಶಂಕರ ಸಾವಿಲ್ಲದ ತತ್ವವಾಗಿ, ದಿವ್ಯ ಸತ್ಯವಾಗಿ ಉಳಿದ; ಬೆಳೆದ. ದೈವದಲ್ಲಿನ ನಂಬಿಕೆ, ಶ್ರದ್ಧೆಗಳು ಸಾಯುತ್ತಿರುವ ಈ ಯುಗದಲ್ಲಿ ಅಸಂಖ್ಯ ಮನುಷ್ಯರ ಹೃದಯಗಳಲ್ಲಿ 'ಅಚಲ ಶ್ರದ್ಧೆಯನ್ನು ಪ್ರಚೋದಿಸುತ್ತಿರುವ ಸಾಮಾನ್ಯ ಶಂಕರನ ಅಸಾಮಾನ್ಯ ಆತ್ಮದ ಪವಾಡವಾಗಿದೆ. ಇದನ್ನು ಯಾರಿಂದಲೂ ಅಲ್ಲಗಳೆಯಲು ಸಾಧ್ಯವಾಗುತ್ತಿಲ್ಲವೆನ್ನುವುದು ಸತ್ಯವಾದರೂ ಇದೆಲ್ಲಾ ಹೇಗಾಗುತ್ತಿದೆ?.... ಹೇಗಾಯಿತು?– ಎನ್ನುವುದಂತೂ ಭೀಮರಾಯರಿಗೆ ಸ್ಪಷ್ಟವಾಗಲಿಲ್ಲ.

ಜನರೆಬ್ಬಿಸಿರುವ ವದಂತಿಗಳಲ್ಲಿ, ಪ್ರತ್ಯಕ್ಷವಾಗಿ ಕಾಣುತ್ತಿರುವ ಇಂತಹ ಪರಿಣಾಮಗಳಲ್ಲಿ, ನಂಬುವುದೆಷ್ಟು? ಬಿಡುವುದೆಷ್ಟು?– ಯೋಚನೆ ಮಾಡಿದಷ್ಟೂ ಅರ್ಥ ನಿಗೂಢವಾಗುತ್ತಿತ್ತು. ಹೆಸರು, ಕುಲ, ಗೋತ್ರ ಊರು ಗೀರು – ಏನೂ ತಿಳಿಯದ ಅಜ್ಞಾತ ವ್ಯಕ್ತಿಯೊಬ್ಬನು ಈ ಊರನ್ನು ಅರಸಿ ಆರಿಸಿಕೊಂಡು ಬಂದು ಬದುಕಿದ್ದಾಗ, ಕಾಣಿಸದ ಪವಾಡಗಳನ್ನು ಸಾವಿನಾನಂತರ ಮೆರೆಯುತ್ತಿರುವುದರಲ್ಲಿ ಅಡಗಿರುವ ಉದ್ದೇಶವಾದರೂ ಏನು? ಒಂದು ಮಹಾಚೇತನದ ಮುಸುಕಿನ ಮರೆಯ ಲೀಲೆಗಳೇ ಹೇಗೆ? ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಂಡರು. ತೀರಾ ನಾಸ್ತಿಕರೂ

ಅಲ್ಲದ ಆಸ್ತಿಕರೂ ಅಲ್ಲದ ಭೀಮರಾಯರ ಮನಸ್ಸಿನಲ್ಲಿ ವಿಚಾರ ಸಂಚಲನ ಉಂಟಾಗಿ, ಅದರ ನಡುವಿನಿಂದ ಪ್ರಶ್ನೆಯಾಕಾರವೊಂದು ದೊಡ್ಡದಾಗಿ ಮೂಡಿ ನಿಂತಿತು.

ಅದೇ ಹೊತ್ತಿನಲ್ಲಿ ಗುಡಿಯಿಂದ ಹತ್ತು ಮಾರು ದೂರದಲ್ಲಿ ಕೋಲೂರಿ ಮುದುಕನೊಬ್ಬ ನಿಂತಿದ್ದಾನೆ. ದಟ್ಟವಾದ ಬಿಳಿಯ ಗಡ್ಡ ಮೀಸೆಗಳ ಪೊದೆಯ ನಡುವಿನಿಂದ ಹೊಳೆವ ಕಣ್ಣುಗಳಿಂದ ಹನಿ ಹನಿ ಮುತ್ತುದುರಿದುರಿ ನಿಂತ ನೆಲವನ್ನು ತೋಯಿಸುತ್ತಿದೆ.

## ನಡುವಯಸ್ಸಿನಲ್ಲಿ ಮೂಲ ಲೇಖಕಿ

## ಷೆನ್‌ರೊಂಗ್ ಕುರಿತು

ಷೆನ್‌ರೊಂಗ್, 'ಸಿಚುವಾನ್' ಪ್ರದೇಶದಲ್ಲಿ, ೧೯೩೬ರಲ್ಲಿ ಹಾಂಕೋ ಎಂಬ ಊರಿನಲ್ಲಿ ಖ್ಯಾತ ನ್ಯಾಯಾಧೀಶರ ಮಗಳಾಗಿ ಜನಿಸಿದಳು. 'ನೂತನ ಚೈನಾ' ಹುಟ್ಟು ಪಡೆದ ಮೇಲೆ, ಹದಿನೈದನೇ ವಯಸ್ಸಿನಲ್ಲಿದ್ದ ಷೆನ್‌ರೊಂಗ್ ತನ್ನ ಮಿಡ್ಲ್ ಸ್ಕೂಲ್ ತೊರೆದು, ಕಾರ್ಮಿಕರಿಗಾಗಿ ಇದ್ದ ಪುಸ್ತಕದಂಗಡಿಯಲ್ಲಿ ಸೇಲ್ಸ್‌ಗರ್ಲ್ ಆಗಿ ಸೇರಿಕೊಂಡಳು. ೧೯೫೨ರಲ್ಲಿ 'ಸೌತ್‌ವೆಸ್ಟ್ ವರ್ಕರ್ಸ್ ಡೈಲಿ'ಗೆ ಟ್ರಾನ್ಸ್‌ಫರ್ ಆಗಿ ಚೋಂಗ್ ಕಿಂಗ್ ಎಂಬ ಊರಿಗೆ ಹೋದಳು. ಮತ್ತೆ ೧೯೫೪ರಲ್ಲಿ ರಷ್ಯನ್ ಭಾಷೆ ಕಲಿಯಲೆಂದು ಬೀಜಿಂಗ್‌ಗೆ ತೆರಳಿದಳು. ಗ್ರ್ಯಾಜ್ಯುಯೇಷನ್ ಮುಗಿಯುತ್ತಿದ್ದಂತೆ ರೇಡಿಯೋ ಸ್ಟೇಷನ್‌ನಲ್ಲಿ ಅನುವಾದಕಿಯಾಗಿ ಕೆಲಸ ನಿರ್ವಹಿಸಿದಳು.

ನಂತರ ಅನಾರೋಗ್ಯದ ಕಾರಣದಿಂದ ತನ್ನ ಕೃಷಿಕ ತಂದೆ ತಾಯಿಯರ ಜೊತೆ ಇರಲು ಷಾಂಕ್ಸಿಗೆ ತೆರಳಿದಳು. ೧೯೬೪ರಲ್ಲಿ ಮತ್ತೆ ಬೀಜಿಂಗ್‌ಗೆ ಬಂದು, ನಾಟಕಗಳನ್ನು ಬರೆಯಲು ಆರಂಭಿಸಿದಳು. ೧೯೭೦ರಲ್ಲಿ ಹಲವಾರು ಕಾದಂಬರಿಗಳನ್ನೂ ಬರೆದಳು. ೧೯೮೦ರಲ್ಲಿ **'At Middle Age'** ಕಾದಂಬರಿ ಬರೆದದ್ದೇ– ಒಂದೇ ಸಲಕ್ಕೆ ಅತ್ಯುನ್ನತ ಕೀರ್ತಿಶಿಖರಕ್ಕೆ ಏರಿದಳು. ಅವಳ ಸೃಜನಶೀಲ ಕೌಶಲ್ಯ, ನಡುವಯಸ್ಸಿನಲ್ಲಿ ಎದುರಾಗುವ ಸಮಸ್ಯೆಗಳ ವಿಶ್ಲೇಷಣೆಯ ರೀತಿ, ಹೆಣ್ಣಾಗಿ ಅವಳು ತೋರಿದ ಸಾಹಸ – ಇತ್ಯಾದಿಗಳಿಂದಾಗಿ ಷೆನ್ ಚೀನೀ ಸಾಹಿತ್ಯದ ಅನನ್ಯ ಲೇಖಕಿಯಾಗಿ ಗುರುತಿಸಿಕೊಂಡು ಅಪಾರ ಕೀರ್ತಿಗೆ ಪಾತ್ರಳಾದಳು. ಷೆನ್‌ರೊಂಗ್ ಚೈನೀಸ್ ರೈಟರ್ಸ್ ಅಸೋಸಿಯೇಷನ್‌ನ ಸದಸ್ಯೆಯೂ ಆಗಿದ್ದಾಳೆ.

## ೧

ನಕ್ಷತ್ರಗಳು ಮಿನುಗುತ್ತಿವೆಯೇ? ಸಮುದ್ರದಲ್ಲಿ ಡೋಲಾಡುತ್ತಿದೆಯೇ? ಲೂ ವೆಂಟಿಂಗ್, ನೇತ್ರತಜ್ಞೆ ಆಸ್ಪತ್ರೆಯ ಹಾಸಿಗೆಯಲ್ಲಿ ಮಲಗಿದ್ದಾಳೆ. ಅವಳ ಕಣ್ಣಮುಂದೆ ಬೆಳಕಿನ ವೃತ್ತಗಳು ಅಸ್ಪಷ್ಟವಾಗಿ ಕಾಣಿಸಿದವು. ದಿಕ್ಕುಗಳ ತಿಳಿಯದಂತೆ, ಮೋಡಗಳು ಅವಳನ್ನೆತ್ತಿಕೊಂಡು ಮೇಲೆ ಕೆಳಗೆ ಅಲೆದಾಡಿದಂತೆ ಭಾಸವಾಗುತ್ತಿದೆ.

ಅವಳೇನು ಕನಸು ಕಾಣುತ್ತಿರುವಳೇ? ಸಾವಿನತ್ತ ಸಾಗುತ್ತಿದ್ದಾಳೆಯೇ–ಎಲ್ಲಾ ಅಸ್ಪಷ್ಟವಾಗಿ ನೆನಪಾಗುತ್ತಿದೆ. ಆ ದಿನ ಬೆಳಿಗ್ಗೆ, ಆಪರೇಷನ್‌ಗೆ ಸಜ್ಜುಗೊಂಡು, ಗೌನ್ ಧರಿಸಿ, ಒಳಗೆ ಹೋಗಿ, ವಾಷ್‌ಬೇಸಿನ್ ಬಳಿ ನಿಂತಳು. ಅವಳ ಆಪ್ತ ಗೆಳತಿ ಚಿಂಯಾಂಗ್ ಯಾಫೆನ್ಮ, ಅವಳ ಸಹಾಯಕ್ಕಾಗಿ ಅಂದು ಅವಳ ಜೊತೆಗೆ ಉಳಿದಳು. ಸಧ್ಯದಲ್ಲೇ ಅವಳು ತನ್ನ ಪರಿವಾರದೊಂದಿಗೆ ಕೆನಡಾಗೆ ಹೋಗಲಿದ್ದಳು. ಇದೇ ಅವಳ ಕೊನೆ ಆಪರೇಷನ್. ಅದಕ್ಕೆಂದೇ ವೆಂಟಿಂಗ್ ಜೊತೆಗೆ ಸಹಾಯಕ್ಕಾಗಿ ನಿಂತಳು.

ಇಬ್ಬರೂ ಕೈ ತೊಳೆದರು. ಐವತ್ತರ ದಶಕದಲ್ಲಿ ಇಬ್ಬರೂ ಒಂದೇ ಕಾಲೇಜಿನಲ್ಲಿ ಓದಿ ವೈದ್ಯಕೀಯ ಪದವೀಧರರಾದರು. ಅದೃಷ್ಟಕ್ಕೆ ಒಂದೇ ಆಸ್ಪತ್ರೆಯಲ್ಲಿ ಇಬ್ಬರಿಗೂ ಕೆಲಸವಾಯಿತು. ಸ್ನೇಹಿತರಾಗಿ, ಸಹೋದ್ಯೋಗಿಗಳಾಗಿ ಇಪ್ಪತ್ತು ವರ್ಷಗಳ ಗಾಢ ಸಂಬಂಧ. ಅಗಲಿಕೆ ಎನ್ನುವುದು ಇಬ್ಬರಿಗೂ ಅಸಹನೀಯವೆನಿಸಿತು. ಆದರೆ ಶಸ್ತ್ರಚಿಕಿತ್ಸೆಯ ಕ್ಷಣಗಳಲ್ಲಿ ಇಂತಹ ಭಾವುಕತೆಗೆ ಎಡೆಯಿಲ್ಲ. ಆ ನೋವಿನ ಕ್ಷಣಗಳನ್ನು ಮರೆಸುವುದಕ್ಕಾಗಿ ಲೂಗೆ ಏನಾದರೂ ಮಾಡಬೇಕೆನಿಸಿತು. ಅವಳು ಹೇಳಿದ್ದೇನು?... ಯಾಫೆನ್, ನಿನ್ನ ಪ್ರಯಾಣದ ವ್ಯವಸ್ಥೆಯಾಯಿತೇನು?–ಎಂದಷ್ಟೇ ಕೇಳಿದಳು.

'ಒಂದು ದಿನದಲ್ಲಿ ಮೂರು ಆಪರೇಷನ್‌ಗಳು ಆಗುತ್ತೆ ಅಂತೀಯಾ?' ಲೂಗೆ ತಾನು ಕೊಟ್ಟ ಉತ್ತರ ನೆನಪಾಗಲಿಲ್ಲ. ಸುಮ್ಮನೆ ತನ್ನ ಉಗುರುಗಳನ್ನು ಉಜ್ಜುತ್ತಾ ನಿಂತಳು. ಹೊಸ ಬ್ರಷ್ ಆದ್ದರಿಂದ ಬೆರಳ ತುದಿಗಳಿಗೆ ಸ್ವಲ್ಪ ನೋವಾಯಿತು. ಕೈಗಳನ್ನು ಸೋಪುಹಾಕಿ ಚೆನ್ನಾಗಿ ಉಜ್ಜಿ ತೊಳೆದುಕೊಂಡಳು. ಮುಂಗೈ, ಮೊಳಕೈಗಳನ್ನೂ ಬಿಡದೆ ಸ್ವಚ್ಛವಾಗಿ ತೊಳೆಯುತ್ತಲೇ ಗಡಿಯಾರದ ಕಡೆ ನೋಡಿದಳು. ನಂತರ ಆಂಟಿಸೆಪ್ಟಿಕ್ ದ್ರವದಲ್ಲಿ ತನ್ನ ಕೈಗಳನ್ನು ಅದ್ದಿದಾಗ ಅವಳಿಗೆ ಎಂದೂ ಹೀಗೆ ಭಾಸವಾಗಿರಲಿಲ್ಲ. ಇಷ್ಟಾದರೂ ಅವಳು ದ್ರವದೊಳಗಿಂದ ತನ್ನ ಕೈಗಳನ್ನು ಮೇಲೆತ್ತಬೇಕೆಂಬ ಪ್ರಜ್ಞೆ ಇದ್ದಂತೆ ತೋರಲಿಲ್ಲ.

ರೋಗಿಯ ಕಣ್ಣುಗುಡ್ಡೆಯ ಹಿಂದೆ ನೋವೋಕೈನ್ ಇಂಜಕ್ಷನ್ ಚುಚ್ಚಿದಳು. ಅಷ್ಟರಲ್ಲಿ ಯಾಫೇನ್ ಕೇಳಿದಳು. ನಿನ್ನ ಮಗಳಿಗೆ ನಿಮೋನಿಯಾ ಹೇಗಿದೆ ಈಗ?

ಏನಾಗಿದೆ ಜಿಯಾಂಗ್‌ಗೆ? ಆಪರೇಷನ್ ಮಾಡುವಾಗ, ವೈದ್ಯರಾದವರು ಎಲ್ಲವನ್ನೂ ಮರೆಯಬೇಕು. ರೋಗಿಯ ಕಡೆಗೇ ಗಮನ ಕೇಂದ್ರೀಕರಿಸಬೇಕೆಂಬುದು ಅವಳಿಗೆ ಮರೆತುಹೋಯಿತೆ? ಗಂಭೀರವಾಗಿ ಶಸ್ತ್ರಕ್ರಿಯೆ ನಡೆಯಬೇಕಾದ ಈ ಕ್ಷಣಗಳಲ್ಲಿ ಪಿಂಪಾಓಜಿಂಯಾಳ ಬಗ್ಗೆ ವಿಚಾರಿಸಬೇಕಾದ ಅಗತ್ಯವೇನಿತ್ತು?.... ಎಂದು ಕಸಿವಿಸಿಗೊಂಡಿದ್ದರೂ ಮರುಕ್ಷಣದಲ್ಲಿಯೇ: ಪಾಪ ಅವಳಿಗೆ ಊರುಬಿಟ್ಟು ಹೋಗುವ ಬೇಸರವಿರಬೇಕು. ತಾನೊಂದು ಶಸ್ತ್ರಚಿಕಿತ್ಸೆಯ ಕೆಲಸದಲ್ಲಿ ಸಹಕರಿಸುತ್ತಿದ್ದೇನೆಂಬ ವಿಷಯವನ್ನೇ ಮರೆಸಿರಬೇಕು–ಎಂದು ಸಮಾಧಾನಗೊಂಡಳು.

ಆದರೂ ಸ್ವಲ್ಪ ಕನಲಿದಂತೆ, ಲೂ ಉತ್ತರಿಸಿದಳು. "ಈಗ ನನಗೇನೂ ಕೇಳಬೇಡ. ನನ್ನ ಮುಂದಿರುವ ಈ ಕಣ್ಣಿನ ಬಗ್ಗೆಯಷ್ಟೇ ನನಗೆ ಗೊತ್ತು." ತಲೆ ಬಗ್ಗಿಸಿ, ತನ್ನ ಶಸ್ತ್ರಕ್ರಿಯೆಯಲ್ಲಿ ಮಗ್ನಳಾದಳು. ಒಂದಾದ ಮೇಲೆ ಒಂದರಂತೆ, ಒಂದೇ ದಿನದಲ್ಲಿ ಮೂರು ಶಸ್ತ್ರಕ್ರಿಯೆಗಳು! ಉಪಮಂತ್ರಿಯ ಕಣ್ಣಿನ ಪೊರೆ ತೆಗೆಯಬೇಕಿತ್ತು. ಜ್ಯಾಂಗ್‌ಗೆ ಕಣ್ಣಿನಲ್ಲಿ ಕಾರ್ನಿಯಾ ಕಸಿ ಮಾಡಬೇಕಿತ್ತು. ಪುಟ್ಟ ಹುಡುಗಿ ವ್ಯಾಂಗ್ ಷಿಯಾವೊಮನ್‌ಳ ಮೆಳ್ಳೆಯನ್ನು ಸರಿಪಡಿಸಬೇಕಿತ್ತು. ನಾಲ್ಕುವರೆ ಗಂಟೆಗಳ ಕಾಲ ಒಂದೇ ಸಮನೆ, ಆಪರೇಷನ್ ಸ್ಟೂಲ್ ಮೇಲೆ ಕುಳಿತು ದೀಪದ ಬೆಳಕಿನಲ್ಲಿ ಒಂದಾದ ಮೇಲೊಂದರಂತೆ,

ಹೊಲಿಗೆ ಹಾಕಿ, ಹಾಕಿ ಕೊನೆಗೆ ಮುಗಿಸಿದಳು. ಕೊನೆಯ ರೋಗಿಯ ಕಣ್ಣುಗಳಿಗೆ ಪಟ್ಟಿ ಹಾಕುವಷ್ಟರಲ್ಲಿ ಕಾಲುಗಳು ಜೋಮು ಹಿಡಿದಿದ್ದವು. ಜಿಯಾಂಗ್ ಬಟ್ಟೆ ಬದಲಾಯಿಸಿಕೊಂಡು ಬಂದು 'ವೆಂಟಿಂಗ್ ಬಾ ಹೋಗೋಣ' – ಎಂದು ಕರೆದಳು.

'ನೀ ಮೊದಲು ಹೋಗು'–ಎಂದು ಹೇಳಿ ಲೂ ತಾನು ಇದ್ದಲ್ಲೇ ಉಳಿದಳು. ಜಿಯಾಂಗ್‌ಳ ಕಣ್ಣು ತುಂಬುಬಂಧವು. 'ಇಲ್ಲ, ನೀ ಬರುವವರೆಗೆ ನಾನು ಕಾಯ್ತೀನಿ. ಬಹುಶಃ ಇಲ್ಲಿಗೆ ಇದೇ ಕೊನೆ, ನನ್ನದು.'

ಅವಳೇಕೆ ಅಳಬೇಕು?–ಲೂಗೆ ಅರ್ಥವಾಗಲಿಲ್ಲ.

"ನೀನು ಹೋಗಿ ಪ್ರಯಾಣಕ್ಕೆ ಬೇಕಾದ ಸಿದ್ಧತೆ ಮಾಡಿಕೊ. ನಿನ್ನ ಗಂಡ ಬಹುಶಃ ನಿನಗಾಗಿ ಕಾಯುತ್ತಿರಬಹುದು."

"ಅವನಾಗಲೇ ಎಲ್ಲವನ್ನೂ ಪ್ಯಾಕ್ ಮಾಡಿ ಇರಿಸಿದ್ದಾನೆ."

".....ಅದಿರಲಿ, ನೀನು....? ನಿನ್ನ ಕಾಲುಗಳಿಗೇನಾಗಿದೆ?"

"ತುಂಬ ಹೊತ್ತು ಕೂತಿದ್ದೆನಲ್ಲ; ಎಲ್ಲೋ ಅವು ನಿದ್ದೆಗೆ ಬಿದ್ದಿವೆ!! ಒಂದೆರಡು ನಿಮಿಷ, ಸರಿಹೋಗುತ್ತೆ... ಸಂಜೆಗೆ, ನಿನ್ನಲ್ಲಿಗೆ ಬರ್ತೇನೆ."

"ಸರಿ ಹಾಗಾದರೆ, ಬರಲಾ?"

ಜಿಯಾಂಗ್ ಅಲ್ಲಿಂದ ಹೊರಟ ಮೇಲೆ, ಲೂ ಗೋಡೆಗೆ ಹಾಗೇ ಒರಗಿ ನಿಂತಳು. ಇನ್ನೂ ನೆನಪಿದೆ. ಬೂದು ಬಣ್ಣದ ಜಾಕೆಟ್ ಧರಿಸಿ ಆಸ್ಪತ್ರೆಯಿಂದ ಮನೆಯ ಕಡೆ ಹೊರಟಿದ್ದಳು. ಇಂದೇಕೋ ಎಂದೂ ಇಲ್ಲದ ಬಳಲಿಕೆ. ನಡೆಯಲೂ ಆಗದಷ್ಟು ದೌರ್ಬಲ್ಯ. ಹೆಜ್ಜೆಗಳು ತಡವರಿಸುತ್ತಿದ್ದವು. ನಿತ್ಯ ಪರಿಚಿತವಿದ್ದ ಗಲ್ಲಿ ತುಂಬಾ ದೂರವೆನಿಸಿತ್ತು. ನಡೆದಷ್ಟೂ ಕೊನೆ ಸಿಗದಂತೆನಿಸಿತ್ತು. ಕಣ್ಣು ಮಂಜಾಯಿತು. ಬವಳಿ ಬಂದು ಬಿದ್ದಳು. ರೆಪ್ಪೆಗಳು ಬಿಗಿದುಕೊಂಡವು. ತುಟಿಗಳು ಒಣಗಿ ಸೆಡೆದುಕೊಂಡವು. ಒಂದೆರಡು ತೊಟ್ಟು ನೀರು ಸಿಕ್ಕರೆ....? ದಾಹ!.... ದಾಹ ತುಟಿಗಳು ನಡುಗಿದವು.

೨

'ಡಾಕ್ಟರ್ ಸನ್; ನೋಡಿ ಬಂದಿದ್ದಾಳೆ'– ಜಿಯಾಂಗ್ ನುಡಿದಳು. ಬೆಳಗಿನಿಂದ 'ಲೂ'ನ ಪಕ್ಕದಲ್ಲಿಯೇ ಕುಳಿತಿದ್ದಾಳೆ.

ಸನ್ ಯಿಮೀನ್–ನೇತ್ರ ವಿಭಾಗದ ಮುಖ್ಯಸ್ಥರು. ಲೂ ನ ಕೇಸ್ ಹಿಸ್ಟರಿಯನ್ನು ಗಂಭೀರವಾಗಿ ಓದಿದರು. ಅವರಿಗೆ ಆಘಾತವಾದಂತಾಯಿತು. ಹೃದಯ ಸಂಬಂಧವಾದ ಮೆಯೋ ಕಾರ್ಡಿಯಲ್ ಇನ್‌ಫಾರ್‌ಕ್ಷನ್!! ತುಂಬಾ ಚಿಂತೆಗೊಳಗಾಗಿದ್ದರು. ಕಪ್ಪುಕಟ್ಟಿನ ಕನ್ನಡಕವನ್ನು ಹಿಂದಕ್ಕೆಳೆದುಕೊಂಡರು. ಅವರಿಗೆ ಗೊತ್ತಿಗೆ. ನಲ್ವತ್ತರ ನಡುವಯಸ್ಸಿನಲ್ಲಿ,

ಇಂತಹ ಗಂಭೀರ ಖಾಯಿಲೆಗೆ ತುತ್ತಾದವರಲ್ಲಿ, ತನ್ನ ವಿಭಾಗದಲ್ಲೂ, 'ಲೂ' ಒಬ್ಬಳೇ ಮೊದಲಲ್ಲ. ಆದರೆ ಲೂ ತುಂಬಾ ಗಟ್ಟಿಮುಟ್ಟಾಗಿದ್ದವಳು. ನಲ್ವತ್ತೆರಡು ವಯಸ್ಸಿನಲ್ಲಿ ಇದ್ದಕ್ಕಿದ್ದಂತೆ ಇಂತಹ ಗಂಭೀರ ಖಾಯಿಲೆ ಅವಳನ್ನು ತಟ್ಟಿದ್ದು ಆಕಸ್ಮಿಕ!

ಡಾಕ್ಟರ್ ಸನ್, ತಮ್ಮ ಎತ್ತರದ ದೇಹವನ್ನು, ಬಿಳಚಿಕೊಂಡ ಲೂ ನ ಮುಖದೆಡೆ ತಿರುಗಿಸಿದರು. ಕಣ್ಣುಗಳು ಬಿಗಿದುಕೊಂಡವು. ಉಸಿರಾಟ ಕ್ಷೀಣವಾಗಿತ್ತು. ಒಣಗಿದ ತುಟಿಗಳು ಮೆಲ್ಲಗೆ ಕಂಪಿಸಿದವು.

'ಡಾಕ್ಟರ್ ಲೂ'- ಮೆದುವಾಗಿ ಕೂಗಿದರು ಸನ್ ಯಿ ಮಿನ್. ಅವಳಲ್ಲಿ ಚಲನೆಯಿಲ್ಲ. ಮುಖದಲ್ಲಿ ಯಾವೊಂದು ಭಾವನೆಯೂ ಕಾಣಿಸಲಿಲ್ಲ.

'ವೆಂಟಿಂಗ್'-ಜಿಯಾಂಗ್ ಮತ್ತೊಮ್ಮೆ ಎಚ್ಚರಿಸಿದಳು. ಆದರೂ ಪ್ರತಿಕ್ರಿಯೆಯಿಲ್ಲ. ಸನ್ ಆ ಕೋಣೆಯ ಮೂಲೆಯಲ್ಲಿ ನಿಂತಿದ್ದ ಆಕ್ಸಿಜನ್ ಸಿಲಿಂಡರ್‌ನೆಡೆಗೊಮ್ಮೆ ನೋಡಿದರು. ಮತ್ತು ಇಸಿಜಿ ಮಾನಿಟರ್ ಕಡೆ ಕಣ್ಣು ಹೊರಳಿಸಿದರು. ಮರಳಿ ಲೂ ಮಲಗಿದ್ದ ಹಾಸಿಗೆಯ ಕಡೆ ತಿರುಗಿ ನೋಡಿ ಹೇಳಿದರು- 'ಈಕೆಯ ಗಂಡನನ್ನ ಬರ ಹೇಳಿ'.

ಅಂದವಾಗಿ ಕಾಣುತ್ತಿದ್ದ, ಆದರೆ ನಲ್ವತ್ತರ ದಶಕದಲ್ಲಿಯೇ ಬಕ್ಕತಲೆಯಾಗಿದ್ದ, ತೀರಾ ಎತ್ತರವೂ ಅಲ್ಲದ ಕುಳ್ಳೂ ಅಲ್ಲದ ವ್ಯಕ್ತಿ ವೇಗವಾಗಿ ಒಳಬಂದ. ಆತ ಫೂ ಜಿಯಾಜೀ, ಲೂ ನ ಗಂಡನಾಗಿದ್ದ. ರಾತ್ರಿಯಿಡೀ, ನಿದ್ದೆಯಿಲ್ಲದೆ ಲೂ ನ ಪಕ್ಕದಲ್ಲಿ ಹೊತ್ತು ಕಳೆದಿದ್ದ ಡಾಕ್ಟರ್ ಸನ್‌ರ ಬಲವಂತಕ್ಕೆ, ಗೊಣಗುತ್ತಲೇ ಹೊರಗೆ ಬೆಂಚಿನ ಮೇಲೆ ಮಲಗಲು ಬಂದಿದ್ದ. ಆದರೆ ನಿದ್ದೆ ಅವನಿಗೆಲ್ಲಿಯದು?

ಒಳಗೆ ಬಂದವನೇ ತನಗೆ ಪರಿಚಿತವಾದ ಆ ಮುಖವನ್ನು ನೋಡಿದ. ಈಗ ಆ ಮುಖ ಬಿಳಚಿಕೊಂಡು ವಿಚಿತ್ರವಾಗಿ ಕಾಣುತ್ತಿತ್ತು.

ಲೂ ನ ತುಟಿಗಳು ಅಲುಗಿದವು. ಅವನಿಗೆ ಅರ್ಥವಾಯಿತು. 'ಅವಳಿಗೆ ಬಾಯಾರಿಕೆಯಾಗಿದೆ ನೀರು ಬೇಕು' ಎಂದ.

ಜಿಂಯಾಂಗ್ ಸಣ್ಣ ಟೀ ಪಾತ್ರೆಯನ್ನು ನೀಡಿದಳು. ಫೂ ತುಂಬಾ ಜಾಗರೂಕತೆಯಿಂದ, ಆಕ್ಸಿಜನ್ ಸಿಲಿಂಡರ್‌ನಿಂದ ಹೊರಟುಬಂದಿದ್ದ ರಬ್ಬರ್ ಟ್ಯೂಬನ್ನು ತಗುಲಿಸಿದ. ಒಂದೊಂದೇ ತೊಟ್ಟು ನೀರನ್ನು ಕುಡಿಸಿದ. 'ವೆಂಟಿಂಗ್, ವೆಂಟಿಂಗ್' - ಫೂ ಎಚ್ಚರಿಸಲು ಪ್ರಯತ್ನಿಸಿದ. ಒಂದು ಹನಿ ನೀರು ಅವಳ ಮುಖದ ಮೇಲೆ ಬಿತ್ತು. ಕೂಡಲೇ ಮುಖ ಕಿವಿಚಿತು.

೩

ಕಣ್ಣುಗಳು... ಕಣ್ಣುಗಳು... ಕಣ್ಣುಗಳು....

ಮುಚ್ಚಿದ 'ಲೂ' ನ ಕಣ್ಣುಗಳ ಮುಂದೆ... ಎಷ್ಟೋ ಕಣ್ಣುಗಳು ಹೊಳೆದವು. ಮಕ್ಕಳ, ಮುದುಕರ, ಚಿಕ್ಕವರ, ದೊಡ್ಡವರ, ಪ್ರಾಯದವರ.... ಪುಟ್ಟ ಪುಟ್ಟ, ದೊಡ್ಡ ದೊಡ್ಡ, ಹೊಳೆವ ಕಣ್ಣುಗಳು-ಮಂಕಾದ ಕಣ್ಣುಗಳು.... ಪಿಳಿ ಪಿಳಿ ನೋಡಿದವು ಅವಳತ್ತ!!

ಆಹಾ!... ಇವು ಅವಳ ಗಂಡನ ಕಣ್ಣುಗಳು.

ಅವಳು, ಅವುಗಳಲ್ಲಿ ಪ್ರೀತಿ, ಸ್ನೇಹ, ನೋವು, ನಲಿವುಗಳನ್ನು ಭರವಸೆಯನ್ನು ಕಂಡಿದ್ದಳು. ಬಂಗಾರ ಬಣ್ಣದ ಸೂರ್ಯನಂತೆ ಹೊಳೆಹೊಳೆವ ಕಣ್ಣುಗಳು. ಪ್ರೀತಿ ತುಂಬಿದ ಅವನ ಹೃದಯ ಅವಳಿಗೆ ಹಿತವಾದ ಬಿಸುಪನ್ನು ನೀಡಿತ್ತು. ಮೃದು ಮಧುರವಾದ, ಹಿತವಾದ, ಅವನ ಧ್ವನಿ ದೂರದ ಯಾವುದೋ ಲೋಕದಿಂದ ಕೇಳಿಬಂತು:-

*ಹರಿವ ಆತುರದ ಹೊಳೆಯಾದರೆ ನಾ*
*......*
*ನನ್ನ ಪ್ರೀತಿಯೊಂದು ಪುಟ್ಟ ಮೀನಾಗಿದ್ದರೆ*
*ನೊರೆ ತೊರೆಗಳ ಜೊತೆ ನನ್ನ*
*ಓಲಾಡುತ್ತಿತ್ತು."*

ಅವಳೆಲ್ಲಿ? ಮಂಜಿನಿಂದ ತುಂಬಿದ್ದ ಸುಂದರ ತೋಟದಲ್ಲಿದ್ದಳು. ಸ್ಫಟಿಕದಂತೆ ಪಾರದರ್ಶಕವಾದ ಹೆಪ್ಪುಗಟ್ಟಿದ ಸರೋವರದಲ್ಲಿ ಕೆಂಪು, ನೀಲಿ, ನೇರಳೆ, ಬಿಳಿ ಬಣ್ಣಗಳಲ್ಲಿ, ಸಂತೋಷ, ಸಂಭ್ರಮಗಳಿಂದ ಜನರು ಜಾರುತ್ತಿದ್ದರು. ಅವರ ಸಂಭ್ರಮದ ಗದ್ದಲ ಪ್ರತಿಧ್ವನಿಸಿತು. ಅವಳ ಕಣ್ಣಿಗೆ ಕಂಡದ್ದು, ಆ ಮಂದಹಾಸದ ಮುಖಗಳಲ್ಲಿ, ಅವಳ ಗಂಡನದು ಮಾತ್ರ, ಎಲ್ಲವನ್ನೂ ಮರೆತು ಜೊತೆಯಾಗಿ ಜಾರಾಟವಾಡಿದರು. ಅಬ್ಬ! ಎಂತಹ ಅದ್ಭುತ ರೋಮಾಂಚಕಾರಿ ಅನುಭವ!!

ಅತ್ಯಂತ ಪ್ರಾಚೀನವಾದ ಪಂಚಡ್ರೇಗನ್ ಕ್ರೀಡಾಮಂಟಪಗಳು ಮುಸುಕಿದ ಮಂಜಿನ ಹಿನ್ನೆಲೆಯಲ್ಲಿ ಗಂಭೀರ, ಪ್ರಶಾಂತವಾಗಿ ಕಾಣುತ್ತಿದ್ದವು. ಅಮೃತಶಿಲೆಯ ಕಟಾಂಜನಕ್ಕೆ ಇಬ್ಬರೂ ಒರಗಿನಿಂತರು. ಹಿಮದ ಚೂರುಗಳಿಂದ ಮುಚ್ಚಿಹೋಗಿದ್ದರು. ಒಬ್ಬರೊಬ್ಬರು ಬೆಸೆದುಕೊಂಡು ನಿಂತಾಗ ಚಳಿಯ ಪರಿವೆಯೇ ಇಲ್ಲವಾಯಿತು.

ಆಗಿನ್ನೂ ಅವಳು ಯುವತಿ.

ಪ್ರೀತಿ ಸಂತೋಷಗಳು ಅವಳು ನಿರೀಕ್ಷಿಸಿರಲಿಲ್ಲ. ತಾನಿನ್ನೂ ಹುಡುಗಿಯಾಗಿದ್ದಾಗ, ಅಪ್ಪ ಅಮ್ಮನನ್ನು ದೂರ ಮಾಡಿದ್ದ. ಅಮ್ಮನಿಗೆ ತನ್ನನ್ನು ಬೆಳೆಸುವುದೇ ಕಷ್ಟವಾಯಿತು.

ಬಾಲ್ಯವಂತೂ ಉತ್ಸಾಹವಿಲ್ಲದೆ ಕಳೆದಿತ್ತು. ಪುಡು, ಪುಡು, ಎಂದು ಉರಿಯುವ ಮಂದ ದೀಪದ ಬೆಳಕಿನಲ್ಲಿ ಹೊಲಿದು, ಹೊಲಿದು ಅಕಾಲ ಮುಪ್ಪು ಅಡರಿದ ಅಮ್ಮನ ಮುಖವೊಂದು ಚೆನ್ನಾಗಿ ನೆನಪಿದೆ.

ಮೆಡಿಕಲ್ ಕಾಲೇಜಿಗೆ ಸೇರಿದಳು. ನಸುಕಿನಲ್ಲೆದ್ದು, ಹೊಸ ಇಂಗ್ಲಿಷ್ ಪದಗಳನ್ನು ಉರುಹಚ್ಚಿ, ತರಗತಿಗೆ ಹೋಗಿ, ನೋಟ್ ಪುಸ್ತಕಗಳ ತುಂಬಾ ಅಂದವಾಗಿ ಬರೆದು ತುಂಬಿಸುತ್ತಿದ್ದಳು. ಸಂಜೆಯಾದರೆ ಲೈಬ್ರರಿ, ರಾತ್ರಿ ಹೊತ್ತಿನಲ್ಲಿ 'ಆಟೋಪ್ಸಿ'ಗಳನ್ನು ಮಾಡುತ್ತಿದ್ದಳು. ಓದಿನಲ್ಲಿಯೇ ಅವಳ ಪ್ರಾಯ ಕಳೆದುಹೋದರೂ ಅವಳಿಗೆ ಪಶ್ಚಾತ್ತಾಪವೆನಿಸುತ್ತಿರಲಿಲ್ಲ.

ಅವಳ ಬದುಕಿನಲ್ಲಿ ಪ್ರೀತಿಗೆ ಅವಕಾಶವೇ ಇಲ್ಲ. ಲೂ ಮತ್ತು ಜಿಯಾಂಗ್ ಯಾಫೆನ್, ಇಬ್ಬರೂ ಒಂದೇ ಕೊಠಡಿಯನ್ನು ಹಂಚಿಕೊಂಡಿದ್ದರು. ತನ್ನ ಸಹಪಾಟಿ ಜಿಯಾಂಗ್‌ಳದು ಮೋಹಕವಾದ ರೂಪ. ಹೊಳೆವ ಕಣ್ಣುಗಳು, ಮತ್ತೇರಿಸುವ ತುಟಿಗಳು, ಕೆಳಗೆ ಎತ್ತರಕ್ಕೆ ಇದ್ದುದೇ ಅಲ್ಲದೆ ಜೀವನೋತ್ಸಾಹವನ್ನು ಪ್ರೇರಿಸುವಂತಿದ್ದಳು. ಲೂಗೆ ತದ್ವಿರುದ್ಧವಾದ ಸ್ವಭಾವ, ಪ್ರೀತಿ, ಅಲೆದಾಟಗಳು ಅವಳ ಬದುಕಿನ ಭಾಗವಾಗಿದ್ದವು. ಲೂ ಯಾರನ್ನೂ ಆಕರ್ಷಿಸುವಂತಿರಲಿಲ್ಲ. ಅಲ್ಲದೆ ಆಕರ್ಷಿಸಬೇಕೆಂದು ಅವಳು ಏನನ್ನೂ ಮಾಡಲಿಲ್ಲ.

ಪದವಿ ಮುಗಿಯುತ್ತಿದ್ದ ಹಾಗೇ, ಇಬ್ಬರಿಗೂ ಒಂದೇ ಆಸ್ಪತ್ರೆಯಲ್ಲಿ ಕೆಲಸ ಮಾಡುವ ಅವಕಾಶ ಉಂಟಾಯಿತು. ಸುಮಾರು ನೂರು ವರುಷಗಳಷ್ಟು ಹಳೆಯದಾದ ಆ ಪ್ರತಿಷ್ಠಿತ ಆಸ್ಪತ್ರೆಯಲ್ಲಿ, ನಾಲ್ಕು ವರ್ಷಗಳ 'ಇಂಟರ್ನ್ ಷಿಪ್'. ಬೆಳಗಿನಿಂದ ಸಾಕಷ್ಟು ಸಂಜೆಯಾಗುವವರೆಗೂ ಅಲ್ಲೇ ದುಡಿಯುತ್ತಿದ್ದು ಅವಿವಾಹಿತರಾಗಿಯೇ ಉಳಿದಿದ್ದರು. ಸ್ವ ಇಚ್ಛೆಯಿಂದಲ್ಲ. ಅದು ಆಸ್ಪತ್ರೆಯ ನಿಯಮವಾಗಿತ್ತು.

ಜಿಯಾಂಗ್ ಈ ನಿಯಮವನ್ನು ಒಳಗೊಳಗೇ ವಿರೋಧಿಸುತ್ತಿದ್ದಳು; ಶಪಿಸುತ್ತಿದ್ದಳು ಆದರೆ ಲೂ ಅದನ್ನು ಸಹಜ, ಸ್ವಾಭಾವಿಕ ಎನ್ನುವಂತೆ ಸ್ವೀಕರಿಸಿದ್ದಳು. ಆದ್ದರಿಂದ ೨೪ ಗಂಟೆ ಏನು, ೪೮ ಗಂಟೆಯಾದರೂ ಅಲ್ಲೇ ಉಳಿಯಲು ಅವಳು ಸಿದ್ಧಳಿದ್ದಳು. ನಾಲ್ಕು ವರ್ಷಗಳ ಕಾಲ ಮದುವೆ ಮುಂದೂಡಿದರೆ ನಷ್ಟವೇನು? ಎಷ್ಟೋ ಜನ ಡಾಕ್ಟರ್‌ಗಳು ತಡವಾಗಿ ಮದುವೆಯಾದರು, ಇಲ್ಲವೆ ಮದುವೇನೇ ಆಗದೆ ಉಳಿದಿರುವವರು ಇಲ್ಲವೇ? – ಎಂದು ಯೋಚಿಸಿ ಸಮಾಧಾನಗೊಂಡು ರಾತ್ರಿ ಹಗಲು ಎನ್ನದೆ ಒಂದೇ ಸಮನೆ ಕೆಲಸದಲ್ಲಿ ತೊಡಗಿಸಿಕೊಂಡಳು.

ಆದರೆ ಹೇಗಾಯಿತೆನ್ನುವುದು ಅವಳಿಗೆ ಅರ್ಥವಾಗಲಿಲ್ಲ. ಕಣ್ಣಿನ ಬೇನೆಯೆಂದು ರೋಗಿಯಾಗಿ ಆಸ್ಪತ್ರೆಯಲ್ಲಿ ದಾಖಲಾಗಿದ್ದ. ಲೂ ನೇ ಅವನಿಗೆ ಚಿಕಿತ್ಸೆ ನೀಡುತ್ತಿದ್ದಳು. ಅವಳ ತಜ್ಞ ಚಿಕಿತ್ಸೆ, ಅವಿಶ್ರಾಂತ ಸೇವೆ, ರೋಗಿಯ ಬಗೆಗೆ ತೋರುತ್ತಿದ್ದ ಲಕ್ಷ್ಯ, ಎಲ್ಲವೂ ಅವಳ ಬಗ್ಗೆ ಅವನ ಭಾವನೆಗಳನ್ನು ಜಾಗೃತಗೊಳಿಸಿದವು. ಆಳವಾದ ಅವನ ಪ್ರೀತಿ, ಆದರಗಳು ಇಬ್ಬರ ಬದುಕಿನಲ್ಲಿ ಬದಲಾವಣೆ ತಂದವು.

ಉತ್ತರದಲ್ಲಿ ಸಾಮಾನ್ಯವಾಗಿ ಚಳಿಗಾಲದಲ್ಲಿ ಚಳಿ ಹೆಚ್ಚು. ಆದರೆ ಈ ಸಲದ ಚಳಿಗಾಲ ಅವಳಿಗೆ ಹಿತವನ್ನೇ ತಂದಿತ್ತು. ಇಷ್ಟೊಂದು ಉನ್ಮತ್ತತೆಯನ್ನು ನೀಡಬಲ್ಲ ಶಕ್ತಿ, ಪ್ರೀತಿಗೆ ಇದೆ ಎಂಬ ಸತ್ಯ ಅವಳಿಗೆ ಅದ್ಭುತ ರೋಮಾಂಚನವನ್ನು ತಂದಿತ್ತು. ಈ ಮೊದಲೇ ಇದರ ಅನುಭವ ತನಗೇಕೆ ಆಗಲಿಲ್ಲ ಎಂದು ಹಂಬಲಿಸುವಂತಾಗಿತ್ತು. ಇಪ್ಪತ್ತೆಂಟರ ಬಲಿತ ವಯಸ್ಸಿನಲ್ಲಿ ಪ್ರೀತಿಯು ಸ್ವಾಗತಾರ್ಹವೆನಿಸಿತು. ಮನಸ್ಸಿನಿಂದ ಹುಡುಗಿಯೇ ಆಗಿದ್ದಳು.

ನಾನೊಂದು ನಿರ್ಜನ ಕಾನನವಾಗುವ ಬಯಕೆ

..................

ನನ್ನ ಪ್ರೀತಿಯೊಂದು ಪುಟ್ಟು ಹಕ್ಕಿಯಾಗಿದ್ದರೆ ದಟ್ಟವಾದ ಮರಗಳಲ್ಲಿ ಗೂಡು ಕಟ್ಟುತ್ತಿತ್ತು

ಚಿಲಿಪಿಲಿಗುಟ್ಟುತ್ತಿತ್ತು.

ಓಹ್! ಎಂತಹ ಅದ್ಭುತ!! ಮೆಟಲರ್ಜಿಕಲ್ ರೀಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿ ಸ್ಪೇಸ್‌ಕ್ರಾಫ್ಟ್‌ಗೆ ಬಳಸಬಹುದಾದ ಹೊಸದೊಂದು ಬಗೆಯ ಲೋಹದ ಬಗ್ಗೆ ಸಂಶೋಧನೆ ನಡೆಸುತ್ತಾ ಪುಸ್ತಕ ಹುಳವೆನಿಸಿಕೊಂಡಿದ್ದ ಘೂ ಇಷ್ಟು ಚೆನ್ನಾಗಿ ಕವಿತೆ ಓದಬಲ್ಲನೆಂಬುದಕ್ಕೆ ಹಿರಿಹಿರಿ ಹಿಗ್ಗಿದಳು.

"ಯಾರದು ಈ ಪದ್ಯ?" ಲೂ ಕೇಳಿದಳು.

"ಹಂಗೇರಿಯಾದ ಕವಿ ಪೆಟೋಫಿ ಬರೆದದ್ದು."

"ವಿಜ್ಞಾನಿಯಾದವನಿಗೆ ಕವಿತೆಗೆ ಪುರಸೊತ್ತೆಲ್ಲಿಯದು?"

"ವಿಜ್ಞಾನಿಯಾದರೇನಂತೆ? ಅವನಿಗೂ ಎಲ್ಲಕ್ಕಿಂತ ಮೊದಲು ಕಲ್ಪನಾಶಕ್ತಿ ಬೇಕೇ ಬೇಕು. ಈ ಒಂದು ವಿಷಯದಲ್ಲಿ ವಿಜ್ಞಾನ ಮತ್ತು ಕಾವ್ಯ ಪರಸ್ಪರ ಹತ್ತಿರ."

"ಪರವಾಗಿಲ್ಲ. ಪಂಡಿತನೇ ಹೌದು. ಚೆನ್ನಾಗಿ ಉತ್ತರ ಕೊಡುತ್ತಾನೆ."

"ನಿನಗೆ?– ಕವಿತೇಂದ್ರೆ ಇಷ್ಟವಾ?"

"ನನಗಾ?–? ಅದರ ಬಗ್ಗೆ ಅಷ್ಟಾಗಿ ಗೊತ್ತಿಲ್ಲ. ನಾನು ಓದೋದೇ ಅಪರೂಪ"– ಎಂದು ವ್ಯಂಗ್ಯ ತಿರಸ್ಕಾರದ ದನಿಯಲ್ಲಿ ನುಡಿದಳು.

ಕಣ್ಣಿನ ಚಿಕಿತ್ಸಾ ವಿಭಾಗ ಇದೆಯಲ್ಲ. ಅಲ್ಲಿ ಏನಿದ್ದರೂ ಒಂದೊಂದು ಹೊಲಿಗೆ, ಒಂದೊಂದು ಕತ್ತರಿ ಗುರುತು ಇತ್ಯಾದಿಗಳ ಬಗ್ಗೆ ತೀರಾ ಕಟ್ಟು ನಿಟ್ಟು ಶಿಸ್ತುಗಳನ್ನು ವಿಧಿಸುತ್ತೆ. ಅಲ್ಲಿ ಕಲ್ಪನೆಗೆ ಅವಕಾಶವೇ ಇಲ್ಲ. ಎಲ್ಲವೂ ಇದಮಿತ್ಥಂ ಆಗಬೇಕು".....

ಘೂ ಮಧ್ಯೆ ಬಾಯಿಹಾಕಿ ಹೇಳಿದ. ನಿನ್ನ ಕೆಲಸವೇ ಒಂದು ಸುಂದರ ಕವಿತೆ ಇದ್ದ ಹಾಗೆ. ಕಣ್ಣಿಲ್ಲದವರನ್ನು ಮತ್ತೆ ಕಾಣುವಂತೆ ಮಾಡುತ್ತೀಯ."

ನಗುತ್ತಲೇ ಅವಳ ಹತ್ತಿರಕ್ಕೆ ಸರಿದ. ಅವನ ಆ ಪುರುಷ ಸ್ಪರ್ಶ, ಮೊದಲೆಂದೂ ಅನುಭವವಿಲ್ಲದವಳಿಗೆ, ಕಂಗೆಡುವಂತೆ ಮಾಡಿತು. ಏನೇನೋ ಆಗುವುದೆಂದು ಹೆದರಿದ್ದ ಅವಳ ಸುತ್ತ ತನ್ನ ತೋಳುಗಳನ್ನು ಬಳಸಿದ; ಬಿಗಿ ಹಿಡಿದ.

ಇದೆಲ್ಲ ಎಷ್ಟು ಆಕಸ್ಮಿಕವಾಗಿ ನಡೆಯಿತೆಂದರೆ, ಅವಳು ಹೆದರುತ್ತಲೇ ತನ್ನ ಸಮೀಪದಲ್ಲಿ ಮುಗುಳು ನಗುತ್ತಿದ್ದ ಕಣ್ಣುಗಳತ್ತ ನೋಡಿದಳು. ಅವನ ತುಟಿಗಳು ಆಗಲೇ ಬಿರಿದದ್ದನ್ನು ಕಂಡು ಕಂಪಿಸಿದಳು. ನಾಚಿಕೆ, ಸಂಕೋಚಗಳಿಂದ ಬಿಗಿಯಾಗಿ ಕಣ್ಣುಮುಚ್ಚಿಕೊಂಡಳು. ಉಕ್ಕಿ ಹರಿವ ಅವನ ಪ್ರೀತಿಯ ಹಿಡಿತದಿಂದ ಸ್ವಪ್ರೇರಣೆಯಿಂದ ದೂರ ಸರಿದಳು.

ಮಂಜಿನಿಂದ ಕವಿದಿದ್ದ ಈ ಬೀಹೈ ಪಾರ್ಕ್ ಅವಳಿಗೆ ಸರಿಯಾದ ಜಾಗ. ಸುಂದರವಾದ ಪೈನ್ ಮರಗಳು, ಪ್ರಶಾಂತವಾದ ಕೊಳಗಳು, ಪ್ರಣಯಿಗಳ ರಹಸ್ಯಪ್ರಣಯವನ್ನು ರಹಸ್ಯವಾಗಿಯೇ ಉಳಿಸುವ ಎಡೆ ಅದಾಗಿತ್ತು.

ನಾಲ್ಕು ವರ್ಷದ ಇಂಟರ್ನ್‌ಷಿಪ್ ಮುಗಿಯುತ್ತಿದ್ದಂತೆ, ಮದುವೆಯಾದವರಲ್ಲಿ ಲೂ ಮೊದಲಾದದ್ದು ಎಲ್ಲರಿಗೂ ಆಶ್ಚರ್ಯ! ಘೂ ಅವಳ ಜೀವನದಲ್ಲಿ ಪ್ರವೇಶಿಸಿದ. ಅವನೊಂದಿಗೆ ವಿವಾಹವಾಗಬೇಕೆನ್ನುವ ವಿಧಿಯ ಬರಹವನ್ನು ಹೇಗೆ ತಾನೇ ತಪ್ಪಿಸಲು ಸಾಧ್ಯ? ಘೂನ ಅದಮ್ಯ ಪ್ರೀತಿ ಅವಳನ್ನು ಮೂಕಳನ್ನಾಗಿಸಿತ್ತು. ಅವಳಿಗಾಗಿ ಘೂ ಯಾವುದೇ ತ್ಯಾಗ ಮಾಡಲು ಸಿದ್ಧನಿದ್ದ.

*ನಾನೊಂದು ಉರುಳುವ ಅವಶೇಷವಾಗುವ ಬಯಕೆ*

*................*

*ನನ್ನ ಪ್ರೀತಿಯೊಂದು ಐವೀ ಬಳ್ಳಿಯಾಗಿದ್ದರೆ*
*ಮೆದುವಾಗಿ ನನ್ನ ಬಳಸಿ ನಲಿಯುತ್ತಿತ್ತು.*

ಬದುಕು ಸುಂದರವಾಗಿತ್ತು. ಇದೆಲ್ಲದರ ನೆನಪುಗಳು ಅವಳಿಗೆ ಶಕ್ತಿ ನೀಡಿರಬೇಕು. ಮೆಲ್ಲನೆ ಕಣ್ಣು ಬಿಡಿಸಿದಳು.

೪

ನೋವು ಕಡಿಮೆಯಾಗಿ ನಿದ್ದೆ ಬರುವುದಕ್ಕೆಂದು ಎಷ್ಟೋ ಔಷಧಿಗಳನ್ನು ಕೊಟ್ಟರೂ ಲೂ ನ ಪರಿಸ್ಥಿತಿ ಗಂಭೀರವಾಗಿಯೇ ಇತ್ತು. ಇಂಟರ್‌ನಲ್ ಮೆಡಿಸನ್ ವಿಭಾಗದ ಮುಖ್ಯಾಧಿಕಾರಿ ಅವಳ ಇಸಿಜಿ ಮತ್ತು ಕೇಸ್ ರೆಕಾರ್ಡ್‌ನ್ನು ಎಚ್ಚರಿಕೆಯಿಂದ ಸಾವಧಾನದಿಂದ ಗಮನಿಸಿದರು. ಆಮೇಲೆ ವಾರ್ಡ್ ಡಾಕ್ಟರನ್ನು ಕರೆದು ಲೂ ನ

ಇಸಿಜಿ ಕಡೆ ನಿಗಾ ಇಡಲು ಹೇಳಿ ಅವಳಿಗೆ ಕೊಟ್ಟಿದ್ದ ಡ್ರಿಪ್ ಮತ್ತು ಮಾರ್ಫಿನ್ ಇಂಜಕ್ಷನ್ ಅನ್ನು ಮುಂದುವರೆಸಿದರು. ಅವಳ ಪರಿಸ್ಥಿತಿ ಈಗಿರುವುದಕ್ಕಿಂತ ಗಂಭೀರವಾದರೆ ಎನ್ನುವ ಭಯ.

ಕೋಣೆಯಿಂದ ಹೊರಗೆ ಹೋಗುತ್ತಾ, ಡಾಕ್ಟರ್ ಸನ್‌ಗೆ ಹೇಳಿದರು. "ಅವಳು ತುಂಬಾ ವೀಕಾಗಿದ್ದಾಳೆ. ಅವಳಿಲ್ಲಿಗೆ ಬಂದಾಗ ಎಷ್ಟು ಆರೋಗ್ಯವಂತಳಾಗಿದ್ದಳು."

"ಹೌದು" – ನಿಟ್ಟುಸಿರಿನೊಂದಿಗೆ ನುಡಿದ. ಈ ಆಸ್ಪತ್ರೆಗೆ ಬಂದು ಹದಿನೆಂಟು ವರುಷಗಳಾದವು. ಆಗ ಅವಳು ಇನ್ನೂ ಹುಡುಗಿಯಾಗಿದ್ದಳು.

ಹದಿನೆಂಟು ವರುಷಗಳ ಹಿಂದೇನೇ ಡಾಕ್ಟರ್ ಸನ್ ಅವರು ತುಂಬಾ ಪ್ರಸಿದ್ಧರಾದ ಕಣ್ಣಿನ ತಜ್ಞರಾಗಿದ್ದರು. ಕೆಲಸದಲ್ಲಿ ಅವರ ನಿಷ್ಠೆ, ನೈಪುಣ್ಯಗಳನ್ನು ಕಂಡು ಜನರು, ಸಹೋದ್ಯೋಗಿಗಳು ಅವರನ್ನು ತುಂಬಾ ಗೌರವಿಸುತ್ತಿದ್ದರು. ಈ ಸಮರ್ಥ, ನಿಪುಣ ಪ್ರೊಫೆಸರ್ ತನ್ನಷ್ಟೇ ನಿಪುಣರಾದ, ತಜ್ಞರಾದ ಯುವ ವೈದ್ಯರನ್ನು ಸಿದ್ಧಗೊಳಿಸಲು ಹೆಣಗುತ್ತಿದ್ದರು. ಮೆಡಿಕಲ್ ಕಾಲೇಜ್ ಪ್ರತಿ ಸಲವೂ ಒಂದೊಂದು ವಿದ್ಯಾರ್ಥಿಗಳ ತಂಡವನ್ನು ಅವರಿಗೆ ವಹಿಸಿ ಕಳುಹಿಸಿದಾಗ, ಕಣ್ಣು ಮುಚ್ಚಿಕೊಂಡು ಅವರನ್ನೆಲ್ಲಾ ಕರೆದುಕೊಳ್ಳುತ್ತಿರಲಿಲ್ಲ.

ಒಬ್ಬೊಬ್ಬ ವಿದ್ಯಾರ್ಥಿಯ ಪ್ರತಿಭೆಯನ್ನು ಪರೀಕ್ಷಿಸಿ, ಅವರಿಗೆ ನಂಬಿಕೆ ಬಂದರೆ ಮಾತ್ರ ತಾವು ತೆಗೆದುಕೊಳ್ಳುತ್ತಿದ್ದರು. ಇಡೀ ಚೀನಾ ದೇಶದಲ್ಲಿಯೇ ತಮ್ಮ ನೇತ್ರ ವಿಭಾಗ ಅತಿ ದೊಡ್ಡ ಹೆಸರಾಗಬೇಕೆಂಬುದೇ ಅವರ ಮಹತ್ವಾಕಾಂಕ್ಷೆಯಾಗಿತ್ತು. ಇದು ಸಾಧ್ಯವಾಗಬೇಕಾದರೆ, ಆಯ್ಕೆಯಲ್ಲಿ ಪ್ರತಿಭೆಯೊಂದೇ ಪರಿಗಣಿತವಾಗಬೇಕು.

'ಲೂ' ಇವರ ಆಯ್ಕೆಯಲ್ಲಿ ಬಂದದ್ದಾದರೂ ಹೇಗೆ?..... ಅವರಿಗಿನ್ನೂ ಚೆನ್ನಾಗಿ ನೆನಪಿದೆ. ಮೊದಲಿಗೆ 'ಲೂ' ಅವರ ಮೇಲೆ ಯಾವುದೇ ರೀತಿಯ ಪ್ರಭಾವ ಬೀರುವಲ್ಲಿ ಅಸಮರ್ಥಳಾದಳು.

ಆ ದಿನ ಬೆಳಿಗ್ಗೆ, ಡಾಕ್ಟರ್ ಸನ್ ಅವರು ಐದು ಜನ ವಿದ್ಯಾರ್ಥಿಗಳನ್ನು ಸಂದರ್ಶಿಸಿದ್ದರು. ಆದರೂ ಯಾರೊಬ್ಬರೂ ಅವರಿಗೆ ಸರಿತೋರಲಿಲ್ಲ. ಅವರಿಗೆ ಇಷ್ಟವಾದ ಕೆಲವು ವಿದ್ಯಾರ್ಥಿಗಳು, ಈ ವಿಷಯದಲ್ಲಿ ಆಸಕ್ತಿಯನ್ನು ತೋರಲಿಲ್ಲ. ಈ ವಿಭಾಗದಲ್ಲಿ ಕೆಲಸ ಮಾಡಲೂ ಮುಂದೆ ಬರಲಿಲ್ಲ. ಮತ್ತೆ ಕೆಲವರು ಕಣ್ಣಿನ ಚಿಕಿತ್ಸೆ ತೀರಾ ಸರಳ ಎಂದು ಭಾವಿಸಿದ್ದರಿಂದ ಮುಂದೆ ಬರಲು ಒಪ್ಪಿದರಾದರೂ, ಡಾಕ್ಟರ್ ಸನ್ ಅವರಿಗೆ ಅವರ ಧೋರಣೆ ಸರಿ ಬರಲಿಲ್ಲ. 'ಲೂ' ಆರನೆಯ ವಿದ್ಯಾರ್ಥಿಯಾಗಿ ಸಂದರ್ಶನಕ್ಕೆಂದು ಒಳಗೆ ಬಂದಳು. ಅವಳ ಫೈಲನ್ನು ಕೈಗೆತ್ತಿಕೊಳ್ಳುವಷ್ಟು ಹೊತ್ತಿಗೆ, ಡಾಕ್ಟರ್ ಸನ್ ತುಂಬಾ ಆಯಾಸಗೊಂಡಿದ್ದರು. ಆದ್ದರಿಂದ ಕಠಿಣವಾದ ಪರೀಕ್ಷೆಯಿಂದ ತಪ್ಪಿಸಿಕೊಂಡಳು. ಈ ವಿಭಾಗದ ಬಗ್ಗೆ ವಿದ್ಯಾರ್ಥಿಗಳಿಗೆ

ಸರಿಯಾದ ತಿಳುವಳಿಕೆ ದೊರೆಯುತ್ತಿಲ್ಲವೆಂಬುದು ಅವರಿಗೆ ಈ ಸಂದರ್ಶನಗಳಿಂದ ಸ್ಪಷ್ಟವಾಯಿತು.

ಬಾಗಿಲು ತೆರೆಯುತ್ತಿದ್ದಂತೆ ತೆಳ್ಳನೆಯ ಹುಡುಗಿ ಒಳಗೆ ಮೆಲ್ಲನೆ ಹೆಜ್ಜೆಯಿಡುತ್ತಾ ಪ್ರವೇಶಿಸಿದಳು. ಹತ್ತಿಯ ಅಂಗಿ, ಮೇಲಂಗಿಗಳನ್ನು ಧರಿಸಿದ್ದಳು. ಅಲ್ಲಲ್ಲಿ ಮುಂಗೈ ಮತ್ತು ಮೊಣಕಾಲಿನ ಬಳಿ ಬೆಳ್ಳಗಾಗಿತ್ತು. ಸರಳವಾದ ಉಡುಪನ್ನು ಧರಿಸಿದ್ದಳು ಅನ್ನುವುದಕ್ಕಿಂತ, ಸ್ವಲ್ಪ ವೇಷ ವಿಕಾರವಾಗಿತ್ತು ಎಂದೇ ಹೇಳಬಹುದು. ಅವಳ ಹೆಸರನ್ನು ಕೂಗಿ ಹೇಳಿ ಒಮ್ಮೆ ಅಡಿಯಿಂದ ಮುಡಿಯವರೆಗೆ ತೀಕ್ಷ್ಣವಾಗಿ ನೋಡಿದರು. ನಿಜವಾಗಿಯೂ ಪುಟ್ಟ ಹುಡುಗಿಯಂತೆ ಕಂಡಳು. ಮೊಟ್ಟೆಯಾಕಾರದ ಮುಖ. ಹೊಳೆವ ಕಪ್ಪುಕೂದಲು. ಶಾಂತವಾಗಿ ಅವರ ಎದುರಿಗಿದ್ದ ಕುರ್ಚಿಯಲ್ಲಿ ಕುಳಿತಳು.

ವಿಷಯಕ್ಕೆ ಸಂಬಂಧಿಸಿದ ಪ್ರಶ್ನೋತ್ತರಗಳಾದವು. ಗಂಭೀರವಾಗಿ, ಕೇಳಿದ್ದಕ್ಕೆಲ್ಲ ಕ್ಲುಪ್ತವಾಗಿ, ಎಷ್ಟು ಬೇಕೋ ಅಷ್ಟನ್ನೇ ಉತ್ತರಿಸಿದಳು.

"ಕಣ್ಣಿನ ವಿಭಾಗದಲ್ಲಿ ಕೆಲಸ ಮಾಡುವ ಬಯಕೆಯೇ?" – ಎಂದು ಏನೋ ಒಂದು ಬಗೆಯ ಬೇಸರದಲ್ಲಿ, ಆದಷ್ಟು ಬೇಗ ಮುಗಿಸಿಬಿಡಬೇಕೆಂಬ ನಿರ್ಧಾರದಲ್ಲಿ, ಕೇಳಿದರು. ಮೇಜಿನ ಮೇಲೆ ಮೊಣಕೈಗಳೂರಿ, ಬೆರಳುಗಳಿಂದ ತಮ್ಮ ಕಪೋಲಗಳನ್ನು ಉಜ್ಜಿಕೊಂಡರು.

"ಹೌದು, ನಾನು ಓದುವಾಗಿನಿಂದ ನನಗೆ ಈ ವಿಭಾಗದಲ್ಲಿ ಕಲಿಯಲು ತುಂಬಾ ಇಷ್ಟ ಪಟ್ಟಿದ್ದೇನೆ."

ಈ ಉತ್ತರದಿಂದ ಡಾಕ್ಟರ್ ಸನ್ ಖುಷಿಗೊಂಡರು. ಅವರಲ್ಲಿ ಕುತೂಹಲ ಮೂಡಿತು. ಕಾಣಿಸಿಕೊಳ್ಳುತ್ತಿದ್ದ ತಲೆನೋವು ಮರೆಯಾದಂತಾಯಿತು. ಅವಳನ್ನು ಪರಿಶೀಲಿಸುತ್ತಲೇ, "ನಿನ್ನಲ್ಲಿ ಈ ಆಸಕ್ತಿ ಹೇಗೆ ಬಂತು"– ಎಂದು ಕೇಳಿದರು.

ಮರುಕ್ಷಣದಲ್ಲಿಯೇ ಈ ಪ್ರಶ್ನೆ ಅವರಿಗೆ ಅಸಂಬದ್ಧ ಎನಿಸಿತು. ಇದಕ್ಕೆ ಅವಳು ಹೇಗೆ ಉತ್ತರ ಕೊಟ್ಟಾಳು?... ಆದರೆ ಲೂ ಮಾತ್ರ ಪ್ರಶ್ನೆಯನ್ನು ತುಂಬಾ ಗಂಭೀರವಾಗಿ ತೆಗೆದುಕೊಂಡು ಉತ್ತರಿಸಿದಳು.

"ನಮ್ಮ ದೇಶದಲ್ಲಿ ಕಣ್ಣಿನ ವಿಜ್ಞಾನ ಬಹಳ ಹಿಂದುಳಿದಿದೆ."

"ಶಹಬ್ಬಾಸ್, ಹೇಗೆ ಹಿಂದುಳಿದಿದೇಂತ ಹೇಳ್ತೀಯ?"– ಕುತೂಹಲದಿಂದ ಕೇಳಿದರು. ಉತ್ತರ ಹೇಗೆ ಕೊಡಬೇಕು? ಹೇಗೆ ವಿವರಿಸಬೇಕು–ಅನ್ನೋದು ಅಷ್ಟಾಗಿ ನನಗೆ ಗೊತ್ತಿಲ್ಲ. ಆದರೆ ನನ್ನದೇ ರೀತೀಲಿ ಹೇಳೋಕೆ ಇಷ್ಟಪಡ್ತೀನಿ. ಉದಾಹರಣೆಗೆ– ರೆಟಿನಾದ ಗಾಯಗಳನ್ನು ಗುಣಪಡಿಸಲು ಲೇಸರ್ ಕಿರಣಗಳನ್ನು ಬಳಸಲಾಗುತ್ತೆ. ನಮ್ಮ ದೇಶದಲ್ಲೂ ಅದರ ಬಳಕೆಯಾಗಬೇಕು."

"ಹೌದು" – ಮೆಚ್ಚಿಗೆಯ ದನಿಯಲ್ಲಿ ಬಂತು ಮಾತು. ಈಗಾಗಲೇ ಲೂ ಅವರ ಮೆಚ್ಚಿನ ಆಯ್ಕೆಯಲ್ಲಿದ್ದಳು. ಪ್ರಶ್ನೆಗಳನ್ನು ಮುಂದುವರೆಸಿದರು–

"ಮತ್ತೇನಾದರೂ?... ಇದಕ್ಕೆ ಸಂಬಂಧಿಸಿದಂತೆ ಹೊಸ ಅಭಿಪ್ರಾಯಗಳು?"

"ಹೂಂ... ಏನಂದ್ರೆ.... ಕಣ್ಣಿನ ಪೊರೆಗಳನ್ನು ತೆಗೆಯುವಾಗ ಫ್ರೀಜಿಂಗ್ ವಿಧಾನವನ್ನು ಬಳಸುವುದು... ಅಲ್ಲದೆ, ಗಮನಿಸುತ್ತಾ ಹೋದರೆ ಹೊಸ ಹೊಸ ಸಮಸ್ಯೆಗಳು ಚಿಕಿತ್ಸೆಯ ಅವಧಿಯಲ್ಲಿ ಎದುರಾಗುತ್ತೆ. ಅದೆಲ್ಲವನ್ನೂ ಅಧ್ಯಯನ ಮಾಡಬೇಕಾಗುತ್ತೆ."

"ಬಹಳ ಸಂತೋಷ, ತುಂಬಾ ಸೆನ್ಸಿಬಲ್ಲಾಗಿ ಉತ್ತರ ಕೊಟ್ಟೆ. ಅನ್ಯ ಭಾಷೆಗಳಲ್ಲಿ ಓದಲು ಬರುತ್ತೇನೆ?"

"ಹೂಂ, ನಿಘಂಟಿನ ಸಹಾಯದಿಂದ ಓದಬಲ್ಲೆ, ಪರಭಾಷೆಗಳ ಬಗ್ಗೆ ನನಗೇನೋ ತುಂಬಾ ಆಸೆಯಿದೆ."

"ಅದ್ಭುತ."

ವಿದ್ಯಾರ್ಥಿಯೊಬ್ಬರನ್ನು ಮುಖಾಮುಖಿ ಹೊಗಳಿದ್ದು ಇದೇ ಮೊದಲ ಭಾರಿ. ಕೆಲವು ದಿನಗಳ ನಂತರ ಲೂ ವೆಂಟಿಂಗ್ ಮತ್ತು ಜಿಯಾಂಗ್ ಯಾಫೆನ್ ಡಾಕ್ಟರ್ ಸನ್‌ರ ಈ ವಿಭಾಗವನ್ನು ಸೇರಿದರು. ಜಿಯಾಂಗ್‌ಳಲ್ಲಿ ಬುದ್ಧಿವಂತಿಕೆ, ಉತ್ಸಾಹಗಳನ್ನು ಮೆಚ್ಚಿಕೊಂಡಿದ್ದರೆ ಲೂ ವೆಂಟಿಂಗ್‌ಳಲ್ಲಿ ಅವಳ ಸರಳತೆ, ಶಿಸ್ತು ಗಂಭೀರತೆ, ಜಿಜ್ಞಾಸು ಪ್ರವೃತ್ತಿಗಳನ್ನು.

ಮೊದಲ ವರ್ಷ ನೇತ್ರಶಾಸ್ತ್ರ ಅಧ್ಯಯನ, ಆಪರೇಷನ್‌ಗಳಲ್ಲಿ ಕಳೆಯಿತು. ಎರಡನೇ ವರ್ಷ ಸ್ವಲ್ಪ ಪರಿಣತಿ ಪಡೆದದ್ದರಿಂದ ಕಣ್ಣಿನ ಒಳಭಾಗಗಳ ಶಸ್ತ್ರಚಿಕಿತ್ಸೆಯ ಕೆಲಸವನ್ನು ಕಲಿತರು. ಮೂರನೆಯ ವರ್ಷದಷ್ಟು ಹೊತ್ತಿಗೆ ಕಣ್ಣಿಗೆ ಸಂಬಂಧಪಟ್ಟಂತೆ ಅತ್ಯಂತ ಸೂಕ್ಷ್ಮವಾದ ಶಸ್ತ್ರಚಿಕಿತ್ಸೆಗಳನ್ನೂ ಮಾಡತೊಡಗಿದರು. ಆ ವರುಷ 'ಲೂ' ಮಾಡಿದ ಒಂದು ಕೆಲಸದಿಂದ, ಡಾಕ್ಟರ್ ಸನ್‌ರಿಗೆ ಅವಳಲ್ಲಿ ಹೊಸ ಭರವಸೆಯನ್ನು ಕಾಣುವಂತಾಯಿತು.

ವಸಂತ ಋತುವಿನ ಒಂದು ಬೆಳಗ್ಗೆ, ಡಾಕ್ಟರ್ ಸನ್‌ರು ಮಾಮೂಲಿನಂತೆ ರೌಂಡ್ಸ್‌ಗೆ ಹೊರಟಾಗ, ಬಿಳೀ ಕೋಟುಗಳನ್ನು ಧರಿಸಿದ್ದ ಡಾಕ್ಟರುಗಳ ಒಂದು ತಂಡ ಅವರನ್ನು ಹಿಂಬಾಲಿಸಿತು. ಅವರಲ್ಲಿ ಕೆಲವರು ಸೀನಿಯರ್, ಮತ್ತೆ ಕೆಲವು ಜೂನಿಯರ್ ಡಾಕ್ಟರುಗಳೂ ಇದ್ದರು. ಇವರು ಬಂದದ್ದೇ, ಹಾಸಿಗೆಯಲ್ಲಿ ಮಲಗಿದ್ದ ರೋಗಿಗಳೆಲ್ಲಾ ಎದ್ದು ಕುಳಿತು, ಈ ದೊಡ್ಡ ಡಾಕ್ಟರು ತಮ್ಮ ಕಣ್ಣುಗಳನ್ನು ಪರೀಕ್ಷಿಸುವರೇನೋ ಎಂದು ನಿರೀಕ್ಷಿಸತೊಡಗಿದರು. ಇವರ ಕರಸ್ಪರ್ಶ ಮಾತ್ರದಿಂದ ತಮ್ಮ ಕಣ್ಣು ಬೇನೆ ವಾಸಿಯಾಗುವುದೆಂಬ ಬಲವಾದ ನಂಬಿಕೆಯಲ್ಲಿ ಅವರೆಲ್ಲರೂ ಕಾದು ಕುಳಿತಿದ್ದರು.

ಪ್ರತಿಯೊಂದು ಹಾಸಿಗೆಯ ಬಳಿ ಬಂದು ಕೇಸ್ ಹಿಸ್ಟರ್ ಓದಿ ಅವರ ಮುಖವನ್ನೆತ್ತಿ ಕಣ್ಣು ರೆಪ್ಪೆಗಳನ್ನು ಬಿಡಿಸಿ ಸೂಕ್ಷ್ಮವಾಗಿ ಪರೀಕ್ಷಿಸಿದರು. ಮತ್ತೆ ಕೆಲವು ರೋಗಿಗಳ ಬೆನ್ನ ಮೇಲೆ ಮೃದುವಾಗಿ ತಟ್ಟಿ, ಆಪರೇಷನ್ ಬಗ್ಗೆ ಭಯಪಡಬೇಡ – ಎನ್ನುವಂತೆ ಭರವಸೆ ನೀಡಿದರು. ಒಬ್ಬೊಬ್ಬ ರೋಗಿಯ ಬಳಿಯೂ ಹೋಗಿ ವಿಚಾರಿಸಿ, ಮಾತನಾಡಿಸಿದರು.

ರೌಂಡ್ಸ್ ಮುಗಿದ ಮೇಲೆ ಉಳಿದ ಡಾಕ್ಟರುಗಳ ಜೊತೆ ಚರ್ಚೆ ನಡೆಸಿದರು. ಒಬ್ಬೊಬ್ಬರಾಗಿ ಒಂದೊಂದು ಕೆಲಸ ವಹಿಸಿಕೊಟ್ಟರು. ಡಾಕ್ಟರ್‌ಸನ್ ಮತ್ತು ಉಳಿದ ಡಾಕ್ಟರುಗಳೇ ಸಾಮಾನ್ಯವಾಗಿ ಮಾತನಾಡುತ್ತಿದ್ದುದು. ರೆಸಿಡೆಂಟ್ ಡಾಕ್ಟರುಗಳು ಅವರು ಹೇಳಿದ್ದನ್ನು ಗಂಭೀರವಾಗಿ ಕೇಳಿಸಿಕೊಂಡರು. ವಿಷಯದ ಬಗ್ಗೆ ಮಾತಾಡಲು, ಚರ್ಚಿಸಲು ತಮಗಿರುವ ಅರಿವು, ಅನುಭವ ಸಾಲದೆಂದು ಭಾವಿಸಿದ್ದರಿಂದ, ಮಾತನಾಡಿ ತಮ್ಮ ಮೂರ್ಖತನ ತೋರಿಸಿಕೊಳ್ಳಲು ಹೆದರಿ, ಬಾಯಿ ಬಿಗಿ ಹಿಡಿದು ಕೂತಿದ್ದರು. ಹೇಳಬೇಕಾದ್ದನ್ನೆಲ್ಲಾ ಹೇಳಿ ಆಗಿತ್ತು. ಎಲ್ಲರಿಗೂ ಕೆಲಸ ವಹಿಸಿಯೂ ಆಗಿತ್ತು. ಹೊರಡುವುದಕ್ಕೆ ಮೊದಲು ಸನ್‌ರು ಕೇಳಿದರು–

"ಇನ್ನೇನಾದರೂ ಕೇಳುವುದಿದೆಯೇ?"

ಕೋಣೆಯ ಮೂಲೆಯೊಂದರಲ್ಲಿ ಕುಳಿತಿದ್ದ ಹುಡುಗಿಯೊಬ್ಬಳು ಮೆಲುದನಿಯಲ್ಲಿ ಕೇಳಿದಳು– "ಡಾಕ್ಟರ್ ಸನ್, ವಾರ್ಡ್ ನಂ. ೪ರ, ಬೆಡ್ ನಂ. ೩ರ ರೋಗಿಯ ಕಣ್ಣಿನ ಎಕ್ಸರೇನ, ನೋಡಿದಿರಾ? ದಯವಿಟ್ಟು ಮತ್ತೊಮ್ಮೆ ಅದನ್ನು ಸರಿಯಾಗಿ ನೋಡುತ್ತೀರಾ?"

ಎಲ್ಲರೂ ಮಾತು ಕೇಳಿಬಂದ ದಿಕ್ಕಿನತ್ತ ನೋಡಿದರು. ಡಾಕ್ಟರ್ ಸನ್‌ರೂ ಆ ಕಡೆ ತಿರುಗಿ ನೋಡಿದರು. ಮಾತಾಡಿದ ಹುಡುಗಿ ಬೇರೆ ಯಾರೂ ಅಲ್ಲ; 'ಲೂ' ಸಣ್ಣಗಾತ್ರದ, ತೆಳ್ಳನೆಯ, ಯಾರ ಕಣ್ಣಿಗೂ ಅಷ್ಟಾಗಿ ಬೀಳದ 'ಲೂ' ತಮ್ಮನ್ನು ಅನುಸರಿಸಿ ಬರುತ್ತಿದ್ದ, ಡಾಕ್ಟರುಗಳು ಗುಂಪಿನಲ್ಲಿ ಇದ್ದುದನ್ನೇ ಗಮನಿಸಿರಲಿಲ್ಲ. ಇಲ್ಲಿ ಇಷ್ಟು ಹೊತ್ತು ಚರ್ಚೆ ನಡೆಯುತ್ತಿದ್ದಾಗಲೂ ಅವಳು ಇದ್ದುದನ್ನೇ ಗಮನಿಸಿರಲಿಲ್ಲ.

"ಮೂರನೇ ನಂಬರ್ ಬೆಡ್?" ಮುಖ್ಯ ರೆಸಿಡೆಂಟರನ್ನು ವಿಚಾರಿಸಿದರು.

"ಅದೇ ಸರ್ ಇಂಡಸ್ಟ್ರಿಯಲ್ ಆಕ್ಸಿಡೆಂಟ್ ಆಗಿತ್ತಲ್ಲ. ಅದೇ ರೋಗಿ"– ತಿಳಿಸಿದರು ರೆಸಿಡೆಂಟ್ ಡಾಕ್ಟರ್.

"ಅವನನ್ನು ಆಸ್ಪತ್ರೆಗೆ ಸೇರಿಸುವಾಗ, ಅವನ ಕಣ್ಣಿನ ಎಕ್ಸ್‌ರೇ ತೆಗೆದು ಚಿಕಿತ್ಸೆ ನಡೆಸಿದ್ದರು. ಎಕ್ಸ್‌ರೇ ರಿಪೋರ್ಟ್ ಪ್ರಕಾರ ಕಣ್ಣಿನ ಒಳಗೆ ಯಾವುದೇ ಲೋಹದ ಚೂರು ಇರಲಿಲ್ಲ. ಕೇವಲ ಗಾಯ ಮಾತ್ರ ಆಗಿತ್ತು. ಅದನ್ನು ಹೊಲಿದು ಪಟ್ಟಿಹಾಕಿದ್ದರು. ಒಂದೆರಡು ದಿವಸ ಆಸ್ಪತ್ರೆಯಲ್ಲಿ ಉಳಿದರೆ ಪೂರ್ತಿ ವಾಸಿಯಾಗುತ್ತೇಂತ ಭಾವಿಸಲಾಗಿತ್ತು.

ವಾಸಿಯಾಯ್ತೂಂತ ತಿಳಿದಿದ್ದಾಗ ರೋಗಿ ಮತ್ತೆ ಮತ್ತೆ ಕಣ್ಣಿನಲ್ಲಿ ನೋವಿದೇಂತ ದೂರಿತ್ತದ್ದಕ್ಕೆ ಇನ್ನೊಂದು ಎಕ್ಸ್‌ರೇ ತೆಗೆಯಲಾಗಿತ್ತು. ಅದರಲ್ಲಿ ಆ ಚೂರು ಇರುವುದು ಸ್ಪಷ್ಟವಾಗಿ ಕಾಣ್ತಿದೇಂತ ಅನಿಸುತ್ತೆ, ದಯವಿಟ್ಟು ನೋಡ್ತೀರಾ ಸಾರ್?" ಎಂದು ಹೇಳಿದ್ದಕ್ಕೆ, ಎಕ್ಸ್‌ರೇನ ತರಿಸಿ ನೋಡಿದರು. ಡಾಕ್ಟರ್ ಸನ್, ಮುಖ್ಯ ರೆಸಿಡೆಂಟರು ಅದನ್ನು ಸುತ್ತ ಕಳಿಸಿದರು.

ಜಿಯಾಂಗ್, ಕಣ್ಣರಳಿಸಿ ತನ್ನ ಗೆಳತಿಯ ಕಡೆ ನೋಡಿದಳು. "ಮೀಟಿಂಗ್ ಮುಗಿಯುವವರೆಗೂ ಸ್ವಲ್ಪ ಸುಮ್ಮನಿದ್ದು, ಆಮೇಲೆ ಡಾಕ್ಟರ್ ಸನ್‌ರಿಗೆ ತೋರಿಸಬಾರದಾಗಿತ್ತಾ? ಒಂದು ವೇಳೆ ನೀನು ಹೇಳಿದ್ದು ಸುಳ್ಳೂಂತ ಆದರೆ, ಡಿಪಾರ್ಟ್‌ಮೆಂಟಲ್ಲಿ ಎಲ್ಲರೂ ನಿನ್ನ ಬಗ್ಗೆ ಮಾತಾಡಿಕೊಳ್ತಾರೆ. ಅಲ್ಲದೆ ಔಟ್ ಪೇಷೆಂಟ್‌ನಲ್ಲಿರುವ ಡಾಕ್ಟರುಗಳನ್ನು ಅಸಮರ್ಥರು ಅಂತ ದೂರ್ತಿದ್ದಿಯಾಂತ ಅವರೆಲ್ಲ ಭಾವಿಸಿದರೆ?!

ಡಾ|| ಲೂ, ನೀನು ಹೇಳಿದ್ದು ಸರಿ" ಅಂತ ಡಾಕ್ಟರ್ ಸನ್ ಎಕ್ಸರೇನ ಮತ್ತೊಂದು ಸಲ ನೋಡಿ ತಲೆದೂಗಿದರು. ಎಲ್ಲರ ಕಡೆ ಒಮ್ಮೆ ನೋಡಿ, ಹೇಳಿದರು– "ಡಾಕ್ಟರ್ ಲೂ ನಮ್ಮ ವಿಭಾಗದಲ್ಲಿ ಬಹಳ ದಿನಗಳಿಂದ ಇದ್ದಾರೆ. ಅವರ ನಿಷ್ಠೆ, ಪರಿಣತಿ, ಸೇವಾಮನೋಭಾವ ನಿಜವಾಗಿಯೂ ಮೆಚ್ಚಬೇಕಾದೆ."

ಸನ್‌ರ ಹೊಗಳಿಕೆಯಿಂದ ಲೂ ತಲೆ ತಗ್ಗಿಸಿದಳು. ಎಲ್ಲರ ಮುಂದೆ ಅವಳ ಹೊಗಳಿಕೆ....! ನಾಚಿಕೆ, ಸಂಕೋಚಗಳಿಂದ ಮುದುಡಿದಳು. ಈ ಸ್ಥಿತಿಯಲ್ಲಿ ಅವಳನ್ನು ನೋಡಿ ಡಾಕ್ಟರ್ ಸನ್, ಮುಗುಳ್ನಕ್ಕರು. ಸಾಕಷ್ಟು ಅನುಭವ ಇರುವ, ನುರಿತ, ಡಾಕ್ಟರುಗಳ, ರೋಗ, ಕುರಿತಾದ ವಿಶ್ಲೇಷಾಣ್ಮಕ ನಿರ್ಣಯಗಳನ್ನು, ತಪ್ಪು ಅಂತ ತೋರಿಸಿ ಹೇಳಲು ಎದೆಗಾರಿಕೆ ಮತ್ತು ಆತ್ಮವಿಶ್ವಾಸ ಬೇಕು – ಅನ್ನೋದು, ಡಾಕ್ಟರ್ ಸನ್‌ರಿಗೆ ಚೆನ್ನಾಗಿ ಗೊತ್ತು.

ಆಸ್ಪತ್ರೆಗಳಲ್ಲಿ ಅಧಿಕಾರ ವ್ಯವಸ್ಥೆ, ಉಳಿದ ಬೇರೆ ಬೇರೆ ಸಂಸ್ಥೆಗಳಿಗಿಂತ ಸಂಕೀರ್ಣವಾದ್ದು. ಜೂನಿಯರ್ ಡಾಕ್ಟರುಗಳು, ತಮ್ಮ ಸೀನಿಯರ್‌ಗಳ ಅಭಿಮತಕ್ಕೆ ಶುದ್ಧರಾಗಿ ಉಳಿಯಬೇಕಾಗಿತ್ತು. ಅವರಿಗೆ ವಿಧೇಯರಾಗಿ ನಡೆದುಕೊಳ್ಳಬೇಕಾಗಿತ್ತು. ಯಾವುದೇ ವಿಚಾರದಲ್ಲಿ ಅವರೊಂದಿಗೆ ಚರ್ಚೆ, ವಿರೋಧಾಭಿಪ್ರಾಯಗಳಿಗೆ ಅವಕಾಶವೇ ಇರಲಿಲ್ಲ. ಪ್ರೊಫೆಸರ್, ಅಸಿಸ್ಟೆಂಟ್ ಪ್ರೊಫೆಸರ್‌ಗಳ ಅಭಿಪ್ರಾಯಗಳನ್ನು ಸರ್ವಮಾನ್ಯವೆಂದು ಒಪ್ಪಿಕೊಳ್ಳಬೇಕಾಗಿತ್ತು. ಲೂ, ತುಂಬಾ ಜ್ಯೂನಿಯರ್. ಆದರೂ ಡಾಕ್ಟರ್ ಸನ್‌ರಿಗೆ ಅವಳಲ್ಲಿ ಏನೋ ವಿಶೇಷವಾದ್ದು ಕಾಣಿಸಿತು. ಅವಳ ಅಭಿಪ್ರಾಯವನ್ನು ವಿಶೇಷ ಆಸಕ್ತಿಯಿಂದ ಆಲೋಚಿಸಿದರು. ಅವರಿಗೆ ಲೂ ತುಂಬಾ ಭರವಸೆಯ ವೈದ್ಯಳಾಗಿ, ಕಣ್ಣಿನ ತಜ್ಞೆಯಾಗಿ ಕಂಡಳು.

ಹದಿನೆಂಟು ವರುಷಗಳಾದವು. ಲೂ ವೆಂಟಿಂಗ್, ಜಿಯಾಂಗ್ ಯಾಫೆನ್ ಮತ್ತು ಅದೇ ವಯಸ್ಸಿನ ಇನ್ನೂ ಕೆಲವು ಡಾಕ್ಟರುಗಳು, ತನ್ನ ವಿಭಾಗದ ಬೆನ್ನೆಲುಬಿನಂತೆ ಇದ್ದರು. ಬಡ್ತಿಯನ್ನು ಯೋಗ್ಯತೆಯ ಆಧಾರದ ,ಮೇಲೆ ನೀಡುವ ಹಾಗಿದ್ದಿದ್ದರೆ, ಎಂದೋ ಅವರೆಲ್ಲ ವಿಭಾಗದ ಮುಖ್ಯಸ್ಥರುಗಳಾಗಬೇಕಿತ್ತು. ಆದರೆ ಅದ್ಯಾವುದೂ ಸಾಧ್ಯವಾಗಿರಲಿಲ್ಲ. ಇಷ್ಟು ವರುಷಗಳಾದರೂ, ಸ್ವತಂತ್ರವಾಗಿ ಸಲಹೆ ಚಿಕಿತ್ಸೆಗಳನ್ನು ನೀಡುವಷ್ಟು ಅಧಿಕಾರವೂ ಅವರ ಪಾಲಿಗೆ ಬಂದಿರಲಿಲ್ಲ. ಹದಿನೆಂಟು ವರುಷಗಳಾಗಿದ್ದರೂ, ಇಂಟರ್ನ್‌ಷಿಪ್ ಡಾಕ್ಟರ್‌ಗಳ ಹಂತದಲ್ಲೇ ಉಳಿದಿದ್ದರು. 'ಸಂಸ್ಕೃತಿಯ ಕ್ರಾಂತಿ'ಯ ಹೆಸರಿನಲ್ಲಿ ಇದಾವುದೂ ಸಾಧ್ಯವಿರಲಿಲ್ಲ.

ಉಸಿರಾಟಕ್ಕಾಗಿ ಹೆಣಗಾಡುತ್ತಿದ್ದ. 'ಲೂ'ನ ಸ್ಥಿತಿಗೆ ಡಾಕ್ಟರ್ ಸನ್‌ರ ಹೃದಯ ತುಂಬಿ ಬಂತು. ಇಂಟರ್ನಲ್ ಮೆಡಿಸನ್ ವಿಭಾಗದ ಮುಖ್ಯಾಧಿಕಾರಿಯ ಕಡೆ ನೋಡಿ ಕೇಳಿದರು– 'ನಿಮಗೆ ಹೇಗನಿಸುತ್ತೇ? ಇವತ್ತು ರಾತ್ರಿ ಕಳೆಯಬಹುದೇ ಹೇಗೆ?"

ಅಧಿಕಾರಿ, ಅವಳ ವಾರ್ಡ್ ಕಡೆ ನೋಡಿ, ನಿಟ್ಟುಸಿರು ಬಿಟ್ಟು ಹೇಳಿದರು, ''ಮೆಲ್ಲನೆ–ಡಾಕ್ಟರ್ ಸನ್, ಈ ಗಂಭೀರ ಪರಿಸ್ಥಿತಿಯಿಂದ ಆದಷ್ಟು ಬೇಗ ಪಾರಾಗುವಳೆಂದು ಭರವಸೆ ಇಡೋಣ."

ಮತ್ತೊಮ್ಮೆ ಡಾಕ್ಟರ್ ಸನ್, ಕಾತುರಗೊಂಡು ವಾರ್ಡ್ ಕಡೆಗೆ ನಡೆದರು. ವಯಸ್ಸಿನ ಪರಿಣಾಮ. ಹೆಜ್ಜೆಗಳು ಭಾರವಾಗಿದ್ದವು. ಬಾಗಿಲಿನ ಬಳಿಯಿಂದ ನೋಡಿದರು. ಜಿಯಾಂಗ್ ಇನ್ನೂ ಗೆಳತಿ ಲೂನ ದಿಂಬಿನ ಬದಿಯಲ್ಲೇ ಕುಳಿತಿದ್ದಳು. ಇಬ್ಬರು ಗೆಳತಿಯರ ಸ್ನೇಹದ ಮಧ್ಯೆ ಪ್ರವೇಶಿಸುವುದು ಹೇಗೆಂದು ನಿಂತಲ್ಲಿಯೇ ನಿಂತರು.

ಮಾಗಿಯ ಕಾಲ ಮುಗಿಯುವುದರಲ್ಲಿತ್ತು. ಉದ್ದನೆಯ ರಾತ್ರಿಗಳು. ಆರು ಗಂಟೆಗೆ ಮೊದಲೇ ಕತ್ತಲಾಗಿಬಿಡುತ್ತಿತ್ತು. ಫೀನಿಕ್ಸ್ ಮರಗಳ ನಡುವಿನಿಂದ ಸುಯ್ಯುವ ಗಾಳಿಯಿಂದಾಗಿ ಎಲೆಗಳ ಮರಮರ ಸದ್ದು. ಬಿದ್ದ ಹಣ್ಣೆಲೆಗಳು ಒಂದೊಂದಾಗಿ ಗಾಳಿಯಲ್ಲಿ ಹಾರಿದವು.

ಸನ್‌ರು ಗಾಳಿಯಲ್ಲಿ ಸುತ್ತಿ ಸುತ್ತಿ ಬೀಳುತ್ತಿದ್ದ ಹಳದಿ ಎಲೆಗಳನ್ನು, ಬೀಸುವ ಗಾಳಿಯನ್ನು ನೋಡಿದರು. ಮನಸ್ಸಿಗೆ ತುಂಬಾ ಬೇಸರವೆನಿಸಿತ್ತು. ಯಾವುದೋ ಅವ್ಯಕ್ತ ನೋವು! ತನ್ನ ವಿಭಾಗದಲ್ಲಿ ಶ್ರದ್ಧೆ, ನೈಪುಣ್ಯಗಳಿಂದ ಅವಿರತವಾಗಿ ದುಡಿಯುತ್ತಿದ್ದ ತನ್ನ ನೆಚ್ಚಿನ ಈ ಇಬ್ಬರು ಡಾಕ್ಟರುಗಳಲ್ಲಿ ಒಬ್ಬಳು ಪರದೇಶಕ್ಕೆ ಹೋಗುತ್ತಿದ್ದಳು. ಅವಳು ಬರುವ ಭರವಸೆಯಂತು ಅವರಿಗಿರಲಿಲ್ಲ. ಇನ್ನೊಬ್ಬಳು ಲೂ, ಹೀಗೆ ಹಾಸಿಗೆ ಹಿಡಿದು ಸಾವಿನೊಂದಿಗೆ ಸೆಣಸಾಡುತ್ತಿದ್ದಾಳೆ. ಪ್ರತಿಷ್ಠಿತವಾದ ಈ ಆಸ್ಪತ್ರೆಯಲ್ಲಿ ತನ್ನ ವಿಭಾಗದ ಕಣ್ಣುಗಳಂತೆ ಇವರಿಬ್ಬರು ಕಣ್ಣಿನ ತಜ್ಞವೈದ್ಯರಾಗಿದ್ದರು. ಇವರಿಲ್ಲದೆ ತನ್ನ ವಿಭಾಗವೂ ಕೂಡ ಎಲೆ ಕಳಚಿನಿಂತ ಈ ಫೀನಿಕ್ಸ್ ಮರಗಳಂತೆ ಬೋಳಾಗಿ ಅಂದಗೆಟ್ಟ

ನಿಂತಂತೆ ಎನಿಸಿತು. ದಿನದಿನಕ್ಕೆ ಹಾಳಾಗಿ ಹೋಗುವುದೇನೊ ಎಂದು ಯೋಚಿಸುವಂತಾಯಿತು.

೫

ಅವಳು ನಡೆಯುತ್ತಿದ್ದದ್ದು ಬೆಟ್ಟಗಳನ್ನು ಬಳಸಿ ಸುತ್ತಿದ ರಸ್ತೆಗಳಲ್ಲಿ, ಪರಿಮಳ ಚೆಲ್ಲುವ ಬತ್ತದ ಗದ್ದೆಗಳ ನಡುವೆ ಹಾದುಹೋಗುವ ಕಾಲುದಾರಿಗಳಲ್ಲಿ; ಕೊನೆಯಿಲ್ಲದ ರಸ್ತೆಯ ಗುಂಟ ನಡೆಯುತ್ತಿದ್ದಂತೆ ಅವಳಿಗನಿಸಿತು. ಇದೊಂದು ಮರುಭೂಮಿ; ಪಾಳುಬಿದ್ದ ನೆಲ; ಬರೀ ಬರಡು; ನಿರ್ಜನ. ನಡೆಯಲು ತ್ರಾಣ ಉಳಿದಿರಲಿಲ್ಲ. ಮೇಲುಸಿರಾಗುತ್ತಿತ್ತು.

ಮಲಗಿ ವಿಶ್ರಾಂತಿ ತೆಗೆದುಕೋ. ಮರುಭೂಮಿ ಬೆಚ್ಚಗಿದೆ. ಪಾಳುನೆಲ ಮೃದುವಾಗಿದೆ; ಹೆಪ್ಪುಗಟ್ಟಿದ ಅವಳ ಒಡಲಿಗೆ ಕಾವು ಬರಲಿ. ಹಿತವಾದ ಸೂರ್ಯನ ಬಿಸಿಲು ಸೆಡೆತ ಕೈ ಕಾಲುಗಳನ್ನು ನೇವರಿಸಲಿ. ಸಾವು ಮೆಲ್ಲನೆ ಪಿಸುಗುಟ್ಟಿತು...! ವಿಶ್ರಾಂತಳಾಗು ಡಾಕ್ಟರ್ ಲೂ!

ಮಲಗು, ಮಲಗಿ ಚಿರಶಾಂತಿ ಪಡೆ. ಯೋಚನೆಗಳೇ ಇರುವುದಿಲ್ಲ. ದುಃಖ ಇಲ್ಲ; ನೋವಿಲ್ಲ; ದಣಿವಿಲ್ಲ; ಒಟ್ಟಾರೆ ಭಾವನೆಗಳೇ ಇಲ್ಲ.

ಅವಳಿಗೆ ಅದು ಸಾಧ್ಯವಾಗಲಿಲ್ಲ. ರಸ್ತೆಯ ತುದಿಯಲ್ಲಿ ತನಗಾಗಿ ರೋಗಿಗಳು ಕಾಯುತ್ತಿದ್ದಾರೆ. ಒಬ್ಬೊಬ್ಬ ರೋಗಿಯನ್ನೂ, ಅವರವರ ಹಾಸಿಗೆಯಲ್ಲಿ ಹೊರಳಿಸಿ ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದಾಳೆ. ಅಂಧತ್ವದ ಭೀತಿಯಿಂದ ತಲ್ಲಣಿಸಿ ಹೋಗುತ್ತಿರುವ ರೋಗಿಗಳಿಗೆ ಸಾಂತ್ವನ, ಭರವಸೆಗಳನ್ನು ನೀಡುತ್ತಿದ್ದಾಳೆ. ಒಬ್ಬೊಬ್ಬರ ಕಣ್ಣಿನಲ್ಲೂ ಗೂಡು ಕಟ್ಟಿರುವ ನೋವನ್ನು ಗುರುತಿಸುತ್ತಾಳೆ. ಎಲ್ಲರ ಕಣ್ಣುಗಳಲ್ಲೂ ಅವಳ ಬರುವಿನ ನಿರೀಕ್ಷೆಯ ನೋಟವಿದೆ. ಎಲ್ಲ ರೋಗಿಗಳು ತನಗಾಗಿ, ಚಡಪಡಿಸುತ್ತಾ "ಡಾಕ್ಟರ್ ಲೂ" – ಎಂದು ಕೂಗುತ್ತಿರುವುದು ಕೇಳಿಸುತ್ತಿದೆ.

ಅವರ ಕೂಗು ಪವಿತ್ರವಾದದ್ದು; ಅದಮ್ಯವಾದದ್ದು. ಅದಕ್ಕೆ ಓಗೊಡಲೇ ಬೇಕು. ನಿತ್ರಾಣವಾದ ತನ್ನ ಕಾಲುಗಳನ್ನೆಳೆದುಕೊಂಡು ಮನೆಯಿಂದ ಆಸ್ಪತ್ರೆಯ ಕಡೆ ನಡೆದಳು. ಕ್ಲಿನಿಕ್‌ನಿಂದ ವಾರ್ಡ್, ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿ.... ವೈದ್ಯರ ತಂಡದೊಂದಿಗೆ ಹೆಜ್ಜೆ ಹಾಕುತ್ತಲೇ ನಡೆದಳು. ದಿನ, ತಿಂಗಳು, ವರುಷಗಳಿಂದ ಹೀಗೆಯೇ ಸಾಗುತ್ತಿದ್ದಾಳೆ....

"ಡಾಕ್ಟರ್ ಲೂ!"

ಯಾರದೂ ಕರೀತಿರೋದು? ಡೈರೆಕ್ಟರ್ ಜಾವೋ?.... ಹೌದು, ಫೋನಿನಲ್ಲಿ 'ಲೂ'ಳನ್ನು ಕರೆದ. ತಾನು ನೋಡುತ್ತಿದ್ದ ರೋಗಿಯನ್ನು ಜಿಯಾಂಗ್‌ಗೆ ಒಪ್ಪಿಸಿ,

ತಾನು ರಿಸೀವರನ್ನು ಕೈಗೆತ್ತಿಕೊಂಡಳು. ಕೇಳಿದ್ದೇ. ತಕ್ಷಣ ಡೈರೆಕ್ಟರ್ ಕೋಣೆಯ ಕಡೆ ನಡೆದಳು.

"ಡಾಕ್ಟರ್ ಲೂ.... ಬನ್ನಿ ಒಳಗೆ." ಜಾವೋ ಸ್ವಾಗತಿಸಿದರು. ಲೂ, ಹೋಗಿ ಕಿಟಕಿಯ ಬಳಿಯಲ್ಲಿದ್ದ ಕುರ್ಚಿಯಲ್ಲಿ ಕುಳಿತಳು.

ಜಾವೋರ ಕೋಣೆ ಸಾಕಷ್ಟು ದೊಡ್ಡದಾಗಿತ್ತು. ಶುಭ್ರವಾಗಿ, ಗಾಳಿ ಬೆಳಕುಗಳಿಂದ ಕೂಡಿದ ಅಚ್ಚುಕಟ್ಟಾದ ಕೋಣೆ ಅದಾಗಿತ್ತು. ಸದಾ ಗಿಜಿಗಿಡುವ ಕ್ಲಿನಿಕ್‌ನ ಅನುಭವವಿದ್ದ ಅವಳಿಗೆ, ಇಷ್ಟೊಂದು ಸ್ವಚ್ಛವಾದ, ಪ್ರಶಾಂತವಾದ ಜಾಗದಲ್ಲಿ ಸ್ವಲ್ಪ ಕಸಿವಿಸಿ ಎನಿಸಿತು.

ಅಲ್ಲಿ ಕುಳಿತಿದ್ದ ಇಬ್ಬರು ಸುಶಿಸಿಕ್ಷಿತರಂತೆ ಕಂಡರು. ಜಾವೋರು ಯಾವಾಗಲೂ ಒಂದು ಗತ್ತಿನಲ್ಲಿ ಇರುತ್ತಿದ್ದರು. ಅಚ್ಚುಕಟ್ಟಾಗಿ ಬಾಚಿದ ಕೂದಲು, ದಯೆ ತುಂಬಿದ ಮುಖ, ಮಂದಸ್ಮಿತ ಕಣ್ಣುಗಳು ಚಿನ್ನದ ಬಣ್ಣದ ಕಟ್ಟಿನ ಕನ್ನಡಕದೊಳಗಿಂದ ಹೊಳೆಯುತ್ತಿದ್ದವು. ಪ್ರತಿಭೆಯ ಕಾಂತಿ ಒಡೆದದ್ದು ಕಾಣುತ್ತಿತ್ತು. ಬೂದು ಬಣ್ಣದ ಸೂಟು, ಮಿಂಚುವ ಕಪ್ಪುಬಣ್ಣದ ಬೂಟುಗಳನ್ನು ಧರಿಸಿದ್ದರು.

ಸೋಫಾ ಮೇಲೆ ಕುಳಿತಿದ್ದ ವ್ಯಕ್ತಿ ಎತ್ತರವಾಗಿದ್ದ. ಅಲ್ಲಲ್ಲಿ ಕೂದಲು ಕಂದುಬಣ್ಣಕ್ಕೆ ತಿರುಗಿತ್ತು. ಧರಿಸಿದ್ದ ಕಪ್ಪು ಕನ್ನಡಕ ಕಣ್ಣುಗಳನ್ನು ಮರೆಸಿತ್ತು. ಅವಳಿಗೆ ಅರ್ಥವಾಯಿತು, – ಅವನಿಗೆ ಕಣ್ಣಿನ ಬೇನೆ ಇದೆಯೆಂದು. ಸೋಫಾಗೆ ಒರಗಿ ಕುಳಿತು ಕೈಯೊಳಗಿನ ವಾಕಿಂಗ್ ಸ್ಟಿಕ್ ಜೊತೆಗೆ ಆಡುತ್ತಿದ್ದ.

ಐವತ್ತರ ಸುಮಾರಿನಲ್ಲಿದ್ದ ಆ ಹೆಂಗಸು ಸುಂದರವಾಗಿ ಕಾಣುತ್ತಿದ್ದಳು. ವಯಸ್ಸಾಗಿರುವುದು, ಅವಳಿದ್ದ ರೀತಿಯಿಂದ ಅಷ್ಟಾಗಿ ತಿಳಿಯುತ್ತಿರಲಿಲ್ಲ. ಕೂದಲಿಗೆ ಬಣ್ಣ ಹಚ್ಚಿದ್ದಳು. ಬೆಲೆಯುಳ್ಳ ಉಡುಪನ್ನೇ ಧರಿಸಿದ್ದಳು.

ಲೂಗೆ ನೆನಪಿದೆ. ಅವಳ ಆ ಕಣ್ಣುಗಳು ತನ್ನನ್ನೇ ಗಮನಿಸುತ್ತ ತನಗೆ ಸರಿಯಾದ ಪಾಠ ಕಲಿಸಿದ್ದಳು. ಅವಳಿಗೆ ಏನೋ ಅನುಮಾನ. ಕಸಿವಿಸಿ, ನಿರಾಶೆ!

"ಡಾಕ್ಟರ್ ಲೂ, ಇವರನ್ನು ನಿಮಗೆ ಪರಿಚಯ ಮಾಡಿಕೊಡುತ್ತೇನೆ. ಈತ ವೈಸ್ ಮಿನಿಸ್ಟರ್ ಜಿಯಾವೊ ಚೆಂಗ್ಸಿ. ಈಕೆ ಆತನ ಪತ್ನಿ ಕಾಮ್ರೆಡ್ ಕಿಂಬೋ."

"ವೈಸ್ ಮಿನಿಸ್ಟರ್? ಇಲ್ಲೀವರೆಗೆ, ಈಗೊಂದು ಹತ್ತು ವರುಷಗಳಿಂದ ಅವಳು ಎಷ್ಟೋ ಜನ ಮಂತ್ರಿಗಳು, ಸೆಕ್ರೆಟರಿಗಳು, ಡೈರೆಕ್ಟರುಗಳು ಮೊದಲಾದವರಿಗೆ ಚಿಕಿತ್ಸೆ ನೀಡಿದ್ದಾಳೆ. ಎಂದೂ ಅವಳು ಅವರ ಬಿರುದುಗಳು, ವಿಶೇಷಣಗಳು– ಮೊದಲಾದವುಗಳ ಕಡೆ ಗಮನ ಕೊಟ್ಟಿರಲಿಲ್ಲ. ಈತನ ಕಣ್ಣಿಗೆ ಏನಾಗಿರಬಹುದು?– ಎಂದು ಆಶ್ಚರ್ಯದಿಂದ ಯೋಚಿಸಿದಳು. ಬಹುಶಃ ಕಣ್ಣಿನ ದೃಷ್ಟಿ ಕಳೆದುಕೊಳ್ಳುತ್ತಿರಬಹುದೇ?"

ಡೈರೆಕ್ಟರ್-ಜಾವೋ ಕೇಳಿದರು– "ಡಾಕ್ಟರ್ ಲೂ, ನೀವೇನು ಕ್ಲಿನಿಕ್‌ನಲ್ಲಿದ್ದೀರೋ, ಇಲ್ಲ ವಾರ್ಡ್ ಡ್ಯೂಟಿನಲ್ಲೋ?"

"ನಾಳೆಯಿಂದ ವಾರ್ಡ್ ಡ್ಯೂಟಿನಲ್ಲೀರ್ತಿನಿ."

"ಒಳ್ಳೇದು" – ಜಾವೋ ನಕ್ಕರು. ಮುಂದುವರೆಸಿದರು– "ವೈಸ್ ಮಿನಿಸ್ಟರ್ ಜಿಯಾವೋ ಅವರಿಗೆ ಕ್ಯಾಟರಾಕ್ಟ್ ಆಪರೇಷನ್ ಆಗಬೇಕಾಗಿದೆ. ಪೊರೆ ತೆಗೀಬೇಕಂತೆ."

'ಇದರರ್ಥ?... ಅಂದರೆ ತಾನೇ ಆ ಕೆಲಸ ಮಾಡಬೇಕೂಂತ!'

ಆ ವ್ಯಕ್ತಿಯನ್ನು ವಿಚಾರಿಸಿದಳು– "ಒಂದೇ ಕಣ್ಣ ಸಾರ್?"

"ಹೌದು."

"ಯಾವುದು."

"ಎಡಗಣ್ಣು"

"ಆ ಕಣ್ಣಿನಿಂದ ನೋಡೋಕೆ ಆಗೋದೆ ಇಲ್ವ ಸಾರ್?"

ಆತ ನಕಾರಾತ್ಮಕವಾಗಿ ತಲೆ ತಿರುಗಿಸಿದ.

"ಇದಕ್ಕೆ ಮೊದಲು ಡಾಕ್ಟರನ್ನು ಕಂಡಿದ್ದಿರಾ?" ಅವಳು ಎದ್ದು ಆತನ ಕಣ್ಣನ್ನು ಪರೀಕ್ಷಿಸುತ್ತಿರುವಾಗ ಆತ ಆಸ್ಪತ್ರೆಯ ಹೆಸರು ಹೇಳಿದ. ಅಷ್ಟರಲ್ಲಿ ಆತನ ಹೆಂಡತಿ, ಲೂ ಳನ್ನು ತಡೆಯುತ್ತಾ ಸೌಜನ್ಯದಿಂದ ಹೇಳಿದಳು.

"ಆತುರ ಏನಿಲ್ಲ ಡಾ. ಲೂ, ಕುಳಿತುಕೊಳ್ಳಿ, ಪರೀಕ್ಷೆ ಮಾಡಿಸಿಕೊಳ್ಳೋಕೆ, ನಿಮ್ಮ ಕ್ಲಿನಿಕ್‌ಗೇ ಬರ್ತೀವಿ" – ನಗುತ್ತಲೇ ಜಾವೊರ ಕಡೆ ತಿರುಗಿ ಕಿಂಬೋ ಮುಂದುವರೆಸಿದಳು–

"ಅವರಿಗೆ ಕಣ್ಣು ಬೇನೆ ಬಂದಾಗಿನಿಂದ, ಒಂದು ರೀತೀಲೀ ನಾನೇ ಕಣ್ಣಿನ ಡಾಕ್ಟರಾಗಿ ಬಿಟ್ಟಿದ್ದೀನಿ." ಲೂ ಆತನನ್ನ ಪರೀಕ್ಷಿಸಲಿಲ್ಲ. ಆದರೂ ಬಹಳ ಹೊತ್ತು ಅಲ್ಲಿ ಕುಳಿತಿದ್ದಳು. ಅವರು ಮಾತಾಡಿದ್ದಾದರೂ ಏನು?.... ಕಿನ್, ತನ್ನ ಸ್ವಂತ ವಿಚಾರಗಳನ್ನೇ ಕೇಳುತ್ತಿದ್ದಳು–

"ಎಷ್ಟು ದಿವಸದಿಂದ ಇಲ್ಲಿ ಕೆಲಸ ಮಾಡುತ್ತಿದ್ದೀರಿ, ಡಾ॥ ಲೂ?"

ವರುಷಗಳ ಸರಿಯಾದ ನೆನಪಿಲ್ಲ. ತಾನು ಪದವಿ ಪಡೆದ ವರ್ಷ ಮಾತ್ರ ನೆನಪಿದೆ. ಅಂದಿನಿಂದಲೇ ಕೆಲಸ ಪ್ರಾರಂಭಿಸಿದ್ದು. ಅದಕ್ಕೇ ಹೇಳಿದಳು.

"ನಾನು ಇಲ್ಲಿಗೆ ೧೯೬೧ರಲ್ಲಿ ಬಂದೆ."

"ಅಂದರೆ, ಹದಿನೆಂಟು ವರುಷಗಳ ಹಿಂದೆ?! – ಎಂದು ಬೆರಳೆಣಿಸುತ್ತಾ ನುಡಿದಳು.

"ಆಕೆಗೆ ಯಾಕೆ ನನ್ನ ಖಾಸಗಿ ವಿಚಾರಗಳಲ್ಲಿ ಆಸಕ್ತಿ!"

ಆಗ ಡೈರೆಕ್ಟರ್ ಜಾವೋ ಮಧ್ಯ ಪ್ರವೇಶಿಸಿ ನುಡಿದರು, – "ಡಾ॥ ಲೂಗೆ ತುಂಬಾ ಅನುಭವ ಇದೆ. ಆಕೆ ತುಂಬಾ ಎಕ್ಸ್‌ಪರ್ಟ್ ಸರ್ಜನ್!"

ಕಿನ್ ಹೇಳಿದಳು– "ಯಾಕೋ ನಿಮ್ಮ ಆರೋಗ್ಯ ಸರಿ ಇಲ್ಲ ಅಲ್ವಾ ಡಾ॥ ಲೂ?" ಇದರರ್ಥ ಏನು? – ಬೇರೆಯವರಿಗೋಸ್ಕರ ದುಡೀತಾ ದುಡೀತಾ ಎಂದೂ ತನ್ನ ಬಗ್ಗೆ ಕಾಳಜಿ ವಹಿಸಲಿಲ್ಲ. ಆಸ್ಪತ್ರೆಯಲ್ಲಿ ಅವಳ ಕೇಸ್ ಹಿಸ್ಟರಿ ಕೂಡಾ ಇಲ್ಲ. ತನ್ನ ಮೇಲಾಧಿಕಾರಿಗಳೂ ಎಂದೂ ತನ್ನ ಆರೋಗ್ಯದ ಬಗ್ಗೆ ವಿಚಾರಿಸಿರಲಿಲ್ಲ. ಅಂಥಾದ್ದರಲ್ಲಿ, – ಅಪರಿಚಿತಳಾದ ಈಕೆಗೆ ಯಾತಕ್ಕೆ ತನ್ನ ಬಗ್ಗೆ ಕಳಕಳಿ? ಆಕೆಯ ಪ್ರಶ್ನೆಗೆ ಉತ್ತರಿಸಲು ಹಿಂಜರಿಯುತ್ತಲೇ ಹೇಳಿದಳು–

"ಇಲ್ಲ ಚೆನ್ನಾಗಿದ್ದೇನೆ, ನನಗೇನಾಗಿದೆ?"

"ಈಕೆ ತುಂಬಾ ಸಮರ್ಥರಲ್ಲಿ ಒಬ್ಬಳು. ಎಂದೂ ಯಾವುದೇ ಕಾರಣಕ್ಕಾಗಿ ಕೆಲಸ ತಪ್ಪಿಸಿಕೊಂಡವಳಲ್ಲ" – ಎಂದೂ ಲೂಳ ಪರವಾಗಿ ಜಾವೋ ಮಾತನಾಡಿದರು.

ಲೂ ಇದಕ್ಕೆ ಬದಲು ಹೇಳಲಿಲ್ಲ. ತನ್ನ ಆರೋಗ್ಯದ ವಿಷಯ ಯಾಕೆ ಇಷ್ಟೊಂದು ಪ್ರಮುಖವಾಗಬೇಕು?... ರೋಗಿಗಳು ಪಾಪ ತನಗಾಗಿ ಕಾಯುತ್ತಿರುತ್ತಾರೆ.... ಆದಷ್ಟು ಬೇಗ ಇಲ್ಲಿಂದ ಬಿಡಿಸಿಕೊಂಡು ಹೊರಡಬೇಕು. ಜಿಯಾಂಗ್ ಒಬ್ಬಳೇ ಅಷ್ಟೊಂದು ರೋಗಿಗಳನ್ನು ಸಂಬಾಳಿಸಿಕೊಂಡು ಹೋಗುವುದಕ್ಕೆ ಆಗೋದಿಲ್ಲ.

ಕಿನ್ ಲೂಳನ್ನೇ ದಿಟ್ಟಿಸಿ ನೋಡಿ ಮುಗುಳ್ನಕ್ಕಳು....

"ಡಾ॥ ಲೂ ನೀವೊಬ್ಬರೇ ಕ್ಯಾಟರಾಕ್ಟ್ ಆಪರೇಷನ್ ಮಾಡೋಕೆ ಸಾಧ್ಯವಾ?" ಅಬ್ಬ! ಮತ್ತೊಂದು ತಡಬಡಿಸುವ ಪ್ರಶ್ನೆ! ಇಲ್ಲೀವರೆಗೆ ತನ್ನ ಕೈಯಲ್ಲಿ ಯಾವ ಆಕಸ್ಮಿಕಗಳೂ ಸಂಭವಿಸಲಿಲ್ಲ ನಿಜ. ರೋಗಿ ಡಾಕ್ಟರೊಂದಿಗೆ ಸರಿಯಾಗಿ ಸಹಕರಿಸದಿದ್ದರೇ, ಅನೀಸ್ತಿಯಾ ಸರಿಯಾಗಿ ನೀಡದಿದ್ದರೆ.... ಏನಾದರೂ ಅನಾಹುತ ಘಟಿಸಬಹುದು. ಆಗುವುದೇ ಇಲ್ಲ, ಅಂತ ಖಾತ್ರಿಯಾಗಿ ಹೇಗೆ ಹೇಳಲು ಸಾಧ್ಯ?

ಆಕೆಯ ಪ್ರಶ್ನೆಗೆ ತಾನು ಏನು ಉತ್ತರ ಕೊಟ್ಟೆನೋ?– ನೆನಪಿಲ್ಲ. ಕಿನ್‌ಳ ವಿಶಾಲವಾದ ಕಣ್ಣುಗಳು ತನ್ನನ್ನು ಅನುಮಾನದಿಂದಲೇ ಹಿಂಬಾಲಿಸುತ್ತ, ತನ್ನನ್ನು ಮುಜುಗರಕ್ಕೆ ತಳ್ಳಿವೆ. ಎಲ್ಲ ತರದ ರೋಗಿಗಳಿಗೆ ಚಿಕಿತ್ಸೆ ನೀಡುತ್ತಾ ಬಂದಿರುವುದರಿಂದ, ಆ ರೋಗಿಗಳ ಹೆಂಡತಿಯರ ವಿಚಿತ್ರ ಸ್ವಭಾವಗಳು ತನಗೆ ಪರಿಚಯವಿಲ್ಲದೇ ಇಲ್ಲ. ಆಕೆ ಕೇಳಿದ್ದಕ್ಕೆ ತಾನು ಸರಿಯಾಗಿ ಉತ್ತರ ಕೊಡಬೇಕೂಂತ ಯೋಚಿಸುತ್ತಾ ಈ ಸಂಭಾಷಣೆ ಮುಗಿದದ್ದು ಹೇಗೆ?.... ಜಿಯಾಂಗ್, ಅಷ್ಟರಲ್ಲಿ ಪ್ರವೇಶಿಸಿ, ಅಂಕಲ್ ಜಾಂಗ್, ಅವಳಿಗಾಗಿ ಕಾದಿದ್ದಾರೆ ಎಂದು ತಿಳಿಸಿದಾಗ, ಕಿನ್ ತಾನೇ ಮೃದುವಾಗಿ ಹೇಳಿದಳು–

"ನೀವು ತುಂಬಾ ಬಿಜಿ ಇದ್ದರೆ, ಹೋಗಬಹುದು ಡಾ॥ ಲೂ."

ಸದ್ಯ ಅಲ್ಲಿಂದ ಹೊರಗೆ ಬಂದದ್ದು, ನಿರಾಳವಾಗಿ ಉಸಿರಾಡುವಂತಾಗಿತ್ತು. ಸಾಕಷ್ಟು ಬೆಳಕು, ಗಾಳಿಗಳಿದ್ದ ಆ ಕೊಠಡಿಯೂ ಉಸಿರು ಕಟ್ಟಿದಂತೆ ಮಾಡಿತ್ತು. ಅವಳಿಗೆ ಉಸಿರು ಕಟ್ಟುತ್ತಿದೆ.

೬

ಹಗಲು ಕಳೀತಿದ್ದಂತೆ, ಡೈರೆಕ್ಟರ್ ಜಾವೋ ಇಂಟರ್‌ನಲ್ ಮೆಡಿಸನ್ ವಾರ್ಡ್ ಕಡೆಗೆ ವೇಗವಾಗಿ ನಡೆದರು.

"ಡಾ॥ ಲೂ ಯಾವಾಗಲೂ ತುಂಬ ಆರೋಗ್ಯವಂತಳಾಗಿದ್ದಳು. ಯಾಕೆ ಇವಳಿಗೆ ಈ ತರದ ಆಕಸ್ಮಿಕ ಸಂಭವಿಸಿತು. ಡಾ॥ ಸನ್?" – ಎಂದು ಜಾವೋ, ಸನ್‌ರ ಜೊತೆಗೆ ಡಾ॥ ಲೂ ಇದ್ದ ವಾರ್ಡ್ ಕಡೆಗೆ ಹೋಗುತ್ತಾ ಕೇಳಿದರು. ಡಾ॥ ಜಾವೋ ಡಾ॥ ಸನ್‌ರಿಗಿಂತ ಕೇವಲ ಎಂಟು ವರುಷ ಚಿಕ್ಕವರಾಗಿದ್ದರೂ, ಅವರಿಗಿಂತ ಬಹಳ ಚಿಕ್ಕವರಂತೆ ಕಾಣಿಸುತ್ತಿದ್ದರು. ಅವರ ಮಾತೂ ಹಾಗೆಯೇ ಪ್ರಭಾವಶಾಲಿಯಾಗಿತ್ತು.

ಡಾ॥ ಸನ್ ಸುಮ್ಮನೆ 'ಹೂಂ' ಗುಡುತ್ತಿದ್ದರು.... ನಂತರ ನಿಧಾನವಾಗಿ ಮಾತಿಗೆ ಬಂದರು– "ಇದೊಂದು ಎಚ್ಚರಿಕೆ! ನಡುವಯಸ್ಸಿನ ಡಾಕ್ಟರುಗಳು ನಮ್ಮ ಆಸ್ಪತ್ರೆಯ ಬೆನ್ನೆಲುಬಿದ್ದ ಹಾಗೆ. ಹೆಚ್ಚುತ್ತಿರುವ ಜವಾಬ್ದಾರಿಗಳು, ದಿನಂಪ್ರತಿಯ ಸಾಮಾನ್ಯ ವ್ಯವಹಾರಗಳು, ಕೌಟುಂಬಿಕ ಸಮಸ್ಯೆಗಳು ಅವರ ಆರೋಗ್ಯವನ್ನು ಹದಗೆಡಿಸುತ್ತಿವೆ. ಈ ರೀತಿಯಾಗಿ ಒಬ್ಬರಾದ ಮೇಲೆ ಒಬ್ಬರು ಬಿದ್ದು ಹಾಸಿಗೆ ಹಿಡಿದರೆ, ಗತಿ, ಗೋವಿಂದ!! ಅವಳ ಕುಟುಂಬದಲ್ಲಿ ಎಷ್ಟು ಜನ ಇದ್ದಾರೆ? ಅವಳ ಮನೆ ಎಷ್ಟು ದೊಡ್ಡದಾಗಿದೆ?"

ಚಿಂತೆಯಿಂದ ಮ್ಲಾನವಾಗಿದ್ದ ಡಾ॥ ಸನ್‌ರ ಮುಖನೋಡಿ–ಜಾವೋ ಉತ್ತರಿಸಿದರು.... "ಏನು?... ನಾಲ್ಕು ಮಂದಿ? ಅದೂ ಒಂದು ಕೋಣೆಯೊಳಗೆ?.... ಹಾಂ! ಈಗ ಗೊತ್ತಾಯಿತು ಅವಳಿಗೆ ಎಷ್ಟು ಸಂಬಳ ಬರುತ್ತಿದೆ?.... ೫೬.೫೦ ಯುಯಾನ್? ಅಬ್ಬ! ಅಷ್ಟೇನೆಯೇ!! ಅದಕ್ಕೇ ಹೇಳೋದು. ಕೈಯಲ್ಲಿ ಕತ್ತಿ ಹಿಡಿದರೂ ಕ್ಷೌರಿಕನೇ, ಸ್ಕಾಲ್‌ಪೆಲ್ ಹಿಡಿದಿರೋ ಸರ್ಜನ್‌ಗಿಂತ ಎಷ್ಟೋ ಮೇಲು ಅಂತ. ಈ ಮಾತಿನಲ್ಲಿ ಖಂಡಿತ ಸತ್ಯ ಇದೆ. ಹೌದೋ ಅಲ್ಲವೋ, ಹೋದ ವರುಷ ಅವಳ ಸಂಬಳದಲ್ಲಿ ಬಡ್ತಿ ಯಾಕೆ ನೀಡಲಿಲ್ಲ?

"ತುಂಬಾ ಜನ ಇದ್ದರು. ಎಲ್ಲರ ಸಂಬಳಾನೂ ಜಾಸ್ತಿ ಮಾಡೋಕೆ ಆಗೊಲ್ಲ.... ಹೌದಲ್ಲ!" ಡಾಕ್ಟರ್ ಸನ್‌ರ ಮಾತಿನಲ್ಲಿ ಅಣಕವಿತ್ತು.

"ಈ ಸಮಸ್ಯೆ ಬಗ್ಗೆ ಪಾರ್ಟಿ ಬ್ರಾಂಚ್ ಜೊತೆಗೆ ನೀವು ಮಾತನಾಡುತ್ತೀರಿ. ಅಂತ ಭರವಸೆ ಇಡಲೇ? ಡಾಕ್ಟರುಗಳ ಕೆಲಸ, ಆದಾಯ, ಅವರ ಮನೆ ಪರಿಸ್ಥಿತಿ ಬಗ್ಗೆ ವಿಚಾರಿಸಿ, ನನಗೊಂದು ವರದಿ ಕಳಿಸಿಕೊಡಿ."

"ಅದರಿಂದ ಪ್ರಯೋಜನವೇನು? ಇಂಥಾದ್ದೇ ಒಂದು ವರದೀನ ೧೯೭೮ರಲ್ಲಿ ಕಳಿಸಿ ಕೊಟ್ಟಿದ್ವಿ. ಅದರಿಂದೇನೂ ಆಗಲಿಲ್ಲ." – ಡಾ॥ ಸನ್ ತಲೆ ಬಗ್ಗಿಸಿ, ನೆಲ ನೋಡುತ್ತಲೇ ಸೌಜನ್ಯದಿಂದ ಹೇಳಿದರು.

"ಈ ಗೊಣಗಾಟ ಸಾಕುಮಾಡಿ ಡಾ॥ ಸನ್. ಏನೂ ಮಾತನಾಡದೇ ಇರೋದಕ್ಕಿಂತ, ಒಂದು ವರದಿ ತಯಾರು ಮಾಡುವುದಾದರೂ ಮೇಲು. ನಾನು ಅದನ್ನು ಮುನ್ಸಿಪಲ್ ಪಾರ್ಟಿ ಕಮಿಟಿಗೆ, ಮಿನಿಸ್ಟ್ರಿ ಆಫ್ ಹೆಲ್ತ್ ಮತ್ತು ಇದಕ್ಕೆ ಸಂಬಂಧಪಟ್ಟಂತೆ ಇನ್ನೂ ಯಾರು ಯಾರು ಇದ್ದಾರೆ, ಅವರಿಗೆಲ್ಲ ವರದಿಯ ಪ್ರತಿಗಳನ್ನು ಕಳಿಸಿಕೊಡ್ತೇನೆ. ಸೆಂಟ್ರಲ್ ಪಾರ್ಟಿ ಕಮಿಟಿ, ಬುದ್ಧಿಜೀವಿಗಳನ್ನು, ಪ್ರತಿಭಾವಂತರನ್ನು ಗುರುತಿಸಿ ಅವರನ್ನು ಗೌರವಿಸಿ, ಅವರ ಸಂಬಳಗಳನ್ನು ಜಾಸ್ತಿ ಮಾಡಬೇಕು ಅಂತ ಮೇಲಿಂದ ಮೇಲೆ ಒತ್ತಿ ಹೇಳುತ್ತಾ ಬರುತ್ತಿದೆ. ಅದನ್ನು ನಾವು ನಿರ್ಲಕ್ಷಿಸುವ ಹಾಗಿಲ್ಲ. ಮೊನ್ನೆ ನಡೆದ ಮುನಿಸಿಪಲ್ ಕಮಿಟಿ ಮೀಟಿಂಗ್‌ನಲ್ಲಿ, ನಡುವಯಸ್ಸಿನಲ್ಲಿ ಇರುವ ಕಾರ್ಮಿಕರ ಮತ್ತು ಇತರ ಬಗೆಯ ಕೆಲಸಗಳಲ್ಲಿ ಇರುವವರ ಬಗ್ಗೆ ಮುಖ್ಯವಾಗಿ ಗಮನ ಕೊಡಬೇಕು– ಎನ್ನುವ ವಿಚಾರವನ್ನು ಒತ್ತಿಹೇಳಿದರು. ಅವರ ಸಮಸ್ಯೆಗಳನ್ನೆಲ್ಲಾ ಆದಷ್ಟು ಬೇಗನೆ ಪರಿಹರಿಸಲಾಗುತ್ತಂತೆ!"

ಅಷ್ಟರಲ್ಲಿ 'ಲೂ'ನ ವಾರ್ಡ್ ಬಳಿಗೆ ತಲುಪಿದ್ದರಿಂದ, ಜಾವೋ ಮಾತು ನಿಲ್ಲಿಸಿದರು. ಜಾವೋ ಪ್ರವೇಶಿಸಿದ್ದು ನೋಡಿ ಜಿಯಾಜಿ, ಎದ್ದು ನಿಂತ. ನಕ್ಕು ನಮಸ್ಕರಿಸಿ, ಲೂ ನ ಹಾಸಿಗೆ ಬಳಿ ನಡೆದು, ಬಗ್ಗಿ ಅವಳ ಮುಖವನ್ನು ಪರೀಕ್ಷಿಸಿ ನೋಡಿದರು. ಅವಳನ್ನು ನೋಡುತ್ತಿದ್ದ ಡಾಕ್ಟರಿಂದ ಅವಳ ಕೇಸ್ ಹಿಸ್ಟರಿ ಕೇಳಿ ಪಡೆದರು. ಈಗ ಅವರು ಡೈರೆಕ್ಟರಲ್ಲ; ಡಾಕ್ಟರಾಗಿ ಅವಳನ್ನು ಪರೀಕ್ಷಿಸುತ್ತಿದ್ದರು.

ಜಾವೋರು ಎದೆಗೂಡಿನ ತಜ್ಞರಾಗಿದ್ದರು. ಚೀನಾದ ಬಿಡುಗಡೆಯ ನಂತರ ಹಿಂತಿರುಗಿದ್ದರು. ರಾಜಕೀಯ ಪ್ರಜ್ಞೆ, ವೃತ್ತಿ ನೈಪುಣ್ಯಗಳಿಗೆ ಜಾವೋರನ್ನು ಜನ ಮುಕ್ತವಾಗಿ ಹೊಗಳುತ್ತಿದ್ದರು. ಐವತ್ತರ ದಶಕದ ಸುಮಾರಿಗೆ ಇಲ್ಲಿ ಬಂದು ಸೇರಿದರು. ಆಮೇಲೆ ಕ್ರಮೇಣ ಡೈರೆಕ್ಟರ್ ಹಂತಕ್ಕೆ ಏರಿದರು. ಆಡಳಿತ, ಸಭೆ, ಸಮಾರಂಭಗಳಲ್ಲೇ ಕಾಲ ಕಳೆದುಹೋಗುತ್ತಿದ್ದುದರಿಂದ ರೋಗಿಗಳನ್ನು ಪರೀಕ್ಷಿಸಲು, ಚಿಕಿತ್ಸೆ ನೀಡಲು ಅವಕಾಶವೇ ಸಿಗುತ್ತಿರಲಿಲ್ಲ. ತೀರಾ ಮುಖ್ಯವೆನಿಸಿದ ಸಂದರ್ಭಗಳಲ್ಲಿ, ವೈದ್ಯಕೀಯ ಸಮಾಲೋಚನೆಗಳಲ್ಲಿ ಭಾಗಹಿಸುತ್ತಿದ್ದರು. "ಸಾಂಸ್ಕೃತಿಕ ಕ್ರಾಂತಿಯ" ದಿನಗಳಲ್ಲಿ ಅನ್ಯಾಯವಾಗಿ ಅವರನ್ನು ಒಂದಷ್ಟು ಕಾಲ ನಿರ್ಬಂಧದಲ್ಲಿ ಇರಿಸಿದ್ದರು. ಹಿಂದಿನ ಮೂರು ವರುಷಗಳಿಂದ, ಆಡಳಿತ, ಮೇಲ್ವಿಚಾರಣೆ ಮುಂತಾದ ಕೆಲಸಗಳಲ್ಲಿ ಎಷ್ಟು ಮುಳುಗಿದ್ದರೆಂದರೆ, ಅವರಿಗೆ ಎಷ್ಟೇ ಮುಖ್ಯವೆನಿಸಿದ ಸಂದರ್ಭಗಳಲ್ಲೂ, ಸರ್ಜರಿ ಮಾಡಲು, ಶಕ್ತೀನೂ ಉಳಿಯುತ್ತಿರಲಿಲ್ಲ. ಪುರಸೊತ್ತೂ ಸಿಗುತ್ತಿರಲಿಲ್ಲ.

ಅಂಥಾದ್ದರಲ್ಲಿ 'ಲೂ'ಗಾಗಿ ವಿಶೇಷ ಆಸಕ್ತಿ ವಹಿಸಿ ಬಂದಿದ್ದರು. ಉಳಿದ ಡಾಕ್ಟರುಗಳೆಲ್ಲ ಅವರನ್ನು ಬಳಸಿ ನಿಂತಿದ್ದರು.

ಗಾಬರಿಗೊಳಿಸುವಂಥಾದ್ದೇನನ್ನೂ ಅವರು ಹೇಳಲಿಲ್ಲ. ಇಸಿಜಿ ಮಾನಿಟರ್ ಕಡೆ ನೋಡಿದರು. ಕೇಸ್ ಷೀಟನ್ನು ಮತ್ತೊಮ್ಮೆ ಓದಿದರು. ಅಲ್ಲಿದ್ದ ಡಾಕ್ಟರ್‌ಗೆ

ಅವಳ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸುತ್ತಿರುವಂತೆ ಹೇಳಿ, 'ಲೂ'ನ ಗಂಡನ ಬಗ್ಗೆ ವಿಚಾರಿಸಿದರು.

ಡಾ॥ ಸನ್, ಜಾವೋರಿಗೆ ಘೂನನ್ನು ಪರಿಚಯಿಸಿದರು. ಸುಂದರವಾದ, ಆಕರ್ಷಕವಾದ ಮುಖ. ಆದರೆ ಆಗಲೇ ಬಕ್ಕತಲೆ! ತನ್ನನ್ನೇ ಸರಿಯಾಗಿ ನೋಡಿಕೊಳ್ಳಲಾಗದ ಈ ಮನುಷ್ಯ, ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳಬಲ್ಲನೇ? – ಜಾವೋರು ಯೋಚಿಸಿದರು.

"ನೋಡಿ ಮಿ. ಘೂ ತುಂಬಾ ಕಷ್ಟದ ಕೆಲಸ ಅಂತ ಅನ್ನಿಸಬಹುದು. ಆಕೆಗೆ ಪೂರ್ಣ ವಿಶ್ರಾಂತಿ ಬೇಕಾಗಿದೆ. ಕೊನೆಗೆ ಹಾಸಿಗೆಯಲ್ಲಿ ಹೊರಳುವುದಕ್ಕೂ ಆಕೆಗೆ ನಿಮ್ಮ ಸಹಾಯ ಬೇಕಾಗುತ್ತೆ. ದಿನ ೨೪ ಗಂಟೆಗಳೂ ನಿಮ್ಮ ಸಾಹಚರ್ಯ, ಸಹಾಯಗಳು, ಬೇಕಾಗಬಹುದು. ....ಬಹುಶಃ ನಿಮ್ಮೊಬ್ಬರಿಗೇ ಎಲ್ಲಾ ಕೆಲಸ ಸಾಧ್ಯವಾಗಲಾರದು.... ಮನೆಯಲ್ಲಿ ಬೇರೆ ಯಾರಾದರೂ ಇದ್ದಾರೆಯೇ?"

ಘೂ ಇಲ್ಲ ಎನ್ನುವಂತೆ ತಲೆಯಾಡಿಸಿದ. "ಕೇವಲ, ಒಂದಿಬ್ಬರು ಮಕ್ಕಳಿದ್ದಾರೆ"– ಉತ್ತರಿಸಿದ.

ಡಾ॥ ಸನ್‌ರ ಕಡೆಗೆ ತಿರುಗಿ ಕೇಳಿದರು. "ಡಾಕ್ಟರ್ ಸನ್, ನಿಮ್ಮ ವಿಭಾಗದಿಂದ ಯಾರಾದರೂ ಒಬ್ಬರನ್ನು ಕಳಿಸಿಕೊಡಬಲ್ಲಿರಾ?"

"ಒಂದೆರಡು ದಿನಕ್ಕಾದರೆ, ಸಾಧ್ಯ ಇದೆ."

"ಆಯಿತು–ಸಧ್ಯಕ್ಕೆ ಅಷ್ಟಾದರೆ ಸಾಕು."

ಜಾವೋರ ಕಣ್ಣುಗಳು 'ಲೂ'ನ ನಿಸ್ತೇಜವಾದ ಮುಖವನ್ನೊಮ್ಮೆ ಪರಿಶೀಲಿಸಿದವು. ಬಲಿಷ್ಠವಾಗಿ, ಆರೋಗ್ಯವಂತನಾಗಿ ಇದ್ದ ಅವಳ ದೇಹ ಕುಸಿದದ್ದೇಕೆ?– ಅವರಿಗೆ ಸಮಾಧಾನ ಹೊಳೆಯಲಿಲ್ಲ.

ವೈಸ್ ಮಿನಿಸ್ಟರ್ ಜಿಯಾವೋರ ಆಪರೇಷನ್‌ನಿಂದ ಏನಾದರೂ ಗಾಭರಿಗೊಂಡಿದ್ದಾಳೆಯೇ ಎಂದು ಯೋಚಿಸಿದರೂ, ಅವರ ಯೋಚನೆ ಮರುಗಳಿಗೆಯೇ ನಿರಾಧಾರವೆನಿಸಿತು. ಸಾಕಷ್ಟು ಧೈರ್ಯ, ಸ್ಥೈರ್ಯ, ದೃಢ ವಿಶ್ವಾಸಗಳಿಂದ ಮಾಡುತ್ತಿದ್ದ ಆಪರೇಷನ್‌ಗಳ ಅನುಭವವಿದೆ. ಹೀಗೆ ಕುಸಿದುಬೀಳುವಷ್ಟು ಮನೋದೌರ್ಬಲ್ಯ ಅವಳಿಗಿಲ್ಲ. ಅಲ್ಲದೆ ಅವಳಿಗೆ ಬಂದಿರುವ ಹೃದಯ ಸಂಬಂಧವಾದ ಈ ಕಾಯಿಲೆಗೆ ಕಾರಣಗಳು ಬೇಕಿಲ್ಲ.

ಇಷ್ಟೆಲ್ಲ ತರ್ಕದ ನಂತರವೂ, ಅವರಿಗೆ ಜಿಯಾವೋನ ಆಪರೇಷನ್ ಮತ್ತು 'ಲೂ'ಳ ಕಾಯಿಲೆ ನಡುವೆ ಏನೋ ಸಂಬಂಧವಿದೆ ಎಂತಲೇ ಅವರ ಅಂತರಾತ್ಮಕ್ಕೆ ಅನಿಸುತ್ತಿತ್ತು. ಅದಕ್ಕಾಗಿ 'ಲೂ'ಳಿಗೆ ಜಿಯಾವೋನ ಕೇಸನ್ನು ಒಪ್ಪಿಸಿ ತಪ್ಪು ಮಾಡಿದ್ದೇನೆ– ಎನ್ನುವ ಪಶ್ಚಾತ್ತಾಪ. ಜಿಯಾವೋನ ಪತ್ನಿ ಹಾಗೆ ನೋಡಿದರೆ, ಮೊದಲಿನಿಂದಲೂ,

'ಲೂ'ಳ ಕೈಯಲ್ಲಿ ಗಂಡನ ಕಣ್ಣಿನ ಆಪರೇಷನ್ ಮಾಡಿಸಲು ಹಿಂಜರಿಯುತ್ತಲೇ ಇದ್ದಳು.

ಆ ದಿನ 'ಲೂ' ಮಾತುಕತೆ ಮುಗಿಸಿ ಹೊರಟುಹೋದಾಗ ಕಿಂಬೋ, ಡಾ॥ ಜಾವೋರನ್ನು ಕೇಳಿಯೇ ಕೇಳಿದರು–

"ಡೈರೆಕ್ಟರ್ ಜಾವೋ, ಡಾ॥ ಲೂ ತನ್ನ ವಿಭಾಗದ ಉಪ–ಅಧಿಕಾರಿಯಾಗಿ ಆಗಿದ್ದಾಳೇನು?"

"ಇಲ್ಲ"–

"ಹಾಗಾದರೆ ಅಟೆಂಡಿಂಗ್ ಡಾಕ್ಟರೇನು?"

"ಇಲ್ಲ"

"ಪಾರ್ಟಿ ಸದಸ್ಯೆ?"

"ಇಲ್ಲ"

"ದಯವಿಟ್ಟು ಕ್ಷಮಿಸಿ. ನಾನು ಸ್ವಲ್ಪ ನೇರವಾಗಿ ಮಾತಾಡ್ತೀನಿ. ನಾವೆಲ್ಲಾ ಪಾರ್ಟಿ ಮೆಂಬರುಗಳು. ಒಬ್ಬ ವೈಸ್ ಮಿನಿಸ್ಟರ್ ಆಪರೇಷನ್‌ನನ್ನು ಸಾಧಾರಣ ಡಾಕ್ಟರ ಕೈಲಿ ಮಾಡಿಸೋದು ಸರಿ ಅಲ್ಲ ಅಂತ ನನ್ನ ಭಾವನೆ."

ಜಿಯಾವೋ ತನ್ನ ಕೈಲಿದ್ದ ವಾಕಿಂಗ್ ಸ್ಟಿಕ್ಕನ್ನು ನೆಲಕ್ಕೆ ಝಾಡಿಸಿ ಆಕೆಯನ್ನು ಸುಮ್ಮನಿರಿಸಿದ. ಆಕೆಯ ಕಡೆ ತಿರುಗಿ ಹೇಳಿದ–

"ಕಿಂಬೋ, ನೀನೇನು ಮಾಡುತ್ತಿದ್ದಿ? ಯಾವ ಸರ್ಜನ್ ಆಪರೇಷನ್ ಮಾಡಬೇಕೆಂಬುದನ್ನು ಆಸ್ಪತ್ರೆಯವರೇ ನಿರ್ಧರಿಸಲಿ. ನೀನೇಕೆ ನಡುವೆ ಪ್ರವೇಶಿಸುತ್ತೀ?"

ಕಿನ್ ಪ್ರತಿಭಟಿಸುವ ದನಿಯಲ್ಲಿ ಹೇಳಿದಳು–

"ಜಿಯಾವೋ, ನಿಮ್ಮ ಧೋರಣೆ ಸರಿಯಾದ್ದಲ್ಲ. ಸ್ವಲ್ಪ ಜವಾಬ್ದಾರಿಯಿಂದ ಯೋಚಿಸಬೇಕು. ನೀವು ಆರೋಗ್ಯವಾಗಿದ್ದರೆ ತಾನೇ ಚೆನ್ನಾಗಿ ಕೆಲಸ ಮಾಡುವುದಕ್ಕೆ ಆಗೋದು. ಕ್ರಾಂತಿ, ಪಾರ್ಟಿ.....ಹೀಗೆ......ಎಲ್ಲಕ್ಕೂ ನಾವು ಹೊಣೆ ತೆಗೆದುಕೊಳ್ಳಬೇಕು.

ಇವರಿಬ್ಬರ ನಡುವಿನ ಘರ್ಷಣೆಯನ್ನು ತಡೆಯಲು ಮಧ್ಯೆಬಾಯಿ ಹಾಕಿದರು–

"ಕಾಮ್ರೇಡ್ ಕಿನ್, ನಾನು ಹೇಳೋದನ್ನು ಸ್ವಲ್ಪ ಕೇಳಿ. ನನ್ನ ಮಾತಿನಲ್ಲಿ ನಂಬಿಕೆ ಇಡಿ. ಅವಳು ಕಮ್ಯೂನಿಸ್ಟ್ ಅಲ್ಲದೆ ಇರಬಹುದು.ಆದರೆ ಒಳ್ಳೆ ಡಾಕ್ಟರಂತೂ ಹೌದು. ವಿಶೇಷವಾಗಿ, ಕ್ಯಾಟರಾಕ್ಟ್ ಆಪರೇಷನ್‌ಗಳಂತೂ ಅವಳ ಕೈಯಲ್ಲಿ ತುಂಬಾ ಚೆನ್ನಾಗಿ ಆಗುತ್ತೆ. ನೀವೇನೂ ಯೋಚನೆ ಮಾಡಬೇಕಾದ್ದಿಲ್ಲ."

"ಡೈರೆಕ್ಟರ್ ಜಾವೋ, ಅದು ಹಾಗಲ್ಲ. ಜೊತೆಗೆ, ನಾನು ತುಂಬಾ ಜಾಗರೂಕಳಂತೂ ಅಲ್ಲ"–ಕಿನ್ ನೀಳವಾಗಿ ಉಸಿರೆಳೆದಳು.

"ನಾನಿನ್ನೂ ಚಿಕ್ಕ ತರಗತಿಯಲ್ಲಿದ್ದಾಗ, ನನಗಿಂತ ದೊಡ್ಡವನಾಗಿದ್ದ ಕಾಮ್ರೆಡ್ ಒಬ್ಬನಿಗೆ ಆಪರೇಷನ್ ಆಗಬೇಕಿತ್ತು. ಬೀಜಿಂಗ್ ಹಿಂತಿರುಗಿ ಬರಲು ಅವನನ್ನು ಬಿಡಲಿಲ್ಲ. ಅಲ್ಲೇ ಇದ್ದ ಒಂದು ಸಣ್ಣ ಆಸ್ಪತ್ರೆಗೆ ಹೋದ. ಆಪರೇಷನ್ ನಡೆಯುತ್ತಿರಬೇಕಾದರೇನೇ ಕಣ್ಣು ಗುಡ್ಡೆ ಜಾರಿಬಿತ್ತು. ಜಿಯಾವೋರನ್ನು 'ಗುಂಪಿನ' ಅನುಯಾಯಿಗಳು ಏಳುವರುಷ ಕಾಲ ಬಂಧಿಸಿ ಇಟ್ಟಿದ್ದರು.

"ಅಂಥಾದ್ದೇನು ಆಗುವುದಿಲ್ಲ ಕಾಮ್ರೆಡ್ ಕಿನ್. ನಮ್ಮ ಆಸ್ಪತ್ರೆಯಲ್ಲಿ ಅನಾಹುತಗಳೇನೂ ಆಗೋದಿಲ್ಲ."

ಕಿನ್, ಇನ್ನೂ ತನ್ನನ್ನು ಸಮರ್ಥಿಸಿಕೊಳ್ಳುತ್ತಲೇ ಮುಂದುವರೆದಳು. "ವಿಭಾಗದ ಮುಖ್ಯಸ್ಥರಾದ ಡಾ॥ಸನ್‌ರನ್ನೇ ಯಾಕೆ, ಆಪರೇಷನ್ ಮಾಡಲು ಕೇಳಬಾರದು?"

ಜಾವೋ, ಆಗುವುದಿಲ್ಲವೆಂಬಂತೆ ತಲೆಯಾಡಿಸುತ್ತಾ, ನಕ್ಕು ಹೇಳಿದರು– ಡಾ॥ ಸನ್‌ರಿಗೆ ಆಗಲೇ ಎಪ್ಪತ್ತು ವಯಸ್ಸಾಯಿತು. ಅವರಿಗೇ ಸರಿಯಾಗಿ ಕಣ್ಣು ಕಾಣದು. ಸಾಲದ್ದಕ್ಕೆ, ಸುಮಾರು ವರುಷಗಳಿಂದ ಅವರು ಆಪರೇಷನ್‌ಗಳನ್ನೇ ಮಾಡಿಲ್ಲ. ಅವರು ಸಂಶೋಧನೆ ನಡೆಸುತ್ತಾರೆ; ಕಿರಿಯ ವೈದ್ಯರಿಗೆ ಮಾರ್ಗದರ್ಶನ, ಸಲಹೆಗಳನ್ನು ನೀಡುತ್ತಾರೆಯೇ ಹೊರತು, ಬೇರೇನನ್ನೂ ಮಾಡೋದಿಲ್ಲ. ಡಾ॥ ಲೂ ಅವರಿಗಿಂತ ಒಳ್ಳೇ ಸರ್ಜನ್ ಆಗಿದ್ದಾರೆ."

"ಡಾ॥ ಗು ಆವೋ ಹೇಗೆ?"

"ಜಾವೋ ತೀಕ್ಷ್ಣವಾಗಿ ನೋಡಿದರು. ಡಾ॥ ಗು ಆವೋ!... ಪರವಾಗಿಲ್ಲ, ಎಲ್ಲವನ್ನೂ ವಿಚಾರಿಸಿಕೊಂಡು ಬಂದಿರಬೇಕು! ಅಲ್ವ"

"ಅದೇ ಗು ಆವೋ ರುಕ್ಕಿಂಗ್," ನೆನಪಿಸಿದಳು.

ಜಾವೋ ಅಸಹಾಯಕರಾಗಿ ಹೇಳಿದರು– "ಆತ ಯಾವಾಗಲೋ ದೇಶ ಬಿಟ್ಟು ಹೋಗಿದ್ದಾನೆ."

ಕಿಂಬೋ ಸುಲಭವಾಗಿ ಸೋಲುವುದಿಲ್ಲ.

"ಹಾಗಾದರೆ ಯಾವಾಗ ಬರ್ತಾರೆ?"

"ಇಲ್ಲ, ಆತ ಬರೋದೇ ಇಲ್ಲ."

"ಅಂದ್ರೆ!!" – ತೀಕ್ಷ್ಣವಾಗಿ ನೋಡಿ ಕೇಳಿದಳು.

ಜಾವೋ ನಿಟ್ಟುಸಿರು ಬಿಟ್ಟು ಹೇಳಿದರು.

"ಡಾ॥ ಗು ಆವೋರ ಹೆಂಡತಿ ಪರದೇಶದಿಂದ, ಅವರ ಅಪ್ಪ ಸತ್ತಾಗ ಹಿಂತಿರುಗಿದಳು, ಆಕೆಯ ಅಪ್ಪ, ತನಗಿದ್ದ ಅಂಗಡಿಯನ್ನು ಮಗಳು ಅಳಿಯನಿಗೆ ಕೊಟ್ಟುಬಿಟ್ಟ, ಅದಕ್ಕೇ ಅವರು ಇಲ್ಲಿ ಬಿಟ್ಟುಬಿಟ್ಟಿದ್ದು."

"ಏನು?– ಕೇವಲ ಅಂಗಡಿಗೋಸ್ಕರ ವೈದ್ಯವೃತ್ತಿ ಬಿಡೋದೇ? ನನಗೆ ಇದರಲ್ಲಿ ಅರ್ಥಾನೇ ಕಾಣೊಲ್ಲ!..." ಜಿಯಾವೋ ಕೂಡ ನಿಟ್ಟುಸಿರಿಟ್ಟ,

"ಅವರೊಬ್ಬರೇ ಅಲ್ಲ, ನಮ್ಮಲ್ಲಿರೋ ಎಷ್ಟೋ ಸಮರ್ಥರಾದವರೆಲ್ಲ ಬಿಟ್ಟು ಹೋಗಿದ್ದಾರೆ; ಕೆಲವರು ಹೋಗುವುದರಲ್ಲಿದ್ದಾರೆ."

"ಇವರೆಲ್ಲ ಯಾಕೆ ಹೀಗೆ ಮಾಡುತ್ತಿದ್ದಾರೋ, ನನಗೊಂದೂ ಅರ್ಥವಾಗ್ತಿಲ್ಲ" – ಎಂದು ರೋಷದಿಂದಲೇ ನುಡಿದಳು.

ಜಿಯಾವೋ ಕೋಲು ತಿರುಗಿಸುತ್ತಾ, ಜಾವೋರ ದಿಕ್ಕಿಗೆ ಮುಖಮಾಡಿ ಹೇಳಿದರು – "ಐವತ್ತರ ದಶಕದ ಪ್ರಾರಂಭದಲ್ಲಿ ನಿಮ್ಮಂತಹ ಬುದ್ಧಿಜೀವಿಗಳು ಅನೇಕರು, ಎಷ್ಟೋ ಕಷ್ಟಗಳನ್ನು ಎದುರಿಸುತ್ತಲೇ, ಹೊಸ ಚೀನಾ ದೇಶದ ನಿರ್ಮಾಣದ ಕನಸು ಕಟ್ಟಿಕೊಂಡು ಹಿಂತಿರುಗಿ ಬಂದರು. ಆದರೆ ಈಗ ನೋಡಿ, ಬುದ್ಧಿಜೀವಿಗಳೂಂತ ಕರೆಸಿಕೊಂಡವರೆಲ್ಲ ದೇಶಾಭಿಮಾನ ಬಿಟ್ಟು, ದೇಶಬಿಟ್ಟು ಹೊರಟು ಹೋಗುತ್ತಿದ್ದಾರೆ. .... ಇದೊಂದು ಗುಣಪಾತವಾಗಲಿದೆ."

"ಇದನ್ನು ಹೀಗೇ ಬಿಡಬಾರದು, ಭಾವನಾತ್ಮಕ ವಿಚಾರ ಚಿಂತನೆಗಳನ್ನು ಮಾಡಬೇಕು. ಆ ವಿದ್ರೋಹಿ ಗುಂಪನ್ನು ಮುರಿದು ಚದುರಿಸಿದ ಮೇಲೆ ಬುದ್ಧಿಜೀವಿಗಳ ಸಾಮಾಜಿಕ ಸ್ಥಿತಿಯಲ್ಲಿ ಸಾಕಷ್ಟು ಸುಧಾರಣೆಯನ್ನು ತಂದಿದ್ದಾಯಿತು. ಚೀನಾದೇಶ ಆಧುನೀಕರಣದತ್ತ ಸಾಗಿದಂತೆ, ಈ ಬುದ್ಧಿಜೀವಿಗಳ ಸ್ಥಿತಿಗತಿಗಳಲ್ಲಿ ಖಂಡಿತ ಬದಲಾವಣೆ ಬರುತ್ತೆ. ಅವರ ಜೀವನಸ್ಥಿತಿ ಉತ್ತಮಗೊಳ್ಳುತ್ತೆ."

"ಹೌದು, ನಮ್ಮ ಪಾರ್ಟಿ ಕಮಿಟಿಯೂ ಇದೇ ನಂಬಿಕೆಯನ್ನು ಇಟ್ಟುಕೊಂಡಿದೆ. ನಾನೂ ಕೂಡ ಡಾ॥ ಗು ಆವೋರನ್ನು ಎರಡು ಮೂರು ಸಲ ಭೇಟಿಯಾಗಿ, ಎಷ್ಟೋ ಕೇಳಿಕೊಂಡೆ. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ."

ಕಿನ್ ಮಾತನ್ನು ಮುಂದುವರಿಸಬೇಕೆಂದಿದ್ದಳು. ಆದರೆ ಜಿಯಾವೋ ಅದನ್ನು ತಡೆದರು.

"ಡಾ॥ ಜಾವೋ, ನಾನು ಇಲ್ಲಿಗೆ ಬಂದದ್ದು, ಇಂತಹವರೇ ಬೇಕು. ಈ ಪ್ರೊಫೆಸರ್, ಈ ಡಾಕ್ಟರ್ ಆಗಬೇಕೂಂತ ಹಟ ಹಿಡಿಯುವುದಕ್ಕಲ್ಲ. ನಿಮ್ಮ ಆಸ್ಪತ್ರೆಯ ಬಗ್ಗೆ ನನಗೆ ವಿಶ್ವಾಸವಿರೋಧರಿಂದ ಇಲ್ಲಿಗೆ ಬಂದಿದ್ದೇನೆ. ಹೇಳೋದಾದರೆ, ಈ ಆಸ್ಪತ್ರೆ ಬಗ್ಗೆ ನನಗೆ ವಿಶೇಷವಾದ ಅಭಿಮಾನ. ಯಾಕಂದ್ರೇ ಕೆಲವು ವರುಷಗಳ ಹಿಂದೆ, ನನ್ನ ಬಲಗಣ್ಣಿನಲ್ಲಿ ಪೊರೆ ಬಂದಿತ್ತು. ಅದನ್ನು ತೆಗೆಸಬೇಕೂಂತ ಇಲ್ಲಿಗೆ ಬಂದಿದ್ದೆ. ಅದ್ಭುತವಾದ

ರೀತೀಲಿ ಆಪರೇಷನ್ ಮಾಡಿ ಪೊರೆ ತೆಗೆದಿದ್ದರು" – ಸಂತೋಷದಿಂದ ಹೇಳುತ್ತಿದ್ದರು, ಜಿಯಾವೋ.

"ಯಾರು ಮಾಡಿದ್ದು?"

"ಯಾರೂಂತ ಆಗ ವಿಚಾರಿಸೋಕೆ ಹೋಗಲಿಲ್ಲ" – ದನಿಯಲ್ಲಿ ವಿಷಾದವಿತ್ತು.

"ಹೋಗಲಿ ಬಿಡಿ. ಅದನ್ನು ಸುಲಭವಾಗಿ ಪತ್ತೆ ಹಚ್ಚಬಹುದು. ನಿಮ್ಮ ಕೇಸ್ ಹಿಸ್ಟರಿ ಷೀಟನ್ನು ತರಿಸಿದರೆ ಗೊತ್ತಾಗುತ್ತೆ."

ಜಾವೋ ರಿಸೀವರನ್ನು ಕೈಗೆತ್ತಿಕೊಂಡರು. ಕಡೆಯ ಪಕ್ಷ, ಆ ಡಾಕ್ಟರು ಯಾರೂಂತ ಪತ್ತೆ ಹಚ್ಚಿ ಆಕೆಯ ಕೈಯ್ಯಲ್ಲೇ ಇವರನ್ನು ಒಪ್ಪಿಸಿದರೆ, ಕಾಮ್ರೆಡ್ ಕಿಂಬೋಗೆ ತೃಪ್ತಿಯಾಗುತ್ತೆ– ಅಂತ ಯೋಚಿಸಿ, ಪ್ರಯತ್ನಿಸುತ್ತಿದ್ದಂತೆ, ಜಿಯಾವೋ ನುಡಿದರು.

"ಇಲ್ಲ ಬಿಡಿ. ಅದು ಸಾಧ್ಯವಾಗೊಲ್ಲ. ಹೊರ ರೋಗಿಯಾಗಿ ಆ ಆಪರೇಷನ್ ಮಾಡಿಸಿಕೊಂಡದ್ದು. ಆದ್ದರಿಂದ ಕೇಸ್ ಹಿಸ್ಟರಿ ನಿಮಗೆ ಸಿಗುವುದಿಲ್ಲ.... ಆಕೆ, ದಕ್ಷಿಣದ ಕಡೆಯಿಂದ ಬಂದವಳಂತೆ ಮಾತಾಡುತ್ತಿದ್ದಳು."

"ಅಷ್ಟರಿಂದ ತಿಳಿಯೋದು ಕಷ್ಟವಾಗುತ್ತೆ." ನಗುತ್ತಾ ಜಾವೋ ರಿಸೀವರನ್ನು ಕೆಳಗಿಟ್ಟರು. "ನಮ್ಮಲ್ಲಿ ದಕ್ಷಿಣದ ಕಡೆಯವರಂತೆ ಮಾತನಾಡುವ ಅನೇಕ ಲೇಡಿ ಡಾಕ್ಟರ್ಸ್ ಇದ್ದಾರೆ. 'ಲೂ' ಕೂಡಾ ದಕ್ಷಿಣದ ಕಡೆಯಿಂದ ಬಂದವಳೇ.... ಅವಳೇ ಮಾಡಲಿ ಬಿಡಿ."

ಕೊನೆಗೆ ದಂಪತಿಗಳು ಒಪ್ಪಿದರು. ಜಿಯಾವೋ ಕಿನ್‌ರ ಸಹಾಯದಿಂದ ಹೊರಗೆ ನಡೆದರು.

ಲೂ ನ ಕಾಯಿಲೆಗೆ ಇದೇ ಕಾರಣವೇ! ಜಾವೋ ನಂಬುತ್ತಿಲ್ಲ. ಇಂತಹ ಆಪರೇಷನ್‌ಗಳನ್ನು ನೂರಾರು, ಸಾವಿರಾರು ಸಲ ಮಾಡಿದ್ದಾಳೆ. ಇಷ್ಟೊಂದು ಹೆದರಿಕೊಳ್ಳುವ ಸಂಭವಾನೇ ಇಲ್ಲ. ಆಪರೇಷನ್ ಪ್ರಾರಂಭಕ್ಕೆ ಮುಂಚೆ ತಾವು ಹೋಗಿ ಆಕೆಯನ್ನು ಮಾತಾಡಿಸಿ ಬಂದಿದ್ದರು. ಪ್ರಶಾಂತವಾಗಿ, ತುಂಬಾ ಆತ್ಮವಿಶ್ವಾಸದಿಂದಲೇ ಇದ್ದಳು. ಹಾಗಾದರೆ ಈ ಆಕಸ್ಮಿಕಕ್ಕೇ ಏನು ಕಾರಣ?" – ಜಾವೋ ಕಾಳಜಿಯಿಂದ ಅವಳನ್ನು ನೋಡಿದರು. ಸಾಯುವ ಕ್ಷಣಗಳಲ್ಲೂ ಪ್ರಶಾಂತವಾದ ಮುಖ!!

ಲೂ ಎಂದೂ ತಾಳ್ಮೆನ ಕಳೆದುಕೊಳ್ಳುತ್ತಿರಲಿಲ್ಲ. ಕಿಂಬೋರು ಕೇಳಿದ ಪ್ರಶ್ನೆಗಳಿಗೆ ಬೇರೆ ಯಾರಾದರೂ ಆಗಿದ್ದರೆ, ಸಹನೆ ಕಳೆದುಕೊಂಡು ಹೌಹಾರಿ ಬೀಳುತ್ತಿದ್ದರು. ಇಲ್ಲವೆ ಆಮೇಲಾದರೂ ಅಸಹನೆಯಿಂದ ಒಳಗೊಳಗೇ ಕುದಿದು ಉರಿ ಕಾರುತ್ತಿದ್ದರು. 'ಲೂ' ಮಾತ್ರ ಏನೂ ಆಗದಂತೆ, ಎಂದಿನಂತೆ ಸೌಮ್ಯ ಶಾಂತ ಪ್ರತಿಷ್ಠಿತ ವ್ಯಕ್ತಿಗೆ ಆಪರೇಷನ್ ಮಾಡುವ ಅವಕಾಶದಿಂದ ಹೆಮ್ಮೆಯೂ ಪಡಲಿಲ್ಲ. ಕಿಂಬೋರ ಅಸಂಬದ್ಧ

ಪ್ರಶ್ನೆಗಳಿಂದ ಅವಮಾನವಾಯಿತೆಂತಲೂ ಭಾವಿಸಲಿಲ್ಲ. ಅವಳು ಅದನ್ನು ಸ್ವೀಕರಿಸಿದ ರೀತೀನೇ ಬೇರೆಯಾಗಿತ್ತು. ಪ್ರತಿಯೊಬ್ಬ ರೋಗಿಗೂ ತನೆಗ ಬೇಕಾದ ವೈದ್ಯರನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕು ಇರುತ್ತೆ. ಕಿಂಬೋರ ವಿಚಾರದಲ್ಲೂ ಅಷ್ಟೆ!

"ಏನಮ್ಮ, ಯಾವ ದೊಡ್ಡ ಅಧಿಕಾರಿಗೆ, ನಿನ್ನ ಅಗತ್ಯ ಇದೆಯಂತೇ?" – ಮೃದುವಾಗಿ ಕೇಳಿದಳು, ಜಿಯಾಂಗ್.

"ಇನ್ನೂ ಯಾವುದೂ ನಿರ್ಧಾರ ಆಗಿಲ್ಲ."

"ಬೇಗ ಬೇಗ ನಡಿ", ಆತುರ ಮಾಡಿದಳು ಜಿಯಾಂಗ್. ಅಂಕಲ್ ಜಾಂಗ್‌ರನ್ನು ಒಪ್ಪಿಸುವುದೇ ಒಂದು ದೊಡ್ಡ ಸಾಹಸ. ಆಪರೇಷನ್ ನಂತರ ಚೆನ್ನಾಗಿ ನೋಡಬಲ್ಲ. ಏನಾದರೂ ಮಾಡಿ ಆತನನ್ನು ಗುಣಪಡಿಸಲೇ ಬೇಕು. ಆತನನ್ನು ಮನವೊಲಿಸಿ, ಒಪ್ಪಿಸಬೇಕು. ಇದೇ ನಮ್ಮ ಕರ್ತವ್ಯ."

"ಹಾಗಾದರೆ, ಅದೆಲ್ಲ ನೀನು ಮಾಡು. ಆತನನ್ನು ಒಪ್ಪಿಸುವುದಕ್ಕೆ, ನಿನಗೆ ಮಾತ್ರ ಸಾಧ್ಯವಾಗಬಹುದು."

ಇಬ್ಬರೂ ಮಾತನಾಡುತ್ತಾ, ವೈಟಿಂಗ್ ರೂಂ ನ ಮೂಲಕ ಹಾದು ಹೋದಾಗ ಒಳಗೆ ಕುಳಿತಿದ್ದ ರೋಗಿಗಳು ಎದ್ದು ಇಬ್ಬರನ್ನೂ ವಂದಿಸಿದರು. ಡಾ॥ ಲೂ ನಗುತ್ತಾ ಪ್ರತಿವಂದನೆ ಸಲ್ಲಿಸಿ, ತನ್ನ ಕೊಠಡಿಯೊಳಗೆ ಪ್ರವೇಶಿಸಿ, ಕೆಲಸದಲ್ಲಿ ಮಗ್ನಳಾದಳು. ಯುವಕನೊಬ್ಬನನ್ನು ಪರೀಕ್ಷಿಸುತ್ತಿರುವಾಗ, ವ್ಯಕ್ತಿಯೊಬ್ಬ ಪ್ರವೇಶಿಸಿ ಜೋರಾಗಿ ಕೂಗಿದ – "ಡಾ॥ ಲೂ".

ಲೂ ಮತ್ತು ರೋಗಿ, ಇಬ್ಬರೂ ಕೂಗು ಕೇಳಿ ಬಂದ ದಿಕ್ಕಿನತ್ತ ನೋಡಿದರು. ಎತ್ತರದ ಆಜಾನುಬಾಹು ವ್ಯಕ್ತಿ, ಐವತ್ತರ ಪ್ರಾಯವಿರಬಹುದು. ಕಪ್ಪು ಪ್ಯಾಂಟು, ಬಿಳಿಯ ಅಂಗಿ ಧರಿಸಿದ್ದ, ಕತ್ತಿನ ಸುತ್ತ ಒಂದು ಟವೆಲನ್ನು ಸುತ್ತಿಕೊಂಡಿದ್ದ–ನಡೆದು ಬರುತ್ತಿದ್ದ. ಅವನ ಕೂಗಿನಿಂದ ಹೆದರಿದವರೆಲ್ಲ ಕಾರಿಡಾರಿನಲ್ಲಿ ಆತನಿಗೆ ಜಾಗ ಬಿಟ್ಟು ನಿಂತರು. ಎಲ್ಲರಿಗಿಂತ ಎತ್ತರವಾಗಿದ್ದ ವ್ಯಕ್ತಿ, ಸರಿಯಾಗಿ ಕಣ್ಣು ಕಾಣಿಸುತ್ತಿರಲಿಲ್ಲವಾದ್ದರಿಂದ ಇಷ್ಟೊಂದು ಜನರನ್ನು ತಾನು ಆಕರ್ಷಿಸುತ್ತಿದ್ದೇನೆಂಬ ಪರಿವೆಯೇ ಇಲ್ಲದೆ, ಲೂಳ ಧ್ವನಿ ಕೇಳಿಬಂದ ದಿಕ್ಕಿನಲ್ಲಿ ಹೆಜ್ಜೆ ಹಾಕಿದ.

ಲೂ ಅವನ ಸಹಾಯಕ್ಕೆಂದು ಧಾವಿಸಿದಳು.

"ಅಂಕಲ್ ಜಾಂಗ್ ದಯವಿಟ್ಟು ಕುಳಿತುಕೊಳ್ಳಿ."

"ಥ್ಯಾಂಕ್ಯೂ ಡಾ॥ ಲೂ ನಾನು ನಿಮಗೊಂದು ವಿಷಯ ಹೇಳಬೇಕು."

"ಆಯಿತು, ಹೇಳುವಿರಂತೆ. ಮೊದಲು ಸ್ವಲ್ಪ ಕುಳಿತುಕೊಳ್ಳಿ." ಒಂದು ಕುರ್ಚಿಯಲ್ಲಿ ಕುಳ್ಳಿರಿಸಿದಳು.

"ಬೀಜಿಂಗ್‌ನಲ್ಲಿ ಈಗ ಸಾಕಷ್ಟು ದಿನದಿಂದ ಇದ್ದೀನಿ. ನಾನು ಮನೆಗೆ ಹೋಗಬೇಕೂಂತ ಯೋಚಿಸುತ್ತಿದ್ದೀನಿ. ನಾಳೆ ಹೋಗಿ ಸ್ವಲ್ಪ ದಿನ ಇದ್ದು ಬರೋಣಾಂತ."

"ಇಲ್ಲ. ಸಾಧ್ಯವಿಲ್ಲ. ನಾನಂತೂ ಖಂಡಿತ ಇದಕ್ಕೆ ಒಪ್ಪೊಲ್ಲ... ಎಷ್ಟೋ ದೂರದಿಂದ ಬಂದಿದ್ದೀರಿ. ಸಾಕಷ್ಟು ಹಣ ಖರ್ಚು ಮಾಡಿದ್ದೀರಿ..."

"ಅದೆಲ್ಲ ಏನೂ ಪರವಾಗಿಲ್ಲ. ನಾಳೆ ಮನೆಗೆ ಹೋಗ್ತೇನೆ. ಚೆನ್ನಾಗಿ ಕೆಲಸ ಮಾಡ್ತೇನೆ. ಒಂದಷ್ಟು ಸಂಪಾದನೆ ಮಾಡ್ತೇನೆ. ಕಣ್ಣು ಕಾಣದಿದ್ದರೇನಂತೆ? ಕೆಲಸ ಮಾಡಬಲ್ಲೆ. ಬ್ರಿಗೇಡ್‌ಗೆ ನನ್ನ ಬಗ್ಗೆ ಸಹಾನುಭೂತಿ ಇದೆ.... ನಾನಂತೂ ಹೋಗಲೇ ಬೇಕೂಂತ ನಿರ್ಧಾರ ಮಾಡಿದ್ದೇನೆ. ಡಾ॥ ಲೂ ನಿಮಗೆ ಹೇಳದೆ ಹೋಗೋಕೆ ಮನಸ್ಸು ಒಪ್ಪಲಿಲ್ಲ. ಅದಕ್ಕೆಂದೇ ಬಂದೆ. ಬರ್ತೇನೆ ಡಾಕ್ಟರ್. ನೀವು ನನಗಾಗಿ ಎಷ್ಟೊಂದು ತೊಂದರೆ ತೆಗೆದುಕೊಂಡಿದ್ದೀರಿ!"

ಸ್ವಲ್ಪ ಸಮಯದ ಹಿಂದೆ, ಡಾ॥ ಲೂ ತನ್ನ ತಂಡದ ಜೊತೆಗೆ ಜಾಂಗ್‌ನ ಬ್ರಿಗೇಡ್ ಅನ್ನು ಭೇಟಿಯಾದಾಗ, ಆತನ ಕಣ್ಣಿನಲ್ಲಿದ್ದ ಹುಣ್ಣುಗಳನ್ನು ಗಮನಿಸಿ ಆಸ್ಪತ್ರೆಗೆ ಬರಹೇಳಿದ್ದರು. 'ಕಾರ್ನಿಯಾ ಟ್ರಾನ್ಸ್‌ಪ್ಲಾಂಟ್' ಮಾಡಿ ಮತ್ತೆ ಅವನ ದೃಷ್ಟಿಯನ್ನು ಮರಳಿ ಪಡೆಯಬಹುದು, ಎಂದು ಅವನಿಗೆ ಭರವಸೆ ನೀಡಿದ್ದಳು.

"ನಿಮ್ಮ ಮಗ, ನಿಮಗಾಗಿ ಎಷ್ಟೊಂದು ಹಣ ಖರ್ಚುಮಾಡಿ ಇಲ್ಲಿಗೆ ಕಳಿಸಿಕೊಟ್ಟಿದ್ದಾನೆ. ಅಂಥಾದ್ದರಲ್ಲಿ ನಾವು ಈಗ ನಿಮ್ಮನ್ನು ವಾಪಸ್ ಕಳಿಸಿದರೆ?... ಇಲ್ಲ ಸಾಧ್ಯವೇ ಇಲ್ಲ."

"ಈಗ ನಾನು ಚೆನ್ನಾಗಿದ್ದೇನೆ"!

ಲೂ ನಕ್ಕಳು– "ನಿಮಗೆ ಪೂರ್ತಿಯಾಗಿ ವಾಸಿಯಾದ ಮೇಲೆ ಎಷ್ಟು ಬೇಕಾದರೂ ಕೆಲಸ ಮಾಡಬಹುದು. ಬೇಕಾದರೆ ಇನ್ನೂ ಇಪ್ಪತ್ತು ವರ್ಷ ದುಡಿಯುವಷ್ಟು ಶಕ್ತಿ ನಿಮಗಿದೆ.

ಅಂಕಲ್ ಜಾಂಗ್ ಜೋರಾಗಿ ನಕ್ಕು ಹೇಳಿದರು–ನಿಮಗೆ ಹಾಗೆ ಅನ್ನಿಸುತ್ತೇನು? ನನ್ನ ಕಣ್ಣೊಂದು ಚೆನ್ನಾಗಾದರೆ ಏನು ಬೇಕಾದರೂ ಮಾಡುವ ಸಾಮರ್ಥ್ಯ ಇದೆ."

"ಹಾಗಾದರೆ ಇದ್ದುಬಿಟ್ಟು ವಾಸಿಮಾಡಿಕೊಂಡು ಹೋಗಬಹುದಲ್ಲ." ಅಂಕಲ್ ಜಾಂಗ್ ಡಾ॥ ಲೂಗೆ ಗುಟ್ಟೊಂದನ್ನು ಹೇಳುವಂತೆ ಹತ್ತಿರ ಸರಿದು ಹೇಳತೊಡಗಿದರು– "ಡಾ॥ ಲೂ, ನಿಜ ಹೇಳಬೇಕೂಂದ್ರೆ, ನಾನು ಹೋಗಬೇಕೂಂತ ಹೇಳ್ತಿರೋದಕ್ಕೆ ಕಾರಣಾನೇ ಬೇರೆ. ಬೀಜಿಂಗ್ ಹೋಟೆಲುಗಳಲ್ಲಿ ಇರುವಷ್ಟು ಶ್ರೀಮಂತ ನಾನಲ್ಲ. ನನಗೆ ಹಣದ ಮುಗ್ಗಟ್ಟಿದೆ."

ಲೂಗೆ ದಿಗ್ಭ್ರಮೆಯಾಯಿತು. "ನನಗೆ ಅರ್ಥವಾಗುತ್ತೆ. ಇನ್ನೇನು ಲಿಸ್ಟ್‌ನಲ್ಲಿ ನಿಮ್ಮದೇ ಹೆಸರು, ಇನ್ನು ಉಳಿದಿರೋದು-ಯಾರಾದರೂ ದಾನಿಗಳು ಸಿಕ್ಕಿದ ತಕ್ಷಣ, ನಿಮ್ಮದೇ ಸರದಿ!"

ಕೊನೆಗೆ ವಿಧಿಯಿಲ್ಲದೆ ಒಪ್ಪಿಕೊಂಡರು. ಲೂ ಅವರಿಗೆ ಹೋಗಲು ದಾರಿ ತೋರಿದಳು. ಆಮೇಲೆ ಪುಟ್ಟ ಹುಡುಗಿಯೊಬ್ಬಳು ಕರೆದದ್ದು ಕೇಳಿ ಲೂ ಆಕಡೆ ನೋಡಿದಳು. ಮುದ್ದಾದ ಮುಖ. ಆದರೆ ಮೆಳ್ಳೆಗಣ್ಣು. ಆಸ್ಪತ್ರೆಯ ಪೈಜಾಮ ಹಾಕಿಕೊಂಡಿದ್ದ ಆ ಹುಡುಗಿ ಹೆದರುತ್ತಲೇ- "ಡಾ॥ ಲೂ" ಎಂದು ಕರೆದಳು.

"ವಾಂಗ್ ಜಿಯೋಮನ್, ವಾರ್ಡ್‌ನಲ್ಲಿ ಇರಬಾರದಾ ಮರಿ?"

ಹಿಂದಿನ ದಿನ ಆ ಮಗುವನ್ನು ಆಸ್ಪತ್ರೆಗೆ ಸೇರಿಸಲಾಗಿತ್ತು.

"ನನಗೆ ಭಯವಾಗುತ್ತೆ. ಆಪರೇಷನ್ ಬೇಡ. ನಾನು ಮನೆಗೆ ಹೋಗಬೇಕು"- ಎಂದು ಅಳುವುದಕ್ಕೆ ಪ್ರಾರಂಭಿಸಿಬಿಟ್ಟಳು.

ಲೂ ಅವಳ ಬೆನ್ನು ತಟ್ಟಿ, ಸಮಾಧಾನಪಡಿಸುತ್ತಾ, "ವ್ಯಾಂಗ್ ಮರಿ, ನಿನಗೆ ಆಪರೇಷನ್ ಯಾಕೆ ಬೇಡ ಹೇಳು?"

"ಅದು ತುಂಬಾ ನೋವಾಗುತ್ತೆ."

"ಅಯ್ಯೋ ಹುಚ್ಚು ಹುಡುಗಿ ನಾನು ನಿನಗೆ ಅನೀಸ್ತೀಸಿಯಾ ಕೊಡ್ತೇನೆ. ಒಂದು ಚೂರೂ ನೋವಾಗೋದಿಲ್ಲ. ಅವಳನ್ನು ಸಮಾಧಾನ ಪಡಿಸುತ್ತಾ ಅವಳ ಮುಖವನ್ನೇ ನೋಡುತ್ತಾ, "ಎಷ್ಟು ಸುಂದರಮುಖ. ಯಾಕೆ ಹೀಗೆ ಅದನ್ನು ಕೆಡಿಸಿ ಇಟ್ಟಿದ್ದಾನೋ?" ಎಂದುಕೊಂಡಳು. ನೋಡು ಮರಿ. ಈ ಕಣ್ಣನ್ನು, ಅದರ ಹಾಗೆ ಮಾಡದೆ ನಿದ್ದೆ ಮಾಡು. ಹೀಗೆಲ್ಲಾ ಆಸ್ಪತ್ರೇಲಿ ಓಡಾಡಬಾರದು."

ಸಮಾಧಾನಗೊಂಡ ಹುಡುಗಿ ಕಣ್ಣೊರೆಸಿಕೊಂಡು ವಾರ್ಡಿನ ಕಡೆಗೆ ಓಡಿದಳು. ಲೂ ಮತ್ತೆ ರೋಗಿಗಳನ್ನು ನೋಡಲು ಹಿಂತಿರುಗಿದಳು.

ಈಗ ಒಂದೆರಡು ದಿನಗಳಿಂದ ರೋಗಿಗಳ ಸಂಖ್ಯೆ ಜಾಸ್ತಿಯಾಗಿತ್ತು. ಜಾವೋರನ್ನು ಕಾಣಲು ಹೋಗಿ ಒಂದಷ್ಟು ಹೊತ್ತು ಕಳೆದಾಗಿತ್ತು. ಎಲ್ಲ ಮರೆತು, ರೋಗಿಗಳನ್ನು ನೋಡುವುದರಲ್ಲಿ ಮುಳುಗಿದಳು. ನರ್ಸ್ ಒಬ್ಬಳು ಬಂದು, ಫೋನ್ ಬಂದಿದೆಯೆಂದು ತಿಳಿಸಿದಳು. ಮತ್ತೆ, ರೋಗಿಗಳ ಕ್ಷಮೆ ಕೋರಿ ಎದ್ದು ನಡೆದಳು.

ಕಿಂಡರ್ ಗಾರ್ಟನ್ ನರ್ಸ್, ಷಿಯಾವೊ ಜಿಯಾಳ ಜ್ವರ ಇಳಿದೇ ಇಲ್ಲಾಂತ, ಫೋನ್‌ನಲ್ಲಿ ತಿಳಿಸಿದಳು. "ನೆನ್ನೆ ರಾತ್ರಿಯಿಂದ ಜ್ವರ ಶುರುವಾಗಿದೆ. ನನಗೆ ಗೊತ್ತು ನಿಮಗೆ ತುಂಬಾ ಕೆಲಸ ಇರುತ್ತೇಂತ. ನಾನೇ ಅವಳನ್ನು ಡಾಕ್ಟರ್ ಹತ್ತಿರ ಕರೆದುಕೊಂಡು ಹೋಗಿದ್ದೆ. ಇಂಜಕ್ಷನ್ ಕೊಟ್ಟಿದ್ದಾರೆ. ಇನ್ನೂ ಜ್ವರ ಇಳಿದ ಹಾಗಿಲ್ಲ. ನಿಮಗಾಗಿ ಕೇಳ್ತಾ ಇದ್ದಾಳೆ. ಬರುವುದಕ್ಕೆ ಆಗುತ್ತಾ?"

"ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಅಲ್ಲಿರುತ್ತೇನೆ" – ಎಂದು ಹೇಳುತ್ತಾ ರಿಸೀವರನ್ನು ಕೆಳಗಿಟ್ಟಳು.

ಹೇಳಿದ ಹಾಗೆ ತಕ್ಷಣ ಅವಳಿಗೆ ಅಲ್ಲಿಂದ ಹೋಗುವುದಕ್ಕೆ ಆಗಲಿಲ್ಲ. ತುಂಬಾ ರೋಗಿಗಳು ತನಗಾಗಿ ಕಾಯುತ್ತಾ ಕುಳಿತಿದ್ದರು. ಒಂದು ಸಲಕ್ಕೆ ಅವರನ್ನೆಲ್ಲಾ ನಿರಾಶೆಗೊಳಿಸಿ ಹೋಗೋದಕ್ಕೆ ಅವನ ಮನಸ್ಸು ಒಪ್ಪಲಿಲ್ಲ. ಗಂಡನಿಗೆ ಫೋನ್ ಮಾಡಿದಳು. ಯಾವುದೋ ಮೀಟಿಂಗ್‌ನಲ್ಲಿ ಇದ್ದಾರೇಂತ ತಿಳೀತು.

ಹಿಂತಿರುಗಿದ 'ಲೂ'ಳನ್ನು ಜಿಯಾಂಗ್ ಕೇಳಿದಳು–

"ಏನಾದರೂ ಮುಖ್ಯವಾದ ವಿಷಯಾನಾ?"

"ಏನೂ ಇಲ್ಲ."

ಯಾರಿಗೂ ತೊಂದರೆ ಕೊಡೋದಕ್ಕೆ ಅವಳಿಗೆ ಇಷ್ಟವಾಗ್ತಿರಲಿಲ್ಲ. ತನ್ನ ಕೆಲಸ ಮುಗಿದ ಮೇಲೆ, ಕಿಂಡರ್ ಗಾರ್ಟನ್‌ಗೆ ತಾನೇ ಹೋಗಬೇಕು ಎಂದುಕೊಂಡು ತನ್ನ ಮೇಜಿನ ಮುಂದೆ ಕುಳಿತಳು. ತನ್ನ ಮಗಳು ಅಳುತ್ತಾ ತನಗಾಗಿ ಕೇಳುತ್ತಿರುವ ಚಿತ್ರ ಕಣ್ಮುಂದೆ ಬಂತು. ಆದರೆ ಮರುಗಳಿಗೆಯೇ ಎಲ್ಲವನ್ನೂ ಮರೆತು, ರೋಗಿಗಳ ಕಡೆ ಗಮನ ಕೊಟ್ಟಳು. ಕೆಲಸ ಮುಗಿದದ್ದೇ, ಮಗಳನ್ನು ನೋಡಲು ಉಸಿರು ಕಟ್ಟಿ ಓಡಿದಳು.

## ೮

"ಯಾಕಷ್ಟು ತಡ ಮಾಡಿದಿರಿ?" ನರ್ಸ್ ಆಕ್ಷೇಪಿಸಿದಳು. ಲೂ ಬೇಗ ಬೇಗ ಮಗಳನ್ನು ಬೇರೆಯಾಗಿ ಮಲಗಿಸಿ ಮಂಚದ ಒಳಿಗೆ ಬಂದಳು. ಜ್ವರದಿಂದ ಮುಖ ಬಾಡಿ ಬತ್ತಿಹೋಗಿತ್ತು. ಬಾಯಿ ತೆರೆದುಕೊಂಡಿದ್ದಳು. ಬಿಗಿಯಾಗಿ ಕಣ್ಣು ಮುಚ್ಚಿಕೊಂಡು ಮಲಗಿದ್ದ ಮಗು ಕಷ್ಟಪಟ್ಟು ಉಸಿರಾಡುತ್ತಿತ್ತು.

ಮಲಗಿದ್ದ ಮಗುವಿನ ಕಡೆ ವಾಲಿ, "ಪುಟ್ಟು, ನೋಡು, ಅಮ್ಮ ಬಂದಿದ್ದಾಳೆ." ಷಿಯಾವೋಜಿಯಾ ಗಡುಸಾಗಿ ಹೇಳಿದಳು.

"ಅಮ್ಮ ಇಲ್ಲಿ ಬೇಡ. ಮನೆಗೆ ಕರೆದುಕೊಂಡು ನಡಿ."

"ಆಯ್ತು ಮರಿ. ಹಾಗೇ ಹೋಗೋಣ."

ಷಿಯಾವೋಳನ್ನು, ಮಕ್ಕಳ ಡಾಕ್ಟರಿಗೆ ತೋರಿಸಲು. ಮೊದಲು ತನ್ನ ಆಸ್ಪತ್ರೆಗೆ ಕರೆದೊಯ್ದಳು. ಡಾಕ್ಟರು ಮಗುವಿಗೆ ನಿಮೋನಿಯಾ ಆಗೀದೇಂತ ಹೇಳಿದರು. ಹಾಗೇನೇ ಮಗೂನ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂತಲೂ ತಿಳಿಸಿದರು.

ಷಿಯಾಗೆ ಇಂಜಕ್ಷನ್, ಔಷಧಿಗಳನ್ನು ಕೊಡಿಸಿ, ಮನೆಯ ಕಡೆ ನಡೆದಳು. ಆಸ್ಪತ್ರೆಯಲ್ಲಿ ಈಗ ಬರೀ ಪ್ರಶಾಂತತೆ ಇತ್ತು. ಹೊರ ರೋಗಿಗಳು ಇರಲಿಲ್ಲ. ಒಳ ರೋಗಿಗಳು ನಿದ್ರೆ ಮಾಡುತ್ತಿದ್ದರು. ಆಸ್ಪತ್ರೆಯ ಸಿಬ್ಬಂದಿ ಕೂಡಾ ವಿಶ್ರಾಂತಿ ಪಡೆಯುತ್ತಿದ್ದರು. ಆಸ್ಪತ್ರೆಯ ಮುಂದಿನ ವಿಶಾಲವಾದ ಜಾಗವೂ ನಿರ್ಜನವಾಗಿತ್ತು. ಹಕ್ಕಿಗಳ ಚಿಲಿಪಿಲಿಯ ಸದ್ದನ್ನುಳಿದು ಮತ್ತೇನೂ ಕೇಳಿಸುತ್ತಿರಲಿಲ್ಲ. ಲೂ ಗೆ ತನ್ನ ಕರ್ತವ್ಯ ಹೊರತಾಗಿ ಯಾವುದೂ ಗಮನಕ್ಕೇ ಬರುತ್ತಿರಲಿಲ್ಲ.

ಮಗೂನ ಎಲ್ಲಿಗೆ ಕರೆದೊಯ್ಯಬೇಕು–ಅನ್ನುವುದನ್ನು ತೀರ್ಮಾನಿಸಿರಲಿಲ್ಲ. ಜ್ವರದಿಂದ ನರಳುತ್ತಿರುವ ಮಗೂನ ಕಿಂಡರ್ ಗಾರ್ಟನ್‌ನ ಕಾಯಿಲೆ ಕೋಣೆಯಲ್ಲಿ ಬಿಟ್ಟಿರಲು ಮನಸ್ಸು ಒಪ್ಪುತ್ತಿರಲಿಲ್ಲವಾದರೂ, ಬೇರೆ ದಾರೀನೇ ಇರಲಿಲ್ಲ. ಮನೆಯಲ್ಲಿ ಯಾರೂ ಇಲ್ಲ. ಏನನ್ನೋ ತೀರ್ಮಾನಿಸಿದಂತೆ, ಕಿಂಡರ್ ಗಾರ್ಟನ್ ಕಡೆಗೇ ಹೆಜ್ಜೆ ಹಾಕಿದಳು. ಅದರ ಸುಳಿವು ಹತ್ತಿದ ಷಿಯಾವೋ, ತಾಯಿಯ ಭುಜಗಳ ಮೇಲೆ ತಲೆ ಇರಿಸಿಕೊಂಡೇ– "ಅಲ್ಲಿಗೆ ಬೇಡ. ನಾನು ಹೋಗೋದಿಲ್ಲ" ಎಂದು ಗಟ್ಟಿಯಾಗಿ ಕಿರುಚಿಕೊಂಡಳು.

"ಷಿಯಾ ಮರಿ, ಹಾಗೆಲ್ಲ ಹಟ ಮಾಡಬಾರದು. ನೀನು ಜಾಣ ಮಗು ಅಲ್ಲವೇ?"

"ಇಲ್ಲ, ನನಗೆ ಮನೆ ಬೇಕು" ಎಂದು ಹಟ ಹಿಡಿದಳು.

"ಆಯ್ತು ಮನೆಗೇ ಹೋಗೋಣ."

ಗಿಜಿಗುಡುತ್ತಿದ್ದ ರಸ್ತೆಯ ಮೂಲಕ ಹಾದು ಹೋಗುವಾಗ, ಹೊಸದಾಗಿ ಅಂಟಿಸಿದ ಪೋಸ್ಟರ್‌ಗಳನ್ನು ನೋಡಿದಳು. ಇಲ್ಲೀವರೆಗೆ ಬೆಲೆ ಬಾಳುವ ಯಾವ ವಸ್ತುಗಳನ್ನೂ ನೋಡಲು ಅವಳಿಗೆ ಪುರಸೊತ್ತಿರಲಿಲ್ಲ. ಅಂಗಡಿಗಳಲ್ಲಿನ ಬೆಲೆ ಬಾಳುವ ವಸ್ತುಗಳ ಪ್ರದರ್ಶನವನ್ನು ಕಿಟಕಿಯ ಮೂಲಕ ಕಣ್ಣಾಡಿಸಿ ನೋಡಿದಳು. ರೈತರು ತಾವು ಬೆಳೆ ಬೆಳೆದದ್ದನ್ನು ತಂದು ಬೀದಿಗಳಲ್ಲಿ ಮಾರುತ್ತಿದ್ದರು. ಇಬ್ಬರು ಮಕ್ಕಳನ್ನು ಇಟ್ಟುಕೊಂಡು ಬದುಕುವುದೇ ಕಷ್ಟವಾಗಿತ್ತು. ಭುಜದ ಮೇಲೆ ಷಿಯಾಳನ್ನು ಮಲಗಿಸಿಕೊಂಡು, ಮನೆಯಲ್ಲಿದ್ದ ಯುಯಾನ್‌ಗಳ ಬಗ್ಗೆ ಚಿಂತಿಸುತ್ತಿದ್ದಳು. ಸುತ್ತ ತಿರುಗಿ ನೋಡಬೇಕಂತಲೂ ಅನಿಸಲಿಲ್ಲ.

ಮನೆ ತಲುಪಿದಾಗ ಒಂದು ಗಂಟೆಯಾಗಿತ್ತು. ಹಸಿವಿನಿಂದ ಕಂಗೆಟ್ಟಿದ್ದ ಯುಯಾನ್‌ನನ್ನು ನೋಡಿದಳು.

"ಯಾಕಮ್ಮಾ ಇಷ್ಟು ಹೊತ್ತು ಮಾಡಿದೆ?"

"ಷಿಯಾಗೆ ಮೈ ಹುಷಾರಿಲ್ಲ" – ಎಂದು ಹೇಳುತ್ತಾ ಅವಳನ್ನು ಹಾಸಿಗೆ ಮೇಲೆ ಮಲಗಿಸಿ, ಬಟ್ಟೆ ಬಿಚ್ಚಿ ಹೊದಿಸಿ ಮಲಗಿಸಿದಳು.

ಮೇಜಿನ ಬಳಿ ನಿಂತಿದ್ದ ಯುಯಾನ್ ಅಸಹನೆಯಿಂದ ಹೇಳಿದ- "ಬೇಗ ಅಡಿಗೆ ಮಾಡಮ್ಮ ನನಗೆ ಲೇಟಾಗುತ್ತೆ."

ಮೊದಲೇ ದಣಿದಿದ್ದಲೂ ತಾಳ್ಮೆ ಕಳೆದುಕೊಂಡಳು. ಗಟ್ಟಿಯಾಗಿ ಕೂಗಿದಳು- "ನೀನು ಹೀಗೆ ಮಾಡಿದರೆ ನನಗೆ ತಲೆ ಚಿಟ್ಟು ಹಿಡಿಯುತ್ತೆ. ಸ್ವಲ್ಪ ಸುಮ್ಮನೆ ಇರ್ತೀಯಾ?"

ಮೊದಲೇ ಕಂಗೆಟ್ಟಿದ್ದ ಯುಯಾನ್‌ಗೆ ತಾಯಿ ರೀತಿಯಿಂದ ತುಂಬ ದುಃಖವಾಯಿತು. ಅಳು ಉಕ್ಕಿ ಬಂತು. ಅವನ ಕಡೆ ಗಮನಿಸಲೇ ಇಲ್ಲ. ತಣ್ಣಗಾಗಿದ್ದ ಒಲೆಯನ್ನು ಹೊತ್ತಿಸತೊಡಗಿದ್ದಳು. ಮನೆಯಲ್ಲಿ ಸರಕುಗಳೆಲ್ಲ ಮುಗಿದಿದ್ದವು. ಖಾಲಿ ಡಬ್ಬಗಳು ಮಾತ್ರವೇ ಇದ್ದವು. ತಂಗಳೂ ಉಳಿದಿರಲಿಲ್ಲ.

ಮಗನನ್ನು ಗದರಿಸಿದ್ದಕ್ಕೆ, ಈಗ ಅಯ್ಯೋ ಪಾಪವೆನಿಸಿತ್ತು. ಬಡಪಾಯಿ ಅವನೇನು ಮಾಡಿದ? ತನ್ನನ್ನೇ ಶಪಿಸಿಕೊಂಡಳು.

ಈಗೊಂದಷ್ಟು ವರುಷಗಳಿಂದ ಮನೆ ನೋಡಿಕೊಳ್ಳೋದು ತುಂಬಾ ಕಷ್ಟವೆನಿಸಿತ್ತು. ಚೀನಾದ ಸಾಂಸ್ಕೃತಿಕ ಕ್ರಾಂತಿಯ ದಿನಗಳಲ್ಲಿ ಗಂಡನ ಸಂಶೋಧನಾ ಯೋಜನೆಯನ್ನು ರದ್ದು ಮಾಡಿಬಿಟ್ಟಿದ್ದರಿಂದ ಲ್ಯಾಬೊರೇಟರಿಗೂ ಹೋಗುವ ಹಾಗಿರಲಿಲ್ಲ. ಸುಮ್ಮನೆ ಆಫೀಸಿಗೆ ಹೋಗಿ ಮುಖ ತೋರಿಸಿ ಬಂದರೆ ಸಾಕಾಗುತ್ತಿತ್ತು. ಉಳಿದ ಹೊತ್ತನ್ನೆಲ್ಲ ಮನೆಗೆಲಸಗಳಲ್ಲಿ ಕಳೆಯುತ್ತಾ 'ಲೂ'ನ ಹೊರೆಯನ್ನು ಹಂಚಿಕೊಂಡಿದ್ದ. ಅಡಿಗೆ ಮೊದಲ್ಗೊಂಡು, ಹೊಲಿಯುವುದು, ಹೆಣೆಯುವುದು ಮೊದಲಾದ ಕೆಲಸಗಳನ್ನು ಮಾಡುತ್ತಿದ್ದ. ಕ್ರಾಂತಿಕಾರರ ಗುಂಪನ್ನು ಒಡೆದು ತುಳಿದ ಮೇಲೆ ಮತ್ತೆ ಅವನ ಕೆಲಸಗಳು ಪ್ರಾರಂಭವಾದವು. ಮತ್ತೆ 'ಲೂ'ನ ಜವಾಬ್ದಾರಿಗಳು ಮೊದಲಿನಂತೆ ಹೆಚ್ಚಾದವು. ಗಂಡನಿಗೆ ಬಿಡುವು ಸಿಗುವುದೇ ಕಷ್ಟವಾಗಿತ್ತು.

ಪ್ರತಿದಿನ ಮಧ್ಯಾಹ್ನ ಮನೆಗೆ ಹೋಗಿ ಅಡಿಗೆ ಮಾಡಬೇಕಾಗಿತ್ತು. ೪೦-೫೦ ನಿಮಿಷಗಳಲ್ಲಿ ಒಲೆ ಉರಿಸಿ, ತರಕಾರಿ ಹೆಚ್ಚಿ, ಅಡಿಗೆ ಮಾಡಿ ಬಡಿಸುವುದು ಪ್ರಯಾಸದ ಕೆಲಸವಾಗಿತ್ತು. ಆದರೂ ನಿಭಾಯಿಸಿಕೊಂಡು, ತಾನು ಮತ್ತು ಯುಯಾನ್ ಸರಿಯಾದ ಹೊತ್ತಿಗೆ ತಮ್ಮ ತಮ್ಮ ಕೆಲಸಗಳಿಗೆ ಹಿಂತಿರುಗುತ್ತಿದ್ದರು.

ಅನಿರೀಕ್ಷಿತವಾಗಿ ಏನಾದರೂ ಈ ರೀತಿ ಹೆಚ್ಚು ಕಡಿಮೆಯಾದರೆ ಅಡಿಗೆ ಮಾಡಲು, ಪುರಸೊತ್ತಾಗದೆ, ಎಲ್ಲರಿಗೂ ಉಪವಾಸವೇ ಗತಿಯಾಗುತ್ತಿತ್ತು. 'ಲೂ' ಪಾಲಿಗೆ ಈಗ ನಿಟ್ಟುಸಿರಿನ ಹೊರತು ಮತ್ತೇನೂ ಉಳಿದಿರಲಿಲ್ಲ. ಯುಯಾನ್ ಕೈಗೆ ಹಣ ಕೊಟ್ಟು ಅಂಗಡಿಯಲ್ಲಿ ಬನ್ ಕೊಂಡು ತಿನ್ನಲು ಹೇಳಿದಳು.

ಹೋದವನು ಅರ್ಧದಲ್ಲಿ ನಿಂತು ಕೇಳಿದ-"ಅಮ್ಮ ನೀನೇನು ಮಾಡುತ್ತೀ?"

"ನನಗೆ ಹಸಿವಿಲ್ಲ."

"ಇಲ್ಲ ನಿನಗೂ ಒಂದು ಬನ್ ತರುತ್ತೇನೆ."

ಸ್ವಲ್ಪ ಹೊತ್ತಿನಲ್ಲಿಯೇ ಬನ್‌ಗಳನ್ನು ಹಿಡಿದು ಒಳಗೆ ಬಂದು ಅಮ್ಮನಿಗೊಂದು ಕೊಟ್ಟು ತಾನೂ ತಿಂದು ಸ್ಕೂಲಿಗೆ ಓಡಿದ.

ತಣ್ಣಗೆ ಗಟ್ಟಿಯಾಗಿದ್ದ ಬನ್ ಬಾಯಿಗಿಟ್ಟುಕೊಳ್ಳುತ್ತಲೇ, ತನ್ನ ಸಣ್ಣದಾದ ಆ ಕೋಣೆಯನ್ನು ಪರಿಶೀಲಿಸಿದಳು. ಕೇವಲ ೧೨ ಮೀಟರ್ ಚೌಕಾಕಾರದ ಕೋಣೆ ಅದಾಗಿತ್ತು. ಮದುವೆ ಆದಾಗಿನಿಂದ ಅದೇ ಕೋಣೆಯಲ್ಲಿ ತೃಪ್ತಿಯಿಂದ ಬದುಕುತ್ತಿದ್ದಾರೆ. ಒಂದು ಸೋಫಾ ಆಗಲಿ, ವಾರ್ಡ್‌ರೋಬಾಗಲಿ ಇರಲಿಲ್ಲ. ಒಂಟಿಯಾಗಿದ್ದಾಗ ಅವರ ಬಳಿ ಏನಿತ್ತೋ ಅದರಿಂದಲೇ ಕೆಲಸ ಸಾಗಿಸುತ್ತಿದ್ದಾರೆ. ಪೀಠೋಪಕರಣ ಮತ್ತು ಇತರೆ ವಸ್ತುಗಳಿಗಿಂತ ಅವರ ಬಳಿ ಹೆಚ್ಚಾಗಿ ಇರುವುದು ಪುಸ್ತಕಗಳು. ಒಂದು ಸಲ ಪಕ್ಕದ ಮನೆಯ ಮಾಮಿ ನಗುತ್ತ ಕೇಳಿದ್ದಳು– 'ಈ ಇಬ್ಬರು ಪುಸ್ತಕದ ಹುಳುಗಳು ಏನು ತಿಂದು ಬದುಕುತ್ತಾರೆ?' ಅಂತ. ಲೂ ಮತ್ತು ಘೂಗೆ ಪುಸ್ತಕಗಳಿಂದ ಸಂತೋಷ ಸಿಗುತ್ತಿತ್ತು. ಬದುಕುವುದಕ್ಕೆ ಕನಿಷ್ಠ ಅಗತ್ಯಗಳು–ಒಂದು ಕೋಣೆ, ಸ್ವಲ್ಪ ಬಟ್ಟೆ ಮತ್ತು ದಿನಕ್ಕೆ ಮೂರು ಹೊತ್ತು ಊಟ–ಇಷ್ಟಿದ್ದರೆ ಸಾಕು, ಎನ್ನುವ ಅಭಿಪ್ರಾಯ ಅವರದಾಗಿತ್ತು.

ಸ್ವಲ್ಪ ಸಮಯ ಸಿಕ್ಕರೂ ಅದರ ಸದುಪಯೋಗವಾಗ್ತಿತ್ತು. ಸಂಜೆ ರಾತ್ರಿಗಳೆಲ್ಲ ಓದುವುದರಲ್ಲಿ, ಬರೆಯುವುದರಲ್ಲಿ ಕಳೆದುಹೋಗುತ್ತಿದ್ದವು. ಮದುವೆಯ ಆರಂಭದ ದಿನಗಳಲ್ಲಿ ಅಕ್ಕಪಕ್ಕದ ತುಂಟುಹುಡುಗರು ಕುತೂಹಲದಿಂದ ಕದ್ದು ಕಿಟಕಿಗಳಲ್ಲಿ ಇಣಿಕಿ ನೋಡಿದರೆ, ಅವರಿಗೆ ಕಾಣುತ್ತಿದ್ದುದು–ಒಂದೊಂದು ದಿಕ್ಕಿಗೆ ಮುಖ ಮಾಡಿ, ಕೈಲಿ ಪುಸ್ತಕ ಹಿಡಿದು ಕೂತಿರುತ್ತಿದ್ದ ದಂಪತಿಗಳು!! ಲೂ ಶಬ್ದಕೋಶದ ಸಹಾಯದಿಂದ ಬೇರೆ ಭಾಷೆಗಳಲ್ಲಿದ್ದ, ವೈದ್ಯ ಸಂಬಂಧವಾದ ವಿಷಯಗಳ ಅಧ್ಯಯನ ನಡೆಸುತ್ತಿದ್ದಳು. ತನ್ನ ಕ್ಷೇತ್ರದ ವಿಜ್ಞಾನದಲ್ಲಿ ಏನೇನು ಹೊಸ ಹೊಸ ಬೆಳವಣಿಗೆಯಾಗುತ್ತಿದೆ– ಅನ್ನುವುದನ್ನು ನಿರಂತರವಾಗಿ, ಸೂಕ್ಷ್ಮವಾಗಿ ಗಮನಿಸುತ್ತಿದ್ದಳು. ಘೂ ಕೂಡ ಅದೇ ರೀತಿ ಮೆಟಲ್ಜರಿಗೆ ಸಂಬಂಧಿಸಿದ್ದನ್ನೆಲ್ಲಾ ಓದಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದ.

ರಾತ್ರಿಗಳಲ್ಲಿ ಯಾವುದೂ ತೊಂದರೆಗಳಿರುವುದಿಲ್ಲದ ಕಾರಣ, ಹೆಚ್ಚು ಕೆಲಸವನ್ನು ಮಾಡಿ ಮುಗಿಸುತ್ತಿದ್ದರು. ಪ್ರಶಾಂತ ಸಮಯವಾದ್ದರಿಂದ ಮನಸ್ಸಿಗೂ ಓದಿದ್ದನ್ನು ಗ್ರಹಿಸುವುದು ಸುಲಭವಾಗುತ್ತಿತ್ತು. ಬೇಸಿಗೆ ಕಾಲದಲ್ಲಿ ತಾವಿದ್ದ ಮನೆಯ ಅಕ್ಕಪಕ್ಕದ ಜನ ಹೊರಗೆ ಬಂದು ಅಂಗಳದಲ್ಲೋ, ತಾರಸಿಗಳ ಮೇಲೋ ಕುಳಿತು ನೀಲಾಕಾಶ, ನಕ್ಷತ್ರ, ತಣ್ಣನೆಯ ಗಾಳಿ, ಬಿಸಿಬಿಸಿಯಾಗಿ ಗಮಗಮಿಸುವ ಚಹಾಗಳ ರುಚಿಯ ಅನುಭವ–ಮೊದಲಾದವುಗಳಿಗೆ ಮೈಗೊಟ್ಟು ನಲಿಯುತ್ತಿದ್ದರೆ ಲೂ ಮತ್ತು ಘೂ ಗೆ ಇದಾವುದರ ಆಕರ್ಷಣೆಯೂ ಇರುತ್ತಿರಲಿಲ್ಲ. ಗಾಳಿಯಾಡದ ಆ ಕೋಣೆಯ ಹೊರಗೆ ಇಣುಕುತ್ತಿರಲಿಲ್ಲ.

ಪ್ರಶಾಂತವಾದ ಸಂಜೆಗಳು, ಓದಿದ ದಿನಗಳು ತುಂಬಾ ಬೇಗನೆ ಮುಗಿದವು. ಯುಯಾನ್ ಮತ್ತು ಷಿಯಾರು ಹುಟ್ಟಿದರು. ಅವರಿಂದ ಉಂಟಾದ ತೊಂದರೆ ಮತ್ತು ಸಂತೋಷ ಅವರ ನೆನಪಲ್ಲಿ ಮಾತ್ರವೇ ಉಳಿಯಿತು. ತೊಟ್ಟಿಲ ಜಾಗದಲ್ಲಿ ಮಂಚ ಬಂತು. ಮನೆ ತುಂಬ ಮಕ್ಕಳ ಬಟ್ಟೆ, ಆಟದ ಸಾಮಾನುಗಳು ಚೆಲ್ಲಾಪಿಲ್ಲಿ ಹರಡಿ, ಓಡಾಡುವುದಕ್ಕೂ ಆಗದಷ್ಟು ತೊಂದರೆಯಾಗುತ್ತಿತ್ತು. ಇಬ್ಬರ ಮಕ್ಕಳ ಆಟಪಾಠ, ನಗು-ಅಳುಗಳಿಂದ ಶಾಂತಿ ಕದಡಿತ್ತು.

ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಕಣ್ಣಿನ ರೋಗಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಹೊಸ ಸಂಶೋಧನೆಗಳು, ಹೊಸ ಹೊಸ ವಿಚಾರಗಳು-ಇವೆಲ್ಲವನ್ನೂ ತಿಳಿದುಕೊಳ್ಳದಿದ್ದರೆ, ಪ್ರಯೋಜನವೇನು? ಹೆಚ್ಚು ಹೆಚ್ಚು ತಿಳಿದುಕೊಳ್ಳುವ ಅವಳ ಜಿಜ್ಞಾಸೆ, ಜ್ಞಾನದಾಹ, ಎಷ್ಟೋ ರಾತ್ರಿಗಳನ್ನು ಅವಳಿಂದ ಕಸಿದುಕೊಂಡಿವೆ.

ಯುಯಾನ್‌ಗೆ ಸ್ಕೂಲಿದ್ದಾಗ, ಇದ್ದ ಒಂದೇ ಒಂದು ಡೆಸ್ಕ್ ಮೇಜನ್ನು ಅವನೇ ಉಪಯೋಗಿಸುತ್ತಿದ್ದ. ಮನೆಯಲ್ಲಿ ಎಲ್ಲರೂ ಅದನ್ನು ಸರದಿಯ ಪ್ರಕಾರ ಉಪಯೋಗಿಸಬೇಕಿತ್ತು. ಅದು ಖಾಲಿ ಇದ್ದಾಗ 'ಲೂ' ಒಂದು ದಿನ ಆ ಡೆಸ್ಕಿನ ತುಂಬಾ ಮೆಡಿಕಲ್ ಪುಸ್ತಕಗಳನ್ನು ಹರವಿಕೊಂಡು ನೋಟ್‌ಬುಕ್‌ನಲ್ಲಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದಳು. ಫೂ ಕೊನೆಗೆ ಬಂದ "ಬದುಕು ಎಷ್ಟೊಂದು ಕಷ್ಟ ಅಲ್ಲ?"

ಲೂ ತಲೆ ಎತ್ತಿ ಪುಟ್ಟ ಗಡಿಯಾರದ ಕಡೆ ನೋಡಿದಳು. ೧.೦೫-೧.೧೦-೧.೧೫ ಕೆಲಸಕ್ಕೆ ಹೋಗಲು ಹೊತ್ತಾಯಿತು. ಏನು ಮಾಡಬೇಕು? ಮಾಡುವುದಕ್ಕೆ ಬೇಕಾದಷ್ಟು ಕೆಲಸಗಳಿದ್ದವು. ನಾಳೆ ವಾರ್ಡ್ ಡ್ಯೂಟಿಗೆ ಹೋಗೋಕೆ ಮೊದಲು ಎಲ್ಲ ಮುಗಿಸಬೇಕು. ಆದರೆ ಷಿಯಾಳನ್ನು ಏನು ಮಾಡುವುದು?.... ಗಂಡನನ್ನು ಕರೆದರೆ? .... ಹತ್ತಿರದಲ್ಲಿ ಎಲ್ಲಿಯೂ ಟೆಲಿಫೋನ್ ಬೂತ್ ಇರಲಿಲ್ಲ. ಒಂದು ವೇಳೆ ಪ್ರಯತ್ನಿಸಿದರೂ ಸಿಗುವ ಅವಕಾಶ ಇರಲಿಲ್ಲ. ಯಾಕೆಂದರೆ ಹತ್ತು ವರುಷಗಳಿಂದ ಸಾಕಷ್ಟು ಸಮಯ ಹಾಳಾಗಿದೆ. ಇನ್ನೂ ಅವನಿಗೆ ತೊಂದರೆ ಕೊಡೋದು ಬೇಡ ಅಂತ ಅನಿಸಿ ಸುಮ್ಮನಾದಳು.

ದಿಕ್ಕು ತೋರದ್ದಕ್ಕೆ ಸಿಡಿಮಿಡಿಗೊಂಡಳು. ಮದುವೇನೇ ಆಗಬಾರದಾಗಿತ್ತು. ಕೆಲವರು ಹೇಳ್ತಿದ್ದರು ಮದುವೆ ಮಾಡಿಕೊಂಡರೆ ಪ್ರೀತಿಗೆ ಮಂಗಳ ಹಾಡಿದಂತೆ-ಅಂತ. ಈಗ ಆ ಮಾತು ನಿಜ ಎನಿಸಿತ್ತು. ಈಗ ತನ್ನ ಸ್ವಂತ ಅನುಭವದಿಂದ ಅವಳಿಗೆ ಅದರಲ್ಲಿ ಅರ್ಥ ಇಲ್ಲ, ಅನಿಸಿದೆ. ಬೇರೆಯವರ ವಿಚಾರದಲ್ಲಿ ಹೇಗೋ ಏನೋ-ಆದರೆ ತನ್ನ ಮತ್ತು ಫೂನ ನಡುವೆ ಪ್ರೀತಿ ಕೊನೆ ಆಗೋದು ಸಾಧ್ಯವೇ ಇಲ್ಲ.

ಸ್ವಲ್ಪ ಜಾಣತನದಿಂದ ಇದ್ದಿದ್ದರೆ, ಮದುವೆ ಮಕ್ಕಳು ಭಾರವಾಗ್ತಿರಲಿಲ್ಲ. ಆಗಲೇ ಒಂದೂ ಇಪ್ಪತ್ತಾಯಿತು. ಪಕ್ಕದ ಮನೆಯ ಷೆನ್ ಮಾಮಿಯನ್ನು ಕೇಳಬೇಕು.

ತುಂಬಾ ಒಳ್ಳೆಯವಳು. ಎಷ್ಟೋ ಸಂದರ್ಭಗಳಲ್ಲಿ ತನಗೆ ಸಹಾಯ ಮಾಡಿದ್ದಾಳೆ. ಪ್ರತಿಯಾಗಿ ಏನಾದರೂ ಕೊಟ್ಟರೆ, ಮುಟ್ಟೋದೇ ಇಲ್ಲ. ಅದಕ್ಕೇ ಪದೇ ಪದೇ ಅವಳ ಸಹಾಯ ಕೇಳಬೇಕೆಂದರೆ ಸಂಕೋಚ, ಮುಜುಗರ. ಆದರೆ ಇವತ್ತು ವಿಧಿಯಿರಲಿಲ್ಲ. ಸಂಕೋಚ, ಮರ್ಯಾದೆಗಳನ್ನು ಬಿಟ್ಟು, ಕೇಳಿಕೊಂಡಿದ್ದಾಯಿತು. "ಡಾ॥ ಲೂ, ಅವಳನ್ನು ನನ್ನ ಹತ್ತಿರ ಬಿಟ್ಟು ಹೋಗು"– ಎಂದು ಸಂತೋಷದಿಂದಲೇ ಒಪ್ಪಿಕೊಂಡಳು.

'ಲೂ' ಒಂದಷ್ಟು ಆಟದ ಸಾಮಾನನ್ನು ಷಿಯಾಳ ಪಕ್ಕದಲ್ಲಿರಿಸಿ, ಷೆನ್ ಮಾಮಿಗೆ, ಯಾವ ಯಾವ ಹೊತ್ತಿಗೆ, ಎಷ್ಟು ಎಷ್ಟು ಔಷಧಿ ಕೊಡಬೇಕು–ಎಂಬ ಸೂಚನೆ ನೀಡಿ ಆಸ್ಪತ್ರೆಯುತ್ತ ಧಾವಿಸಿದಳು.

ತುಂಬ ಜನಾನ ಕಳಿಸಬೇಡಾಂತ ನರ್ಸ್‌ಗೆ ಹೇಳಬೇಕು ಎಂದುಕೊಂಡವಳು ಮರೆತೇ ಬಿಟ್ಟಳು. ಕೆಲಸದಲ್ಲಿ ಎಲ್ಲವನ್ನೂ ಮರೆಯುವ ಸ್ವಭಾವ ಅವಳದಾಗಿತ್ತು. ನಾಳೇನೇ ಜಿಯಾವೋರನ್ನು ಆಸ್ಪತ್ರೆಗೆ ಸೇರಿಸಿಕೊಳ್ಳಬೇಕೂಂತ ನೆನಪು ಮಾಡಲು ಡೈರೆಕ್ಟರ್ ಜಾವೋ ಬೇರೆ ಈ ಮಧ್ಯೆ ಹೇಳಿಕಳಿಸಿದರು.

ಕಿನ್ ಆಗಲೇ ಎರಡು ಮೂರು ಸಲ ಬಂದು ಆಪರೇಷನ್ ಬಗ್ಗೆ ಮತ್ತು ತಾವು ಪೂರ್ವಭಾವಿಯಾಗಿ ಏನೇನು ಸಿದ್ಧತೆ ಮಾಡಿಕೊಳ್ಳಬೇಕೂಂತ ವಿಚಾರಿಸಿ ಹೋದಳು.

ಲೂ ಗೆ ಅವಳ ಪ್ರಶ್ನೆಗಳಿಗೆ ಹೇಗೆ ವಿವರಣೆ ಕೊಡಬೇಕೋ ಅರ್ಥವಾಗಲಿಲ್ಲ. ನೂರಾರು ಇಂತಹ ಆಪರೇಷನ್‌ಗಳನ್ನು ಯಶಸ್ವಿಯಾಗಿ ಮಾಡಿದ್ದಳು. ಯಾರೂ ಇಷ್ಟೊಂದು ಪ್ರಶ್ನೆ ಕೇಳಿ ತಲೆ ಕೆಡಿಸಿರಲಿಲ್ಲ. ಆದರೂ ಹೇಳಿದಳು–

"ಅಂತಹ ವಿಶೇಷವಾದ್ದೇನೂ ಮಾಡಬೇಕಿಲ್ಲ."

"ನಿಜವಾಗಿಯೂ?.... ಅದರೇನಂತೆ, ನಾನು ಬಂದು ನಿಮ್ಮ ಹತ್ತಿರ ಒಂದೆರಡು ಮಾತು ಆಡೋದರಿಂದ ತೊಂದರೆ ಇಲ್ವಲ್ಲಾ?"

"ಇವತ್ತು ಮಧ್ಯಾಹ್ನ ನನಗೆ ಸ್ವಲ್ಪ ಬೇರೆ ಕೆಲಸ ಇದೆ" – ಲೂ ಹೇಳಿದಳು.

"ಹಾಗಾದರೆ ನಾಳೆ ಆಸ್ಪತ್ರೇಲೇ ಆಗಬಹುದಲ್ಲ."

"ಖಂಡಿತ."

ಆಕೆ ಜೊತೆ ಮಾತು ಮುಗಿದದ್ದೇ, ಕ್ಲಿನಿಕ್‌ನಿಂದ ಆಫೀಸ್ ಕಡೆ ಹೊರಟಳು. ಸಾಕಷ್ಟು ಕತ್ತಲಾಗಿತ್ತು.

ಮನೆಗೆ ಬರುತ್ತಿದ್ದಂತೆ, ಮಾಮಿಯ ಜೋಗುಳ ಕೇಳಿಸಿತು. ಷಿಯಾ ಸಂತೋಷದಿಂದ ನಗುತ್ತಿದ್ದಳು. ಅವಳ ಜ್ವರಾನೂ ಇಳಿದಿತ್ತು. ಮಾಮಿಗೆ ಕೃತಜ್ಞತೆ ಹೇಳಿದಳು. ಷಿಯಾಗೆ ಇಂಜಕ್ಷನ್ ಕೊಟ್ಟಳು. ಫೂ ಬಂದ ಸ್ವಲ್ಪ ಹೊತ್ತಿಗೆ ಜಿಯಾಂಗ್ ಯಾಫೆನ್, ಲಿಯೂ–ಇಬ್ಬರೂ ಬಂದರು.

"ಹೋಗೋಕೆ ಮುಂಚೆ ನಿಮಗೆ ಗುಡ್ ಬೈ ಹೇಳೋಣಾಂತ ಬಂದೆವು" ಜಿಯಾಂಗ್ ಹೇಳಿದಳು.

"ನೀವು ಎಲ್ಲಿಗೆ ಹೋಗ್ತಿದ್ದೀರಿ?"– ಲೂ ಪ್ರಶ್ನಿಸಿದಳು.

"ಕೆನಡಾ ಹೋಗೋಕೆ, ಈಗ ತಾನೇ ವೀಸಾ ಬಂದಿದೆ."

ಲಿಯೂನ ತಂದೆ ಕೆನಡಾದಲ್ಲಿ ಡಾಕ್ಟರು. ಮಗ ಸೊಸೆ ಇಬ್ಬರನ್ನೂ ಅಲ್ಲಿಗೇ ಬರೋದಕ್ಕೆ ಹೇಳಿದ್ದಾರೆ. ಆದರೆ ಅವರಿಬ್ಬರೂ ಹೋಗುತ್ತಾರೆನ್ನೋದು ಲೂ ಗೆ ಖಾತರಿ ಇರಲಿಲ್ಲ. ನಿರೀಕ್ಷಿಸಿಯೂ ಇರಲಿಲ್ಲ.

"ಅಲ್ಲಿ ಎಷ್ಟು ದಿವಸ ಇರ್ತೀರ? ಬರೋದು ಯಾವಾಗ?"

"ಬಹುಶಃ ಬರೋದೇ ಇಲ್ವೇನೋ?" ಲಿಯು ಹೇಳಿದ.

"ನನಗೆ ಮೊದಲೇ ಯಾಕೆ ಹೇಳ್ಲಿಲ್ಲ ಯೂಫೇನ್"– ಗೆಳತಿಯ ಕಡೆ ತಿರುಗಿ ಕೇಳಿದಳು.

"ನೀನು ಎಲ್ಲಿ ತಡಿತೀಯೋ ಅನ್ನೋ ಭಯ; ನಾನು ಮನಸ್ಸು ಬದಲಾಯಿಸಿ ಬಿಡಬಹುದೇನೋ ಅನ್ನೋ ಭಯ!" –ಲೂಳ ಕಣ್ಣು ತಪ್ಪಿಸಿ ನುಡಿದಳು.

ಲಿಯು ತಾನು ತಂದಿದ್ದ ಚೀಲದಿಂದ ಸ್ವಲ್ಪ ತಿಂಡಿ ಮತ್ತು ವೈನ್ ಹೊರ ತೆಗೆದ– "ನನಗೆ ಗೊತ್ತು. ನೀವು ಅಡಿಗೆ ಮಾಡಿಲ್ಲ.... ಆದರೇನಂತೆ? ಬನ್ನಿ ಹೋಗೋಕೆ ಮುಂಚೆ ಬೀಳ್ಕೊಡುಗೆಯ ಪಾರ್ಟಿ ಮಾಡೋಣ" ಎಂದು ನಕ್ಕು ನುಡಿದ.

## ೯

ಬೀಳ್ಕೊಡುಗೆ, ಯಾರಿಗೂ ಖುಷಿ ಕೊಡುವಂಥಾದ್ದಾಗಿರಲಿಲ್ಲ. ಅವರು ಕುಡಿದದ್ದು ವೈನ್ ಅಲ್ಲ; ಕಣ್ಣೀರು. ತಿಂಡಿಗಳ ರುಚಿಗಿಂತ ಬದುಕಿನ ಕಹಿಯನ್ನು ಅನುಭವಿಸುತ್ತಿದ್ದ ಹಾಗಿತ್ತು.

ಷಿಯಾ ಮಲಗಿದ್ದಳು. ಯುಯಾನ್ ಪಕ್ಕದ ಮನೆಯಲ್ಲಿ ಟಿ.ವಿ. ನೋಡುತ್ತಿದ್ದ. ಲಿಯು ವೈನ್ ಬಟ್ಟಲನ್ನು ಕೈಗೆತ್ತಿಕೊಂಡು ಅದರೊಳಗಿನ ವೈನ್ ನೋಡುತ್ತಾ, ತೀರಾ ಭಾವುಕನಾಗಿ ಹೇಳಿದ– "ಬದುಕು, ಹೇಗಾಗುತ್ತೆ, ಏನಾಗುತ್ತೇಂತ ಹೇಳೋದೆ ಕಷ್ಟ!.... ನನ್ನ ತಂದೆಗೆ ಒಳ್ಳೇ ಶಿಕ್ಷಣ ಸಿಕ್ಕಿತು. ಡಾಕ್ಟರಾದರು. ಮಗುವಾಗಿದ್ದಾಗಿಂದ ನನಗೆ ಕಾವ್ಯ ಅಂದರೆ ತುಂಬಾ ಇಷ್ಟ ಒಬ್ಬ ಬರಹಗಾರನಾಗಬೇಕು ಅನ್ನೋ ಆಸೆ. ಆದರೆ ನಮ್ಮ ತಂದೆಯ ಹೆಜ್ಜೆಯ ಜಾಡಿನಲ್ಲೇ ಹೋಗಬೇಕಾಯಿತು. ಹಾಗೆ ಮೂವತ್ತು ವರುಷ ಕಳೀತು. "ತುಂಬಾ ಮಾತಾಡೋದ್ರಿಂದ ತೊಂದರೆ ತಪ್ಪಿದ್ದಲ್ಲ–ಅನ್ನೋದು ಅಪ್ಪನ ಎಚ್ಚರಿಕೆಯ ನುಡಿ. ಆದರೆ ಅದನ್ನು ನಾನು ಗಮನಕ್ಕೆ ತೆಗೆದುಕೊಳ್ಳಲಿಲ್ಲ.

ದುರಾದೃಷ್ಟ! ಮಾತೂ! ಮಾತೂ! ಮಾತು.... ಮಾತಿನ ಮೂಲಕ ನನ್ನ ಅಭಿಪ್ರಾಯಗಳನ್ನು ಸ್ಪಷ್ಟ ಪಡಿಸಬೇಕೂಂತ ಹೆಣಗಿದೆ. ಪರಿಣಾಮವಾಗಿ ತೊಂದರೆಗಳನ್ನು ತಂದುಕೊಂಡೆ. ಪ್ರತಿ ರಾಜಕೀಯ ಚಳುವಳೀಲಿ ನನ್ನನ್ನು ತರಾಟೆಗೆ ತೆಗೆದುಕೊಂಡರು. ಐವತ್ತೇಳರಲ್ಲಿ, ನಾನು ಪದವೀಧರನಾದಾಗ, ಕೇವಲ ಒಂದು ಕೂದಲಿನ ಎಳೆಯಷ್ಟರಿಂದ ನಾನು 'ಬಲಪಂಥೀಯ' ಅನ್ನೋ ಹಣೆಪಟ್ಟಿಯಿಂದ ತಪ್ಪಿಸಿಕೊಂಡೆ. "ಸಾಂಸ್ಕೃತಿಕ ಕ್ರಾಂತಿ"ಯಲ್ಲಿ ಗೊತ್ತೇ ಇದೆ.... ಚೆನ್ನಾಗಿ, ನಿಷ್ಠುರವಾದ ಟೀಕೆಗೆ ಗುರಿಯಾದೆ. ನಾನೊಬ್ಬ ಚೀನೀಯ. ಹೆಚ್ಚಿನ ರಾಜಕೀಯ ಪ್ರಜ್ಞೆಯುಳ್ಳವನು ಅಂತ ಕರೆಸಿಕೊಳ್ಳಲಾಗದಿದ್ದರೂ, ನನಗೆ ನನ್ನ ದೇಶದ ಬಗ್ಗೆ ಪ್ರೀತಿ ಇದೆ; ಅಭಿಮಾನ ಇದೆ; ನನ್ನ ದೇಶವಾದ ಈ ಚೈನಾ ಶ್ರೀಮಂತವಾಗಬೇಕು; ಬಲಿಷ್ಠ ರಾಷ್ಟ್ರವಾಗಬೇಕು. ಇದೇ ನನ್ನ ಬಯಕೆ.... ಆದರೆ ನೋಡಿ! ಕನಸಿನಲ್ಲಿಯೂ ಊಹಿಸಿಕೊಂಡಿರಲಿಲ್ಲ. ಐವತ್ತರ ಪ್ರಾಯಕ್ಕೆ ಹತ್ತಿರ ಬಂದಿದ್ದೇನೆ. ಈಗ ದೇಶಬಿಟ್ಟು ಹೋಗಬೇಕಾದ ಪ್ರಸಂಗ ಬಂದಿದೆ, ನನಗೆ."

"ನಿಜವಾಗಿಯೂ ನಿಮಗೆ ಹೋಗಬೇಕಾಗಿದೆಯೇ?" – ಲೂ ಮೃದುವಾಗಿ ಕೇಳಿದಳು.

"ಹೌದು, ಯಾಕೇ? ಎಷ್ಟೋಸಲ ನನ್ನಲ್ಲಿ ನಾನೇ ಪ್ರಶ್ನಿಸಿಕೊಂಡಿದ್ದೇನೆ– ಲಿಯೂನ ಕೈಯೊಳಗಿನ ಬಟ್ಟಲಲ್ಲಿನ ವೈನ್ ತುಳುಕಿತು. ಮುಂದುವರೆಸಿದ–

"ನನಗೆ ಮಧ್ಯ ವಯಸ್ಸು ಮೀರುತ್ತಿದೆ. ಹೆಚ್ಚು ಕಾಲವೇನೂ ಬದುಕುವುದಿಲ್ಲ. ನನ್ನ ಬೂದೀನ, ಚಿತಾಭಸ್ಮಾನ, ನಾನು ಯಾಕೆ ಪರದೇಶದಲ್ಲಿ ಬಿಡಬೇಕು? ಅಂತ ಮತ್ತೆ ಮತ್ತೆ ಯೋಚಿಸಿದ್ದೇನೆ."

ತಾಯ್ನಾಡನ್ನು ಬಿಡುವಲ್ಲಿ ಅವನಿಗಿದ್ದ ದುಃಖ, ಮಾತಿನಲ್ಲಿ ಸ್ಪಷ್ಟವಾಗಿತ್ತು. ಮೌನವಾಗಿ ಕೇಳಿಸಿಕೊಂಡರು, ಅವನ ಮಾತುಗಳನ್ನು ಕೈಲಿ ಹಿಡಿದಿದ್ದ ಬಟ್ಟಲನ್ನು ಒಮ್ಮೆಲೇ ಖಾಲಿ ಮಾಡಿ, ಬಡಬಡಿಸಿದ.

"ನನ್ನನ್ನು ಉಗೀರಿ, ಬೈದು ಶಾಪ ಹಾಕಿ, ನಾನೊಬ್ಬ ದ್ರೋಹಿ, ಕೃತಘ್ನ ಮಗ!"

"ಹಾಗೆಲ್ಲ ಹೇಳಬೇಡ ಲಿಯು. ನಮಗೆಲ್ಲ ಗೊತ್ತು, ನೀನು ಏನೆಂಬುದು"– ಫೂ ಅವನ ಬಟ್ಟಲನ್ನು ತುಂಬಿದ. ಈಗ ಆ ಕತ್ತಲ ದಿನಗಳು ಕಳೆದಿವೆ. ಮತ್ತೆ ಸೂರ್ಯ ಉದಯಿಸುತ್ತಿದ್ದಾನೆ. ಒಳ್ಳೆಯ ದಿನಗಳು ಬರುತ್ತವೆ. ದೇಶ ಬದಲಾಗುತ್ತದೆ."

"ಅದರಲ್ಲಿ ನನಗೆ ಭರವಸೆ ಇದೆ" ಲಿಯು ಒಪ್ಪಿದಂತೆ ತಲೆತೂಗಿದ. "ಆದರೆ ನಮ್ಮ ಮೇಲೆ ಸೂರ್ಯನ ಬೆಳಕು ಯಾವಾಗ? ನಮ್ಮ ಮಗಳು ಹಗಲು ಕಾಣುವುದೆಂದು?.... ಇನ್ನು ನನಗೆ ಕಾಯುವ ತಾಳ್ಮೆಯಿಲ್ಲ."

"ಆ ಮಾತೆಲ್ಲ ಈಗ ಯಾಕೇ?" –ಲೂಗೆ ಅರ್ಥವಾಯಿತು. ತನ್ನ ಒಬ್ಬಳೇ ಮಗಳಿಗಾಗಿ, ಬಲವಂತಕ್ಕೆ ಸಿಕ್ಕಿ ಅವನಿಗೆ ಹೋಗಬೇಕಾಗಿ ಬಂದಿದೆ. ಇಲ್ಲಿಗೆ ಈ

ಮಾತನ್ನು ಸಾಕು ಮಾಡಬೇಕು. ವಿಷಯಾಂತರ ಮಾಡಲು ಲೂ– "ನಾನೆಂದೂ ಕುಡಿಯುವುದಿಲ್ಲ, ಇವತ್ತು ನಿಮ್ಮಿಬ್ಬರ ಸಂತೋಷಕ್ಕಾಗಿ ಸುಖ ಪ್ರವಾಸಕ್ಕಾಗಿ ಕುಡಿಯುತ್ತಿದ್ದೇನೆ."

"ಇಲ್ಲ, ನಾವು ನಿನಗಾಗಿ ಕುಡಿಯಬೇಕು." ಲಿಯು ಬಟ್ಟಲನ್ನೆತ್ತಿಕೊಳ್ಳುತ್ತಾ ನುಡಿದ. –ನಮ್ಮ ಆಸ್ಪತ್ರೆಯ ಮುಖ್ಯ ಆಸ್ತಿ ನೀನು. ಪ್ರತಿಭಾವಂತ ಡಾಕ್ಟರುಗಳಲ್ಲಿ ಒಬ್ಬಳು!"

"ಕುಡಿದದ್ದು ಹೆಚ್ಚಾಯಿತೇನೋ!" ಅವಳು ನಕ್ಕಳು.

"ಖಂಡಿತ ಇಲ್ಲ."

ಇಲ್ಲಿಯವರೆಗೆ ಮಾತಿಲ್ಲದೆ ಮೌನವಾಗಿ ಕುಳಿತಿದ್ದ ಜಿಯಾಂಗ್ ಬಟ್ಟಲನ್ನೆತ್ತಿ ತುಟಿಗಿಟ್ಟುಕೊಳ್ಳುತ್ತಾ "ಹೃದಯಪೂರ್ವಕವಾಗಿ ನಿನಗಾಗಿ ನಮ್ಮಿಬ್ಬರ ಇಪ್ಪತ್ತು ವರುಷಗಳ ಗೆಳೆತನಕ್ಕಾಗಿ, ಭಾವಿ ಐ–ಸ್ಪೆಷಲಿಸ್ಟ್‌ಗಾಗಿ–ಇಗೋ ಕುಡಿತಿದ್ದೇನೆ!"

"ಅಯ್ಯೋ ದೇವರೇ! ಯಾಕೆ ಹೀಗೆ ಹುಚ್ಚುಚ್ಚಾಗಿ ಮಾತಾಡ್ತಿದ್ದೀ?" – ಎಂದು ಅವಳ ಹೊಗಳಿಕೆಯನ್ನು ದೂರವಿರಿಸಿದಳು.

"ನೀನು ಯಾರು?" –ಲಿಯು ಅರ್ಧ ಅಮಲಿಗಿಳಿದಿದ್ದ. "ನೀನು ನಿನ್ನಂಥರು, ಕೊಟ್ಟಿಗೆ ತರಹದ, ಇಕ್ಕಟ್ಟಾದ ಜಾಗಗಳನ್ನು ಲೆಕ್ಕಿಸದೆ, ಹಣದ ಮೋಹ ಇಲ್ಲದೆ ಗುಲಾಮರ ರೀತೀಲಿ ದುಡೀತಿರಿ. ನಿನ್ನಂತೆ ಕಷ್ಟಪಟ್ಟು ದುಡೀತಾ, ಮಕ್ಕಳ ಸೇವೆ ಮಾಡ್ತಾ, ದನಗಳ ಹಾಗೆ ಬದುಕುವಂತಹವರನ್ನು, ಲುಷುನ್ ಏನಂತ ಕರೆದ,– ಗೊತ್ತಾ, ಹುಲ್ಲು ತಿಂದು ಹಾಲು ಕೊಡೋ ಹಸು... ಹಸು... ಅಂತ ಕರೆದ. ಕರೆದದ್ದು ಸರಿಯಾಗಿದೆ ಅಲ್ವಾ?"

ಫೂ ಆ ಮಾತಿಗೆ ಹೌದೆಂದು ತಲೆತೂಗಿದ.

"ಹಾಗಿರುವವರು, ನಾನೊಬ್ಬಳೇ ಇಲ್ಲ. ಬೇರೆಯವರೆಷ್ಟೋ ಮಂದಿ ಇದ್ದಾರೆ"– ನಗುತ್ತಾ ಹೇಳಿದಳು.

"ಅದಕ್ಕೇ ನಮ್ಮ ದೇಶ ಮಹಾನ್ ದೇಶ!" – ಇನ್ನೊಂದು ಬಟ್ಟಲು ವೈನನ್ನು ಗಂಟಲಿಗಿಳಿಸಿದ. ಜಿಯಾಂಗ್ ಷಿಯಾಳ ಕಡೆಗೆ ನೋಡಿದಳು. ಒಳ್ಳೇ ನಿದ್ದೇಲಿ ಇದ್ದಳು.

"ಹೌದು ಲೂ, ರೋಗಿಗಳನ್ನು ನೋಡುವ ಭರದಲ್ಲಿ ನಿನಗೆ ನಿನ್ನ ಮಗಳನ್ನು ನೋಡಿಕೊಳ್ಳುವಷ್ಟೂ ಸಮಯ ಸಿಗ್ತಿಲ್ಲ."

ಲಿಯು ಎಲ್ಲರ ಬಟ್ಟಲುಗಳನ್ನು ತುಂಬಿಸಿದ. ಘೋಷಣಾತ್ಮಕವಾಗಿ ಹೇಳಿದ– "ಮಾನವ ಕುಲದ ಉದ್ಧಾರಕ್ಕಾಗಿ ಅವಳು ತನ್ನನ್ನು ತ್ಯಾಗ ಮಾಡಿಕೊಳ್ಳುತ್ತಿದ್ದಾಳೆ."

"ನಿಮಗೆಲ್ಲ ಇವತ್ತು ಏನಾಗಿದೆ? ಎಲ್ಲರೂ ಯಾಕೆ ನನ್ನನ್ನು ಅಷ್ಟು ಹೊಗಳಿ ಅಟ್ಟಕ್ಕೇರಿಸುತ್ತಿದ್ದೀರಿ" ....ಗಂಡನ ಕಡೆ ಬೊಟ್ಟು ಮಾಡಿ ಹೇಳಿದಳು– "ನೀವು ಇವರನ್ನು ಕೇಳಿ. ನಿಮಗೇ ಗೊತ್ತಾಗುತ್ತೆ. ನಾನು ಸ್ವಾರ್ಥಿ ಅಲ್ಲದೆ ಇದ್ದರೆ ನನ್ನ ಗಂಡನ್ನ ಹೀಗೆ ಮನೆ ಕೆಲಸಗಳಿಗೆ ಹಚ್ಚುತ್ತಿದ್ದೆನೇ? ಮಕ್ಕಳನ್ನು ಹೀಗೆ ಭಿಕಾರಿಗಳ ಹಾಗೆ ಇಟ್ಟಿರುತ್ತಿದ್ದೆನೇ? ಇಡೀ ಮನೇನೇ ಅಸ್ತವ್ಯಸ್ತವಾಗಿ ಇಡುತ್ತಿದ್ದೆನೇ? ...ನಿಜವಾಗಿ ಹೇಳೋದಾದರೆ, ಈ ಕಡೆ ಒಳ್ಳೇ ಗೃಹಿಣೀನೂ ಆಗಲಿಲ್ಲ, ಆಕಡೆ ಒಳ್ಳೆ ತಾಯೀನೂ ಆಗಲಿಲ್ಲ."

"ಆದರೆ ನೀನು ಒಳ್ಳೆ ಡಾಕ್ಟರಾಗಿದ್ದೀ!" ಲಿಯು ಗಟ್ಟಿಯಾಗಿ ಹೇಳಿದ. ಫೂ ಇನ್ನೊಂದು ಬಟ್ಟಲು ವೈನ್ ತುಂಬಿಸಿಕೊಳ್ಳುತ್ತ ವಿವರಿಸಿದ....

"ಅದಕ್ಕೆ ನಿಮ್ಮ ಆಸ್ಪತ್ರೇನ ದೂರಬೇಕು. ಡಾಕ್ಟರುಗಳಾದರೇನು? ಅವರಿಗೂ ಮನೆ, ಮಠ, ಹೆಂಡತಿ ಮಕ್ಕಳು–ಸಂಸಾರಾಂತ ಇರುತ್ತೆ ಅನ್ನೋದನ್ನ ಮರೆತಿದೆ. ಅವರ ಮಕ್ಕಳು ಖಾಯಿಲೆ ಬೀಳುತ್ತಾರೆ ಅನ್ನೋ ಪ್ರಜ್ಞೇನೇ ಬೇಡವೆ?" ಅವರ ಬಗ್ಗೆ ಯಾರಿಗೂ ಯಾಕೆ ಕಳಕಳಿ ಇಲ್ಲ?"

"ಫೂ" ಮಧ್ಯೆ ಪ್ರವೇಶಿಸಿ, ಲಿಯು ಜೋರಾಗಿ ನುಡಿದ. "ನಾನೇನಾದರೂ ಡೈರೆಕ್ಟರ್ ಜಾವೋ ಜಾಗದಲ್ಲಿ ಇದ್ದಿದ್ದರೆ, ಮೊದಲು ನಿನಗೊಂದು ಮೆಡಲ್, ಷಿಯಾಗೊಂದು, ಯುಯಾನ್‌ಗೊಂದು ಕೊಡಿಸ್ತಿದ್ದೆ. ಯಾಕೆ ಗೊತ್ತಾ? ಇಂತಹ ಒಳ್ಳೆ ಡಾಕ್ಟರುಗಳನ್ನು ತಯಾರು ಮಾಡೋದರಲ್ಲಿ, ನಿಮ್ಮ ಬಲಿಯಾಗ್ತಿದೆ.

ಫೂ ಬಾಯಿ ಹಾಕಿದ, "ನನಗೆ ಮೆಡಲ್ ಗಿಡಲ್ ಬೇಕಾಗಿಲ್ಲ–ನಿಮ್ಮ ಆಸ್ಪತ್ರೆ, ಇಂತಹ ಡಾಕ್ಟರುಗಳ ಗಂಡಂದಿರಾಗಿರೋದು ಎಷ್ಟು ಕಷ್ಟ ಅನ್ನೋದನ್ನು ತಿಳಿದುಕೊಂಡರೆ ಸಾಕು. ಹೊರಗೆಲ್ಲಿಯಾದರೂ ಮೆಡಿಕಲ್ ಟೂರ್ ಹೋಗಬೇಕೂಂತ ಆರ್ಡರ್ಸ್ ಬಂದರೆ ಸಾಕು. ಮನೆ ಗಿನೆ ಏನೂ ಅವಳಿಗೆ ಬೇಡವಾಗಿ ಬಿಡುತ್ತೆ. ತುದಿಕಾಲ ಮೇಲೆ ಸಿದ್ಧವಾಗಿ ಬಿಡುತ್ತಾಳೆ. ಆಪರೇಷನ್‌ಗಳನ್ನು ಮುಗಿಸಿಕೊಂಡು ದಣಿದು ಮನೆಗೆ ಬಂದರೆ ಮುಗೀತು ಅಷ್ಟೆ! ಒಂದು ಕೆಲಸವೂ ಮಾಡೋಕೆ ಆಗುವುದಿಲ್ಲ. ಸೋತು ಸತ್ತು ಬರುತ್ತಾಳೆ. ಅಂತಹ ಸಮಯದಲ್ಲಿ ನಾನು ಅಡಿಗೆ ಮನೆಗೆ ಹೋಗದೆ ವಿಧೀನೇ ಇಲ್ಲ. ನನ್ನನ್ನು ಬಿಟ್ಟರೆ ಬೇರೆ ಯಾರಿದ್ದಾರೆ? ಒಂದು ರೀತಿಯಿಂದ 'ಸಾಂಸ್ಕೃತಿಕ ಕ್ರಾಂತಿ'ಗೆ ನಾನು ಕೃತಜ್ಞತೆ ಹೇಳಬೇಕು. ಇಷ್ಟೊಂದು ದಿವಸ ನನಗೆ ಬಿಡುವು ಕೊಡಿಸಿ, ಅಡಿಗೆ ಕಲಿಯುವುದಕ್ಕೆ ಅವಕಾಶ ಮಾಡಿ ಕೊಟ್ಟಿತಲ್ಲ!"

"ಯಾ ಫೇನ್ ನನಗೆ ಹಿಂದೇನೇ ಹೇಳಿದಳು 'ಪುಸ್ತಕದ ಹುಳು' ಅನ್ನೋ ನಿನ್ನ ಬಿರುದನ್ನು ಕಿತ್ತು ಆಚೆಗೆ ಎಸೆಯಬೇಕೂಂತ!" ಲಿಯು, ಫೂನ ಬೆನ್ನು ತಟ್ಟಿ ನಕ್ಕ. "ನೀನೇನು? ಸ್ಪೇಸ್ ಟ್ರಾವೆಲ್‌ಗೆ ಸಂಬಂಧಿಸಿದಂತೆ ತುಂಬಾ ಮುಂದುವರೆದ ವೈಜ್ಞಾನಿಕ ವಿಷಯಗಳನ್ನೂ ಕಲೀಬಹುದು; ಹಾಗೆ ಅಡಿಗೆ ಮನೆಯ ಅತ್ಯುತ್ತಮ ನಿಪುಣ ಅಂತಲೂ ಕರೆಸಿಕೊಳ್ಳಬಹುದು! ಒಟ್ಟೊಟ್ಟಿಗೆ ಎರಡು ಪಾತ್ರಗಳು! ಕಮ್ಯೂನಿಸ್ಟ್ ಯುಗದ

ನೂತನ ವ್ಯಕ್ತಿಗಳಲ್ಲಿ ಒಬ್ಬನಾಗುತ್ತಿದ್ದೆ! 'ಸಾಂಸ್ಕೃತಿಕ ಕ್ರಾಂತಿ'ಯ ಸಾಧನೆಗಳ ಮತ್ತೊಂದು ಹೊಸಮುಖ ಇದೆಂದು ಯಾರು ತಾನೇ ಹೇಳದೆ ಇರ್ತಾರೆ? ಅಥವಾ ಇಲ್ಲ ಅಂತ ಹೇಳೋ ಧೈರ್ಯ ಯಾರಿಗಿದೆ?"

ಘೂ ಎಂದೂ ಕುಡಿದಿಲ್ಲ. ಇವತ್ತು ಒಂದೆರಡು ಬಟ್ಟಲು ಕುಡಿದದ್ದಕ್ಕೇ ಮುಖ ಕೆಂಪಾಯಿತು. "ಹೌದು. ನೀನು ಹೇಳಿದ್ದು ಸರಿ. 'ಸಾಂಸ್ಕೃತಿಕ ಕ್ರಾಂತಿ' ನಮ್ಮಂತಹವರನ್ನು ಹೊಸ ರೀತೀಲಿ ರೂಪಿಸುವುದರಲ್ಲಿ ದೊಡ್ಡ ಪಾತ್ರ ವಹಿಸಿದೆ. ಆ ದಿನಗಳಲ್ಲಿ, ನಾನು ಗಂಡು ಗೃಹಿಣಿಯಾಗಿರಬೇಕಾಯಿತು. ನಂಬಿಕೆ ಬರಲಿಲ್ಲಾಂದ್ರೆ, ವೆಂಟಿಂಗ್‌ನೇ ಕೇಳು – ಪ್ರತಿಯೊಂದು ಮನೆಗೆಲಸದಲ್ಲೂ ನನ್ನ ಸಹಕಾರ ಇತ್ತೋ ಇಲ್ವೋಂತ?"

ಘೂನ ಈ ಕೀಟಲೆಯ ಮಾತುಗಳು ಲೂಗೆ ಬೇಸರ ತಂದಿತು. ಆದರೂ ತಡೆಯಲಿಲ್ಲ. ಅಗಲಿಕೆಯ ನೋವನ್ನು ಮರೆಯಲು ಇದೊಂದೇ ದಾರಿ. ಪ್ರಯತ್ನ ಪೂರ್ವಕವಾಗಿ ನಕ್ಕಳು, –ಘೂನತ್ತ ತಿರುಗಿ,

"ಹೌದು ನೀನು ಎಲ್ಲ ಮನೆ ಕೆಲಸಗಳನ್ನು ಕಲಿತರೂ, ಹೊಲಿಯುವುದಕ್ಕೆ ಮಾತ್ರ ಕಲಿಯಲಿಲ್ಲ. ಅದಕ್ಕೆ ಯುಯಾನ್, ಜಿಮ್ ಷೂನ್ ಬೇಕೂಂತ ಸಾಯ್ತಾನೆ."

"ಓಹೋ ನೀನು ಅತಿಯಾಗಿ ನಿರೀಕ್ಷಿಸುತ್ತೀಯ." ನೇರವಾಗಿ ಅವಳತ್ತ ನೋಡುತ್ತಾ ನುಡಿದ–ಘೂ ಎಷ್ಟೇ ಪ್ರಾವಿಣ್ಯ ಪಡೆದರೂ, ಇಂತಹ ವಿಷಯಗಳಲ್ಲಿ, ಒಬ್ಬ ಹಳ್ಳಿ ಹೆಂಗಸಿನ ಹಾಗೆ 'ಷೂಸೋಲ್ ತೆಗೆದುಕೊಂಡು ಊರೆಲ್ಲಾ ಸುತ್ತುವುದು ಮಾತ್ರ ಸಾಧ್ಯವಿಲ್ಲ.'

ನಿಸ್ಸಾರವಾದ ಈ ಹಾಸ್ಯದ ಮಾತುಗಳನ್ನು ಎಷ್ಟೂಂತ ಮುಂದುವರೆಸೋಕೆ ಸಾಧ್ಯ? ವೈಜ್ಞಾನಿಕ ಸಾಧನೆಗಳ ಬಗ್ಗೆ, ಗುಂಪಿನ ಬಗ್ಗೆ, ರಾಜಕೀಯ ಸ್ಥಿತ್ಯಂತರಗಳ ಬಹಗ್ಗೆ ಕನಿಷ್ಠ ಸಂಬಳದಲ್ಲಿ ದುಡಿಯುತ್ತಿರುವ ಬುದ್ಧಿಜೀವಿಗಳ ಸ್ಥಿತಿಗತಿಗಳ ಬಗ್ಗೆ, ವಿಶೇಷವಾಗಿ ನಡುವಯಸ್ಸಿನ ತಜ್ಞರ ಬಗ್ಗೆ ಮಾತನಾಡಿದರು. ವಾತಾವರಣ, ಇಂತಹ ಗಂಭೀರ ಚರ್ಚೆಗಳಿಂದ ಬಿಗುವಾಯಿತು.

"ಲಿಯು, ನಿನಗೆ ಬೇಕಾದಷ್ಟು ಜನರ ಪರಿಚಯ ಇದೆ. ನಿನಗೆ ಹೋಗಲು ಮನಸ್ಸಿಗೆ ಅಷ್ಟೊಂದು ಬೇಸರವಾಗಿದೆ ಎನಿಸಿದರೆ, – ಅವನ ಮೇಲೆ ಒಂದೇಟು ಕೊಟ್ಟು ಮುಂದುವರೆದ ಘೂ–ಒಳ್ಳೇ ಸಂಬಳ ಸಿಗುವ ಜಾಗಗಳಲ್ಲಿ ಇಲ್ಲಿ ಎಲ್ಲಿಯಾದರೂ ಸೇರಬಹುದು. ಮನೆಗಳು ಒಳ್ಳೇ ಸಂಪಾದನೆ ನೀಡುತ್ತವಂತೆ. ನನಗೂ ಯಾವುದಾದರೂ ಒಂದು ಮನೇಲಿ, ಗಂಡಾಳಾಗಿ, ಕೆಲಸ ಸಿಗುತ್ತಾ ಹಾಗೇ ನೋಡಿಡು."

"ನಾನು ಹೋಗೋ ಸಮಾಚಾರ ಒಂದು ಕಡೆಗಿರಲಿ. ನೀನು ಪೇಪರ್‌ನಲ್ಲಿ ಒಂದು ಆ್ಯಡ್ ಕೊಡು. ಹೊಸ ಪೇಪರೊಂದು ಬಂದಿದೆಯಲ್ಲ 'ದಿ ಮಾರ್ಕೆಟ್ ಅಂತ."

"ತುಂಬಾ ಒಳ್ಳೇ ಐಡಿಯಾ!- ದಪ್ಪ ಕಟ್ಟಿನ ಕನ್ನಡಕವನ್ನು ಸರಿ ಮಾಡಿಕೊಳ್ಳುತ್ತಾ ಹೇಳಿದ- "ಜಾಹಿರಾತು ಕೊಡುತ್ತಿರುವ ವ್ಯಕ್ತಿ ಪದವೀಧರ, ಎರಡು ಫಾರಿನ್ ಭಾಷೆಗಳಲ್ಲಿ ಪರಿಣತಿ ಇದೆ. ಒಳ್ಳೆ ಅಡಿಗೆಯನ್ನು ಮಾಡಬಲ್ಲ, ಚೆನ್ನಾಗಿ ಹೊಲಿಯಬಲ್ಲ, ಸೂಕ್ಷ್ಮ ಕೆಲಸಗಳನ್ನೂ, ಶ್ರಮದ ಕೆಲಸಗಳನ್ನೂ ಮಾಡಬಲ್ಲ. ತನ್ನ ಬಗ್ಗೆ ಬರುವ ಟೀಕೆಗಳನ್ನು ಸಹಿಸಿಕೊಳ್ಳಲೂ ಬಲ್ಲ. ಕೊನೆಯದಾಗಿ, ಸಂದರ್ಶನದ ಅವಧಿಯಲ್ಲಿ ಸಂಬಳವನ್ನು ನಿರ್ಧರಿಸಬಹುದು"- ಎಂದು ಹೇಳಿ ದೊಡ್ಡದಾಗಿ ನಕ್ಕ.

ಜಿಯಾಂಗ್ ತಿನ್ನಲೂ ಇಲ್ಲ; ಕುಡಿಯಲೂ ಇಲ್ಲ. ಮಾತಿಲ್ಲದೆ ಕುಳಿತಿದ್ದಳು. ಅವರ ನಗುವಿನ ಜೊತೆಗೆ ಸೇರಬೇಕೆಂದುಕೊಂಡರೂ ಸಾಧ್ಯವಾಗಲಿಲ್ಲ. ಗಂಡನನ್ನು ತಿವಿದು ಹೇಳಿದಳು- "ಹಾಗೆಲ್ಲ ಹುಚ್ಚುಚ್ಚಾಗಿ ಮಾತಾಡಬೇಡ. ಅದರಿಂದ ಪ್ರಯೋಜನವೇನು?"

"ಇದೇ ಇಂದು ಪ್ರಚಲಿತವಾಗಿರುವ ಸಾಮಾಜಿಕ ವಾಸ್ತವ ಸಂಗತಿ. ಅದನ್ನೇ ನಾನು ಹೇಳೋಕೆ ಹೊರಟಿದ್ದು-ಮಧ್ಯವಯಸ್ಸು .... ಮಧ್ಯವಯಸ್ಸಿನ ಜನವೇ ನಮ್ಮ ನಾಡಿನ ಬೆನ್ನೆಲುಬು. ಸಮರ್ಥವಾಗಿ ಆಪರೇಷನ್ ಮಾಡುವವರು ಮಧ್ಯ ವಯಸ್ಸಿನ ಸರ್ಜನ್‌ಗಳು; ಗಂಭೀರವಾದ ವೈಜ್ಞಾನಿಕ ಸಂಶೋಧನೆಗಳು, ತಾಂತ್ರಿಕ ಪರಿಣತಿ ನಿಂತಿರೋದು ಮಧ್ಯವಯಸ್ಸಿನ ವಿಜ್ಞಾನಿಗಳ ಮೇಲೆ. ಔದ್ಯೋಗಿಕ ಕ್ಷೇತ್ರಗಳಲ್ಲಿ, ಮಧ್ಯವಯಸ್ಸಿನ ಕಾರ್ಮಿಕರ ಮೇಲೇ ಜವಾಬ್ದಾರಿಯ ಕೆಲಸಗಳು; ಶಾಲಾ ಕಾಲೇಜುಗಳಲ್ಲಿ ಪ್ರಧಾನವಾದ ಕೋರ್ಸುಗಳನ್ನು ಬೋಧಿಸುವವರು ಮಧ್ಯವಯಸ್ಸಿನ ಶಿಕ್ಷಕರು."

"ಸುಮ್ಮನೆ ಹೇಳಿದ್ದನ್ನೇ ಹೇಳಬೇಡ" ಜಿಯಾಂಗ್ ನಿಲ್ಲಿಸಲು ಯತ್ನಿಸಿದಳು.

"ಡಾಕ್ಟರಾದ ನಿನಗೆ ಅದೆಲ್ಲ ತಲೆನೋವು ಬೇಡ."

ಲಿಯು ಕಣ್ಣು ಅರೆ ಮುಚ್ಚಿ, ಗುಂಗಿನಲ್ಲಿ ಮುಂದುವರೆದ-ಲೂ, ನೀನೇ ಹೇಳಲಿಲ್ವಾ?- ನಾನೊಂದು ಕೆಲಸದಲ್ಲಿದ್ದರೂ, ನನ್ನ ನಾಡಿಗೆ ನಾನು ಬದ್ಧಳಾಗಿರುತ್ತೇನೆ - ಅಂತ? ನಾನು ಒಬ್ಬ ಡಾಕ್ಟರು. ಯಾರೂ ನನ್ನ ಹೆಸರನ್ನು ಕೇಳಿದವರಿಲ್ಲ. ಆದರೆ ನನ್ನ ನಾಡಿನ ವಿಚಾರವಾಗಿ ಚಿಂತಿಸುತ್ತಿರುತ್ತೇನೆ. ಪ್ರತಿಯೊಬ್ಬರೂ ಮಧ್ಯವಯಸ್ಸಿನವರ ಮಹಾನತೆ ಏನೂಂತ ತಿಳಿದಿದ್ದಾರೆ. ಆದರೆ ಅವರ ಬದುಕುಗಳು ಎಷ್ಟು ಕಷ್ಟ ಅನ್ನೋದು ಯಾರಿಗೆ ಗೊತ್ತು? ಅವರು ಕೆಲಸ ಮಾಡುವ ಕಡೆ ಹೆಚ್ಚು ಜವಾಬ್ದಾರಿಗಳನ್ನು ಹೊರುತ್ತಾರೆ. ಮನೇಲಿ ಮನೆಕೆಲಸಗಳನ್ನೆಲ್ಲಾ ಮಾಡ್ತಾರೆ. ತಂದೆ-ತಾಯಿ ಮಕ್ಕಳು ಎಲ್ಲರ ಪೋಷಣೆಯ ಹೊಣೆಗಾರಿಕೆ ಅವರದಾಗಿರುತ್ತೆ. ಅವರಿಗಿರುವ ಅನುಭವದಿಂದ ಮತ್ತು ಸಾಮರ್ಥ್ಯದಿಂದ ಮಹತ್ವದ ಪಾತ್ರ ವಹಿಸುತ್ತಾರೆ- ಅನ್ನೋದಲ್ಲ. ಅದಕ್ಕಾಗಿ ಅವರ ಪಾತ್ರ ದೊಡ್ಡದಲ್ಲವೂ ಅಲ್ಲ-ಮನೇಲಿ ಬೆಟ್ಟದಷ್ಟು ತೊಂದರೆಗಳನ್ನು

ಅನುಭವಿಸುತ್ತಾರೆ. ಹೆಂಡತಿ ಮಕ್ಕಳು ಸಂಸಾರಾನೆಲ್ಲ ಮರೆತು ಕೆಲಸಕ್ಕಾಗಿ ತಮ್ಮನ್ನು ತಾವು ತ್ಯಾಗ ಮಾಡಿಕೊಳ್ಳುತ್ತಾರೆ."

ಲೂ ನಿರ್ಭಾವುಕತೆಯಿಂದ ಕೇಳಿಸಿಕೊಂಡಳು. ಮೆದು ದನಿಯಲ್ಲಿ ಮಧ್ಯೆ ಪ್ರವೇಶಿಸಿ ಹೇಳಿದಳು– "ಆದರೆ ನಮ್ಮ ದುರಾದೃಷ್ಟ ಯಾರಿಗೂ ಇವು ಅರ್ಥವಾಗೊಲ್ಲ. ಎಲ್ಲೋ ಅಪರೂಪಕ್ಕೆ ಒಂದಷ್ಟು ಮಂದಿ ಇದರ ಬಗ್ಗೆ ಮುತುವರ್ಜಿ ವಹಿಸಿ ತಿಳಿಯೋ ಪ್ರಯತ್ನ ಮಾಡ್ತಾರೆ."

ಇಲ್ಲಿಯವರೆಗೆ ಸುಮ್ಮನಿದ್ದ ಫೂ ಲಿಯುನ ಬಟ್ಟಲನ್ನು ತುಂಬಿ ಗೆಲುವಿನಿಂದ ನುಡಿದ– "ನೀನು ಸಮಾಜಶಾಸ್ತ್ರ ಓದಿದ್ದರೆ ಚೆನ್ನಾಗಿತ್ತು."

ಲಿಯು ವ್ಯಂಗ್ಯವಾಗಿ ನುಡಿದ– "ಹಾಗೇನಾದರೂ ಓದಿದ್ದರೆ, ನಾನು ಇಷ್ಟು ಹೊತ್ತಿಗೆ ಬಲಪಂಥಿಯಾಗಿರುತ್ತಿದ್ದೆ. ಯಾಕೆಂದರೆ ಸಮಾಜಶಾಸ್ತ್ರಜ್ಞರು ಸಾಮಾಜಿಕ ಪಿಡುಗುಗಳನ್ನು ಓದಿರಬೇಕಾಗುತ್ತೆ."

"ಅವುಗಳನ್ನು ಬೆಳಕಿಗೆ ತಂದು ನಾಶ ಮಾಡಿದರೆ, ಸಮಾಜ ನಿಜವಾಗಿಯೂ ಅಭಿವೃದ್ಧಿ ಹೊಂದುತ್ತೆ. ಇದೆಲ್ಲ, ಎಡಪಂಥಕ್ಕೆ ಹೊರತು ಬಲಪಂಥಕ್ಕಲ್ಲ"– ಫೂ ಉತ್ತರಿಸಿದ.

"ನಿನಗೆ ಕಾಳಜಿ ಬೇಡ. ನಾನು ಎಡಕ್ಕೂ ಇಲ್ಲ, ಬಲಕ್ಕೂ ಇಲ್ಲ. ನನಗೆ ಆಸಕ್ತಿ ಇರೋದು ಸಾಮಾಜಿಕ ಸಮಸ್ಯೆಗಳ ಬಗ್ಗೆ. ಉದಾಹರಣೆಗೆ ಮಧ್ಯ ವಯಸ್ಸಿನವರ ಸಮಸ್ಯೆಗಳು" ಲಿಯು ಮೇಜಿನ ಮೇಲೆ ಮೊಣಕೈಯೂರಿ ಖಾಲಿಯಾದ ಬಟ್ಟಲಿನೊಂದಿಗೆ ಆಡುತ್ತಾ, ಮತ್ತೆ ಮಾತನ್ನು ಮುಂದುವರೆಸಿದ – "ಹಿಂದೆ ಒಂದು ಮಾತಿತ್ತು. ಮಧ್ಯವಯಸ್ಸಿಗೆ ಎಲ್ಲ ಎಲ್ಲ ಚಟುವಟಿಕೆಗಳಿಗೂ ಮುಕ್ತಾಯ ಸಿಗುತ್ತೇಂತ! ಆದರೆ ಅದು ತುಂಬಾ ಹಿಂದೆ. ಆ ಕಾಲ ಮುಪ್ಪು ಸಂಭವಿಸುತ್ತಿದ್ದ ಕಾಲದಲ್ಲಿ, ನಲ್ವತ್ತರ ಪ್ರಾಯಕ್ಕೇ ತಮಗೆ ವಯಸ್ಸಾಗಿ ಹೋಯಿತು ಎನ್ನುವ ಭಾವನೆಯಿತ್ತು. ಆದರೆ ಈಗ ಆ ಮಾತನ್ನು ಬದಲಾಯಿಸಬೇಕಾಗಿದೆ. ಹೌದು ತಾನೇ? ಇದರರ್ಥ ನಮ್ಮ ಸಮಾಜದಲ್ಲಿ ಜನ ಮುದುಕರಾಗುವುದಕ್ಕಿಂತ ಹೆಚ್ಚಾಗಿ ಕ್ರಿಯಾಶೀಲರೂ, ನವಚೈತನ್ಯವುಳ್ಳವರೂ, ಉತ್ಸಾಹಶೀಲರೂ ಆಗುತ್ತಾರೆ ಅನ್ನೋ ಅಂಶ ಸ್ಪಷ್ಟ; ವೈದ್ಯ. ತಮ್ಮ ಅಂತಃಶಕ್ತಿ ಸಾಮರ್ಥ್ಯಗಳಿಗೆ ಪೂರ್ಣ ಅಭಿವ್ಯಕ್ತಿ ಸಾಧ್ಯವಾಗುವುದು, ಮಧ್ಯವಯಸ್ಸಿನಲ್ಲಿ.

"ಸರಿಯಾಗಿ ಹೇಳಿದೆ" –ಫೂ ಸಹಮತಿ ತೋರಿದ.

"ಇಷ್ಟು ಬೇಗ ನಿನ್ನ ಒಪ್ಪಿಗೆ ಕೊಡಬೇಡ. ಇನ್ನೂ ಒಂದು ವಿಚಿತ್ರವಾದ ಅಭಿಪ್ರಾಯ ಇದೆ–ಲಿಯು, ಫೂನ ತೋಳನ್ನು ಬಲವಾಗಿ ಹಿಡಿದು ಉತ್ಸಾಹದಿಂದ ಹೇಳಿದ– ನಾನು ಹೇಳಿದ ರೀತಿಯಿಂದ ನೋಡಿದರೆ, ನಿನಗೆ ಅನಿಸಬಹುದು, ಮಧ್ಯವಯಸ್ಸಿನ ತಲೆಮಾರು ಈ ದಿನಗಳಲ್ಲಿ ಬದುಕಿರುವುದು ಅದೃಷ್ಟ ಅಂತ! ಆದರೆ ಅದು ಹಾಗಲ್ಲ. ವಾಸ್ತವವಾಗಿ ಮಧ್ಯವಯಸ್ಸಿನ ತಲೆಮಾರಿನ ನಾವು ತುಂಬಾ ದುರದೃಷ್ಟಶಾಲಿಗಳು."

"ನಿಂದೇ ಮಾತು ಜಾಸ್ತಿಯಾಯಿತು. ಯಾರಿಗೂ ಮಾತನಾಡೋಕೆ ಅವಕಾಶಾನೇ ಸಿಗುತ್ತಿಲ್ಲ"– ಪ್ರತಿಭಟನೆಯ ದನಿಯಲ್ಲಿ ಹೇಳಿದಳು.

ಘೂ ಮಧ್ಯೆ ಹೇಳಿದ– 'ಯಾವ ರೀತಿಯಿಂದ ನಾವು ದುರದೃಷ್ಟಶಾಲಿಗಳೂಂತ ತಿಳಿಸುತ್ತೀಯಾ?"

"ಯಾಕೇಂತೀಯಾ? .... ಯಾವಾಗ ನಾವು ನಮ್ಮ ಕೆಲಸಗಳ ಸಾಧನೆಯ ಎತ್ತರದಲ್ಲಿರಬೇಕಾಗಿತ್ತೋ, ಆಗ ಲಿನ್ ಬಿಯಾ ಓ ಮತ್ತು 'ನಾಲ್ಕು ಜನರ ಗುಂಪಿ'ನಿಂದ ನಮ್ಮ ಕೆಲಸ ಎಲ್ಲ ಹಾಳಾಯ್ತು"– ನಿಟ್ಟುಸಿರಿಟ್ಟ. "ನಿನ್ನನ್ನೇ ಉದಾಹರಣೆಗೆ ತಗೋ.... ಹೆಚ್ಚು ಕಡಿಮೆ ನಿರುದ್ಯೋಗಿ ಅಲೆಮಾರಿಯಂತೆ ಆಗಿಬಿಟ್ಟಿದ್ದೆ. ಚೈನಾದ ಆಧುನೀಕರಣಕ್ಕೆ ನಮ್ಮಂತಹ ಮಧ್ಯವಯಸ್ಸಿನವರೇ ಮುಖ್ಯ ಪ್ರೇರಣೆಯಾಗಿದ್ದರೂ, ನಮ್ಮ ಪ್ರಾಮುಖ್ಯತೆ ನಮ್ಮ ಅರಿವಿಗೇ ಬಾರದಂತಹ ಸ್ಥಿತಿಯಲ್ಲಿದ್ದೇವೆ. ನಮಗಿರುವ ಜ್ಞಾನ, ಸಾಮರ್ಥ್ಯ, ಶಕ್ತಿ– ನಮಗೇ ಗೊತ್ತಿಲ್ಲ. ಶಕ್ತಿ ಮೀರಿದ ಹೊರೆ ನಮ್ಮ ಮೇಲೆ ಹೊರಿಸಿರೋದೇ ಒಂದು ದೊಡ್ಡ ದುರಂತ."

"ಅಬ್ಬಬ್ಬ! ನಿನ್ನನ್ನು ಮೆಚ್ಚಿಸೋದು, ಒಪ್ಪಿಸೋದು ಸಾಧ್ಯವೇ ಇಲ್ಲ!" – ಜಿಯಾಂಗ್ ನಗುತ್ತಾ ಹೇಳಿದಳು.

"ನಿಮ್ಮನ್ನು ಸರಿಯಾಗಿ ಬಳಸಿಕೊಳ್ಳಲಿಲ್ಲಾಂದ್ರೆ, ನಮ್ಮ ಪ್ರತಿಭೆಯೆಲ್ಲಾ ವ್ಯರ್ಥ ಆಯಿತೂ ಅಂತೀರಿ. ಬಳಸಿಕೊಂಡು ಹೆಚ್ಚು ಜವಾಬ್ದಾರಿಗಳನ್ನು ಕೊಟ್ಟರೆ, ಮಿತಿ ಮೀರಿ ಕೆಸ ಮಾಡಿಸ್ತಾರೆ, ಕಡಿಮೆ ಸಂಬಳ ಕೊಡ್ತಾರೆ – ಅಂತ ಗೊಣಗುತ್ತೀರಿ!"

"ಹಾಗಾದರೆ ಯಾವತ್ತೂ ನಿನ್ನ ಆಕ್ಷೇಪಣೆ ಇಲ್ಲವೇನು?" – ತಿರುಗಿ ಪ್ರಶ್ನಿಸಿದ.

ಜಿಯಾಂಗ್ ಸುಮ್ಮನೆ ತಲೆ ಬಗ್ಗಿಸಿದಳು. ಅವಳಿಂದ ಉತ್ತರ ಬರಲಿಲ್ಲ.

ಇಷ್ಟೂ ಮಾತಿಂದ ಲೂಗೆ ಒಂದು ಸ್ಪಷ್ಟವಾಯಿತು. ಇಲ್ಲೀವರೆಗೆ ತಿಳಿದಿದ್ದಂತೆ, ಲಿಯು ತನ್ನ ಮಗಳ ಬಲವಂತಕ್ಕೋಸ್ಕರ ಮಾತ್ರವೇ ಅಲ್ಲ. ತನ್ನ ಸ್ವಾರ್ಥಕ್ಕಾಗಿಯೂ, ದೇಶಬಿಟ್ಟು ಹೋಗಲು ನಿರ್ಧರಿಸಿದ್ದಾನೆ.

ಮತ್ತೊಮ್ಮೆ ಲಿಯು ಬಟ್ಟಲನ್ನೆತ್ತಿ, ಜೋರಾಗಿ ಹೇಳಿದ– "ಬನ್ನಿ, ಮಧ್ಯ ವಯಸ್ಸಿಗಾಗಿ ನಾವೆಲ್ಲಾ ಕುಡಿಯೋಣ!"

## ೧೦

ಬಂದ ಅತಿಥಿಗಳು ಹೊರಟು ಹೋದರು. ಮಕ್ಕಳು ಮಲಗಿದ್ದರು. ಲೂ ಅಡಿಗೆ ಮನೆ ಕ್ಲೀನ್ ಮಾಡಿದಳು. ಕೋನೆಯೊಳಗೆ ತನ್ನ ಗಂಡ ಘೂ ಹಾಸಿಗೆಗೆ ಒರಗಿ ಏನನ್ನೋ ಗಾಢವಾಗಿ ಆಲೋಚಿಸುತ್ತಿರುವುದನ್ನು ನೋಡಿದಳು. ತುಂಬ ಖಿನ್ನನಾಗಿದ್ದಂತೆ

ತೋರಿತು, ಲೂಗೆ ಆಶ್ಚರ್ಯವಾಯಿತು. ಫೂ ಕೇಳಿದ– "ಪೆಟೋಫಿಯ ಪದ್ಯ ನೆನಪಿದೆಯಾ?"

"ಖಂಡಿತ ನೆನಪಿದೆ!"

"ನಾನೊಂದು ಉರುಳಿ ಬೀಳುತ್ತಿರುವ ಅವಶೇಷವಾಗಿದ್ದರೆ...." ಹಣೆ ಮೇಲೆ ಇಟ್ಟುಕೊಂಡಿದ್ದ ಕೈಯನ್ನು ಸರಿಸಿದ.

"ನಾನೀಗ ಮುದಿಯನಂತೆ ಕೇವಲ ಒಂದು ಭಗ್ನಾವಶೇಷ. ದಿನದಿನಕ್ಕೆ ಸುಕ್ಕುಗಟ್ಟುತ್ತಾ, ಬಟ್ಟ ತಲೆಯಾಗುತ್ತಾ, ಕೂದಲು ಬೆಳ್ಳಗಾಗುತ್ತ ಹೊರಟಿದ್ದೇನೆ. ನನ್ನ ಹಣೆಯ ಮೇಲೆ ಸುಕ್ಕುಗಳು ನನ್ನ ಅನುಭವಕ್ಕೆ ಬರುತ್ತಿವೆ. ಖಂಡಿತ ನಾನೊಂದು ಭಗ್ನಾವಶೇಷವೇ!"

ಫೂ ವಯಸ್ಸಿಗಿಂತ ಮೀರಿ ಕಾಣುತ್ತಿದ್ದುದು ನಿಜವಾದರೂ ಲೂ ಅವನ ಮಾತುಗಳಿಂದ ಅಸಮಾಧಾನಗೊಂಡಿದ್ದಳು. ಅವನ ಹಣೆ ಮುಟ್ಟಿ ಹೇಳಿದಳು–

"ಅದಕ್ಕೆಲ್ಲ ಕಾರಣ ನಾನು! ನಾವೆಲ್ಲಾ ನಿನಗೊಂದು ಹೊರೆ ಆಗಿದ್ದೇವೆ."

ಫೂ ಅವಳ ಕೈ ಎಳೆದುಕೊಂಡು ಪ್ರೀತಿಯಿಂದ ನೇವರಿಸಿ ನುಡಿದ– "ಇಲ್ಲ, ಇದರಲ್ಲಿ ನಿನ್ನದೇನೂ ತಪ್ಪಿಲ್ಲ; ನಿನ್ನನ್ನು ದೂರುವ ಹಾಗೂ ಇಲ್ಲ."

"ನಾನು ಸ್ವಾರ್ಥಿ. ಬಹಳ ಸ್ವಾರ್ಥಿ. ಯಾವಾಗಲೂ ಕೆಲಸದ ಬಗ್ಗೇನೇ ಯೋಚಿಸಿದೆ" ಉತ್ಕಂಠಿತಳಾಗಿ ನುಡಿದಳು. ಫೂನ ಹಣೆಯ ಮೇಲಿಂದ ತನ್ನ ಕಣ್ಣುಗಳನ್ನು ಸೆಳೆದುಕೊಳ್ಳಲಿಲ್ಲ. ಇನ್ನೂ ಅಲ್ಲೇ ದೃಷ್ಟಿ ನೆಟ್ಟಿದ್ದಳು. "ನನಗೆ ಮನೆ ಅನ್ನೋದು ಇದ್ದರೂ ಅದರ ಕಡೆ ಗಮನ ಕೊಡಲೇ ಇಲ್ಲ. ಆಸ್ಪತ್ರೆಯ ಕೆಲಸ ಇಲ್ಲದಿದ್ದಾಗಲೂ ರೋಗಿಗಳ ಬಗ್ಗೇನೇ ಯೋಚಿಸುತ್ತಿದ್ದೆ. ಈ ಕಡೆ ಒಳ್ಳೇ ಹೆಂಡತೀನೂ ಆಗಲಿಲ್ಲ; ಆ ಕಡೆ ಒಳ್ಳೆ ತಾಯೀನೂ ಆಗಲಿಲ್ಲ."

"ಛೆ! ಹಾಗೆಲ್ಲ ಹೇಳಬೇಡ. ಎಲ್ಲರಿಗಿಂತ ನನಗೆ ಹೆಚ್ಚಾಗಿ ಗೊತ್ತು–ನೀನೆಷ್ಟು ತ್ಯಾಗ ಮಾಡಿದ್ದೀಯ ಅನ್ನೋದು ಮರೆಯೋಕೆ ಹೇಗಾಗುತ್ತೆ." ಉಕ್ಕಿಬಂದ ಕಣ್ಣೀರನ್ನು ಒರೆಸಿಕೊಂಡ.

ಅವನ ಹೃದಯಕ್ಕೆ ಒರಗಿ ಕುಳಿತುಕೊಂಡಳು, ದುಃಖದಿಂದಲೇ ಹೇಳಿದಳು– ನಿಮಗೆ ವಯಸ್ಸಾಗಿದೆ. ಇನ್ನೂ ವಯಸ್ಸಾಗೋದು ನನಗಿಷ್ಟವಿಲ್ಲ..."

"ಅದರ ಬಗ್ಗೆ ಯಾಕೆ ಯೋಚಿಸುತ್ತೀಯ. ನಾನು ಹಣ್ಣಾದರೇನಂತೆ ನನ್ನ ಪ್ರೀತಿ ಅಚ್ಚ ಹಸುರಿನ ಐವಿ ಬಳ್ಳಿಯಾದರೆ, ನನ್ನ ಸುತ್ತಿ ಬಳಸಿರುತ್ತದೆ..." ಮೆಲುದನಿಯಲ್ಲಿ ತಮ್ಮ ಪ್ರೀತಿಯ ಕವಿತೆಯ ಸಾಲನ್ನು ಹೇಳಿದ.

ಪ್ರಶಾಂತವಾದ ಮಾಗಿಯ ರಾತ್ರಿಯಲ್ಲಿ, ಲೂ ಗಂಡನ ಬೆಚ್ಚನೆಯ ಎದೆಗೊರಗಿ ನಿದ್ರಿಸಿದಳು. ಅವಳ ಕಣ್ಣುಗಳ ಒದ್ದೆಯಾಗಿದ್ದವು. ಮೃದುವಾಗಿ ಎತ್ತಿಕೊಂಡು, ಘೂ ಅವಳನ್ನು ಹಾಸಿಗೆಯ ಮೇಲೆ ಮಲಗಿಸಿದ. ಎಚ್ಚರಗೊಂಡ ಲೂ ಕೇಳಿದಳು– ಅಯ್ಯೋ ನಾನು ನಿದ್ದೆ ಮಾಡಿಬಿಟ್ಟೆನೇ?

"ತುಂಬಾ ಬಳಲಿದ್ದೆ. ಹಾಗೇ ನಿದ್ದೆ ಬಂದಿರಬೇಕು."

"ಇಲ್ಲ ನಿದ್ದೆ ಬಂದಿಲ್ಲ."

ಘೂ ಜಗಿದು ಕುಳಿತು ಹೇಳಿದ–ಲೋಹಕ್ಕೂ ದಣಿವು ಅನ್ನೋದು ಇರುತ್ತೆ. ಅತ್ಯಂತ ಸೂಕ್ಷ್ಮವಾದ ಸೀಳು ಕಾಣಿಸುತ್ತೆ. ಅದೇ ದೊಡ್ಡದಾಗುತ್ತಾ ಕೊನೆಗೆ ಹಠಾತ್ತಾಗಿ ತುಂಡಾಗುತ್ತದೆ."

ಘೂನ ಸಂಶೋಧನೆಯ ಕ್ಷೇತ್ರ ಅದಾಗಿತ್ತು. ಅವನು ತನ್ನ ಕ್ಷೇತ್ರದ ಭಾಷೆಯಲ್ಲಿಯೇ ಮಾತನಾಡುತ್ತಿದ್ದ.

ಭಯಂಕರ ದಣಿವು; ಭಯಂಕರ ಸೀಳು.... ನೀರವ ರಾತ್ರಿಯಲ್ಲಿ.... ಮುರಿವ, ಕುಸಿವ ಸದ್ದುಗಳು, ಎತ್ತರದ ಸೇತುವೆಗಳು ಕುಸಿಯುತ್ತಿವೆ. ಹಳಿಗಳು ಸೀಳುತ್ತಿವೆ; ಹಳೆಯ ಇಟ್ಟಿಗೆಯ ಕಟ್ಟಡದ ಅವಶೇಷಗಳನ್ನು ಐ ವೀ ಬಳ್ಳಿ ಬಳಸಿ ಏರುತ್ತಿವೆ. ಎಲ್ಲವೂ ಭಗ್ನ... ಭಗ್ನ....

## ೧೧

ರಾತ್ರಿ ದಟ್ಟವಾಯಿತು.

ತೂಗು ಹಾಕಿದ್ದ ದೀಪವನ್ನು ಆರಿಸಲಾಗಿತ್ತು. ಗೋಡೆ ದೀಪ ಮಂದವಾದ ಬೆಳಕನ್ನು ಚೆಲ್ಲುತ್ತಿತ್ತು. ಅವಳ ಕಣ್ಣೆದುರು ನೀಲಿ ಬೆಳಕಿನ ಎರಡು ಬಿಂದುಗಳು ಕಾಣಿಸಿದವು. ಬೇಸಿಗೆಯ ರಾತ್ರಿಯಲ್ಲಿನ ಮಿಂಚು ಹುಳುಗಳಂತೆ ಹೊಳೆದವು. ಕ್ರಮೇಣ ಆ ಹೊಳೆವ ಬಿಂದುಗಳು ಕಿನ್‌ಳ ಕಣ್ಣುಗಳಂತೆ ಭಾಸವಾದವು.

ಜಿಯಾವೋ ಆಸ್ಪತ್ರೆ ಸೇರಿದ ದಿನ ಕಿನ್ ಲೂಗಾಗಿ ಹೇಳಿ ಕಳಿಸಿದ್ದಳು. ಅವಳ ಕಣ್ಣುಗಳಲ್ಲಿ ಪ್ರೀತಿ ಸ್ನೇಹಗಳೇ ಇದ್ದವು. ಲೂ ಪ್ರವೇಶಿಸಿದಾಗ ಸೌಜನ್ಯದಿಂದಲೇ ಮಾತನಾಡಿಸಿದಳು.

"ಡಾ॥ ಲೂ ಕುಳಿತುಕೊಳ್ಳಿ. ಜಿಯಾವೋ ಇಸಿಜಿ ಗಾಗಿ ಹೋಗಿದ್ದಾರೆ. ಒಂದೆರಡು ನಿಮಿಷ ಬಂದುಬಿಡುತ್ತಾರೆ.

ಕಿನ್ ಲೂಗೆ ಒಂದು ಕುರ್ಚಿ ತೋರಿಸಿ, ತಾನು ಹಾಸಿಗೆಯ ಪಕ್ಕದಲ್ಲಿದ್ದ ಲಾಕರ್ ಬಳಿಗೆ ಹೋದಳು. ಅದರ ಮೇಲೆ ಬುಟ್ಟಿಯ ತುಂಬಾ ಕಿತ್ತಲೆ ಹಣ್ಣುಗಳನ್ನು ಇರಿಸಿದಳು.

"ಒಂದು ಹಣ್ಣನ್ನು ತೆಗೆದುಕೊಳ್ಳಿ."

"ದಯವಿಟ್ಟು ಈಗ ಬೇಡ."

"ಒಂದೇ ಒಂದು ರುಚಿ ನೋಡಿ. ದಕ್ಷಿಣ ಪ್ರಾಂತದಿಂದ ನನ್ನ ಗೆಳತಿಯೊಬ್ಬಳು ಕಳಿಸಿಕೊಟ್ಟಿದ್ದಾಳೆ. ಅವು ತುಂಬಾ ಚೆನ್ನಾಗಿವೆ." ಒಂದನ್ನು ಒತ್ತಾಯದಿಂದ ಅವಳ ಕೈಗೆ ಕೊಟ್ಟಳು.

ಲೂ ಹಣ್ಣನ್ನು ತೆಗೆದು ಕೈಯಲ್ಲಿ ಹಿಡಿದು ಯೋಚಿಸಿದಳು. ಕಿನ್‌ಳ ಇಷ್ಟೊಂದು ಪ್ರೀತಿ, ಸ್ನೇಹ ಒಂದು ರೀತಿಯ ಭಯ ಉಂಟುಮಾಡಿತು. ಅವಳ ಕಣ್ಣುಗಳಲ್ಲಿ ಮೊದಲಿಗಿದ್ದ ಉದಾಸೀನತೆಯನ್ನು ಮರೆತಿರಲಿಲ್ಲ.

"ಕ್ಯಾಟರಾಕ್ಟ್ ಎಂದರೇನು ಡಾ॥ ಲೂ? ಕೆಲವು ಡಾಕ್ಟರುಗಳು ಹೇಳ್ತಿದ್ದರು– ಎಲ್ಲಾ ಸಂದರ್ಭಗಳಲ್ಲೂ ಆಪರೇಷನ್ ಸರಿಹೋಗೊಲ್ಲ ಅಂತ."

ಕಿನ್‌ಳ ಮಾತಿನಲ್ಲಿ ವಿನಯ ಇತ್ತು. ತಿಳಿದುಕೊಳ್ಳುವ ಕುತೂಹಲವಿತ್ತು. "ಒಂದು ಪೊರೆ ಬೆಳೆದು, ಚೆನ್ನಾಗಿ ಬಲಿತು, ಕಣ್ಣಿನ ಪಾಪೆಯನ್ನೇ ಕವಿದುಬಿಡುತ್ತೆ." ಕೈಲಿದ್ದ ಹಣ್ಣನ್ನು ಗಮನಿಸುತ್ತಲೇ ಮುಂದುವರೆದಳು. "ಪೊರೆ ಚೆನ್ನಾಗಿ ಬಲಿತಾಗ ಆಪರೇಷನ್ ಮಾಡೋದು ಸೂಕ್ತ."

"ಓ..... ಹಾಗೋ; ಒಂದು ವೇಳೆ ಆಪರೇಷನ್ ಮಾಡಿಸದಿದ್ದರೆ ಏನಾಗುತ್ತೆ?"

"ಕಾರ್ಟೆಕ್ಸ್ ಕರಗಿ ಹೋದಂತೆ, ಲೆನ್ಸ್ ಚಿಕ್ಕದಾಗಿ ಬಿಡುತ್ತೆ. ಅದನ್ನು ಹಿಡಿದಿರುವ ತಂತುಗಳು ತುಂಬಾ ಮೃದುವಾಗಿ ಬಿಡುತ್ತವೆ. ಆಪರೇಷನ್ ಮಾಡೋದು ಕಷ್ಟವಾಗಬಹುದು."

ಕಿನ್ ತಲೆ ತೂಗಿದಳು ಅಷ್ಟೆ.

ಅವಳಿಗೆ ಏನೂ ಅರ್ಥವಾಗಿರಲಿಲ್ಲ. ಅರ್ಥಮಾಡಿಕೊಳ್ಳುವ ಪ್ರಯತ್ನವೂ ಅವಳದಾಗಿರಲಿಲ್ಲ. ಅಂಥಾದ್ದರಲ್ಲಿ ಈ ಪ್ರಶ್ನೆಗಳೆಲ್ಲ ಯಾಕೆ ಇವಳಿಗೆ? ಅನಿಸಿತು. ಬಹುಶಃ ಹೊತ್ತು ಕಳೆಯುವುದಕ್ಕೆ ಇರಬೇಕು. ಆವತ್ತಿನಿಂದ ವಾರ್ಡ್ ಡ್ಯೂಟಿ ಪ್ರಾರಂಭವಾಗಿದ್ದರಿಂದ, ರೋಗಿಗಳ ಕೇಸ್ ಹಿಸ್ಟರಿಗಳ ಬಗ್ಗೆ ಪರಿಚಯ ಮಾಡಿಕೊಳ್ಳಬೇಕಾಗಿತ್ತು. ಇಲ್ಲಿ ಕುಳಿತುಕೊಂಡು ಹರಟೆ ಹೊಡೆಯುವುದು ಅವಳಿಗೆ ಸಾಧ್ಯವಿರಲಿಲ್ಲ. ಜಿಯಾವೋ ಬೇಗ ಬಂದರೆ ಅವನ ಕಣ್ಣನ್ನು ಪರೀಕ್ಷಿಸಿ, ಬೇಗ ಇಲ್ಲಿಂದ ಹೊರಡಬಹುದಾಗಿತ್ತು.

ಕಿನ್‌ಗೆ ಇನ್ನೂ ಕೇಳೋಕೆ ಪ್ರಶ್ನೆಗಳಿದ್ದವು. "ಪರದೇಶದಲ್ಲಿ ಕೃತಕವಾದ ಲೆನ್ಸ್ ಸಿಗುತ್ತಂತೆ ಹೌದಾ? ರೋಗಿಗೆ ಆಮೇಲೆ ಕನ್ನಡಕ ಧರಿಸಬೇಕಾಗಿ ಇರೋದಿಲ್ಲಾಂತಲೂ ಕೇಳಿದೆ. ನಿಜ ತಾನೇ?"

“ನಾವೂ ಅದರಲ್ಲಿ ಪ್ರಯೋಗ ಮಾಡ್ತಿದ್ದೇವೆ.”

ಕಿನ್ ಕುತೂಹಲದಿಂದ ಕೇಳಿದಳು– “ಹಾಗಾದರೆ ಒಂದನ್ನು ನನ್ನ ಗಂಡನ ಕಣ್ಣಿಗೆ ಅಳವಡಿಸುವುದಕ್ಕೆ ಆಗಬಹುದಾ?”

ಲೂ ನಕ್ಕಳು. “ಇನ್ನೂ ಪ್ರಯೋಗದ ಹಂತದಲ್ಲಿಯೇ ಇದೇಂತ ಕೇಳಿದೆ. ಅವರಿಗೇನೂ ಬೇಕೂಂತ ಅನಿಸಿರಲಿಕ್ಕಿಲ್ಲ. ಹೌದು ತಾನೇ?”

“ನಿಜ ನಿಜ ಯಾರೂ ಗಿನ್ನಿಪಿಗ್ ಆಗೋದಕ್ಕೆ ಇಷ್ಟಪಡೊಲ್ಲ.... ಅಂದ ಹಾಗೆ ಆಪರೇಷನ್ ಪ್ರೊಸೀಜರ್ ಹೇಗೆ?”

“ಅಂದರೆ?” – ಲೂ ಕಕ್ಕಾಬಿಕ್ಕಿಯಾದಳು.

“ಅನಿರೀಕ್ಷಿತವಾಗಿ ಏನಾದರೂ ಅನಾಹುತ ಸಂಭವಿಸಿದರೆ?.... ಮೊದಲೇ ನೀವೆಲ್ಲಾ ಪ್ಲಾನ್ ಹಾಕ್ಕೊಂಡಿರಬೇಕಲ್ಲ?”

ಲೂಗೆ ಏನು ಹೇಳಬೇಕೋ ತಿಳಿಯಲಿಲ್ಲ. ಅವಳು ಶೂನ್ಯವಾಗಿ ನೋಡಿದಳು. ಕಿನ್ ಹೇಳಿದಳು– “ನಾನೂ ಆಗಾಗ ಪೇಪರುಗಳಲ್ಲಿ ಓದಿದ್ದೇನೆ. ಹಾಗಾಗುವುದನ್ನು ಕೆಲವು ಸಲ ಸರ್ಜನ್‌ಗಳೆಲ್ಲ ಒಟ್ಟಿಗೆ ಸೇರಿ ಅದರ ಬಗ್ಗೆ ಚರ್ಚೆ ಮಾಡಿರುತ್ತಾರಂತೆ!”

ಲೂಗೆ ನಗು ತಡೆಯಲಾಗಲಿಲ್ಲ. “ಅಷ್ಟೆಲ್ಲಾ ಬೇಕಾಗಿಲ್ಲ. ಇದು ತೀರಾ ಸರಳವಾದ ಆಪರೇಷನ್.”

ಕಿನ್‌ಗೆ ಸಮಾಧಾನ ಆಗಲಿಲ್ಲ. ಲೂ ಳಿಂದ ಮುಖ ತಿರುಗಿಸಿದಳು. ಆದರೆ ಮತ್ತೆ, ತಾನು ಹೇಳುವುದನ್ನು ಸರಿಯಾಗಿ ಅರ್ಥ ಮಾಡಿಸುವಂತೆ, ಮುಂದುವರೆಸಿದಳು–

“ಅತಿಯಾದ ಆತ್ಮವಿಶ್ವಾಸ ಎಷ್ಟೋ ಸಲ ಸೋಲಿಗೆ ದಾರಿ ಮಾಡುತ್ತೆ. ನಮ್ಮ ಪಕ್ಷದ ವಿಚಾರದಲ್ಲಿ ಆಗಿರೋದು ಹೀಗೆ!”

ಲೂಳನ್ನು ಬಲವಂತ ಪಡಿಸಿ ಆಪರೇಷನ್ ಫೇಲಾಗುವ ಸಂದರ್ಭಗಳನ್ನು ವಿವರಿಸಿ ಹೇಳುವಂತೆ ಮಾಡಿದಳು.

“ಸಾಮಾನ್ಯವಾಗಿ ಹೃದಯ ಸಂಬಂಧವಾದ ಖಾಯಿಲೆಗಳು ಇರುವವರ ವಿಚಾರದಲ್ಲಿ ಎಚ್ಚರಿಕೆಯಿಂದಿರಬೇಕು. ಅಲ್ಲದೆ ಹೈಪರ್‌ಟೆನ್‌ಷನ್ ಶ್ವಾಸಕೋಶ ರೋಗ ಇರುವವರ ಬಗ್ಗೇನೂ ಸ್ವಲ್ಪ ಯೋಚಿಸಬೇಕಾಗುತ್ತೆ. ಕೆಮ್ಮು ಕೂಡಾ ಆಪರೇಷನ್‌ಗೆ ಸಮಸ್ಯೆಯಾಗಬಹುದು.”

“ಅದೇ ನನಗಿರುವ ಭಯ” ಎನ್ನುತ್ತಾ ಕುರ್ಚಿಯ ಮೇಲೆ ಕೈಯನ್ನು ಕುಟ್ಟಿದಳು.

“ನನ್ನ ಗಂಡನಿಗೆ ಹೃದಯ ದುರ್ಬಲವಾಗಿದೆ. ಬಿ.ಪಿ.ಕೆಮ್ಮು ಎಲ್ಲ ಇವೆ.”

“ಆಪರೇಷನ್ ಮಾಡೋಕೆ ಮುಂಚೆ ನಾವು ರೋಗಿಗಳನ್ನು ಸಾಕಷ್ಟು ಪರೀಕ್ಷೆ ಮಾಡುತ್ತೇವೆ”– ಸಮಾಧಾನಪಡಿಸಲು ಯತ್ನಿಸಿದಳು.

"ಆತನಿಗೆ ಬ್ರಾಂಕೈಟಿಸ್ ಕೂಡಾ ಇದೆ."

"ಇತ್ತೀಚೆಗೆ ಏನಾದರೂ ಕೆಮ್ಮುತ್ತಿದ್ದನೇ?"

"ಇಲ್ಲ ಆದರೆ ಆಪರೇಷನ್ ಟೇಬಲ್ ಮೇಲೆ, ಒಂದು ವೇಳೆ ಕೆಮ್ಮು ಬಂದುಬಿಟ್ಟರೆ?"

ಅವಳೇಕೆ ಅಷ್ಟು ಗಾಬರಿಗೊಂಡಿದ್ದಾಳೆ? ಲೂ ತನ್ನ ಗಡಿಯಾರದ ಕಡೆ ನೋಡಿಕೊಂಡಳು. ಬೆಳಗಿನ ಸಮಯ ಸಾಕಷ್ಟು ಕಳೆದುಹೋಗಿತ್ತು. ಅವಳ ದೃಷ್ಟಿ, ಬಿಳಿ ಹೆಣಿಗೆಯ ಪರದೆಯ ಕಡೆ ಹೊರಳಿತು. ಹೆಜ್ಜೆ ಸಪ್ಪಳ ಕೇಳಿದ್ದೇ ಮನಸ್ಸಿನಲ್ಲಿ ಉದ್ವಿಗ್ನತೆ ಪ್ರಾರಂಭವಾಯಿತು. ಹತ್ತಿರ ಬಂದಂತಾಗಿದ್ದ ಹೆಜ್ಜೆಗಳು ಹಿಂದೆ ಸರಿದವು, ಸಾಕಷ್ಟು ಹೊತ್ತಾದ ಮೇಲೆ ಜಿಯಾವೋ ನೀಲಿಯ ಡ್ರೆಸ್ಸಿಂಗ್ ಗೌನನ್ನು ಹಾಕಿಕೊಂಡು ನರ್ಸ್ ಸಹಾಯದಿಂದ ಬಂದ.

"ಏನು ಇಷ್ಟು ಹೊತ್ತು ಮಾಡಿಬಿಟ್ಟೆ" ಆಕ್ಷೇಪಿಸಿದಳು ಕಿನ್. ಜಿಯಾವೋ, ಲೂಳ ಕೈ ಕುಲುಕಿದ. ದಣಿದಂತೆ ಬಂದು ಕುರ್ಚಿಯಲ್ಲಿ ಕುಸಿದು ಕುಳಿತ.

ಎಷ್ಟೊಂದು ಪರೀಕ್ಷೆಗಳು!.... ರಕ್ತ ಪರೀಕ್ಷೆ, ಎಕ್ಸ್‌ರೇ, ಇಸಿಜಿ..... ಸಿಬ್ಬಂದಿಯವರೆಲ್ಲ ತುಂಬಾ ಒಳ್ಳೆಯವರಾಗಿದ್ದರು, ನನಗೆ. ನಾನೇನು ಎಲ್ಲಿಯೂ ಕಾಯಲಿಲ್ಲ.

ಕಿನ್ ಕೊಟ್ಟ ಚಹಾ ಸೇವಿಸತೊಡಗಿದ. "ಕಣ್ಣಿನ ಆಪರೇಷನ್‌ಗೂ ಇಷ್ಟೊಂದು ಪರೀಕ್ಷೆಗಳು ಬೇಕಾಗುತ್ತವೆ ಅಂತಲೂ ಅನಿಸಿರಲಿಲ್ಲ."

ಲೂ ರಿಪೋರ್ಟ್‌ಗಳನ್ನೆಲ್ಲಾ ಓದಿದಳು. ಎಕ್ಸ್‌ರೇ–ಇಸಿಜಿ ಎಲ್ಲಾ ಸರಿಯಾಗಿಯೇ ಇದೆ–ಆದರೆ ಬಿ.ಪಿ. ಒಂದು ಸ್ವಲ್ಪ ಜಾಸ್ತಿಯಿದೆ. ಅಷ್ಟೇ."

"ಎಷ್ಟು ಜಾಸ್ತಿಯಿದೆ?" ಕುತೂಹಲ, ಗಾಬರಿಗಳಿಂದ ಕೇಳಿದಳು ಕಿನ್.

"೧೫೦/೧೦೦. ಅದೇನು ಅಷ್ಟು ಗಾಬರಿಪಡಿಸುವಂತಾದ್ದಲ್ಲ." – ಆಮೇಲೆ ಕೇಳಿದಳು– "ಇತ್ತೀಚೆಗೇನಾದರೂ ಕೆಮ್ಮುತ್ತಿದ್ದೀರಾ ಜಿಯಾವೋ?"

"ಇಲ್ಲ" ನಕಾರಾತ್ಮವಾಗಿ ತಲೆಯಾಡಿಸಿದ.

ಕಿನ್ ಒತ್ತಾಯಪೂರ್ವಕವಾಗಿ ಕೇಳಿದಳು–ಆಪರೇಷನ್ ಟೇಬಲ್ ಮೇಲೆ ಕೆಮ್ಮುವುದಿಲ್ಲಾಂತ ಭರವಸೆ ಇದೆಯಾ?"

"ಅದು... ಅದು ಹೇಗೆ ಹೇಳುವುದಕ್ಕೆ ಆಗುತ್ತೆ?"

"ಅದೇ ಮುಖ್ಯ.... ಜಿಯಾವೋ.... ಲೂ ಹೇಳುತ್ತಿದ್ದಳು ಎಷ್ಟೋ ಸಲ, ಕೆಮ್ಮಿದಾಗ, ಆಪರೇಷನ್ ಟೈಂನಲ್ಲಿ ಕಣ್ಣುಗಡ್ಡೇನೇ ಕಳಚಿ ಬೀಳಬಹುದಂತೆ.

ಜಿಯಾವೋ ಲೂಳ ಕಡೆ ತಿರುಗಿ ಹೇಳಿದ– "ಆಪರೇಷನ್ ಹೊತ್ತಿನಲ್ಲಿ ನಾನು ಕೆಮ್ಮುವುದೇ ಇಲ್ಲಾಂತ ಹೇಗೆ ಗೊತ್ತಾಗುತ್ತೆ?"

"ನಿಮಗೆ ಅಷ್ಟೇನೂ ಕಷ್ಟ ಆಗೋಲ್ಲ. ಸಿಗರೇಟು ಸೇದೋ ಅಭ್ಯಾಸ ಇದ್ದರೆ, ಆ ಟೈಂನಲ್ಲಿ ಸೇದಬೇಡಿ."

"ಹಾಗೇ ಆಗಲಿ."

"ಅಕಸ್ಮಾತ್ ಕೆಮ್ಮಿದರೆ?.... ಏನಾಗಬಹುದು?" – ಕಿನ್ ಮತ್ತೆ ಪ್ರಶ್ನಿಸಿದಳು. ಲೂ ನಕ್ಕಳು.

"ಕಾಮ್ರೆಡ್ ಕಿನ್ ನಾವು ಕತ್ತರಿಸಿದ ಭಾಗಾನ ಹೊಲಿದುಬಿಡುತೇವೆ. ಆಮೇಲೆ ಬೇಕಾದರೆ ಬಿಚ್ಚಿ ಮುಂದುವರೆಸುತ್ತೇವೆ. ಅದೂ ಕೆಮ್ಮೆಲ್ಲಾ ಪೂರ್ತಿನಿಂತಿದೆ ಅಂತ ಖಾತ್ರಿಯಾದ ಮೇಲೆ."

"ಹಾಗಾದರೆ ಸರಿ" ಜಿಯಾವೋ ಹೇಳಿದ. "ನನಗೆ ಬಲಗಣ್ಣು ಆಪರೇಷನ್ ಆಗೋವಾಗ ಇದೇ ರೀತಿ ಒಂದು ಬಿಚ್ಚಿ ಹೊಲಿದು ಮತ್ತೆ ಬಿಚ್ಚಿದರು. ಆದರೆ ಹೀಗೆ ಮಾಡಿದ್ದು ಕೆಮ್ಮು ಬಂದದ್ದಕ್ಕಲ್ಲ."

"ಮತ್ತೆ ಯಾತಕ್ಕೆ?" ಕುತೂಹಲ ಬಂದು ಲೂ ಕೇಳಿದಳು.

ಜಿಯಾವೋ ಕೈಲಿದ್ದ ಬಟ್ಟಲನ್ನು ಕೆಳಗಿರಿಸಿ ಒಂದು ಸಿಗರೇಟನ್ನು ಹೊರತೆಗೆದ. ಆದರೆ ಲೂನ ಮಾತು ನೆನಪಾಗಿ ಕೇಸಿನ ಒಳಗಿರಿಸಿದ. ದೀರ್ಘವಾಗಿ ಉಸಿರೆಳೆದು ಹೇಳತೊಡಗಿದ– "ನನ್ನನ್ನು ದ್ರೋಹಿ ಅಂತ ಹಣೆಪಟ್ಟಿ ಹಚ್ಚಿದರು. ಬಹಳ ಕಷ್ಟದ ದಿನಗಳವು. ನನ್ನ ಬಲಗಣ್ಣಿನ ದೃಷ್ಟಿ ಹಾಳಾಯಿತು. ತಕ್ಷಣ ಆಪರೇಷನ್ ಮಾಡಿಸಿಕೊಂಡೆ. ಅದು ನಡೀತಿದ್ದ ಹಾಗೇ ಕ್ರಾಂತಿಕಾರರು ಬಂದರು. ನನ್ನ ಕಣ್ಣಿನ ಚಿಕಿತ್ಸೆ ಮಾಡಬಾರದೂಂತ ಸರ್ಜನರನ್ನು ಒತ್ತಾಯ ಮಾಡಿದರು. ನನಗೆ ಪ್ರಾಣಾನೇ ಹಾರಿಹೋದ ಹಾಗೆ ಆಯಿತು. ಆದರೆ ಡಾಕ್ಟರ್ ವಿಚಲಿತರಾಗದೆ ಪ್ರಶಾಂತವಾಗಿದ್ದು, ಬೇಗ ಬೇಗ ಬಿಚ್ಚಿದ್ದ ಜಾಗಾನ ಹೊಲಿದುಬಿಟ್ಟರು. ಕ್ರಾಂತಿಕಾರರನ್ನು ಹೊರಗೆ ಹಾಕಿದ ಮೇಲೆ ಶಸ್ತ್ರಕ್ರಿಯೆ ಮುಂದುವರೆಸಿದರು."

"ನಿಜವಾಗಿಯೂ!" – ದಿಗ್ಭ್ರಮಿತಳಾದಂತೆ ಲೂ ಪ್ರಶ್ನಿಸಿದಳು– "ಯಾವ ಆಸ್ಪತ್ರೇಲಿ ಹಾಗಾದದ್ದು?"

"ಇದೇ ಆಸ್ಪತ್ರೇಲಿ."

"ಇದೆಂತಹ ಯೋಗಾಯೋಗ!" ಇದೆಲ್ಲ ಕೇಳಿದ ಲೂ ಜಿಯಾವೋನ ಸೂಕ್ಷ್ಮವಾಗಿ ದೃಷ್ಟಿಸಿ ನೋಡಿದಳು.... ತನಗೇನಾದರೂ ನೆನಪಾಗುತ್ತಿದೆಯೇ?.... ನೆನಪಾದಂತೆನಿಸಲಿಲ್ಲ.

ಹತ್ತು ವರುಷಗಳ ಹಿಂದೆ ದ್ರೋಹಿ ಅಂತ ಕರೆಸಿಕೊಂಡಿದ್ದ ಒಬ್ಬ ವ್ಯಕ್ತಿಯ ಕಣ್ಣಿನ ಆಪರೇಷನ್ ಮಾಡುತ್ತಿದ್ದಾಗ, ಒಂದು ಗುಂಪು ಬಂದು ಅಡ್ಡಗಟ್ಟಿದರು. ರೋಗಿಯ ಹೆಸರು ಜಿಯಾವೋ! ಓ ಹಾಗಾದರೆ ಆ ವ್ಯಕ್ತಿ ಈತನೇ ಇದ್ದಿರಬೇಕು....

ಜಿಯಾವೋನ ಡಿಪಾರ್ಟ್‌ಮೆಂಟಿನ ಕೆಲವರು ಆಸ್ಪತ್ರೆಯ ಸಿಬ್ಬಂದಿಯ ಕೆಲವರೊಂದಿಗೆ ಸೇರಿಕೊಂಡು, ಲೂ ವೆಂಟಿಂಗ್, ದ್ರೋಹಿಗಳಾದ ಜಿಯಾವೋ ಷೆಂಗ್ಸಿ ಅಂತಹವರಿಗೆ ಚಿಕಿತ್ಸೆ ನೀಡಿ, ಕಾರ್ಮಿಕ ವರ್ಗಕ್ಕೆ ಮೋಸ ಮಾಡುತ್ತಿದ್ದಾರೆ ಎಂಬ ಘೋಷಣೆಯೊಂದಿಗೆ ಒಳನುಗ್ಗಿ ತನ್ನನ್ನು ತಡೆದಿದ್ದರು.

ಅವನು ಗುರುತಾಗಿರಲಿಲ್ಲ. ಹತ್ತು ವರುಷಗಳ ಹಿಂದೆ ಅವನು ಕೊಳಕಾದ ಬಟ್ಟೆ ತೊಟ್ಟು ದೈನ್ಯನಾಗಿ, ಜೋಲು ಮುಖದೊಂದಿಗೆ ಒಬ್ಬ ಸಾಮಾನ್ಯ ರೋಗಿಯಂತೆ ಬಂದಿದ್ದ. ಲೂ ಅವನಿಗೆ ಕೂಡಲೇ ಆಪರೇಷನ್ ಆಗಬೇಕೆಂದು ಹೇಳಿದಳು. ಮತ್ತು ತಾರೀಖನ್ನು ಗೊತ್ತು ಮಾಡಿದ್ದಳು. ಅವನು ಅದರಂತೆ ನಡೆದುಕೊಂಡ. ಆಪರೇಷನ್ ಆರಂಭಿಸಿದ್ದಾಗ "ಒಳಗೆ ಹೋಗಬೇಡಿ. ಇದು ಆಪರೇಷನ್ ಥಿಯೇಟರ್. ಯಾರಿಗೂ ಪ್ರವೇಶವಿಲ್ಲ!- ಎಂದು ತಡೆಯುತ್ತಿದ್ದ, ನರ್ಸಳ ಧ್ವನಿ ಕೇಳಿಸುತ್ತಿದ್ದು. ಜೊತೆಗೆ 'ಧಿಕ್ಕಾರ! ಅವನೊಬ್ಬ ದ್ರೋಹಿ! ದ್ರೋಹಿಗಳಿಗೆ ಚಿಕಿತ್ಸೆ ನೀಡುವುದನ್ನು ನಾವು ವಿರೋಧಿಸುತ್ತೇವೆ" – ಎಂದು ಅಬ್ಬರಿಸುತ್ತಿದ್ದುದನ್ನೂ ಕೇಳಿದ್ದಳು.

"ದ್ರೋಹಿಗಳಿಗೆ ಚಿಕಿತ್ಸೆ ನೀಡುವುದಕ್ಕೆ ನಾವು ಬಿಡೊಲ್ಲ."

"ಬಾಗಿಲು ಮುರಿಯೋಣ ಬನ್ನಿ."

ಜಿಯಾವೋ ತಿರಸ್ಕಾರದಿಂದ ಹೇಳಿದ, "ಹೋಗಲಿ ಬಿಡಿ ಡಾಕ್ಟರೇ, ನನ್ನ ಕಣ್ಣು ಹೋದರೂ ಪರವಾಗಿಲ್ಲ.

ಜಿಯಾವೋನನ್ನು ಸ್ವಲ್ಪವೂ ಕದಲಬೇಡವೆಂದು ಎಚ್ಚರಿಸಿ ಅವನ ಕಣ್ಣಿಗೆ ಹೊಲಿಗೆ ಹಾಕಿದ್ದಳು.

ಒಂದು ಮೂರು ಜನ ಒಳನುಗ್ಗಿದರು. ಹೆದರಿದ್ದ ಕೆಲವರು ಹೊರಗೇ ಉಳಿದರು. ಲೂ ಒಂದಿಷ್ಟೂ ಚಲಿಸದೆ ಕುಳಿತಿದ್ದಳು. ಜಿಯಾವೋ ಹೇಳಿದ– ಡಾಕ್ಟರು ಅವರನ್ನು ಹೊರಗೆ ಹಾಕಿದರು–ಅಂತ. ಆದರೆ ಲೂ ಹಾಗೇನೂ ಮಾಡಿರಲಿಲ್ಲ. ಆಪರೇಟಿಂಗ್ ಟೇಬಲ್ ಬಳಿ ಒಂದು ಸ್ಟೂಲಿನ ಮೇಲೆ ಬಿಳಿಕೋಟು, ಹಸಿರು ಚಪ್ಪಲಿ, ನೀಲಿ ಟೋಪಿ ಮತ್ತು ಮುಸುಕು ಧರಿಸಿ ಕುಳಿತಿದ್ದಳು. ಕೇವಲ ಎರಡು ಕಣ್ಣುಗಳು ಮತ್ತು ಗ್ಲೋವ್ಸ್ ಮೇಲಿನ ಬರಿದಾದ ಮುಂಗೈಭಾಗಗಳು ಹೊರತಾಗಿ ಮತ್ತೇನೂ ಕಾಣುತ್ತಿರಲಿಲ್ಲ. ಅವಳ ವಿಚಿತ್ರವಾದ ವೇಷ, ರೋಗಿಯ ಮುಖದ ಭಾಗದ ಮೇಲೆ ಮುಚ್ಚಿದ ಬಿಳಿಯ ಬಟ್ಟೆಯೊಳಗಿಂದ ರಕ್ತಸಿಕ್ತವಾದ ಕಣ್ಣು. ಆ ಗಲಭೆಕೋರರಿಗೆ ಸ್ವಲ್ಪ ಭೀತಿ ಹುಟ್ಟಿಸಿರಬೇಕು. ಲೂ ತನ್ನ ಮುಸುಕಿನೊಳಗಿಂದ "ದಯವಿಟ್ಟು ಇಲ್ಲಿಂದ ಹೊರಟು ಹೋಗಿ!" ಎಂದು ಗಡುಸಾಗಿ ಹೇಳಿದಳು.

ಬಂದಿದ್ದವರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಅಲ್ಲಿಂದ ಮೆಲ್ಲನೆ ಜಾರಿದರು.

ಲೂ ಮತ್ತೆ ಕಾರ್ಯಮಗ್ನಳಾಗಲು, ಜಿಯಾವೋ ಅಂಗಲಾಚಿ ಹೇಳಿದ- "ಬೇಡ ಡಾಕ್ಟರ್, ಖಂಡಿತ ಬೇಡ, ನನ್ನ ಕಣ್ಣು ಹಾಗೇ ಇರಲಿ ಬಿಡಿ. ನೀವು ಸರಿ ಮಾಡಿದರೂ ಮತ್ತೆ ನನ್ನ ಕಣ್ಣು ಹಾಳುಮಾಡದೆ ಬಿಡೋದಿಲ್ಲ. ಅನ್ಯಾಯವಾಗಿ ನೀವು ಇಲ್ಲದ ಪೇಚಿನಲ್ಲಿ ಸಿಕ್ಕಿ ಹಾಕಿಕೊಳ್ಳಬೇಕಾಗುತ್ತದೆ."

"ಸುಮ್ಮನಿರು" ಬೇಗ ಬೇಗ ಕೆಲಸ ಮುಂದುವರೆಸಿದಳು. ಶಸ್ತ್ರಚಿಕಿತ್ಸೆಯೆಲ್ಲ ಮುಗಿದ ಮೇಲೆ ಕಣ್ಣಿನ ಮೇಲೆ ಪಟ್ಟಿ ಹಾಕುತ್ತಾ ಹೇಳಿದಳು- "ನಾನೊಬ್ಬ ಡಾಕ್ಟರು." ಇದಿಷ್ಟೆ ಅಂದು ಆದದ್ದು.

ಜಿಯಾವೋ ಡಿಪಾರ್ಟ್‌ಮೆಂಟಿನಿಂದ ಬಂದ ಜನ ಲೂ ಬಗ್ಗೆ ಘೋಷಣೆ ಬರೆದು ದೊಡ್ಡದಾದ ಪೋಸ್ಟರನ್ನು ಆಸ್ಪತ್ರೇಲಿ ಅಂಟಿಸಿದ್ದು, ದ್ರೋಹಿಯೊಬ್ಬನಿಗೆ ಚಿಕಿತ್ಸೆ ನೀಡಿದ್ದಕ್ಕಾಗಿ ಧಿಕ್ಕಾರ ಹೇಳಿದ್ದು- ಒಂದು ಬಗೆಯಲ್ಲಿ ಸ್ವಾರಸ್ಯಕರವೆನಿಸಿತ್ತು. ಇದರಿಂದ ಅವಳಿಗೇನೂ ಅನಿಸಿರಲಿಲ್ಲ. ಈಗಾಗಲೇ ಅವಳನ್ನು ಬೂರ್ಷ್ವಾ ಸ್ಪೆಷಲಿಸ್ಟ್ ಅಂತ ಜನ ಟೀಕೆ ಮಾಡಿದ್ದರು. ಇಂತಹ ಅಪವಾದಗಳು, ಈ ಆಪರೇಷನ್ - ಯಾವುದರಿಂದಲೂ ಅವಳು ವಿಚಲಿತಳಾಗಲಿಲ್ಲ. ಎಲ್ಲ ಅವಳಿಗೆ ಮರೆತುಹೋಗಿತ್ತು. ಜಿಯಾವೋ ಈಗ ಪ್ರಸ್ತಾಪ ಮಾಡಿದ್ದರಿಂದ, ನೆನಪು ಮರುಕಳಿಸಿತು.

"ನಿಜವಾಗಿಯೂ ಆಕೆಯ ಬಗ್ಗೆ ನನಗೆ ಗೌರವ ಇದೆ. ಡಾ॥ ಲೂ" ಕಿನ್ ನಿಟ್ಟುಸಿರಿಟ್ಟಳು. "ದುರದೃಷ್ಟ, ಆಗ ಆಸ್ಪತ್ರೆಯಲ್ಲಿ ರೆಕಾರ್ಡ್ಸ್ ಇಡುತ್ತಿರಲಿಲ್ಲ. ಆಕೆ ಯಾರೂಂತ ತಿಳಿಯೋದಕ್ಕೇ ಆಗುತ್ತಿಲ್ಲ. ನೆನ್ನೆ ಕೂಡ ಡಾ॥ ಜಾವೋರ ಹತ್ತಿರ ಆಕೆಯ ಕೈಯಲ್ಲಿ ಆಪರೇಷನ್ ಮಾಡಿಸೀಂತ ಕೇಳಿದೆ." ಲೂ ಮುಖಾನ ವಕ್ರವಾಗಿಸಿದಳು. "ಕ್ಷಮಿಸಿ ಡಾ॥ ಲೂ, ಜಾವೋರಿಗೆ ನಿಮ್ಮಲ್ಲಿ, ನಿಮ್ಮಲ್ಲಿ ತುಂಬಾ ಭರವಸೆ ಇದೆ. ನಮಗೂ ಕೂಡ. ಅವನ ಭರವಸೇನ ನೀವು ಸುಳ್ಳು ಮಾಡೊಲ್ಲ ಅಂತ ನಂಬಿಕೆ ಇದೆ. ಆ ಡಾಕ್ಟರಿಂದ ನಾವು ಕಲೀಬೇಕಾಗಿದೆ; ಸ್ಫೂರ್ತಿ ಪಡೆಯಬೇಕಾಗಿದೆ.... ಹೌದು ತಾನೇ!"

ಅದನ್ನು ಒಪ್ಪಿಕೊಳ್ಳದೆ ಬೇರೆ ದಾರಿ ಇರಲಿಲ್ಲ ಲೂಗೆ. "ನೀವಿನ್ನೂ ಚಿಕ್ಕವರು" ಪ್ರೋತ್ಸಾಹಿಸುವ ದನಿಯಲ್ಲಿ ಕಿನ್ ಹೇಳಿದಳು. ನೀವಿನ್ನೂ ಪಾರ್ಟಿ ಸದಸ್ಯರಾಗಿಲ್ಲ. ಆಗೋದಿಕ್ಕೆ ಪ್ರಯತ್ನಿಸಿ, ಕಾಮ್ರೆಡ್" ಲೂ ನೇರವಾಗಿ ಹೇಳಿದಳು. ನನಗೆ ಅಂತಹ ಹೇಳಿಕೊಳ್ಳಯವ ವಂಶದ ಹಿನ್ನೆಲೆಯಿಲ್ಲ.

"ಆ ದೃಷ್ಟಿಯಿಂದ ನೋಡಬಾರದು. ಮನೆ, ಮನೆತನ ಮುಖ್ಯ ಅಲ್ಲ. ನಮ್ಮ ಜೀವನದಲ್ಲಿ ನಾವೇನು ಮಾಡುತ್ತೇವೆ, ಅದೇ ಮುಖ್ಯ" ಕಿನ್ ಉತ್ಸಾಹದಿಂದ ಮಾತಾಡಿದಳು- "ನಮ್ಮ ಪಾರ್ಟಿ ಪ್ರತಿಯೊಬ್ಬರ ಮನೆತನ, ವರ್ಗ ಹಿನ್ನೆಲೆ- ನೋಡುತ್ತೆ. ಆದರೆ ಅದ್ದೇ ಪಾರ್ಟಿ ಸದಸ್ಯತ್ವಕ್ಕೆ ಪರಿಗಣನೆಯಾಗೋದಿಲ್ಲ. ನಿಮ್ಮ ಧೋರಣೆ, ದೃಷ್ಟಿಗಳು ಮುಖ್ಯವಾಗುತ್ತವೆ. ವ್ಯಕ್ತಿ, ಕುಟುಂಬ, ಬೇರೆ ಬೇರೆಯಾದಾಗಲೇ ಜನತೆಗೆ

ಏನಾದರೂ ಮಾಡಲು ಸಾಧ್ಯ. ನಮ್ಮ ಪಾರ್ಟಿ ಅಂತಹವರಿಗೆ ಎಂದೆಂದಿಗೂ ಬಾಗಿಲು ತೆರೆದಿರುತ್ತೆ."

ಲೂ ಪರದೆಯನ್ನು ಸರಿಸಿ ಬಂದು ಜಿಯಾವೋನ ಕಣ್ಣನ್ನು ಪರೀಕ್ಷಿಸಿದಳು. "ಎಲ್ಲ ಸರಿಯಾಗಿದೆ ನಾಳಿದ್ದು ನಿಮ್ಮ ಆಪರೇಷನ್ ಮಾಡುತ್ತೇವೆ" – ಎಂದು ಜಿಯಾವೋಗೆ ಹೇಳಿದಳು.

"ಎಷ್ಟು ಬೇಗನೆ ಆದರೆ ಅಷ್ಟೂ ಒಳ್ಳೆಯದು ಡಾಕ್ಟರೇ."

ಆರು ದಾಟಿತ್ತು. ಲೂ ಅವರಿಂದ ಬೀಳ್ಕೊಂಡಳು. ಕಿನ್ ಆತುರವಾಗಿ ಅವಳ ಹಿಂದೆಯೇ ಬಂದಳು. "ಮನೆಗೆ ತಾನೇ ಹೋಗೋದು ಡಾಕ್ಟರ್?"

"ಹೌದು."

"ಜಿಯಾವೋರ ಕಾರಿಗೆ ಹೇಳಲೇ?"

"ಬೇಡ" ಎಂದು ವಿನಯದಿಂದಲೇ ಹೇಳಿ ಅಲ್ಲಿಂದ ಮನೆಯತ್ತ ಹೊರಟಳು.

## ೧೨

ಮಧ್ಯರಾತ್ರಿ ಆಗಿತ್ತು. ವಾರ್ಡ್ ಪ್ರಶಾಂತವಾಗಿತ್ತು. ಕೇವಲ ಗೋಡೆಯ ದೀಪವೊಂದು ಲೂಳ ಕೈಗೆ ಚುಚ್ಚಿದ್ದ ಡ್ರಿಪ್ಸ್ ಮೇಲೆ ಕ್ಷೀಣವಾದ ಬೆಳಕನ್ನು ಚೆಲ್ಲುತ್ತಿತ್ತು. ಹನಿ ಹನಿಯಾಗಿ ಮೇಲೆತ್ತಿ ಕಟ್ಟಿದ್ದ ಬಾಟಲೊಳಗಿಂದ ಟ್ಯೂಬಿನೊಳಕ್ಕೆ ಬೀಳುತ್ತಿತ್ತು. ಡಾ॥ ಲೂ ಬದುಕಿರುವುದಕ್ಕೆ ಸಾಕ್ಷಿಯಾಗಿ ಈ ವ್ಯವಸ್ಥೆ ಇದ್ದಂತೆ ಇತ್ತು.

ಅವಳ ಹಾಸಿಗೆಯ ಪಕ್ಕದಲ್ಲಿಯೇ ಕುಳಿತಿದ್ದ ಫೂ, ಭಾವಶೂನ್ಯನಾಗಿ ಹೆಂಡತಿಯ ಮುಖದ ಮೇಲೆ ದೃಷ್ಟಿ ನೆಟ್ಟ, ಅವಳು ಹಾಸಿಗೆ ಹಿಡಿದಂದಿನಿಂದ, ಇಷ್ಟು ಹತ್ತಿರದಿಂದ ಅವಳನ್ನು ಗಮನಿಸಿದ್ದೂ ಇದೇ ಮೊದಲು. ಹನ್ನೆರಡು ವರ್ಷಗಳಲ್ಲಿ ಹೀಗೆ ತದೇಕಚಿತ್ತನಾಗಿ ಅವಳನ್ನು ನೋಡಿದ್ದೂ ಇದೇ ಪ್ರಥಮಬಾರಿ.

ಒಂದು ಸಲ ಹೀಗೆ, ಯಾವುದೋ ಒಂದು ಗಳಿಗೇಲಿ, ನೆಟ್ಟ ನೋಟದಿಂದ ಅವಳನ್ನು ನೋಡುತ್ತಿದ್ದಾಗ, ಅವಳು ಕೇಳಿದಳು– "ಯಾಕೆ ಹಾಗೆ ನನ್ನನ್ನು ನೋಡ್ತಿದ್ದೀರಿ?" ಅಪರಾಧಿಯಂತೆ ಮುಖ ಆಕಡೆ ತಿರುಗಿಸಿದ. ಅದೂ ಪ್ರೀತಿಸುತ್ತಿದ್ದ ದಿನಗಳಲ್ಲಿ!.... ನೆನಪಿದೆ. ಈಗ ಅವಳಿಗೆ ಒಂದು ಕಡೆಯಿಂದ ಒಂದು ಕಡೆಗೆ ತಲೆ ಎತ್ತುವುದಕ್ಕಾಗಲೀ, ಮಾತಾಡುವುದಕ್ಕಾಗಲೀ ಆಗುವುದಿಲ್ಲ. ಬೇಡಾಂತ ಹೇಳುವುದಕ್ಕೂ ತ್ರಾಣವಿಲ್ಲ.

ಅವನ ಗಮನಕ್ಕೆ ಬಂತು! ಎಷ್ಟೊಂದು ದುರ್ಬಲವಾಗಿದ್ದಾಳೆ. ಮುಪ್ಪಿನ ಸೂಚನೆಗಳು ಕಪ್ಪು ಕೂದಲಿನ ನಡು ನಡುವೆ ಬೆಳ್ಳಗಾಗುತ್ತಿರುವ ಕೂದಲಿನೆಳೆಗಳು. ಮೃದುವಾಗಿ, ಬಿಗಿಯಾಗಿ ಇದ್ದ ಚರ್ಮ ಸಡಿಲವಾಗಿದೆ; ಸುಕ್ಕುಗಟ್ಟಿದ ಹಣೆಯ

ಮೇಲೂ ಗೆರೆಗಳು ಎದ್ದು ಕಾಣುತ್ತಿವೆ. ಒಂದು ಕಾಲಕ್ಕೆ ಮುದ್ದಾದ ಕೆನ್ನೆಗಳು ಜೋಲುಬಿದ್ದಿವೆ. ಆರಿಹೋಗುವ ದೀಪದ ಜ್ವಾಲೆಯಂತೆ ಅವಳ ಬದುಕು ವೇಗವಾಗಿ ಉರಿದುಹೋಗುತ್ತಿದೆ. ಎಂತಹ ನಿಶ್ಚಲ, ದೃಢ ವ್ಯಕ್ತಿತ್ವವುಳ್ಳವಳು ಒಂದು ರಾತ್ರಿಯಲ್ಲಿ ಹೇಗೆ ಕ್ಷೀಣಿಸಿಹೋಗಿದ್ದಾಳೆ! ಅವಳಲ್ಲಿ ದುರ್ಬಲತೆ ಇಲ್ಲ. ಗಾತ್ರ ಚಿಕ್ಕದು. ಆರೋಗ್ಯವಿದೆ; ಶಕ್ತಿ ಇದೆ. ಪುಟ್ಟ ಭುಜಗಳ ಮೇಲೆ ಎಷ್ಟು ಹೊರೆಗಳನ್ನು ಹೊತ್ತಿದ್ದಾಳೆ; ಅನಿರೀಕ್ಷಿತ ಆಘಾತಗಳನ್ನು ಸಹಿಸಿದ್ದಾಳೆ. ಎಂದೂ ಅದಕ್ಕಾಗಿ ಚಿಂತಿಸಿಲ್ಲ; ದೂರಲಿಲ್ಲ; ಎದೆಗೆಡಲಿಲ್ಲ; ನಿರಾಶಳಾಗಲಿಲ್ಲ.

ಎಷ್ಟೋ ಸಲ ಫೂ ಹೇಳಿದ್ದ– "ನೀವು ತುಂಬಾ ಗಡಸಿನ ಹೆಣ್ಣು."

"ಯಾರು? ನಾನೇ? ನನಗೇನೂ ಧೈರ್ಯ ಸಾಲದು", ಇದೇ ಉತ್ತರವನ್ನು ಪ್ರತಿಸಲವೂ ನೀಡಿದ್ದುಂಟು.

ಖಾಯಿಲೆ ಬೀಳುವುದಕ್ಕೆ ಹಿಂದಿನ ರಾತ್ರಿ, 'ಫೂ ಇನ್‌ಸ್ಟಿಟ್ಯೂಟ್‌ನಲ್ಲೇ ಉಳಿಯುವ ತನ್ನ ಧೀರ ನಿರ್ಧಾರವನ್ನು ತಿಳಿಸಿದಾಗೊಮ್ಮೆ ಮತ್ತೆ ಈ ಮಾತನ್ನು ಹೇಳಿದ್ದಳು.

ಷಿಯಾ ಪೂರ್ತಿಯಾಗಿ ಚೇತರಿಸಿಕೊಂಡಿದ್ದಳು. ಯುಯಾನ್ ತನ್ನ ಹೋಂ ವರ್ಕ್ ಮುಗಿಸಿ ನಿದ್ದೆ ಮಾಡಲು ಹೋದ. ಮನೆಯಲ್ಲಿ ಶಾಂತಿ ನೆಲೆಸಿತ್ತು.

ಮಾಗಿ ಕಾಲ ಬಂದಾಗಿತ್ತು. ಆಗಲೇ ಚಳಿಗಾಳಿ ಬೀಸುತ್ತಿತ್ತು. ಮಕ್ಕಳಿಗೆ ಬೆಚ್ಚನೆಯ ಬಟ್ಟೆಗಳನ್ನು ಕಳಿಸಲು ಕಿಂಡರ್ ಗಾರ್ಟನ್‌ನವರು ಹೇಳಿದ್ದರು. ಲೂ, ಹೋದ ವರುಷ ಷಿಯಾ ಹಾಕಿಕೊಳ್ಳುತ್ತಿದ್ದ ಕಾಟನ್ ಲೈನಿಂಗ್ ಕೊಟ್ಟಿದ್ದ ಕೋಟನ್ನು ಹೊಲಿಗೆ ಬಿಚ್ಚಿ ದೊಡ್ಡದು ಮಾಡಲು ಡೆಸ್ಕಿನ ಮೇಲೆ ಹರಡಿ ಇನ್ನೊಂದು ಪದರ ಹತ್ತಿಯ ಲೈನಿಂಗ್ ಕೊಟ್ಟಳು.

ಫೂ ಅರೆಬರೆದ ಲೇಖನವನ್ನು ಬುಕ್‌ಕೇಸಿನಿಂದ ಎಳೆದು ಡೆಸ್ಕಿನ ಪಕ್ಕದಲ್ಲಿ ಅನುಮಾನಿಸುತ್ತಾ ಕುಳಿತಿದ್ದು, ಆಮೇಲೆ ಹಾಸಿಗೆಯ ಮೇಲೆ ಹೋಗಿ ಕುಳಿತ.

"ಒಂದು ನಿಮಿಷ" ಅವನ ಕಡೆ ತಿರುಗಿ ಹೇಳಿದಳು.

"ಬೇಗ ಮುಗಿಸಿಬಿಡುತ್ತೇನೆ" – ಎಂದು ಆತುರಾತುರವಾಗಿ ಹೊಲಿಯ ತೊಡಗಿದಳು.

ಆದರೆ ಮೇಲಿದ್ದ ಕೋಟನ್ನು ಕೈಗೆತ್ತಿಕೊಂಡ ಮೇಲೆ ಫೂ ಹೇಳಿದ– "ಒಂದು ಆರು ಚದರ ಮೀಟರುಗಳಷ್ಟು ಇನ್ನೊಂದು ಕೋಣೆ ಇದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅಲ್ವಾ? ಕಡೆಯ ಪಕ್ಷ ಡೆಸ್ಕ್ ಹಾಕಿಕೊಳ್ಳಲು ಸಾಕಾಗುವಷ್ಟಾದರೂ!"

ಹೊಲಿಯುವುದರಲ್ಲಿ ಮಗ್ನಳಾಗಿದ್ದವಳು ಸ್ವಲ್ಪ ಹೊತ್ತಿನ ನಂತರ ಆತುರದಲ್ಲೆದ್ದು, ಅರ್ಧ ಮುಗಿದದ್ದನ್ನು ಮಡಿಚಿಟ್ಟು ಹೇಳಿದಳು– "ನಾನು ಆಸ್ಪತ್ರೆಗೆ ಹೋಗಬೇಕು, ಡೆಸ್ಕನ್ನು ನೀನು ಉಪಯೋಗಿಸಿಕೊಳ್ಳಬಹುದು."

"ಆದರೆ ಯಾಕೆ? ಈಗ ಹೊತ್ತಾಗಿದೆ."

ಜಾಕೆಟ್ ಹಾಕಿಕೊಳ್ಳುತ್ತ ಹೇಳಿದಳು – "ನಾಳೆ ಬೆಳಗ್ಗೇನೆ ಎರಡು ಆಪರೇಷನ್‌ಗಳಿವೆ. ರೋಗಿಗಳು ಹೇಗಿದ್ದಾರೇಂತ ಹೋಗಿ ನೋಡಬೇಕಾಗಿದೆ."

ಅನೇಕ ಸಲ ಸಂಜೆಗಳಲ್ಲಿ ಆಸ್ಪತ್ರೆಗೆ ಹೋಗುತ್ತಿದ್ದಳು. ಆದ್ದರಿಂದ ಫೂ ಸ್ವಲ್ಪ ಕೀಟಲೆ ಮಾಡಿ ಹೇಳಿದ– "ನೀನು ಇಲ್ಲಿದ್ದರೂ ನಿನ್ನ ಮನಸ್ಸೆಲ್ಲಾ ಆಸ್ಪತ್ರೇಲೇ ಇರುತ್ತೆ."

"ತುಂಬಾ ಚಳಿ ಇದೆ. ಅದರ ಮೇಲೆ ಇನ್ನೊಂದು ಕೋಟು ಹಾಕಿಕೋ." ಪ್ರಾರ್ಥನೆಯಿತ್ತು ಅವನ ಮಾತಿನಲ್ಲಿ.

"ತುಂಬಾ ಹೊತ್ತು ಮಾಡೋಲ್ಲ. ಬೇಗ ಬಂದುಬಿಡುತ್ತೇನೆ." ಕ್ಷಮಾಪಣೆಯ ದನಿಯಲ್ಲಿ ಹೇಳಿದಳು.

"ಆಸ್ಪತ್ರೇಲಿ ಒಂದಿಬ್ಬರು ವಿಚಿತ್ರವಾದ ರೋಗಿಗಳಿದ್ದಾರೆ. ಒಬ್ಬರು ವೈಸ್ ಮಿನಿಸ್ಟರ್. ಆತನ ಹೆಂಡತಿ ಎಷ್ಟೊಂದು ತಲೆ ಕೆಡಿಸಿಕೊಂಡು, ತೀರಾ ಗಲಿಬಿಲಿಗೊಂಡಿದ್ದಾಳೆ. ಇನ್ನೊಂದು ಒಬ್ಬ ಪುಟ್ಟ ಹುಡುಗಿ. ನೆನ್ನೆ ರಾತ್ರಿಯೆಲ್ಲ ಕೆಟ್ಟ ಕೆಟ್ಟ ಕನಸುಗಳು ಬಿತ್ತೂಂತ ಹೇಳುತ್ತಿದ್ದಳು. ಅವರನ್ನು ಹೋಗಿ ವಿಚಾರಿಸಿಕೊಂಡು ಬರಲೇಬೇಕು."

ಹೇಳಿದಂತೆ ಸ್ವಲ್ಪ ಹೊತ್ತಿನಲ್ಲಿಯೇ ಹಿಂತಿರುಗಿದಳು. ಫೂ ಇನ್ನು ದೀಪದ ಬೆಳಕಿನಲ್ಲಿ ಬರೆಯುತ್ತಿದ್ದ. ಅವನಿಗೆ ತೊಂದರೆ ಕೊಡೋದು ಬೇಡವೆನಿಸಿ, ಮಕ್ಕಳಿಗೆ ಹೊದಿಸಿ, ತಾನೂ ಹೋಗಿ ಮಲಗಿಕೊಂಡಳು.

ಫೂ ಸುತ್ತಲೂ ನೋಡಿದ. ಅವಳು ಮಲಗಿದ್ದುದನ್ನು ಗಮನಿಸಿ ಮತ್ತೆ ತನ್ನ ಕೆಲಸ ಮುಂದುವರೆಸಿದ. ಸ್ವಲ್ಪ ಹೊತ್ತಿನಲ್ಲಿಯೇ ಅವನಿಗೆ ತಿಳಿಯಿತು. ಅವಳು ನಿದ್ದೆ ಮಾಡಿರಲಿಲ್ಲ. ದೀಪದ ಬೆಳಕು ಅವಳ ನಿದ್ದೆಗೆ ಭಂಗ ತಂದಿತೇನೋ ಎನಿಸಿ, ದೀಪವನ್ನು ಇನ್ನೂ ಕೆಳಕ್ಕೆ ಬಗ್ಗಿಸಿ ಪೇಪರನ್ನು ಅಡ್ಡ ಹಿಡಿದು ಮತ್ತೆ ಮಗ್ನನಾದ.

ಸ್ವಲ್ಪ ಹೊತ್ತಿನಲ್ಲಿ ಅವಳು ಸಣ್ಣ ಗೊರಕೆ ತೆಗೆದಳು. ಆದರೆ ಅವನಿಗೆ ಅದು ನಟನೆ ಎನಿಸಿತು. ಎಷ್ಟೋಸಲ, ನಿದ್ದೆ ಬಾರದಿದ್ದಾಗ, ಹೀಗೆಯೇ ನಿದ್ದೆ ಬಂದಂತೆ ನಟಿಸುತ್ತಿದ್ದಳು. ತನ್ನ ಕೆಲಸಕ್ಕೆ ಭಂಗ ಬಾರದಿರಲೆಂದು. ಅವನಿಗೆ ಅವಳ ಈ ಗುಟ್ಟು ಎಷ್ಟೋ ಹಿಂದೇನೇ ತಿಳಿದಿದ್ದರೂ ಅವಳ ಮುಂದೆ ಹೇಳುವುದಕ್ಕೆ ಹೋಗಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ಅವನೂ ಕಾಲು ನೀಡಿ ಮೈಮುರಿದು ಎದ್ದು, "ನಾನೂ ಇನ್ನು ಮಲಗುತ್ತೇನೆ"– ಎಂದುಕೊಂಡ.

"ನನ್ನ ಬಗ್ಗೆ ಚಿಂತೆ ಮಾಡಬೇಡ! ನನಗಾಗಲೇ ಅರ್ಧ ನಿದ್ದೆ ಹತ್ತಿದೆ" – ಎಂದು ಲೂ ಹೇಳಿದಳು.

ಡೆಸ್ಕಿನ ಅಂಚಿನಲ್ಲಿ ನಿಂತಿದ್ದ ಘೂ, ಪೂರ್ತಿಯಾಗದ ತನ್ನ ಲೇಖನದ ಕಡೆ ನೋಡಿದ. ಪುಸ್ತಕಗಳನ್ನು ಮುಚ್ಚುತ್ತಾ "ಇವತ್ತಿಗೆ ಇನ್ನು ಸಾಕು"- ಎಂದುಕೊಂಡ.

"ನಿನ್ನ ಲೇಖನ ಏನಾಯಿತು? ಇವತ್ತು ರಾತ್ರಿ ಬರೆದು ಮುಗಿಸದಿದ್ದರೆ, ಮತ್ತೆ ಯಾವಾಗಾಗುತ್ತೆ?"

"ಹತ್ತು ವರುಷ ಕಳೆದುಕೊಂಡದ್ದನ್ನು ಒಂದೇ ಒಂದು ರಾತ್ರಿಯಲ್ಲಿ ಪೂರೈಸುವುದಕ್ಕೆ ಆಗುವುದಿಲ್ಲ."

ಲೂ ಎದ್ದು ಕುಳಿತಳು. ಸ್ವೆಟರ್ ತೆಗೆದು ಹೆಗಲ ಮೇಲೆ ಹಾಕಿಕೊಂಡು ಮಂಚಕ್ಕೆ ತಲೆ ಆನಿಸಿ, ಪ್ರಾಮಾಣಿಕವಾದ ದನಿಯಲ್ಲಿ ಹೇಳಿದಳು-

"ಈಗ ನಾನು ಯಾವುದರ ಬಗ್ಗೆ ಯೋಚಿಸುತ್ತಿದ್ದೇನೆ? ಹೇಳು ನೋಡೋಣ."

"ನೀನು ಈಗ ಯಾವುದರ ಬಗ್ಗೇನೂ ಯೋಚಿಸಬೇಕಾಗಿಲ್ಲ. ಸುಮ್ಮನೆ ಕಣ್ಣು ಮುಚ್ಚಿ ಮಲಗು. ಬೇರೆಯವರ ಕಣ್ಣುಗಳನ್ನು ವಾಸಿ ಮಾಡಬೇಕಾಗುತ್ತೆ. ನಿನ್ನ ಕಣ್ಣನ್ನು ಮೊದಲು ನೋಡಿಕೋ."

"ನೋಡು, ನಾನೇನೂ ತಮಾಷೆಗೆ ಹೇಳುತ್ತಿಲ್ಲ. ನೀನು ಇನ್‌ಸ್ಟಿಟ್ಯೂಟಿಗೆ ಹೋಗೋದೆ ಉತ್ತಮ. ಅಲ್ಲಿ ಬೇಕಾದಷ್ಟು ಕೆಲಸ ಮಾಡಬಹುದು."

ಘೂ ಅವಳನ್ನೇ ದಿಟ್ಟಿಸಿ ನೋಡಿದ. ಅವಳ ಮುಖ ಕಾಂತಿಯಿಂದ ಹೊಳೆಯುತ್ತಿದೆ. ಕಣ್ಣುಗಳು ಕುಣಿಯುತ್ತಿವೆ. ಇನ್‌ಸ್ಟಿಟ್ಯೂಟಿಗೆ ಹೋಗುವ ವಿಚಾರ ಅವಳಿಗೆ ಖುಷಿ ತಂದಿತ್ತು.

"ನಾನು ಈ ವಿಚಾರದಲ್ಲಿ ಸೀರಿಯಸ್ಸಾಗಿ ಹೇಳುತ್ತಿದ್ದೇನೆ. ನೀನು ಮಾಡಬೇಕಾದ್ದು ಬೇಕಾದಷ್ಟಿದೆ. ಮಕ್ಕಳಿಂದ, ನನ್ನಿಂದ ನಿನಗೆ ಎಷ್ಟು ತೊಂದರೆ ಅನ್ನೋದು ನನಗೆ ಗೊತ್ತಿದೆ."

"ಸಾಕು ಮಾಡು. ಇದರಲ್ಲಿ ನಿಂದೇನು..."

ಲೂ ಮಧ್ಯೆ ನುಡಿದಳು- "ಅದು ಹೇಗಿಲ್ಲ! ನಾನು ಡೈವೋರ್ಸ್ ಮಾಡುವ ಹಾಗಿಲ್ಲ. ಮಕ್ಕಳಿಗೆ ತಂದೆಯ ಅಗತ್ಯ ಇದೆ. ವಿಜ್ಞಾನಿಗೆ ತನ್ನ ಕುಟುಂಬದ ಅಗತ್ಯ ಇದೆ. ಏನಾದರಾಗಲೀ ಎಂಟು ಗಂಟೆಯ ನಿನ್ನ ಕೆಲಸವನ್ನು ಹದಿನಾರು ಗಂಟೆಗೆ ಏರಿಸಬೇಕಾಗಿದೆ."

"ಇದರಿಂದ ನಿನ್ನ ಹೊರೆ ಹೆಚ್ಚಾಗುತ್ತೆ. ಮನೆ, ಮಕ್ಕಳು-ಎಲ್ಲಾ ನಿನ್ನ ಮೇಲೆ! ....ಖಂಡಿತಾ ಸಾಧ್ಯವಿಲ್ಲ!"

"ಯಾಕಾಗೋಲ್ಲ? ನೀನಿಲ್ಲದಿದ್ದರೂ ಕೆಲಸ ನಡೆಯುತ್ತೆ. ನಾನೆಲ್ಲವನ್ನೂ ನಿಭಾಯಿಸಬಲ್ಲೆ."

ಫೂ ಒಂದಾದ ಮೇಲೊಂದರಂತೆ ಸಮಸ್ಯೆಗಳನ್ನು ವಿವರಿಸಿ ಹೇಳಿದ. ಲೂ ಅದಕ್ಕೆಲ್ಲಾ ಸಮರ್ಪಕವಾಗಿ ಉತ್ತರಿಸಿದಳು. ಕೊನೆಗೆ ಹೇಳಿದಳು– "ನೀನೇ ಒಂದು ಸಲ ಹೇಳಿದ್ದು ನೆನಪಿದೆಯಾ?– 'ನಾನು ತುಂಬ ಗಟ್ಟಿ ಹೆಣ್ಣು' ಅಂತ. ನಾನೆಲ್ಲ ನೋಡಿಕೊಳ್ಳುತ್ತೇನೆ. ನಿನ್ನ ಮಗನನ್ನು ಉಪವಾಸ ಹಾಕೊಲ್ಲ. ನಿನ್ನ ಮಗಳನ್ನು ಎಚ್ಚರಿಕೆಯಿಂದಲೇ ನೋಡಿಕೊಳ್ಳುತ್ತೇನೆ."

ಕೊನೆಗೆ ಫೂ ಸಮಾಧಾನಗೊಂಡು ಒಪ್ಪಿದ. ಮರುದಿವಸದಿಂದಲೇ ಪ್ರಯತ್ನಿಸಿ ಮಾಡಬೇಕು ಅಂತ ತೀರ್ಮಾನವಾಯಿತು.

"ಚೈನಾದಲ್ಲಿ ಏನನ್ನಾದರೂ ಸಾಧಿಸುವುದು ಬಹಳ ಕಷ್ಟದ ಕೆಲಸ!" – ಬಟ್ಟೆ ಬದಲಾಯಿಸುತ್ತ ಹೇಳಿದ.

"ಯುದ್ಧದ ಸಮಯದಲ್ಲಿ ಹೊಸ ಚೈನಾದ ನಿರ್ಮಾಣಕ್ಕಾಗಿ ಹಳೆಯ ಕ್ರಾಂತಿಕಾರರು ಅನೇಕರು ಹುತಾತ್ಮರಾದರು. ಈಗ ಆಧುನಿಕ ಚೈನಾದ ರಚನೆಗಾಗಿ, ಬಲಿದಾನಕ್ಕಾಗಿ ನಮ್ಮ ಸರದಿ ಬಂದಿದೆ. ಆದರೆ ಯಾರಿಗೂ ಇದು ಕಣ್ಣಿಗೆ ಬೀಳುತ್ತಿಲ್ಲ, ಅಷ್ಟೆ."

ತನಗೆ ತಾನೇ ಹೇಳಿಕೊಳ್ಳುತ್ತ ಮುಂದುವರೆಸಿದ. ಬಟ್ಟೆ ಬದಲಾಯಿಸಿ ಆದ ಮೇಲೆ ಮೈ ಚಾಚುವ ಮೊದಲು ಲೂಳ ಕಡೆ ನೋಡಿದ, ಅವಳಾಗಲೇ ಗಾಢ ನಿದ್ರೆಯಲ್ಲಿದ್ದಳು. ಪ್ರಶಾಂತವಾಗಿ ಮಲಗಿದ್ದ ಅವಳ ಮುಖದಲ್ಲಿ, ಈ ನಿರ್ಧಾರದಿಂದ ತೃಪ್ತಿ, ಸಂತೋಷಗಳು ಹೊಳೆಯುತ್ತಿದ್ದವು.

ಆದರೆ ಯಾರು ತಿಳಿದಿದ್ದರು? ಮೊದಲ ದಿನವೇ ಅವರ ಯೋಜನೆಗಳೆಲ್ಲಾ ಹೀಗೆ ತಲೆಕೆಳಗಾಗುತ್ತವೆ–ಎಂದು.

## ೧೩

ಲೂಳ ಖಾಸಗಿ ಬದುಕಿನಲ್ಲಿ ಸೋಲು ಸಂಭವಿಸಿದರೂ ಅವಳು ಮಾಡಿದ ಆಪರೇಷನ್‌ಗಳು ಯಶಸ್ವಿಯಾಗಿದ್ದವು.

ಆದಿನ ಬೆಳಿಗ್ಗೆ, ಮಾಮೂಲಿನಂತೆ ಹತ್ತು ನಿಮಿಷ ಮೊದಲೇ ವಾರ್ಡಿನೊಳಗೆ ಬಂದಳು. ಡಾ॥ ಸನ್‌ರು ಅವಳಿಗಾಗಿ, ಆಗಲೇ ಕಾಯುತ್ತಿದ್ದರು.

"ಗುಡ್ ಮಾರ್ನಿಂಗ್ ಡಾ॥ ಲೂ!" ಅವಳನ್ನು ಸ್ವಾಗತಿಸಿದ. ನಮಗೆ ಕಣ್ಣಿನ ದಾನಿಯೊಬ್ಬರು ಸಿಕ್ಕಿದ್ದಾರೆ. ಇವತ್ತೇ ಕಾರ್ನಿಯಾ ಟ್ರಾನ್ಸ್‌ಪ್ಲಾಂಟ್ ಮಾಡಬಹುದಲ್ಲ?

"ಅದ್ಭುತ! ಆದಷ್ಟು ಬೇಗ ಆಪರೇಷನ್ ಆಗಬೇಕೂಂತ ರೋಗಿಯೊಬ್ಬರು ಕಾಯ್ತಾ ಇದ್ದಾರೆ" ಉಕ್ಕಿ ಬಂದ ಸಂತೋಷದಿಂದ ಲೂ ನುಡಿದಳು.

"ಆದರೆ ನಿನಗೆ ಈಗಾಗಲೇ ಎರಡು ಆಪರೇಷನ್‌ಗಳಿವೆ. ಮೂರನೆಯದೂ ಸಾಧ್ಯವಾಗುತ್ತಾ?"

"ಖಂಡಿತ" ಎಂದು ತನಗೆ ಮಾಡಬಲ್ಲ ಸಾಮರ್ಥ್ಯ ಇದೆಯೆಂಬಂತೆ ದೃಢವಾಗಿ, ಆತ್ಮವಿಶ್ವಾಸದಿಂದ ತಲೆಯಾಡಿಸಿದಳು.

"ಸರಿ ಹಾಗಾದರೆ..... ಎಲ್ಲ ನಿರ್ಧಾರ ಆದ ಹಾಗೆ ಆಯ್ತು", ಎಂದು ತಮ್ಮಲ್ಲಿ ಹೇಳಿಕೊಂಡರು.

ಆಗ ತಾನೇ ಬಂದ ಜಿಯಾಂಗ್‌ಳ ತೋಳು ಹಿಡಿದು ಆಪರೇಷನ್ ಥಿಯೇಟರ್ ಕಡೆ ನಡೆದಳು. ಲೂ ತುಂಬಾ ಉತ್ಸಾಹದಲ್ಲಿದ್ದಳು. ಆರಾಮವಾಗಿ ಸುತ್ತಾಡಿಕೊಂಡು ಬರಲು ಹೊರಟಂತೆ ಹೆಜ್ಜೆ ಹಾಕಿ ನಡೆದಳು.

ಈ ಆಸ್ಪತ್ರೆಯ ಆಪರೇಷನ್ ಥಿಯೇಟರ್ ವಿಶಾಲವಾಗಿ, ಅಚ್ಚುಕಟ್ಟಾಗಿ, ಆಕರ್ಷಕವಾಗಿತ್ತು. ಕೆಂಪು ಅಕ್ಷರಗಳಲ್ಲಿ ಗಾಜಿನ ಬಾಗಿಲುಗಳ ಮೇಲೆ 'ಆಪರೇಷನ್ ಥಿಯೇಟರ್' ಎಂದು ಬರೆದಿರುವುದು ಎದ್ದು ಕಾಣುತ್ತಿತ್ತು. ರೋಗಿಯ ಸ್ನೇಹಿತರು, ಬಂಧುಗಳು ಮೊದಲಾದವರು ಕುತೂಹಲವಾಗಿ, ನಿಗೂಢವೆನಿಸುತ್ತಿದ್ದ ಮತ್ತು ತಲ್ಲಣಗೊಳಿಸುತ್ತಿದ್ದ ಈ ಜಾಗವನ್ನು, ಸಾವು ಸುಳಿದಾಡುವ ಜಾಗವೆಂಬಂತೆ ನೋಡುತ್ತಾ ಆ ಬಾಗಿಲಿನ ಆಚೆಗೆ ನಿಲ್ಲುತ್ತಿದ್ದರು.

ಹಾಗೆ ನೋಡಿದರೆ ಆಪರೇಷನ್ ಥಿಯೇಟರ್ ಭೀತಿ, ತಲ್ಲಣಗಳ ಎಡೆಯಾಗಿರುವುದಕ್ಕಿಂತ ಭರವಸೆಯ ತಾಣವಾಗಿದೆ. ಒಳಗೆ ವಿಶಾಲವಾದ ಕಾರಿಡಾರಿನ ಗೋಡೆಗಳಿಗೆ ತೆಳು ಹಸಿರು ಥಿಯೇಟರುಗಳೆಲ್ಲ ಅಲ್ಲಿವೆ. ಸರ್ಜನರು, ಅವರ ಸಹಾಯಕರು, ಅನೀಸ್ತಿಯಾ ನೀಡುವವರು, ನರ್ಸ್‌ಗಳು ಮೊದಲಾದವರು ವ್ಯಸ್ತರಾಗಿ ಗಡಿಬಿಡಿಯಿಂದ ಓಡಾಡುತ್ತಿದ್ದಾರೆ. ಆಸ್ಪತ್ರೆಯಲ್ಲೆಲ್ಲ ಅತ್ಯಂತ ಶಿಸ್ತಿನ, ಅಚ್ಚುಕಟ್ಟಿನ ಜಾಗವೆಂದರೆ ಇದೆ. ಎಲ್ಲಾ ಪ್ರಶಾಂತ, ಯಾರದೂ ಮಾತಿಲ್ಲ; ನಗೆಯಿಲ್ಲ.

ವೈಸ್ ಮಿನಿಸ್ಟರ್ ಜಿಯಾವೋರನ್ನು ಇವುಗಳಲ್ಲಿ ಒಂದು ಥಿಯೇಟರೊಳಗೆ ತಂದರು. ಕೆನೆ ಬಣ್ಣದ ಆಪರೇಷನ್ ಟೇಬಲ್ ಮೇಲೆ ಮಲಗಿಸಿದರು. ಕ್ರಿಮಿನಾಶಕ ಮದ್ದಿನಿಂದ ಶುಭ್ರವಾಗಿ ಒಗೆದ ಟವೆಲಿನಿಂದ ಆತನ ತಲೆಯನ್ನು ಸುತ್ತಿದಳು. ಬಾದಾಮಿಯಾಕಾರದ ರಂಧ್ರದೊಳಗಿಂದ ಆತನ ಕಣ್ಣುಗಳಲ್ಲಿ ಒಂದು ಕಾಣುತ್ತಿತ್ತು.

ಲೂ ಆಪರೇಟಿಂಗ್ ಟೇಬಲ್ ಬಳಿಯ ಸ್ಟೂಲೊಂದರ ಮೇಲೆ ಆಗಲೇ ಸಿದ್ಧವಾಗಿ ಕುಳಿತಿದ್ದಳು. ಸ್ಟೂಲನ್ನು ಅಗತ್ಯವಿದ್ದಷ್ಟು ಮೇಲಕ್ಕೋ ಕೆಳಕ್ಕೋ ಹೊಂದಿಸಿಕೊಳ್ಳಬಹುದಾಗಿತ್ತು. ಲೂ ಳದು ಪುಟ್ಟ ಆಕಾರ, ಗಾತ್ರ, ಆಪರೇಷನ್ ಮಾಡುವಾಗಲೆಲ್ಲ ಅವಳು ಸ್ಟೂಲನ್ನು ಮೇಲಕ್ಕೆ ಎತ್ತರಿಸಿಕೊಳ್ಳುತ್ತಿದ್ದಳು. ಆ ದಿನ ಅವಳಿಗೆ ಮೊದಲೇ ಬೇಕಾದ ಎತ್ತರಕ್ಕೆ ಹೊಂದಿಸಿ ಇಟ್ಟಿದ್ದರು. ಈ ಕೆಲಸ ಜಿಯಾಂಗ್‌ಳದೇ ಇರಬೇಕೆನಿಸಿ, ಅವಳ ಕಡೆ

ತಿರುಗಿ ಕೃತಜ್ಞತೆಯ ನೋಟ ಬೀರಿದಳು. ಆಪರೇಷನ್‌ಗೆ ಬೇಕಾದ ಉಪಕರಣಗಳ ಟ್ರೇಯೊಂದನ್ನು ಲೂಳ ಸಮೀಪಕ್ಕೆ ದೂಡಿದಳು. ಅದನ್ನು ರೋಗಿಯ ಎದೆಯ ಭಾಗದಲ್ಲಿ, ಸರ್ಜನ್ ಕೈಗೆ ಎಟುಕುವಂತೆ ಸರಿಯಾಗಿ ಹೊಂದಿಸಿ ಇರಿಸಲಾಯಿತು.

ಜಿಯಾವೋರ ಕಣ್ಣನ್ನು ದಿಟ್ಟಿಸುತ್ತಾ "ಪ್ರಾರಂಭ ಮಾಡೋಣವೇ?" – ಎಂದು ಕೇಳಿದಳು – "ಸ್ವಲ್ಪ ನಿರಾಳವಾಗಿರಿ. ಮೊದಲು ಲೋಕಲ್ ಅನೀಸ್ತಿಯಾದ ಇಂಜೆಕ್ಷನ್ ಕೊಡೋಣ. ಆಮೇಲೆ ಕಣ್ಣಿಗೆ ನೋವೆ ಗೊತ್ತಾಗೊಲ್ಲ. ಆಪರೇಷನ್ ಕೂಡ ಹೆಚ್ಚು ಹೊತ್ತು ಹಿಡಿಯೋಲ್ಲ."

ಈ ಮಾತಿಗೆ ಏಕಾಏಕಿ ಕಿರುಚಿಕೊಂಡ, – "ಸ್ವಲ್ಪ ಹಾಗೇ ಇರಿ!" ಏನಾಯ್ತು? ಲೂ ಮತ್ತು ಜಿಯಾಂಗ್ ಇಬ್ಬರೂ ದಿಗ್ಭ್ರಮೆಗೊಂಡು ನಿಂತರು. ಜಿಯಾವೋ ಮುಖಕ್ಕೆ ಸುತ್ತಿದ್ದ ಟವೆಲನ್ನು ಕಿತ್ತೆಸೆದು ತಲೆ ಎತ್ತಲು ಪ್ರಯತ್ನಿಸಿದ. ಲೂಳ ಕಡೆಗೆ ಬೆರಳು ಮಾಡಿ ಪ್ರಶ್ನಿಸುವ ದನಿಯಲ್ಲಿ ಕೇಳಿದ– "ನೀವೇ..... ನೀವೇನಾ ಡಾಕ್ಟರ್ ಲೂ. ಆವತ್ತು ನನಗೆ ಆಪರೇಷನ್ ಮಾಡಿದ್ದು?"

ಗ್ಲೋವ್ಸ್ ಧರಿಸಿದ ಕೈಗಳನ್ನು, ಆತ ಮುಟ್ಟುವನೆಂಬ ಭಯದಿಂದ ಹಿಂದಕ್ಕೆ ತೆಗೆದುಕೊಂಡಳು. ಅವಳು ಮಾತನಾಡಲೂ ಅವಕಾಶವಿಲ್ಲದಂತೆ ತೀರಾ ಭಾವುಕನಾಗಿ "ಹೌದು ಡಾಕ್ಟರ್ ಲೂ ಹೌದು. ಅಂದು ಆಪರೇಷನ್ ಮಾಡಿದವರು ಖಂಡಿತ ನೀವೇ ಆಗಿದ್ದೀರಿ. ಇದೇರೀತಿ ಮಾತಾಡಿದಿರಿ. ನಿಮ್ಮ ಧ್ವನಿ, ದಾಟಿ ಎಲ್ಲಾ ನಿಮ್ಮದೇ! ನನಗೆ ಚೆನ್ನಾಗಿ ಗೊತ್ತು. ಅವರು ನೀವೇ!!"

"ಹೌದು ನಾನೇ ಅದು"– ಲೂಗೆ ಬೇರೆ ದಾರಿಯೇ ಇರಲಿಲ್ಲ. ಒಪ್ಪಿಕೊಂಡಳು.

"ನನಗೆ ಮೊದಲೇ ಯಾಕೆ ಹೇಳಲಿಲ್ಲ? ನಿಮಗೆ ನಾನೆಷ್ಟು ಕೃತಜ್ಞ!"

"ಅದೇನೂ ದೊಡ್ಡದಲ್ಲ...." ಲೂಗೆ ಹೇಳಲು ಬೇರೇನೂ ತೋಚಲಿಲ್ಲ. ಟವೆಲಿನ ಕಡೆಗೊಮ್ಮೆ ನೋಡಿದಳು. ನರ್ಸನ್ನು ಕರೆದು, ಅದನ್ನು ಬದಲಾಯಿಸಲು ಹೇಳಿದಳು. ಮತ್ತೆ ಜಿಯಾವೋ ಕಡೆಗೆ ತಿರುಗಿ ಹೇಳಿದಳು– "ಈಗಲಾದರೂ ಶುರು ಮಾಡೋಣವೇ, ವೈಸ್ ಮಿನಿಸ್ಟರ್?"

ಜಿಯಾವೋ ನೀಳವಾಗಿ ಉಸಿರೆಳೆದ. ಅಷ್ಟು ಸುಲಭವಾಗಿ ಶಾಂತವಾಗಲು ಅವನಿಗಾಗಲಿಲ್ಲ. ಲೂ ಅಧಿಕಾರವಾಣಿಯಿಂದ ಹೇಳಲೇ ಬೇಕಾಯಿತು– "ಸ್ವಲ್ಪಾನೂ ಕದಲಬಾರದು. ಮಾತನಾಡಬಾರದು. ಈಗ ನಾವು ಆರಂಭಿಸುತ್ತೇವೆ."

ಲೂ ಬಹಳ ಕುಶಲತೆಯಿಂದ ಅವನ ಕೆಳರೆಪ್ಪೆಯ ಕೆಳಗೆ ನೋವೋಕೈನ್ ಇಂಜೆಕ್ಷನ್ ನೀಡಿದಳು. ಆಪರೇಷನ್ ಆರಂಭಿಸಿದಳು. ಇಂತಹ ಆಪರೇಷನ್‌ಗಳನ್ನು ಲೆಕ್ಕವಿಲ್ಲದಷ್ಟು ಸಲ ಮಾಡಿದ್ದಳು. ಆದರೂ ಪ್ರತಿಸಲವೂ ಶಸ್ತ್ರೋಪಕರಣವೊಂದನ್ನು ಕೈಗೆ ತೆಗೆದುಕೊಳ್ಳುವಾಗ ಅನುಭವವಿಲ್ಲದ ಹೊಸಬಳಂತೆ ಭಾವಿಸಿದಳು. ಸೂಜಿಯ

ಹಿಡಿಯೊಂದನ್ನು, ಚೂಪಾದ ತನ್ನ ಬೆರಳುಗಳಿಂದ ಎತ್ತಿಕೊಂಡಳು. ಸೂಜಿಯ ಹಿಡಿ ಕತ್ತರಿಯಂತೆ ಕಾಣುತ್ತಿತ್ತು. ಸೂಜಿಯನ್ನು ತೆಗೆದುಕೊಂಡು ಅದಕ್ಕೆ ಫಿಕ್ಸ್ ಮಾಡಿದಳು.

"ಏನಾಗ್ತಿದೆ?" – ಜಿಯಾಂಗ್ ಮೆದುವಾಗಿ ಕೇಳಿದಳು. ಜಿಯಾಂಗ್‌ಳ ಪ್ರಶ್ನೆಗೆ ಉತ್ತರಿಸುವ ಬದಲು, ಕೊಕ್ಕೆಯಾಕಾರದ ಸೂಜಿಯನ್ನು ಬೆಳಕಿಗೆ ಹಿಡಿದಳು. ಅದನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, "ಹೊಸದೇನು ಸೂಜಿ?" ಎಂದಳು.

ನರ್ಸ್ ,ಮುಂದೆ ಬಂದು, ತಗ್ಗಿದ ದನಿಯಲ್ಲಿ ಹೇಳಿದಳು– "ಹೌದು ಹೊಸದು."

ಲೂ ಮತ್ತೊಮ್ಮೆ ಸೂಜಿಯನ್ನು ನೋಡಿ ಒಳಗೇ ಗೊಣಗಿದಳು– "ಇಂತಹ ಸೂಜಿಯನ್ನು ಬಳಸುವುದು ಹೇಗೆ?"

ಶಸ್ತ್ರಕ್ರಿಯೆಗೆ ಬಳಸುವ ಉಪಕರಣಗಳ ಬಗ್ಗೆ ಲೂ ಮತ್ತು ಇತರರು ದೂರಿತ್ತಿದ್ದರು. ಅವುಗಳ ಗುಣಮಟ್ಟ ಸರಿಯಾಗಿಲ್ಲವೆಂದು ಅನೇಕ ಬಾರಿ ಹೇಳುತ್ತಲೇ ಬಂದಿದ್ದರೂ, ಒಮ್ಮೊಮ್ಮೆ ಹೀಗೆ, ಮಧ್ಯೆ ಹಾಳಾದ ಒಂದೆರಡು ಉಪಕರಣಗಳು ಕಾಣಿಸಿಕೊಳ್ಳುತ್ತಿದ್ದವು. ಅದಕ್ಕೆ ಒಳ್ಳೊಳ್ಳೆಯ ಕತ್ತರಿ, ಸಣ್ಣ ಚೂರಿ ಮುಂತಾದವುಗಳನ್ನು ಕಂಡಾಗ ಬೇರೆಯಾಗಿ ತೆಗೆದಿಡುವಂತೆ ನರ್ಸ್‌ಗೆ ಹೇಳುತ್ತಿದ್ದಳು.

ಎಲ್ಲಾ ಹಳೆಯ ಉಪಕರಣಗಳಿಗೆ ಬದಲಾಗಿ ಹೊಸದನ್ನು ತಂದಿರಿಸಿರುವುದು, ಅಂದು ಅವಳ ಗಮನಕ್ಕೆ ಬಂದಿರಲಿಲ್ಲ. ಅವಳ ದುರಾದೃಷ್ಟ. ಅವುಗಳ ಮಧ್ಯೆ ಕೆಲಸಕ್ಕೆ ಬಾರದ ಈ ಸೂಜಿಯೊಂದು ಸೇರಿಕೊಂಡಿತ್ತು. ಇಂತಹ ಸಂದರ್ಭಗಳಲ್ಲಿ ಅವಳು ತಾಳ್ಮೆಗೆಡುತ್ತಿದ್ದಳು. ಪರಿಣಾಮವಾಗಿ ನರ್ಸ್ ಮೇಲೆ ಕೂಗಾಡಿದಳು. ನರ್ಸ್ ನಿರಪರಾಧಿಯಾಗಿದ್ದರೂ ಈ ಕ್ಷಣದಲ್ಲಿ ಏನನ್ನೂ ಹೇಳಲಾಗಲಿಲ್ಲ. ಮೊಂಡಾದ ಸೂಜಿ ಆಪರೇಷನ್ ತಡಮಾಡುವುದೇ ಅಲ್ಲದೆ ರೋಗಿಯ ನೋವನ್ನು ಹೆಚ್ಚಿಸುತ್ತಿತ್ತು.

ಸಿಟ್ಟುಗೊಂಡ ಲೂ; ತಗ್ಗಿದ ದನಿಯಲ್ಲಿ, ಜಿಯಾವೋರಿಗೆ ಕೇಳಿಸಬಾರದೆಂದು ಹೇಳಿದಳು– "ಬೇರೊಂದನ್ನು ತೆಗೆದುಕೊಂಡು ಬಾ." ಅವಳ ಮಾತಿನಲ್ಲಿ ಆದೇಶವಿತ್ತು. ನರ್ಸ್ ಪ್ರತಿಮಾತಾಡದೆ ಸ್ಟೆರ್ಲೈಜರ್‌ನಿಂದ ಹಳೆಯ ಸೂಜಿಯೊಂದನ್ನು ತಂದಿತ್ತಳು.

ಥಿಯೇಟರ್ ನರ್ಸ್‌ಗಳಿಗೆ ಲೂಳ ವಿಚಾರವಾಗಿ ಗೌರವವಿತ್ತು. ಆದರೆ ಅವಳಿಗೆ ಹೆದರುತ್ತಿದ್ದರು. ಅವಳ ಶಿಸ್ತು, ಜಾಣ್ಮೆ, ಕೌಶಲ್ಯಗಳ ಬಗ್ಗೆ ಅವರಿಗೆ ತುಂಬಾ ಅಭಿಮಾನವಿತ್ತು. ಒಬ್ಬ ಡಾಕ್ಟರ್‌ನ ಅಧಿಕಾರ ಅವನ ಸ್ಕಾಲ್‌ಪೆಲ್ ಮೂಲಕ ವ್ಯಕ್ತವಾಗುತ್ತಿತ್ತು. ಒಳ್ಳೆಯ ಕಣ್ಣಿನ ತಜ್ಞನಾಗಿದ್ದರೆ ಕಣ್ಣಿಲ್ಲದವನಿಗೆ ಕಣ್ಣು ಕೊಡುತ್ತಾನೆ; ಕೆಟ್ಟವನಾದರೆ ಇರುವ ಕಣ್ಣನ್ನೂ ಹಾಳು ಮಾಡುತ್ತಾನೆ. ಲೂ ಗೆ ಅಧಿಕಾರ, ಅಂತಸ್ತು ಯಾವುದೂ ಇರಲಿಲ್ಲ. ಆದರೂ ಅವಳಿಗಿದ್ದ ಪ್ರತಿಭೆ, ಸಾಮರ್ಥ್ಯಗಳು ಅವಳಿಗೆ ಅಧಿಕಾರವನ್ನು ತಂದುಕೊಟ್ಟಿದ್ದವು.

ಜಿಯಾವೋನ ದೇಹ ಸ್ವಲ್ಪ ಅಲುಗುವ ಹೊತ್ತಿಗೆ ಆಪರೇಷನ್ ಮುಗಿದಿತ್ತು.

"ಕದಲಬೇಡ"– ಲೂ ಎಚ್ಚರಿಸಿದಳು.

"ಕದಲಬೇಡ!" ಅವಳ ಮಾತನ್ನೇ ಪುನರುಚ್ಚಿಸಿದಳು ಜಿಯಾಂಗ್.

"ಏನಾಗಿದೆ ನಿಮಗೆ?"

"ನನಗೆ ಕೆಮ್ಮು ಬರುತ್ತಿದೆ!" ಟವೆಲಿನೊಳಗಿಂದ ತಡಬಡಿಸುವ ದನಿ ಕೇಳಿಬಂತು.

ಆತನ ಹೆಂಡತಿ ಹೀಗಾಗಬಹುದೆಂದೇ ಹೆದರಿದ್ದಳು. ಈ ಹೊತ್ತಿನಲ್ಲಿಯೇ ಕೆಮ್ಮು ಬರಬೇಕೇ? ಇದೇನಾದರೂ ಮಾನಸಿಕ ಭಾವನೆಯೇ? ಅಭ್ಯಸ್ತವಾದ ಪ್ರತಿಸ್ಪಂದನವೇ?

"ಒಂದೆರಡು ನಿಮಿಷ ತಡೆದುಕೊಳ್ಳುವುದಕ್ಕೆ ಆಗುತ್ತದೆಯೇ?"

"ಇಲ್ಲ ಇಲ್ಲ... ಸಾಧ್ಯವೇ ಇಲ್ಲ" – ಆತ ಏದುಸಿರು ಬಿಡುತ್ತಿದ್ದ.

ಹೆಚ್ಚು ಹೊತ್ತಿರಲಿಲ್ಲ. ಆತನನ್ನು ಸಮಾಧಾನ ಪಡಿಸುತ್ತಲೇ ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಂಡಳು.

"ಒಂದು ನಿಮಿಷ! ಉಸಿರು ಬಿಡಿ. ಕೆಮ್ಮನ್ನು ಸ್ವಲ್ಪ ತಡೀರಿ!"

ಆತ ದೀರ್ಘವಾಗಿ ಉಸಿರು ಬಿಡುತ್ತಿದ್ದಾಗ, ಲೂ ಬೇಗ ಬೇಗ ಹೊಲಿಗೆ ಹಾಕುತ್ತಿದ್ದಳು. ಆತ ಉಸಿರು ಕಟ್ಟಿ ಸಾಯುವನೇನೋ ಎಂಬ ಭೀತಿಯನ್ನು ಹುಟ್ಟಿಸುವಂತೆ ಕಷ್ಟಪಟ್ಟು ಬೇಗ ಬೇಗ ಉಸಿರಾಡುತ್ತಿದ್ದ. ಕೊನೆಗೆ ಹೊಲಿಗೆ ಮುಗಿದದ್ದೇ ಲೂ ನಿರಾಳವಾದಳು. "ಈಗ ಬೇಕಾದರೆ ನೀವು ಕೆಮ್ಮಬಹುದು– ಆದರೆ ತುಂಬಾ ಜೋರಾಗಿ ಅಲ್ಲ."

ಆದರೆ ಆತ ಕೆಮ್ಮಲಿಲ್ಲ. ಬದಲಾಗಿ, ಈಗ ಆತನ ಉಸಿರಾಟವೂ ಯಾವುದೇ ಏರುಪೇರಿಲ್ಲದೆ, ಸಾವಧಾನವಾಗಿ, ಮಾಮೂಲಿನಂತೆ ಆಗತೊಡಗಿತ್ತು.

"ಪರವಾಗಿಲ್ಲ. ನಿಮ್ಮ ಇಷ್ಟದಂತೆ ಕೆಮ್ಮಬಹುದು. ಏನೂ ತೊಂದರೆಯಾಗುವುದಿಲ್ಲ" – ಜಿಯಾಂಗ್ ಮತ್ತೊಮ್ಮೆ ಹೇಳಿದಳು.

"ನಿಮಗೆ ತೊಂದರೆ ಕೊಟ್ಟೆ. ದಯವಿಟ್ಟು ಕ್ಷಮಿಸಿ" – ಅಪರಾಧ ಭಾವನೆ ಇತ್ತು.

"ನೀವು ಮುಂದುವರೆಸಿ. ಈಗ ನಾನು ಸರಿಯಾಗಿದ್ದೇನೆ."

ಜಿಯಾಂಗ್ ಅವನಿಗೆ ಸರಿಯಾಗಿ ಬುದ್ಧಿ ಹೇಳಬೇಕೆಂದುಕೊಂಡು ಆ ಕಡೆ ನೋಡಿದಳು. ಅಷ್ಟೊಂದು ವಯಸ್ಸಾಗಿರುವ ವ್ಯಕ್ತಿ ಸರಿಯಾಗಿ ತಿಳಿದುಕೊಂಡಿರಬೇಕು. ಲೂ ಜಿಯಾಂಗ್‌ಳ ಕಡೆ ಕಣ್ಣೆತ್ತಿ ನೋಡಿದ್ದಳು. ಜಿಯಾಂಗ್‌ಗೆ ಅರ್ಥವಾಗಿ ಸುಮ್ಮನಾದಳು. ಇಬ್ಬರೂ ಒಬ್ಬರಿಗೊಬ್ಬರು ಮುಗುಳ್ನಕ್ಕರು. ಇದೆಲ್ಲಾ ದಿನ ದಿನದ ಕೆಲಸದ ಒಂದು ಭಾಗ!

ಲೂ ಹಾಕಿದ ಗಂಟುಗಳನ್ನು ಬಿಚ್ಚಿದಳು. ಮತ್ತೆ ಆಪರೇಷನ್ ಪ್ರಾರಂಭವಾಯಿತು. ಯಾವುದೇ ತೊಂದರೆಯಿಲ್ಲದೆ ಮುಗಿಯಿತು. ಸ್ಟೂಲಿನ ಮೇಲಿಂದ ಎದ್ದು, ಲೂ ಒಂದು ಪುಟ್ಟ ಮೇಜಿನ ಮುಂದೆ ಕುಳಿತು ಔಷಧಿಗಳನ್ನು ಬರೆದಳು. ಜಿಯಾವೋರನ್ನು ಮತ್ತೆ ಸ್ಟ್ರೆಚರ್ ಮೇಲೆ ಮಲಗಿಸಿದರು. ಅದನ್ನು ಹೊರಗೆ ತಳ್ಳುತ್ತಿದ್ದಾಗ, ಜಿಯಾವೋ ಲೂಳನ್ನು ಕರೆದ. ತಪ್ಪು ಮಾಡಿದ ಮಗುವಿನಂತೆ, ಕಂಪಿಸುವ ದನಿಯಲ್ಲಿ.

ಲೂ ಆತನ ಬಳಿಗೆ ಬಂದಳು. ಆತನ ಕಣ್ಣುಗಳಿಗೆ ಪಟ್ಟಿ ಹಾಕಿದ್ದರು.

"ಏನಾದರೂ ಬೇಕಾಗಿತ್ತಾ?" ಲೂ ಆತನನ್ನು ಕೇಳಿದಳು. ಆತ ಅವಳ ಕೈಗಳಿಗಾಗಿ ತನ್ನ ಕೈಗಳನ್ನು ಹೊರ ತೆಗೆದು ಹಿಡಿದುಕೊಂಡು ಗಟ್ಟಿಯಾಗಿ ಅಲುಗಿಸಿದ. ಅವಳಿನ್ನೂ ಗ್ಲೋವ್ಸ್ ತೆಗೆದಿರಲಿಲ್ಲ. "ಎರಡು ಸಲವೂ ನಾನು ನಿಮಗೆ ತುಂಬಾ ತೊಂದರೆ ಕೊಟ್ಟಿದ್ದೇನೆ. ದಯವಿಟ್ಟು ಕ್ಷಮಿಸಿ..."

ಒಂದು ಕ್ಷಣ ಲೂ ಸ್ತಬ್ಧಳಾದಳು. ನಂತರ ಆತನನ್ನು ಆತನ ಮುಖ ನೋಡುತ್ತಲೇ ಸಮಾಧಾನ ಪಡಿಸಿದಳು. "ಅದೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಚೆನ್ನಾಗಿ ವಿಶ್ರಾಂತಿ ತೆಗೆದುಕೊಳ್ಳಿ, ಒಂದೆರಡು ದಿವಸದಲ್ಲಿ ಈ ಬ್ಯಾಂಡೇಜ್ ತೆಗೆದುಬಿಡುತ್ತೇವೆ."

ಆತನನ್ನು ಹೊರಗೆ ತೆಗೆದುಕೊಂಡು ಹೋದ ಮೇಲೆ ಲೂ ಗಡಿಯಾರದ ಕಡೆ ನೋಡಿದಳು. ನಲ್ವತ್ತು ನಿಮಿಷದ ಆಪರೇಷನ್‌ಗೆ ಒಂದು ಗಂಟೆ ಹಿಡಿದಿತ್ತು. ತನ್ನ ಬಳಿ ಗೌನ್, ಗ್ಲೋವ್ಸ್‌ಗಳನ್ನು ತೆಗೆದು ಬೇರೊಂದು ಜೊತೆಯನ್ನು ಧರಿಸಿದಳು. ನರ್ಸ್ ಗೌನನ್ನು ಹಿಂದಿನಿಂದ ಕಟ್ಟುತ್ತಿದ್ದಾಗ ಜಿಯಾಂಗ್ ಕೇಳಿದಳು– "ಆರಂಭಿಸೋಣವೇ?"

"ಓ ಎಸ್"– ಎಂದಳೂ ಲೂ.

## ೧೪

"ಮುಂದಿನ ಆಪರೇಷನ್ ನಾನು ಮಾಡುತ್ತೇನೆ. ನೀನು ಸ್ವಲ್ಪ ವಿಶ್ರಾಂತಿ ತೆಗೆದುಕೋ" – ಅವಳ ದನಿಯಲ್ಲಿ ಪ್ರಾರ್ಥನೆ ಇತ್ತು. ವಿಶ್ರಾಂತಿ ತೆಗೆದುಕೊಂಡ ಮೇಲೆ ಮೂರನೆಯದನ್ನು ಮಾಡುವಿಯಂತೆ" – ಜಿಯಾಂಗ್ ಮುಂದುವರೆದು ನುಡಿದಳು.

ಲೂ, ಮುಗುಳ್ನಗುತ್ತಲೇ, ಬೇಡವೆಂದಳು "ನಾನು ಮಾಡುತ್ತೇನೆ. ವ್ಯಾಂಗ್‌ಳ ವಿಚಾರ ನಿನಗಷ್ಟು ಗೊತ್ತಿಲ್ಲ. ಮಗು ಹೆದರಿಬಿಟ್ಟಿದೆ. ಕೆಲವು ದಿವಸಗಳಿಂದ ನಾವಿಬ್ಬರೂ ಸ್ನೇಹಿತರಾಗಿದ್ದೇವೆ. ಆದ್ದರಿಂದ ಅವಳನ್ನು ನನಗೇ ಬಿಡು. ಅದೇ ಒಳ್ಳೇದು."

ಮಗು ಸ್ಟ್ರೆಚರ್‌ನಲ್ಲಿ ಆಪರೇಷನ್ ಥಿಯೇಟರ್‌ಗೆ ಬರಲಿಲ್ಲ. ಅವಳನ್ನು ಎಳೆದು ತರಬೇಕಾಯಿತು. ಅವಳಿಗೆ ಹಾಕಿದ್ದ ಬಿಳಿಯ ಗೌನು ಅವಳಿಗಿಂತ ದೊಡ್ಡದಾಗಿತ್ತು. ಆಪರೇಷನ್ ಟೇಬಲ್ ಹತ್ತಿರ ಸುಳಿಯುವುದಕ್ಕೂ ಒಪ್ಪದೆ ಹಟ ಮಾಡಿದಳು.

"ಆಂಟಿ ಲೂ, ಬೇಡ! ಬೇಡ! ನನಗೆ ಆಪರೇಷನ್ ಬೇಡವೇ ಬೇಡ. ತುಂಬಾ ಹೆದರಿಕೆಯಾಗ್ತಿದೆ. ನನ್ನ ಅಮ್ಮನಿಗೆ ಹೋಗಿ ಹೇಳು, ನನಗೆ ಆಪರೇಷನ್ ಬೇಡಾಂತ!"

ಡಾಕ್ಟರುಗಳು, ನರ್ಸುಗಳು ಮೊದಲಾದವರು ಧರಿಸಿದ್ದ ವಿಚಿತ್ರವಾದ ಉಡುಪುಗಳು ಅವಳ ಹೆದರಿಕೆಗೆ ಕಾರಣವಾಗಿದ್ದವು. ಅವಳ ಎದೆ ಡವಗುಟ್ಟುತ್ತಿತ್ತು. ನರ್ಸುಗಳ ಕೈಯಿಂದ ಬಿಡಿಸಿಕೊಳ್ಳಲು ಹೆಣಗುತ್ತಾ, ಅವಳ ಸಹಾಯಕ್ಕೆ ಲೂ ಳನ್ನು ಕರೆಯುತ್ತಿದ್ದಳು.

ಲೂ ಟೇಬಲ್ ಬಳಿಗೆ ಹೋಗಿ, ಅವಳನ್ನು ಪುಸಲಾಯಿಸಿ, ಸ್ವಲ್ಪ ಕೋಪದಿಂದ ಹೇಳಿದಳು. "ಬಾ ಮರಿ, ಈ ಆಪರೇಷನ್ ಮಾಡಿಸಿಕೊಳ್ತೀನಿಂತ ನನಗೆ ನೀನು ಪ್ರಾಮಿಸ್ ಮಾಡಿರಲಿಲ್ಲ? ಎಲ್ಲಿ... ಧೈರ್ಯವಾಗಿರು!... ಹೆದರಿಕೊಳ್ಳುವುದಕ್ಕೆ ಏನಿದೆ ಹೇಳು?... ಒಂದು ಸಲ ಅನೀಸ್ತಿಸಿಯಾ ಇಂಜೆಕ್ಷನ್ ಕೊಟ್ಟುಬಿಟ್ಟರೆ, ನಿನಗೆ ನೋವೇ ಗೊತ್ತಾಗುವುದಿಲ್ಲ."

ಷಿಯಾವೋಮನ್‌ಳ ವಿಚಿತ್ರವಾದ ಬಟ್ಟೆ ಲೂಗೆ ನಗು ಬರಿಸುತ್ತಿತ್ತು. ಲೂಳ ಕರುಣೆ, ಪ್ರೀತಿ ತುಂಬಿದ ಕಣ್ಣುಗಳನ್ನು ನೋಡಿದಳು. ಸದ್ದಿಲ್ಲದೆ ಮೇಜಿನ ಮೇಲೆ ಹತ್ತಿದಳು. ನರ್ಸೊಬ್ಬಳು ಅವಳ ಮುಖವನ್ನು ಟವಲೊಂದರಿಂದ ಮುಚ್ಚಿದಳು. ಸನ್ನೆಯಿಂದ ಅವಳ ಕೈಗಳನ್ನು ಕಟ್ಟಿಹಾಕುವಂತೆ ಲೂ, ನರ್ಸ್‌ಗೆ ಹೇಳಿದಳು. ಈ ಪುಟ್ಟರೋಗಿ ಮತ್ತೆ ಪ್ರತಿಭಟಿಸಬೇಕೆಂದುಕೊಳ್ಳುತ್ತಿರುವಷ್ಟರಲ್ಲಿ ಲೂ, ಟೇಬಲನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾ ಹೇಳಿದಳು. "ಷಿಯಾವೋ, ನೋಡು ನೀನು ಒಳ್ಳೇ ಹುಡುಗಿ ಅಲ್ವಾ? ಎಲ್ಲರಿಗೂ ಹೀಗೇ ಮಾಡೋದು. ನಿಜವಾಗಿ ನೋಡಿದರೆ ತುಂಬಾ ಹೊತ್ತು ಆಗೋದೇ ಇಲ್ಲ. ಈಗ ನಿನಗೆ ನಾನೊಂದು ಇಂಜೆಕ್ಷನ್ ಕೊಡ್ತೇನೆ. ನಿನ್ನ ಕಣ್ಣಿಗೆ ಏನೂ ನೋವಾಗುವುದೇ ಇಲ್ಲ. ಎಲ್ಲ ಮರೆತುಹೋಗುತ್ತೆ!" ಎಂದು ತಿಳಿಸಿ ಹೇಳುತ್ತಲೇ ಇಂಜೆಕ್ಷನ್ ಚುಚ್ಚಿದಳು.

ಲೂ, ಡಾಕ್ಟರ್ ಅಷ್ಟೇ ಆಗಿರಲಿಲ್ಲ. ಕಿಂಡರ್ ಗಾರ್ಟನ್ ನರ್ಸ್, ತಾಯಿ ಎಲ್ಲಾ ಆಗಿದ್ದಳು. ಆದ್ದರಿಂದಲೇ ಮಕ್ಕಳನ್ನು ಹೇಗೆ ಯಾವ ಸಂದರ್ಭದಲ್ಲಿ ಸಮಾಧಾನಪಡಿಸಬೇಕು ಅನ್ನೋದು ಗೊತ್ತಿತ್ತು. ಮಗುವಿನ ಸಮಾಧಾನಕ್ಕಾಗಿ ಅವಳೊಂದಿಗೆ ಅದೂ ಇದೂ ಮಾತಾಡುತ್ತಲೇ ಜಿಯಾಂಗ್ ನೀಡುತ್ತಿದ್ದ ಕತ್ತರಿ, ಸೂಜಿ, ಚೂರಿ ಮುಂತಾದವುಗಳನ್ನು ತೆಗೆದುಕೊಳ್ಳುತ್ತಾ ತನ್ನ ಕೆಲಸವನ್ನು ಮುಂದುವರೆಸುತ್ತಿದ್ದಳು. ಮೆಳ್ಳೆಗೆ ಕಾರಣವಾದ ತಂತುವನ್ನು ಎಳೆದು ನೇರ ಮಾಡಿದಾಗ, ಷಿಯಾಗೆ ತಲೆ ಸುತ್ತಿದಂತೆ, ಓಕರಿಕೆ ಬಂದಂತಾಯಿತು.

"ನಿಂಗೊಂಥರಾ ಆಗ್ತಿದ್ದರೆ, ನೀಳವಾಗಿ ಉಸಿರೆಳೆದುಕೋ.... ಆಂ.... ಈಗ ಸರಿಯಾಯ್ತು.... ಇನ್ನೂ ಏನಾದರೂ ಆಗ್ತಿದೆಯೆ? ....ಇಲ್ಲ, ಸರಿಹೋಯ್ತಾ?.... ಇನ್ನೇನು ಮುಗಿತಾ ಬಂತು... ಆ... ಈಗ ಒಳ್ಳೇ ಹುಡುಗಿ!"

ಲೂ ಳ ಮಾತುಗಳು ಅವಳಿಗೆ ಮತ್ತು ಬರೆಸಿತು. ಆಪರೇಷನ್ ಮುಂದುವರೆಯಿತು. ಮುಗಿದ ಮೇಲೆ ಬ್ಯಾಂಡೇಜ್ ಹಾಕಿ ಸ್ಟ್ರೆಚರ್‌ನಲ್ಲಿ ವಾರ್ಡ್ ಕಡೆಗೆ ಕರೆದೊಯ್ದು. ಹೋಗುವಾಗ ಗುಂಗಿನಲ್ಲಿಯೇ, ತನಗೆ ಅಮ್ಮ ಹೇಳಿದ್ದ ಮಾತುಗಳು ನೆನಪಿಗೆ ಬಂದು– "ಆಂಟಿ ನಿಮಗೆ ನನ್ನ ಕೃತಜ್ಞತೆಗಳು"– ಎಂದು ಮುದ್ದಾಗಿ ಹೇಳಿದಳು.

ಅದನ್ನು ಕೇಳಿ ಎಲ್ಲರೂ ನಕ್ಕರು. ಅರ್ಧಗಂಟೆ ಕಳೆದಿತ್ತು. ಲೂ ಮೈಯೆಲ್ಲಾ ಬೆವರುತ್ತಿತ್ತು. ಹಣೆ, ಕಂಕುಳು, ಒಳಭಾಗವೆಲ್ಲಾ ಬೆವರಿನಿಂದ ತೋಯ್ದು ಹೋಗಿದ್ದವು. ಬೇಸಿಗೆಯ ಕಾಲವೇನೂ ಅಲ್ಲ. ಅವಳಿಗೆ ತನ್ನ ಸ್ಥಿತಿ ಕಂಡು ಆಶ್ಚರ್ಯವಾಗಿತ್ತು. ಒಂದೇ ಸಮನೆ ಮಾಡಿದ ಆಪರೇಷನ್‌ಗಳಿಂದಾಗಿ ಅವಳ ಬೆರಳುಗಳು ನೋಯುತ್ತಿದ್ದವು. ತೋಳುಗಳು ಜೋಮು ಹಿಡಿದಿದ್ದವು.

ತಾನು ಧರಿಸಿದ್ದ ಗೌನನ್ನು ಬಿಚ್ಚಿ ಮತ್ತೊಂದು ಗೌನ್ ಧರಿಸಬೇಕೆಂದುಕೊಂಡಾಗ, ಬವಳಿ ಬಂದಂತಾಯಿತು. ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡಳು. ಒಂದು ಸಲ ಮೈಕೊಡವಿ, ಗೌನಿನೊಳಕ್ಕೆ ಕೈಗಳನ್ನು ತೂರಿಸಿದಳು. ಹಿಂದೆ ಕಟ್ಟಲು ನರ್ಸೊಬ್ಬಳು ಓಡಿ ಬಂದಳು.

"ಡಾ॥ ಲೂ! ನಿಮ್ಮ ತುಟಿಗಳು ಇದೇನು ಇಷ್ಟೊಂದು ಬಣ್ಣಗೆಟ್ಟಿವೆ?" ಬಟ್ಟೆ ಬದಲಾಯಿಸುತ್ತಿದ್ದ ಜಿಯಾಂಗಳೂ ಲೂ ಕಡೆ ತಿರುಗಿ ನೋಡಿದಳು. "ಅಯ್ಯೋ ದೇವರೆ!" ಗಾಬರಿಯಿಂದ ಕಿರುಚಿದಳು. "ಎಷ್ಟೊಂದು ಬಿಳಿಚಿಕೊಂಡಿದ್ದೀಯಾ!"

ಲೂ ನಿಜವಾಗಿ, ನಿಸ್ತೇಜವಾಗಿ ಬಣ್ಣಗೆಟ್ಟಿದ್ದಳು. ಕಣ್ಣಿನ ಕೆಳಗೆ ಕಪ್ಪು ಉಂಗುರಗಳು ಮೂಡಿದ್ದವು. ಸ್ವತಃ ತಾನೇ ರೋಗಿಯಂತೆ ಕಂಡಳು!

ದಿಗ್ಭ್ರಮೆಗೊಂಡ ಜಿಯಾಂಗ್‌ಳ ಕಣ್ಣುಗಳು ಅವಳ ಮೇಲೆ ನೆಟ್ಟಿದ್ದವು. ಲೂ ಅಸಮಾಧಾನದಿಂದ ಹೇಳಿದಳು– "ಏನಾಗಿದೇಂತ ಇಷ್ಟೊಂದು ಗಲಾಟೆ ಮಾಡ್ತೀ? ಎಲ್ಲಾ ಸರಿಹೋಗುತ್ತೆ."

ಇನ್ನೊಂದು ಆಪರೇಷನ್ ಮುಗಿಸಬಲ್ಲೆನೆಂಬ ಭರವಸೆ ಅವಳಿಗಿತ್ತು. ಇಂತಹ ಭರವಸೆ ಇಲ್ಲದಿದ್ದರೆ, ಇಷ್ಟು ವರುಷಗಳು ಸಾವಿರಾರು ಆಪರೇಷನ್ ಮಾಡುವುದಕ್ಕೆ ಸಾಧ್ಯವಿರುತ್ತಿರಲಿಲ್ಲ.

"ನಾವು ಮುಂದುವರೆಸೋಣವೇ?" – ನರ್ಸ್ ಕೇಳಿದಳು.

"ಹೌದು ಖಂಡಿತವಾಗಿ."

ಆಪರೇಷನ್ ನಿಲ್ಲಿಸೋಕೆ ಸಾಧ್ಯವೇ ಇರಲಿಲ್ಲ. ದಾನಿಯ ಕಣ್ಣನ್ನು ತುಂಬಾ ಹೊತ್ತು ಇಡುವುದಾಗಲೀ ಆಪರೇಷನ್ ತಡಮಾಡುವುದಾಗಲೀ ಈ ಸಂದರ್ಭದಲ್ಲಿ ಆಗುವ ಹಾಗಿರಲಿಲ್ಲ. ಕೆಲಸ ಮುಂದುವರೆಯಲೇ ಬೇಕಾಗಿತ್ತು.

"ವೆಂಟಿಂಗ್" – ಜಿಯಾಂಗ್ ಮುಂದೆ ಬಂದು ಹೇಳಿದಳು "ಒಂದರ್ಧ ಗಂಟೆ ನಿಧಾನ ಮಾಡೋಣ."

ಲೂ ಗಡಿಯಾರ ನೋಡಿದಳು. ಆಗ ತಾನೇ ಹತ್ತು ದಾಟಿತ್ತು. ಅರ್ಧಗಂಟೆ ಮುಂದೂಡಿದರೆ ಕೆಲವು ಸಹೋದ್ಯೋಗಿಗಳಿಗೆ ತಡವಾಗುತ್ತೆ, ಮತ್ತೆ ಕೆಲವರು ಮನೆಗೆ ಹೋಗಿ ಅಡಿಗೆ ಮಾಡೋದಕ್ಕೆ ತೊಂದರೆಯಾಗುತ್ತೆ. ಮಕ್ಕಳಿಗೆ ಊಟಕ್ಕೆ ಹೊತ್ತಾಗಿ ಬಿಡುತ್ತೆ.

"ಮುಂದುವರೆಸೋಣವೇ?" – ನರ್ಸ್ ಮತ್ತೆ ಕೇಳಿದಳು.

"ಆಗಬಹುದು."

## ೧೫

ಲೂ ನಡೆಸುವ ಆಪರೇಷನ್‌ಗಳನ್ನು ನೋಡಲು, ಈ ಆಸ್ಪತ್ರೆ ಮತ್ತು ಬೇರೆ ಬೇರೆ ಕಡೆಗಳಿಂದ ಡಾಕ್ಟರುಗಳು ಬಂದು ಮುತ್ತಿಕೊಳ್ಳುತ್ತಿದ್ದರು. ಅವಳೊಂದಿಗೆ ಮಾತಾಡಲು, ಅವಳು ಆಪರೇಷನ್ ಮಾಡುವುದನ್ನು ನೋಡಲು ವಿಶೇಷವಾಗಿ ಪರ್ಮಿಷನ್ ಪಡೆದಿದ್ದರು.

ಅಂಕಲ್ ಜಾಂಗ್‌ರನ್ನು ನರ್ಸೊಬ್ಬಳು ನಿಧಾನವಾಗಿ ನಡೆಸಿಕೊಂಡು ಬಂದು ಆಪರೇಷನ್ ಟೇಬಲ್ ಹತ್ತಿಸಿದಳು. ಜಾಂಗ್ ಇನ್ನೂ ಮಾತಾಡುತ್ತಾ ನಗುತ್ತಲೇ ಇದ್ದ.

ಈ ಟೇಬಲ್ ಆತನಿಗೆ ಸಾಲದಾಗುತ್ತಿತ್ತು. ಆದ್ದರಿಂದ ಕೈಕಾಲುಗಳು ಟೇಬಲ್‌ನಿಂದ ಹೊರಗೆ ಜೋಲಾಡುತ್ತಿದ್ದವು. ಆತ ಗಡುಸಾದ ದನಿಯಲ್ಲಿ ತಡೆಯಿಲ್ಲದೆ ಮಾತಾಡುತ್ತಲೇ ಇದ್ದ. ನರ್ಸ್ ಜೊತೆಗೆ ವಿನೋದವಾಗಿ ಮಾತಾಡಿದ್ದು ಆಕೆಗೆ ನಗು ಬರಿಸಿತು– "ನನ್ನನ್ನು ನೋಡಿ ನಗಬೇಡ ಹುಡುಗಿ!" ಎಂದು ಮತ್ತೆ ನಕ್ಕ. "ಒಂದು ಸಲ ನಮ್ಮೂರಿಗೆ ಬಂದಿದ್ದ ವೈದ್ಯರ ತಂಡ, ನನ್ನನ್ನು ಆಪರೇಷನ್‌ಗೆ ಬಲವಂತ ಪಡಿಸದೆ ಇದ್ದಿದ್ದರೆ, ನಾನು ಸತ್ತಾದರೂ, ಸಾಯುತ್ತಿದ್ದನೇ ಹೊರತು ನಿಮ್ಮ ಚಾಕುವಿನಿಂದ ನನ್ನ ಕಣ್ಣನ್ನು ಕೊಯಿಸಿಕೊಳ್ಳುತ್ತಿರಲಿಲ್ಲ. ಅಬ್ಬ! ಉಕ್ಕಿನ ಚಾಕು ನನ್ನ ಕಣ್ಣೊಳಗೆ ಇಳಿದುಹೋಗುವುದು... ಉಹ್! ಇಷ್ಟೆಲ್ಲದರಿಂದ ನನ್ನ ಕಣ್ಣಿಗೆ ಒಳ್ಳೆದಾಗುತ್ತೋ, ಕೆಟ್ಟದಾಗುತ್ತೋ... ಯಾರಿಗೆ ಗೊತ್ತಿದೆ? ಅಹ್ಹಹ್ಹಹಾ".... ಎಂದು ನಕ್ಕ.

ಚಿಕ್ಕ ವಯಸ್ಸಿನ ನರ್ಸೊಬ್ಬಳು ಹಲ್ಲುಗಿಂಜುತ್ತಾ ಮೆದುವಾಗಿ ಹೇಳಿದಳು– "ಸ್ವಲ್ಪ ಮೆತ್ತಗೆ ಮಾತಾಡಿ."

"ಗೊತ್ತಮ್ಮಾ ಹುಡುಗಿ ಗೊತ್ತು. ಆಸ್ಪತ್ರೆಗಳಲ್ಲಿ ಹೀಗೆಲ್ಲಾ ಜೋರಾಗಿ ಮಾತಾಡಬಾರದು ಅಲ್ವಾ!" – ಒಂದು ಕೈಯಿಂದ ಏನನ್ನೋ ವಿವರಿಸುವಂತೆ, "ನಿನಗೆ ಗೊತ್ತಿಲ್ಲ ನನ್ನ

ಕಣ್ಣು ವಾಸಿ ಮಾಡೋಕೆ ಆಗುತ್ತೇಂತ ತಿಳಿದಾಗ ನನಗೆ ಹೇಗಾಯ್ತು ಅಂತ ನೀನು ಊಹಿಸಿಕೊಳ್ಳಲಾರೆ. ನನಗೆ ನಗಬೇಕು ಅಂತ ಅನಿಸುವುದರ ಜೊತೆಗೆ ಅಳಲೂ ಬೇಕೆನಿಸಿತು. ನನ್ನ ತಂದೆಗೆ ವಯಸ್ಸಾಗಿದ್ದಾಗ ಕಣ್ಣು ಹೋಯಿತು. ಕುರುಡನಾಗೇ ಸತ್ತ. ನನ್ನಂಥ ಕುರುಡ ಎಂದಾದರೂ ಹೊಳೆಯುವ ಸೂರ್ಯನನ್ನು ನೋಡುತ್ತಾನೆಯೇ? ಎನಿಸಿತ್ತು. ಕಾಲ ಬದಲಾವಣೆಯಾಗಿದೆ... ಏನಂತೀಯಾ?"

ನರ್ಸ್ ಕಿಸಿ ಕಿಸಿ ನಕ್ಕಳು. ನಗುತ್ತಲೇ ಟವೆಲಿನಿಂದ ಆತನ ಮುಖವನ್ನು ಮುಚ್ಚಿದಳು. "ಮತ್ತೆ ಕದಲಬೇಡಿ ಅಂಕಲ್!.... ಟವೆಲನ್ನು ಚೆನ್ನಾಗಿ ಸ್ಟೆರಲೈಜ್ ಮಾಡಿದೆ. ಅದನ್ನು ಮುಟ್ಟಬೇಡಿ"– ಎಂದಳು ನರ್ಸ್.

"ಆಯ್ತಾಯ್ತು" ಗಂಭೀರವಾಗಿ ಹೇಳಿದ – "ಆಸ್ಪತ್ರೇಲಿದ್ದ ಮೇಲೆ ಹೇಳಿದ್ದಕ್ಕೆಲ್ಲ ವಿಧೇಯನಾಗಿರಬೇಕು."

ಆದರೆ ಮತ್ತೆ ತನ್ನ ತೋಳುಗಳನ್ನೆತ್ತಲು ಪ್ರಯತ್ನಿಸುತ್ತಿದ್ದ. ಚಲಿಸುವ ಪ್ರಯತ್ನದಲ್ಲಿದ್ದ ಆತನನ್ನು ನೋಡಿದ ನರ್ಸ್ ಹೇಳಿದಳು – "ಹೀಗೆ ನೀವು ಮಿಸುಕಾಡುತ್ತಿದ್ದರೆ, ಈ ಪಟ್ಟಿಗಳಿಂದ ನಿಮ್ಮನ್ನು ಟೇಬಲ್‌ಗೆ ಕಟ್ಟಿಹಾಕಬೇಕಾಗುತ್ತೆ. ಇಲ್ಲಿನ ನಿಯಮ ಅದೇ. ಗೊತ್ತೇನು?"

ಜಾಂಗ್ ತಬ್ಬಿಬ್ಬಾದ. ಆಮೇಲೆ ಚೇತರಿಸಿಕೊಂಡ. "ನನ್ನ ಮಾತಿನಲ್ಲಿ ನಂಬಿಕೆ ಇರಲಿ ಹುಡುಗಿ! ಈಗ ನೀವು ಏನು ಬೇಕೋ ಮಾಡಿ. ಸ್ಪಷ್ಟವಾಗಿ ಹೇಳಬೇಕೆಂದರೆ, ನನ್ನ ಕಣ್ಣಿಗಾಗಿ ನಾನು ಇಷ್ಟೊಂದು ವಿಧೇಯನಾಗುತ್ತಿದ್ದೇನೆ. ಬೇರೇನಾದರೂ ಆಗಿದ್ದರೆ ಅದರ ಮಾತೇ ಬೇರೆ. ನಾನು ಕುರುಡನಾಗಿದ್ದರೂ ದಿನಕ್ಕೆ ಎರಡು ಸಲ ಗದ್ದೆ ಕಡೆ ಹೋಗಿಬರುತ್ತೇನೆ. ನಾನಂತೂ ಬಹಳ ಉತ್ಸಾಹಿ.... ಹುಟ್ಟಿದಾಗಿನಿಂದ! ಏನಾದರೂ ಮಾಡುತ್ತಲೇ ಇರಬೇಕು.... ಸುಮ್ಮನೆ ಕುಳಿತುಕೊಳ್ಳೋದೂಂದ್ರೇನೇ ಆಗೋದಿಲ್ಲ.

ಆತನ ಈ ಮಾತುಗಳನ್ನು ಕೇಳಿ ನರ್ಸ್‌ಗೆ ಮತ್ತೆ ನಗುಬಂತು. ಆತನಿಗೂ ಕಚಗುಳಿ ಇಟ್ಟಂತಾಯಿತು. ಲೂ ಬಂದದ್ದೇ ತಕ್ಷಣ ಸುಮ್ಮನಾದ. ಕಿವಿ ನಿಮಿರಿಸಿ ಕೇಳಿದ– "ನೀವೇನಾ ಡಾ॥ ಲೂ? ನಿಮ್ಮ ಹೆಜ್ಜೆಗಳಿಂದಲೇ ನಾನು ಗುರುತಿಸಬಲ್ಲೆ.... ತಮಾಷೆ ನೋಡಿ! ನಾನು ಕಣ್ಣು ಕಳೆದುಕೊಂಡಾಗಿನಿಂದ ನನ್ನ ಕಿವಿಗಳು ಬಹಳ ಚುರುಕಾಗಿಬಿಟ್ಟಿವೆ!"

ಆತ ತುಂಬ ಹುರುಪಿನಿಂದ ಇರುವುದನ್ನು ನೋಡಿದಾಗ, ಲೂಗೆ ನಗದೆ ವಿಧಿಯಿರಲಿಲ್ಲ. ಆಪರೇಷನ್ ಸಿದ್ಧತೆ ಮಾಡಿಕೊಳ್ಳುತ್ತಾ ತನ್ನ ಜಾಗದಲ್ಲಿ ಕುಳಿತಳು. ದಾನಿ ನೀಡಿದ್ದ ಕಾರ್ನಿಯಾವನ್ನು ಫಿಯಲ್ ಒಳಗಿಂದ ತೆಗೆದು ಒಂದು ತುಂಡು ಜಾಲರಿಗೆ ಹೊಲಿದಳು. ಜಾಂಗ್ ಮತ್ತೆ ನಿಮಿರಿ ಕುಳಿತು ಕೇಳಿದ–

"ಹುಂ! ಹಾಗಾದರೆ ಕಣ್ಣಿಗೆ ಬದಲಾಗಿ ಕಣ್ಣು ಹೊಂದಿಸಬಹುದು! ನನಗಿದು ಗೊತ್ತೇ ಇರಲಿಲ್ಲ."

"ಕಣ್ಣನ್ನೇ ತಂದು ಇಡೋದಲ್ಲ. ಕಣ್ಣಿನ ಮೇಲಿನ ಪದರವನ್ನು ಮಾತ್ರ"– ಜಿಯಾಂಗ್ ಆತನನ್ನು ತಿದ್ದಿದಳು.

"ನನಗೇನೂ ಅದರಲ್ಲಿ ವ್ಯತ್ಯಾಸ ಕಾಣೋಲ್ಲ." ಆತನಿಗೆ ವಿವರಗಳು ಬೇಕಿರಲಿಲ್ಲ. ನಿಡಿದಾಗಿ ಉಸಿರುಬಿಡುತ್ತಾ ಮುಂದುವರೆಸಿದ, – "ತುಂಬಾ ಜಾಣ್ಮೆ ಬೇಕಾಗುತ್ತೆ ಅಲ್ವಾ?.... ನಾನು ಎರಡು ಕಣ್ಣುಗಳನ್ನು ನೋಡಿದಾಗ, ಅವರೆಲ್ಲಾ ಹೇಳ್ತಾರೆ, – ನಾನು ಯಾರೋ ಒಬ್ಬ ದೇವತೆಯನ್ನು ಕಂಡಿರಬೇಕು– ಅಂತ. ಅಹ್ಹ ಹ್ಹಾ! ಹ್ಹಾ!.... ಆಗ ಅವರಿಗೆ ಹೇಳ್ತೀನಿ. ದೇವತೆಯನ್ನಲ್ಲ, ನಾನು ಡಾ॥ ಲೂ ಅವರನ್ನು ಕಂಡಿದ್ದು ಅಂತ.

ಜಿಯಾಂಗ್ ಒಳಗೊಳಗೇ ನಗುತ್ತಾ, ಲೂಳತ್ತ ಕಣ್ಣು ಹೊಡೆದಳು. ಲೂಗೆ ಸಂಕೋಚವೆನಿಸಿತು. ಇನ್ನೂ ಹೊಲಿಗೆ ಹಾಕುತ್ತಲೇ ವಿವರಿಸಿದಳು– "ಎಲ್ಲಾ ಡಾಕ್ಟರುಗಳು ಮಾಡೋದನ್ನೇ ನಾನು ಮಾಡಿರುವುದು."

"ಅದೇನೋ ಸರಿ. ಈ ದೊಡ್ಡ ಆಸ್ಪತ್ರೇಲಿ ಇರುವವರೆಲ್ಲ ಒಳ್ಳೇ ಡಾಕ್ಟರುಗಳೇ!.... ತಮಾಷೆ ಮಾಡ್ತಿಲ್ಲ!" – ಎಂದು ಜಿಯಾಂಗ್.

ಲೂಳ ಸಿದ್ಧತೆಗಳು ಮುಗಿದವು. ಆತನ ಕಣ್ಣು ರೆಪ್ಪೆಗಳನ್ನು ಬಿಡಿಸಿದಳು – "ಈಗ ನಾವು ಶುರು ಮಾಡ್ತೇವೆ. ಸ್ವಲ್ಪ ಶಾಂತವಾಗಿರಿ."

ಜಾಂಗ್ ಬೇರೆ, ಎಲ್ಲ ರೋಗಿಗಳ ಹಾಗಲ್ಲ. ಡಾಕ್ಟರುಗಳು ಹೇಳಿದ್ದನ್ನು ತಪ್ಪದೆ ಕೇಳುತ್ತಿದ್ದ. ಪ್ರತಿಯಾಗಿ ಮಾತನಾಡೋದು ಉದ್ಧಟತನವಾಗುತ್ತೇಂತ ಆತ ಭಾವಿಸಿದ್ದ. ಅದಕ್ಕೆಂದೇ ವಿನಯವಾಗಿ ಹೇಳಿದ– ನಾನೀಗ ಸರಿಯಾಗಿದ್ದೇನೆ. ನೀವು ನಿಮ್ಮ ಕೆಲಸ ಮಾಡಿ. ನೋವಾದರೂ ಚಿಂತೆಯಿಲ್ಲ. ಚೂರಿ, ಚಾಕು ತಗುಲಿದರೆ ನೋವಾಗುವುದಂತೂ ಆಗುತ್ತೆ. ಆದರೆ ಅದರ ಬಗ್ಗೆ ನೀವೇನೂ ಯೋಚನೆ ಮಾಡಬೇಡಿ. ನಾನು ಸಹಿಸಿಕೊಳ್ಳಬಲ್ಲೆ. ನನಗೆ ನಿಮ್ಮಲ್ಲಿ ವಿಶ್ವಾಸ ಇದೆ.... ಅಲ್ಲದೆ...."

ಜಿಯಾಂಗ್ ನಗುತ್ತಾ ಮತ್ತೆ ಅವನನ್ನು ತಡೆದಳು. "ಅಂಕಲ್ ತುಂಬಾ ಮಾತಾಡಬಾರದು. ಇನ್ನು ಸಾಕು ಮಾಡಿ.

ಕೊನೆಗೆ ಆತ ಒಪ್ಪಿಕೊಂಡ.

ಲೂ ಟ್ರೆಫೀನನ್ನು (ಪೆನ್ ಕ್ಯಾಪಿನಷ್ಟು ಚಿಕ್ಕದಾಗಿರುವ) ಕೈಗೆತ್ತಿಕೊಂಡು ಅಪಾರ ದರ್ಶಕವಾಗಿ ನಿಷ್ಪ್ರಯೋಜಕವಾದ ಕಾರ್ನಿಯಾವನ್ನು ಕತ್ತರಿಸಿ ತೆಗೆದಳು. ದಾನಿಯ ಕಣ್ಣಿನ ಸ್ವಚ್ಛವಾದ ಕಾರ್ನಿಯಾವನ್ನು ಬಿಡಿಸಿ ತೆಗೆದು ಜಾಂಗ್‌ರ ಕಣ್ಣಿಗೆ ರವಾನಿಸಿದಳು. ತಕ್ಷಣ ಅತ್ಯಂತ ಸೂಕ್ಷ್ಮವಾದ ಹೊಲಿಗೆಯನ್ನು ಹಾಕತೊಡಗಿದಳು. ಕೂದಲಿಗಿಂತಲೂ ಸೂಕ್ಷ್ಮವಾಗಿತ್ತು ಹೊಲಿಗೆ!

ತುಂಬಾ ಯಶಸ್ವಿಯಾಗಿಯೇ ನಡೆಯಿತು ಆಪರೇಷನ್. ಅಲ್ಲಲ್ಲಿ ಕಾಣುತ್ತಿದ್ದ ಪುಟ್ಟ ಪುಟ್ಟ ಗಂಟುಗಳ ಹೊರತಾಗಿ ಮತ್ತೇನೂ ಕಾಣುತ್ತಿರಲಿಲ್ಲ. ಅಷ್ಟೊಂದು ನಾಜೂಕಾಗಿ ಕಾರ್ನಿಯಾ ಟ್ರಾನ್ಸ್‌ಪ್ಲಾಂಟ್ ನಡೆದಿತ್ತು. ಸುತ್ತಲೂ ನಿಂತಿದ್ದ ಡಾಕ್ಟರುಗಳೆಲ್ಲ ಮೆಚ್ಚುಗೆಯ ದನಿಯಲ್ಲಿ ಹೇಳಿದರು– "ತುಂಬಾ ಚೆನ್ನಾಗಿ ಮಾಡಿದ್ದೀರಿ?"

ಇದರಿಂದ ಲೂಗೆ ಹೃದಯ ತುಂಬಿ ಬಂದು ದೀರ್ಘವಾಗಿ ಉಸಿರೆಳೆದಳು. ಜಿಯಾಂಗ್ ತನ್ನ ಗೆಳತಿಯನ್ನು ಮೆಚ್ಚುಗೆಯಿಂದ ನೋಡಿದಳು. ಆದರೆ ಮಾತಿಲ್ಲ. ಮೌನವಾಗಿ ಜಾಂಗ್‌ರ ಕಣ್ಣಿನಮೇಲೆ ಪದರ ಪದರವಾಗಿ ಜಾಲರಿ ಬಟ್ಟೆಯನ್ನು ಹಾಕಿ ಮುಚ್ಚಿದಳು....

ಆತನನ್ನು ಹೊರಗೆ ಕರೆದೊಯ್ಯುತ್ತಿದ್ದಾಗ, ಕನಸಿನೊಳಗಿಂದ ಎದ್ದಂತೆ ಎದ್ದ. ಸ್ವಲ್ಪ ಉದ್ವಿಗ್ನತೆ, ಚಲನೆಗಳು ಕಂಡವು. ಪೂರ್ತಿಯಾಗಿ ಸ್ಟ್ರೆಚರ್ ಹೊರಗೆ ಬಂದಾಗ, ಕಿರುಚಿಕೊಂಡ– "ಧನ್ಯವಾದಗಳು, ಡಾ॥ ಲೂ!!" ಆಪರೇಷನ್‌ಗಳು ಮುಗಿದಿದ್ದವು. ಲೂ ಬಲವಂತವಾಗಿ ಕಾಲೆಳೆದುಕೊಂಡು ನಡೆಯುತ್ತಿದ್ದಳು. ಕಾಲುಗಳಲ್ಲಿ ತ್ರಾಣವಿದ್ದಂತಿರಲಿಲ್ಲ. ನಿಲ್ಲುವುದಕ್ಕೂ ಆಗಲಿಲ್ಲ. ಒಂದು ಸ್ವಲ್ಪಹೊತ್ತು ಕುಳಿತಿದ್ದು ಮತ್ತೆ ಪ್ರಯತ್ನಿಸಿದಳು.... ಪಕ್ಕೆಗಳಲ್ಲಿ ನೋವು ಕಾಣಿಸಿಕೊಂಡಿತು. ತನ್ನ ಕೈಗಳಿಂದ ಒತ್ತಿ ಹಿಡಿದಳು. ಇದಕ್ಕೂ ಮೊದಲು ಒಮ್ಮೆ ಈ ರೀತಿ ನೋವು ಬಂದಿತ್ತಾದ್ದರಿಂದ, ಇದನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಗಂಟೆಗಟ್ಟಲೆ ಒಂದೇ ಸಮನೆ ಆಪರೇಷನ್ ಸ್ಟೂಲಿನ ಮೇಲೆ ಕುಳಿತಿದ್ದುದರಿಂದ, ಹೀಗಾಗಿರಬಹುದು. ತನ್ನ ಕೆಲಸದಲ್ಲಿ ತುಂಬ ಮಗ್ನಳಾಗಿದ್ದುದರಿಂದ ಮೊದಲು ಗೊತ್ತಾಗಲಿಲ್ಲ. ಆಗ ಆಪರೇಷನ್‌ಗಳು ಮುಗಿದಿದ್ದವು. ತುಂಬಾ ದಣಿದು ಹೋಗಿದ್ದಳು. ದಣಿವು, ನೋವುಗಳು ಒಂದೊಂದಾಗಿ ಅನುಭವಕ್ಕೆ ಬರುತ್ತಿವೆ.

## ೧೬

ಆ ಹೊತ್ತಿನಲ್ಲಿ ಫೂ ಮನೆ ಕಡೆ ಸೈಕಲ್ ತುಳಿಯುತ್ತಿದ್ದ. ಆ ದಿವಸ ಮನೆಗೆ ಬರಬೇಕು ಅನ್ನೋ ಉದ್ದೇಶ ಇರಲಿಲ್ಲ. ಆದಿನ ಬೆಳಿಗ್ಗೇನೆ, ಹೆಂಡತಿಯ ಮಾತಿನಂತೆ, ಹಾಸಿಗೆ ಬಟ್ಟೆ ಎಲ್ಲಾ ಸುತ್ತಿಕೊಂಡು ಸೈಕಲ್ ಮೇಲೆ ಅದನ್ನು ಆಫೀಸಿಗೆ ಒಯ್ದಿದ್ದ, ಹೊಸ ಬದುಕಿನ ನಿರೀಕ್ಷೆಯಲ್ಲಿ!

ಅದೇಕೋ ಏನೋ ಮಧ್ಯಾಹ್ನದ ಹೊತ್ತಿಗೆ, ಅವನ ನಿರ್ಧಾರ ಸಡಿಲವಾದಂತೆನಿಸಿತು. ಲೂ ಆಪರೇಷನ್‌ಗಳನ್ನು ಸಮಯಕ್ಕೆ ಸರಿಯಾಗಿ ಮುಗಿಸಬಲ್ಲಳೇ?... ದಣಿದು ಉಸ್ಸೆಂದು ಕಾಲೆಳೆದುಕೊಂಡು ಬಂದು ಮಕ್ಕಳಿಗಾಗಿ ಊಟದ ಸಿದ್ಧತೆಗೆ ತೊಡಗುತ್ತಿರುವ ಲೂ ಳ ಚಿತ್ರ ಕಣ್ಮುಂದೆ ಬಂದಾಗ ಅವನಿಗೆ ನೋವೆನಿಸಿತು; ಅಪರಾಧಿ ಎನಿಸಿತು. ತತ್‌ಕ್ಷಣವೇ ಸೈಕಲ್ ಮೇಲೆ ಜಿಗಿದು ಕುಳಿತು ಮನೆಯ ಕಡೆ ಪೆಡಲ್ ಮಾಡತೊಡಗಿದ.

ಗಲ್ಲಿಯೊಳಕ್ಕೆ ತಿರುಗಿದ್ದೇ, ಹೆಜ್ಜೆ ಹಾಕಲೂ ಆಗದೆ ಅಲ್ಲಿಯೇ ಗೋಡೆಯೊಂದಕ್ಕೆ ಒರಗಿ ನಿಂತಿದ್ದ ತನ್ನ ಹೆಂಡತಿಯನ್ನು ನೋಡಿದ.

"ವೆಂಟಿಂಗ್? ಏನಾಗಿದೆಯೇ?" ಸೈಕಲ್ ಮೇಲಿಂದ ಹೌಹಾರಿ ಜಿಗಿದು ಅವಳ ಸಹಾಯಕ್ಕೆ ಬಂದ.

"ಏನಿಲ್ಲ, ಸ್ವಲ್ಪ ಸುಸ್ತಾಗಿದೆ, ಅಷ್ಟೆ." ಹಾಗೆಯೇ ಲೂ ತನ್ನೆರಡು ಕೈಗಳನ್ನು ಅವನ ಭುಜದ ಮೇಲೆ ಹಾಕಿ, ಅವನೊಂದಿಗೆ ಹೆಜ್ಜೆ ಹಾಕುತ್ತಾ ಮನೆಯ ಕಡೆ ನಡೆದಳು.

ತನ್ನ ಹೆಂಡತಿ ಕಡೆ ನೋಡಿದ. ಬಿಳಚಿಕೊಂಡಿದ್ದಳು. ಅವಳ ಹಣೆಯ ಮೇಲೆಲ್ಲ ಬೆವರಿನ ಹನಿಗಳು ಕಾಣಿಸಿಕೊಂಡಿದ್ದವು.

ತುಂಬ ಕಷ್ಟದಿಂದ ಹೇಳಿದ – "ಆಸ್ಪತ್ರೆಗೆ ನಿನ್ನನ್ನು ಕರೆದುಕೊಂಡು ಹೋಗಲೇ?"

ಹಾಸಿಗೆಯ ತುದಿಯಲ್ಲಿ ಕುಳಿತುಕೊಳ್ಳುತ್ತಾ, ಕಣ್ಣು ಮುಚ್ಚಿಕೊಂಡೇ ಹೇಳಿದಳು– "ನೀನೇನೂ ಚಿಂತೆ ಮಾಡಬೇಡ. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡರೆ ಎಲ್ಲಾ ಸರಿ ಹೋಗುತ್ತೆ." ಹಾಸಿಗೆಯ ಕಡೆ ಸನ್ನೆ ಮಾಡಿದಳು. ಏನು ಹೇಳುವುದಕ್ಕೂ ತ್ರಾಣವಿರಲಿಲ್ಲ. ಘೂ ಅವಳ ಕೋಟನ್ನು ಬಿಚ್ಚಿದ. ಕಾಲಿನ ಷೂಗಳನ್ನು ಕಳಚಿದ.

"ಮಲಗಿ ನಿದ್ರೆ ಮಾಡು. ನಿನ್ನನ್ನು ಆಮೇಲೆ ನಾನೇ ಎಬ್ಬಿಸುತ್ತೇನೆ." ಸಾಸ್ ಪ್ಯಾನ್‌ನಲ್ಲಿ ಸ್ವಲ್ಪ ನೀರನ್ನು ಕುಡಿಸಲು ಹೋದ. ಒಂದಷ್ಟು ಶಾವಿಗೆಯನ್ನು ತೆಗೆದುಕೊಂಡು ಹೋಗಲು ಬಂದವನು, ಅವಳು ಬಡಬಡಿಸುತ್ತಿದ್ದುದನ್ನು ಕೇಳಿದ. "ನಮಗೆ ವಿಶ್ರಾಂತಿ ಬೇಕು. ಮುಂದಿನವಾರ ನಮ್ಮ ಮಕ್ಕಳನ್ನು ಬೀಡೈ ಪಾರ್ಕಿಗೆ ಕರೆದುಕೊಂಡು ಹೋಗೋಣವೇ? ಅಲ್ಲಿಗೆ ಹೋಗಿ ವರ್ಷಾನುಗಟ್ಟಲೆ ಆಗಿಹೋಯಿತು."

"ಹಾಗೇ ಆಗಲಿ, ನಾನೇನೋ ರೆಡಿ" – ಘೂ ಒಪ್ಪಿದ. ಅವಳಿಗೇಕೆ ಇದ್ದಕ್ಕಿದ್ದ ಹಾಗೆ ಇಂತಹ ಬಯಕೆ?

ಕಾತರದ ಕಣ್ಣುಗಳಿಂದ ಅವಳ ಕಡೆ ನೋಡಿ, ಶಾವಿಗೆ ಕುದಿಸಲು ಒಳಗೆ ನಡೆದ. ಕೈಲಿ ತಿಂಡಿ ಹಿಡಿದು ಬಂದು ನೋಡುವಷ್ಟರಲ್ಲಿ ಚೆನ್ನಾಗಿ ನಿದ್ರೆ ಮಾಡಿಬಿಟ್ಟಿದ್ದಳು. ಅವಳನ್ನು ಎಬ್ಬಿಸುವುದು ಬೇಡವೆನಿಸಿ ಸುಮ್ಮನಾದ. ಯುಯಾನ್ ಬಂದ ಮೇಲೆ ಇಬ್ಬರೂ ಒಟ್ಟಿಗೆ ಕುಳಿತು ತಿಂದರು. ಆಗ ತಾನೇ ಲೂ ಸ್ವಲ್ಪ ನರಳುವುದಕ್ಕೆ ಶುರು ಮಾಡಿದಳು. ಘೂ ಕೈಲಿ ಹಿಡಿದಿದ್ದ ಪಾತ್ರೆನ ಕೆಳಗಿರಿಸಿ ಹಾಸಿಗೆಯ ಬಳಿಗೆ ಓಡಿದ. ಲೂಳ ಮುಖ ಹಿಂಡಿ ಹೋಗಿತ್ತು. ಅಡಿಯಿಂದ ಮುಡಿವರಿಗೆ ಬೆವತುಬಿಟ್ಟಿದ್ದಳು.

"ಇನ್ನು ನನ್ನ ಕೈಲಿ ಆಗೋಲ್ಲ" ದನಿ ಕ್ಷೀಣವಾಗಿತ್ತು. ಉಸಿರಾಡುವುದಕ್ಕೆ ಕಷ್ಟ ಪಡುತ್ತಿದ್ದಳು.

ಹೆದರಿದ ಫೂ ಅವಳ ಕೈಗಳನ್ನು ತೆಗೆದುಕೊಂಡು ಕೇಳಿದ– "ಏನಾಗುತ್ತಿದೆ ವೆಂಟಿಂಗ್? ನೋವೇನಾದರೂ?"

ತುಂಬ ಕಷ್ಟಪಟ್ಟುಕೊಂಡು, ಎದೆಯ ಕಡೆ ಸನ್ನೆ ಮಾಡಿದಳು. ಗಾಬರಿಗೊಂಡು ಫೂ ಡ್ರಾಯರ್ ಎಳೆದು ನೋವನ್ನು ತಡೆಯುವಂತಹ ಮಾತ್ರೆಗಳಿಗಾಗಿ ಹುಡುಕಾಡಿದ. ಅವಳಿಗೇನಾದರೂ ಉಪಶಮನ ಮಾತ್ರೆಗಳು ಬೇಕಾಗಬಹುದೇನೋ ಎಂತಲೂ ಯೋಚಿಸಿದ.

ವಿಪರೀತ ನೋವಾಗುತ್ತಿದ್ದರೂ, ಲೂ ಬುದ್ಧಿ ನೆಟ್ಟಗಿತ್ತು. ಸಾವಧಾನವಾಗಿ ಇರುವಂತೆ ಸನ್ನೆಯಿಂದ ಹೇಳಿದಳು. ಅಲ್ಪ ಸ್ವಲ್ಪ ಶಕ್ತಿಯನ್ನೆಲ್ಲ ಸಂಚಯಿಸಿ ಹೇಳಿದಳು– "ಆಸ್ಪತ್ರೆಗೆ ಹೋಗಬೇಕಾಗಿದೆ ನನಗೆ!"

ಅವಳ ಖಾಯಿಲೆಯ ಗಂಭೀರತೆ, ಆಗ ಫೂಗೆ ಸ್ಪಷ್ಟವಾಯಿತು. ಹತ್ತು ವರುಷಗಳಿಗೂ ಮೇಲ್ಪಟ್ಟು ಆಸ್ಪತ್ರೆಗೆ ಹೋಗುತ್ತಿದ್ದಾಳೆಯೇ ಹೊರತು, ಎಂದೂ ತನಗಾಗಿ ಡಾಕ್ಟರನ್ನು ಕಂಡವಳಲ್ಲ. ಈಗ ತೀರಾ ಅಸ್ವಸ್ಥಳಾಗಿದ್ದಾಳೆ. ಆತುರವಾಗಿ ಹೊರಗೆ ಹೊರಟವನು ಬಾಗಿಲ ಬಳಿ ನಿಂತು ಹಿಂತಿರುಗಿ ನೋಡಿ ಹೇಳಿದ– "ಹೋಗಿ ನಾನು ಟ್ಯಾಕ್ಸಿ ತರ್ತೇನೆ."

ಮೂಲೆಯಲ್ಲಿದ್ದ ಪಬ್ಲಿಕ್ ಟೆಲಿಫೋನ್ ಬಳಿಗೆ ಓಡಿದ. ಡಯಲ್ ಮಾಡಿ ಸ್ವಲ್ಪ ಹೊತ್ತು ಕಾದ. ಆ ಕಡೆಯಿಂದ ನಿರ್ಭಾವದ ದನಿ ಕೇಳಿಬಂತು– "ಸದ್ಯಕ್ಕೆ ಟ್ಯಾಕ್ಸಿಗಳು ಸಿಗುವುದಿಲ್ಲ."

"ನೋಡಿ ತುಂಬಾ ಖಾಯಿಲೆಯ ವ್ಯಕ್ತಿಯೊಬ್ಬರಿದ್ದಾರೆ."

"ಆದರೂ ನೀವು ಅರ್ಧಗಂಟೇನಾದರೂ ಕಾಯಬೇಕು." ಫೂ ಎಷ್ಟೋ ಬೇಡಿಕೊಂಡ – ಆ ಕಡೆಯ ದನಿಗೆ.

ಲೂಳ ಆಸ್ಪತ್ರೆಗೆ ಫೋನ್ ಮಾಡಿ ಪ್ರಯತ್ನಿಸಿದ. ಕಣ್ಣಿನ ವಿಭಾಗದಲ್ಲಿ ಯಾರೂ ಇದ್ದಂತೆ ಇರಲಿಲ್ಲ. ಟೆಲಿಫೋನ್ ಆಪರೇಟರ್‌ಗೆ, ವಾಹನ ಕಳಿಸುವ ವಿಭಾಗಕ್ಕೆ ಕನೆಕ್ಷನ್ ಕೊಡುವ ಹಾಗೆ ಕೇಳಿದ.

"ಪರವಾನಗಿ ಚೀಟಿಯಿಲ್ಲದೆ, ನಾವು ಕಳಿಸುವ ಹಾಗಿಲ್ಲ" – ಎಂದು ಅಲ್ಲಿಂದಲೂ ಉತ್ತರ ಬಂತು.

"ಹಲೋ! ತುಂಬಾ ಅರ್ಜೆಂಟಾಗಿದೆ"– ರಿಸೀವರೊಳಗೆ ಅಬ್ಬರಿಸಿ ಹೇಳಿದ. ಆದರೆ ಅಷ್ಟರಲ್ಲಿ ಫೋನ್ ನಿಂತುಹೋಗಿತ್ತು.

ಪೊಲಿಟಿಕಲ್ ಡಿಪಾರ್ಟ್‌ಮೆಂಟಿಗೆ ಫೋನ್ ಮಾಡಿದರೆ, ಖಂಡಿತ ಸಹಾಯ ಸಿಗಬಹುದೂಂತ ಪ್ರಯತ್ನಿಸಿದ. ತುಂಬಾ ಹೊತ್ತಾದ ಮೇಲೆ ಹೆಂಗಸೊಬ್ಬಳು ರಿಸೀವರನ್ನು

ಕೈಗೆತ್ತಿಕೊಂಡಳು. ಸಮಾಧಾನವಾಗಿ ಎಲ್ಲವನ್ನೂ ಕೇಳಿಸಿಕೊಂಡಳು. ವಿನಯದಿಂದ ಹೇಳಿದಳು – "ದಯವಿಟ್ಟು ಅಡ್‌ಮಿನಿಸ್ಟ್ರೇಷನ್ ಆಫೀಸಿಗೆ ಫೋನ್ ಮಾಡಿ ನೋಡಿ.

ಆಪರೇಟರನ್ನು ಹಾಗೆಯೇ ಕೇಳಿಕೊಂಡ. ಆತನ ಧ್ವನಿಯನ್ನು ಗುರುತಿಸಿದ ಆಪರೇಟರ್ ಅಸಮಾಧಾನಗೊಂಡು, ಕಿರುಚಿದ– "ಎಲ್ಲಿಗೆ ಬೇಕೋ ಸರಿಯಾಗಿ ಹೇಳ್ರೀ!"

"ಎಲ್ಲಿಗೆ?" ಅವನಿಗೇ ಎಲ್ಲಿಗೆಂದು ಗೊತ್ತಿರಲಿಲ್ಲ. ಪ್ರಾರ್ಥಿಸುವ ದನಿಯಲ್ಲಿ ಹೇಳಿದ– "ಅಡ್‌ಮಿನಿಸ್ಟ್ರೇಷನ್ ವಿಭಾಗದಲ್ಲಿ ಯಾರಿದ್ದರೂ ಸರಿ, ಅವರಿಗೇ ಕೊಡಿ. ಫೋನ್ ಗಂಟೆ ಬಾರಿಸುತ್ತಿತ್ತೇ ಹೊರತು, ಎತ್ತಿಕೊಳ್ಳುವವರು ಯಾರೂ ಇರಲಿಲ್ಲ.

ನಿರಾಶೆಗೊಂಡ ಫೂ, ಕಾರು ಟ್ಯಾಕ್ಸ್ ವಿಚಾರವನ್ನೇ ಬಿಟ್ಟುಬಿಟ್ಟ. ಹತ್ತಿರದ ಸಣ್ಣ ವರ್ಕ್‌ಷಾಪಿಗೆ ಹೋದ, ಅವರಿಂದ ಟ್ರೈಸಿಕಲ್ ಮತ್ತು ಟ್ರೈಲರನ್ನು ಬೇಡಿ ತೆಗೆದುಕೊಳ್ಳುವ ಆಸೆಯಿಂದ. ಅದರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಹೆಂಗಸು, ಫೂನ ಕರುಣಾಜನಕ ಕತೆಯನ್ನು ಕೇಳಿ, ಸಹಾನುಭೂತಿ ತೋರಿಸಿದಳಾದರೂ, ಸದ್ಯಕ್ಕೆ ಟ್ರೈಸಿಕಲ್ಲು ಕೆಲಸದ ಮೇಲೆ ಹೋಗಿದ್ದುದರಿಂದ, ಯಾವ ಸಹಾಯವನ್ನೂ ಮಾಡಲಿಲ್ಲ.

ಬೀದಿಯಲ್ಲಿ ಅಸಹಾಯಕನಾಗಿ ನಿಂತ ಫೂ ಈಗ ಏನು ಮಾಡಬೇಕೆಂದು ಯೋಚಿಸಿದ. ಬೈಸಿಕಲ್ ಕ್ಯಾರಿಯರ್ ಮೇಲೆ ಲೂ ಳನ್ನು ಒಯ್ಯುವುದು ಹೇಗೆ? ಖಂಡಿತ ಸಾಧ್ಯವಿಲ್ಲ.; ಅಷ್ಟರಲ್ಲಿ ಒಂದು ವ್ಯಾನ್ ಬರುತ್ತಿದ್ದುದು ಫೂ ನೋಡಿದ. ಯೋಚನೆಗೂ ಅವಕಾಶವಿಲ್ಲದೆ ಕೈಯೆತ್ತಿ ಬೀಸಿದ.

ವ್ಯಾನ್ ನಿಲುಗಡೆಗೆ ಬಂತು. ಲೂಳನ್ನು ವ್ಯಾನಿನ ಕಡೆಗೆ ಎಳೆದುಕೊಂಡು ಬರುತ್ತಿದ್ದುದನ್ನು ನೋಡಿದ ಡ್ರೈವರ್ ತಕ್ಷಣ ಫೂನ ಸಹಾಯಕ್ಕೆ ನಡೆದ. ಇಬ್ಬರೂ ಪ್ರಯತ್ನದಿಂದ ಕ್ಯಾಬಿನ್‌ನ ಒಳಕ್ಕೆ ಹತ್ತಿಸಿದರು. ನಿಧಾನವಾಗಿ ಅವಳನ್ನು ಆಸ್ಪತ್ರೆಯ ಕ್ಯಾಷುಯಾಲಿಟಿ ಡಿಪಾರ್ಟ್‌ಮೆಂಟಿನ ಕಡೆಗೆ ನಡೆಸಿಕೊಂಡು ಬಂದರು.

## ೧೭

ಇಷ್ಟು ಹೊತ್ತು ಎಂದೂ ಮಲಗಿದವಳಲ್ಲ. ಇಂತಹ ಆಯಾಸ ಅವಳಿಗೆ ಅನಿಸಿದ್ದೇ ಇಲ್ಲ. ಈಗ ತಾನೇ ಮುಗಿಲಿನಿಂದ ಬಿದ್ದವಳಂತೆ, ಮೈಯೆಲ್ಲ ನೋವು. ಅಣುವಿನಷ್ಟೂ ಶಕ್ತಿ ಉಳಿದಿರಲಿಲ್ಲ. ಅವಳಲ್ಲಿ ಈಗ ಸ್ವಲ್ಪ ಹೊತ್ತು ನಿದ್ದೆ ಮಾಡಿದ ಮೇಲೆ, ಜೋಮು ಹಿಡಿದಿದ್ದ ಕೈಕಾಲುಗಳನ್ನು ಆಡಿಸಲು ಸಾಧ್ಯವಾಯಿತು. ಈಗವಳ ಎದೆ ಬಡಿತವೂ ಸ್ವಲ್ಪ ಕಡಿಮೆಯಾಗಿತ್ತು. ಆದರೆ ತಲೆ ಎಲ್ಲಾ ಖಾಲಿಯಾದಂತೆನಿಸಿತು. ಬರೀ ಶೂನ್ಯಭಾವ.

ಎಷ್ಟು ವರುಷಗಳೋ?... ತನ್ನ ಜೀವನದಲ್ಲಿನ ಕಷ್ಟಗಳ ಬಗ್ಗೆ–ಹಿಂದಿನದಾಗಲೀ, ಮುಂದಿನದಾಗಲೀ ಯೋಚಿಸಲೂ ಪುರುಸೊತ್ತಿರಲಿಲ್ಲ. ಈಗವಳಿಗೆ ದೈಹಿಕ, ಮಾನಸಿಕ

ಹೊರೆಗಳಿಂದ ಮುಕ್ತಳಾದಂತೆನಿಸುತ್ತಿತ್ತು. ಅವಳ ಮುಂದೆ ಬೇಕಾದಷ್ಟು ಬಿಡುವಿದೆ. ಗತ ಬದುಕನ್ನು ವಿಶ್ಲೇಷಿಸಲು ಭವಿಷ್ಯವನ್ನು ಅನ್ವೇಷಿಸಲು ಸಾಕಷ್ಟು ಅವಕಾಶವಿತ್ತು. ಆದರೆ ಅವಳ ಮನಸ್ಸು, ಮೆದುಳು–ಎಲ್ಲಾ ಖಾಲಿ ನೆನಪುಗಳಿಲ್ಲ; ಭರವಸೆಗಳಿಲ್ಲ; ಯಾವುದೂ ಇಲ್ಲ.

ಅದೊಂದು ಬರೀ ಕನಸು.... ಇಂತಹ ಕನಸುಗಳು ಈ ಮೊದಲು ಎಷ್ಟೋ ಸಲ ಬಂದಿವೆ...

ಒಂದು ಸಂಜೆ, ಉತ್ತರದ ಕಡೆಯಿಂದ ಬೀಸುತ್ತಿದ್ದ ಗಾಳಿ ಊಳಿಡುತ್ತಿತ್ತು. ಆಗ ಅವಳಿಗೆ ಕೇವಲ ಐದು ವರ್ಷ. ಅವಳೊಬ್ಬಳನ್ನೇ ಬಿಟ್ಟು ಅವಳಮ್ಮ ಎಲ್ಲೋ ಹೊರಗೆ ಹೋಗಿದ್ದಳು. ಕತ್ತಲಾದರೂ ಅವಳಮ್ಮ ಹಿಂತಿರುಗಲಿಲ್ಲ. ಜೀವನದಲ್ಲಿ, ಮೊದಲು ಸಲ, ಲೂ ಗೆ ಹೆದರಿಕೆಯಾಗಿತ್ತು; ಒಂಟಿ ಎನಿಸಿತ್ತು. ಜೋರಾಗಿ ಅತ್ತು ಅತ್ತು "ಅಮ್ಮ ಅಮ್ಮ" ಎಂದು ಕರೆದಳು. ಈ ದೃಶ್ಯ ಮುಂದೆ ಅವಳ ಬದುಕಿನಲ್ಲಿ ಎಷ್ಟೋಸಲ ಕನಸಿನಲ್ಲಿ ಕಾಣಿಸಿಕೊಂಡಿದೆ. ಊಳಿಡುವ ಗಾಳಿ; ಗಾಳಿಯ ರಭಸಕ್ಕೆ ತೆರೆದುಕೊಂಡ ಬಾಗಿಲು; ಸೀಮೆಎಣ್ಣೆ ದೀಪದ ಮಂದ ಬೆಳಕು.... ಎಲ್ಲ ಸ್ಪಷ್ಟವಾಗಿ ಅವಳ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿವೆ. ಎಷ್ಟೋ ಕಾಲ ತಾನು ಕಂಡದ್ದು ಕನಸೋ ನಿಜವೋ ಎಂಬುದನ್ನು ಗುರುತಿಸಲಾಗಿರಲಿಲ್ಲ.

ಈಗ ಅದು ಕನಸಲ್ಲ; ವಾಸ್ತವ.

ಖಾಯಿಲೆ ಬಿದ್ದು ಹಾಸಿಗೆ ಹಿಡಿದಿದ್ದಳು. ಜಿಯಾಜಿ ಅವಳನ್ನು ನೋಡಿಕೊಳ್ಳುತ್ತಿದ್ದ. ಅವನೂ ಸಾಕಷ್ಟು ದಣಿದುಹೋಗಿದ್ದ. ಹಾಸಿಗೆಯ ಮೇಲೆ ಜೊಂಪು ಹತ್ತು ಹಾಗೇ ಮಲಗಿದ. ಎಬ್ಬಿಸದಿದ್ದರೆ, ಖಂಡಿತ ನೆಗಡಿ ಹಿಡಿಯುತ್ತೆ. ಅವನನ್ನು ಎಬ್ಬಿಸಬೇಕೂಂತ ಎಷ್ಟೋ ಪ್ರಯತ್ನಿಸಿದಳು. ಬಾಯಿತೆರೆದು ಕೂಗಲೂ ಅವಳಿಗಾಗಲಿಲ್ಲ. ಗಂಟಲು ಕಟ್ಟಿದಂತಾಗಿತ್ತು. ಕೋಟನ್ನಾದರೂ ಅವನ ಮೇಲೆ ಹೊದಿಸಬೇಕೆಂದುಕೊಂಡಳು. ಆದರೆ ಕೈಗಳನ್ನು ಚಾಚುವುದಕ್ಕೂ ಆಗಲಿಲ್ಲ.

ಸುತ್ತಲೂ ಕಣ್ಣಾಡಿಸಿ ನೋಡಿದಳು. ಒಬ್ಬರು ಇರಬಹುದಾದ ಕೋಣೆ ಅದಾಗಿತ್ತು. ತುಂಬಾ ಗಂಭೀರವಾದ ರೋಗಿಗಳನ್ನು ಮಾತ್ರವೇ ಇಲ್ಲಿರಿಸಿ ವಿಶೇಷವಾದ ಚಿಕಿತ್ಸೆ ನೀಡುತ್ತಿದ್ದರು. ಇದ್ದಕ್ಕಿದ್ದಂತೆ ಅವಳನ್ನು ಭೀತಿಯೊಂದು ಆವರಿಸಿತು. "ನಾನಿದ್ದೇನೆಯೇ"

ಮಾಗಿಯ ಗಾಳಿ ಬೀಸುವಿಕೆಗೆ ಬಾಗಿಲು, ಕಿಟಕಿಗಳೆಲ್ಲ ಪಟಪಟನೆ ಹೊಡೆದುಕೊಂಡವು. ಕ್ರಮೇಣ ಕತ್ತಲಾಗುತ್ತಾ ಬರುತ್ತಿತ್ತು. ಒಳಗೆ ಹೊರಗೆ ಕತ್ತಲು ತುಂಬಿಕೊಂಡವು. ಚೆನ್ನಾಗಿ ಬೆವರಿಟ್ಟ ಮೇಲೆ ಲೂಗೆ ಸ್ಪಷ್ಟವೆನಿಸತೊಡಗಿತ್ತು. ಅವಳಿಗೆ ಗೊತ್ತಾಯಿತು. ಇದು ಕನಸಲ್ಲ. ನಿಜ... ನಿಜ... ಇದೇ ತನ್ನ ಬಾಳಿನ ಕೊನೆ. ಸಾವಿನ ಆರಂಭ!

ಹೌದು– ಇದೇ ಸಾವು.... ಭಯವಿಲ್ಲ, ನೋವಿಲ್ಲ. ಬದುಕು ಕಳಚಿ ಬೀಳುತ್ತಿದೆ. ಇಂದ್ರಿಯಾನುಭವಗಳೆಲ್ಲ ಸಾಯುತ್ತಿವೆ. ನಿಧಾನವಾಗಿ ಕರಗುತ್ತಿದೆ. ನದಿಯ ಮೇಲಿನ ಎಲೆಯಂತೆ ಅತ್ತಿಂದಿತ್ತ ಇತ್ತಿಂದತ್ತ ತೇಲುತ್ತಿದೆ.

ಎಲ್ಲವೂ ಕೊನೆಗೊಳ್ಳುತ್ತಿದೆ. ಉರುಳುವ ಅಲೆಗಳು ಅವಳೆದೆಯ ಮೇಲಿಂದ ಸುಳಿದುಹೋಗುತ್ತಿವೆ. ಲೂಗೆ ತಾನು ನೀರಿನಲ್ಲಿ ತೇಲುತ್ತಿರುವಂತೆ ಎನಿಸಿತು...

"ಅಮ್ಮ.... ಅಮ್ಮ...."

ಷಿಯಾಳ ಕೂಗು ಕೇಳಿಸಿತು. ದಡದ ಗುಂಟ ಓಡಿ ಬರುತ್ತಿದ್ದಾಳೆ. ನೋಡಿದಳು– ಹಿಂತಿರುಗಿ ನೋಡಿದಳು. ಅವಳು ತೋಳುಗಳನ್ನು ನಿಡಿದಾಗಿ ಚಾಚಿದಳು.

"ಷಿಯಾ ಓಷಿಯಾ... ನನ್ನ ಮುದ್ದು ಮಗಳೇ...."

ಆದರೆ ಅಲೆಗಳು ಬಿಡಲೇ ಇಲ್ಲ. ಅವಳನ್ನು ಮುಳುಗಿಸಿಯೇ ಬಿಟ್ಟವು. ಷಿಯಾಳ ಮುಖ ಅಸ್ಪಷ್ಟವಾಯಿತು. ಅವಳ ಗಡುಸಾದ ಧ್ವನಿ ಬಿಕ್ಕುಗಳಾಗಿ ಮಾರ್ಪಟ್ಟವು.

"ಅಮ್ಮ... ಅಮ್ಮ... ನನಗೆ ಜಡೆ ಹಾಕು...."

ಹೌದು ಅವಳಿಗೆ ಜಡೆ, ಯಾಕೆ ಹಾಕಬಾರದು? ಈ ಪ್ರಪಂಚಕ್ಕೆ ಬಂದು ಆರು ವರ್ಷಗಳಾಗಿವೆ. ಅವಳ ಈ ಸಣ್ಣದೊಂದು ಬಯಕೆಯನ್ನು ತೀರಿಸಬಾರದೇ? ಬೇರೆ ಮಕ್ಕಳೆಲ್ಲ ಕೂದಲನ್ನು ಮೇಲಕ್ಕೆ ಎತ್ತಿಕಟ್ಟಿ, ಬಣ್ಣ ಬಣ್ಣದ ರಿಬ್ಬನ್ನುಗಳಿಂದ ಅಲಂಕರಿಸಿಕೊಂಡಿದ್ದನ್ನು ಕಂಡಾಗಲೆಲ್ಲ, ಅವಳ ಪುಟ್ಟ ಹೃದಯದಲ್ಲಿ ಬಯಕೆಯೊಂದು ಒಡೆದೇಳುತ್ತಿತ್ತು. ಆದರೆ ಅವಳ ಬಯಕೆಗಳನ್ನು ಎಂದೂ ಈಡೇರಿಸಿರಲಿಲ್ಲ. ಲೂ ಗೆ ಆಸ್ಪತ್ರೆಯಿಂದ ಬಿಡುವೇ ಸಿಗುತ್ತಿರಲಿಲ್ಲ. ಸೋಮವಾರದ ಬೆಳಗ್ಗೆಯಂತೂ ರೋಗಿಗಳಿಂದ ತುಂಬಿ ಬಿಡುತ್ತಿತ್ತು. ಲೂಗೆ ಪ್ರತಿ ನಿಮಿಷವೂ ಅಮೂಲ್ಯವಾದ್ದು.

"ಅಮ್ಮಾ.... ಅಮ್ಮಾ....."

ಯುಯಾನ್ ಕೂಗುತ್ತಾ, ತನ್ನನ್ನು ಹಿಂಬಾಲಿಸುತ್ತಾ ದಡದ ಮೇಲೆ ಓಡಿ ಬರುತ್ತಿದ್ದ. ತಿರುಗಿ ನೋಡಿ, ಮತ್ತೆ ತನ್ನ ತೋಳುಗಳನ್ನು ಚಾಚಿದಳು. "ಯುಯಾನ್.... ಯುಯಾನ್...."

ದೊಡ್ಡ ಅಲೆಯೊಂದು ಅವಳನ್ನು ದೂಡಿಕೊಂಡು ಹೋಯಿತು. ಅಲೆಗಳ ಜೊತೆಗೆ ಗುದ್ದಾಡಿ ಸ್ವಲ್ಪ ಮೇಲಕ್ಕೆ ತೇಲಿದಳು. ಮಗನಿಗಾಗಿ ನೋಡಿದಳು. ಎಲ್ಲೂ ಅವನ ಸುಳಿವಿರಲಿಲ್ಲ. ದೂರದಿಂದ ಅವನ ಕೂಗು ಮಾತ್ರ ಕೇಳಿಸುತ್ತಿತ್ತು.

"ಅಮ್ಮ.... ಅಮ್ಮ.... ಮರೆಯಬೇಡ.... ನನ್ನ ಬಿಳಿಯ ಜಿಮ್ ಷೂಸ್..."

ಕಣ್ಮುಂದೆ ಸ್ಪೋರ್ಟ್ಸ್ ಷೂಸ್ ಕುಣಿದಾಡಿದವು. ಬಿಳಿ ಮತ್ತು ನೀಲಿ ಬಣ್ಣದ ಸ್ನೀಕರ್‌ಗಳು, ಸ್ಪೋರ್ಟ್ಸ್ ಬೂಟುಗಳು. ಕೆಂಪು ಅಥವಾ ನೀಲಿಪಟ್ಟಿಯ ಬಿಳಿಯ

ಷೂಗಳು. ಯುಯಾನ್‌ಗೆ ಒಂದು ಜೊತೆ ಕೊಂಡು ಕೊಟ್ಟರೆ, ತಿಂಗಳು ಪೂರಾ ಅವನ ಸಂತೋಷಕ್ಕೆ ಕೊನೆ ಇರೋದಿಲ್ಲ.... ಆದರೆ.... ಆದರೆ.... ಅವುಗಳ ಬೆಲೆ ನೋಡಿದ ಕೂಡಲೇ, ಕೊಳ್ಳುವ ಯೋಚನೆಯೇ ಕರಗಿಹೋಯಿತು....

ಈಗ ತನ್ನನ್ನು ಜಿಯಾಜಿ ಬೆನ್ನಟ್ಟಿ ಬರುತ್ತಿದ್ದಾನೆ. ಓಡಿ ಬರುತ್ತಿರುವ ಅವನ ಪ್ರತಿಬಿಂಬ ನೀರಿನಲ್ಲಿ ಕಾಣಿಸಿದೆ. ತುಂಬಾ ಆತುರದಲ್ಲಿದ್ದಂತೆ ಇದ್ದಾನೆ. ಅವನ ದನಿ ಕಂಪಿಸುತ್ತಿದೆ.

"ವೆಂಟಿಂಗ್– ನಮ್ಮನ್ನೆಲ್ಲಾ ಕೈಬಿಟ್ಟು ಹೋಗಬೇಡ! ಅನಾಥರನ್ನಾಗಿ ಮಾಡಬೇಡ!"

ಅವರಿಗಾಗಿ ತಾನು ಉಳಿಯುವುದು ಸಾಧ್ಯವಾದರೆ! ಫೂ ಅವಳೆಡೆಗೆ ತನ್ನ ಕೈಗಳನ್ನು ಚಾಚಿದ. ಆದರೆ ನಿರ್ದಯ ಜಲ ಪ್ರವಾಹ ನುಗ್ಗಿ ಬಂದು ಅವಳನ್ನು ಕೊಚ್ಚಿಕೊಂಡು ಹೋಯಿತು.

"ಡಾ॥ ಲೂ..... ಡಾ॥ ಲೂ..."

ದಡದಲ್ಲಿ ಸಾಲುಗಟ್ಟಿನಿಂತ ಅಸಂಖ್ಯಾತ ಮಂದಿ ಒಂದೇ ಸಮನೆ ಅವಳಿಗಾಗಿ ಕೂಗುತ್ತಿದ್ದರು. ಯಾಫೇನ್, ಹಿರಿಯರಾದ ಲಿಯು, ಡೈರೆಕ್ಟರ್ ಜಾವೋ, ಡಾ॥ ಸನ್.... ಎಲ್ಲರೂ ಬಿಳಿಯ ಕೋಟುಗಳನ್ನು ಧರಿಸಿದ್ದಾರೆ. ಜಿಯಾವೋ, ಚೆಂಗ್ಸಿ, ಅಂಕಲ್ ಜಾಂಗ್ ಮತ್ತು ವ್ಯಾಂಗ್ ಷಿಯಾ ವೊಮೆನ್... ತಮ್ಮ ಪೈಜಾಮಗಳಲ್ಲಿದ್ದಾರೆ. ಗುಂಪಿನಲ್ಲಿ ಕೆಲವರನ್ನು ಗುರುತಿಸಿದಳು. ಅವರು ತನ್ನ ರೋಗಿಗಳಾಗಿದ್ದಾರೆ. ಅವರೆಲ್ಲರೂ ತನ್ನನ್ನು ಕರೆಯುತ್ತಿದ್ದಾರೆ.

ನಾನು ಬಿಡಬಾರದಾಗಿತ್ತು.... ಇಲ್ಲ! ಮಾಡಬೇಕಾದ್ದು ಇನ್ನೂ ಬೇಕಾದಷ್ಟಿವೆ. ಷಿಯಾ, ಯುಯಾನ್ ತಾಯಿಲ್ಲದ ತಬ್ಬಲಿಗಳಾಗಬಾರದು. ಜಿಯಾಜೀಗೆ ನನ್ನಿಂದ ಹೆಚ್ಚಿಗೆ ದುಃಖವಾಗಬಾರದು. ಈ ಚಿಕ್ಕ ವಯಸ್ಸಿಗೆ ಹೆಂಡತಿಯ ವಿಯೋಗ!... ಕೂಡದು... ಖಂಡಿತಾ ಕೂಡದು... ಆಸ್ಪತ್ರೆ, ರೋಗಿಗಳು– ಇವುಗಳಿಂದ ನಾನು ದೂರ ಇರಲಾರೆ.... ಭಯಂಕರ ಯಾತನೆಯದಾದರೂ, ಬದುಕಿನ ಮೇಲಿನ ಪ್ರೀತಿಯನ್ನು ಬಿಡಲಾರೆ!!...

ಮುಳುಗಲಾರೆ.... ಏನಾದರಾಗಲೀ ಈಜಿ ದಡ ಸೇರಲೇಬೇಕು. ಈ ಪ್ರಪಂಚದಲ್ಲಿ ಉಳಿಯಲೇ ಬೇಕು. ಆದರೆ ನಾನೆಷ್ಟು ದಣಿದಿದ್ದೇನೆ.... ಹೀಗೇಕೆ? ಹೋರಾಡಲು ನನ್ನಲ್ಲಿ ಬಲವೇ ಇಲ್ಲವಾಗಿದೆ... ಮುಳುಗುತ್ತಿದ್ದೇನೆ... ಮುಳುಗುತ್ತಲೇ ಇದ್ದೇನೆ....

ಯುಯಾನ್.... ಗುಡ್ ಬೈ... ಗುಡ್ ಬೈ ಷಿಯಾ.... ನಿನ್ನ ಅಮ್ಮ ನಿನ್ನನ್ನು ಬಿಟ್ಟು ಹೋಗುತ್ತಿದ್ದಾಳೆ ಅಲ್ಲ? ನನ್ನ ಜೀವನದ ಈ ಕೊನೆಯ ಕ್ಷಣಗಳಲ್ಲಿ, ನಿನ್ನನ್ನು ನಾನು ಎಷ್ಟು ಅತಿಯಾಗಿ ಪ್ರೀತಿಸುತ್ತೇನೆ, ಗೊತ್ತಾ? ಬಾ ನಿನ್ನನ್ನು ಅಪ್ಪಿಕೊಳ್ಳಬೇಕೆನಿಸುತ್ತಿದೆ. ನನ್ನ ಮುದ್ದಿನ ಮಕ್ಕಳೇ, ನಿಮ್ಮಮ್ಮನನ್ನು ಕ್ಷಮಿಸಿ. ನಿಮಗೆ ಕೊಡಬೇಕಾದಷ್ಟು ಪ್ರೀತಿಯನ್ನು

ನನ್ನಿಂದ ಕೊಡಲಾಗಲಿಲ್ಲ. ನಿಮ್ಮ ಮೋಹಕ ಮುಗುಳ್ನಗೆಯ ಮುಖಗಳನ್ನು ಎದೆಗಪ್ಪಿಕೊಂಡು ಪದೇ ಪದೇ ಮುದ್ದಾಡಬೇಕಾದವರು, ನಿಮ್ಮನ್ನು ದೂರದಲ್ಲಿರಿಸಿ ಅನ್ಯಾಯ ಮಾಡಿದೆ. ನಿಮ್ಮಮ್ಮನನ್ನು ದಯವಿಟ್ಟು ಕ್ಷಮಿಸಿ. ಸಣ್ಣ ವಯಸ್ಸಿನಲ್ಲಿರುವಾಗಲೇ ನಿಮ್ಮನ್ನು ಬಿಟ್ಟುಹೋಗಬೇಕಾಗಿದೆ. ಕ್ಷಮಿಸಿ ಬಿಡಿ ಮಕ್ಕಳೇ.... ಕ್ಷಮಿಸಿ ಬಿಡಿ.

ಜಿಯಾಜಿ, ಹೋಗಿಬರುತ್ತೇನೆ! ನನಗೋಸ್ಕರ ನೀನೆಷ್ಟೆಲ್ಲಾ ತ್ಯಾಗ ಮಾಡಿದೆ. ನೀನಿಲ್ಲದೆ ನಾನೇನನ್ನೂ ಸಾಧಿಸಲಾಗುತ್ತಿರಲಿಲ್ಲ. ನೀನಿಲ್ಲದೆ ಬದುಕಿಗೆ ಅರ್ಥವೇ ಇಲ್ಲವೆನಿಸುತ್ತದೆ. ನಿನ್ನ ತ್ಯಾಗ ಔದಾರ್ಯಯಗಳ ಮುಂದೆ ನಾನೇನೂ ಅಲ್ಲ. ನಿನ್ನ ಮುಂದೆ ತಲೆ ಬಾಗಿ, ನೀನು ಮಾಡಿದ ಉಪಕಾರಗಳಿಗಾಗಿ ಕೃತಜ್ಞತೆ ಸಲ್ಲಿಸುತ್ತೇನೆ. ನಿನ್ನದಕ್ಕೆ ಪ್ರತಿಯಾಗಿ ನನ್ನ ಜೀವಮಾನದಲ್ಲೇ ನಾನು ಏನನ್ನೂ ಮಾಡಲಾರೆ. ನಿನ್ನನ್ನು ನಿರ್ಲಕ್ಷಿಸಿ ನಿನಗೆ ನಾನೆಷ್ಟು ಅನ್ಯಾಯ ಮಾಡಿದೆ. ಎಷ್ಟೋ ಸಲ ನಿನ್ನ ಬಗ್ಗೆ ಆಲೋಚಿಸಿದೆ. ನಿನಗಾಗಿ ಏನಾದರೂ ಮಾಡಲೇಬೇಕು ಎಂದುಕೊಂಡೆ. ನಿನ್ನ ಊಟವನ್ನಾದರೂ ಕ್ರಮವಾಗಿ ಸಿದ್ಧಮಾಡಿ ಬಡಿಸೋಣವೆಂದುಕೊಂಡೆ. ನಿನಗೆ ಬರೆದುಕೊಳ್ಳಲು ಡೆಸ್ಕನ್ನು ಬಿಟ್ಟುಕೊಡಬೇಕು, ನೀನು ನಿನ್ನ ಲೇಖನವನ್ನು ಆದಷ್ಟು ಬೇಗ ಮುಗಿಸಬೇಕೆಂದು ಆಶಿಸಿದೆ.... ಆದರೆ ಬಹಳ ತಡವಾಯಿತು!.... ದುರಾದೃಷ್ಟ!.... ಈಗ ನನ್ನಲ್ಲಿ ಸಮಯವಿಲ್ಲ.

ನನ್ನ ರೋಗಿಗಳೇ, ಹೋಗಿ ಬರುತ್ತೇನೆ! ಕಳೆದ ಹದಿನೆಂಟು ವರುಷಗಳಿಂದಲೂ ನನ್ನನ್ನು ನಿಮಗಾಗಿ ಮೀಸಲಿರಿಸಿದ್ದೇನೆ. ನಿಂತರೆ, ಕುಳಿತರೆ, ನಡೆದರೆ, ಮಲಗಿದರೆ, ಎದ್ದರೆ, ನಿಮ್ಮದೇ ಚಿಂತೆ. ನೀವೇ ನನ್ನ ಕಣ್ಣೆದುರು! ನಿಮ್ಮ ಕಣ್ಣುಗಳು ವಾಸಿಯಾದರೆ, ನಾನೆಷ್ಟು ಖುಷಿಗೊಳ್ಳುತ್ತಿದ್ದೆ–ನೀವು ಖಂಡಿತ ಊಹಿಸಿಕೊಳ್ಳಲಾರಿರಿ.... ಆದರೆ.... ಆದರೆ.... ಈಗ.... ನನಗೆ ಅದ್ಯಾವುದರ ಅನುಭವವೂ ಆಗುತ್ತಿಲ್ಲ.

## ೧೮

ಸ್ಕ್ರೀನ್ ಮೇಲೆ ಮೂಡುತ್ತಿದ್ದುದನ್ನು ನೋಡಿದ ಡಾಕ್ಟರು ಒಮ್ಮೆಲೇ ಕೂಗಿದರು– "ಅರ್ಥಿತ್ಮಿಯಾ!"

"ವೆಂಟಿಂಗ್, ವೆಂಟಿಂಗ್! ಉಸಿರಾಡಲು ಹೆಣಗಾಡುತ್ತಿದ್ದ ಹೆಂಡತಿಯ ಮೇಲೆ ದೃಷ್ಟಿ ನೆಟ್ಟು ಕೂಗಿದ.

ಡ್ಯೂಟಿಯಲ್ಲಿದ್ದ ಡಾಕ್ಟರುಗಳು, ನರ್ಸ್‌ಗಳು, ಎಲ್ಲರೂ ಗಾಭರಿಯಿಂದ ವಾರ್ಡೊಳಗೆ ನುಗ್ಗಿದರು. "ಲಿಡೋಕೈನ್.... ಐ.ಪಿ. ಇಂಜಕ್ಷನ್.... ಬೇಗ ಬೇಗ" – ಎಂದು ಡಾಕ್ಟರು ಆದೇಶಿಸಿದರು. ತುಟಿಗಳು ನೀಲಿಗಟ್ಟಿದ್ದವು; ಕೈಗಳು ಸೆಡೆತುಕೊಂಡವು; ಕಣ್ಣುಗಳು ಮೇಲುಗಣ್ಣಾದವು. ಎದೆ ಬಡಿತ ನಿಂತುಹೋಯಿತು. ಡಾಕ್ಟರುಗಳು ಮಸಾಜನ್ನು ಪ್ರಾರಂಭಿಸಿದರು. ಉಸಿರಾಟದ ಯಂತ್ರವನ್ನು ಬಿಗಿದರು. ಅದರೊಂದಿಗೆ

ಲಯಬದ್ಧ ಬಡಿತ ಆರಂಭವಾಯಿತು. ಡಿ ಫೈಬ್ರಿಲೇಟರ್ ಯಂತ್ರವನ್ನು ಹಚ್ಚಿದರು. ಈ ಯಂತ್ರ ಅವಳೆದೆಯನ್ನು ಒತ್ತಿದ ಕೂಡಲೇ ಎದೆ ಬಡಿತ ಮುಂದುವರೆಯಿತು.

ಬೆವರುತ್ತಿದ್ದ ಡಾಕ್ಟರು 'ಐಸ್ ಕ್ಯಾಪ್'ಗಾಗಿ ಆದೇಶಿಸಿದರು.

ಐಸ್ ಕ್ಯಾಪನ್ನು ಅವಳ ಹಣೆಯ ಮೇಲಿಟ್ಟರು.

## ೧೯

ಅಂತೂ ಬೆಳಗಾಯಿತು. ಕಿಟಕಿಯೊಳಗಿಂದ ಬೆಳಗಾದದ್ದು ಕಾಣಿಸಿತು. ರಾತ್ರಿಯ ಗಂಭೀರ ಪರಿಸ್ಥಿತಿಯಿಂದ ಲೂ ಪಾರಾಗಿ, ಹೊಸಬೆಳಕನ್ನು ಕಾಣುತ್ತಿದ್ದಳು.

ದಿನದ ಡ್ಯೂಟಿಯಲ್ಲಿನ ನರ್ಸ್ ಲೂಳ ಕೋಣೆಯೊಳಗೆ ಬಂದು, ಗಾಳಿ, ಬೆಳಕು ಬರಲೆಂದು ಕಿಟಕಿಗಳನ್ನು ತೆಗೆದಿರಿಸಿದಳು. ತಾಜಾಗಾಳಿಯ ಜೊತೆಗೆ ಹಕ್ಕಿಗಳ ಗೆಲುವಿನಿಂಚರವೂ ಕಿಟಕಿಯ ಮೂಲಕವಾಗಿ ಹಾದು ಬರಲು ಅವಕಾಶ ಮಾಡಿದಳು. ಕಿಟಕಿಗಳು ತೆರೆದದ್ದೇ ಔಷಧಿ, ಸಾವುಗಳ ಘಾಟು ವಾಸನೆ ತೇಲಿ ಮರೆಯಾಯಿತು. ಕುಟು ಕುಟು ಎನ್ನುತ್ತಿದ್ದ ಜೀವಕ್ಕೆ ಬೆಳಗು ಭರವಸೆಯನ್ನು ತಂದಿತು.

ಇನ್ನೊಬ್ಬ ನರ್ಸ್ ಬಂದು ಅವಳ ತಾಪವನ್ನು ನೋಡಿದಳು. ಬೆಳಗಿನ ತಿಂಡಿಯನ್ನೊಬ್ಬ ತಂದಿರಿಸಿದ. ಡ್ಯೂಟಿ ಡಾಕ್ಟರು ಕೂಡ ತನ್ನ ರೌಂಡ್ಸ್ ಮಾಡುತ್ತಾ ಒಳಗೆ ಬಂದಿದ್ದರು.

ವ್ಯಾಂಗ್ ಷಿಯಾ ಇನ್ನೂ ಬ್ಯಾಂಡೇಜಿನಲ್ಲಿದ್ದಳು. ತನ್ನನ್ನು ಕಾಣಲು ಬಂದ ನರ್ಸನ್ನು ಅಂಗಲಾಚಿ ಬೇಡಿದಳು.

"ನರ್ಸ್ ಒಂದೇ ಒಂದು ಸಲ, ಡಾ॥ ಲೂ ರನ್ನು ಕಂಡುಬರುತ್ತೇನೆ. ದಯವಿಟ್ಟು ಹೋಗಲು ಬಿಡಿ."

"ಇಲ್ಲ. ನೆನ್ನೆ ರಾತ್ರಿ ಅವಳು ಬದುಕಿ ಉಳಿದದ್ದೆ ಹೆಚ್ಚು. ಸದ್ಯಕ್ಕೆ ಯಾರನ್ನೂ ಅವಳ ಬಳಿಗೆ ಬಿಡುವುದಿಲ್ಲ."

"ಆಂಟ್ ಬಹುಶಃ ನಿಮಗೆ ಗೊತ್ತಿಲ್ಲ. ನೆನ್ನೆ ನನ್ನ ಆಪರೇಷನ್ ಮಾಡಿದ್ದಕ್ಕೇ ಡಾ॥ ಲೂ ಖಾಯಿಲೆ ಬಿದ್ದಿದ್ದು. ನನ್ನನ್ನು ಹೋಗಲು ಬಿಡಿ. ಒಂದೇ ಒಂದು ಸಲ ನೋಡಿ ಬಂದುಬಿಡುತ್ತೇನೆ. ಒಂದು ಮಾತೂ ಆಡುವುದಿಲ್ಲ."

"ಇಲ್ಲ ಇಲ್ಲ ಸಾಧ್ಯವೇ ಇಲ್ಲ" ಗಟ್ಟಿಯಾಗಿ ಗದರಿಸಿ ಹೇಳಿದಳು ನರ್ಸ್. "ದಯವಿಟ್ಟು ಒಂದು ಸಲ ನೋಡಿ ಬರುತ್ತೇನೆ ಅಷ್ಟೆ!" – ಇನ್ನೊಂದು ಕ್ಷಣ ತಡೆದರೂ, ಕಂಬನಿಯೊಡೆದು ಬರುವುದರಲ್ಲಿತ್ತು. ತನ್ನ ಹಿಂದೆ ಹೆಜ್ಜೆ ಸಪ್ಪಳ ಕೇಳಿ ಬಂದುದಕ್ಕೆ ಹಿಂತಿರುಗಿ ನೋಡಿದಳು. ಮುದುಕ ಜಾಂಗ್ ಮೊಮ್ಮಗನ ಕೈಹಿಡಿದು ನಡೆದು ಬರುತ್ತಿದ್ದ.

"ಅಜ್ಜ" – ಎಂದು ಕೂಗುತ್ತಾ ಅವನೆಡೆಗೆ ನುಗ್ಗಿದವಳೇ ಹೇಳಿದಳು– "ಈ ಆಂಟಿ ಹತ್ತಿರ ಮಾತಾಡಿ ಸ್ವಲ್ಪ. ನನಗೆ ಒಳಗೆ ಹೋಗೋಕೆ ಬಿಡ್ತಿಲ್ಲ."

ಇನ್ನೂ ಬ್ಯಾಂಡೇಜಿನಲ್ಲಿಯೇ ಇದ್ದ ಜಾಂಗ್‌ರನ್ನು ಈ ಪುಟ್ಟ ಹುಡುಗಿ ಕೈಹಿಡಿದು ನರ್ಸಿದ್ದ ಕಡೆಗೆ ಎಳೆಯ ತೊಡಗಿದಳು.

"ಸಿಸ್ಟರ್ ಒಂದು ಸಲ ನಮ್ಮನ್ನು ನೋಡೋಕೆ ಬಿಡಿ." ಇನ್ನು ಪೀಡಿಸುವುದಕ್ಕೆ ಈ ಮುದುಕನೂ ಮೊದಲು ಮಾಡಿದ– ಎಂದು ಕೋಪದಿಂದ "ನಿಮಗೆಲ್ಲ ಏನಾಗಿದೆ? ಹೀಗೆಲ್ಲಾ ವಾರ್ಡುಗಳಲ್ಲಿ ತಲೆ ಹರಟೆ ಮಾಡುತ್ತಾ?

"ಸಾಕು ಸುಮ್ಮನಿರಿ! ನಿಮಗೆ ಸ್ವಲ್ಪವೂ ಅರ್ಥವಾಗುವುದಿಲ್ಲವೇ?" – ಆತನ ಧ್ವನಿ ಮೊದಲಿಗಿಂತ, ಇಂದು ಮೆದುವಾಗಿತ್ತು. ವಿನಯದಿಂದ ಕೇಳಿಕೊಳ್ಳತೊಡಗಿದ– "ನಾವಿಷ್ಟೊಂದು ಪೀಡಿಸುವುದಕ್ಕೆ ಕಾರಣವಿದೆ. ಡಾ॥ ಲೂ ಯಾಕೆ ಕಾಯಿಲೆ ಬಿದ್ದಳು? ಯಾಕೆಂದರೆ, ನಮ್ಮ ಆಪರೇಷನ್ ಮಾಡಿದ್ದಕ್ಕೆ! ನಾನೇನೂ ಅವಳನ್ನು ನೋಡೋದಕ್ಕೆ ಆಗುವುದಿಲ್ಲ ನಿಜ. ಆದರೆ ಅವಳ ಹಾಸಿಗೆಯ ಬಳಿ ನಿಂತುಕೊಂಡರೂ ನಮಗೊಂದು ರೀತಿ ಮನಸ್ಸಿಗೆ ಸಮಾಧಾನ; ನೆಮ್ಮದಿ.

ಆತನ ಪ್ರಾರ್ಥನೆಯಲ್ಲಿ ಪ್ರಾಮಾಣಿಕತೆ ಇತ್ತು; ನಿಜವಾದ ಕಳಕಳಿ ಇತ್ತು. ನರ್ಸ್ ಸ್ವಲ್ಪ ಕರಗಿದಳು. ಮೆದುವಾಗಿ ಹೇಳಿದಳು– "ನೋಡಿ, ನಿಮ್ಮನ್ನು ಒಳಗೆ ಬಿಡಬಾರದು ಅಂತ. ನನ್ನ ಹಟವೇನೂ ಇಲ್ಲ. ನಾನು ಬಿಡದೆ ಇರುವಷ್ಟು ಕೆಟ್ಟವಳೂ ಅಲ್ಲ. ಡಾ॥ ಲೂ ಎದೆಬೇನೆಯಿಂದ ಗಂಭೀರ ಪರಿಸ್ಥಿತಿಯಲ್ಲಿದ್ದಾಳೆ. ಆಕೆಯನ್ನು ಉದ್ರೇಕಗೊಳಿಸಬಾರದು. ನೀವೆಲ್ಲ ಆಕೆಯ ಒಳಿತನ್ನು ಬಯಸುವವರಲ್ಲವೇ? ಆಕೆ ಬೇಗ ಗುಣಮುಖವಾಗಬೇಕು ಎನ್ನುವುದಾದರೆ ಸದ್ಯಕ್ಕೆ ತೊಂದರೆ ಕೊಡಬೇಡಿ. ಏನಂತೀರ?"

"ಹೌದು, ನೀನು ಹೇಳೋದು ಸರಿ." ಜಾಂಗ್ ನಿಟ್ಟುಸಿರಿನೊಂದಿಗೆ ಹತ್ತಿರದಲ್ಲಿದ್ದ ಬೆಂಚಿನ ಮೇಲೆ ಕುಳಿತುಕೊಂಡ. ತೊಡೆಯ ಮೇಲೆ ಹೊಡೆದುಕೊಳ್ಳುತ್ತಾ ಪಶ್ಚಾತ್ತಾಪದ ದನಿಯಲ್ಲಿ ಹೇಳತೊಡಗಿದ..." ಎಲ್ಲ ನನ್ನದೇ ತಪ್ಪು. ಅವಳ ಖಾಯಿಲೆಯ ಹೊಣೆ ನನ್ನದು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಆಪರೇಷನ್ ಮಾಡುವಂತೆ ನಾನೇ ಒತ್ತಾಯಿಸಿದೆ, ಆದರೆ ಹೀಗಾಗುತ್ತೇಂತ ನನಗೇನು ಗೊತ್ತು....? ಅವಳಿಗೇನಾದರೂ ಆದರೆ, ನಾನೇನು ಮಾಡಲಿ? ಪರಿತಾಪದೊಂದಿಗೆ ತಲೆತಗ್ಗಿಸಿದ. ಕೆಲಸಕ್ಕೆ ತೊಡಗುವ ಮೊದಲು ಲೂಳನ್ನು ನೋಡಿಹೋಗಲೆಂದು ಡಾ॥ ಸನ್‌ರು ಧಾವಿಸಿದರು. ಮಧ್ಯದಲ್ಲಿ ಷಿಯಾ ಅವರನ್ನು ತಡೆದಳು.

"ಡಾ॥ ಸನ್, ನೀವು ಡಾ॥ ಲೂರನ್ನು ನೋಡಲು ಹೋಗುತ್ತಿದ್ದೀರಲ್ಲವೇ!" – ಅವಳು ಕೇಳಿದಳು.

ಸನ್‌ರು ಹೌದೆಂದು ತಲೆಯಾಡಿಸಿದರು.

"ನಿಮ್ಮ ಜೊತೆಗೆ ನನ್ನನ್ನೂ ಕರೆದುಕೊಂಡು ಹೋಗ್ತೀರಾ? ದಯವಿಟ್ಟು."

"ಈಗ ಬೇಡ, ಆಮೇಲೆ ಯಾವಾಗಲಾದರೂ ನೋಡೋಣ. ಆಗಬಹುದಲ್ಲ?"

ಡಾ॥ ಸನ್‌ರ ಧ್ವನಿ ಕೇಳಿ ಜಾಂಗ್ ನಿಂತುಕೊಂಡು ಅವರನ್ನು ತಲುಪಲು ಕೈಚಾಚಿದ. ಅವರ ಅಂಗಿಯ ತೋಳನ್ನು ಹಿಡಿದು ಕೇಳಿದ– "ಡಾ॥ ಸನ್, ನೀವು ಹೇಳಿದ ಹಾಗೆ ಕೇಳ್ತೀವಿ. ಆದರೆ ನಿಮ್ಮ ಜೊತೆಗೆ ಒಂದು ಮಾತಾಡೋಕೆ ಅವಕಾಶ ಮಾಡಿಕೊಡ್ತೀರಾ? ನನಗೆ ಗೊತ್ತು ನಿಮಗೆ ತುಂಬಾ ಕೆಲಸ ಇರುತ್ತೇಂತ. ಆದರೂ ನನ್ನನ್ನು ಕಾಡುತ್ತಿರುವ ಒಂದು ವಿಷಯಾನ ನಿಮಗೆ ಹೇಳಲೇಬೇಕು."

ಡಾ॥ ಸನ್, ಪ್ರೋತ್ಸಾಹಕವಾಗಿ, ಜಾಂಗ್‌ನ ಭುಜಗಳನ್ನು ತಟ್ಟಿ ಹೇಳಿದರು– "ಆಯ್ತು ಹೇಳಿ."

"ಡಾ॥ ಲೂ, ತುಂಬಾ ಒಳ್ಳೇ ಡಾಕ್ಟರು. ನಿಮ್ಮಂಥವರು, ದೊಡ್ಡವರೆಲ್ಲ ಸೇರಿ ಹೇಗಾದರೂ ಮಾಡಿ ಆಕೆಯನ್ನು ಉಳಿಸಲೇಬೇಕು. ನೀವು ಅವರಂತಹ ಒಬ್ಬರನ್ನು ಉಳಿಸಿದರೆ, ಆಕೆ ಎಷ್ಟೋ ಜನರನ್ನು ಉಳಿಸುತ್ತಾರೆ. ತುಂಬ ಒಳ್ಳೊಳ್ಳೆ ಔಷಧಿಗಳೆಲ್ಲ ಇವೆಯಲ್ಲ, ಆಕೆಗೆ ಅವನ್ನೆಲ್ಲ ಕೊಡಿ. ಅದಕ್ಕಾಗಿ ಹಿಂದು ಮುಂದು ನೋಡಬೇಡಿ. ಕೆಲವು ಅಮೂಲ್ಯವಾದ ಔಷಧಿಗಳಿಗೆ ತುಂಬ ಬೆಲೆ ತೆರಬೇಕಾಗುತ್ತೇಂತ ನಾನು ಕೇಳಿದ್ದೆ. ಲೂಗೆ ಇಬ್ಬರು ಮಕ್ಕಳಿದ್ದಾರೆ. ಆಕೆಗೆ ಆರೋಗ್ಯ ಚೆನ್ನಾಗಿಲ್ಲ. ಹಾಸಿಗೆ ಹಿಡಿದು ಬಿಟ್ಟಿದ್ದಾಳೆ. ಔಷಧಿಗಳಿಗೆ ಕೊಡೋಕೆ, ಪಾಪ ಆಕೆ ಹತ್ತಿರ ಹಣ ಕೂಡ ಬಹುಶಃ ಇರಲಾರದು. ಈ ದೊಡ್ಡ ಆಸ್ಪತ್ರೆಯಲ್ಲಿ ಅವುಗಳಿಗೆ ರಿಯಾಯಿತಿ ಏನಾದರೂ ಕೊಡಿಸಬಹುದಲ್ಲ?

ಸನ್‌ರ ಕೈ ಹಿಡಿದಿದ್ದವನು ಹಾಗೆಯೇ ಕಿವಿನೆಟ್ಟಗೆ ಮಾಡಿ, ಅವರ ಉತ್ತರಕ್ಕಾಗಿ ಕಾದು ನಿಂತ.

ಸನ್‌ರ ಆಲೋಚನೆ ಒಂದೇ ದಿಕ್ಕಿನಲ್ಲಿರುತ್ತಿತ್ತು. ತಮ್ಮ ಭಾವನೆಗಳನ್ನೆಂದೂ ತೋರಿಸಿಕೊಳ್ಳುತ್ತಿರಲಿಲ್ಲ. ಆದರೆ ಈ ದಿನ ಹಾಗಿರಲು ಸಾಧ್ಯವಾಗಲಿಲ್ಲ. ಜಾಂಗ್‌ನ ಕೈಗಳನ್ನು ಕುಲುಕುತ್ತಾ ಭಾವುಕರಾಗಿ ಹೇಳಿದರು– "ನಮಗೆ ಸಾಧ್ಯವಾಗುವುದನ್ನೆಲ್ಲಾ ಮಾಡುತ್ತೇನೆ. ಆಕೆಯನ್ನು ಉಳಿಸಿಕೊಳ್ಳಲು ನಮ್ಮ ಪ್ರಯತ್ನಗಳನ್ನು ಬಿಡುವುದಿಲ್ಲ!"

ಜಾಂಗ್‌ಗೆ ತುಂಬಾ ತೃಪ್ತಿಯಾಯಿತು. ತನ್ನ ಮೊಮ್ಮಗನನ್ನು ಹತ್ತಿರಕ್ಕೆ ಕರೆದ. ಭುಜಕ್ಕೆ ತಗುಲಿಸಿಕೊಂಡಿದ್ದ ಚೀಲದೊಳಕ್ಕೆ ಕೈಹಾಕಿ ಕೆಲವು ಮೊಟ್ಟೆಗಳನ್ನು ಹೊರ ತೆಗೆದ.

"ಕೆಲವು ಮೊಟ್ಟೆಗಳಿವೆ. ಇವನ್ನು ದಯವಿಟ್ಟು ನೀವು ಹೋದಾಗ ಡಾ॥ ಲೂಗೆ ಕೊಡಿ." "ಬೇಕಾಗಿಲ್ಲ ಇವೆಲ್ಲ" – ಸನ್‌ರು ತಕ್ಷಣ ಹೇಳಿದರು. ಜಾಂಗ್ ಬಿಡಲಿಲ್ಲ.

ಸನ್‌ರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಎತ್ತರದ ದನಿಯಲ್ಲಿ ಹೇಳಿದ– "ನೀವು ಇವುಗಳನ್ನು ತೆಗೆದುಕೊಂಡು ಹೋಗದಿದ್ದರೆ, ನಾನು ನಿಮ್ಮನ್ನು ಹೋಗಗೊಡುವುದೇ ಇಲ್ಲ!"

ಸನ್‌ರಿಗೆ ಬೇರೆ ದಾರಿಯಿರಲಿಲ್ಲ. ಮೊಟ್ಟೆಗಳಿದ್ದ ಚೀಲವನ್ನು ತೆಗೆದುಕೊಂಡರು. ಆಮೇಲೆ ನರ್ಸ್ ಕೈಯಲ್ಲಿ ಇವುಗಳನ್ನು ಹಿಂದಿರುಗಿಸಿ, ವಿವರಿಸಿ ಹೇಳುವಂತೆ ಹೇಳಬೇಕು ಎಂದುಕೊಂಡರು. ಜಾಂಗ್ ಊಹಿಸಿದನೆಂಬಂತೆ ಹೇಳಿದ– "ಯಾರ ಕೈಯಲ್ಲಾದರೂ ಹಿಂತಿರುಗಿಸುವ ಯೋಚನೆ ಮಾಡಬೇಡಿ."

ಬಲವಂತಕ್ಕೆ ಒಪ್ಪಿಕೊಳ್ಳಲೇ ಬೇಕಾಯಿತು. ಸನ್‌ರು ಷಿಯಾ ಮತ್ತು ಜಾಂಗ್‌ಗೆ ಮೆಟ್ಟಿಲಿಳಿಯಲು ಸಹಕರಿಸಿದರು.

ಡೈರೆಕ್ಟರ್ ಜಾವೋರ ಜೊತೆ ಕಿನ್ ಡಾ॥ ಲೂಳ ಕೋಣೆಯನ್ನು ಪ್ರವೇಶಿಸಿದಳು. ತುಂಬಾ ಉತ್ಸಾಹದಿಂದ ಮಾತಾಡುತ್ತಿದ್ದಳು.

"ನಾನೊಂದು ರೀತಿ, ಬ್ಯೂರೋಕ್ರಾಟ್ ಆಗಿದ್ದೆ. ಜಿಯಾ ಅವರನ್ನು ಆಪರೇಷನ್ ಮಾಡಿದ್ದು ಡಾ॥ ಲೂ ಅನ್ನೋದನ್ನು ತಿಳೀದೇ ಹೋಗಿದ್ದೆ. ಆದರೆ ನಿಮಗಾದರೂ ಗೊತ್ತಿರಬೇಕು. ಹೌದಲ್ಲ? ಜಿಯಾವೋ ಲೂಳನ್ನು ಗುರುತಿಸಿದಳು. ಇಲ್ಲದೆ ಇದ್ದರೆ ಇಂದಿಗೂ ನಮಗೆ ಯಾರೂಂತ ತಿಳೀತಿರಲಿಲ್ಲ."

"ನಾನು ಆಗ ಹೊರಗೆ ಕೆಲಸದ ಮೇಲೆ ಹೋಗಿದ್ದೆ."– ಅಸಹಾಯಕ ದನಿಯಲ್ಲಿ ನುಡಿದರು, ಜಾವೋ.

ಅವರು ಬಂದ ಸ್ವಲ್ಪ ಹೊತ್ತಿಗೆಲ್ಲ ಸನ್ ಪ್ರವೇಶಿಸಿದರು. ಡ್ಯೂಟಿ ಡಾಕ್ಟರ್, ಹೋದ ರಾತ್ರಿ ಹೇಗೆ ಎಮರ್ಜೆನ್ಸಿ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡಿದ್ದರೆಂಬುದನ್ನು ವಿವರಿಸಿದರು. ಜಾವೋರು ಲೂಳ ಕೇಸ್ ಹಿಸ್ಟರಿಯನ್ನು ಓದುತ್ತಾ ತಲೆಯಾಡಿಸುತ್ತಿದ್ದರು. "ನಾವು ಆಕೆಯನ್ನು ತುಂಬಾ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು"– ಎಂದರು.

ಅಷ್ಟೊಂದು ಜನ ಬರುತ್ತಿದ್ದುದನ್ನು ನೋಡಿ ಫೂ ಎದ್ದುನಿಂತ. ಆತನ ಉಪಸ್ಥಿತಿಯನ್ನು ಗಮನಿಸದ ಕಿನ್ ಅಲ್ಲಿಯೇ ಖಾಲಿ ಇದ್ದ ಸ್ಟೂಲೊಂದರ ಮೇಲೆ ಕುಳಿತಳು.

"ಡಾ॥ ಲೂ ಆರಾಮವಾಗಿದೆಯೇ?"

ಲೂ ನಿಧಾನವಾಗಿ ಕಣ್ಣು ತೆರದಳೇ ಹೊರತಾಗಿ ಏನನ್ನೂ ಉತ್ತರಿಸಲಿಲ್ಲ.

"ವೈಸ್ ಮಿನಿಸ್ಟರ್, ನನಗೆ ಎಲ್ಲವನ್ನೂ ವಿವರಿಸಿ ಹೇಳಿದರು" – ಮಾತಿನಲ್ಲಿ ಸ್ನೇಹ, ಕೃತಜ್ಞತೆಗಳಿದ್ದವು. "ಅವರು ನಿಮ್ಮ ಬಗ್ಗೆ ಕೃತಜ್ಞತರಾಗಿದ್ದಾರೆ. ಸ್ವತಃ ಅವರೇ

ಬರಬೇಕೆಂದಿದ್ದರು. ಆದರೆ ನಾನೇ ಅವರನ್ನು ತಡೆದೆ. ಅವರ ಪರವಾಗಿ ನಾನು ನಿಮಗೆ ಧನ್ಯವಾದಗಳನ್ನು ಹೇಳುತ್ತಿದ್ದೇನೆ. ನಿಮಗೇನಾದರೂ ಬೇಕೆನಿಸಿದರೆ, ದಯವಿಟ್ಟು ಸಂಕೋಚವಿಲ್ಲದೆ ಹೇಳಿ. ನಾನು ನಿಮಗೆ ಸಹಾಯ ಮಾಡ್ತೇನೆ. ನಾವೆಲ್ಲರೂ ಕ್ರಾಂತಿ ಮಿತ್ರರು."

ಲೂ ಕಣ್ಣುಗಳನ್ನು ಮುಚ್ಚಿದ್ದಳು.

"ಇನ್ನೂ ವಯಸ್ಸಿನಲ್ಲಿ ಚಿಕ್ಕವರು. ಭವಿಷ್ಯದಲ್ಲಿ ಭರವಸೆ ಇರಲಿ. ಈಗ ಬಂದಿರುವ ಅನಾರೋಗ್ಯಾನ ಧೈರ್ಯದಿಂದ ಎದುರಿಸಬೇಕು. ಇದು...."

"ಕಾಮ್ರೆಡ್ ಕಿಂಬೋ... ಆಕೆಗೆ ಸ್ವಲ್ಪ ವಿಶ್ರಾಂತಿ ಬೇಕು. ಈಗ ತಾನೇ ಪ್ರಜ್ಞೆ ಮರಳಿದೆ."

"ಆಯ್ತಾಯ್ತು... ವಿಶ್ರಾಂತಿ ತೆಗೆದುಕೋ ಡಾ॥ ಲೂ" – ಎಂದು ಹೇಳುತ್ತಾ ಎದ್ದು ನಿಂತಳು. "ಇನ್ನೊಂದೆರಡು ದಿವಸ ಬಿಟ್ಟು ಮತ್ತೆ ಬರುತ್ತೇನೆ."

ವಾರ್ಡ್‌ನಿಂದ ಹೊರಗೆ ಬಂದ ಮೇಲೆ ಕಿನ್ ಸಿಟ್ಟುಗೊಂಡು ಹೇಳಿದಳು– "ಡೈರೆಕ್ಟರ್ ಜಾವೋ, ನಿಮಗೆ ನಾನೊಂದು ಮಾತು ಹೇಳುತ್ತೇನೆ, ದಯವಿಟ್ಟು ಬೇರೇನೂ ತಿಳಿದುಕೊಳ್ಳಬೇಡಿ. ಲೂ ನಿಮ್ಮ ಆಸ್ಪತ್ರೆಯ ಅಮೂಲ್ಯ ನಿಧಿ. ಆಕೆಯ ಬಗ್ಗೆ ನೀವು ಸ್ವಲ್ಪ ಮೊದಲಿನಿಂದಲೂ ಲಕ್ಷ್ಯ ಕೊಟ್ಟಿದ್ದರೆ, ಹೀಗೆ ಖಾಯಿಲೆ ಬೀಳುವ ಅವಕಾಶವೇ ಇರುತ್ತಿರಲಿಲ್ಲ. ನಡು ವಯಸ್ಸಿನ ಕಾಮ್ರೆಡ್‌ಗಳು ನಮ್ಮ ದೇಶದ ಬೆನ್ನೆಲುಬು. ಪ್ರತಿಭಾವಂತರನ್ನು ಗುರುತಿಸಿ ಗೌರವಿಸಬೇಕಾದ್ದು ಧರ್ಮ."

"ಅದೇನೋ ಸರಿ"– ಜಾವೋರು ಉತ್ತರಿಸಿದರು.

ಕಿನ್ ಮರೆಯಾದುದನ್ನು ನೋಡಿದ ಫೂ ಕೇಳಿದ– "ಡಾ॥ ಸನ್, ಆಕೆ ಯಾರು?"

ಕನ್ನಡಕದೊಳಗಿಂದ ಆಕೆ ಹೊರಟ ಬಾಗಿಲ ಕಡೆ ನೋಡಿ ಸ್ವಲ್ಪ ಸಿಡುಕಿನಿಂದಲೇ ನುಡಿದರು– "ಕ್ರಾಂತಿಯ ಡಂಗುರ ಹೊಡೀತಿರೊ ಒಬ್ಬ ಮುದುಕಿ!"

## ೨೦

ಆ ದಿನ, ಲೂಗೆ ಸ್ವಲ್ಪ ವಾಸಿ ಎನಿಸಿತ್ತು. ಸುಲಭವಾಗಿ ಕಣ್ಣುಬಿಡಲಾಯಿತು. ಒಂದೆರಡು ಚಮಚ ಹಾಲು, ಒಂದು ಚಮಚ ಕಿತ್ತಲೆ ರಸ ಕುಡಿದಳು. ಸೀಲಿಂಗ್ ಕಡೆಗೆ ನೆಟ್ಟ ದೃಷ್ಟಿ ಇಟ್ಟು ಸುಮ್ಮನೆ ಮಲಗಿದ್ದಳು. ಭಾವಶೂನ್ಯವಾದ ನೋಟ. ತನ್ನ ಆರೋಗ್ಯದ ಗಂಭೀರ ಸ್ಥಿತಿಯಾಗಲೀ, ತನ್ನ ಕುಟುಂಬದ ಅಸುಖವಾಗಲೀ ಅವಳ ಅರಿವಿಗೆ ಬಂದಿರಲಿಲ್ಲ. ಬದುಕು ಸಾಕಾಗಿ ಹೋಗಿತ್ತು.

ಘೂ, ಭಯಭೀತಳಾದ ಲೂಳನ್ನು ನೋಡಿದ. ಹಿಂದೆಂದೂ ಆ ಸ್ಥಿತಿಯಲ್ಲಿ ಅವಳನ್ನು ಕಂಡಿರಲಿಲ್ಲ. ಅವಳನ್ನು ಹಲವು ಸಲ ಕರೆದ. ತನ್ನ ಕೈಯಾಡಿಸುವುದರ ಮೂಲಕ ಪ್ರತಿಕ್ರಿಯೆ ತೋರಿದಳು. ತನ್ನನ್ನು ತೊಂದರೆ ಪಡಿಸಬೇಡವೆಂಬಂತೆ ಆ ಸನ್ನೆ ಹೇಳುತ್ತಿತ್ತು. ಭಾವಶೂನ್ಯ ಸ್ಥಿತಿಯನ್ನು ಪ್ರೀತಿಸುವವಳಂತೆ ಕಾಣುತ್ತಿದ್ದಳು. ಕಾಲ ಸರಿದದ್ದೆ ತಿಳಿಯುತ್ತಿರಲಿಲ್ಲ. ಅವಳ ಹಾಸಿಗೆಯ ಪಕ್ಕದಲ್ಲೇ ಕುಳಿತಿದ್ದ ಘೂಗೆ ಎರಡು ರಾತ್ರಿಗಳಿಂದ ನಿದ್ದೆಯೇ ಇಲ್ಲ. ತುಂಬಾ ದಣಿವಾಗಿತ್ತು. ಹಾಗೆಯೇ ತೂಗಿದ. ತೂಗಿದ್ದವನು ಎದೆಯೊಡೆಯುವಂತೆ ಯಾರೋ ಕಿರುಚಿದ್ದನ್ನು ಕೇಳಿ ಬೆಚ್ಚಿ ಬಿದ್ದು ಎದ್ದು ನೋಡಿದ. ಈ ಕೂಗಿಗೆ ಇಡೀ ವಾರ್ಡ್ ನಡುಗಿತು. ಪಕ್ಕದ ಕೋಣೆಯಲ್ಲಿ ಹುಡುಗಿಯೊಬ್ಬಳು ಅಮ್ಮ! ಅಮ್ಮ! ಎಂದು ಕೂಗುತ್ತಿದ್ದಳು. ವ್ಯಕ್ತಿಯೊಬ್ಬ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಆಮೇಲೆ ತುಂಬಾ ಜನರು ಕೋಣೆಯೊಳಗೆ ಹೋಗುತ್ತಿದ್ದ ಹೆಜ್ಜೆ ಸಪ್ಪಳ ಕೇಳಿತು. ಘೂ ತಾನು ಹೊರಗೋಡಿದ. ಗಾಲಿಗಳ ಸ್ಟ್ರೆಚರ್ ಮೇಲೆ, ಹೊದಿಕೆಯಿಂದ ಹೊದಿಸಿದ ಹೆಣವನ್ನು ತೆಗೆದುಕೊಂಡು ಹೊರಗೆ ಬಂದುದನ್ನು ನೋಡಿದ. ನರ್ಸೊಬ್ಬಳು ಸ್ಟ್ರೆಚರನ್ನು ತಳ್ಳಿಕೊಂಡು ಬರುತ್ತಿದ್ದಳು. ಹಿಂದಿನಿಂದ ಹದಿನಾರು ವರುಷದ ಹುಡುಗಿ ಕೂದಲು ಕೆದರಿಕೊಂಡು, ತೂರಾಡಿಕೊಂಡು ಏಳುತ್ತಾ ಬೀಳುತ್ತಾ ಬಂದು ಸ್ಟ್ರೆಚರ್ ಮೇಲೆ ವಾಲಿದಳು. ಸ್ಟ್ರೆಚರನ್ನು ಗಟ್ಟಿಯಾಗಿ ಹಿಡಿದು ಕಂಪಿಸುವ ದನಿಯಲ್ಲಿ, ಅಂಗಲಾಚಿ ಬೇಡುತ್ತಿದ್ದಳು– "ಬೇಡ ಬೇಡ ದಯವಿಟ್ಟು ತೆಗೆದುಕೊಂಡು ಹೋಗಬೇಡಿ. ನನ್ನ ಅಮ್ಮ ನಿದ್ರೆ ಮಾಡುತ್ತಿದ್ದಾಳೆ. ಬೇಗ ಎದ್ದು ಬಿಡುತ್ತಾಳೆ! ನನಗೆ ಗೊತ್ತು... ಅವಳೆದ್ದು ಬಿಡುತ್ತಾಳೆ!"

ಬಂದಿದ್ದ ಜನ ಸ್ಟ್ರೆಚರ್ ಮುಂದೆ ಹೋಗಲು, ದಾರಿ ಬಿಟ್ಟು ನಿಂತರು. ಮೌನವಾಗಿ ಸತ್ತಾಕೆಗೆ ತಮ್ಮ ತರ್ಪಣ ಸಲ್ಲಿಸಿದರು.

ಗುಂಪಿನ ನಡುವೆ ಘೂ ಕದಲದೆ ನಿಂತಿದ್ದ. ಕೆನ್ನೆಗಳು ಬತ್ತಿ ಹೋಗಿದ್ದವು. ನಿದ್ದೆ ಇಲ್ಲದೆ ಕೆಂಪಗಾಗಿದ್ದ ಕಣ್ಣುಗಳು ತುಂಬಿಬಂದವು. ಮುಷ್ಟಿಬಿಗಿದು ತನ್ನನ್ನು ಸಮಾಧಾನ ಪಡಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಒಡಲೆಲ್ಲ ಕಂಪಿಸಿತು. ಹುಡುಗಿಯ ಹೃದಯ ಭೇದಕ ಕೂಗು, ಕಿವಿ ಕಿವುಡಾಗಿಸುವಂತಿತ್ತು. ಘೂಗೆ ಗಟ್ಟಿಯಾಗಿ ಕಿವಿಮುಚ್ಚಿಕೊಳ್ಳಬೇಕೆನಿಸಿತು.

"ಅಮ್ಮ ಏಳು! ಮೇಲೇಳಮ್ಮ! ನಿನ್ನನ್ನು ತೆಗೆದುಕೊಂಡು ಹೋಗುತ್ತಿದ್ದಾರೆ" – ಹುಚ್ಚಿಯಂತೆ ಕಿರುಚುತ್ತಿದ್ದಳು. ಜನ ಅವಳನ್ನು ತಡೆಯದಿದ್ದರೆ ಹೆಣದ ಮೇಲಿನ ಹೊದಿಕೆ ಎಳೆದು ಬಿಸಾಡಿ ಬಿಡುತ್ತಿದ್ದಳು. ಮಧ್ಯ ವಯಸ್ಸಿನ ವ್ಯಕ್ತಿ ಸ್ಟ್ರೆಚರನ್ನು ಹಿಂಬಾಲಿಸುತ್ತಾ ಬಿಕ್ಕಿ ಬಿಕ್ಕಿ ಅಳುತ್ತಿದ್ದ– "ನಾನು ನಿನಗೆ ಅನ್ಯಾಯ ಮಾಡಿದೆ! ನಿನಗೆ ಅನ್ಯಾಯ ಮಾಡಿದೆ"– ಎಂದು ಹಲುಬುತ್ತಿದ್ದ.

ಅವರ ಅಸಹಾಯ ಹತಾಶ ಮಾತುಗಳು ಘೂನ ಹೃದಯವನ್ನು ಭೇದಿಸುತ್ತಿದ್ದವು. ಸ್ಟ್ರೆಚರನ್ನೇ ದಿಟ್ಟಿಸಿ ನೋಡುತ್ತಿದ್ದವನು ಇದ್ದಕ್ಕಿದ್ದಂತೆ, ತನ್ನ ಹೆಂಡತಿಯ ವಾರ್ಡ್

ಕಡೆಗೆ ಓಡಿದ. ನೇರವಾಗಿ, ಅವಳ ಬಳಿ ಹೋಗಿ ಅವಳ ಹಾಸಿಗೆಯ ಮೇಲೆ ಬಿದ್ದು ಕಣ್ಣು ಮುಚ್ಚಿ ಗುಣು ಗುಣಿಸಿದ, "ನೀನು ಬದುಕಿದ್ದೀಯ!"

ಘೂನ ವೇಗವಾದ ಉಸಿರಾಟಕ್ಕೆ ಎಚ್ಚೆತ್ತ ಲೂ ಸ್ವಲ್ಪ ಕದಲಿದಳು. ಕಣ್ಣು ತೆರೆದು ಅವನತ್ತ ನೋಡಿದಳಾದರೂ ಹೆಚ್ಚು ಹೊತ್ತು ಕಣ್ಣು ತೆರೆದಿಡಲಾಗಲಿಲ್ಲ.

ಅವನಿಗೇನೋ ಅವ್ಯಕ್ತ ಭೀತಿಯುಂಟಾಗಿ "ವೆಂಟಿಂಗ್! ವೆಂಟಿಂಗ್"– ಎಂದು ಜೋರಾಗಿ ಕೂಗಿದ.

ಅವಳ ಕಣ್ಣಾಲಿಗಳು ಅವನ ಮುಖದ ಮೇಲೆಲ್ಲಾ ಸುಳಿದಾಡಿದವು. ಅದನ್ನು ಕಂಡಾಗ ಘೂಗೆ ಎದೆ ಹಿಡಿದಂತಾಯಿತು. ಅವಳು ಬದುಕಿರಲೇಬೇಕು ಎಂಬುದನ್ನು ಹೇಗೆ ಅವಳಿಗೆ ತಿಳಿಸಿಹೇಳುವುದೆಂದು ಗೊತ್ತಾಗಲಿಲ್ಲ. ಇವಳು ಅವನ ಹೆಂಡತಿ. ಪ್ರಪಂಚದಲ್ಲಿಯೇ ಅತ್ಯಂತ ಪ್ರೀತಿಯ ವಸ್ತು ಬೀಹೈ ಪಾರ್ಕಿನಲ್ಲಿ ಅವಳಿಗೆ ಕವಿತೆಗಳನ್ನು ಹಾಡಿದ್ದು... ಯಾವಾಗಿರಬಹುದು...? ಇಷ್ಟು ವರುಷಗಳು ಅವಳು ತನ್ನ ಪ್ರೀತಿಯ ವಸ್ತುವಾಗಿದ್ದಾಳೆ. ಅವಳಿಲ್ಲದೆ ಬದುಕಿನ ಕಲ್ಪನೆಯೂ ಸಾಧ್ಯವಿಲ್ಲ! ಅವಳು ಬದುಕಿರಲೇಬೇಕು. ತನ್ನೊಂದಿಗೆ ಅವಳು ಜೊತೆಯಿರಲೇ ಬೇಕು!

ಕವಿತೆ!..... ಹಿಂದಿನಂತೆ ಅವಳಿಗೊಂದು, ಕವಿತೆ ಓದಬೇಕು! ಕವಿತೆಯ ಮೂಲಕವೇ ಅವಳನ್ನು ಗೆದ್ದುಕೊಂಡಿದ್ದು ಈ ದಿನವೂ ಅದೇ ಕವಿತೆಯನ್ನು ಹಾಡಿ ಅವಳು ಮರೆತಿರುವುದನ್ನೆಲ್ಲಾ ನೆನಪಿಸುತ್ತೇನೆ; ಬದುಕುವುದಕ್ಕೆ ಉತ್ಸಾಹ ತುಂಬುತ್ತೇನೆ!

ಅವಳ ಹಾಸಿಗೆಯ ಪಕ್ಕದಲ್ಲಿ ಮೊಣಕಾಲೂರಿ ಕುಳಿತು ಕಂಬನಿದುಂಬಿ ಕವಿತೆಯನ್ನು ಹಾಡತೊಡಗಿದ....

*ವೇಗದಿ ಚಲಿಸುವ ಹೊಳೆಯೊಂದು ನಾನಾದರೆ...*

*..........................*

*ನನ್ನ ಪ್ರೀತಿಯೊಂದು ಪುಟ್ಟ ಮೀನಾದರೆ*
*ನೊರೆಗಟ್ಟಿದ ತೆರೆಗಳ ಮೇಲೆ*
*ತೂಗಾಡುತ್ತಿತ್ತು*

ಕವಿತೆಯ ಸಾಲುಗಳು ಅವಳನ್ನು ಮುಟ್ಟಿರಬೇಕು. ಅವನ ಕಡೆಗೆ ತಿರುಗಿದಳು. ತುಟಿಗಳು ಸ್ವಲ್ಪವಾಗಿ ಅಲುಗಾಡಿದವು. ಘೂ ಅವಳ ಹತ್ತಿರಕ್ಕೆ ಬಾಗಿ ಅವಳ ಅಸ್ಪಷ್ಟವಾದ ಮಾತುಗಳನ್ನು ಕೇಳಿದ– "ನನಗೆ.... ನನಗೆ.... ಇನ್ನು ಈಜುವುದು ಸಾಧ್ಯವಿಲ್ಲ...."

ಗದ್ಗದ ಕಂಠನಾಗಿ ಮುಂದುವರೆಸಿದ–

*ನಾನೊಂದು ನಿರ್ಜನಾರಣ್ಯವಾಗಿದ್ದರೆ,*
*...............................*
*ನನ್ನ ಪ್ರೀತಿಯೊಂದು ಪುಟ್ಟ ಹಕ್ಕಿಯಾದರೆ*
*ದಟ್ಟವಾದ ನನ್ನ ಮರಗಳಲ್ಲಿ ಕುಳಿತು*
*ಗೂಡು ಕಟ್ಟಿ*
*ಚಿಲಿಪಿಲಿಗುಡುತ್ತಿತ್ತು.*

ಮೆದುವಾಗಿ ಗುಣುಗುಣಿಸಿದಳು.... "ನನಗೆ.... ನನಗೆ.... ಇನ್ನು ಹಾಡುವುದಕ್ಕೆ ಸಾಧ್ಯವಿಲ್ಲ..." ನೋವು ಹಿಂಡುತ್ತಿತ್ತು. ಮನಸ್ಸು ಧೈರ್ಯ ಮಾಡಿಕೊಂಡು ಕಂಬನಿ ದುಂಬಿಕೊಂಡೇ ಹಾಡಿದ.

*ನಾನೊಂದು ಉರುಳುವ ಭಗ್ನಾವಶೇಷವಾದರೆ*
*..................*
*ನನ್ನ ಪ್ರೀತಿಯೊಂದು*
*ಹಸಿರು ಐ ವೀ ಬಳ್ಳಿಯಾದರೆ*
*ಒಂಟಿಯಾಗಿ ನಿಂತ*
*ನನ್ನೊಡಲ ಸುತ್ತ ಬಳಸಿ*
*ಬೆಳೆಯುತ್ತಿತ್ತು!*

ಒಂದೇ ಸಮನೆ ಕಂಬನಿಗಳುದುರಿದವು. ಕೆನ್ನೆಗಳ ಮೇಲಿಂದ ಜಾರಿ ದಿಂಬಿನ ಮೇಲೆ ಬಿದ್ದವು. ಪ್ರಯತ್ನಪೂರ್ವಕವಾಗಿ ನುಡಿದಳು– "ನಾನು–ನಾನು–ಮೇಲೇರಲಾರೆ."

ಘೂ ಅವಳ ಮೇಲೆ ಬಿದ್ದು, ಗಟ್ಟಿಯಾಗಿ ಅಳುತ್ತಾ ಹೇಳಿದ,– ಗಂಡನಾಗಿ ನಿನಗೆ ಅನ್ಯಾಯ ಮಾಡಿದೆ...."

ಕಂಬನಿಗೊಂಡ ಕಣ್ಣು ತೆರೆದು ನೋಡಿದಾಗ ಅವನಿಗೆ ಆಶ್ಚರ್ಯವಾಯಿತು. ಲೂ ಮತ್ತೆ ನೀಲಿಬಾನೆಡೆಗೆ ಕಣ್ಣು ನೆಟ್ಟು ನೋಡುತ್ತಿದ್ದಳು. ಘೂನ ಅಳು, ಹಲುಬು, ಬಿಕ್ಕುಗಳು, ಮಾತುಗಳು– ಯಾವೊಂದೂ ಅವಳ ಮೇಲೆ ಪ್ರಭಾವ ಬೀರಿದಂತಿರಲಿಲ್ಲ.

ಘೂ ಬಿಕ್ಕುತ್ತಿದ್ದುದನ್ನು ಕೇಳಿಸಿಕೊಂಡ ಡಾಕ್ಟರೊಬ್ಬರು ರಭಸದಿಂದ ಒಳಗೆ ಬಂದರು. ಘೂರನ್ನು ಕುರಿತು ಹೇಳಿದರು–ದಯವಿಟ್ಟು ಸುಮ್ಮನಿರಿ. ಲೂ ತುಂಬ ಬಲಹೀನವಾಗಿದ್ದಾರೆ. ಅವರನ್ನು ಉದ್ರೇಕಗೊಳಿಸಬೇಡಿ."

ಮಧ್ಯಾಹ್ನವೆಲ್ಲ, ಘೂ ಮಾತಾಡದೆ ಸುಮ್ಮನಿದ್ದ. ಸಂಜೆ ಹೊತ್ತಿಗೆ ಲೂ ಸ್ವಲ್ಪ ಗುಣಮುಖಳಾದಂತೆ ಕಾಣಿಸಿತು. ಅವನ ಕಡೆ ತಿರುಗಿ ಮಾತಾಡಲು ಪ್ರಯತ್ನಿಸುತ್ತಿದ್ದಂತೆ ತೋರಿತು.

"ವೆಂಟಿಂಗ್, ಏನಾದರೂ ಹೇಳಬೇಕೂಂತಿದ್ದೀಯಾ?– ಹೇಳು.... ನನಗೆ ಹೇಳು...." – ಎಂದು ಅವಳ ಕೈಗಳನ್ನು ಭದ್ರವಾಗಿ ತನ್ನ ಕೈಗಳಲ್ಲಿ ಹಿಡಿದುಕೊಂಡ.

"ಯುಯಾನ್.... ಯುಯಾನ್‌ಗೆ.... ಒಂದು ಜೊತೆ ಜಿಮ್ ಷೂಗಳನ್ನು..."

"ನಾಳೆ ತೆಗೆದು ಕೊಡುತ್ತೇನೆ"- ಉಕ್ಕಿ ಬರುತ್ತಿದ್ದ ಕಣ್ಣೀರನ್ನು ಹತ್ತಿಕ್ಕಲಾರದೆ ಹೇಳಿದ.

ಲೂಗೆ ಇನ್ನೂ ಹೇಳುವುದಿತ್ತು. ಆದರೆ ತಡೆ ತಡೆದು ಮಾತು ಬರುತ್ತಿತ್ತು.... ಷಿಯಾ... ಜಡೆ... ಹೆಣೆ..."

"ಅದನ್ನೂ ಮಾಡುತ್ತೇನೆ"- ಬಿಕ್ಕುತ್ತಲೇ ವಚನ ಕೊಟ್ಟ, ತನ್ನ ಹೆಂಡತಿಯ ಕಡೆ ನೋಡಿದ. ದೃಷ್ಟಿ ಮಸುಕಾಗಿತ್ತು. ತನ್ನ ಹೆಂಡತಿ ಮತ್ತೇನಾದರೂ ಹೇಳುವಳೇನೋ... ತನ್ನನ್ನು ಕಾಡುತ್ತಿರುವ ವಿಷಯಗಳನ್ನೆಲ್ಲ ಹೇಳುವಳೆಂಬ ಆಸೆಯಿಂದ ಲಕ್ಷ್ಯಕೊಟ್ಟು ಕೇಳಿದ. ಆದರೆ ಅವಳ ತುಟಿಗಳು ಬಿಗಿದುಕೊಂಡವು. ಅವಳ ಶಕ್ತಿಯೆಲ್ಲ ಮುಗಿದುಹೋದಂತಿತ್ತು.

## ೨೧

ಎರಡು ದಿನಗಳ ನಂತರ ಲೂ ಹೆಸರಿಗೆ ಒಂದು ಪತ್ರ ಬಂತು. ಬೀಜಿಂಗ್ ಇಂಟರ್‌ನ್ಯಾಷನಲ್ ಏರ್‌ಪೋರ್ಟ್‌ನಲ್ಲಿ ಪೋಸ್ಟ್ ಮಾಡಲಾಗಿತ್ತು. ಫೂ ಅದನ್ನು ಬಿಡಿಸಿ ಓದಿದ-

*ಪ್ರೀತಿಯ ವೆಂಟಿಂಗ್,*

ನಿನಗೆ ಈ ಪತ್ರ ಎಂದಾದರೂ ತಲುಪುವುದೋ ಇಲ್ಲವೋ? ಆದರೆ ನಿನಗೆ ತಲುಪದಿರಲು ಸಾಧ್ಯವೇ ಇಲ್ಲ. ನೀನು ಬಹಳ ಅನಾರೋಗ್ಯದಿಂದಿರುವಿ. ಆದಷ್ಟು ಬೇಗ ಗುಣಮುಖಳಾಗುತ್ತೀ ಎಂದು ನಂಬಿದ್ದೇನೆ. ನೀನು ಇನ್ನೂ ಬೇಕಾದಷ್ಟು ಮಾಡಬಲ್ಲೆ. ನಮ್ಮನ್ನೆಲ್ಲ ಬಿಟ್ಟು ಹೋಗುವ ವಯಸ್ಸಲ್ಲ ನಿನ್ನದು!

ನೆನ್ನೆ ನಾನು ಮತ್ತು ನನ್ನ ಗಂಡ ಗುಡ್‌ಬೈ ಹೇಳಲು ಬಂದಾಗ, ನೀನಿನ್ನೂ ಪ್ರಜ್ಞಾಹೀನ ಸ್ಥಿತಿಯಲ್ಲಿಯೇ ಇದ್ದೆ. ಈದಿನ ಬೆಳಿಗ್ಗೆ ನಿನ್ನನ್ನು ನೋಡಬೇಕೆಂದುಕೊಂಡೆವು. ಆದರೆ ಬಹಳ ಕೆಲಸಗಳಿದ್ದವು. ನೆನ್ನೆ ರಾತ್ರಿ ಭೇಟಿಯೇ ಕೊನೆಯದು. ಅದನ್ನು ನೆನೆಸಿಕೊಂಡಾಗ ಅಸಾಧ್ಯವಾದ ದುಃಖವೆನಿಸುತ್ತದೆ. ಇಪ್ಪತ್ತು ವರ್ಷಗಳಿಗೂ ಹೆಚ್ಚಾಗಿ ನಾವಿಬ್ಬರೂ ಜೊತೆ ಜೊತೆಯಾಗಿ ಓದಿದೆವು; ಕೆಲಸ ಮಾಡಿದೆವು. ನಾವು ಪರಸ್ಪರ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಂತೆ, ಬಹುಶಃ ಯಾರಿಗೂ ಸಾಧ್ಯವಾಗುವುದಿಲ್ಲ. ಹೀಗೆ ಒಬ್ಬರಿಂದೊಬ್ಬರು ಅಗಲುತ್ತೇವೆಂದು ಯಾರು ತಾನೇ ಊಹಿಸಿದ್ದರು?

ಏರ್‌ಪೋರ್ಟ್‌ನಿಂದ ಈ ಪತ್ರ ಬರೆಯುತ್ತಿದ್ದೇನೆ. ನಾನು ಈ ಕ್ಷಣದಲ್ಲಿ ಎಲ್ಲಿ ನಿಂತಿರಬಹುದೆಂದು ಊಹಿಸಬಲ್ಲೆಯಾ? ಎರಡನೇ ಮಹಡಿಯಲ್ಲಿರುವ ಆರ್ಟ್ಸ್

ಮತ್ತು ಕ್ರಾಫ್ಟ್ ಕೌಂಟರಿನ ಮುಂದೆ! ಇಲ್ಲಿ ಯಾರೂ ಇಲ್ಲ. ಗಾಜಿನ ಕೌಂಟರಿನ ಮುಂದೆ ನಾನೊಬ್ಬಳೇ ಇದ್ದೇನೆ. ನೆನಪಿದೆಯಾ? ಮೊದಲ ಸಲ ನಾವು ವಿಮಾನದಲ್ಲಿ ಪ್ರಯಾಣ ಮಾಡಿದಾಗ, ಇಲ್ಲಿಗೂ ಬಂದಿದ್ದೆವು. ಇಲ್ಲೊಂದು ಹೂ ಕುಂಡದಲ್ಲಿ, ಕೃತಕವಾದ ನಾರ್ಸಿಸಸ್ ಹೂಗೊಂಚಲು–ಅದರ ಮೇಲೆ ಹಿಮಬಿಂದುಗಳು!... ಎಷ್ಟು ಸಹಜವಾಗಿದ್ದವು!! ಅದನ್ನು ನೋಡಿದ ನೀನು, ತುಂಬಾ ಮೆಚ್ಚಿಕೊಂಡಿದ್ದೆ. ಆದರೆ ಆದರ ಬೆಲೆಯನ್ನು ಕೇಳಿದ ಕೂಡಲೇ ಭೂಮಿಗೆ ಇಳಿದುಹೋಗಿದ್ದೆವು. ಈಗ ಅದೇ ಅಂಗಡಿಯ ಮುಂದೆ, ಅಂತಹುದೇ ಹೂಗಳನ್ನು ನೋಡುತ್ತಿದ್ದೇನೆ. ಬಣ್ಣ ಮಾತ್ರ ಬೇರೆ ಅಷ್ಟೆ! ಅದನ್ನು ನೋಡಿದ ಕೂಡಲೇ ಅಳು ಬಂತು. ಯಾಕೆಂದು ತಿಳಿಯಲಿಲ್ಲ. ಈಗ ಅರ್ಥವಾಗುತ್ತಿದೆ. ಯಾಕೆಂದರೆ ಅದೆಲ್ಲ ಗತ ಕಾಲದ (ಘಟನೆ) ಸ್ಮೃತಿಗಳಾಗಿವೆ.

ನಿನಗೆ ಆಗತಾನೇ ಘೂನ ಪರಿಚಯವಾದ ದಿನಗಳು. ಒಂದು ದಿನ ನಾವಿದ್ದ ಕೋಣೆಯೊಳಕ್ಕೆ ಬಂದು, ಪುಷ್ಕಿನ್‌ನ ಪದ್ಯದ ಸಾಲೊಂದನ್ನು ಹೇಳಿದ್ದ–'ಹಿಂದೆ ನಡೆದದ್ದೆಲ್ಲ ನೆನಪಿನಲ್ಲಿ, ಸಿಹಿಯಾಗಿ ಉಳಿಯುತ್ತವೆ' ಎಂದು. ಹಲ್ಲು ಬಿಗಿದು ನನ್ನಲ್ಲೇ ಹೇಳಿಕೊಂಡೆ 'ಅದೆಲ್ಲವೂ ಸುಳ್ಳು!' ನಾನು ಕೇಳಿದೆ– "ಹಿಂದಿನ ದೌರ್ಭಾಗ್ಯ, ದುರ್ದಿನಗಳು, ಮಧುರ ಸ್ಮೃತಿಗಳಾಗಿರುವುದಾದರೂ ಹೇಗೆ?" ಘೂಗೆ ಅಸಮಾಧಾನವಾಗಿರಬೇಕು. ನನಗೆ ಕವಿತೆ ಅರ್ಥವಾಗುವುದಿಲ್ಲ ಎನಿಸಿರಬೇಕು. ಈಗ ನಾನು ಅರ್ಥ ಮಾಡಿಕೊಂಡಿದ್ದೇನೆ. ಪುಷ್ಕಿನ್ ಹೇಳಿದ್ದು ಸರಿ. ನನ್ನ ಭಾವನೆ ಏನೆಂಬುದನ್ನು ಇದು ಪ್ರತಿಫಲಿಸುತ್ತದೆ. ನನಗನಿಸುತ್ತೆ, ಆ ಸಾಲನ್ನು ನನಗಾಗಿಯೇ ಬರೆದಿರಬೇಕು! ಗತಿಸಿದ್ದೆಲ್ಲವೂ ಮಧುರವಾಗಿರುವುದೆಂದೇ ಭಾವಿಸುತ್ತೇನೆ.

ಇದೋ ವಿಮಾನದ ಎಂಜಿನ್ನುಗಳು ಆರಂಭವಾಗಿವೆ. ಇನ್ನೇನು ಸ್ವಲ್ಪ ಹೊತ್ತಿಗೆ ಮುಗಿಲಿಗೆ ಹಾರುತ್ತದೆ. ಎಲ್ಲಿಗೆ ಹೋಗುವುದು? ಇನ್ನೊಂದು ಗಂಟೆಯಲ್ಲಿ ವಿಮಾನ ಹತ್ತುತ್ತೇನೆ. ನನ್ನ ನಾಡಿನಿಂದ ದೂರ ಹೋಗುತ್ತೇನೆ. ಕೇವಲ ಅರವತ್ತು ನಿಮಿಷಗಳು, ಹಾರಲು! ಅಳುವುದನ್ನು ಬಿಟ್ಟರೆ ನನಗೆ ಬೇರೇನೂ ಉಳಿದಿಲ್ಲ. ಈ ಪತ್ರ ನನ್ನ ಕಂಬನಿಯಿಂದ ತೊಯ್ದಿದೆ. ಆದರೇನು ಮಾಡಲಿ? ಬೇರೆ ಪತ್ರ ಬರೆಯಲು ನನಗೆ ವೇಳೆಯಿಲ್ಲ.

ಮನಸ್ಸಿಗೆ ಏನೋ ದುಗುಡ, ಇದ್ದಕ್ಕಿದ್ದಂತೆ 'ನಾನು ತಪ್ಪು ನಿರ್ಧಾರವನ್ನು ಮಾಡಿದ್ದೇನೇ ಎನಿಸತೊಡಗಿದೆ. ಇಲ್ಲಿರುವುದೇನನ್ನೂ ಬಿಟ್ಟು ಹೋಗಲು ಮನಸ್ಸು ಬರುತ್ತಿಲ್ಲ. ಇಲ್ಲ! – ನಮ್ಮ ಆಸ್ಪತ್ರೆ, ಆಪರೇಟಿಂಗ್ ಥಿಯೇಟರ್, ಕಡೆಗೆ ನಮ್ಮ ಕ್ಲಿನಿಕ್‌ನ ಆ ಪುಟ್ಟ ಡೆಸ್ಕ್– ಯಾವುದನ್ನೂ ಮರೆಯಲಾಗುತ್ತಿಲ್ಲ. ಡಾ॥ ಸನ್‌ರು ಬಹಳ ನಿಷ್ಠುರ. ಏನಾದರೂ ತಪ್ಪು ಮಾಡಿದರೆ ಕ್ಷಮಿಸುವುದೇ ಇಲ್ಲ. ಟೀಕಿಸುತ್ತಾರೆ– ಎಂದೆಲ್ಲಾ ಗೊಣಗುತ್ತಿದ್ದೆ. ಆದರೆ ಈಗ ಅವರ ಟೀಕೆಯನ್ನು ಮತ್ತೆ ಕೇಳಬೇಕೆನಿಸುತ್ತಿದೆ. ಬಹಳ ಶಿಸ್ತಿನ ಉಪಾಧ್ಯಾಯರು. ಅವರು ಹಾಗಿಲ್ಲದಿದ್ದರೆ, ಇವತ್ತು ನಾನು ಇಷ್ಟೊಂದು ನೈಪುಣ್ಯವನ್ನು ಪಡೆಯಲಾಗುತ್ತಿರಲಿಲ್ಲ!

ಧ್ವನಿವರ್ಧಕಗಳು, ಪ್ರಯಾಣಿಕರಿಗೆ ಶುಭ ಪ್ರಯಾಣವನ್ನು ಕೋರುತ್ತಿವೆ. ನನ್ನ ಪ್ರಯಾಣ ಸುಖವಾಗಿ, ಶುಭವಾಗಿ ಇರುವುದೇ? ಇನ್ನೊಂದು ಗಳಿಗೆಯಲ್ಲಿ ವಿಮಾನವನ್ನು ಹತ್ತಬೇಕೆಂದು ಯೋಚಿಸಿದರೇನೆ–ಹೇಗೋ ಆಗುತ್ತದೆ. ನಾನೆಲ್ಲಿ ತಲುಪುತ್ತೇನೆ? ನನ್ನ ಭವಿಷ್ಯದಲ್ಲೇನಿದೆ? ನನಗೇಕೋ ಭಯವಾಗುತ್ತಿದೆ! ಹೌದು. ಭಯದಿಂದ ತಲ್ಲಣಿಸುತ್ತಿದ್ದೇನೆ! ಪರದೇಶದಲ್ಲಿ, ಅದೂ ನಮಗಿಂತ ಎಲ್ಲ ರೀತಿಯಲ್ಲಿ ಭಿನ್ನವಾಗಿರುವ ಎಡೆಯಲ್ಲಿ ಹೊಂದಿಕೊಳ್ಳಬಲ್ಲೆನೇ? ನೆಮ್ಮದಿಯಿಂದ ಇರಬಲ್ಲೆನೇ?

ನನ್ನ ಗಂಡ ಕುರ್ಚಿಯೊಂದರಲ್ಲಿ ಆಲೋಚನಾ ಮಗ್ನನಾಗಿ ಕುಳಿತಿದ್ದಾನೆ. ಹೊರಡುವ ಸಿದ್ಧತೆಗಳಲ್ಲಿ ತೊಡಗಿದ್ದವನಿಗೆ ಒಂದಿಷ್ಟೂ ಬಿಡುವು ಸಿಕ್ಕಿರಲಿಲ್ಲ. ಅವನು ಮಾತ್ರ ನಿರ್ಧಾರದಲ್ಲಿ ದೃಢವಾಗಿದ್ದ. ಆದರೆ ನೆನ್ನೆ ರಾತ್ರಿ ಕೊನೆಯದಾಗಿ ಕೋಟೊಂದನ್ನು ಸೂಟ್‌ಕೇಸ್ ಒಳಗೆ ಇಡುತ್ತಿದ್ದಾಗ ದಿಢೀರನೆ ಹೇಳಿದ– "ನಾಳೆಯಿಂದ ನಾವು ಮನೆಯಿಲ್ಲದವರಾಗುತ್ತೇವೆ!" ಆ ಕ್ಷಣದಿಂದ ಅವನು ಮಾತನ್ನೇ ಆಡಿದ್ದಿಲ್ಲ. ನನಗನಿಸುತ್ತೆ, ಅವನ ಮನಸ್ಸಿನಲ್ಲಿಯೂ ಹೊಯ್ದಾಟ ನಡೆದಿರಬೇಕು ಅಂತ ಅನಿಸಿದೆ.

ಯಾಯಾಗೆ ಮಾತ್ರ ಈ ಪ್ರಯಾಣದಿಂದ ತುಂಬಾ ಖುಷಿಯಾಗಿದೆ. ಅವಳಂತು ಅಳುಕು, ಉದ್ವಿಗ್ನತೆಗಳಿಂದ ಕೂಡಿದ್ದಳು. ಒಂದೊಂದು ಸಲ ಒಂದೆರಡೇಟು ಕೊಡೋಣಾಂತ ಯೋಚಿಸಿದ್ದುಂಟು. ಈಗವಳು ಗಾಜಿನ ಬಾಗಿಲಿನೊಳಗಿಂದ ವಿಮಾನಗಳು ಇಳಿಯುವುದನ್ನು, ಏರುವುದನ್ನು ನೋಡುತ್ತಾ ನಿಂತಿದ್ದಾಳೆ. ಅವಳಿಗೂ ದೇಶ ಬಿಡಲು ಇಷ್ಟವಿಲ್ಲವೇನೋ ಎನಿಸಿದೆ.

ನಿಮ್ಮಿಂದ ಬೀಳ್ಕೊಡಲು ಆ ದಿನ ರಾತ್ರಿ ಬಂದಿದ್ದಾಗ, ನೀನು ಕೇಳಿದೆ– ಈಗಲೂ ಮನಸ್ಸು ಬದಲಾಯಿಸಲು ಆಗುವುದಿಲ್ಲೇ? ಎಂದು.

ಆ ಪ್ರಶ್ನೆಗೆ ಒಂದೇಸಲಕ್ಕೆ ಒಂದೇ ವಾಕ್ಯದಲ್ಲಿ ಉತ್ತರ ಕೊಡೋಕೆ ಆಗುವುದಿಲ್ಲ. ನಾನು ಮತ್ತು ಲಿಯು ಇದರ ಬಗ್ಗೆ ತಿಂಗಳುಗಳಿಂದ ಪ್ರತಿದಿನ ಚರ್ಚೆ ಮಾಡುತ್ತಲೇ ಇದ್ದೇವೆ. ನಮ್ಮ ತಲೆ ಚಿಟ್ಟು ಹಿಡಿದಂತಿದೆ. ಚೈನಾಬಿಟ್ಟು ಹೋಗುವುದಕ್ಕೆ ಬೇರೆ ಕಾರಣಗಳು ಎಷ್ಟೋ ಇವೆ. ಯಾಯಾಗಾಗಿ, ಲಿಯುಗಾಗಿ ಕೊನೆಗೆ ನನಗಾಗಿಯೂ ಕೂಡ. ನಮ್ಮ ಸ್ವಂತ ಸಮಾಧಾನಕ್ಕಾಗಿ ಏನೇ ಕಾರಣಗಳನ್ನು ಹೇಳಿಕೊಂಡರೂ, ನಮ್ಮ ನೋವಂತೂ ಕಡಿಮೆಯಾಗುವುದಿಲ್ಲ. ಚೈನಾ ಹೊಸಯುಗವನ್ನು ಆರಂಭಿಸುತ್ತಿರುವಾಗ, ನಾವು ಹೋಗಬಾರದಿತ್ತು. ನಮ್ಮ ನಮ್ಮ ಕರ್ತವ್ಯಗಳಿಂದ ಜಾರಿಕೊಳ್ಳುವುದಕ್ಕೆ ನೆಪಗಳು ಬೇಕಾಗಿರಲಿಲ್ಲ.

ನಿನಗೆ ಹೋಲಿಸಿದರೆ, ನನ್ನಲ್ಲಿ ಅಷ್ಟೊಂದು ಆತ್ಮಸ್ಥೈರ್ಯವಿಲ್ಲ. ನನ್ನದು ದುರ್ಬಲ ವ್ಯಕ್ತಿತ್ವ. ಕಳೆದ ಹತ್ತು ವರುಷಗಳಲ್ಲಿ ನನಗಿಂತ ಹೆಚ್ಚಿನ ಕಷ್ಟಗಳನ್ನು ಅನುಭವಿಸಿದ್ದು ನೀನೇ. ನೀನು ಅವುಗಳನ್ನು ಎದುರಿಸಿದ ಹಾಗೆ ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಯಾರಾದರೂ ನನ್ನನ್ನು ಕೀಳಾಗಿ ಮಾತಾಡಿದರೆ, ಎಷ್ಟೋ ಸಲ ಸಹನೆ ಕಳೆದುಕೊಂಡು

ಸಿಡಿದೇಳುತ್ತಿದ್ದೆ. ನಿನ್ನಷ್ಟು ಬಲ ನನ್ನಲ್ಲಿಲ್ಲ. ನನ್ನ ದೌರ್ಬಲ್ಯವನ್ನು, ನನ್ನ ವರ್ತನೆಯಿಂದ ತಿಳಿಯಬಹುದು. ಈ ತರಹ ಅವಮಾನಕ್ಕೆ ಒಳಗಾಗುವುದಕ್ಕಿಂತ ಸಾಯುವುದೇ ಲೇಸೆಂದು ಭಾವಿಸಿದ್ದೆ. ಆದರೆ ಯಾಯಾ ಇದ್ದ-ಅದು ಹೇಗೆ ಆ ದಿನಗಳಲ್ಲಿ ಅವನನ್ನು ಸಾಕಿದೆನೋ! ನನಗೆ ಆಶ್ಚರ್ಯವಾಗುತ್ತಿದೆ. ಲಿಯು ಬೇರೆ ಆ ದಿನಗಳಲ್ಲಿ 'ಶತ್ರುವಿನ ಏಜೆಂಟ್' ಎಂಬ ಸುಳ್ಳು ಆರೋಪಕ್ಕೆ ಒಳಗಾಗಿ, ಸೆರೆಯೊಳಗಿದ್ದ!

ಇವೆಲ್ಲವೂ ಹಿಂದಿನ ಕಹಿ ಅನುಭವಗಳು. ಫೂ ಹೇಳುತ್ತಿದ್ದುದು ಸರಿ ಎನಿಸುತ್ತದೆ. "ಕತ್ತಲು ಕಳೆದಿದೆ, ಸುಪ್ರಭಾತ ಮೊಳಗಿದೆ" ಆದರೆ ತೊಂದರೆಯೇನೆಂದರೆ, ಕೆಟ್ಟ ಪ್ರಭಾವದಿಂದ ಬೇಗ ಮುಕ್ತವಾಗಲು ಸಾಧ್ಯವಾಗುವುದಿಲ್ಲ. ಸರ್ಕಾರದ ಸಿದ್ಧಾಂತಗಳು ಜನರನ್ನು ತಲುಪಬೇಕಾದರೆ ಸಾಕಷ್ಟು ಸಮಯ ಹಿಡಿಸುತ್ತೆ. ಅಸಮಾಧಾನ, ಅಸಂತೃಪ್ತಿಗಳು ಅಷ್ಟು ಸುಲಭದಲ್ಲಿ ಸಾಯುವುದಿಲ್ಲ. ಊಹಾಪೋಹಗಳು ವ್ಯಕ್ತಿಗಳನ್ನು ಕೊಲ್ಲುತ್ತವೆ. ಅದರ ಬಗ್ಗೆ ನೆನೆಸಿಕೊಂಡರೆ ಮೈ ನಡುಗುತ್ತದೆ. ನಿನ್ನಷ್ಟು ಧೈರ್ಯ ನನಗಿಲ್ಲ!

ನನಗಿನ್ನೂ ನೆನಪಿದೆ. ಆ ಸಭೆಯಲ್ಲಿ ನಮ್ಮಿಬ್ಬರನ್ನು 'ಬೂರ್ಜ್ವಾ ಸ್ಪೆಷಲಿಸ್ಟ್' ಅಂತ ಕರೆದಿದ್ದರು. ನಾವಿಬ್ಬರೂ ಆಸ್ಪತ್ರೆಯಿಂದ ಹೊರಟಾಗ ನಾನು ಹೇಳಿದೆ- "ಇದೆಲ್ಲ ನನಗೆ ಅರ್ಥವಾಗೊಲ್ಲ. ನಿಸ್ವಾರ್ಥವಾಗಿ ಅವರವರ ಕ್ಷೇತ್ರಗಳಲ್ಲಿ ಹಗಲಿರುಳೂ ದುಡಿಯುವವರನ್ನು ತುಳಿಯುವ ಮನೋಭಾವ ಯಾಕೆ? ಇಂತಹ ಸಭೆಗಳನ್ನು ಪ್ರತಿಭಟನೆಯ ಸಂಕೇತವಾಗಿ ಅಟೆಂಡ್ ಮಾಡುವುದಿಲ್ಲ!" ಆದರೆ ನೀನು ಹೇಳಿದೆ- "ಅದೆಲ್ಲ ಮರೆತುಬಿಡು. ಅವರು ಬೇಕಾದರೆ ನೂರೆಂಟು ಇಂತಹ ಸಭೆಗಳನ್ನು ಕರೆಯಲಿ, ನಾನು ಹೋಗಿಯೇ ಹೋಗುತ್ತೇನೆ. ನಾವು ಆಪರೇಷನ್‌ಗಳನ್ನಂತೂ ಮಾಡಲೇಬೇಕು. ನಾನು ಮನೆಯಲ್ಲಿ ನನಗೆ ಬೇಕಾದ್ದನ್ನು ಓದಿಕೊಳ್ಳುತ್ತೇನೆ." ನಾನು ಕೇಳಿದೆ- "ನಿನಗೆ ಅನ್ಯಾಯ ಆಗಿದೇಂತ ಯೋಚನೆ ಮಾಡಲು ಬಿಡುವೆಲ್ಲಿದೆ? ನೀನು ಮುಗುಳ್ನಕ್ಕು ಹೇಳಿದೆ- ನನಗೆ ಬೇಕಾದಷ್ಟು ಕೆಲಸವಿದೆ. ಅದೆಲ್ಲಾ ಯೋಚನೆ ಮಾಡಲು ಬಿಡುವೆಲ್ಲಿದೆ? ನಿನ್ನನ್ನು ನಾನು ಮೆಚ್ಚಿಕೊಂಡೆ. ನಾವಿಬ್ಬರೂ ಬೀಳ್ಕೊಳ್ಳುತ್ತಿದ್ದಾಗ, "ಫೂಗೆ ಇದೆಲ್ಲವನ್ನೂ ಹೇಳಬೇಡ ಅಂತ ಎಚ್ಚರಿಸಿದೆ. ಅವನಿಗೆ ತನ್ನದೇ ಬೇಕಾದಷ್ಟು ತೊಂದರೆಗಳಿವೆ." ನಿನ್ನ ಮಾತಿನಲ್ಲಿ ಅವನ ಬಗ್ಗೆ ಕಳಕಳಿಯನ್ನು ಗುರುತಿಸಿದೆ. ಮೌನವಾಗಿ ನಡೆಯುತ್ತಿದ್ದೆವು. ನೀನು ಬಹಳ ಶಾಂತವಾಗಿ, ಆತ್ಮವಿಶ್ವಾಸದಿಂದ ಇದ್ದುದನ್ನು ಗಮನಿಸಿದೆ. ಅದನ್ನು ಅಲುಗಾಡಿಸಲು ಯಾರಿಂದಲೂ ಸಾಧ್ಯವಿಲ್ಲ. ಅಂತಹ ನಿರ್ಧಾರ ಇದ್ದುದರಿಂದಲೇ ಎಲ್ಲ ಬಗೆಯ ಹಲ್ಲೆಗಳನ್ನು ಸಹಿಸಿಕೊಂಡು ನಿನ್ನ ದಾರಿಯಲ್ಲಿ ನೀನು ನಡೆದೆ. ನಿನ್ನಲ್ಲಿರುವ ಸ್ಥೈರ್ಯ, ಮನೋನಿರ್ಧಾರಗಳಲ್ಲಿ, ಅರ್ಧದಷ್ಟಾದರೂ ನನಗಿದ್ದಿದ್ದರೆ ಇಂದು ಇಂತಹ ನಿರ್ಧಾರಕ್ಕೆ ಬರುತ್ತಿರಲಿಲ್ಲ.

ಕ್ಷಮಿಸು! ಇಷ್ಟು ಮಾತ್ರ ಸದ್ಯಕ್ಕೆ ಹೇಳಬಲ್ಲೆ. ಇದೋ ಹೊರಡುತ್ತಿದ್ದೇನೆ. ನನ್ನ ಹೃದಯವನ್ನು ನಿನ್ನೊಂದಿಗೆ ನನ್ನ ತಾಯ್ನಾಡಿನೊಂದಿಗೆ ಬಿಟ್ಟು ಹೋಗುತ್ತಿದ್ದೇನೆ. ಎಲ್ಲೇ ಹೋದರೂ ನನ್ನ ಚೈನಾವನ್ನು ನಾನು ಮರೆಯುವುದಿಲ್ಲ. ನನ್ನ ಮಾತನ್ನು ನಂಬು! ನಾನು ಖಂಡಿತ ನನ್ನ ತಾಯ್ನಾಡಿಗೆ ಮರಳಿ ಬರುತ್ತೇನೆ. ಕೆಲವು ವರ್ಷಗಳಾದ ಮೇಲೆ ಯಾಯಾ ದೊಡ್ಡವನಾಗುತ್ತಾನೆ. ನಾವೂ ವೈದ್ಯಕೀಯ ಕ್ಷೇತ್ರದಲ್ಲಿ ಏನಾದರೂ ಸಾಧಿಸಿರುತ್ತೇವೆ. ಆಗ ಎಲ್ಲರೂ ಹಿಂತಿರುಗಿ ಬರುತ್ತೇವೆ.

ಆದಷ್ಟು ಬೇಗ ನೀನು ಗುಣಮುಖಳಾಗುತ್ತೀ ಎಂದು ಭಾವಿಸುತ್ತೇನೆ! ನಿನ್ನ ಈ ಅನಾರೋಗ್ಯ, ಮುಂದಾದರೂ, ಆರೋಗ್ಯದ ಬಗ್ಗೆ ಗಮನ ಕೊಡಬೇಕೆಂಬುದಕ್ಕೆ ಪಾಠವಾಗಲಿ. ನೀನು ಸ್ವಾರ್ಥಿಯಾಗಬೇಕೆಂದು ನಾನು ಹೇಳುತ್ತಿಲ್ಲ. ನಿನ್ನ ನಿಸ್ವಾರ್ಥತೆಯನ್ನು ಎಂದಿನಿಂದಲೂ ಮೆಚ್ಚಿಕೊಂಡಿದ್ದೇನೆ. ನಿನ್ನ ಪ್ರತಿಭೆಯ ಪೂರ್ಣ ಪ್ರಯೋಜನಕ್ಕಾಗಿ, ದೇವರು ನಿನಗೆ ಒಳ್ಳೆಯ ಆರೋಗ್ಯವನ್ನು ಕೊಡಲಿ!

ಗುಡ್‌ಬೈ, ನನ್ನ ಪ್ರೀತಿಯ ಗೆಳತಿ!

ಪ್ರೀತಿಯೊಂದಿಗೆ

ಯಾಫೈನ್

ಒಂದೂವರೆ ತಿಂಗಳು ಕಳೆದ ಮೇಲೆ, ಡಾ॥ ಲೂ ಸಾಕಷ್ಟು ಗುಣ ಹೊಂದಿದಳು. ಮನೆಗೆ ಹೋಗಲು ಅನುಮತಿ ದೊರೆಯಿತು.

ಅನೇಕ ಸಲ ಸಾವಿನಂಚಿನಲ್ಲಿದ್ದು, ಉಳಿದು ಬಂದದ್ದು ಒಂದು ದೊಡ್ಡ ಪವಾಡವೇ ಆಗಿತ್ತು. ಡಾಕ್ಟರುಗಳಿಗೆ ಆಶ್ಚರ್ಯ! ಸಂತೋಷ.

ಆ ದಿನ ಬೆಳಗ್ಗೆ, ಫೂ ತುಂಬಾ ಉತ್ಸಾಹದಿಂದಲೇ, ಕಾಟನ್ ಪ್ಯಾಡೆಡ್ ಜಾಕೆಟ್ಟನ್ನು ಲೂಗೆ ತೊಡಿಸಿದ; ವುಲ್ಲನ್ ಟ್ರೌಸರ್ಸ್ ತೊಡಿಸಿದ. ಮೇಲೊಂದು ನೀಲಿಯ ಬಣ್ಣದ ಓವರ್ ಕೋಟು, ಕತ್ತಿನ ಸುತ್ತಲೂ ಬೆಚ್ಚನೆಯ ಸ್ಕಾರ್ಫ್ ಸುತ್ತಿದ.

"ಮನೆಯಲ್ಲಿ ಎಲ್ಲಾ ಸರಿಯಾಗಿದೆಯೇ?" – ಲೂ ಕೇಳಿದಳು.

"ಓ, ಎಲ್ಲಾ ಚೆನ್ನಾಗಿದೆ. ನಿನ್ನ ಪಾರ್ಟಿಯ ಸಹ ಸದಸ್ಯರು ನೆನ್ನೆ ಬಂದಿದ್ದು ಮನೆಯನ್ನೆಲ್ಲಾ ಚೊಕ್ಕಟಗೊಳಿಸಿದರು."

ಕ್ಷಣದಲ್ಲಿ ಅವಳ ಆಲೋಚನೆಗಳು ಮನೆಯ ಕಡೆ ತಿರುಗಿದವು. ಸಣ್ಣ ಕೊಠಡಿ.... ದೊಡ್ಡ ಪುಸ್ತಕ ಬೀರು, ಬಿಳಿ ಬಣ್ಣದ ಪರದೆ.... ಕಿಟಕಿಯ ಮೇಲಿದ್ದ ಪುಟ್ಟ ಅಲಾರಂ ಗಡಿಯಾರ.... ಬರೆಯುವ ಮೇಜು.... ಎಲ್ಲವೂ ಕಣ್ಮುಂದೆ ಸುಳಿದವು.

ಬೆಚ್ಚನೆಯ ಉಡುಪನ್ನು ಧರಿಸಿದ್ದರೂ, ಚಳಿಯಾಗುತ್ತಿತ್ತು. ಸುಸ್ತಾದಂತೆ ಕಾಣುತ್ತಿದ್ದಳು. ನಿಲ್ಲಲು ಪ್ರಯತ್ನಿಸಿದಾಗ, ಕಾಲುಗಳು ಕಂಪಿಸಿದವು. ಒಂದು ಕೈಯಿಂದ ಗಂಡನ ಭುಜಗಳನ್ನು ಹಿಡಿದುಕೊಂಡು ಮತ್ತೊಂದು ಕೈಯನ್ನು ಗೋಡೆಗೆ ಊರಿದಳು. ಹೆಜ್ಜೆ ಹಾಕುತ್ತಿದ್ದಾಗ, ಹೆಚ್ಚಿನ ಭಾರ ಫೂ ಮೇಲೆ ಬೀಳುತ್ತಿತ್ತು. ನಿಧಾನವಾಗಿ ವಾರ್ಡಿನಿಂದ ಹೊರಗೆ ನಡೆದಳು.

ಜಾವೋ, ಸನ್ ಮತ್ತು ಇತರೆ ಸಹೋದ್ಯೋಗಿಗಳು ಅವಳ ಪ್ರಗತಿಯನ್ನು ಗಮನಿಸುತ್ತಾ ಬಾಗಿಲ ಕಡೆ ಅವಳನ್ನು ಹಿಂಬಾಲಿಸಿ ನಡೆದರು.

ಎರಡು ದಿನಗಳಿಂದ ಮಳೆಯಾಗಿತ್ತು. ಮರಗಳ ಕೊಂಬೆಗಳ ನಡುವಿನಿಂದ ಊಳಿಡುವ ಗಾಳಿ ಬೀಸಿಬರುತ್ತಿತ್ತು. ಸೂರ್ಯನ ಬೆಳಕು ಪ್ರಖರವಾಗಿತ್ತು. ಮಳೆಯಾದ ಮೇಲೆ ಮತ್ತಷ್ಟು ಬೆಳಗುತ್ತಿದ್ದ ಸೂರ್ಯನ ಕಿರಣಗಳು ಕಾರಿಡಾರಿನ ಕಿಟಕಿಗಳ ಮೂಲಕ ಹಾದು ಬರುತ್ತಿದ್ದವು. ಜೊತೆಗೆ ತಣ್ಣನೆಯ ಗಾಳಿಯೂ ಬೀಸಿ ಒಳನುಗ್ಗಿತು. ಹೆಂಡತಿಗೆ ಆಸರೆ ಕೊಡುತ್ತಾ ನಿಧಾನವಾಗಿ ಗಾಳಿ, ಬೆಳಕಿನೆಡೆಗೆ ಮುಖ ಮಾಡಿ ಕರೆದೊಯ್ಯುತ್ತಿದ್ದ.

ಮೆಟ್ಟಿಲುಗಳ ಬಳಿ ಕಪ್ಪು ಬಣ್ಣದ ಕಾರೊಂದು ಇವರಿಗಾಗಿ ಕಾಯುತ್ತಿತ್ತು. ಜಾವೋರ ಪ್ರಾರ್ಥನೆಯ ಮೇರೆಗೆ ಅಡ್ಮಿನಿಸ್ಟ್ರೇಷನ್ ಡಿಪಾರ್ಟ್‌ಮೆಂಟಿನಿಂದ ಕಳಿಸಿಕೊಟ್ಟಿದ್ದರು.

ಗಂಡನ ಭುಜಗಳನ್ನು ಆನಿಕೊಂಡು, ಲೂ ನಿಧಾನವಾಗಿ ಗೇಟಿನ ಕಡೆಗೆ ಹೆಜ್ಜೆ ಹಾಕಿದಳು.

*(ಮೂಲ: ಯೂ ಫಾಂಕಿನ್ ಮತ್ತು ವಾಗ್ ಮಿಂಗ್ಜಿಯವರ ಇಂಗ್ಲೀಷ್ ಭಾಷಾಂತರ)*

# ಶಾಲ್ಮಲಿ

(ಕರ್ನಾಟಕ ಅನುವಾದ ಅಕಾಡೆಮಿ ಪ್ರಶಸ್ತಿ ಪಡೆದ ಕೃತಿ)

ನಾನೊಂದು ಒಣ ಮರ. ಹೂವಿಲ್ಲ; ರೆಂಬೆ ಕೊಂಬೆಗಳಿಲ್ಲ; ಒಂದೆಲೆ ಇಲ್ಲ; ನೆರಳಿಲ್ಲ; ತಂಪಿಲ್ಲ. ಯಾರಿಗೆ ಬೇಕಿದೆ ಈ ಮರದ ಆಸರೆ? ನೀರಿನ ಒರತೆಯೂ ಬತ್ತಿದೆ, ನನ್ನ ಬೇರುಗಳು ತೇವಕ್ಕಾಗಿ ತುಡಿಯುತ್ತಿವೆ. ನನ್ನಿಂದ ಪ್ರಯೋಜನವಾದರೂ ಏನು? ಬರಿ ಸುಟ್ಟು ಇದ್ದಿಲಾಗುವುದು, ಅಷ್ಟೆ?

ಕರೆಗಂಟೆಯ ಸದ್ದಾಯಿತು. ತರಕಾರಿ ಹೆಚ್ಚುತ್ತಿದ್ದ ಶಾಲ್ಮಲಿಯ ಯೋಚನೆ ಕಡಿದು ಬಿತ್ತು. ಬೇಗನೆ ಮುಖದ ಮೇಲಿನ ಬೆವರನ್ನು ಸೆರಗಿನಿಂದ ಒರೆಸಿಕೊಂಡು ಎದ್ದು ಹೋಗಿ ಬಾಗಿಲು ತೆರೆದಳು. ಎದುರಿಗೆ ನರೇಶ್ ನಿಂತಿದ್ದ. ಮೆಲ್ಲನೆ ನಕ್ಕಳು.... ಅವನು ನಗಲಿಲ್ಲ ಪ್ರತಿಯಾಗಿ ಕ್ರೂರವಾಗಿ ನೋಡಿದ ಏನನ್ನೂ ಹೇಳದೆ ಒಳಗೆ ಪ್ರವೇಶಿಸಿದ. ಶಾಲ್ಮಲಿ ಬಾಗಿಲ ಚಿಲಕ ಹಾಕಿ ಅಡುಗೆ ಮನೆ ಕಡೆ ನಡೆದಳು.

ಎರಡು ವರ್ಷಗಳಿಂದಲೂ ತಮ್ಮಿಬ್ಬರ ನಡುವೆ ನಡೆಯುತ್ತಿದ್ದ ಶೀತಲ ಸಮರಕ್ಕೆ ಹೊಂದಿಕೊಂಡು ಬಿಟ್ಟಿದ್ದಳು. ಯಾವ ಕ್ಷಣದಲ್ಲಾದರೂ ಘಟಿಸ

ಬಹುದಾದ ಸ್ಫೋಟಕ್ಕೆ, ಆಕ್ರಮಣಕ್ಕೆ ಸಿದ್ಧವಾಗಿಯೇ ಇದ್ದಳು. ಬಹಳ ಜಾಗರೂಕತೆಯಿಂದ ಎಚ್ಚರಿಕೆಯಿಂದ ಇರುತ್ತಿದ್ದುದರಿಂದ ಮುಂಬರುವ ಅಪಾಯದ ವಾಸನೆ ಹತ್ತಿ ಬಿಡುತ್ತಿತ್ತು. ಶಾಂತವಾಗಿ, ಸಮಾಧಾನವಾಗಿ ಮೇಲೆ ಕಾಣಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದರೂ ಅದು ಅವಳಿಂದ ಸಾಧ್ಯವಾಗಿರಲಿಲ್ಲ.

"ಆ ಕಾಗದವನ್ನು ಕೊಟ್ಟೆಯಾ?" ನರೇಶ್ ಕೇಳಿದ.

"ಹೋಗಿದ್ದೆ, ಆದರೆ ಕೆಲಸ ಆಗಲಿಲ್ಲ" ಚಹದ ಟ್ರೇಯನ್ನು ಮೇಜಿನ ಮೇಲಿಡುತ್ತಾ ಹೇಳಿದಳು.

"ಹೌದು ಹೇಗಾಗುತ್ತೆ? ನನ್ನ ಕೆಲಸ ನೀನು ಯಾಕೆ ಮಾಡ್ತೀಯ? ನನಗೆ ಮೊದಲೇ ಹೀಗಾಗುತ್ತೇಂತ ಗೊತ್ತಿತ್ತು.....ಇರಲಿ ಬಿಡು....ಆ ಕವರ್ ಈ ಕಡೆ ಕೊಡು. ನಾನೇ ನನ್ನ ಕೆಲ್ಸ ಮಾಡ್ಕೊಂಡು ಬರ್‍ತೀನಿ" ಸಿಟ್ಟಿನಿಂದಲೇ ಶಾಲ್ಮಲಿ ನೀಡಿದ ಚಹದ ಬಟ್ಟಲನ್ನು ತೆಗೆದುಕೊಂಡು.

"ಹೋಗೋಕೆ ಮೊದಲು ಮೂರನೇ ಪುಟದಲ್ಲಿ ಸಹಿ ಮಾಡಿ. ಇಲ್ಲಾಂದ್ರೆ ನನ್ನ ಹಾಗೆ ನೀವೂ ವಾಪಸ್ ಬರಬೇಕಾಗುತ್ತೆ" ಶಾಲ್ಮಲಿ ಮುಗುಳು ನಗುತ್ತಲೇ ಚಹದ ಗುಟುಕನ್ನು ಗುಟುಕರಿಸಿದಳು. ಮಾತಾಡಲಿಲ್ಲ. ಅವಳ ಆ ಮೌನ ನರೇಶನ ಕೋಪವನ್ನಷ್ಟು ನಂದಿಸಿತು. ಸುಮ್ಮನೆ ಎದ್ದು ಸ್ನಾನಕ್ಕೆಂದು ಒಳ ನಡೆದ. ಮುಖದಲ್ಲಿ ಕಾಣಿಸಿಕೊಂಡಿದ್ದ ಮಂದಹಾಸಮಾಯವಾಗಿ ನೋವಿನ ನೆರಳು ಕವಿಯಿತು. ಒಂದೇ ಸಮನೆ ಚಹದ ಬಟ್ಟಲನ್ನು ದಿಟ್ಟಿಸಿದಳು. ನಂತರ ಎದ್ದು ನರೇಶನ ಬ್ರೀಫ್ ಕೇಸ್, ಷರ್ಟು ಚಪ್ಪಲಿಗಳನ್ನು ಎತ್ತಿ ಅವುಗಳ ಜಾಗದಲ್ಲಿ ಇರಿಸಿದಳು.

ಮದುವೆಯಾದ ಕೆಲವೇ ದಿನಗಳಲ್ಲಿ ಗಂಡ ಹೆಂಡಿರ ನಡುವೆ ಯಾವುದೋ ಬಿರುಕು ಕಾಣಿಸಿಕೊಳ್ಳತೊಡಗಿತು. ಅವನು ಗಂಡ ತಾನು ಹೆಂಡತಿ! ಎಂಬ ಭಾವನೆಯ ಪ್ರತಿಧ್ವನಿ ಇಬ್ಬರ ನಡುವೆಯೂ ಒಂದು ಅಡ್ಡಗೋಡೆಯಾಗಿ ನಿಂತಂತೆ ಭಾಸವಾಗತೊಡಗಿತು. ಗಂಡ ಹೆಂಡತಿ ಸಂಬಂಧಕ್ಕಿಂತ ಭಿನ್ನವಾದ ಮಾನವೀಯ ನೆಲೆಯಿಂದ ಪರಂಪರಾಗತವಾಗಿ ಬಂದ ಗಂಡ ಹೆಂಡತಿ ಸಂಬಂಧವನ್ನು ಅರ್ಥೈಸಿ ತಿಳಿಸಲು ಪ್ರಯತ್ನಿಸಿದಳು. ಆದರೆ ಇದರಿಂದ ಇನ್ನಷ್ಟು ಸಮಸ್ಯೆಯಾಗಿ ಪರಿವರ್ತಿತವಾಯಿತು. ಹೊಸ ಅರ್ಥದಲ್ಲಿ ತಮ್ಮಿಬ್ಬರ ಸಂಬಂಧಗಳನ್ನು ವಿವರಿಸಲು ಪ್ರಯತ್ನಿಸಿದಷ್ಟೂ ಪರಿಸ್ಥಿತಿ ಹದಗೆಟ್ಟಿತು. ಅವಳ ವೈವಾಹಿಕ ಬದುಕಿಗೆ ಗ್ರಹಣ ಹಿಡಿಯಿತು. ಅವಳ ಸಂಕಲ್ಪಗಳು ಸಂಘರ್ಷಗಳು, ಸವಾಲುಗಳು, ಬದುಕಿನ ಬಗೆಗಿನ ವಿಭಿನ್ನ ದೃಷ್ಟಿ ಎಲ್ಲವೂ ಕುಸಿಯುತ್ತಿರುವಂತೆನಿಸಿತು. ಜೀವನದ ಈ ಮುಖವನ್ನು ಅವಳು ನಿರೀಕ್ಷಿಸಿರಲಿಲ್ಲ. ಅವಳ ನಿರೀಕ್ಷೆಗೆ ಭಿನ್ನವಾದ ಬದುಕು ಎದುರಾಗಿ ಗಂಡ ಹೆಂಡತಿಯರಿಗೆ ಪರಸ್ಪರ ಪರಿಚಯವಾದದ್ದು ಒಬ್ಬೊಬ್ಬರ ಅರ್ಧರ್ಧ ಮುಖಮಾತ್ರ, ಉಳಿದರ್ಧಗಳು

ಎಲ್ಲೋ ಅಜ್ಞಾತದಲ್ಲಿ ಮರೆಯಾಗಿದ್ದವು. ಒಬ್ಬರನ್ನೊಬ್ಬರು ದೂರುವುದರಲ್ಲಿಯೇ ಸವೆಯುತ್ತಿದ್ದ ದಾಂಪತ್ಯ ಒಮ್ಮೊಮ್ಮೆ ತನ್ನ ವೈವಾಹಿಕ ಬದುಕನ್ನು ಪೂರ್ಣ ಗ್ರಹಣ ಪೀಡಿತವಾಗಿರಬೇಕೆಂಬ ಅನುಮಾನಕ್ಕೆ ಎಡೆಮಾಡುತ್ತಿತ್ತು.

ಮದುವೆಗೆ ಮುಂಚಿನದಿನಗಳಲ್ಲಿ ನರೇಶನನ್ನು ಭೇಟಿಯಾದಾಗ, ಎಲ್ಲರಿಗಿಂತ ಅವನು ಭಿನ್ನವಾಗಿರುವುದನ್ನು ಕಂಡಾಗ ಬಹಳ ಖುಷಿ ಪಟ್ಟಿದ್ದಳು. ಒಂದೇ ಬಗೆಯ ಆಲೋಚನೆಗಳಿಂದ ಬೇಸರವಾಗಬಹುದಾಗಿದ್ದ ಬದುಕಿನಲ್ಲಿ, ನರೇಶನಂತಹವನೊಂದಿಗಿನ ಚರ್ಚೆಗಳು, ಮಾತುಕತೆ ಎಲ್ಲವೂ ರೋಚಕವಾಗಿರಬಲ್ಲವೆಂಬ ಕಲ್ಪನೆಯಲ್ಲಿ ಗರಿಗೆದರಿ ಹಾರುತ್ತಿದ್ದಳು. ಆದರೆ ಅವಳಿಗೇನು ಗೊತ್ತು?......ಮುಂದೆ ತಮ್ಮಿಬ್ಬರ ನಡುವಿನ ಸಂವಾದ ಏಕಮುಖವಾಗಿ ಇರುತ್ತವೆಂದು!!

"ನೀನೋ ಆಧುನಿಕ ಮಹಿಳೆ.....ಆಧುನಿಕ ವಿಚಾರಗಳನ್ನುಳ್ಳವಳು– ವಿಚಾರ ವ್ಯವಹಾರ.....ಎಲ್ಲವುಗಳಲ್ಲಿ ಸ್ವತಂತ್ರಳು!....ನಿನ್ನ ಸಂಸ್ಕಾರ.

ಮೇಲಿಂದ ಮೇಲೆ ಈ ಮೇಲಿನ ವಾಕ್ಯಗಳು ಹತ್ತೂದಿಕ್ಕಿನಿಂದ ಅನುರಣಿಸಿದವು. 'ಆಧುನಿಕತೆ'ಗೆ ನರೇಶನು ನೀಡುತ್ತಿದ್ದ ವಿವರಣೆ ಕೇಳಿಸಿಕೊಂಡ ಮೇಲೆ, ಆ 'ಶಬ್ದ'ದ ಬಗೆಗೆ ಒಂದು ರೀತಿಯ ಅಸಹ್ಯ ಮೂಡಿತು. ಕಳೆದ ಇಪ್ಪತ್ತು ವರ್ಷಗಳಿಂದಲೂ ಅವಳು ಕೇಳಿಸಿಕೊಂಡದ್ದೆ, 'ಪ್ರತಿಯೊಂದರಲ್ಲೂ ಮುಂದಿರ ಬೇಕು, ಕೇಳಿದ ಪ್ರಶ್ನೆಗಳಿಗೆ ಸರಿಯಾದ [ಉತ್ತರ] ಸಮಾಧಾನ ಹೇಳಬೇಕು. ಸದಾ ತನ್ನನ್ನು ತಾನು ಶೋಧಿಸಿಕೊಳ್ಳುತ್ತಿರಬೇಕು. ಕಾಲೇಜಿನಲ್ಲಿ ಜೀವವಿಜ್ಞಾನದ ಮೇಡಂ ಹೇಳಿದ್ದೇನು?'.... ಆಲೋಚನೆಗಳಿಗೆ ಅಂತ್ಯವಿಲ್ಲ. ಆಲೋಚಿಸುತ್ತಾ, ಚಿಂತನೆ ನಡೆಸುತ್ತಾ ಮುಂದುವರೆಯಬೇಕು. ಆಲೊಚಿಸಿದಷ್ಟೂ ಬುದ್ಧಿ ತೀಕ್ಷ್ಣಗೊಳ್ಳುತ್ತದೆ. ಅವಳ ಆಲೋಚನಾಶಕ್ತಿ ತರ್ಕ ಶಕ್ತಿಯ ಪ್ರಚಂಡತೆಯನ್ನು ಕಂಡಿದ್ದ ತಂದೆ ಹೆಮ್ಮೆಯಿಂದ ಹೆಂಡತಿಗೆ ಹೇಳಿದ್ದರು– "ನೋಡ್ತಿರು ನಮ್ಮ ಶಾಲ್ಮಲಿ ಹೇಗೆ ದೊಡ್ಡ ದೊಡ್ಡ ಪಂಡಿತರಿಗೂ ಮಣ್ಣು ಮುಕ್ಕಿಸುತ್ತಾಳೆ. ಮುಂದೆ ಬೆಳೆದು ದೊಡ್ಡ ಹೆಸರು ಮಾಡ್ತಾಳೆ!"

"ಸುಮ್ಮನಿರಿ ಹುಡುಗೀರು ಎಷ್ಟಿದ್ದರೂ ಬೇರೆ ಮನೆಗೆ ಹೋಗುವವರು. ಗಂಡನ ಮನೆಗೆ ಹೋಗಿ ಸುಖವಾಗಿ ಸಂಸಾರ ಮಾಡಿಕೊಂಡು ಇದ್ದರೆ, ಅಷ್ಟೇ ಸಾಕು!" ಅಮ್ಮ ನಗುತ್ತಾ ಹೇಳಿದ್ದರು.

ನಿನಗೆ ಗೊತ್ತಾಗೋದಿಲ್ಲ ಬಿಡು ಶ್ಯಾಮಲ. ಇವತ್ತು ಹೆಣ್ಣು ಮಕ್ಕಳು ಅಡಿಗೆ ಮನೆಗೆ ಮಾತ್ರ ಸೀಮಿತವಲ್ಲ. ಕಾಲ ಬದಲಾಗಿದೆ. ನೀನಂತು ಪತ್ರಿಕೆ ಓದೊಲ್ಲ. ಇಲ್ಲದಿದ್ದರೆ ಪ್ರಪಂಚದಲ್ಲಿ ಏನೆಲ್ಲ ಆಗ್ತಿದೆ ಅನ್ನೋದು ನಿನಗೇ ತಿಳೀತಿತ್ತು. ಹೋಗಲಿ, ಕೊಡಿಲ್ಲಿ, ನಾನೇ ಓದಿ ಹೇಳ್ತೇನೆ. 'ಶಾಲೂ' ಮಗೂ, ಎಲ್ಲಿ ನನ್ನ ಕನ್ನಡಕ ಇದೆ, ಸ್ವಲ್ಪ

ಕೊಡಿಲ್ಲಿ". ಇಷ್ಟು ಹೇಳಿ ಅಪ್ಪ ಎಲ್ಲ ಓದಿ ಒಂದೊಂದನ್ನೂ ವಿವರಿಸಿ ಅಮ್ಮನಿಗೆ ಚೆನ್ನಾಗಿ ತಿಳಿಯೋ ಹಾಗೆ, ಹೆಸರುಗಳನ್ನೂ ಘಟನೆಗಳನ್ನು ಬಿಡದೆ ಹೇಳುತ್ತಿದ್ದರು.

ವಾಸ್ತವವಾಗಿ ಆ ದಿನಗಳಲ್ಲಿ ಶಿಕ್ಷಣ ಪ್ರಸಾರಕ್ಕಾಗಿ ಆಂದೋಳನ ನಡೆಯುತ್ತಿತ್ತು. ಆ ದಿನಗಳಲ್ಲಿ ಮಕ್ಕಳನ್ನು ಶಾಲೆಗೆ ಕಳಿಸದೇ ಇದ್ದವರನ್ನು ವಿಚಾರಣೆಗೆ ಗುರಿಪಡಿಸುತ್ತಿದ್ದರು. ಇದರಿಂದಾಗಿ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿದ್ದವರ ಮಕ್ಕಳೂ ಕೂಡಾ ಶಾಲೆಗೆ ಹೋಗಲೇ ಬೇಕಿತ್ತು. ಓದಿದರೂ ಕೂಡಾ ಹಿರಿಯರ ಮತ್ತು ಹಿಂದಿನಿಮದ ನಡೆದುಕೊಂಡು ಬಂದ ವೃತ್ತಿಗಳಲ್ಲೇ ತೊಡಗಿಕೊಳ್ಳಬೇಕಾಗಿದ್ದರೂ ಶಾಲೆಗೆ ಹೋಗಲೇಬೇಕಾದ ಪರಿಸ್ಥಿತಿ ಉಂಟಾಗಿತ್ತು. ಅಂಥಾದ್ದರಲ್ಲಿ ಶಿಕ್ಷಣದ ಬಗ್ಗೆ ಈಗ್ಯಾಕೆ ಇಂಥ ಧೋರಣೆ? ಹಿಂದಿನ ನಂಬಿಕೆ, ಸಂಪ್ರದಾಯಗಳೆಲ್ಲ ಮರೆಯಾಗ್ತಿವೆ. ಅವುಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳೋದು ಯಾಕೆ? ನೀನೇ ಹೇಳು ಸಮಾಜ ಮುಂದುವರೆಯಬೇಕಾ ಇಲ್ಲ ಹಿಂದಕ್ಕೆ ಹೋಗಬೇಕಾ?"

"ಊಟ ಆಗಿದ್ದರೆ....." ದೂರದಲ್ಲಿ ಹೋಗುತ್ತಿದ್ದ ಅವಳಿಗೆ ನರೇಶನ ಧ್ವನಿ ಕೇಳಿಸಿತು.

"ಈಗಲೇ ಬಡಿಸ್ತೇನೆ" ಹೇಳುತ್ತ ಶಾಲ್ಮಲಿ ಕತ್ತರಿಸಿಟ್ಟಿದ್ದ ಸಲಾಡ್ ತುಂಡುಗಳ ಮೇಲೆ ಉಪ್ಪನ್ನು ಚೆಲ್ಲಿದಳು.

"ಹೊತ್ತಾಗುತ್ತೇನು?" ನರೇಶನ ಅಸಮಾಧಾನದ ಸ್ವರ ಹೊರಬಂತು.

"ಆಯ್ತು ಬಡಿಸ್ಬಿಟ್ಟೆ. ಒಂದು ನಿಮಿಷ" ಎಂದು ಹೇಳುತ್ತಾ ತಟ್ಟೆಯಲ್ಲಿ ಬಟ್ಟಲುಗಳನ್ನು ಜೋಡಿಸಿ ಇಡತೊಡಗಿದಳು.

"ಒಂದು ದಿವಸ ಅಡಿಗೆಯವಳು ಬರದಿದ್ದರೆ, ನಿನ್ನನ್ನ ನೋಡೋಕಾಗೂಲ್ಲ..... ಶಾಲ್ಮಲಿಯ ಹಣೆಯ ಮೇಲೆ ಮೂಡಿದ ಪುಟ್ಟ ಪುಟ್ಟ ಬೆವರಿನ ಹನಿಗಳನ್ನು ನೋಡಿ ಹೇಳಿದ.

"ಆಫೀಸು, ಮನೆ....... ಎರಡೂ ಕಡೆ ಮಾಡಿ ಸಾಕಾಗಿ ಹೋಗಿರುತ್ತೆ" ಲೋಟಕ್ಕೆ ನೀರನ್ನು ಬಗ್ಗಿಸುತ್ತಾ ಹೇಳಿದಳು.

"ಓಹ್. ಮತ್ತೆ ಅದೇ ತರಕಾರಿ...... ಅಬ್ಬ ನನ್ನ ಕೈಯಲ್ಲಿ ಇದನ್ನು ತಿನ್ನೋಕೆ ಆಗೋದಿಲ್ಲ" ಎಂದು ಹೇಳುತ್ತಾ ನರೇಶ್ ಎದ್ದು ನಿಂತ.

"ಸ್ವಲ್ಪನಾದರೂ ರುಚಿ ನೋಡಿ" ಸಮಾಧಾನದ ದನಿಯಲ್ಲಿ ಹೇಳಿದಳು ಶಾಲ್ಮಲಿ.

ನನ್ನ ಹತ್ರ ಈ ನಯದ ನಾಟಕ ಮಾಡೋಕೆ ಪ್ರಯತ್ನಿಸಬೇಡ, ಅರ್ಥವಾಯಿತಾ? ಶಾಲ್ಮಲಿಯ ಹಿಡಿತದಿಂದ ತನ್ನ ಕೈ ಬಿಡಿಸಿ ಕೊಳ್ಳೋಕೆ ಯತ್ನಿಸುತ್ತಾ ಹೇಳಿದ.

"ಕೋಪಬೇಡ. ದಯವಿಟ್ಟು ನನ್ನ ಮಾತು ಕೇಳಿ.... ನನ್ನಾಣೆ!"..... ಕೂತ್ಕೊಳ್ಳಿ...... ನರೇಶನ ಮಾತುಗಳನ್ನು ಕೇಳಿಸಿಕೊಳ್ಳದವಳಂತೆ ಹೇಳಿದಳು.

"ಮನಸ್ಸಿಲ್ಲ ತಿನ್ನೋಕೆ"...... ಎಂದು ಹೇಳುತ್ತಾ ಬಾಗಿಲ ಕಡೆಗೆ ನಡೆದ ನರೇಶ್.

ಇಷ್ಟು ಹೊತ್ತಲ್ಲಿ ಹೊರಗಡೆ ಎಲ್ಲಿ ಹೋಗ್ತಿದ್ದೀರಿ? ಉಕ್ಕಿ ಬರುತ್ತಿದ್ದ ಕೋಪವನ್ನು ಹತ್ತಿಕ್ಕಿಕೊಂಡು ಹೇಳಿದಳು.

ಇಂಥ ಹೆಂಡ್ತಿ......ಗಂಡನಿಗಿಂತ ಜಾಣೆ, ಓದಿದವಳು ವ್ಯವಹಾರ ಚತುರೆಯಾಗಿರುವ ಹೆಂಡತಿಯನ್ನು ಪಡೆದವರ ಹಣೆಯಲ್ಲಿ 'ಡಾಬಾ' ಊಟವಲ್ಲದೆ ಇನ್ನೇನು ಬರೆದಿರಲಿಕ್ಕೆ ಸಾಧ್ಯ? ಅವನ ಮಾತಿನಲ್ಲಿ ಕಟಕಿಯಿತ್ತು.

ಶಾಲ್ಮಲಿಗೆ ಅವಮಾನವೆನಿಸಿತು. ಇವನೆಂಥ ಗಂಡ! ಮಾತು ಮಾತಿಗೆ ಹೊರಗೆ ಹೋಗ್ತೀನಿ ಅಂತ ಓಡುವ ಇವನ ಬದುಕಿನಲ್ಲಿ ಎಂದಿಗಾದರೂ ಒಂದು ಕಡೆ ಸ್ಥಿರವಾಗಿ ನಿಲ್ಲಲು ಸಾಧ್ಯವೇ? ಅವನನ್ನು ಹಿಡಿದು ನಿಲ್ಲಿಸೋದು ಜನ್ಮದಲ್ಲಿ ಸಾಧ್ಯವಿಲ್ಲ. ಮೌನವಾಗಿ ಬಿಡಿಸಿ ಇರಿಸಿದ್ದ ತಟ್ಟೆಯನ್ನು ತೆಗೆದುಕೊಂಡು ಹೋಗಿ ಅಡಿಗೆ ಮನೆಯಲ್ಲಿ ಇಟ್ಟಳು. ಕ್ರೋಧದಿಂದ ತಲೆ ಸಿಡಿಯುತ್ತಿತ್ತು. ಪ್ರಯತ್ನಪಟ್ಟು ಸಹಿಸಿಕೊಂಡಳು.

"ಸ್ವಲ್ಪ ಹೊರಗೆ ಹೋಗಿ ಬರ್ತೀನಿ" ನರೇಶ್ ಬಟ್ಟೆ ಬದಲಿಸಿದ್ದ.

"ಗೊತ್ತಿದೆ...... ಸಿದ್ಧಾರ್ಥನಿಗೆ ಹೇಳಿ, ಅವನ ಕೆಲಸ ಆಯ್ತೂಂತ" ಶಾಲ್ಮಲಿ ಹೇಳುತ್ತಲೇ ಒಂದೆರಡು ಹೆಜ್ಜೆ ಮುಂದೆ ಬಂದಳು. ಅವಳು ಹೇಳಿದ ಮಾತಿನಿಂದ ನರೇಶ್‌ನ ಮುಖ ಮತ್ತೆ ಸಿಟ್ಟಿನಿಂದ ಕೆಂಪಾಯಿತು. ಮೊದಲಿನ ಕಾಠಿನ್ಯವೇ ಮತ್ತೆ ಆವರಿಸಿತು.

'ಹೊರಗಡೆಯಿಂದ ಅಗುಳಿ ಹಾಕಿಕೊಳ್ಳಿ. ನೀವು ಬರುವ ಹೊತ್ತಿಗೆ ಬಹುಶಃ ನಾನು ನಿದ್ದೆ ಮಾಡಿರ್ತೇನೆ" –ಎಂದು ಹೇಳುತ್ತಾ ಶಾಲ್ಮಲಿ ಅಡುಗೆ ಮನೆಯ ಕಡೆ ನಡೆದು ಮಾಡಿದ ಅಡುಗೆ ಪಾತ್ರೆಗಳನ್ನೆಲ್ಲ ಎತ್ತಿಟ್ಟಳು. ಅವಳಿಗೆ ಊಟ ಮಾಡಬೇಕೆನಿಸಲಿಲ್ಲ. ಹಸಿವಾಗುತ್ತಿದ್ದರೂ ಊಟ ಮಾಡದೆ ಆಫೀಸಿನ ಫೈಲುಗಳ ಮುಂದೆ ಕುಳಿತು ಕಣ್ಣಾಡಿಸಿದಳು. ಸ್ವಲ್ಪ ಹೊತ್ತಿನ ನಂತರ ಎದ್ದು ಯಾವುದೋ ಕಾದಂಬರಿಯನ್ನು ಕೈಯಲ್ಲಿ ಹಿಡಿದು ಹಾಸಿಗೆ ಮೇಲೆ ಉರುಳಿದಳು.

ಆಫೀಸಿನಲ್ಲಿ ಊಟದ ವ್ಯವಸ್ಥೆ ಇದ್ದಾಗ ನರೇಶ್ ಮನೆಯಲ್ಲಿ ಸೆಟೆದುಕೊಂಡೇ ಇರುತ್ತಿದ್ದ ಒಬ್ಬನೇ ಹೋಗೋದು..... ತಡವಾಗಿ ಬರೋದು..... ಇದಕ್ಕೆಲ್ಲ ಶಾಲ್ಮಲಿಯನ್ನೇ ನೆವವಾಗಿಸುವುದು. ಅವನ ತಂತ್ರವಾಗಿತ್ತು. ಇದು ಶಾಲ್ಮಲಿಗೂ ತಿಳಿದಿತ್ತು. ಶಾಲ್ಮಲಿ ಸಿದ್ಧಾರ್ಥನ ಪ್ರಸ್ತಾಪ ಮಾಡಿದ್ದೂ ಇದೇ ಕಾರಣಕ್ಕೆ. ಸ್ನೇಹಿತರ ಮನೇಲಿ ಊಟ ಮಾಡೋ ಅವಕಾಶ ಸಿಕ್ಕಾಗ ಮನೇಲಿ ಜಗಳವಾಡಿ, ಹೆಂಡತಿನೇ ಕಾರಣಾಂತ

ತೋರಿಸಿಕೊಳ್ಳುತ್ತಿದ್ದ. ಇವನ ಈ ರೀತಿಯ ನಡವಳಿಕೆಗೆ ಕಾರಣ ಏನೆಂಬುದು ಶಾಲ್ಮಲಿಗೆ ಇಲ್ಲೀವರೆಗೂ ಅರ್ಥವಾಗಿಲ್ಲ. ಪ್ರಯತ್ನಿಸಿದಷ್ಟೂ ನಿಗೂಢವಾಗುತ್ತಿತ್ತು. ಕೇವಲ ಒಂದು ಸಾಬೂನಿನ ನೆಪದಿಂದ ಒಂದು ತಿಂಗಳಿನಿಂದ ಇಬ್ಬರ ನಡುವೆ ಶೀತಲ ಸಮರ ನಡೆಯುತ್ತಿತ್ತು. ಅಲಮಾರಿನಿಂದ ಸಾಬೂನನ್ನು ತೆಗೆದು ನರೇಶನಿಗೆ ಕೊಡುತ್ತಿದ್ದ ಶಾಲ್ಮಲಿ ಯೋಚಿಸಿದಳು....ಪ್ರೀತಿ ಮತ್ತು ಕರ್ತವ್ಯಗಳ ನಡುವಿನ ಕಂದರವನ್ನು ಮುಚ್ಚಲು ಸಾಧ್ಯವಿಲ್ಲವೇ?...." ಇದ್ದಕ್ಕಿದ್ದ ಹಾಗೆ ಮನುಷ್ಯಯಾಕೆ ಬದಲಾಗುತ್ತಾನೆ? ಯಾವುದೋ ಒಂದು ಕೆಲಸ ಆಗಲಿಲ್ಲ ಎಂದ ಮಾತ್ರಕ್ಕೆ ಒಳ್ಳೆ ವ್ಯಕ್ತಿಕೂಡಾ ಯಾಕೆ ಅಂಗವಿಕಲನಾದಂತೆ ವರ್ತಿಸುತ್ತಾನೆ. ಹಿಂದಿನ ಅವನ ಗುಣಗಳೆಲ್ಲ ಯಾಕೆ ಮರೆತು ಹೋಗುತ್ತವೆ?....ಇಂಥ ಹಲವಾರು ಪ್ರಶ್ನೆಗಳು ಒಮ್ಮೊಮ್ಮೆ ಅವಳ ಮನಸ್ಸನ್ನು ಕಾಡುತ್ತಿದ್ದವು. ನರೇಶನ ಮೂಲಕವಾಗಿ ಈ ಪ್ರಶ್ನೆಗಳು ಪದೇ ಪದೇ ಎದುರಾಗುತ್ತಿದ್ದವು. ಆದರೆ ಅವುಗಳಿಗೆ ಸಮಾಧಾನವಂತೂ ಕಂಡಿರಲಿಲ್ಲ.

ಅಪ್ರಾಪ್ತ ವಯಸ್ಸಿನಲ್ಲಿಯೇ ಬದುಕಿನ ಹೋರಾಟದಲ್ಲಿ ಇಳಿದಿದ್ದಳು. ಇನ್ನು ಹುಡುಗಿಯರು ಕನಸು ಕಾಣುತ್ತಾ, ಸಿನಿಮಾ ಕವಿತೆಗಳಲ್ಲಿ ಮುಳುಗಿರಬೇಕಾಗಿದ್ದ ವಯಸ್ಸಿನಲ್ಲಿಯೇ ಉದ್ಯೋಗ ಹಿಡಿದಳು. ದೃಢತೆ, ಪ್ರಬುದ್ಧತೆ, ಗಾಂಭೀರ್ಯಗಳನ್ನು ಸ್ವತಃ ರೂಢಿಸಿಕೊಂಡಿದ್ದಳು. ಬದುಕಿನ ಅನುಭವಗಳೇ ಅವಳ ಶಿಸ್ತಿಗೆ, ಸಹನಶೀಲತೆಗೆ ಕಾರಣವಾಗಿದ್ದವು. ದುಃಖ ಮನುಷ್ಯನಿಗೆ ಗಟ್ಟಿತನವನ್ನು ಕಲಿಸಿದರೆ, ಹೋರಾಟ, ಸಂಘರ್ಷಗಳು ವ್ಯಕ್ತಿಯಲ್ಲಿ ತಾಳ್ಮೆಯನ್ನು ಮೂಡಿಸುತ್ತದೆ-ಎಂದು ನಂಬಿದ್ದಳು. ಆದ್ದರಿಂದಲೇ ಗಂಡ ನರೇಶನ ಕಟಕಿ, ಕ್ರೋಧ, ವ್ಯಂಗ್ಯ ಎಲ್ಲವುಗಳನ್ನ ಮುಗುಳ್ನಗುತ್ತಲೇ ಸ್ವೀಕರಿಸುತ್ತಿದ್ದಳು. ಹೆಂಡತಿಯಂತೆ ಪ್ರತಿಭಟಿಸುವುದಕ್ಕಿಂತ, ತಾಯಿಯಂತೆ, ಮಡಿಲಲ್ಲಿ ಇರಿಸಿಕೊಂಡು, ಮಕ್ಕಳು ಮಾಡುವ ಪ್ರತಿಯೊಂದು ತುಂಟತನವನ್ನು ಸಹಿಸಿಕೊಳ್ಳುವಂತೆ, ನರೇಶನನ್ನು ಸಹಿಸಿಕೊಳ್ಳುತ್ತಿದ್ದಳು. ನರೇಶನನ್ನು ಅರ್ಥ ಮಾಡಿಕೊಂಡಿಲ್ಲವೆಂದಲ್ಲ. ಅದು ಈಗ ಅವಳ ಪ್ರಶ್ನೆಯೂ ಆಗಿರಲಿಲ್ಲ. ನರೇಶನ ನಕಾರಾತ್ಮಕ ವ್ಯಕ್ತಿತ್ವಕ್ಕೆ ಹೊಂದಿಕೊಂಡೇ ತಾನು ಬೆಳೆಯಬೇಕು. ಎಂತಹ ಮೂರ್ಖತನದ ಮಾತಾಗಿದ್ದರೂ ಅದೇ ಸರಿ ಎಂಬ ಅವನ ಹಠ ಶಾಲ್ಮಲಿಯನ್ನು ಕತ್ತಲ ಕಾರಾವಾಸಕ್ಕೆ ದೂಡುತ್ತಿತ್ತು.

ಮದುವೆಯಾದ ಕೆಲವೇ ದಿನಗಳಲ್ಲಿ ತಮ್ಮಿಬ್ಬರ ನಡುವೆ ನಡೆದ ಘರ್ಷಣೆಯ ತಲೆಬುಡ ಅರ್ಥವಾಗಿರಲಿಲ್ಲ. ಇಂದಿಗೂ ಆ ನೆನಪುಗಳ ಕಹಿಯಿಂದ ಮನಸ್ಸಿಗೆ ಹಿಂಸೆಯಾಗುತ್ತಿತ್ತು.

"ನಾನು ಈ ಮನೆಯ ಯಜಮಾನ, ರಕ್ಷಕ ಅಂತ ನನ್ನನ್ನು ನೀನು ಒಪ್ಪಿಕೊಳ್ಳದೆ ಇರಬಹುದು. ಆದರೆ ಇಡೀ ಸಂಸಾರದ ಹೊರೇನ ನನ್ ಹೆಗಲ ಮೇಲೆ ಹೊರಿಸಿದ್ದೀಯ. ಯಾಕೇಂದ್ರೆ ನಾನು ಗಂಡ ನೀನು ಹೆಂಡ್ತಿ.....ಪಾಪ, ಅಬಲೆ ಅಲ್ವೆ.....ಅದೂ ಎಂತಹ ಹೆಂಡತಿ.....!....! ದೊಡ್ಡ ಆಫೀಸರ್!! – ವ್ಯಂಗ್ಯವಾಗಿ ಹೇಳಿದ.

"ನಾನು ಆ ಮಾತು ಹೇಳದೆ ಇದ್ದರೆ ನಾನು ಹೀಗೆ ಅಸಹಾಯಕಳಾಗಿ..... ಹೋಗಲಿ ನೀನು ಯಾಕೆ ನಿನ್ನನ್ನು ಹೀಗೆ ನಿಕೃಷ್ಟವಾಗಿಸಿಕೊಳ್ಳುತ್ತೀ" – ಶಾಲ್ಮಲಿ ಆಶ್ಚರ್ಯದಿಂದ ಕೇಳಿದಳು.

"ನಿನ್ನ ಜೊತೆ ಚರ್ಚೆ ಬೇಕಿಲ್ಲ. ನೀನು ತರ್ಕ ಮಾಡೋದು ನೋಡಿದ್ರೆ ನನಗೆ ನನ್ನ ಬಾಸ್‌ನ ನೆನಪಾಗುತ್ತೆ. ಹೆಂಡತಿಯಾದವಳು ಹೆಂಡತಿಯಂತೆ ಇರುತಿಳೀತಾ?....ನರೇಶ್ ಕಾಲು ಝಾಡಿಸಿ ಹೊರಟು ಬಿಟ್ಟ. ಶಾಲ್ಮಲಿ ಸ್ತಬ್ಧಳಾಗಿ ನಿಂತಳು. ಹಣ ಸಂಪಾದನೆಯಿಂದ ಬದುಕಿಗೆ ಸಿಗುವುದು ಇಷ್ಟು ಮಾತ್ರವೇ? ನಮ್ಮ ಪಾಲಿಗೆ ಸುಖ ಸಂತೋಷಗಳಿಗಿಂತ ಸಂಘರ್ಷವೇ? ಹೆಜ್ಜೆ ಹೆಜ್ಜೆಗೂ ಸವಾಲುಗಳನ್ನು ಎದುರಿಸುತ್ತಾ ನಿರಂತರ ಹೋರಾಟದಲ್ಲಿ ತೊಡಗಿರಬೇಕಾದ ಬೀಸುಗತ್ತಿಯ ಸಿಪಾಯಿಯಂತೆ ಇರಬೇಕಾದ ಪರಿಸ್ಥಿತಿ ಒದಗಿದೆ. ಹೆಣಗಾಟದಿಂದ ಸುಖ ಸಾಧ್ಯವಿಲ್ಲ. ಸುಖದ ಅನುಭೂತಿಯ ಎಡೆಯಲ್ಲಿ ಅವನನ್ನು ಸೋಲಿಸುವ ಪ್ರಯತ್ನದಲ್ಲಿಯೇ ತೊಡಗಿರಬೇಕಾದ ಅಗತ್ಯ ಏರ್ಪಟ್ಟಿದೆ.

ಇಂತಹ ಪರಿಸ್ಥಿತಿ ಬಯಸಿ ಬಂದದ್ದಲ್ಲ. ಬಲವಂತವಾಗಿ ನಿರ್ಮಾಣಗೊಂಡದ್ದು. ಈ ಅಭಿಶಾಪದ ಮಾರಕ ಪರಿಣಾಮಗಳಿಂದ ದಾಂಪತ್ಯದ ಬದುಕನ್ನು ಭದ್ರವಾಗಿ ಉಳಿಸಿಕೊಳ್ಳುವುದಕ್ಕಾಗಿ ಅವಳಿಗೆ ತನ್ನ ಸ್ವಂತ ವ್ಯಕ್ತಿತ್ವವನ್ನು ಕಳೆದುಕೊಳ್ಳುವಂತಾಗಿದೆ. ವ್ಯಾಪಕವಾದ ಜೀವನ ಸಂಘರ್ಷದಲ್ಲಿ ತನ್ನನ್ನು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದೇ ಅಸಾಧ್ಯವಾಗಿದೆ. ಹದ್ದುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕೆ, ಛಿದ್ರವಾದದ್ದನ್ನು ಸಂಘಟಿಸಿಕೊಳ್ಳುವುದಕ್ಕೆ ಆದ ಗಾಯುಗಳಿಗೆ ಚಿಕಿತ್ಸೆ ನೀಡುವುದಕ್ಕೆ ಕೂಡಾ ಅವಕಾಶವಿಲ್ಲದಂತಾಗಿದೆ. ಮೇಲಿಂದ ಮೇಲೆ ಬೀಳುತ್ತಿರುವ ಆಘಾತಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಮಾಡುವ ಪ್ರಯತ್ನಗಳಲ್ಲೇ ಎಷ್ಟೋ ಬಾರಿ ಮುಗ್ಗರಿಸಿ ಬೀಳುವಂತಾಗಿತ್ತು.

ಬಾಗಿಲು ತೆರೆಯುವ ಶಬ್ದ ಕೇಳಿಸಿತು. ಬೆಚ್ಚಿಬಿದ್ದ ಶಾಲ್ಮಲಿ ತೆಗೆದಿರಿಸಿಕೊಂಡಿದ್ದ ಪುಸ್ತಕವನ್ನು ಮುಚ್ಚಿಟ್ಟು ಏಳಲು ಪ್ರಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ. ದೇಹವಿಡೀ ಸುಂದುಹಿಡಿದಂತೆನಿಸಿತು. ಸಂಬಂಧಗಳಿಗೆ ಅರ್ಥವೇ ಇಲ್ಲದಾದಾಗ ಮನಸ್ಸು ಹಿಂಜರಿಯುತ್ತದೆ. ಅವನಿಗನಿಸಿದಾಗಲೆಲ್ಲ ಅವಹೇಳನ ಮಾಡಿ ಮಾಡಿ ತಾನೇ ಸೋತು ದಣಿದು ಸುಮ್ಮನಾಗುತ್ತಿದ್ದ. ಹಾಗೆಯೇ ಮೆಲ್ಲಗೆ ಕಣ್ಣುಮುಚ್ಚಿದಳು.

"ಏನು ಕರೆಂಟ್ ಬಿಟ್ಟಿಬರುತ್ತಾ, ಲೈಟ್ ಹಾಕಿ ಹಾಗೇ ಮಲಗಿದ್ದೀ" ಅವನ ಗಡಸು ಧ್ವನಿ ಕೇಳಿಸಿತು. ಕೈಲಿದ್ದ ಪುಸ್ತಕವನ್ನು ಹತ್ತಿರದ ಮೇಜಿನ ಮೇಲಿಟ್ಟು ಪಕ್ಕ ತಿರುಗಿದಳು.

"ಈ ನಾಟಕಾನ ಸಾಕು ಮಾಡು....ಬಹಳ ಸುಸ್ತಾಗಿದೆ ಬೆಳಿಗ್ಗೆ ಆಫೀಸಿಗೆ ಬೇರೆ ಹೋಗಬೇಕು. ಮನೇಲಿ ಸೋಮಾರಿಯಾಗಿ ಕೂತ್ಕೊಂಡ್ರೆ ಹೆಂಡ್ತಿ ಹತ್ತಿರ ಜಗಳ

ಮಾಡ್ತಿದ್ದರೆ, ಯಾರೋ ಬಿಟ್ಟಿಯಾಗಿ ಸಂಬಳ ಕೊಡ್ತೊಲ್ಲ. ಸಿಟ್ಟಿನಿಂದಲೇ ಹೇಳುತ್ತಾ, ನರೇಶ ದೀಪ ಆರಿಸಿ ಮಲಗಿದ. ಶಾಲ್ಮಲಿ ಅತ್ತಿರಲಿಲ್ಲ. ಮನಸ್ಸಿಗೆಂದೂ ನೋವೆನಿಸಿರಲಿಲ್ಲ. ಇಷ್ಟೂ ವರುಷಗಳಿಂದ ಕೇಳಿಸಿಕೊಳ್ಳುತ್ತಾ ಬಂದಿದ್ದ ಅದೇ ಅದೇ ಮಾತುಗಳು ಇಂದು ಅವಳಿಗೆ ತೀರಾ ಕೆಡುಕೆನಿಸಿತು. ಹಿಂಸೆಯಾಯಿತು. ಇನ್ನು ಮುಂದೆ ಇದೆಲ್ಲವನ್ನು ಸಹಿಸಿಕೊಳ್ಳುವುದು ಸಾಧ್ಯವಿಲ್ಲವೆನಿಸಿತು. ಇದನ್ನೆಲ್ಲ ತಾನಿನ್ನೂ ಸಹಿಸಿಕೊಳ್ಳುತ್ತಲೇ ಬಂದಿರುವುದೇಕೆ? ಯಾತಕ್ಕಾಗಿ ತನ್ನ ಬಗ್ಗೆ ಇಂತಹ ತಿರಸ್ಕಾರ; ಅಸಮಾಧಾನ ಅಸಹ್ಯಗಳು?

ಈ ಮನುಷ್ಯ, ಅವಳ ಗಂಡ, ನರೇಶ ಅನ್ನುವ ವ್ಯಕ್ತಿ ಒಂದು ಕಾಲಕ್ಕೆ ಸ್ವಾತಂತ್ರ್ಯ ಮುಕ್ತಿ ಎಂಬವುಗಳಲ್ಲಿ ನಂಬಿಕೆ ಇಟ್ಟಿದ್ದವನು. ಕಾಲದೊಂದಿಗೆ ಹೇಗೆ ಬದಲಾಗಿ ಬಿಟ್ಟ, ಇದ್ದಕ್ಕಿದ್ದಂತೆ ಅವನಲ್ಲಿ ಉಂಟಾದ ಪರಿವರ್ತನೆ, ಅವನ ಬಗ್ಗೆ ಇದ್ದ ನಂಬಿಕೆಯನ್ನೇ ಸುಳ್ಳಾಗಿಸಿತು. ಯಾವನು ಮುಕ್ತಿ ಸಂದೇಶವನ್ನು ನೀಡಿದ್ದನೋ ಅವನೇ ಇಂದು ತನ್ನನ್ನು ಕಾರಾವಾಸಕ್ಕೆ ತಳ್ಳಿದ್ದ. ಅವಳ ಯಾತನಾಶಿಬಿರಕ್ಕೆ ಕೊನೆಯೇ ಇಲ್ಲದಂತಹ ಈ ರಾತ್ರಿಗಳು..... ಶಾಲ್ಮಲಿ ಯೋಚಿಸತೊಡಗಿದಳು. ಅವಳ ಯೋಚನೆಗಳಿಗೆ ಮುಗಿತಾಯವೇ ಇಲ್ಲದೆ ಮುಂದುವರಿದಿತ್ತು. ಅದು ಅವಳಿಗೆ ಅಭ್ಯಾಸವೂ ಆಗಿ ಹೋಗಿತ್ತು.

ನಿದ್ದೆ ಮಾಡುತ್ತಿದ್ದ ಶಾಲ್ಮಲಿ ಗಾಬರಿಯಿಂದ ಎದ್ದಳು. ಬೆವರಿನಿಂದ ತೊಯ್ದು ತೊಪ್ಪೆಯಾಗಿದ್ದಳು. ಎಡಗೈಗೆ ಸ್ವಾಧೀನವಿಲ್ಲದಂತೆ ಭಾಸವಾಯಿತು. ತಲೆಯಡಿಗೆ ಇರಿಸಿದ್ದ ಕೈಯನ್ನು ತೆಗೆದು ಕೊಡವಿದಳು. ಬೆದರಿದ ಕಂಗಳಿಂದ ಸುತ್ತಲೂ ನೋಡಿದಳು. ಎಲ್ಲಿಂದಲೋ ಗಗನ ಚುಂಬಿ ಮರಗಳನ್ನು ಕತ್ತರಿಸಿ ಬೀಳಿಸುತ್ತಿರುವಂತಹ ಸದ್ದುಗಳು ಕೇಳಿ ಬಂದವು. ಕೊಡಲಿಯಿಂದ ಕತ್ತರಿಸುವ ಖಚ್.....ಖಚ್ ಸದ್ದು ಕೇಳಿಸಿತು.....ಮತ್ತೆ ಆ ದೊಡ್ಡ ದೊಡ್ಡ ಮರಗಳು ಕಡಿದು ನೆಲದ ಮೇಲೆ ಬೀಳುತ್ತಿದ್ದ ಸದ್ದುಗಳು......

"ಅಯ್ಯೊಮ್ಮ!" ಎನ್ನುತ್ತಾ ಆ ಮರಗಳು ತನ್ನ ತಲೇ ಮೇಲೆ ಬೀಳುತ್ತಿವೆಯೋ ಎಂಬಂತೆ ಗಾಭರಿಯಿಂದ ಎದ್ದು ಕುಳಿತಳು. ಕಿಟಕಿಯ ಪರದೆಯನ್ನು ಸರಿಸಿದಳು. ಸಾಕಷ್ಟು ಬಿಸಿಲೇರಿತ್ತು. ಬಿಚ್ಚಿಕೊಂಡಿದ್ದ ಕೂದಲನ್ನು ಸರಿಪಡಿಸಿ ಹೆಣೆದುಕೊಂಡಳು. ಮತ್ತೊಮ್ಮೆ ತೂಕಡಿಸಿದಳು. ಬೆಳಗ್ಗೆ ಏಳು ಗಂಟೆ ಆಗುವುದರಲ್ಲಿತ್ತು.

ಇಲ್ಲಿ ಸುತ್ತ ಮುತ್ತ ಯಾವುದೂ ಕಾಡೂ ಇರಲಿಲ್ಲ. ಸೌದೆ ಅಂಗಡೀನೂ ಇರಲಿಲ್ಲ. ಆದರೂ ಈ ಸದ್ದು ಎಲ್ಲಿಂದ ಬರುತ್ತಿದೆ?.....ಖಚ್.......ಭಯದಿಂದ ಕಿವಿ ಮುಚ್ಚಿಕೊಂಡಳು.

ಈ ಸದ್ದು ನನ್ನನ್ನೇಕೆ ಹಿಂಬಾಲಿಸಿದೆ? ನನ್ನೊಳಗೆ ಯಾವ ಕಾಡು ಕಡಿದು ಬೀಳುತ್ತಿದೆ? ಕಿವಿಯ ಮೇಲೆ ಇರಿಸಿಕೊಂಡಿದ್ದ ಕೈಗಳನ್ನು ತೆಗೆದಳು. ಬಾಗಿಲಲ್ಲಿ

ಬಿದ್ದಿದ್ದ ಪತ್ರಿಕೆಯನ್ನು ಎತ್ತಿಕೊಂಡು ನರೇಶನ ಬಳಿಗೆ ಬಂದಳು. ಅದನ್ನು ಅವನ ಮುಂದಿರಿಸಿ ಚಹ ತಯಾರಿಸಲು ಒಳನಡೆದಳು.

ಈಗೊಂದಷ್ಟು ವರುಷಗಳಿಂದ ಇದೇ ಸದ್ದು ಕೇಳಿ ಬರುತ್ತಿದೆ. ಮುನ್ನೂರು ಅರವತ್ತೈದು ದಿನಗಳ ಲೆಕ್ಕಾಚಾರದಲ್ಲಿ ಇಷ್ಟು ಹೊತ್ತಿಗೆ ಕಾಡೆಲ್ಲ ಕಡಿದು ಬರಿದಾಗಿರಬೇಕು. ಈ ಪ್ರಮಾಣದಲ್ಲಿ ಕಡಿಯುತ್ತಾ ಹೋದರೆ ಯಾವ ಕಾಡುಗಳು ತಾನೇ ಉಳಿದಾವು?

ಸ್ವಲ್ಪ ಹೊತ್ತಿನ ಮೇಲೆ ಶಾಲ್ಮಲಿ ತನ್ನ ಆಲೋಚನಾ ಜಗತ್ತಿನಿಂದ ಹೊರಬಂದಳು. ಈಗ ಬಹಳ ಚುರುಕಾಗಿ ಮನೆ ಕೆಲಸ ಅಡಿಗೆ ಕೆಲಸಗಳಲ್ಲಿ ತೊಡಗಿದಳು. ತಿಂಡಿ, ಊಟ, ನರೇಶನನ್ನು ಆಫೀಸಿಗೆ ಕಳಿಸುವುದು...... ಜೊತೆಗೆ ತಾನೂ ಹತ್ತುಗಂಟೆ ಹೊತ್ತಿಗೆ ಆಫೀಸಿನಲ್ಲಿ ಇರುವುದು..... ಇವೇ!! ಸದ್ಯಕ್ಕೆ ಆಫೀಸು ಅಷ್ಟೇನೂ ದೂರ ಇರಲಿಲ್ಲ. ಬಸ್ ಹತ್ತಿದ್ದರೆ ಮೂರೆ ಸ್ಟಾಪು!!...... ಆಫೀಸನ್ನು ಸೇರಿಬಿಡುತ್ತಿದ್ದಳು!

ಶಾಲ್ಮಲಿ ಆಫೀಸನ್ನು ಪ್ರವೇಶಿಸುತ್ತಿದ್ದಂತೆ ಪಿ.ಎ. ಅವಳನ್ನು ಕಾಣಬೇಕೆಂದು ಬಂದಿದ್ದವರ ದೊಡ್ಡ ಪಟ್ಟಿಯನ್ನು ಅವಳ ಮುಂದಿಟ್ಟ, ಜೊತೆಗೆ ಒಂದಷ್ಟು ಫೋನ್ ನಂಬರುಗಳನ್ನು ಇರಿಸಿದ. ಶಾಲ್ಮಲಿ ಒಂದೊಂದಾಗಿ ಗಮನಿಸತೊಡಗಿದಳು. ಹಾಗೆಯೇ ಬರುತ್ತಿದ್ದ ಪೋನಿನ ಕರೆಗಳನ್ನೂ ಗಮನಿಸಿದಳು, ಹಾಗೆಯೇ ಜೊತೆ ಜೊತೆಯಾಗಿ ಫೈಲುಗಳ ಮೇಲೆ ಸಹಿಯನ್ನೂ ಹಾಕುತ್ತಿದ್ದಳು. ಮಧ್ಯಾಹ್ನ ನರೇಶನಿಂದ ಫೋನ್ ಬಂತು.

ಶಾಲೂ, ರಘುನಂದನ ಕೆಲಸ ನೆನಪಿರಲಿ ಮೂರು ಗಂಟೆ ಹೊತ್ತಿಗೆ ನಿನ್ನನ್ನು ಬಂದು ಕಾಣಲು ಅವನಿಗೆ ಹೇಳಿದ್ದೀನಿ... ಮತ್ತೆ...

ನೋಡು ಸರಿಯಾಗಿ ಎರಡೂವರೆ ಗಂಟೆಗೆ ಮೀಟಿಂಗ್ ಶುರುವಾಗುತ್ತೆ.... ನಾಲ್ಕು ಗಂಟೆ ಹೊತ್ತಿಗೆ ಮುಗಿಯಬಹುದು. ಕೆಲಸ ಆಗುತ್ತೆ. ನೀನು ನಾಲ್ಕೂವರೆ ಗಂಟೆ ಹೊತ್ತಿಗೆ ಕಳಿಸು. ಗಡಿಯಾರ ನೋಡಿಕೊಳ್ಳುತ್ತಾ ಹೇಳಿದಳು.

"ಓಹ್! ನಿಂದು ಒಳ್ಳೆ ಕೆಲಸವಾಯ್ತಲ್ಲ! ನಾನೀಗ ಅವನಿಗೆ ಸುದ್ದಿ ತಿಳಿಸೋದು ಹೇಗೆ?" ಸಿಡುಕಿನಿಂದ ಹೇಳಿದ ನರೇಶ್.

ಮೊದಲೇ ನನ್ನನ್ನು ಕೇಳಬಾರದಿತ್ತೇ! ನಿನಗ್ಗೊತ್ತು.... ಎಷ್ಟೋ ಕಷ್ಟಪಟ್ಟು ಎಲ್ಲರಿಗೂ ಅನುಕೂಲವಾಗುವಂತಹ ತಾರೀಖನ್ನು ಮೀಟಿಂಗ್ಗೇಂತ ಗೊತ್ತು ಮಾಡಬೇಕಾಯ್ತು" - ಶಾಲ್ಮಲಿ ವಿವರಿಸಿದಳು.

"ಹಾಗಾದರೆ ಒಂದು ಕೆಲಸ ಮಾಡು ಮೀಟಿಂಗ್‌ನಿಂದ ಸ್ವಲ್ಪ ಹೊತ್ತಿಗೆ ಮುಂಚೆ ಎದ್ದು ಬಂದ್ಬಿಡು ಆಯ್ತಲ್ಲ" - ಎಂದು ನರೇಶ ಸೂಚಿಸಿದ.

"ಸಾಧ್ಯಾನೇ ಇಲ್ಲ. ಗವರ್ನರ್ ಜೊತೆ ಮೀಟಿಂಗಿರುವಾಗ ಹಾಗೆಲ್ಲ ಬರೋದು?....ನಾನು ಮಾಥುರ್ ಕೈಲಿ ಒಂದು ನೋಟ್ ಬರೆದು ಇರಿಸಿರ್‍ತೇನೆ. ರಘುನಂದನಿಗೆ ಅವನು ಕೊಡ್ತಾನೆ....ಆಯ್ತು ನರೇಶ, ನಾನಿನ್ನು ಫೋನ್ ಕೆಳಗಿಡ್ತೇನೆ." ಗಡಿಯಾರ ನೋಡಿಕೊಳ್ಳುತ್ತಾ ಶಾಲ್ಮಲಿ ಹೇಳಿದಳು.

"ಸ್ವಲ್ಪ ಅಡ್ಜಸ್ಟ್ ಮಾಡ್ಕೊಳ್ಳೋಕೆ ಆಗೋದಿಲ್ವೇನು?"

–ಅಸಮಾಧಾನದ ಧ್ವನಿ ಕೇಳಿ ಬಂತು.

"ಎಂತಹ ಮಾತಾಡ್ತಿ ನರೇಶ್! .....ಪ್ಲೀಸ್" ಶಾಲ್ಮಲಿ ಹೇಳಿದಳು.

"ಸರಿ ಹಾಗಾದ್ರೆ" ಎಂದು ಹೇಳುತ್ತಾ ನರೇಶ್ ಫೋನನ್ನು ಜೋರಾಗಿ ಕೆಳಗಿರಿಸಿದ.

"ಒಳ್ಳೆ ಹಿಂಸೆ ಆಯ್ತು?" ನೋವಿನಿಂದಾದ ಅಸಮಾಧಾನದೊಂದಿಗೆ ಹೇಳಿಕೊಂಡಳು. ಕರೆ ಗಂಟೆಯನ್ನು ಒತ್ತಿದಳು. ಬಂದ ಸ್ಟೆನೋಗೆ ಒಂದಷ್ಟು ಪತ್ರಗಳನ್ನು ಡಿಕ್ಟೇಟ್ ಮಾಡಿ ಬರೆಸಿದಳು. ನಂತರ ತನ್ನ ಪಿ.ಎ. ಮಾಥುರನ ಕೈಲಿ ಒಂದು ಚೀಟಿ ಬರೆದು ಇರಿಸಿದಳು. ಜೊತೆಗೆ ಫೈಲುಗಳನ್ನೂ ಅವನಿಗೆ ಹಿಂತಿರುಗಿಸಿದಳು.

ಗಡಿಯಾರ ನೋಡಿಕೊಂಡಳು. ಊಟದ ವೇಳೆಯಾಗಿತ್ತು. ಕೊಠಡಿಯಲ್ಲಿದ್ದ ವಾಷ್ ಬೇಸಿನ್‌ನಲ್ಲಿ ಕೈ ತೊಳೆದು ಊಟದ ಡಬ್ಬಿಯನ್ನು ತೆಗೆದು ಮೇಜಿನ ಮೇಲಿರ ಇರಿಸಿಕೊಂಡಳು. ಸರೋಜ್ ಪಟ್ನಾಯಕ್, ರಘುವೀರ್ ಹಂಡಾ, ಸತ್‌ಪಾಲ್ ಬಖ್ಷಿ ಮೊದಲಾದವರು ತಮ್ಮ ತಮ್ಮ ಊಟದ ಡಬ್ಬಿಗಳನ್ನು ಹಿಡಿದು ಒಳಗೆ ಬಂದರು. ನಂದಿನಿ ಬೆನರ್ಜಿ ರಜದ ಮೇಲಿದ್ದಳು. ಆದರೂ ಅವಳ ಗೈರು ಹಾಜರಿ ಎದ್ದು ಕಾಣುತ್ತಿತ್ತು. ಮೀನಿನ ಪಕೋಡೆಯ ಪ್ರಸ್ತಾಪದೊಂದಿಗೆ ನಂದಿನಿ ಬೆನರ್ಜಿಯ ಕುರಿತು ಒಂದಷ್ಟು ಮಾತುಕತೆ ನಡೆಯಿತು.

ಕಾಫಿ ಬಂದಿತ್ತು. ಸರೋಜ್ ಕಾಫಿ ಕೆಟಲನ್ನು ತನ್ನೆಡೆಗೆ ತಿರುಗಿಸಿಕೊಂಡಳು. ಎಲ್ಲರೂ ತಮ್ಮ ತಮ್ಮ ಕಾಫಿ ಕಪ್ಪುಗಳನ್ನು ಕೈಗೆತ್ತಿಕೊಂಡರು.

"ಖನ್ನಾ ಕೇಸು ಎಲ್ಲೀವರೆಗೆ ಬಂತು ಶಾಲ್ಮಲಿಯವರೇ?" ಭಖ್ಷಿ ಕಾಫಿ ಹೀರುತ್ತಾ ಕೇಳಿದ.

"ಹಾಗೇ ಇದೆ" ಶಾಲ್ಮಲಿ ಗಂಭೀರವಾಗಿ ಉತ್ತರಿಸಿದಳು.

ನನ್ನ ಹೆಂಡತಿ ಜೊತೆಗೆ ನನ್ನ ಮನೆಗೆ ಬಂದಿದ್ದ. ತುಂಬಾ ಅಳ್ತಿದ್ದ. ನಿಮ್ಮ ಹತ್ತಿರ ಏನೋ ಹೇಳೋಕೇಂತ ಬಂದಿದ್ದನಂತೆ. ತಾವು ಬೈದು ಕಳಿಸಿದರಂತೆ" ಬಖ್ಷಿ ಏನೋ ಯೋಚಿಸುತ್ತಲೇ ಹೇಳಿದ.

"ಮಾಡೋ ಅವಾಂತರ ಮಾಡಿದ್ಮೇಲೆ ಬಂದು ಕೈಕಾಲು ಹಿಡಿದು ಕೊಳ್ಳೋದು ನಿನಗೆ ತಿಳಿದಿರೋ ವಿಷಯಾನೇ, ಸರೋಜ್" ಮುಗುಳ್ನಗುತ್ತಲೇ ಶಾಲ್ಮಲಿ ನುಡಿದಳು. ಸರೋಜ್ ಅದು ಹೌದೆನ್ನುವಂತೆ ತಲೆಯಾಡಿಸಿದಳು.

"ಸರಕಾರಿ ಕೆಲಸದಲ್ಲಿ, ಏನಾದರೂ ಹೆಚ್ಚು ಕಡಿಮೆ ಆಗೋದು, ಕಳ್ಳತನ ಆಗೋದು..... ಇದೆಲ್ಲ ಇಲ್ಲದಿದ್ದರೆ ಸರಕಾರಿ ಕೆಲಸ ಮಾಡೋದರಲ್ಲಿ ಮಜಾನೇ ಇರೋಲ್ಲ. ನಾವೆಲ್ಲ ಟ್ಯಾಕ್ಸ್ ಕಟ್ಟೋದಿಲ್ವ?" – ಹಂಡಾ ಜೋರಾಗಿ ನಕ್ಕು ಹೇಳಿದ.

"ದ್ರೋಹ ಮಾಡೋಕೂ ಒಂದು ಮಿತಿ ಇರುತ್ತೆ. ಆದರೆ ಖನ್ನಾ ಎಲ್ಲರಿಗೂ ನಾಮ ಹಾಕಿ.....ಓಹ್" ವಾಕ್ಯವನ್ನು ಅಲ್ಲಿಗೇ ನಿಲ್ಲಿಸಿ, ತಲೆಯಾಡಿಸಿದಳು. (ಅದೇ ವಾಕ್ಯ ಪೂರೈಸಿದಂತೆ!) ನಿಮಗೆಲ್ಲ ಮೀಟಿಂಗ್ ಹೋಗ್ಬೇಕೂಂತ ಇಲ್ವೇನು?.... ಪಟ್ನಾಯಕ್ ಹೇಳುತ್ತಲೇ ಎದ್ದು ನಿಂತಳು.

"ಎರಡೂವರೆ ಆಗೋದಕ್ಕೆ ಇನ್ನೂ ಹತ್ತು ನಿಮಿಷ ಉಳಿದಿದೆ" – ಗಡಿಯಾರ ನೋಡುತ್ತಾ ಹೇಳಿದಳು, ಶಾಲ್ಮಲಿ.

ಶಾಲ್ಮಲಿ ಮೇಜಿನ ಮೇಲಿದದ ಫೈಲನ್ನು ಎತ್ತಿಕೊಂಡಳು. ಪರ್ಸ್ ತೆಗೆದುಕೊಂಡು ಕೊಠಡಿಯಿಂದ ಹೊರಗೆ ನಡೆದಳು. ನಾಲ್ಕೂ ಜನ ಒಟ್ಟಿಗೆ ಹೊರಟರು. ಬೇರೆ ಬೇರೆ ಕೊಠಡಿಗಳಿಂದಲೂ ಜನ ಮೀಟಿಂಗ್ ಹಾಲ್ ಕಡೆಗೆ ನಡೆಯತೊಡಗಿದರು. ಶಾಲ್ಮಲಿಯ ಯೋಚನೆಗಳೆಲ್ಲ ಖನ್ನಾನ ಫೈಲಿನಲ್ಲಿ ಸಿಲುಕಿ ಕೊಂಡಿದ್ದವು. ಆಳವಾದ ಯೋಚನೆಯಲ್ಲಿ ಮುಳುಗಿದ್ರಿಂದ ಮೌನವಾಗಿ ಹೆಜ್ಜೆ ಹಾಕತೊಡಗಿದಳು.

ಶಿರೀಷ ಪುಷ್ಪಗಳು ಅರಳುವ ಸಮಯ ಬೀದಿಗಳಲ್ಲಿ ಮನೆಗಳಲ್ಲಿ ಅಂಗಳದಲ್ಲಿ ಅದರ ಕಂಪು ಹರಡಿತ್ತು. ಸಾಲಾಗಿ ನಿಂತ ಶಿರೀಷಮರಗಳು ಷೋಡಷಿಯರ ಹಾಗೆ ತಮ್ಮದೆ ರೂಪ ಲಾವಣ್ಯಗಳ ಭಾರದಲ್ಲಿ ಸಿಲುಕಿ ಮಧ್ಯಾಹ್ನದ ಬಿಸಿ ಗಾಳಿಯ ಬೆನ್ನೇರಿ ಹಳದಿ ಬಿಸಿಲಿನಲ್ಲಿಮ ಮೀಯುತಿರುವಂತೆ ತೋರಿದವು.

ಒಮ್ಮೆ ಜೋರಾಗಿ ಬೀಸಿದ ಬಿಸಿಗಾಳಿಗೆ ಮರಗಳಿಂದ ಒಣಗಿದ ಹಳದಿ ಹೂಗಳ ಮಳೆಯಾಯಿತು. ಫುಟ್‌ಪಾತ್‌ಗಳು, ರಸ್ತೆಗಳು, ಕಾಲು ಹಾದಿಗಳು ಹೂಹಾಸಿಗೆಗಳಾದವು. ಪಾದಗಳ, ಚಕ್ಕಡಿಗಳ ಅಡಿಗೆ ಸಿಕ್ಕು ಹಳದಿ ಹೂಗಳು ಹಸಿರು ಮಣ್ಣಿನೊಂದಿಗೆ ಬೆರೆಯತೊಡಗಿದವು. ಈ ಕಂಪು ಶಾಲ್ಮಲಿಯನ್ನು ಪರವಶಗೊಳಿಸಿತು. ಎಲ್ಲಕಡೆ ಎಳ ಬಿಸಿಲು, ಸೌಂದರ್ಯದ ಅದ್ಭುತ ಪ್ರಕಾಶವನ್ನು ಪಸರಿಸುತ್ತಿರುವಂತೆ ಕಿತ್ತುಕೊಂಡು ಆ ಹೂವಿನ ಕಂಪಿಸುತ್ತಿರುವ ಕೋಮಲದಳಗಳನ್ನು ಎವೆಯಿಕ್ಕದೆ ನೋಡಿದಳು. ಎಷ್ಟೊಂದು ಸಂವೇದನೆ! ಎಂತಹ ಕಂಪನ! ಎಂತಹ ಕೋಮಲತೆ! ನಿಧಾನವಾಗಿ ಹೂವನ್ನು ಆಘ್ರಾಣಿಸಿದಳು. ಅದರ ಪರಿಮಳ ಅವಳ ಒಳಗನ್ನು ಪ್ರವೇಶಿಸುತ್ತಿದ್ದಂತೆ ಮನಸ್ಸು ಹಗುರವಾಯಿತು. ದುಃಖ, ನೋವು, ಕ್ಲೇಶ.... ಯಾವುದರ ನೆರಳೂ

ಇಲ್ಲದಾಯಿತು. ಇಂತಹ ಕ್ಷಣಗಳಲ್ಲಿ, ಶಾಲ್ಮಲಿಗೆ ತನ್ನ ಕಣ್ಣ ಬೆಳಕು ಇಮ್ಮಡಿಸಿದಂತೆನಿಸಿ, ನಿಸರ್ಗದ ಬಣ್ಣಗಳು ಮತ್ತಷ್ಟು ಹೊಳಪಿನಿಂದ ತುಂಬಿರುವಂತೆ ಭಾಸವಾಯಿತು. ಹಕ್ಕಿಗಳ ಕಲರವ ಮಧುರ ವೀಣಾಗಾನದಂತೆನಿಸಿತು. ಇಂತಹ ಕ್ಷಣಗಳಲ್ಲಿ ವಿಶ್ವ, ಪ್ರಕೃತಿ, ಮನುಷ್ಯ ದೇಹದ ತತ್ವಗಳ ನಡುವೆ ಪರಸ್ಪರ ಸಂಬಂಧವಿರುವಂತೆ ಅನಿಸುತ್ತಿತ್ತು.

ಇದೇ ರೀತಿಯ ಆಹ್ಲಾದಕರ ಮಧ್ಯಾಹ್ನಗಳಲ್ಲಿ ಶಾಲ್ಮಲಿಗೆ ಅದ್ಭುತವಾದ, ಅಮೂಲ್ಯವಾದ ಇಂತಹದೇ ಮಾದಕ ಅನುಭವಗಳ ನಿರೀಕ್ಷೆಯಲ್ಲಿ ಇದ್ದಿರಬಹುದು! ಎಷ್ಟೋ ದಿನಗಳು ಶಬ್ದಗಳ ಕಂಪನ, ಅರ್ಥ, ಹಿನ್ನೆಲೆಗಳಲ್ಲಿ ಎಷ್ಟೊಂದು ತನ್ಮಯತೆಯಿಂದ ಕಳೆದು ಹೋಗಿರುತ್ತಿದ್ದಳೆಂದರೆ ಅವಳಿಗೆ ಭಾವನೆಗಳು ಕಬ್ಬಿಣದ ಕೋಟೆಗಳೋ ಅಥವಾ ವಿಸ್ತಾರವಾದ ವಿಚಿತ್ರ ಜಗತ್ತೋ ಎಂಬುದರ ಅರಿವೇ ಇಲ್ಲದಂತಾಗುತ್ತಿತ್ತು. ಹರಿವನೀರಿನಂತೆ ಕಾಲ ಕೈ ಜಾರಿ ಹೋಗುತ್ತಿತ್ತು. ಬೆಟ್ಟವನ್ನೇರುತ್ತಾ ಸಾಗುವ ವ್ಯಕ್ತಿಯೊಬ್ಬನಿಗೆ ಅಕಸ್ಮಾತ್ತಾಗಿ ದೊರೆಯುವ ಅಮೂಲ್ಯ ಶಿಲೆಯ ಭಾರದಿಂದ, ಹೊರಲಾರದೆ ಹೊತ್ತುಕೊಂಡು ತಿರುಗಾಡುವ ಪರಿಸ್ಥಿತಿಯೊದಗಿದಂತೆ ಶಾಲ್ಮಲಿಯ ಪರಿಸ್ಥಿತಿಯಾಯಿತು.

ಈ ಕ್ಷಣದ ನೆನೆಪು ಸುಗಂಧದಂತೆ ಅವಳನ್ನು ವ್ಯಾಪಿಸಿತು. ಶಿರೀಷ ಕುಸುಮದ ಆ ಕೋಮಲ ಕಂಪನ ಅವಳಿಗೆ ತನ್ನೆದೆಯಕಂಪನದಂತೆನಿಸಿತು. ಒಳಗಿಂದೊಳಗೆ ಮೆಲ್ಲನೆ ಭಾವನೆಗಳ ನಡುಕದ ಗುಂಜನ ಕೇಳಿಸಿತು, ಗಾಳಿಗೂ ಕೇಳಿಸದಷ್ಟು ನಿಸ್ತಬ್ಧ ನಡುಕದಂತೆ!

ಉತ್ಸಾಹ ಹುಮ್ಮಸ್ಸುಗಳ ಚಿಲುಮೆಯೊಡೆದಿತ್ತು. ಕೆಲಸ ಮಾಡಲು ಎಲ್ಲಿಲ್ಲದ ಸ್ಫೂರ್ತಿ ಅವಳದಾಗಿತ್ತು. ಹೊಳೆ ಹೊಳೆವ ಆಕರ್ಷಕ ವಸ್ತುಗಳನ್ನು ಬಹಳ ನಾಜೂಕಿನಿಂದ, ನಯದಿಂದ ಆಪ್ತವಾಗಿಸಿಕೊಳ್ಳುತ್ತಿದ್ದಳು. ಅವಳ ವಿಚಾರವಾಗಿ ಅಮ್ಮ ಅಪ್ಪ ಇಬ್ಬರ ನಡುವೆ ಸಿಹಿಮಾತಿನ ಚಕಮಕಿ ಅಧಿಕವಾಗಿತ್ತು. ಆದರೆ ಆ ಇಬ್ಬರ ಕಲಹ ಕಾದಾಟಗಳ ಮೂಲದಲ್ಲಿದ್ದುದು ಕೇವಲ ವಾತ್ಸಲ್ಯವೇ ಆಗಿತ್ತು. ಅಪ್ಪ, ಅಮ್ಮ-ಇಬ್ಬರೂ ಅವರವರ ದೃಷ್ಟಿಕೋನದಿಂದ ಮಗಳ ಮೇಲಿನ ವಾತ್ಸಲ್ಯವನ್ನು ತರ್ಕಿಸುತ್ತಿದ್ದರು.

ಒಂದು ದಿನ ಸಾಯಂಕಾಲ ಪುಸ್ತಕಗಳನ್ನು ಖರೀದಿಸಿ ಬರುತ್ತಿದ್ದವಳು ಎದುರಿಗೆ ಕಂಡ ದೃಶ್ಯದಿಂದ ಮೋಡಹೋದವಳಂತೆ ನಿಂತಳು. ದಂಪತಿಗಳಿಬ್ಬರು ಎರಡು ವರ್ಷದ ಹುಡುಗನೊಬ್ಬನ ಕೈ ಹಿಡಿದುಕೊಂಡು ರಸ್ತೆ ದಾಟುತ್ತಿದ್ದರು. ತನ್ನ ಕಣ್ಣು ತನಗೆ ಮೋಸ ಮಾಡುತ್ತಿಲ್ಲ ತಾನೇ?' ಎಂದುಕೊಂಡಳು. ಈ ಒಗಟು ವಾರಗಟ್ಟಲೆ ಅವಳನ್ನು ಕಾಡಿತು. ಒಂದು ದಿನ ವಿಶ್ವವಿದ್ಯಾಲಯದಲ್ಲಿ ಆತ ಎದುರಾದ. ಕಳೆದುಕೊಂಡ ಬಣ್ಣಗಳು ಮತ್ತೆ ಬಂದಂತಾಯಿತು. ಎಲ್ಲಿಂದಲೋ ಧೈರ್ಯ ತಂದುಕೊಂಡು ಕೇಳಿದಳು.

"ತಮಗೆ ಮದುವೆಯಾಗಿದೆಯೇ?"

"ಹೌದು.....ಯಾಕೆ?"

'ಹೌದು' ಎನ್ನುವುದನ್ನು ಸಹಜವಾಗಿಯೂ, 'ಯಾಕೆ' ಎಂಬುದನ್ನು ಆಶ್ಚರ್ಯವಾಗಿಯೂ ಕೇಳಿದಂತಾಯಿತು.

"ಹೌದು ನಾವು ಯಾವಾಗಲೂ ಒಟ್ಟಿಗೆ ಷಾಪಿಂಗ್ ಮಾಡುತ್ತೇವೆ. ನಿಮಗೆ ಅವಕಾಶ ಆಗೋದಾದರೆ ನಿಮ್ಮೊಂದಿಗೆ ಒಂದು ಕಪ್ ಚಹಾ......?

"ಕ್ಷಮಿಸಿ ನನ್ನ ನಿಮ್ಮ ದಾರಿಗಳು ಬೇರೆ ಬೇರೆ" ಎಂದು ಹೇಳುತ್ತಾ ಶಾಲ್ಮಲಿ ಮುಂದೆ ನಡೆದಳು. ಶಿರೀಷ ಮರಗಳು ಹೂಗಳೆಲ್ಲವನ್ನು ಒಟ್ಟಿಗ ಉದುರಿಸಿದವು. ಅವುಗಳನ್ನು ತುಳಿದುಕೊಂಡೆ ಹೆಜ್ಜೆ ಹಾಕಿದಳು.

ಇದೇ ಯೋಚನೆಯಲ್ಲಿಯೇ ಶಾಲ್ಮಲಿ ಹಲವು ದಿನಗಳನ್ನು ಕಳೆದಳು. ಯಾರಿಗಾದರೂ ಹೀಗೆ ಮಾಡಲು ಸಾಧ್ಯವೇ? ಏಕಕಾಲದಲ್ಲಿ ಎಷ್ಟು ನೆಲೆಗಳಲ್ಲಿ, ಎಷ್ಟು ಮಂದಿಯ ಜೊತೆ ಸಂಬಂಧಗಳನ್ನು ಇರಿಸಿಕೊಳ್ಳಲು ಸಾಧ್ಯ. ನಿಜವಾಗಿಯೂ ಇದು ಸಾಧ್ಯವೇ? ಶಿರೀಷ ಮರಗಳ ನೆರಳಿನಲ್ಲಿ ನಡೆದಾಗಲೆಲ್ಲ ಜೇಡರಬಲೆಗಳು ತೊನೆದಾಡುತ್ತಿದ್ದವು. ಅವಳಿಗೆ ಬರುತ್ತಿದ್ದ ಕಂಪು ಸುವಾಸನೆ ಅಲ್ಲಿಂದಲೇ ಬರುತ್ತಿತ್ತೋ ಅಥವಾ ಶಿರೀಷ ಹೂಗಳ ರಸದಿಂದಲೊ ಎಂಬುದು ಅವಳಿಗೆ ತಿಳಿಯುತ್ತಿರಲಿಲ್ಲ. ಯಾವಾಗಲೂ ತನಗೆ ಅಡ್ಡವಾಗುತ್ತಿದ್ದ ಈ ಬಲೆಗಳನ್ನು ಕೈಯಿಂದ ಸರಿಸಿ ಬಿಡುತ್ತಿದ್ರು, ಆದರೆ ಈ ದಿನ ಅವಳ ಮನಃಸ್ಥಿತಿ ಬೇರೆಯಾಗಿತ್ತು. ಈ ಬಲೆಗಳು ಪರಿಮಳಸುತ್ತಿರುವಂತೆ-ದಹಿಸುತ್ತಿರುವಂತೆ ಭಾಸವಾದವು. ಅಸಾಧ್ಯವಾದ ಅವುಗಳನ್ನು ಸರಿಸಿ, ಬಾಯಿ, ಮುಖ ಒರೆಸಿಕೊಂಡಳು. ಫುಟ್ ಪಾತನ್ನು ದಾಟಿ ರಸ್ತೆಗೆ ಇಳಿದಳು.

ಶಿರೀಷಗಳ ಕಾಲ ಮುಗಿಯಿತು. ಮೊದಲ ಮಳೆ ಅಳಿದುಳಿದ ಮೊಗ್ಗಿನ ಗೊಂಚಲುಗಳನ್ನು ಬಾಗಿಸಿ ಹತ್ತಿಯುಂಡೆಯಂತೆ ಮಾಡಿ ಬಿಟ್ಟಿತ್ತು. ಧಾರಾಕಾರವಾಗಿ ಬಿದ್ದ ಮಳೆ ಅವಳ ಅಂತರಂಗದ ಅಂಗಳವನ್ನು ಶುಭ್ರಗೊಳಿಸಿತ್ತು. ಮನಸ್ಸಿನ ವಿಚ್ಛಿನ್ನತೆ ಮರೆಯಾಗಿತ್ತು. ತನ್ನ ನಿರ್ಧಾರದ ಬಗ್ಗೆ ಸಂತೋಷವೆನಿಸಿತ್ತು. ಭಾವನೆ ಮತ್ತು ತರ್ಕದ ನಡುವೆ ನಡೆಯುವ ಸಂಘರ್ಷದಲ್ಲಿ ಯಾವಾಗಲೂ ತರ್ಕಕ್ಕೆ ಗೆಲುವು ಅದೇ ಅವಳಿಗೆ ಮಾರ್ಗದರ್ಶನ ನೀಡುತ್ತಿತ್ತು. ಆ ತರ್ಕವನ್ನೇ ಮೊರೆಹೊಕ್ಕಳು. ಜೀವನ ಪರ್ಯಂತ ಯಾರೊಂದಿಗೆ ಬದುಕಬೇಕಾದ ಅಗ್ಯವಿಲ್ಲವೋ, ಅವನನ್ನು ನೆಚ್ಚಿಕೊಂಡು, ಅವನನ್ನೇ ಆಲೋಚಿಸುತ್ತಾ ಕೊಡುವುದರಲ್ಲಿ ಏನು ಅರ್ಥ? ಅದು ಯಾವ ಬುದ್ಧಿವಂತಿಕೆ? ಎಂದು ತರ್ಕಿಸಿದಳು. ಶಾಲ್ಮಲಿ ಭಾವನೆಗಳಲ್ಲಿ ಕಳೆದು ಹೋಗುತ್ತಿರಲಿಲ್ಲ. ಯಾವಾಗಲೂ ಬುದ್ಧಿಯ ಎಚ್ಚರದಲ್ಲಿ ಇರುತ್ತಿದ್ದಳು ಬಿ.ಎ. ನಲ್ಲಿ ಸೆಕೆಂಡ್ ಕ್ಲಾಸ್ ಬರಲಿ, ಮ್ಯಾನೇಜ್‌ಮೆಂಟ್ ಕೋರ್ಸ್‌ಗೆ ಸೀಟು ಸಿಗದಿರಲಿ-ಏನೇ ಆದರೂ ಅವೆಲ್ಲವನ್ನು ತರ್ಕದ ಬೆಳಕಿನಲ್ಲಿ ನೋಡಿ ಮನಸ್ಸಿಗೆ ಸಂತೋಷ ತಂದುಕೊಳ್ಳುತ್ತಿದ್ದಳು. ಪ್ರತಿಯೊಬ್ಬರಿಗೂ ತಾವು ಬಯಸಿದ್ದೆಲ್ಲವೂ ಸಿಗುವುದು ಖಂಡಿತವಾಗಿಯೂ ಸಾಧ್ಯವಿಲ್ಲ ಎನ್ನುವುದು ಅವಳಿಗೆ ಅರಿವಾಗಿ ಸಮಾಧಾನ

ತಂದುಕೊಳ್ಳುತ್ತಿದ್ದಳು. ಬಯಕೆಗಳೇ ಲಭ್ಯಗಳಾಗಲಾರವು. ಬದುಕನ್ನು ಸ್ವರ್ಗ ನರಕವಾಗಿಸಲು ಅದೊಂದೇ ದಾರಿಯಲ್ಲ. ಬದುಕು ಮತ್ತು ಪ್ರಾಪ್ತಿ ಅಥವಾ ಲಭ್ಯ – ಪ್ರತಿಯೊಂದಕ್ಕೂ ತನ್ನದೆ ಆದ ಲೆಕ್ಕವಿದೆ. ತರ್ಕವಿದೆ.

"ವಯಸ್ಸಿಗೆ ಬಂದ ಹುಡುಗೀ ಮನೇಲಿ ಕೂತಿದ್ದರೆ ಯಾವ ತಾಯಿಗೆ ತಾನೇ ನಿದ್ದೆ ಬರುತ್ತೆ" – ಎಷ್ಟೋ ಕತ್ತಲ ರಾತ್ರಿಗಳಲ್ಲಿ ಅಮ್ಮನ ಪಿಸುದನಿ ಕೇಳಿಬರುತ್ತಿತ್ತು.

"ಎಷ್ಟು ಸಲ ಹೇಳಿದ್ದೀನಿ ಶಾಲ್ಮಲಿ ಕೇವಲ ಹುಡುಗಿ ಅಲ್ಲ. ಮಗಳಲ್ಲ, ಮಗನೂ ಅವಳೇ! ಅಂತಹ ಹುಡುಗಿಯ ಮದುವೆ ಚಿಂತೆ?....ಅಪ್ಪ ನಗುತ್ತಿದ್ದ.

"ನೀನು ಅವಳನ್ನು ಮಗಳೂಂತಾದ್ರೂ ತಿಳ್ಕೊ. ಮಗಾಂತಾದ್ರೂ ತಿಳ್ಕೊ. ನಾನು ಅಡ್ಡಿ ಬರೊಲ್ಲ. ಆದರೆ ನನ್ನ ದೃಷ್ಟಿಲಿ ಅವಳು ಹುಡುಗಿ. ಆದಷ್ಟು ಬೇಗ ಮದುವೆ ಮಾಡಲೇಬೇಕು"– ಅಮ್ಮ ಬೇಸರದಿಂದ ಹೇಳುತ್ತಿದ್ದಳು.

"ನನಗೂ ಯೋಚನೆ ಇದೆ. ಎರಡು ವರ್ಷಗಳ ನಂತರ...... ಇನ್ನೂ ಅವಳು ಕಾಂಪಿಟೇಶನ್ ಪರೀಕ್ಷೆಗಳನ್ನು ಬರೆಯಲಿ ಈಗಲೇ ಮದುವೆ ಮಾಡಿದರೆ, ಅಡಿಗೆ ಮನೆ – ಅಂತ ಸಾಯಬೇಕಾಗುತ್ತೆ' –ಅಪ್ಪನ ಗಂಭೀರವಾದ ಮಾತು ಹೊಮ್ಮುತ್ತಿತ್ತು.

ಅದೆಲ್ಲ ಮಾಡೋದ್ರಿಂದಲೇ ಹೆಣ್ಣೂಂತ ಅನ್ನಿಸ್ಕೊಳ್ಳೋದು. ವೇದಾಂತದ ಮಾತನಾಡುತ್ತಿದ್ದಳು ಅಮ್ಮ.

ನೀನು ಹೇಳೋದೇನೊ ಸರಿ ಒಪ್ಕೊಳ್ತೀ – ಆದರೆ ನನ್ನ ಮಗಳು ಅತ್ತೆ ಮನೇಲಿ ರಾಣಿ ಹಾಗಿರಬೇಕು.

ಸ್ವತಂತ್ರವಾಗಿ ಅವಳ ಕಾಲ ಮೇಲೆ ಅವಳು ನಿಂತ್ಕೋಬೇಕು. ಕೇವಲ ಹೆಂಡತಿಯಾಗಿ ಮಾತ್ರ ಉಳೀದೇ ತನ್ನನ್ನು ತಾನು ಗುರುತಿಸಿಕೊಳ್ಳುವಂತಾಗಬೇಕು. ಹೀಗಾದ ಮರುದಿನವೇ ಅವಳ ಮದುವೆ" ಅಪ್ಪ ಕನಸುಗಳನ್ನು ತುಂಬಿಕೊಂಡು ಹೇಳಿದ.

"ಹುಡುಗರೇನು ಮನೆ ಮುಂದೇನೇ ಸಿಕ್ಕುಬಿಡ್ತಾರೇನು?" ಅಪ್ಪನ ದನಿಯನ್ನೇ ಅನುಕರಿಸುತ್ತಾ ಅಮ್ಮ ಕೇಳಿದಳು.

"ನೋಡ್ತಾ ಇದ್ದೀನಿ ನಾನೂ ಕೂಡಾ. ನನಗೇನು ಯೋಚನೆ ಇಲ್ವೇನು? ನಿನ್ನ ಹಾಗೆ ಬಾಯಿ ಬಿಟ್ಟು ಹೇಳೊಲ್ಲ. ಅಷ್ಟೇ! – ಅಸಮಾನಧಾನದಿಂದ ಅಪ್ಪ ನುಡಿದರು.

"ನನಗೆ ಅನ್ನಿಸುತ್ತೆ. ಹುಡುಗರನ್ನ ನೀವು ಹುಡುಕೋದಕ್ಕೆ ಶುರುಮಾಡಿ. ಅವಳು ಆಕಡೆ ಓದುತ್ತಾ ಇರಲಿ. ಒಳ್ಳೇ ಹುಡುಗ ಸಿಕ್ಕಿದ ತಕ್ಷಣ ಮದುವೆ ಮಾಡಿ ಮುಗಿಸಿಬಿಡೋಣ. ನನಗಂತೂ ಇವಳಿಗೆ ಮದುವೆ ಮಾಡಲೇಬೇಕೂಂತ ಅನಿಸಿದೆ. ನೀವೇನೇ ಹೇಳಿದರೂ ನಾನು ಕೇಳುವವಳಲ್ಲ." ಅಮ್ಮ ತನ್ನ ನಿರ್ಧಾರವನ್ನು ತಿಳಿಸಿದಳು.

"ಇಲ್ಲದಿದ್ದರೆ ಮಾತ್ರ ಯಾವಾಗ ತಾನೇ ನನ್ನ ಮಾತು ಕೇಳಿಸಿಕೊಂಡಿದ್ದಿ? ಅಪ್ಪನ ಗಟ್ಟಿಯಾದ ನಗು ಕೇಳಿಸಿತು.

ಅಪ್ಪನ ಈ ಸ್ವಭಾವ, ರೀತಿ ನೋಡಿ ಸುಮ್ಮನಿರಲಾಗಲಿಲ್ಲ. ಅಮ್ಮ ನಕ್ಕಳು. ಅಪ್ಪ-ಅಮ್ಮ ಇಬ್ಬರೂ .ಮದುವೆಯಾಗಿ ಮೂವತ್ತು ವರುಷ ಸರಿದಿದೆ. ಶಾಲ್ಮಲಿಗಿಂತ ಮೊದಲು ಹುಟ್ಟಿದ ಒಂದು ಗಂಡು, ಒಂದು ಹೆಣ್ಣು, ಎರಡೂ ಮಕ್ಕಳು ತೀರಿಕೊಂಡಿದ್ದವು. ಆಮೇಲೆ ಒಂದಾದ ಮೇಲೆ ಒಂದರಂತೆ ಗರ್ಭಪಾತ. ಚಿಕಿತ್ಸೆ, ಔಷಧಿ, ಹರಕೆಗಳ ನಂತರ ಶಾಲ್ಮಲಿ ಹುಟ್ಟಿದಳು. "ವಯಸ್ಸಾದ ಮೇಲೆ ಹುಟ್ಟಿದ ಮಕ್ಕಳ ಮೇಲೆ ತಂದೆ ತಾಯಿ ಪ್ರೀತಿ ಬಹಳ ಇರುತ್ತೆ" ಅಪ್ಪ ಹೇಳುತ್ತಿದ್ದರು.

"ವಯಸ್ಸು ನಿಮಗಾಗಿರಬಹುದು ನನಗಲ್ಲ" ಹುಸಿ ಮುನಿಸಿನಿಂದ ಅಮ್ಮ ಹೇಳುತ್ತಿದ್ದರು.

"ಹೌದು ನಿನಗಿಂತ ಏಳು ವರುಷ ದೊಡ್ಡವನು ವಯಸ್ಸಿನಲ್ಲಿ. ನಿನ್ನ ಮುಂದೆ ನಾನು ಮುದುಕನೇ; ವಯಸ್ಸಾದವನೆ!" ಎಂದು ಅಟ್ಟಹಾಸದಿಂದ ನಗುತ್ತಿದ್ದರು.

ಬಾಲ್ಯದಲ್ಲಿ ಕಂಡಿದ್ದ ತಂದೆಯನ್ನು, ಈಗಿನ ತಂದೆಯೊಂದಿಗೆ ಹೋಲಿಸಿ ನೋಡತೊಡಗಿದಳು. ಒಂದಕ್ಕಿಂತ ಒಂದು ಭಿನ್ನವಾದ ಎರಡೂ ದೃಶ್ಯಗಳನ್ನು ಕಣ್ಮುಂದೆ ತಂದುಕೊಂಡಳು. ಅಪ್ಪನಲ್ಲಿ ಅಂತಹ ಬದಲಾವಣೆ ಏನೂ ಕಾಣಲಿಲ್ಲ. ಅದೇ ತೆಳುದೇಹ.....ನಗುಮುಖ ಬೆಳ್ಳಗಾದ, ಉದುರಿದ ಕೂದಲೊಂದು ಬಿಟ್ಟರೆ ಬೇರೆಲ್ಲ ಅದೇ ಅದೇ! ಆದರೆ ಅಮ್ಮ ಪೂರ್ತಿಯಾಗಿ ಬದಲಾಗಿದ್ದಾರೆ. ಅಪ್ಪನಿಗಿಂತ ವಯಸ್ಸಾದಂತೆ ಕಾಣುತ್ತಾಳೆ. ಕೂದಲು ಬೆಳ್ಳಗಿದೆ. ದೇಹ ಸ್ಥೂಲವಾಗಿದೆ. ಜೊತೆಗೆ ಮುಖದ ಮೇಲೆ ಚಿಂತೆಯ ಗೆರೆಗಳು ಮೂಡಿದೆ. ಸ್ವಭಾವದಲ್ಲಿ ಸಿಡಿ ಮಿಡಿ ; ಹಠ.

ಅಮ್ಮ ಯೋಚನೆ ಮಾಡಿದ್ದರಿಂದ ಏನಾದರೂ ಬದಲಾವಣೆಯಾಯಿತೇ? ಏನು ಆಗಬೇಕಿತ್ತೋ, ಅದೇ ಆದದ್ದು. ಅಂಥಾದ್ದರಲ್ಲಿ ಆಲೋಚನೆ ಮಾಡಿ ಮಾಡಿ ಸಾಯುವುದರ ಅರ್ಥ ಏನು? ಅಮ್ಮನ್ನ ಬದಲಾಯಿಸುವುದು ಸಾಧ್ಯವಿರಲಿಲ್ಲ. ಅಪ್ಪ ಎಷ್ಟೇ ಪ್ರಯತ್ನಪಟ್ಟರೂ ಅಮ್ಮನ ಆಲೋಚನೆಗಳ ದಿಕ್ಕನ್ನು ಬದಲಾಯಿಸುವುದು ಸಾಧ್ಯವಿರಲಿಲ್ಲ. ಅಪ್ಪ ಎಷ್ಟೇ ಪ್ರಯತ್ನಪಟ್ಟರೂ ಅಮ್ಮನ ಆಲೋಚನೆಗಳ ದಿಕ್ಕನ್ನು ಬದಲಾಯಿಸಲು ಸಾಧ್ಯವೇ ಆಗಲಿಲ್ಲ. ಒಮ್ಮೊಮ್ಮೆ ಅಮ್ಮ ಸಿಟ್ಟುಗೊಂಡು ಹೇಳುತ್ತಿದ್ದರು– "ನೀನು ಹೇಳುವುದರಿಂದ ನನ್ನ ಸಂಸ್ಕಾರಗಳನ್ನು ನಾನು ಬಿಟ್ಟು ಬಿಡಲೇನು? ನನ್ನ ಅಮ್ಮನಿಂದ ನಾನು ಇದೆಲ್ಲವನ್ನು ಕೇಳುತ್ತಾ ಬಂದಿದ್ದೀನಿ. ಯಾವುದನ್ನು ನಾನು ಪ್ರತ್ಯಕ್ಷವಾಗಿ ಕಣ್ಣಾರೆ ನೋಡಿದ್ದೇನೆಯೋ ಅವುಗಳಿಂದ ಕಣ್ಮುಚ್ಚಿಕೊಳ್ಳಲೇನು?"

"ಕಾಲ ಬದಲಾಗಿದೆ. ಆದರೆ ನೀನು ಮಾತ್ರ ಎಲ್ಲಿದ್ದೆಯೋ ಅಲ್ಲಿಯೇ ಇದ್ದೀ ತಲೆ ಚಚ್ಚಿಕೊಳ್ಳುತ್ತಾ ಅಪ್ಪ ಹೇಳಿದರು.

"ನವಿಲನ್ನು ನೋಡಿ ಕೆಂಬೂತ ಪುಕ್ಕ ಸುಟ್ಕೊಂಡ ಹಾಗೆ" – ಸೇರಿಗೆ ಸವ್ವಾಸೇರು ಎಂಬಂತೆ ಅಮ್ಮ ನುಡಿದಳು.

ಅಮ್ಮ ಗಟ್ಟಿ ಮಣ್ಣಿಂದಾದವಳು. ಅಪ್ಪನ ನಿರಂತರ ಪ್ರಹಾರಗಳಿಂದಲೂ ಒಂದೆರಡು ಗುರುತುಗಳನ್ನು ಮೂಡಿಸಲಾಗಿರಲಿಲ್ಲ. ಪ್ರತಿಯಾಗಿ ಅಮ್ಮನ ಬಲವಂತಕ್ಕೆ ಅಪ್ಪ ಸೋತು ಸುಸ್ತಾಗಿ, ಕಡೆಗೆ ವರಾನ್ವೇಷಣೆಗೆ ಇಳಿದ. ಬಹಳ ಚುರುಕಾಗಿ ವರಾನ್ವೇಷಣೆ ನಡೆಯಿತು. ವರದಕ್ಷಿಣೆ, ಖರ್ಚು ಅದೂ ಇದೂಂತ ಲೆಕ್ಕಾಚಾರ ನಡೆಯತೊಡಗಿತು ಸಣ್ಣ ಮನೆಯಲ್ಲಿ ಸುದ್ದಿ ಗೋಡೆ ಕಿಟಕಿಗಳನ್ನು ದಾಟುವುದು ಕಷ್ಟವೇನೂ ಇರಲಿಲ್ಲ. ಶಾಲ್ಮಲಿಯ ಕಿವಿಗೂ ಅದು ಬಿತ್ತು. ಓದುತ್ತಾ ಓದುತ್ತಾ ಒಮ್ಮೊಮ್ಮೆ ಅವರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಇದ್ಯಾವುದರ ಪರಿವೆಯೂ ಇಲ್ಲದಂತೆ, ಕಿವಿಗಡಚಿಕ್ಕುವ ಮಕ್ಕಳ ಗಲಾಟೆಯೂ ತನಗೆ ಕೇಳಿ ಸುತ್ತಿಲ್ಲವೆನ್ನುವಷ್ಟರ ಮಟ್ಟಿಗೆ ಏಕಾಗ್ರತೆಯಿಂದ ಓದಿನಲ್ಲಿ ಮುಳುಗಿ ಬಿಡುತ್ತಿದ್ದಳು. ಇದೆಲ್ಲ ಆಗುತ್ತಿದ್ದರೂ, ಒಂದನ್ನು ಮನಸ್ಸಿನಲ್ಲಿ ತೀರ್ಮಾನ ಮಾಡಿ ಬಿಟ್ಟಳು. ತನ್ನ ಮದುವೆಗಾಗಿ, ಮನೆ ಮಾರಾಟವಾಗುವುದಕ್ಕಾಗಲೀ, ಅಪ್ಪ ಸಾಲ ಮಾಡುವುದಕ್ಕಾಗಲಿ ತಾನು ಅವಕಾಶ ಕೊಡುವುದಿಲ್ಲವೆಂದು ದೃಢವಾಗಿ ನಿರ್ಧಾರ ಮಾಡಿದಳು.

ಒಂದು ದಿನ ಅಮ್ಮ ಗುಡಿಗೆ ಹೋಗಿದ್ದಳು. ಅಪ್ಪ ಶಾಲ್ಮಲಿಯ ಕೋಣೆಯೊಳಗೆ ಪ್ರವೇಶಿಸಿದರು. ಸ್ವಲ್ಪ ಹೊತ್ತು ಪುಸ್ತಕಗಳನ್ನು ತಿರುವಿ ಹಾಕಿದರು. ನಂತರ ಹೋಗಿ ಅವಳ ಮಂಚದ ಮೇಲೆ ಕುಳಿತರು.

"ಶಾಲೂ, ನಿನ್ನ ಅಮ್ಮನ ಆಸೆ ಏನೂಂತ ಗೊತ್ತಲ್ವಾ? ನನ್ನ ದೃಷ್ಟಿಯಲ್ಲಿ ಕೆಲವು ಹುಡುಗರಿದ್ದಾರೆ. ನಿನ್ನ ಮನಸ್ಸಿನಲ್ಲಿ ಏನಾದರೂ ಹೇಳುವುದು ಇದ್ರೆ, ಸಂಕೋಚವಿಲ್ಲದೆ ನನ್ನ ಹತ್ತಿರ ಹೇಳು. ನಿನ್ನ ಸಂತೋಷವೇ ನಮ್ಮ ಸಂತೋಷ" ಅಪ್ಪ ಗಂಭೀರವಾಗಿ ಹೇಳಿದ. "ಅಪ್ಪಾ!" ಎಂದಷ್ಟೇ ಹೇಳಿ, ಸಂಕೋಚದಿಂದ ಸುಮ್ಮನಾದಳು. ಯಾಕೆಂದರೆ ಗೆಳೆಯನಂತೆ ಇದ್ದ ಅಪ್ಪ ಹಿಂದೆಂದೂ ಇಷ್ಟೊಂದು ಗಂಭೀರವಾಗಿ, ಗಾಢವಾಗಿ ಆಲೋಚನೆಯಲ್ಲಿ ಮುಳುಗಿ ಕಾಣಿಸಿಕೊಂಡಿದ್ದಿಲ್ಲ.

"ನಾನು ನನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದೆ. ನೀನು ಓದು ಮಗು, ಮನಸ್ಸಿಟ್ಟು ಓದು" ಎಂದು ಹೇಳುತ್ತಾ ಕೋಣೆಯಿಂದ ಹೊರಗೆ ಹೊರಟರು. ಅಪ್ಪನ ಕೈಯ ಪ್ರೀತಿಯ ಬಿಸುಪು ಇನ್ನೂ ಅವಳ ಅನುಭವದಲ್ಲಿತ್ತು. ತಲೆ ನೇವರಿಸಿ ಹೊರಟಿದ್ದರು.

ಶಾಲ್ಮಲಿಗೆ ಸುಮಾರು ಹೊತ್ತು ಓದಲಾಗಲಿಲ್ಲ. ಬೇಕಿಲ್ಲದ ಪುಸ್ತಕಗಳ ಪುಟಗಳ ಜೊತೆ ಕಣ್ಣಾ ಮುಚ್ಚಾಲೆ ಆಡಿದಳು. ನೋಟ್ ಪುಸ್ತಕಗಳ ಹಾಳೆಗಳನ್ನು ತಿರುವುತ್ತಿದ್ದವಳು, ಬೇಸರ ಬಂದು ಎದ್ದು ಅಡುಗೆ ಮನೆಗೆ ನಡೆದು ಚಹಾ ಮಾಡಲು ತೊಡಗಿದಳು. ಅಮ್ಮ ಇನ್ನೂ ಬಂದಿರಲಿಲ್ಲ.

"ಅಪ್ಪ ಚಹಾ!" ಎಂದು ಹೇಳುತ್ತಾ ಚಹಾದ ಟ್ರೇ ಅನ್ನು ಮೇಜಿನ ಮೇಲಿರಿಸಿದಳು.

"ಏನಾದರೂ ತಿನ್ನುವುದಕ್ಕೆ ಇದೆಯೇನು? ಹಸಿವಾಗ್ತಿದೆ." ಅಪ್ಪ ಹೇಳಿದರು.

"ಈಗಲೇ ತಂದೆ" ಎಂದು ಹೇಳುತ್ತಾ ಹೋದ ಶಾಲ್ಮಲಿ ಒಂದಿಷ್ಟು ತಿಂಡಿ ತಂದಿರಿಸಿದಳು.

"ನಿನ್ನ ಅಮ್ಮನ ಮನಸ್ಸು ಬಹಳ ಒಳ್ಳೇದು" ತಿನ್ನುತ್ತಲೇ ಅಪ್ಪ ಹೇಳಿದರು.

"ಹೌದು" ಶಾಲ್ಮಲಿ ನಗುತ್ತಾ ಹೂಂ ಗುಟ್ಟಿದಳು.

"ಒಳ್ಳೆ ವಜ್ರ!" ಆಲೋಚನೆಯಲ್ಲಿ ಮುಳುಗಿ ಹೇಳಿದರು, ಅಪ್ಪ.

"ಖಂಡಿತವಾಗಿ, ಹೌದು" – ಹೇಳುತ್ತಾ ಶಾಲ್ಮಲಿ ಚಹಾ ಗುಟುಕರಿಸಿದಳು.

"ಈಗ ತಾನೇ ಪತ್ರಿಕೆ ಓದುತ್ತಿದ್ದೆ..... ಬಹಳ ವಿಚಿತ್ರವಾದ ಘಟನೆಗಳು!..... ಓದಿದೆಯೇನು?" ಏನೋ ಯೋಚಿಸುತ್ತಲೇ ಅಪ್ಪ ಹೇಳಿದರು.

"ಓದಿದ್ದೇನೆ....ಪ್ರತಿಸಲ ಓದಿದಾಗಲೂ ಅನ್ನಿಸುತ್ತೆ. ಕಡೆಪಕ್ಷ ಓದಿ ವಿದ್ಯಾವಂತರಾದ ಹೆಣ್ಣು ಮಕ್ಕಳ ತಂದೆ ತಾಯಿಯರೂ ಕೂಡ ಹುಡುಗರನ್ನು ಕೊಂಡುಕೊಳ್ಳುವುದು ಯಾತಕ್ಕೇಂತ?" ಶಾಲ್ಮಲಿ ನಿಧಾನವಾಗಿ ಕೇಳಿದಳು.

"ರೂಢಿಯಾಗ್ಬಿಟ್ಟಿದೆ! ಪದ್ಧತಿ, ಸಂಪ್ರದಾಯಗಳನ್ನು ಬದಲಿಸೋದು ಸಾಧ್ಯವಿಲ್ಲ. ಪ್ರತಿಯೊಬ್ಬರೂ ತಮ್ಮ ಮಕ್ಕಳು ಸುಖವಾಗಿರಲೀಂತ ಆಸೆ ಪಡ್ತಾರೆ. ವಿಶೇಷವಾಗಿ ಹೆಣ್ಣು ಮಕ್ಕಳ ತಂದೆಯರು" ಅಪ್ಪ ನಿಟ್ಟುಸಿರೆಳೆದರು.

"ಅಪ್ಪ, ನಾನೊಂದು ಮಾತು ಹೇಳಲೇ?" ಶಾಲ್ಮಲಿ ತುಂಟತನದ ದನಿಯಲ್ಲಿ ಕೇಳಿದಳು.

"ಹೇಳು, ಅದೇನು ಹೇಳ್ಬೇಕೂಂತೀಯೋ"

"ನೀವೂ ಕೂಡಾ ಇವತ್ತು ಅಮ್ಮನ ಶೈಲಿಯಲ್ಲಿಯೇ ಯಾಕೆ ಮಾತಾಡ್ತಿದ್ದೀರಿ?" – ಕಿಲ ಕಿಲ ನಕ್ಕಳು.

"ಏನ್ಮಾಡೋದು. ಎಲ್ಲೋ ಒಂದು ಕಡೆ ತಮಗೆ ಪ್ರಿಯರಾದವರ ವಿಚಾರದಲ್ಲಿ ಭಾಷೆ, ಶೈಲಿ ಎಲ್ಲಾ ಒಂದೇ ತರ ಆಗ್ಬಿಡುತ್ತೆ" – ಅಪ್ಪ ಗಂಭೀರವಾಗಿ ಹೇಳಿದರು.

"ನನಗಂತೂ ನಿಮ್ಮ ಮಾತು....." ಇಷ್ಟನ್ನು ಹೇಳಿ ಸುಮ್ಮನಾದಳು. ಆದರೆ ಅವಳ ಕಣ್ಣುಗಳು ಬಹಳಷ್ಟು ಹೇಳಿದವು.

"ನಾನು ಇದನ್ನೇ ಯೋಚನೆ ಮಾಡ್ತಿದ್ದೀನಿ.....ನಾನು ನನ್ನ ಮಗಳನ್ನು ಅಂಥಾ ಮನೆಗೆ ಕೋಡೋದಿಲ್ಲ. ಹಣಕೊಟ್ಟು ನಿನಗೆ ಗಂಡನನ್ನು ಕೊಂಡು ಕೊಳ್ಳೊಲ್ಲ. ನನ್ನ

ಮೇಲೆ ಭರವಸೆ ಇಡು". ಅಪ್ಪ ಶಾಲ್ಮಲಿಯ ಚಿಂತೆಯನ್ನು ದೂರ ಮಾಡುವಂತೆ ಹೇಳಿದರು.

ಶಾಲ್ಮಲಿಗೆ ಇದ್ದದ್ದು ಒಂದೇ ಆಸೆ, ತನ್ನ ವಿಚಾರವಾಗಿ ಅಪ್ಪ ಕಟ್ಟಿಕೊಂಡಿದ್ದ ಕನಸುಗಳನ್ನು ನನಸಾಗಿಸುವುದು. ಆದರೆ ದೇವರ ಇಚ್ಛೆ ಬೇರೆಯೇ ಆಗಿತ್ತು. ಪರೀಕ್ಷೆ ಮುಗಿದಿತ್ತು. ದಣಿವು ದೂರವಾಗಿತ್ತು. ನಿದ್ದೆ, ಸಿನೇಮಾಗಳು.....ಬೇಸರ ತರಿಸಿದ್ದವು. ಪರೀಕ್ಷೆಯ ಫಲಿತಾಂಶದ ಪ್ರತೀಕ್ಷೆ ಪ್ರಾರಂಭವಾಗಿತ್ತು. ಅಪ್ಪನಿಗೆ ಹತಾಶೆ ಎನಿಸಿತ್ತೋ, ಇಲ್ಲವೊ ತನ್ನ ಅಸಫಲತೆಗಾಗಿ ಮನದುಂಬಿ ಅತ್ತಳು. ಆದರೆ ಸಾವರಿಸಿಕೊಂಡು ತನ್ನಲ್ಲೇ ಹೇಳಿಕೊಂಡಳು. 'ಇನ್ನೂ ಎರಡು ವರ್ಷ ಬಾಕಿ ಇದೆ.' ಕಾಂಪಿಟೇಶನ್ ಪರೀಕ್ಷೆಗಳಲ್ಲಿ ಕುಳಿತುಕೊಳ್ಳಲು ನಾನೇನೂ ಮುದುಕಿ ಆಗಿಲ್ಲವಲ್ಲ."

ಅಮ್ಮನ ಒತ್ತಡ ಹೆಚ್ಚಾಯಿತು. ಆಫೀಸ್ ಮುಗಿಯುತ್ತಿದ್ದಂತೆ ಅಪ್ಪನಿಗೆ ವರಾನ್ವೇಷಣೆಯ ಕೆಲಸ. ತುಂಬಿದ ಮನೆ, ಶ್ರೀಮಂತ ಕುಟುಂಬ ಒಳ್ಳೆ ವಿದ್ಯಾವಂತ ಹುಡುಗ – ಈ ಎಲ್ಲ ನಿರೀಕ್ಷೆಗಳನ್ನು ಪೂರೈಸಬಲ್ಲ ಸಂಬಂಧಗಳಿಗಾಗಿ ಅಲೆದಾಡಿ ಸೋತು ಹೋಗಿದ್ದರು. ಅಮ್ಮನಿಗೆ ತಿಳಿಸದೇನೆ ಪತ್ರಿಕೆಯೊಂದರಲ್ಲಿ ಶಾಲ್ಮಲಿಯ ಎಲ್ಲ ವಿವರಗಳೊಂದಿಗೆ 'ವಿವಾಹ – ವಿಜ್ಞಾಪನೆ' ಯನ್ನು ಕೊಟ್ಟು ಬಂದರು. ಪತ್ರಗಳ ಮಹಾಪೂರವೆ ಬಂತು. ಆರಿಸಿ ಆರಿಸಿ ಕಡೆಗೆ ಐದು ಪತ್ರಗಳನ್ನು ಶಾಲ್ಮಲಿಗೆ ತೋರಿಸಬೇಕೆಂದು ಕೊಂಡರು. ಏನೇ ಆದರೂ ಈ ಬಾರಿ ತೇರ್ಗಡೆಯಾಗಲೇಬೇಕೆಂಬ ಸಂಕಲ್ಪದಲ್ಲಿದ್ದುದರಿಂದ, ಅವಳ ಪಾಡಿಗೆ ಅವಳು ಸುಮ್ಮನಿದ್ದಳು. ಮದುವೆಯಂತೂ ಆಗಲೇಬೇಕು, ಆಗುತ್ತೆ. ಆದರೆ ಮುಂದಿನ ವರ್ಷಕ್ಕೆ ಓದು ಮುಂದುವರೆಸುವುದು ಅವಳ ಹಣೆಯಲ್ಲಿ ಬರೆದಿದೆಯೋ, ಇಲ್ಲವೋ....... ಯಾರಿಗೆ ಗೊತ್ತು?

ಇಷ್ಟೆಲ್ಲ ಓದಿ ಕೇವಲ ಗೃಹಿಣಿಯಾಗಿ ಬಾಳಬೇಕಾಗಿ ಬಂದರೆ?– ಎಂಬ ಆಲೋಚನೆಯಿಂದ ಭಯಗೊಂಡಳು. ಕೆಲಸ ಸಿಗುತ್ತೋ ಇಲ್ಲವೋ? ಯಾರಿಗೆ ಗೊತ್ತು? ಲಕ್ಷಾಂತರ ಮಂದಿ ಎಂ.ಎ. ಮಾಡಿದ ವಿದ್ಯಾರ್ಥಿಗಳು ಕೆಲಸ ಸಿಗದೆ ಕೂತಿದ್ದಾರೆ. ಕೆಲಸದ ಓಟದಲ್ಲಿ ಗೆದ್ದರೆ, ತನ್ನ ಬದುಕೆ ಬದಲಾಯಿಸುತ್ತೆ. ಮನೆ ಒಳಗೆ ಹೊರಗೆ ಎಲ್ಲವನ್ನು ನಿಭಾಯಿಸಬಹುದು. ಪ್ರತಿಯೊಂದಕ್ಕೂ ಗಂಡನ ಮುಂದೆ ಕೈಚಾಚುವ ಪ್ರಮೇಯವೇ ಇರುವುದಿಲ್ಲ. ತನ್ನ ಬಾಲ್ಯದ ಗೆಳತಿ ಜ್ಯೋತಿ ಹೇಳಿದ್ದು ನೆನಪಾಯಿತು..... ಬಿ.ಎ. ಡಿಗ್ರಿ ತಗೊಂಡಿದ್ರೂ ಮನೆ, ಮಕ್ಕಳು, ಗುಡಿಸೋದು, ಮನೆ ಒರೆಸೋದು......ಎಲ್ಲ ಅವಳೇ ಮಾಡಬೇಕಿತ್ತು. ಅವಳು ಪಡೆದಿದ್ದ ಡಿಗ್ರಿ ಸರ್ಟಿಫಿಕೇಟ್‌ಗಳೂ ಕಡೆಗೆ ಇಲಿಗಳ ಪಾಲಾಗಿತ್ತು ಮಕ್ಕಳ ಬಾಯಿಲೆ ಕಸಾಲೆ ಅಂತ ಪುಸ್ತಕ ಹಿಡಿಯುವುದಕ್ಕೂ ಆಗಿರಲಿಲ್ಲ. ಎಲ್ಲೋ ಒಂದು ಕಡೆ ಮೂಲೆಯಲ್ಲಿ ಬಿದ್ದುಕೊಂಡಿದ್ದವು. ಸ್ವಲ್ಪ ಸುಧಾರಿಸಿಕೊಳ್ಳೋ ಅವಕಾಶ ಸಿಕ್ಕಾಗ ಡಿಗ್ರಿಯ ಜಾಗದಲ್ಲಿದ್ದದ್ದು ಚಿಂದಿ ಚಿಂದಿಯಾದ ಕಾಗದದ ತುಂಡುಗಳು..... ಮತ್ತು......

"ಅಂಥ ಜೀವನ ಖಂಡಿತ ನನಗೆ ಬೇಡ" ಅಡಿಯಿಂದ ಮುಡಿವರೆಗೆ ಕಂಪಿಸಿದಳು. ದೇವರೇ ನನಗೆ ಇಂತಹ ಬದುಕು ಎಂದೆಂದಿಗೂ ಬಾರದಿರಲಿ; ಓದುತ್ತಲೇ ಇರುವಂತಾಗಲಿ; ನನಗೆ ಪರೀಕ್ಷೆಗಳಲ್ಲಿ ಸಫಲತೆ ಸಿಗಲಿ' ಎಂದು ಪ್ರಾರ್ಥಿಸುವಂತೆ ಕಣ್ಣು ಮುಚ್ಚಿದಳು. ಪರೀಕ್ಷೆಗಳು ಮುಗಿದ ನಂತರ ಒಂದು ತಿಂಗಳೊಳಗಾಗಿ ಹುಡುಗನನ್ನು ಮನೆಗೆ ಕರೆಸಿದರು. ಅವನೇ ನರೇಶ್, ಸಾದಾ, ಸರಳ ಸದಾಚಾರಿಯಂತೆ ಕಾಣುತ್ತಿದ್ದ. ಹಳ್ಳಿಯಲ್ಲಿ ಹುಟ್ಟಿದ್ದು. ದಿಲ್ಲಿಯಲ್ಲಿ ನೌಕರಿ ಮಾಡಲು ಬಂದು ಐದು ವರ್ಷಗಳಾಗಿದ್ದವು. ಒಳ್ಳೆಯ ನೌಕರಿ ಮಾಡಲು ಬಂದು ಐದು ವರ್ಷಗಳಾಗಿದ್ದವು. ಒಳ್ಳೆಯ ನೌಕರಿಯಲ್ಲಿದ್ದ. ನೋಡೋಕೂ ಚೆನ್ನಾಗಿಯೇ ಇದ್ದ. ಎತ್ತರ, ಗಾತ್ರ......ಎಲ್ಲ ರೀತಿಯಿಂದಲೂ ಲಕ್ಷಣವಾಗಿದ್ದ. ಕೈ ತುಂಬಾ ಸಂಬಳ ಬೇರೆ! ಮನೆಯಲ್ಲಿ ಎಲ್ಲರಿಗೂ ಬಹಳ ಹಿಡಿಸಿದ. ಶಾಲ್ಮಲಿಗೂ ತುಂಬಾ ಹಿಡಿಸಿದ. ಮನೆತನ ಕೂಡಾ ಮೆಚ್ಚಿಕೆಯಾಯಿತು. ಕೊಡೋ ತಗೋಳ್ಳೋ ವಿಷಯದಲ್ಲಿ ಕೂಡಾ ಅವರು ಮಾತಾಡಿದ ರೀತಿ ಶಾಲ್ಮಲಿಯ ಮನೆಯವರನ್ನು ಮಂತ್ರ ಮುಗ್ಧವಾಗಿಸಿತ್ತು. ತಮಗೆ ಬೇಕಾದ್ದು ಗುಣವಂತ ಸೊಸೆ ಮಾತ್ರ ಎಂದು ಹೇಳಿದ ಮೇಲಂತೂ ಅವರ ಸಂತೋಷಕ್ಕೆ ಕಡೆಯಿಲ್ಲದಂತಾಯಿತು. ಮದುವೆ ನಿಶ್ಚಯವಾಯಿತು. ಮದುವೆಗೆ ಒಂದು ವಾರಕ್ಕೆ ಮುಂಚೆ ಶಾಲ್ಮಲಿಯ ಫಲಿತಾಂಶ ಹೊರಬಿತ್ತು. ಅವಳು ಪಾಸಾಗಿದ್ದಳು. ತಂದೆ ಮಗಳ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಶಾಲ್ಮಲಿಗಂತೂ ಯಾವುದೋ ದೊಡ್ಡ ನಿಧಿಯೊಂದು ಸಿಕ್ಕಂತಾಯಿತು.

ವಿಜೃಂಭಣೆಯಿಂದಲೇ ಮದುವೆ ಮುಗಿಯಿತು. ಮದುವೆಯಾದ ಮೇಲೆ ಶಾಲ್ಮಲಿ ನರೇಶನ ಮನೆಗೆ ಅಂದರೆ ಅವನ ಕೋಣೆಯ ಒಂದು ಭಾಗಕ್ಕೆ ಬಂದಳು! ಅತ್ತೆ ಮಾವ ಹಳ್ಳಿಗೆ ಹಿಂದಿರುಗಿದರು. ನರೇಶನ ಇಬ್ಬರು ಸೋದರರೂ ಅವರು ಕೆಲಸ ಮಾಡುತ್ತಿದ್ದ ಊರುಗಳಿಗೆ ತೆರಳಿದ್ದರು. ಶಾಲ್ಮಲಿ ಬಹಳ ಆಸಕ್ತಿಯಿಂದ ಆ ಕೋಣೆಯನ್ನು ಅಲಂಕರಿಸಿದಳು. ನನ್ನ ಗಂಡನಿಗೆ ನಾನು ಸಹಕರಿಸಬೇಕು. ದಿನವಿಡೀ ಮನೆಯಲ್ಲಿ ಕುಳಿತು ಮಾಡುವುದಾದರೂ ಏನು? ಬೆಳಗ್ಗೆ ಹನ್ನೊಂದು ಗಂಟೆ ಹೊತ್ತಿಗೆ ಮನೆಗೆಲಸ ಎಲ್ಲ ಮುಗಿದಿರುತ್ತೆ. ಆಮೇಲೆ ಪೂರ್ತಿ ದಿನ ಕೆಲಸ ಇಲ್ಲದೆ ಸುಮ್ಮನೆ ಕುಳಿತಿರಬೇಕಾಗುತ್ತೆ. ಸಾಯಂಕಾಲ ಒಂದಷ್ಟು ಹೊತ್ತು ಸುತ್ತಾಡುವುದು, ರಾತ್ರಿ ಮನೆಗೆ ಬಂದು ಬಿಸಿ ಬಿಸಿ ಊಟ ಬಡಿಸುವುದು, –ಇಷ್ಟಕ್ಕೆ ಏನು ಮಹಾ ಹೊತ್ತು ಹಿಡಿಯುತ್ತೆ! ನರೇಶ ಸ್ನಾನ ಮಾಡಿ, ಟಿ.ವಿ. ನೋಡುತ್ತಾ ಇಲ್ಲ ಸಂಗೀತ ಕೇಳುತ್ತಾ ಇರುವಷ್ಟರಲ್ಲಿ ಅಡಿಗೆ ಮುಗಿಸಿ ತಟ್ಟೆಯಲ್ಲಿ ಜೋಡಿಸಿ ನರೇಶನ ಮುಂದೆ ಇಡುತ್ತಿದ್ದಳು. "ನೀನು ಇಷ್ಟು ಜಾಣೆಯಾಗಿರ್ತೀಯಾಂತ ಊಹಿಸಿಯೇ ಇರಲಿಲ್ಲ. ನನಗೆ ನೀನು ನಿಜವಾಗಿ ಸಿಗುವೆಯೋ ಇಲ್ಲವೋ ಅನ್ನುವ ಭಯದಲ್ಲಿ...... ಆಮೇಲೆ, ಮನೆಗೆ ಬರುವ ಲಕ್ಷ್ಮಿಯನ್ನು ಬೇಡಾಂತ ಕಾಲಲ್ಲಿ ಒದೀತೀಯಾಂತ, ನನ್ನ ಅಣ್ಣಂದಿರಿಂದ, ಅಪ್ಪನಿಂದ ಚೆನ್ನಾಗಿ ಒದೆತ ತಿಂದೆ' ಅಂತ ನರೇಶ್ ಹೇಳಿಯೇ ಬಿಟ್ಟ,

"ಈಗ ಪಶ್ಚಾತ್ತಾಪ ಇಲ್ಲ ತಾನೇ?' ತುಂಟತನದಿಂದ ಕೇಳಿದಳು, ಶಾಲ್ಮಲಿ.

"ನಿನಗೂ ಗೊತ್ತಿರಬೇಕು, ನಮ್ಮ ಕುಟುಂಬದಲಿ ಓದಿದ ಸೊಸೆಯರಲ್ಲಿ ನೀನೇ ಮೊದಲಿಗಳು. ಓದಿದ, ವಿದ್ಯಾವಂತಳನ್ನು ತಂದು ಏನಾದರೂ..... ಅವಿದ್ಯಾವಂತಳ ಜೊತೆ ಸಂಸಾರ ಮಾಡೋದು ನನ್ನಿಂದ ಸಾಧ್ಯವೇ ಇರಲಿಲ್ಲ. ನಗುತ್ತಲೇ ಹೇಳಿದ ನರೇಶ್.

"ಯಾಕೆ?" ಕುತೂಹಲದಿಂದ ಕೇಳಿದಳು ಶಾಲ್ಮಲಿ.

"ಬಾಲ್ಯದಲ್ಲಿ ಪುಸ್ತಕಗಳ ಜೊತೆ ತಲೆ ಕೆಡಿಸಿಕೊಂಡು, ಆಮೇಲೆ ಆಫೀಸಿನಲ್ಲಿ ಫೈಲುಗಳ ಜೊತೆಗೆ,...... ಕಡೆಪಕ್ಷ ನನ್ನ ಆ ಜಗತ್ತನ್ನು ಅರ್ಥಮಾಡಿಕೊಳ್ಳುವಂತಹ ಸಂಗಾತಿ ಇಲ್ಲದಿದ್ದರೆ ನಮ್ಮ ಆಯಾಸ, ದಣಿವು ಇಮ್ಮಡಿಸುತ್ತೆ. ನೀನೋ ದಿಲ್ಲಿಯಲ್ಲಿ ಇರುವವಳು, ನಮ್ಮಂತಹವರಿಗೆ ಈ ದೊಡ್ಡ ನಗರ ನಿರ್ಜೀವವೆನಿಸುತ್ತೆ. ಇಷ್ಟೆಲ್ಲ ಅಬ್ಬರ, ಆಡಂಬರಗಳಿದ್ದೂ ನಮ್ಮನ್ನು ಕೇಳುವವರಿಲ್ಲ. ನಮ್ಮನ್ನು ವಿಚಾರಿಸುವವರಿಲ್ಲ. ಪ್ರತಿಯೊಬ್ಬರಿಗೂ ಓದುವುದೇ ಆಯಿತು" – ನರೇಶ್ ಹೇಳಿದ.

"ಪಲ್ಯ ಇನ್ನೂ ಸ್ವಲ್ಪ ಹಾಕಿಸಿಕೊಳ್ಳಿ!" ಎಂದು ಹೇಳುತ್ತಾ ಖಾಲಿಯಾದ ಅವನ ಬಟ್ಟಲಿಗೆ ಬಡಿಸಲು ಮುಂದಾದಳು.

"ಬೇಡ, ತುಂಬಾ ಜಾಸ್ತಿಯಾಯಿತು ಹೊಟ್ಟೆ ಬಿರಿಯುವ ಹಾಗಾಗಿದೆ" ಎಂದು ಹೇಳುತ್ತಾ ನರೇಶ್ ಮಹಡಿ ಕಡೆ ನಡೆದ. "ನನಗೆ ಇಂಟರ್‌ವ್ಯೂಗೆ ಕರೆಬಂದಿದೆ" – ಅಡಿಗೆ ಪದಾರ್ಥಗಳನ್ನು ಎತ್ತಿಟ್ಟು ಟವೆಲಿನಿಂದ ಕೈ ಒರೆಸಿಕೊಳ್ಳುತ್ತಾ ಶಾಲ್ಮಲಿ ಮಂಚದ ಕಾಲಬಳಿ ಕುಳಿತು ಹೇಳಿದಳು. "ಕೆಲಸ ಮಾಡಿ ಏನು ಸಾಧಿಸುತ್ತೀ? ಈಗಿನ ಸುಖ ಎಲ್ಲಾದರೂ...." ಏನನ್ನೋ ಯೋಚಿಸುತ್ತಾ ಹೇಳಿದ ನರೇಶ್,

"ಈ ಸುಖದ ಜೊತೆಗೆ ಬೇರೆ ಸುಖಗಳೂ ಬೇಕಲ್ಲ" ನಗುತ್ತಾ ಹೇಳಿದಳು.

"ಸರಿ ನೀನು ಮೊದಲು ಇಂಟರ್‌ವ್ಯೂಗೆ ಹೋಗಿ ಬಾ. ಆಮೇಲೆ ಬೇಕಾದರೆ ನೋಡೋಣ" ಎಂದು ಹೇಳುತ್ತಾ ಬೆಳಗಿನ ವೃತ್ತ ಪತ್ರಿಕೆಯನ್ನು ಎತ್ತಿಕೊಂಡ.

ಶಾಲ್ಮಲಿ ಪುಸ್ತಕ ಹಿಡಿದು ಕುಳಿತಳು. ಓದಿನಲ್ಲಿ ಮಗ್ನವಾಗಲು ಸಾಧ್ಯವಾಗಲಿಲ್ಲ. ನರೇಶ್‌ನೊಂದಿಗೆ ತೃಪ್ತಿಯಾಗುವವರೆಗೆ ಮಾತನಾಡಬೇಕೆನಿಸಿತು. ಆದರೆ ಅವನು ಮಾತಾಡುವುದು ಅವನ ಬಗ್ಗೆ ಮಾತ್ರ! ಇಲ್ಲವೆ ಸುಮ್ಮನಿರುತ್ತಾನೆ. ಅಪ್ಪನ ಜೊತೆ ಪ್ರತಿಯೊಂದು ವಿಷಯದ ಬಗ್ಗೆ ಚರ್ಚಿಸುತ್ತಿದ್ದವಳಿಗೆ ಇಲ್ಲಿ ಅವಕಾಶವಿಲ್ಲದೆ ಬೇಸರವೆನಿಸುತ್ತಿತ್ತು. ಕ್ಷಣ ಕ್ಷಣವೂ ಒಂಟಿತನ ಅವಳನ್ನು ಕಾಡುತ್ತಿತ್ತು. ನರೇಶ್ ಸಂಜೆ ಬಂದ ಮೇಲೆ ಬಿಸಿ ಬಿಸಿ ಚಹದೊಂದಿಗೆ ಮನ ಬಿಚ್ಚಿ ಮಾತಾಡುವ ನಿರೀಕ್ಷೆಯಲ್ಲಿ ಕಾಯುತ್ತ, ಸಹಿಸಿಕೊಳ್ಳುತ್ತಿದ್ದಳು. ಆದರೆ ನರೇಶ್ ಮಾತಾಡುತ್ತಿದ್ದುದು!! – ನಿರೀಕ್ಷೆಗೆ

ವಿರುದ್ಧವಾಗಿ ಡೈರೆಕ್ಟರುಗಳ ಬಗ್ಗೆ ಚೇರ್‌ಮನ್ ಬಗ್ಗೆ, ಆಫೀಸೂ, ಅದೂ ಇದೂ.......ಇತ್ಯಾದಿ ಅವಳಿಗೆ ಇದೊಂದೂ ಅರ್ಥವಾಗುತ್ತಿರಲಿಲ್ಲ. ಅಲ್ಲದೆ ಪ್ರತಿದಿನಾ ಹೇಳಿದ್ದನ್ನೇ ಹೇಳಿ ಹೇಳಿ ಬೋರ್ ಮಾಡುತ್ತಿದ್ದ. ಆದರೂ ನಗೆಯ ಮುಖವಾಡದೊಂದಿಗೆ ಕೇಳಿಸಿ ಕೊಳ್ಳುತ್ತಿದ್ದಳು. ತನ್ನ ಮೌನವೇ ತನಗೆ ಒಮ್ಮೊಮ್ಮೆ ತೀರಾ ಅಸಹ್ಯವೆನಿಸಿದಾಗ, ದೀರ್ಘವಾಗಿ ಉಸಿರೆಳೆದುಕೊಂಡು, ಏನನ್ನಾದರೂ ಹೇಳಿಯೇ ಬಿಡುತ್ತಿದ್ದಳು. ಮತ್ತೆ ಮೌನವಾಗಿ ಅವನ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದಳು.

"ಜೀವನವೆಂದರೆ ಇದೇನೆ! ಘರ್ಷಣೆ, ಸಂಘರ್ಷಗಳ ಮೂಲಕವೇ ತನ್ನನ್ನು ಗುರುತಿಸಿಕೊಳ್ಳಲು, ಸುಧಾರಿಸಿಕೊಳ್ಳಲು ಯತ್ನಿಸುತ್ತಾನೆ. ಏನೂ ಇಲ್ಲವಾದಲ್ಲಿ ಬರೀ ಬಂಜರು ಭೂಮಿಯಂತಾಗುತ್ತದೆ. ಅಲ್ಲಿ ಒಂದು ಗಿಡವಾಗಲೀ, ಮರವಾಗಲಿ – ಯಾವುದೂ ಮೊಳೆಯುವುದಿಲ್ಲ" – ತಟ್ಟನೆ ಒಮ್ಮೆ ಹೇಳಿಯೇ ಬಿಟ್ಟಳು.

ಇಂತಹ ಘರ್ಷಣೆಯಿಂದ ಏನಾದರೂ ಮುರಿದು ಬಿದ್ದರೆ, ಅದನ್ನು ಜೋಡಿಸಲು ಪ್ರಯತ್ನಿಸ್ತೀಯಾ ಇಲ್ವಾ?" – ಸಿಟ್ಟಿನಿಂದ ಹೇಳಿದ ನರೇಶ್.

"ಘರ್ಷಣೆಯಿಂದ ಸದ್ದು ಹೊರಡುತ್ತೆ. ಮುರಿದು ಬೀಳುವಷ್ಟು ದೂರ ಘರ್ಷಣೆ ಮುಂದುವರಿದರೆ, ನಾನು ಮುರಿದು ಬೀಳುವ ಲೋಹವನ್ನೇ ದೂರುತ್ತೇನೆ. ಯಾಕೆಂದರೆ ಅದರಲ್ಲಿ ಘರ್ಷಣೆಯ ಆಘಾತವನ್ನು ಸಹಿಸಿ ನಿಲ್ಲುವ ಸಾಮರ್ಥ್ಯವಿರುವುದಿಲ್ಲ". – ಶಾಲ್ಮಲಿ ತಾನು ಮಾತಾಡುತ್ತಿರುವುದು ಅಪ್ಪನ ಜೊತೆಗಲ್ಲ, ಗಂಡನ ಜೊತೆಗೆ ಎಂಬ ಅಂಶವನ್ನೇ ಮರೆತಳು.

"ಹೋಗಲಿ ಬಿಡು. ಸುಮ್ಮನೆ ಚರ್ಚೆಯಾಕೆ? ಬೇಗ ರೆಡಿಯಾಗು 7 ಗಂಟೆ ಹೊತ್ತಿಗೆ ಹಿಮಾಚಲ ಭವನಕ್ಕೆ ಬರುತ್ತೇನೆಂದು ಗೆಳೆಯ ಸುದೇಶನಿಗೆ ಹೇಳಿದ್ದೀನಿ" ಉತ್ಸಾಹದಿಂದ ಹೇಳಿದ ನರೇಶ್.

"ಎರಡೇ ನಿಮಿಷದಲ್ಲಿ ರೆಡಿಯಾಗುತ್ತೇನೆ." – ಸಿದ್ಧವಾಗಿ ಬರಲು ಶಾಲ್ಮಲಿ ಒಳಗೆ ಹೊರಟಳು.

"ಏನು, ಓದುತ್ತಿದ್ದೀಯಾ ಇಲ್ಲ ವಿಚಾರ ಮಾಡುತ್ತಿದ್ದೀಯ?" – ಅಕಸ್ಮಾತ್ತಾಗಿ ನರೇಶ್‌ನ ದನಿ ಕೇಳಿಸಿತು. ಶಾಲ್ಮಲಿ ಬೆಚ್ಚಿದಳು. ಪುಸ್ತಕ ಮಡಿಚಿಟ್ಟು ನಗುತ್ತ ಹೇಳಿದಳು." ನನಗೆ ಇವತ್ತು ಓದುವುದಕ್ಕೇ ಮನಸ್ಸಾಗುತ್ತಿಲ್ಲ".

"ಓದೋದು ಗೀದೋದು ಒಂದು ಕಡೆ ಇಡು. ಜೀವನದುದ್ದಕ್ಕೂ ಓದು ಓದೂಂತ ಅದೇನು ತಲೆ ಕೆಡಿಸಿಕೊಳ್ಳುತ್ತೀ ಮದುವೆಯಾಯ್ತಲ್ಲ, ಸಾಕು!" – ಹೇಳುತ್ತಾ ತೂಕಡಿಸಿದ.

"ಮದುವೆ ಆಗಬೇಕೂಂತಲೇ ಹೆಣ್ಣು ಮಕ್ಕಳು ಓದ್ತಾರೇಂತ ತಿಳಿದು ಕೊಂಡ್ರಾ?" ತಟ್ಟನೆ ಕೇಳಿದಳು ಶಾಲ್ಮಲಿ.

"ಅಷ್ಟಲ್ಲದೆ ಮತ್ತೇನು?.....ಸುಮ್ಮನೆ ಕೂತ್ಕೊಳ್ಳೋದಕ್ಕಿಂತ ಒಳ್ಳೆ ಗಂಡ ಸಿಗಲೀಂತ ಕಾಯ್ತಾ ಕೂರೋದು ಒಳ್ಳೇದಲ್ವೇನೂ?" – ಗಹಗಹಿಸಿ ನಗುತ್ತಾ ನುಡಿದ, ನರೇಶ್.

"ಈ ಮಾತನ್ನು ನಿಜವಾದ ನಿನ್ನ ಆಲೋಚನೇಂತ ಹೇಳ್ತಿದ್ದೀಯೋ ಇಲ್ಲ ತಮಾಷೆಗೂ?" – ಶಾಲ್ಮಲಿ ಗಂಭೀರವಾಗಿ ಪ್ರಶ್ನಿಸಿದಳು. ಅವಳಲ್ಲಿ ನಿರಾಶೆ ಹೆಡೆ ಎತ್ತಿತು.

"ಸಣ್ಣ ವಿಷಯಾನ ದೊಡ್ಡದು ಮಾಡಬೇಡ. ನನಗೆ ವಾದ ಮಾಡುವ ಹೆಂಗಸರನ್ನು ಕಂಡರೆ ಆಗೋದಿಲ್ಲ" ತುಂಟತನದಿಂದ ಹೇಳಿ ನಗಲು ಆರಂಭಿಸಿದ.

"ಅಂದ್ರೆ?" – ಶಾಲ್ಮಲಿಗೆ ಏನೂ ಅರ್ಥವಾಗಲಿಲ್ಲ.

"ಯಾವತ್ತಾದರೂ ಒಂದು ದಿನ ನಿನಗೆ ಸುಮ್ಮನೆ ಇರೋಕೆ ಆಗುತಾ ಇಲ್ವಾ?" ನರೇಶ್ ಪ್ರಶ್ನಾರ್ಥಕವಾಗಿ ನೋಡಿದ.

"ಒಂದೂ ತಲೇಗೆ ಹತ್ತುತ್ತಿಲ್ಲ" ತನ್ನಲ್ಲೇ ಗೊಣಗಿಕೊಳ್ಳುತ್ತಾ ತಲೆ ತಗ್ಗಿಸಿದಳು.

"ಇಷ್ಟೊಂದು ಓದಿ ಕೊಂಡಿದ್ದೀಯ ಆದರೆ ನೀನು ನಡೆದುಕೊಳ್ಳೋ ರೀತಿ ಮಾತ್ರ ವಿಚಿತ್ರವಾಗಿದೆ" – ನರೇಶ್ ಅವಳ ಗಲ್ಲ ಹಿಡಿದು ಮುಖವನ್ನು ಮೇಲೆತ್ತಿದ್ದ.

"ಕಾಫಿ ತರಲೇ?" ಶಾಲ್ಮಲಿ ಮಾತಿನ ದಿಕ್ಕನ್ನು ಬದಲಿಸಿದಳು.

"ಬೇಡ. ಇಡೀ ದಿವಸ ಕಾಫಿ, ಚಾ ಕುಡಿದೂ ಕುಡಿದೂ ಸಾಕಾಗಿದೆ." – ನರೇಶ್ ಅವಳ ಕೂದಲಲ್ಲಿ ಬೆರಳಾಡಿಸಿದ. ಶಾಲ್ಮಲಿ ಅವನ ಸ್ಪರ್ಷಾನುಭವದ ನಡುವೆ ಆಲೋಚಿಸುತ್ತಿದ್ದಳು. ಮದುವೆಯಾಗಿ ಇಷ್ಟು ದಿನವಾದರೂ ನರೇಶ್‌ನ ವ್ಯಕ್ತಿತ್ವ ಅರ್ಥವಾಗಿರಲಿಲ್ಲ. ಅವನೆಂದೂ ಅವಳ ಮುಂದೆ ತೆರೆದುಕೊಳ್ಳುತ್ತಿರಲಿಲ್ಲ. ಪ್ರಯತ್ನಿಸಿದಾಗಲೆಲ್ಲ ಮುಚ್ಚಿದ ಬಾಗಿಲಷ್ಟೇ ಎದುರಾಗುತ್ತಿತ್ತು. ಊಟ, ತಿಂಡಿ, ನಿದ್ದೆ – ಇವುಗಳ ಆಚೆಗೂ ಏನಾದರೂ ಇರಬಹುದೆಂಬ ಆಲೋಚನೆ ಅವನಿಗೆ ಇರಬಹುದೇ ಎನ್ನುವ ಅನುಮಾನಕ್ಕೆ ಸಮಾಧಾನದ ಸುಳಿವೇ ಸಿಕ್ಕಿರಲಿಲ್ಲ. ಅದನ್ನು ಕಂಡುಕೊಳ್ಳದೆ ನರೇಶ್‌ನನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿರಲಿಲ್ಲ. ಭೌತಿಕವಾಗಿ ಅವನಿಗೆ ಒಪ್ಪಿಸಿ ಕೊಳ್ಳಬಹುದಾಗಿತ್ತೇ ವಿನಃ ಭಾವನಾತ್ಮಕವಾಗಿ, ಮಾನಸಿಕವಾಗಿ ಅವನನ್ನು ಸಮೀಪಿಸುವುದು ಅಸಾಧ್ಯವೆನಿಸಿ ಸದ್ದಿಲ್ಲದೆ ಬಿದ್ದುಕೊಂಡಿರುವಂತಾಗಿತ್ತು.

"ಆತ್ಮ ಸಂಗಾತಿಯ ಅರ್ಥವೇನು?" – ಒಮ್ಮೊಮ್ಮೆ ನಿದ್ದೆ ಹತ್ತದೆ ಹೊರಳಿ ಆಲೋಚಿಸುತ್ತಿದ್ದಳು. ನರೇಶ್ ಮಾತ್ರ ಯಾವಾಗಲೋ ಗೊರಕೆ ಇಟ್ಟು ನಿದ್ದೆ

ಮಾಡಿಬಿಡುತ್ತಿದ್ದ. ಶಾಲ್ಮಲಿಗೆ, 'ನರೇಶ್‌ನ ದೃಷ್ಟಿಯಲ್ಲಿ ತಾನೊಂದು ಉಡುಪು, ಬೇಕಾದಾಗ ಹಾಕಿಕೊಂಡು ಬೇಡವಾದಾಗ ಬಿಸಾಡುತ್ತಾನೆ' ಎನಿಸಿತು. ಅವನ ಧೋರಣೆಯಿಂದ ದಣಿದು ಹೋಗಿದ್ದಳು. –

ಹಸಿವು ಹೆಚ್ಚಾದಾಗ ತಣಿಸಿಕೊಳ್ಳುವುದಷ್ಟೇ ಈ ದೇಹಕ್ಕೆ ಮುಖವಲ್ಲ. ಈ ದೇಹದಲ್ಲಿ ಹೊಟ್ಟೆ ಜೊತೆಗೆ ಕಣ್ಣು, ಕಿವಿ, ಮೂಗು, ಬಾಯಿಗಳೂ ಇವೆ. ಇವೂ ಕೂಡಾ ಮುಖ್ಯವೆನಿಸದಿದ್ದರೆ ಇವುಗಳಿದ್ದೂ ಪ್ರಯೋಜನವೇನು? ಇವೆಲ್ಲ ಅವನಿಗೆ ಯಾಕೆ ಬೇಕಿತ್ತು? ಒಳ್ಳೆಯದನ್ನು ಕೇಳುವ, ಮಾತಾಡುವ, ಅನುಭವಿಸುವ ಬಯಕೆಗಳನ್ನು ಬಂಡೆಗಲ್ಲಿನಡಿಯಲ್ಲಿ ಹಾಕಿ ಕೊಲ್ಲಬೇಕೆಂದೇ?

ದಿನಕಳೆದಂತೆ ಅತ್ತೆ ಮನೆಯಲ್ಲಿ ಅಮ್ಮನ ಮನೆಯಲ್ಲಿ, ಶಾಲ್ಮಲಿಯ ಮಡಿಲು ತುಂಬಲಿಲ್ಲವೇಕೆನ್ನುವ ಪ್ರಶ್ನೆ ಎದ್ದಿತು. ಶಾಲ್ಮಲಿ ಮೌನ ವಹಿಸಿದಳು. ಅವಳಿಗೆ ಹೇಳುವುದಕ್ಕೇನಿತ್ತು ನರೇಶ್ ಮತ್ತು ತನಗೆ ಹುಟ್ಟುವ ಮಗುವಿನ ಹೊರೆ ಹೊರಲು ಸಾಧ್ಯವಿಲ್ಲವೆಂದು ಹೇಳಬೇಕಿತ್ತೇ? ಸ್ವಲ್ಪ ದಿನ ಕಳೆಯಲಿ ಜೀವನದಲ್ಲಿ ಕೆಲವು ದಿನಗಳಾದರೂ ಸಂತೋಷ ಅನುಭವಿಸಿದ್ದಾಗಲಿ......ಆಮೇಲೆ ಇದರ ಯೋಚನೆ!

"ಏನಮ್ಮಾ ಶಾಲು. ಎಲ್ಲ ಸರಿಯಾಗಿದೆ ತಾನೇ?" ಚಿಂತೆಯಿಂದ ತಾಯಿ ಕೇಳಿದರು.

"ಎಲ್ಲಾ ಸರಿಯಾಗಿಯೇ ಇದೆ. ನೀನೇನೂ ಯೋಚನೆ ಮಾಡಬೇಡ" ನಗುತ್ತಾ ಹೇಳಿದಳು.

"ಮಗೂ ಏನಾದ್ರೂ ಹೇಳು. ಸುಳ್ಳನ್ನು ಬೇಕಾದರೂ ಹೇಳು. ನಿಮ್ಮಮ್ಮನ ಮನಸ್ಸಿಗೆ ಸ್ವಲ್ಪ ಸಮಾಧಾನವಾದ್ರೂ ಆಗುತ್ತೆ. ಪಾಪ! ನಿನ್ನಮ್ಮನಿಗೆ ಯಾವಾಗಲೂ ನಿನ್ನದೆ ಚಿಂತೆ!.....ಅದಕ್ಕೇ ನಿನಗೆ ಇಷ್ಟಬಂದದ್ದು. ಏನಾದರೂ ಹೇಳಿ ಬಿಡು" – ಎಂದು ಅಪ್ಪ, ಅಮ್ಮನನ್ನು ಕೀಟಲೆ ಮಾಡುವುದಕ್ಕಾಗಿ ಹೇಳಿದರು.

"ದೇವರೇ ನನ್ನ ಮಗಳನ್ನು ಸುಖವಾಗಿರಿಸು!" – ಹಾರೈಸಿದಳು ಅಮ್ಮ ಸೆರಗನ್ನು ಸರಿಪಡಿಸಿಕೊಂಡು ಒಳಗೆ ನಡೆದು ಬಿಟ್ಟಳು.

"ನೀನು ಸುಖವಾಗಿದ್ದೀ ತಾನೇ" ಅಮ್ಮ ಒಳಗೆ ಹೋದ ಮೇಲೆ, ಅಪ್ಪ ಕೇಳಿದರು.

"ಸುಖ, ಸಂತೋಷಗಳ ಅರ್ಥವಾದರೂ ಏನಪ್ಪಾ?" ಶಾಲ್ಮಲಿ ಪ್ರತಿಯಾಗಿ ಪ್ರಶ್ನಿಸಿದಳು.

"ಸುಖ, ಸಂತೋಷ ಅಂದ್ರೆ, ನೀನು ಸಂಸಾರದಲ್ಲಿ ಚೆನ್ನಾಗಿ ಹೊಂದಿಕೊಂಡಿದ್ದೀಯ ಅಂತ!.......ಅಲ್ಲದೆ....." ಅಪ್ಪ ವಿಶ್ಲೇಷಣೆಗೆ ಆರಂಭಿಸಿದರು.

"ಸರಿ ಸರಿ ಬಿಡೀಪ್ಪ ನನಗೆ ಎಲ್ಲ ಅರ್ಥವಾಯಿತು, ನೀವು ಏನು ಕೇಳ್ಬೇಕೂಂತ ಇದ್ದೀರಿ, ಅನ್ನೋದು! ಆದರೆ ನಾನೊಂದು ಪ್ರಶ್ನೆ ಕೇಳ್ತೀನಿ, ನಿಮ್ಮನ್ನ......ಹೇಳ್ತಿರಿ ತಾನೆ?.....ಹೇಳಿ, ನೀವು ನಿಜವಾಗಿಯೂ ತುಂಬ ಸುಖವಾಗಿದ್ದೀರಾ? ಸಂತೋಷವಾಗಿದ್ದೀರಾ" – ಅಗಲವಾದ ಕಣ್ಣುಗಳಿಂದ ತಂದೆಯನ್ನು ನೋಡಿದಳು.

"ಏನು ಮಗಳೆ ಪೋಸ್ಟ್‌ಮಾರ್ಟ್‌ಮ್ ಮಾಡಬೇಕಂತೀಯ ಹೇಗೆ?" – ನಕ್ಕರು ಅಪ್ಪ.

"ಹಾಗೇನಿಲ್ಲ ಅಪ್ಪ. ನಾನು ಹೇಳಬೇಕೂಂತಿರೋದು ಇಷ್ಟೆ. ಸುಖ, ಸಂತೋಷಗಳು ನಮ್ಮಲ್ಲಿರುವ ಚಿರಂತನ ಧಾರೆಗಳಲ್ಲ. ಅವು ಕೇವಲ ಕ್ಷಣಗಳು. ಈ ಕ್ಷಣಗಳೇ ಜೀವನಕ್ಕೆ ಅರ್ಥ ಕೊಡೋದು; ಬದುಕಿಗೆ ಸಾರ್ಥಕತೆ ತರೋದು. ನಿರಂತರ ಧಾರೆಗಳಾದರೆ ಮಹತ್ವವನ್ನೇ ಕಳೆದುಕೊಳ್ಳುತ್ತವೆ. ಮನುಷ್ಯನ ಬದುಕಿನಲ್ಲಿ ಎಲ್ಲವೂ ಸಂಮಿಶ್ರ ಸ್ಥಿತಿಯಲ್ಲಿ ಲಭಿಸುತ್ತವೆ. ಅಂಥಾದ್ದರಲ್ಲಿ ನನ್ನ ಬದುಕಿನಲ್ಲಿ ಯಾವಾಗಲೂ ಸುಖ ಸಂತೋಷಗಳೇ ಇರಬೇಕೂಂತ ಅಪೇಕ್ಷಿಸುವುದು ಯಾಕೆ?" – ಶಾಲ್ಮಲಿ ಎದ್ದಳು.

"ಹೇಳಮ್ಮ ಹೇಳು. ಅಪ್ಪನನ್ನು ಮಾತಿನಿಂದ ಸೋಲಿಸುವ ಹಾಗೆ ನಿನ್ನ ಗಂಡನನ್ನೂ ಸೋಲಿಸುವೆಯಾ ಹೇಗೆ?" ಅಟ್ಟಹಾಸದಿಂದ ನಗುತ್ತಾ ಕೇಳಿದರು.

"ಮಾತಿನಿಂದ? ಅದೂ ನರೇಶ್‌ನನ್ನು! ಅವನು ಮಾತಾಡೋದೆ ಅಪರೂಪ. ಆಡಿದರೂ ಏನಿರುತ್ತೆ? ಆಫೀಸು, ಗೆಳೆಯರು ಅದೂ ಇದೂ....ಮಾಮೂಲಾಗಿ ಎಲ್ಲ ಗೊತ್ತಿರೋದೆ!"

ಕಿಲ ಕಿಲ ನಕ್ಕಳು, ಶಾಲ್ಮಲಿ.

"ಅಂಥಾ ಸಮಯದಲ್ಲಿ ನೀನೇನು ಮಾಡ್ತೀಯಾ?" ಅಪ್ಪ ಅದೇ ಸ್ವರದಲ್ಲಿ ಕೇಳಿದರು.

"ಮಾಡೋದೇನು? ಸುಮ್ಮನೆ ಕೂತು ಮನೇನ ನೆನಪು ಮಾಡಿಕೊಳ್ತೇನೆ. ನಿಮ್ಮ ಹತ್ತಿರ ಓಡಿ ಬರಬೇಕೂಂತ ಚಡಪಡಿಸುತ್ತೇನೆ" ನಿಧಾನವಾಗಿ ಮಾತು ಹೊರಟಿತು. ಮುಖದಲ್ಲಿ ಬೇಸರ ಕಾಣಿಸಿಕೊಂಡಿತು.

"ಅವನ ಆಸಕ್ತಿಗಳೇನು?" ಅಪ್ಪ ಅನುಮಾನದಿಂದ ಕೇಳಿದರು.

"ಏನು ಇಲ್ಲ. ಅವರ ಪ್ರಪಂಚ ಬಹಳ ಚಿಕ್ಕದು ಅಪ್ಪ, ಮನೆ ಆಫೀಸು, ಸ್ನೇಹಿತರು ಅವರ ವಿಚಾರ. ಮಾತು ತ್ರಿಕೋಣದ ಸುತ್ತ ಸುತ್ತುವುದಕ್ಕೆ ಮಾತ್ರ ಸೀಮಿತ" ಒಂದೇ ಸಲಕ್ಕೆ ಶಾಲ್ಮಲಿ ಎಲ್ಲವನ್ನೂ ಹೇಳಿ ಬಿಟ್ಟಳು.

"ಊಟ ಬಡಿಸಿದ್ದೀನಿ" ಅಮ್ಮನ ಮಾತು ನಮ್ಮಿಬ್ಬರ ಮಾತುಗಳನ್ನು ಅಲ್ಲಿಗೆ ನಿಲ್ಲಿಸಿತು. ಇಬ್ಬರೂ ಕೈ ಕಾಲು ಮುಖ ತೊಳೆದಿಕೋಡು ಬಂದು ತಟ್ಟೆಗಳ ಮುಂದೆ ಕುಳಿತರು."

"ಅಳಿಯನಿಗೆ ಏನೇನು ಇಷ್ಟವಾಗುತ್ತೆ, ಮಗಳೆ?"

–ಅಮ್ಮ ಮಾತನ್ನು ಆರಂಭಿಸಬೇಕೆನ್ನುವ ಯೋಚನೆಯಿಂದ ಕೇಳಿದಳು.

"ಪ್ರೀತಿಯಿಂದ ಮಾಡಿ ತಿನ್ನಿಸ್ತೀತಾನೇ?" ಅಮ್ಮ ಎರಡನೇ ಪ್ರಶ್ನೆ ಕೇಳಿದಳು.

"ಪ್ರೀತಿಯಿಂದ?!.....ದಿನಾ ಅಡಿಗೆ ಮಾಡಿ ಅಡಿಗೆ ಜೊತೆಗೇನೇ ಪ್ರೀತೀನೂ ಹಾಕ್ಬಿಡ್ತೀನಿ" ಶಾಲ್ಮಲಿ ಜೋರಾಗಿ ನಕ್ಕು ಹೇಳಿದಳು.

"ನೀನಂತೂ ಬದಲಾಗೋದೇ ಇಲ್ಲ!" ಅಮ್ಮನೂ ನಗುತ್ತಲೇ ಹೇಳಿದಳು.

ಯಾವಾಗಲಾದರೂ ಒಮ್ಮೊಮ್ಮೆ ಮಧ್ಯಾಹ್ನದ ವೇಳೆಯಲ್ಲಿ ಶಾಲ್ಮಲಿ ಅಮ್ಮನ ಮನೆಗೆ ಬರುತ್ತಾಳೆ. ಇಡೀ ದಿನ ಓದುತ್ತಲೋ ಬರೆಯುತ್ತಲೋ ಕಳೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಅಕ್ಕ ಪಕ್ಕದವರ ಜೊತೆ ಸ್ನೇಹ ಮಾಡೋಕೆ ಇನ್ನೂ ಆಗಿರಲಿಲ್ಲ. ಇನ್ನು ಕೆಲಸಕ್ಕೇನಾದರೂ ಸೇರಿಬಿಟ್ಟರೆ, ಅದೂ ಸಾಧ್ಯವಾಗುವುದಿಲ್ಲ. ಪರೀಕ್ಷೆಗಳ ಫಲಿತಾಂಶದ ನಿರೀಕ್ಷೆಯಲ್ಲಿದ್ದಳು. ಒಂದು ವೇಳೆ ಕಾಂಪಿಟೇಷನ್ ಪರೀಕ್ಷೆಗಳಲ್ಲಿ ಉತ್ತೀರ್ಣಳಾದರೆ, ನರೇಶ್ ಟ್ರೈನಿಂಗ್‌ಗೆ ಕಳುಹಿಸುತ್ತಾನೋ, ಇಲ್ಲವೊ ಅನ್ನುವ ಭಯ ಬೇರೆ! ನೌಕರಿ ಮಾಡಲು ಬಿಡುತ್ತಾನೆಯೋ? ಮದುವೆಯಾಗಿ ಎಷ್ಟು ದಿನಾ ಆಗಿದೆ ಮಹಾ?

ಮನಸ್ಸಿನಲ್ಲಿ ವಿಚಾರಗಳೆದ್ದಾಗ ಖಿನ್ನಳಾಗುತ್ತಿದ್ದಳು. ಮರುಕ್ಷಣವೇ, ನರೇಶನಿಗೆ ಹೇಳಿ ಒಪ್ಪಿಸಿದರಾಯಿತು ಎಂದುಕೊಂಡು ಸಮಾಧಾನ ತಂದುಕೊಳ್ಳುತ್ತಿದ್ದಳು. ನರೇಶ್ ಸುಮ್ಮನೆ ನನ್ನನ್ನು ಗೋಳಾಡಿಸಲು ಹೇಳಿದ್ದಿರಬೇಕು. ಯೋಚನೆಯಿಂದ ಮನಸ್ಸಿಗೆ ಬೇಸರವಾಗುತ್ತಿತ್ತು. ಇನ್ನೂ ನರೇಶ್ ತನಗೆ ಸರಿಯಾಗಿ ಅರ್ಥವಾಗಿಲ್ಲ! ಎಲ್ಲ ಮರೆತು ಊಟದ ಬಗ್ಗೆ ಆಲೋಚಿಸಿದಳು, ಗಂಡಸರನ್ನು ಹೊಟ್ಟೆ ಮೂಲಕ ಗೆಲ್ಲಬಹುದು ಎಂಬ ಮಾತು ನೆನಪಾಯಿತು. ಎಲ್ಲ ಗಂಡಸರ ವಿಚಾರದಲ್ಲಿ ಇದು ನಿಜವೋ ಸುಳ್ಳೋ!.....ನರೇಶ್‌ನ ವಿಷಯದಲ್ಲಿ ಇದು ಸತ್ಯವಾಗಬಹುದು. ಊಟ ತಿಂಡಿಗಳಲ್ಲೇ ನರೇಶ್‌ಗೆ ತುಂಬಾ ಆಸಕ್ತಿ. ಅವನ ರಸಗ್ರಹಣ ಶಕ್ತಿ ಅದ್ಭುತ. ಇವತ್ತು ಸಾಯಂಕಾಲ ಚಹಾ ಕುಡಿಯುವಾಗ ಅವನನ್ನು ಪರೀಕ್ಷಿಸುತ್ತೇನೆ' ಎಂದು ಒಗ್ಗರಣೆ ಹಾಕುತ್ತ ಆಲೋಚಿಸಿದಳು. ಮನಸ್ಸು ಇದರಿಂದಾಗಿ ಸ್ವಲ್ಪ ಹಗುರವಾಯಿತು.

ಹೊರಗೆ ಮಳೆ ಬರುತ್ತಿತ್ತು. ಸ್ನಾನದ ಮನೆಯಲ್ಲಿ ಶಾಲ್ಮಲಿ, ಸೆರಗನ್ನು ಸೊಂಟಕ್ಕೆ ಸುತ್ತಿ ಬಟ್ಟೆ ಒಗೆಯುತ್ತಿದ್ದಳು. ಎರಡು ಮೂರು ದಿನಗಳಿಂದ ಮಳೆ ಬರುವ ಸೂಚನೆ

ಇದ್ದುದರಿಂದ ಕೊಳೆಯಾದ ಬಟ್ಟೆಗಳನ್ನೆಲ್ಲ ಒಟ್ಟಿಗೆ ರಾಶಿ ಹಾಕಿಕೊಂಡಿದ್ದು, ಇವತ್ತು ಒಗೆದುಬಿಡಬೇಕೆಂದು ತೀರ್ಮಾನಿಸಿದ್ದಳು. ನರೇಶ್‌ಗೆ ಒಗೆದ ಷರ್ಟು ಒಂದೇ ಒಂದಿತ್ತು. ಅದಕ್ಕಾಗಿ ಒಗೆಯಲೇಬೇಕೆಂದು ಕೊಂಡು ಬಚ್ಚಲು ಸೇರಿದ್ದಳು. ಒಗೆದ ಬಟ್ಟೆಗಳನ್ನೆಲ್ಲಾ ನೀರಿನಲ್ಲಿ ಅದ್ದಿ ಜಾಲಿಸಿ ತೆಗೆದು ಹಿಂಡಿ ಹಿಂಡಿ ಹ್ಯಾಂಗರ್‌ಗಳಲ್ಲಿ ನೇತು ಹಾಕುತ್ತಿದ್ದಳು. ಪ್ಯಾಂಟನ್ನು ಹಿಂಡಿ ಒಂದು ಸಲ ಝಾಡಿಸಿದಾಗ ಜೇಬಿನೊಳಗಿದ್ದ ನಾಣ್ಯ ಎದುರುಗಡೆ ಗೋಡೆಗೆ ತಗುಲಿ ಸದ್ದಾಯಿತು. ಕೈ ಹಾಕಿ ಜೇಬಿನೊಳಗೆ ತೆಗೆದಾಗ ನಾಣ್ಯದ ಜೊತೆಗೆ ಕಾಗದವೂ ಬಂತು.

"ಅಯ್ಯೋ, ಸತ್ತೆ!" – ಎನ್ನುತ್ತಾ ಪ್ಯಾಂಟನ್ನು ಹ್ಯಾಂಗರ್‌ಗೆ ಹಾಕಿ ತುಂಡು ತುಂಡಾದ ಕಾಗದಗಳನ್ನು ಹಿಡಿದು ಅಡುಗೆ ಮನೆಗೆ ಹೋಗಿ ತಟ್ಟೆಯೊಂದರಲ್ಲಿ ಹರವಿದಳು. ಮತ್ತೆ ಓಡಿ ಉಳಿದ ಬಟ್ಟೆಗಳನ್ನೆಲ್ಲ ಒಗೆದು ಮುಗಿಸಿದಳು. ನೀರು ನಿಲ್ಲುವ ಮುಂಚೆ ಕೆಲಸ ಮುಗಿಸಬೇಕಿತ್ತು.

"ಮೂರು ದಿನಗಳಿಂದ ಇಸ್ತ್ರಿಯವನೂ ಬಾಗಿಲು ತೆಗೆದಿಲ್ಲ. ಕಡೆಪಕ್ಷ ನಾಳೆ ಆಫೀಸ್‌ಗೆ ಹೋಗಲು ಬೇಕಾದ ಪ್ಯಾಂಟ್ ಮತ್ತು ಷರ್ಟನ್ನು ನಾನೇ ಇಸ್ತ್ರಿ ಮಾಡಿ ಇಡಬೇಕು" ಎಂದು ಯೋಚಿಸುತ್ತಾ ಅಡುಗೆ ಮನೆಗೆ ಮರಳಿದಳು. ಚಹಾ ಮಾಡಲು ಎಸರನ್ನು ಇಟ್ಟು ಟ್ರಾನ್‌ಸಿಸ್ಟರ್ ಬಟನ್ ಒತ್ತಿದಳು.

"ಹತ್ತೂವರೆ ಗಂಟೆ ಆಗಿದೆ. ಒಂದು ಗಂಟೆ ಬಟ್ಟೆ ಒಗೆಯಬೇಕಾಯಿತಾ?" ಕನ್ನಡಿಯ ಮುಂದೆ ನಿಂತು ಕೂದಲನ್ನು ಹಿಂದಕ್ಕೆ ಬಾಚಿಕೊಂಡಳು. ಹಣೆಯ ಕುಂಕುಮವನ್ನು ಸರಪಡಿಸಿಕೊಂಡಳು. ಹ್ಯಾಂಡ್ ಲೋಶನ್ ಸೀಸೆಯನ್ನು ಬಗ್ಗಿಸಿ ಕೈಮೇಲೆ ಸುರಿದುಕೊಂಡು ಸವರಿಕೊಳ್ಳ ತೊಡಗಿದಳು.

ಚಹದ ಬಟ್ಟಲನ್ನು ಹಿಡಿದು ಕೊಂಡು ಕಿಟಕಿಯ ಬಳಿ ಬಂದು ನಿಂತಳು. ಹೊರಗಡೆಯ ಸ್ನಿಗ್ಧ ಪರಿಸರದ ಕಡೆ ಒಮ್ಮೆ ದೃಷ್ಟಿ ಹಾಯಿಸಿದಳು. ಬಣ್ಣ ಬಣ್ಣದ ಕಾರುಗಳು ರಸ್ತೆಗಳಲ್ಲಿ ಮೆಲ್ಲ ಮೆಲ್ಲನೆ ಸಾಗುತ್ತಿದ್ದವು. ಛತ್ರಿ ಹಿಡಿದು ಕೆಲವರು ಓಡಾಡುತ್ತಿದ್ದರು. ಮತ್ತೆ ಕೆಲವರು ಬಹಳ ಎಚ್ಚರಿಕೆಯಿಂದ ಹೆಜ್ಜೆಯಿಡುತ್ತ ರಸ್ತೆ ದಾಟುತ್ತಿದ್ರು, ಮಳೆಯಿಂದ ಬೇಸರಗೊಂಡ ಹಕ್ಕಿಗಳು ಅಲ್ಲಲ್ಲಿ ಅಡಗಿ ಕುಳಿತಿದ್ದವು.

ಪಾಪ ಈ ಬಡಪಾಯಿ ಜೀವಿಗಳ ಬದುಕಿನಲ್ಲಿ ಎಂಥ ಕಷ್ಟ ಬಂತು. ಬಿರುಗಾಳಿಯಲ್ಲಿ ಇವುಗಳ ಗೂಡುಗಳೂ ಭದ್ರವಾಗಿ ಉಳಿಯಲು ಸಾಧ್ಯವಿಲ್ಲ. ಶಾಲ್ಮಲಿ ಯೋಚನೆಯಲ್ಲಿಯೇ ಮುಳುಗಿದ್ದಳು. ಅಷ್ಟರಲ್ಲಿ ಜೋರಾಗಿ ಗಾಳಿ ಬಿಸಿದ್ದೇ, ಮರದ ಕೊಂಬೆಯೊಂದು ಹತ್ತಿರದಲ್ಲಿಯೇ ಹೋಗುತ್ತಿದ್ದ ಸೈಕಲ್ ಸವಾರನೊಬ್ಬನ ಮೇಲೆ ಬಿದ್ದು, ಅವನು ಸಮತೋಲನ ತಪ್ಪಿ, ದೇಹದ ಅರ್ಧಭಾಗ ಫುಟ್ ಪಾತ್ ಮೇಲೆ ಬಿತ್ತು. ಸೈಕಲ್‌ನ ಹಿಂದಿನಿಂದ ಬರುತ್ತಿದ್ದ ಕಾರೊಂದು ಅವನ ಮೇಲೆ ಹಾದು ಹೋಯಿತು.

ಕ್ಷಣ ಮಾತ್ರದಲ್ಲಿ ದೃಶ್ಯ ಬದಲಾಯಿತು. ಶಾಲ್ಮಲಿ ಗಾಭರಿಯಿಂದ ಮತ್ತೊಮ್ಮೆ ಕೆಳಗೆ ಬಗ್ಗಿ ನೋಡಿದಳು. ಅಷ್ಟೊಂದು ಮಳೆಯಲ್ಲೂ ಜನ ಗುಂಪು ಸೇರಿದ್ದರು. ಕೆಲಸ ಕಾರ್ಯಕೆಟ್ಟುನಿಂತ ಜನ ಮಳೆಯನ್ನು ಬಯ್ಯುತ್ತಿದ್ದರು. ಗುದ್ದಿ ಬೀಳಿಸಿ ಓಡುತ್ತಿದ್ದ ಕಾರು, ಜನ ಎಷ್ಟೇ ಕೂಗಾಡಿದರೂ ನಿಲ್ಲಲಿಲ್ಲ. ಸೈಕಲ್ ಮೇಲಿಂದ ಹಾದು ಮುಂದಕ್ಕೆ ಹೊರಟೇ ಹೋಯಿತು.

ರಾತ್ರಿ ಊಟ ಆದ ಮೇಲೆ ಅಡುಗೆಯೆಲ್ಲ ತೆಗೆದಿರಿಸಿದಳು. ನರೇಶನ ಜೇಬಿನಿಂದ ತೆಗೆದಿರಿಸಿದ್ದ ಕಾಗದದ ತುಂಡುಗಳ ನೆನಪಾಯಿತು. ಮೇಲಿಟ್ಟಿದ್ದ ತಟ್ಟೆ ತೆಗೆದುಕೊಂಡಳು. ಒಣಗಿ ಹೋಗಿದ್ದ ತುಂಡುಗಳನ್ನು ಆಯ್ದುಕೊಂಡು ಹಾಸಿಗೆಯ ಮೇಲೆ ಕುಳಿತುಕೊಳ್ಳುತ್ತಾ ಹೇಳಿದಳು – "ಸಾರಿ, ನರೇಶ್, ಜೇಬುಗಳನ್ನು ನೋಡದೆಯೇ ಬಟ್ಟೆ ನೆನೆಸಿ ಬಿಟ್ಟೆ! ನೋಡು ಈ ಕಾಗದ ಬೇಕಾಗಿತ್ತು ಹೇಗೆ?"

"ಹೂಂ, ಇದು ಕ್ಯಾಂಟೀನ್ ಬಿಲ್ಲು, ಇದು ಡ್ರೈಕ್ಲೀನಿಂಗ್ ರಸೀದಿ ಮತ್ತು ಇದು....ಇದು ಏನೂ ಇಲ್ಲ" ಎಂದು ಹೇಳುವಾಗ ಇದ್ದಕ್ಕಿದ್ದಂತೆ ಅವನ ದನಿಯಲ್ಲಿ ಗಾಭರಿ ಕಾಣಿಸಿಕೊಂಡದ್ದನ್ನು ಗಮನಿಸಿದ ಶಾಲ್ಮಲಿ ಬೆಚ್ಚಿದಳು. ಪತ್ರಿಕೆಯ ಪುಟಗಳನ್ನು ತಿರುವಿ ಹಾಕುತ್ತಿದ್ದ ಬೆರಳುಗಳು ತಡೆದವು. ಕಣ್ಣುಗಳು ನರೇಶನನ್ನು ಗಮನಿಸತೊಡಗಿದವು.

"ಅದು.....ಅದು......ಅದೇನಿಲ್ಲ" ನರೇಶ್ ತಡವರಿಸುತ್ತ ನಗುತ್ತಾ ಆ ಮಾತನ್ನು ಮರೆಸಲು ಯತ್ನಿಸಿದ.

"ಏನಾದರೂ ಹೆಚ್ಚುಕಮ್ಮಿ ಆಯ್ತೇನು?" ಶಾಲ್ಮಲಿ ಆಶ್ಚರ್ಯದಿಂದ ಕೇಳಿದಳು.

"ಸಾಕು ಇನ್ನು ಮಲಗೋಣ. ತುಂಬಾ ಆಯಾಸ ಆಗಿದೆ." – ಎನ್ನುತ್ತ ನರೇಶ್ ಮಲಗಿಬಿಟ್ಟ, ರಸೀದಿ, ಬಿಲ್ಲು, ಮನಿಆರ್ಡರ್ ಫಾರ್ಮ್ ತುಂಡುಗಳು – ಎಲ್ಲವನ್ನೂ ಒಟ್ಟಿಗೆ ತನ್ನ ಪರ್ಸ್‌ನಲ್ಲಿ ತೆಗೆದಿರಿಸಿಕೊಂಡ. ಪಕ್ಕ ಬದಲಿಸಿದ.

"ಮನಿಆರ್ಡರ್ ಫಾರ್ಮ್‌ನ ಮೇಲೆ ಬರೆದಿರುವ ಹೆಸರು ವಿಳಾಸ. ಅಂಚೆ ಮುದ್ರೆ, ಇವೆಲ್ಲವನ್ನೂ ಬಹುಶಃ ನೋಡಿರಬಹುದೇ? ಹಾಗಾದರೆ ಈ ಹೆಂಗಸು ಸಾಮಾನ್ಯಳಲ್ಲ. ಬಹಳ ಜಾಣೆ! ಕಿಲಾಡಿ! ಎಲ್ಲವನ್ನೂ ನನ್ನಿಂದ ಹೇಳಿಸಬೇಕೂಂತ ನೋಡ್ತಾಳೆ. ನನ್ನನ್ನು ಅವಮಾನಮಾಡಬೇಕೂಂತ ಇದ್ದಾಳೆ......ಆದರೆ ಇದರಲ್ಲಿ ಅವಮಾನವಾಗುವಂಥಾದ್ದು ಏನಿದೆ? ಹಣ ಸಂಪಾದನೆ ಮಾಡೋನು ನಾನು. ನನಗಿಷ್ಟ ಬಂದ ಹಾಗೆ ಖರ್ಚು ಮಾಡ್ತೇನೆ.

"ನಿದ್ದೆ ಮಾಡಿ ಬಿಟ್ರಾ?" ಕತ್ತಲಲ್ಲಿ ಶಾಲ್ಮಲಿ ಪ್ರಶ್ನಿಸಿದಳು.

"ನಿದ್ದೇನೂ ಬರ್ತಿದೆ, ತಲೆ ನೋವೂ ಆಗ್ತಿದೆ. ಮಳೇಲಿ ತುಂಬ ತೊಯ್ದು ಬಿಟ್ಟೆ"! ಎಂದು ಹೇಳುತ್ತಾ ನರೇಶ ದಿಂಬಿನ ಮೇಲೆ ತಲೆ ಇರಿಸಿ ಚಡಪಡಿಸಿದ.

"ಬನ್ನಿ ಸ್ವಲ್ಪ ತಲೆ ಒತ್ತುತ್ತೇನೆ!" ಎಂದು ಹೇಳುತ್ತಾ ಶಾಲ್ಮಲಿ ಎದ್ದು ಕುಳಿತು ನರೇಶನ ತಲೆ ಕೂದಲಲ್ಲಿ ಬೆರಳಾಡಿಸಿದಳು.

"ನಿನಗೆ ಕೇಳೋ ಮನಸ್ಸಿದ್ದರೆ, ಒಂದು ಮಾತು ಹೇಳಲೇ" ಮೌನದಿಂದ ಬೇಸಗೊಂಡ ಶಾಲ್ಮಲಿ ಮೆಲ್ಲನೆ ಕೇಳಿದಳು. ನರೇಶ್ ಏನೂ ಮಾತಾಡಲಿಲ್ಲ. ಅವನು ಮಲಗಿರಬೇಕೆಂದು ಭಾವಿಸಿ, ಸುಮ್ಮನೆ ಆ ಕತ್ತಲಲ್ಲಿ ಅವನ ಮುಖವನ್ನು ದಿಟ್ಟಿಸುತ್ತಾ, ಅವನ ತಲೆಯನ್ನು ಮೆಲ್ಲನೆ ಒತ್ತುತ್ತಲೇ ಇದ್ದಳು.

ವಾರದನಂತರ ಭಾನುವಾರ ಬಂತು. ರಜದ ದಿನವಾದ್ದರಿಂದ ತಡವಾಗಿ ಎದ್ದ. ನರೇಶ್ ತಿಂಡಿ ತ್ತಿನ್ನುತ್ತ ಶಾಲ್ಮಲಿಯ ವರ್ತನೆ ಮಾಮೂಲಿನಂತಿಲ್ಲವೆನಿಸಿತ್ತು. ಅವನೊಳಗಿನ ಕಳ್ಳ ಧೈರ್ಯ ತಂದುಕೊಂಡು ಕೊನೆಗೆ ಕೇಳಿಯೇ ಬಿಟ್ಟ. "ಶಾಲೂ, ನನ್ನ ಮೇಲೆ ಕೋಪವೇ?"

"ಕೋಪ? ಯಾರ ಬಗ್ಗೆ? ನಿನ್ನ ಬಗ್ಗೆ?" – ಅಚ್ಚರಿಯಿಂದ ಶಾಲ್ಮಲಿ ನರೇಶ್‌ನತ್ತ ನೋಡುತ್ತಾ ಗಹಗಹಿಸಿ ನಕ್ಕಳು.

"ನಿಜವಾಗ್ಲೂ ಹೇಳೊದಾದ್ರೆ ಶಾಲೂ, ನಾನು ಕೆಲವು ದಿನಗಳಿಂದ ಒಳಗೊಳಗೇ ಸಂಕಟಪಡುತ್ತಿದ್ದೇನೆ". ತನ್ನನ್ನು ಸಮರ್ಥಿಸಿಕೊಳ್ಳುವಂತೆ ನರೇಶ್ ಹೇಳಿದ.

"ಸರಿ ವಿಷಯ ಏನು ಹೇಳಿ ಮೊದಲು" ಶಾಲ್ಮಲಿ ತನಗೆ ಏನೂ ಅರ್ಥವಾಗದವಳಂತೆ ಕೇಳಿದಳು.

"ಅದು....." ಎಂದಷ್ಟೇ ಹೇಳಿ ಸುಮ್ಮನಾಗಿ ಬಿಟ್ಟ. ತಲೆ ತಗ್ಗಿಸಿ ಕುಳಿತ.

"ಅಂಥಾದ್ದು ಏನಾಗಿದೇಂತ ಹೀಗೆ ತಡವರಿಸುತ್ತಿದ್ದೀಯ" – ಬೇಸರಗೊಂಡು ಹೇಳಿದಳು.

"ನಿನಗೆ ಗೊತ್ತಿಲ್ದೆ ನಾನು......ನನ್ನ ತಾಯಿಗೆ ಇನ್ನೂರು ರೂಪಾಯಿ ಕಳಿಸಿಕೊಟ್ಟೆ" ನರೇಶ್ ತಟ್ಟನೆ ಹೇಳಿದ.

"ಇಷ್ಟು ಕಡಿಮೇನಾ?" ಶಾಲ್ಮಲಿ ಆಶ್ಚರ್ಯದಿಂದ ಪ್ರಶ್ನಿಸಿದಳು.

"ನಾವು ಮೂರು ಜನ ಅಣ್ಣ ತಮ್ಮಂದಿರು ಇನ್ನೂರು ಇನ್ನೂರು ರೂಪಾಯಿ ಕಳಿಸಿಕೊಟ್ಟೆ," ನರೇಶ್ ತಟ್ಟನೆ ಹೇಳಿದ.

"ಒಳ್ಳೇದೇ ಆಯ್ತು" – ಸಾವಧಾನವಾಗಿ ಹೇಳಿದಳು.

"ದೊಡ್ಡ ಅತ್ತಿಗೆ ಮನೆಯಿಂದ ಇಷ್ಟು ಹಣ ಹೋಗೋದು ನೋಡಿ ಬಹಳ ಕಿರಿ ಕಿರಿ ಮಾಡಿದಳು. ಅವಳ ಅವತಾರ ನೋಡಿ ನನಗೆ ಭಯವಾಯಿತು ನೀನೂ

ಹಾಗೇನಾದರೂ ಮಾಡಿದರೆ ಅಂತ, ನಿನಗೆ ಹೇಳೋ ಸಾಹಸ ಮಾಡಲಿಲ್ಲ. ಅದು ನಿನಗೆ ತಿಳಿದು ಹೋದ ದಿನ ನಾನು ಭೂಮಿಗೆ ಇಳಿದು ಹೋದೆ.

"ಅಷ್ಟೊಂದು ಭಯ, ಅವಮಾನ ಅನುಭವಿಸುವಂಥಾದ್ದು ಏನಿದೆ?" ಆಶ್ಚರ್ಯದಿಂದ ಕೇಳಿದಳು.

"ಅದೇ ಆ ಮನಿ ಆರ್ಡರ್ ಸ್ಲಿಪ್" ನರೇಶ್ ನೆನಪಿಸಿದ.

"ನಾನು ಅದನ್ನು ಗಮನಿಸಲೇ ಇಲ್ಲ" ಶಾಲ್ಮಲಿ ಹೇಳಿದಳು.

"ಹೌದು ಇನ್ನೊಬ್ಬರಿಗೆ ಸಂಬಂಧಪಟ್ಟದ್ದನ್ನು ನೀನು ಗಮನಿಸುವುದೇ ಇಲ್ಲಾಂತ ಗೊತ್ತು. ಪೋಲೀಸ್ ರೀತಿಯಲ್ಲಿ ಎಂದೂ ನನ್ನ ಜೇಬುಗಳನ್ನು ತಡಕಾಡಲಿಲ್ಲ....ಆದರೂ ಒಂದ್ಮಾತು......! ಒಂದು ವೇಳೆ ಇದು ನಿನಗೆ ಗೊತ್ತಾಗಿ ಈ ವಿಷಯದಲ್ಲಿ ನನ್ನ ಹತ್ತಿರ ಕಾದಾಡಿದ್ದರೆ, ನಾನು ಮಾತ್ರ ಸುಮ್ಮನೆ ಇರ್ತಿರ್ಲಿಲ್ಲ. ನಾನಂತು ಹೀಗೇ ಮಾಡಬೇಕೂಂತ ತೀರ್ಮಾನ ಮಾಡಿ ಬಿಟ್ಟಿದ್ದೆ. ನರೇಶ್‌ನ ವಾಕ್ಯ ಸ್ವಲ್ಪ ತೀಕ್ಷ್ಣವಾಗಿಯೇ ಧ್ವನಿಸಿತು.

"ಇಷ್ಟು ದಿನ ಆದ್ರೂ ನನ್ನನ್ನು ಸರಿಯಾಗಿ ಅರ್ಥ ಮಾಡ್ಕೊಂಡಿಲ್ಲ"

ಶಾಲ್ಮಲಿಯ ಮುಖದ ಮೇಲೆ ದುಃಖದ ನೆರಳು ಕವಿಯಿತು.

"ಯಾಕೇಂತ ಕಾರಣ ಗೊತ್ತಿಲ್ಲ!" ನರೇಶ್ ಹೇಳಿದ.

"ತನ್ನವರ ಹತ್ತಿರವೇ ಈ ಮುಚ್ಚುಮರೆ?..... ನನ್ನನ್ನು ಸಂಪೂರ್ಣವಾಗಿ ನಿನ್ನ ಮುಂದೆ ತೆರೆದಿರಿಸಿದ್ದೇನೆ. ಆದರೂ ನೀನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿಲ್ಲ....

"ನನ್ನನ್ನು ಕ್ಷಮಿಸು ಶಾಲು" – ನರೇಶ್ ಶಾಲ್ಮಲಿಯ ಎರಡೂ ಕೈಗಳನ್ನು ಹಿಡಿದುಕೊಂಡ.

"ಹಾಗಾದರೆ, ಇನ್ನು ಮುಂದೆ ಎಂದೂ ಮುಚ್ಚುಮರೆ ಮಾಡುವುದಿಲ್ಲವೆಂದು ನನಗೆ ಮಾತುಕೊಡು" – ಕಂಪಿಸುವ ದನಿಯಲ್ಲಿ ಕೇಳಿಕೊಂಡಳು.

"ಮಾತು ಕೊಡುತ್ತೇನೆ" – ಕಣ್ಣು ಮುಚ್ಚಿಕೊಂಡು ನರೇಶ್, ಭಾರವಾದ ದನಿಯಲ್ಲಿ ಹೇಳಿದ.

ಮತ್ತೆ ಆಕಾಶದಲ್ಲಿ ಮೋಡಗಳು ಕವಿದವು. ಮುಸುರೆ ಪಾತ್ರೆ ತೆಗೆದಿರಿಸಿದಳು. ಮಳೆ ಹನಿಯತೊಡಗಿತು. ಶಾಲ್ಮಲಿಯ ಕೈಗಳ ಮೇಲೆ ಇರಿಸಿದ್ದ ನರೇಶನ ಕೈಗಳ ಭಾರವೇ, ವಿಷಯವನ್ನು ಹೊಳೆಸಿತ್ತು. ಮಳೆಯಲ್ಲಿಯೇ ತೋಯಿಸಿಕೊಳ್ಳುತ್ತಾ ಬಹಳ ಹೊತ್ತು ಶಾಲ್ಮಲಿ ಮತ್ತು ನರೇಶರು ಮಾಳಿಗೆಯ ಮೇಲೆ ಕುಳಿತಿದ್ದರು.

ಒಂದೇ ವರ್ಷದಲ್ಲಿ ಶಾಲ್ಮಲಿಗೆ ಎಣ್ಣೆ ಬೆಲೆ, ಸೌದೆ ಬೆಲೆ ಎಲ್ಲಾ ತಿಳಿಯಿತು. ಅಮ್ಮ ಗೊಣಗುಟುತ್ತಿದ್ದ ದಿನಗಳ ನೆನಪಾಯಿತು. ಅಂಗಡಿಯವನ ಮೇಲೆ, ಏರುತ್ತಿರುವ

ಬೆಲೆಗಳ ಮೇಲೆ ಅಮ್ಮ ಸಿಡಿಗುಟ್ಟುತ್ತಿದ್ದುದರ ಅರ್ಥ ಅವಳಿಗೆ ಈಗ ಹೊಳೆಯಿತು. ಅಮ್ಮನ ರೀತಿಗೆ ಆಗ ನಗುತ್ತಿದ್ದಳು. ಅಪ್ಪ ಕೂಡಾ" ನೋಡು ಶಾಲು ಅಮ್ಮ ಹೇಗೆ ತನ್ನಲ್ಲೇ ಗೊಣಗುತ್ತಾಳೆ?.......ಅವಳಿಗೆ ಯಾರಾದರೂ ಕೇಳಿಸಿ ಕೊಳ್ಳಲಿ ಬಿಡಲಿ, ಅದರ ಯೋಚನೆಯೇ ಇರುವುದಿಲ್ಲ" – ಎಂದು ಛೇಡಿಸುತ್ತಿದ್ದರು. ಅಮ್ಮ ಹೆಚ್ಚು ಹೆಚ್ಚು ಅರ್ಥವಾದಳು. ಆದಾಯ ಕಡಿಮೆ, ಮಿತಿಮೀರಿದ ಬೆಲೆಗಳು? – ಅವಳು ತಾನೇ ಗೊಣಗಿಕೊಳ್ಳದೆ ಏನು ಮಾಡುತ್ತಾಳೆ?

"ಇನ್ನೂ ವರ್ಷ ಕೂಡ ಪೂರ್ತಿ ಆಗಿಲ್ಲ. ಆಗಲೇ ಬಾಡಿಗೆ ಹೆಚ್ಚು ಮಾಡ್ಬೇಕೂನ್ನೋ ಮಸಲತ್ತು....ಈಗಂತೂ ಇಬ್ಬರೇ ಇರೋದು..... ಚಿಕ್ಕ ಸಂಸಾರ.... ಆದರೆ...... ಮುಂದೆ....ಓಹ್.... ಈ ಧೋಬಿ ಒಬ್ಬ....... ಚಾದರವನ್ನು ಮತ್ತೆ ಸುಟ್ಟು ತಂದಿದ್ದಾನೆ. ಬರಲಿ...... ಅವನ ಮುಖದ ಮೇಲೆ ಎಸೀತಿನಿ ಈ ಸುಟ್ಟದ್ದನ್ನು. ಇಲ್ಲವಾದರೆ ಅವನಿಗೆ ಕೊಡೋ ದುಡ್ಡಿಂದ ಮುರಿದು ಕೊಳ್ತೀನೆ?......ಸರಿ, ಇದ್ದಿಲ ಬೆಲೆ ಸಾಬೂನಿನ ಬೆಲೆ.....ಅದೂ ಇದೂಂತ ಅಳ್ತಾನೆ' –

ಮನೆಯನ್ನು ಶುಚಿ ಮಾಡುತ್ತಾ, ಯೋಚಿಸಿದಳು.

"ಅರೆ, ಮಿಸೆಸ್ ಕುಮಾರ್! ಬಹಳ ಬಿಜಿ ಅಂತ ಕಾಣುತ್ತೆ?" ಮೆಟ್ಟಿಲ ಮೇಲಿನ ಬಾಗಿಲು ತೆರೆದುಕೊಂಡು ಮನೆಯ ಮಾಲಿಕಳು ಒಳಗೆ ಬಂದಳು.

"ಹಾಂ!" ಮೊದಲು ಬೆಚ್ಚಿದಳು, ಆಮೇಲೆ ನಕ್ಕು ಬಿಟ್ಟಳು.

"ಒಳಗೆ ಬರಬಹುದೇ? ಯಜಮಾನ್ರು ಹೊರಟು ಹೋಗಿರಬೇಕಲ್ಲ?" ಒಂದಾದ ಮೇಲೆ ಒಂದರಂತೆ ಪ್ರಶ್ನೆಗಳನ್ನು ಎಸೆಯುತ್ತಾ, ಅವಳು ತನ್ನ ದಢೂತಿ ದೇಹವನ್ನು ಹೊತ್ತುಕೊಂಡು ಮುಂದೆ ಬಂದಳು.

"ಬನ್ನಿ ಬನ್ನಿ. ಇವರು ಒಂಬತ್ತು ಗಂಟೆಗೇ ಹೊರಟು ಹೋಗ್ತಾರೆ". ಶಾಲ್ಮಲಿ ಹೇಳುತ್ತಾ ಕೋಣೆಯ ಬಾಗಿಲನ್ನು ಪೂರ್ತಿಯಾಗಿ ತೆರೆದಳು.

"ಕೋಣೆಯನ್ನು ತುಂಬಾ ಚೆನ್ನಾಗಿ ಅಲಂಕರಿಸಿದ್ದೀರಿ – ಎನ್ನುತ್ತಾ ಸೊಂಟದ ಮೇಲೆ ಕೈಯಿಟ್ಟು ಒಂದು ಸುತ್ತು ಸುತ್ತಾಡಿದಳು.

"ಕೂತ್ಕೊಳ್ಳಿ, ಕಾಫಿ ತರ್ತೀನಿ". ಶಾಲ್ಮಲಿ ಅವರತ್ತ ಕುರ್ಚಿ ಸರಿಸಿದಳು.

"ಕಾಫಿ ಮಾಡೋ ಹಾಗಿದ್ದರೆ, ಸ್ವಲ್ಪ ಲೈಟಾಗಿ ಮಾಡಿ" ಎಂದು ಹೇಳುತ್ತಾ ಕುಳಿತುಕೊಂಡಳು.

"ಹೋಗಲಿ ಬಿಡಿ. ಏಲಕ್ಕಿ, ಶುಂಠಿ ಹಾಕಿ ಚೆನ್ನಾಗಿ ಟೀನೇ ಮಾಡಿಕೊಡ್ತೀನಿ" ನಗುತ್ತಾ ಹೇಳಿದಳು, ಶಾಲ್ಮಲಿ.

"ನಾನು ನಿಮಗೆ ಎಷ್ಟು ಸಲ ಹೇಳಿದ್ದೀನಿ., ನಮ್ಮ ಕ್ಲಬ್‌ಗೆ ಸೇರ್‍ಕೊಳ್ಳಿ ಅಂತ. ಆದರೆ ನೀವು ಏನು ಹೇಳೋದೇ ಇಲ್ಲ. ಮೂರು ಹೊತ್ತೂ ಪುಸ್ತಕಗಳಲ್ಲಿ ಮುಳುಗಿರ್‍ತೀರಿ. ಇದರಿಂದ ನಿಮಗೇನು ಸಿಗುತ್ತೆ? ಈ ವರ್ಮಾಜಿ ಅವರ ಸ್ಥಿತೀನೇ ನೋಡಿ. ಅವರೂ ಏನೋ ಬರೀತಿದ್ರು. ಆದರೆ ಸಾಧಿಸಿದ್ದು ಮಾತ್ರ ಸೊನ್ನೆ. ಅದೇ ಅವರನ್ನು ನೋಡಿ.......ಮನೆ ಮುಂದೆ ಎರಡೆರಡು ಕಾರು ನಿಂತಿರುತ್ತೆ. ಯಾವಾಗಲಾದರೂ ಒಮ್ಮೆ ಕೆಳಗಿಳಿದು ಬಂದು ನೋಡಿ. ಅದು ಬಿಟ್ಟು ಎತ್ತರದಲ್ಲಿ ಕೂತು, ಮರದ ಮೇಲಿನ ಟೊಂಗೆ ಹತ್ತಿ ಕುಳಿತ ಮೈನಾ ರೀತಿಯಲ್ಲಿರ್‍ತೀರಿ". ಬೇಗ ಬೇಗನೆ ಪತ್ರಿಕೆಯ ಪುಟಗಳನ್ನು ತಿರುವುತ್ತಾ ಹೇಳಿದಳೂ.

'ಸಮಯ ಎಲ್ಲಿ ಸಿಗುತ್ತೆ?' ಟೀ ಸೋಸುತ್ತಾ ನುಡಿದಳು ಶಾಲ್ಮಲಿ.

"ಸದಸ್ಯಳಾಗುವುದಕ್ಕೆ ಕೇವಲ ಹತ್ತೇ ರೂಪಾಯಿ ಫೀಸು. ಹೋದ ಮೀಟಿಂಗ್‌ನಲ್ಲಿ ನಾನೊಂದು ಒಳ್ಳೇ ಅಡಿಗೆ ಕಲಿತೆ. ಈರುಳ್ಳಿ ಗೊಜ್ಜು. ನಮ್ಮ ಮನೆ ಪಕ್ಕಕ್ಕೆ ಹೊಸದಾಗಿ ಒಬ್ಬರು ಬಂದಿದ್ದಾರಲ್ಲ, ರೆಹನಾ ಮುಗಲ್! ಅವರಂತೂ ಒಡವೆ, ಅಡಿಗೆ ವಿಷಯದಲ್ಲಿ ಎಕ್ಸ್‌ಪರ್ಟ್! ಊಟದಲ್ಲಾಗಲಿ, ಮತ್ತೊಂದರಲ್ಲಾಗಲಿ, ಅವರಿಗೆ ಅವರೇ ಸಮ" ಆಕೆ ಹೇಳುತ್ತಲೇ ಹೋದರು.

"ತಗೊಳ್ಳಿ. ನಿಮ್ಮ ಕ್ಲಬ್‌ನ ಸದಸ್ಯತ್ವದ ಹಣ. ಆದರೆ ಒಂದು ಷರತ್ತಿದೆ' – ಹೇಳುತ್ತಾ ಶಾಲ್ಮಲಿ, ಹತ್ತರ ನೋಟನ್ನು ಆಕೆಯ ಮುಂದೆ ಇಟ್ಟಳು.

"ಏನದು ಷರತ್ತು? ಕಣ್ಣು ಅಗಲಿಸಿ ಕೇಳಿದಳು. "ನೀವು ಮಾಡುವ ಮೀಟಿಂಗ್‌ಗೆ, ನಾನು ಬರುವುದಕ್ಕೆ ಆಗದ ಪಕ್ಷದಲ್ಲಿ ತಾವು ತಪ್ಪಾಗಿ ತಿಳಿಯಬಾರದು." ಚಹವನ್ನು ಗುಟುಕರಿಸಿದಳು.

"ಅಯ್ಯೋ, ತಪ್ಪಾಗಿ ಯಾಕೆ ತಿಳಿದುಕೊಳ್ಳಬೇಕು? ನಾನೇ ಸ್ವತಃ ಬಂದು ನಿಮ್ಮನ್ನು ಕರ್‍ಕೊಂಡು ಹೋಗ್ತೇನೆ!"

ಗಹಗಹಿಸಿ ನಗುತ್ತಾ ಹೇಳಿದಳು. ಶಾಲ್ಮಲಿ ಅವಳ ಜಾಣತನಕ್ಕೆ ಮುಗುಳ್ನಕ್ಕಳು. ಆದರೆ ಒಳಗೊಳಗೇ ಹೇಳಿಕೊಮಡಳು – "ಶಾಲ್ಮಲಿ ಬಿದ್ದೆ ಬಿಡು ಹಳ್ಳಕ್ಕೆ!"

ಮನೆಯ ಮಾಲಿಕಳು ಅಲ್ಲಿಂದ ಹೋದ ಮೇಲೆ ಶಾಲ್ಮಲಿ ಬೇಗ ಬೇಗ ಕೆಲಸ ಮುಗಿಸಿ, ನರೇಶನ ಬಟ್ಟೆಗಳಿಗೆ ಗುಂಡಿಗಳನ್ನು ಹೊಲಿಯುತ್ತಾ ಕುಳಿತಳು. ಮೊದಲಿಗೆ ಕೆಲಸವೇ ಇಲ್ಲಾಂತ ಅನ್ನಿಸುತ್ತಿತ್ತು. ಆದರೆ ಈಗ ಕೆಲಸದಿಂದ ಬಿಡುಗಡೆಯೇ ಇಲ್ಲ. ಪ್ರತಿದಿನಾ ಸಂಜೆ ನರೇಶ್ ಯಾರನ್ನಾದರೂ ಕರೆದುಕೊಂಡು ಬರುತ್ತಿದ್ದ. ಹೆಂಡತಿ ಮನೆಯಲ್ಲಿಲ್ಲ ಅಂತಲೋ, ಮದುವೆ ಆಗಿಲ್ಲ ಅಂತಲೋ' – ಯಾವುದೊ ನೆಪದಲ್ಲಿ ಪ್ರತಿದಿನ ಯಾರಾದರೂ ಒಬ್ಬರು ಇದ್ದೇ ಇರುತ್ತಿದ್ದರು. ಸರಿ ಬಂದವರಿಗೆ ಊಟ, ತಿಂಡಿ ಇಷ್ಟೇಟು! ಹತ್ತು ಗಂಟೆ ಮೇಲೆ ಯಾರಾದರೂ ಇರೋದು ಅವಳಿಗೆ

ಇಷ್ಟವಾಗುತ್ತಿರಲಿಲ್ಲ. ಬರುವ ಗೆಳೆಯರೋ! ಇಸ್ಪೀಟು ಆಟ ಆಡ್ತಾ ಹಾಸಿಗೆ ಮೇಲೆ ಹೊರಳಾಡುತ್ತ ಹಾಸಿದ ಚಾದರವನ್ನು ಗಬ್ಬೆಬ್ಬಿಸಿ ಬಿಡುತ್ತಿದ್ದರು. ಹೋಗೋದು ರಾತ್ರಿ ಹನ್ನೊಂದೋ, ಹನ್ನೆರಡೋ.....ನಿದ್ದೆ ಹಾಳು ಮಾಡೋದು ಬೇರೆ! ಹೋದ ಮೇಲೆ ಚಲ್ಲಾಪಿಲ್ಲಿಯಾಗಿ ಹರಡಿ ಬಿದ್ದಿರುವ ವಸ್ತುಗಳನ್ನೆಲ್ಲಾ ತೆಗೆದಿಟ್ಟು ಮಲಗಬೇಕಿತ್ತು! ನರೇಶ್ ಮಾತ್ರ ತಾನು ಮಲಗುವ ಹಾಸಿಗೆ ಮೇಲೆ ಹರಡಿರುವುದನ್ನು ಶಾಲ್ಮಲಿಯ ಕಡೆ ತಳ್ಳಿ ಬಿದ್ದುಕೊಳ್ಳುತ್ತಿದ್ದ.

"ಇದೇನು ನರೇಶ್, ನೀನು ಎದ್ದು ಸ್ವಲ್ಪ ಸಹಾಯ ಮಾಡೋದು ಬೇಡವೇ?" ಸ್ವಲ್ಪ ಕೋಪದೊಂದ ಹೇಳುತ್ತಿದ್ದಳು.

"ಓಹ್! ಇದೆಲ್ಲ ಹೆಂಗಸರ ಕೆಲಸ! ಅದನ್ನೆಲ್ಲ ಮಾಡೋದು ನನಗೆ ಹಿಡಿಸೋದಿಲ್ಲ". ಬಿದ್ದುಕೊಂಡೇ ಹೇಳುತ್ತಿದ್ದ.

"ಹೆಂಗಸು – ಗಂಡಸು ಅನ್ನೋದೇನು ಬಂತು? ಇದು ಮನೆ ಕೆಲಸ" ಶಾಲ್ಮಲಿ ಅವನನ್ನು ಹಿಡಿದಳು!

"ಮನೆ, ಹೆಂಗಸಿಗೆ ಸೇರಿದ್ದು. ಅದು ಅವಳಿಗೆ ಗೊತ್ತಿರಬೇಕು. ಸಂಪಾದನೆ ಮಾಡೋದು ಗಂಡಸಿನ ಕೆಲಸ, ಅದನ್ನು ನಾನು ಮಾಡ್ತೀನಿ. ನನ್ನ ಆಫೀಸ್ ಕೆಲಸದಲ್ಲಿ ನಿನ್ನ ಸಹಾಯ ಬಯಸಿದ್ದೇನೇನು?.....ಓ.ಕೆ.ಗುಡ್ ನೈಟ್!" ಎಂದು ಹೇಳಿ ಚೆನ್ನಾಗಿ ನಿದ್ದೆಗೆ ಇಳಿದ. ಅವನ ಗೊರಕೆಯ ಸಂಗೀತ ಸಾಕಾಗಿತ್ತು! ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿದ್ದ ವಸ್ತುಗಳನ್ನು ಎತ್ತಿ ಜೋಡಿಸಿಟಟಳು. ಸಿಗರೇಟು ವಾಸನೆ ದೂರ ಮಾಡಲು ಊದುಕಡ್ಡಿ ಹಚ್ಚಿಟ್ಟಳು.

ಕೆಲವು ತಿಂಗಳುಗಳಿಂದ ಶಾಲ್ಮಲಿ ಒಬ್ಬಳೇ ಷಾಪಿಂಗ್ ಮಾಡುತ್ತಿದ್ದಳು. ಮೊದಲಲ್ಲಿ ಸಂಜೆ ಹೊತ್ತು ಇಬ್ಬರೂ ಹಾಗೇ ಅಡ್ಡಾಡಿಕೊಂಡು ಬರುವಾಗ ಮನೆಗೆ ಬೇಕಾದ ವಸ್ತುಗಳನ್ನೆಲ್ಲ ಕೊಳ್ಳುತ್ತಿದ್ದರು. ಈಗ ಅವರಿಬ್ಬರ ಕರ್ತವ್ಯಗಳು ಬೇರೆ ಬೇರೆಯಾಗಿದ್ದವು. ಗಮ್ಯ ಮಾತ್ರ ಒಂದೇ ಆಗಿತ್ತು.

ಮೈಸೂರಿಗೆ ಹೋಗುವುದಕ್ಕೆ ಮೊದಲು ಶಾಲ್ಮಲಿಗೆ ನೆರಳು ಬೆಳಕಿನ ಅನುಭವವಾಗಿತ್ತು. ಅವನು ಗರ್ವದಿಂದ ಶಾಲ್ಮಲಿಗೆ ಹೇಳಿದ "– ಹೋಗುಪ್ರಿಯೆ. ನನ್ನನ್ನು, ಈ ಕೋಣೆಯನ್ನು ಅಚ್ಚುಕಟ್ಟಾಗಿ ನಾನೇ ನೋಡಿಕೊಳ್ಳುತ್ತೇನೆ. ನೀನು ಬರುವುದಕ್ಕೆ ಮೊದಲು ನಾನು ಒಬ್ಬನೇ ಅಲ್ಲವೆ ಇದ್ದದ್ದು?"

"ನಿಜ.....ಆದರೆ" – ಶಾಲ್ಮಲಿ ಅನುಮಾನಿಸುತ್ತ ಹೇಳಿದಳು.

"ನನ್ನ ಸ್ನೇಹಿತರಿಗೆ ವಿಷಯ ತಿಳಿದಾಗ್ಗಿಂತ ನನ್ನ ಮೇಲೆ ಅವರಿಗೆ ಎಷ್ಟು ಅಸೂಯೆ, ಗೊತ್ತಾ!" – ತನ್ನ ಅದೃಷ್ಟಕ್ಕಾಗಿ ಹೆಮ್ಮೆ ಪಡುತ್ತಾ ಹೇಳಿದಂತಿತ್ತು.

"ಹೌದಾ!" ಕಣ್ಣಗಲಿಸಿ ನಗುತ್ತಾ ಕೇಳಿದಳು.

"ನಿಶ್ಚಿಂತೆಯಿಂದ ಹೋಗಿ ಬಾ. ಕೆಲವು ದಿನಗಳು ತಾನೇ!" – ಉತ್ಸಾಹದಿಂದ ಹೇಳಿದ.

ಆರಂಭದ ರಜೆಗಳಲ್ಲಿ ಮನೆಗೆ ಬಂದಾಗ, ಮನೆಯ ಪರಿಸ್ಥಿತಿ ನೋಡಿ ಹೌಹಾರಿದಳು. ನರೇಶ್‌ನ ಸ್ನೇಹಿತರಿಂದಾದ ಆ ಕೋಣೆಯ ಸ್ಥಿತಿ .....ಅಬ್ಬ! ಎಲ್ಲಿ ನೋಡಿದರೂ ಬಟ್ಟೆ, ಪಾತ್ರೆ, ಕಸ! ಹೇಳುವುದಕ್ಕೇ ಸಾಧ್ಯವಿರಲಿಲ್ಲ. ಅದೆಲ್ಲ ಸರಿ ಮಾಡುವಷ್ಟು ಹೊತ್ತಿಗೆ ಅವಳ ಸೊಂಟ ಮುರಿಯುವಂತಾಗಿತ್ತು. ಮನೆಗೆ ಬಂದು ವಿಶ್ರಾಂತಿ ತೆಗೆದುಕೊಳ್ಳಬೇಕೆಂಬ ಕನಸು ದೂರವಾಯಿತು. ನರೇಶ್‌ನೇ ತನ್ನನ್ನು ಕಾಣಲು ಬರುತ್ತಿದ್ದ ಆ ದಿನಗಳೇ ಚೆನ್ನಾಗಿತ್ತು. ಆಗ ಅವನೊಂದಿಗೆ ಕಳೆದ ಮಧುರ ಕ್ಷಣಗಳ ನೆನಪಷ್ಟೇ ಮಧುರವೆನಿಸಿತು.

ಮನೆಗೆ ಬಂದು ಇನ್ನೂ ಒಂದೆರಡು ಗಂಟೆಗಳೂ ಕಳೆದಿರಲಿಲ್ಲ. ನರೇಶ್ ಬಂದು, ಸಂಜೆ ಊಟಕ್ಕೆ ನಾಲ್ಕೈದು ಗೆಳೆಯರು ಬರುತ್ತಾರೆಂದು ಹೇಳಿದ. ಶಾಲ್ಮಲಿಗೆ ಸ್ವಲ್ಪ ಜ್ವರ ಬಂದಂತಿತ್ತು. ಆದರೂ ಏನೂ ಹೇಳಲಿಲ್ಲ. ಕಷ್ಟ ಪಟ್ಟುಕೊಂಡು ಅಡಿಗೆ ಮುಗಿಸಿದಳು. ಸಂಜೆ ವೇಳೆಗೆ ದಣಿವಿನಿಂದ ಪ್ರಜ್ಞೆ ತಪ್ಪಿ ಬಿದ್ದುಬಿಟ್ಟಳು. ನರೇಶ್‌ಗೆ ಗಾಭರಿಯಾಯಿತು. 'ರಾತ್ರಿಗೇನು ಮಾಡುವುದು......ಇರುವುದು ಒಂದೇ ಕೋಣೆ' ಅವರಿಗೆ ತಿಳಿಸುವುದಾದರೂ ಹೇಗೆ?" – ಅಸಹಾಯಕತೆಯಿಂದ ಚಡಪಡಿಸಿದ.

"ನನ್ನನ್ನು ಅಮ್ಮನ ಮನೆಗೆ ಕಳಿಸಿ ಬಿಡಿ" ಎಚ್ಚೆತ್ತ ಶಾಲ್ಮಲಿ ನರೇಶನ ಮಾತನ್ನು ಕೇಳಿಸಿಕೊಂಡಿದ್ದರಿಂದ ಹೇಳಿದಳು. ಜ್ವರ ಹೆಚ್ಚಾಗಿತ್ತು.

"ಬೇಡ ಬೇಡ ಬಂದವರು ನಿನ್ನ ಬಗ್ಗೆ ಕೇಳಿದರೆ?" – ನರೇಶ್ ಬೇಸರದಿಂದ ಕೋಣೆಯಲ್ಲಿ ಶತಪಥಿಸಿದ.

"ನೀವು ಹೋಗಿ ಗಾಡಿ ತಗೊಂಡು ಬನ್ನಿ..... ಮನೆ ಕೂಡಾ ದೂರವೇನಿಲ್ಲ. ನಾನು ಎಲ್ಲಾ ನೋಡ್ಕೋಳ್ತೀನಿ." – ಹಾಸಿಗೆಯಿಂದ ಏಳುತ್ತಾ ನುಡಿದಳು. ಮನಸ್ಸಿನಲ್ಲೇ ಯೋಚಿಸಿದಳು.

"ಹೀಗೆ ಜ್ವರದಿಂದ ನರಳುತ್ತಿರುವಾಗಲೂ ಇವನಿಗೆ ಸ್ನೇಹಿತರೇ ಮುಖ್ಯವಾಯಿತು. ನಾನಿದ್ದೂ ಅವರ ಮಧ್ಯೆ ಪರೀಕ್ಷೆ ಮಾಡುವುದರಿಂದ ನನಗೇನೂ ಪ್ರಯೋಜನವಿಲ್ಲ"

ಶಾಲ್ಮಲಿಯ ಸ್ಥಿತಿ ನೋಡಿ ಅಪ್ಪ ಗಾಭರಿಗೊಂಡರು. ಅವಳನ್ನು ಬೆಚ್ಚಗೆ ಮಲಗಿಸಿ ಡಾಕ್ಟರನ್ನು ಕರೆತಂದರು. ಅಮ್ಮ ತಲೆಯ ಬಳಿ ಕುಳಿತು ತಲೆ ನೇವರಿಸುತ್ತಾ, ಅಳಿಯನಿಗೆ ಕೃತಜ್ಞತೆ ಅರ್ಪಿಸಿದಳು. "ಅವಳನ್ನು ಈ ಸ್ಥಿತೀಲಿ ಇಲ್ಲಿಗೆ ಕರೆದುಕೊಂಡು ಬಂದದ್ದು ಒಳ್ಳೆಯದೇ ಆಯಿತು. ಇಲ್ಲವಾದರೆ ನಿನಗೆ ತುಂಬಾ ತೊಂದರೆಯಾಗುತ್ತಿತ್ತು. ಒಬ್ಬಳನ್ನೇ

ಬಿಟ್ಟು ಡಾಕ್ಟರನ್ನು ಕರೆತರಲು ಹೇಗೆ ಸಾಧ್ಯವಾಗುತ್ತಿತ್ತು.? ಅವಳನ್ನು ನೋಡಿಕೊಳ್ಳುವುದೂ ನಿನಗಾಗುತ್ತಿರಲಿಲ್ಲ.

ಇವರಿಬ್ಬರ ಸ್ನೇಹ, ವಿಶ್ವಾಸಗಳನ್ನು ನೋಡಿ ನರೇಶ್‌ಗೆ ನಾಚಿಕೆಯೆನಿಸಿತು. ತನ್ನನ್ನೇ ಹಳಿದುಕೊಂಡ. ಪಾಪ! ಶಾಲ್ಮಲಿ ಈ ಸ್ಥಿತಿಲಿದ್ದೂ ಎಲ್ಲರ ಊಟದ ವ್ಯವಸ್ಥೆ ಮಾಡಿದ್ದಾಳೆ. ಈಗ ಅವಳನ್ನು ಇಲ್ಲಿ ಒಂಟಿಯಾಗಿ ಬಿಟ್ಟು ತಾನು ಗೆಳೆಯರ ಜೊತೆ ಸಂತೋಷವಾಗಿರೋದೇ?.... ಅನಿಸಿದರೂ ಗೆಳೆಯರ ಭಯವಿತ್ತು. ಈಗಾಗಲೇ ತನ್ನನ್ನು ಅಮ್ಮಾವ್ರ ಗಂಡ ಅಂತ ಚುಡಾಯಿಸುತ್ತಿದ್ದಾರೆ. ಈ ದಿನ ಮೊದಲ ಬಾರಿಗೆ ಡ್ರಿಂಕ್ಸ್ ಪಾರ್ಟಿಗಾಗಿ ಆಹ್ವಾನಿಸಿದ್ದ. ಶಾಲ್ಮಲಿ ಇದ್ದಿದ್ದರೆ, ಏನು ಹೇಳುತ್ತಿದ್ದಳೋ!..... ಒಂದೆರಡು ಸಲ ಶಾಲ್ಮಲಿಗೆ ತಿಳಿಸದೆ ಡ್ರಿಂಕ್ಸ್ ತೆಗೆದುಕೊಂಡಿದ್ದ. ಆದರೆ ಮನೆಗೆ ಬಾಟಲಿಗಳನ್ನು ತರುವ ಸಾಹಸಕ್ಕೆ ಹೋಗಿರಲಿಲ್ಲ. ರಾಕೇಶ್‌ನ ಪತ್ನಿ ಮಾಡಿದ ರಾದ್ಧಾಂತ ನೆನಪಾಯಿತು. ತಂದಿದ್ದ ಬಾಟಲಿಗಳನ್ನೆಲ್ಲ ಎತ್ತಿ ಬಿಸಾಡಿ ಒಡೆದು ಹಾಕಿದಳು. ಅವಳ ಅವತಾರ ನೋಡಿ ರಾಕೇಶನೂ ಸೇರಿದಂತೆ ಗೆಳೆಯರೆಲ್ಲ ಓಟಕಿತ್ತರು.

"ಮಗೂ ಊಟ ಮಾಡಿ ಹೋಗು" – ಅಮ್ಮ ಹೇಳಿದಳು.

"ಅವನು ಹೋಗೋದಿಲ್ಲ ಬಿಡು. ಇಲ್ಲಿಯೇ ಮಲಗುತ್ತಾನೆ." ಅಮ್ಮನ ಅಜ್ಞಾನಕ್ಕೆ ಅಪ್ಪ ನಕ್ಕರು.

"ಶಾಲೂ ಹೇಳುತ್ತಿದ್ದಳು. ಯಾರೋ ಅತಿಥಿಗಳು ಬರುತ್ತಾರಂತೆ" – ಅಮ್ಮ ಹೇಳಿದಳು.

"ಹೌದು......ಅದಕ್ಕೇ....." ನರೇಶ್ ಸಂಕೋಚದಿಂದ ಹೇಳಿದ.

"ಗೃಹಸ್ಥಾಶ್ರಮವೂ ಒಂದು ತಪಸ್ಸು ಮಗು. ಈ ಕರ್ತವ್ಯವನ್ನು ಸಾರ್ಥಕವಾಗಿ ನಿರ್ವಹಿಸಿದರೆ, ತಪಸ್ಸಿನ ಫಲ ಸಿಗುತ್ತೆ. ಅದು ಬದುಕಿನ ತಪಸ್ಸು. ಮಾಯಾ ಮೋಹದ ಜೊತೆಗೆ ಕರ್ತವ್ಯ ನಿರ್ವಹಣೆ ಬಹಳ ಕಷ್ಟದ ಕೆಲಸ. ಆದರೂ ಮನುಷ್ಯನ ಪರೀಕ್ಷೆ ಆಗೋದು ಅದರಲ್ಲಿಯೇ!....ಸ್ನೇಹಿತರನ್ನು ಕರೆದಿದ್ದೀಯಾಂತೀಯು.....ಹೋಗಿ ಬಾ.....ಅವರನ್ನೆಲ್ಲ ಚೆನ್ನಾಗಿ ಸತ್ಕರಿಸು. ಶಾಲ್ಮಲಿ ಕ್ಷಮೆ ಕೇಳಿದಳೆಂದು ಹೇಳು." – ಅಪ್ಪ ನರೇಶ್‌ನ ಬಾಡಿದ ಮುಖ ನೋಡುತ್ತಾ ಧೈರ್ಯ ತುಂಬಿದರು.

"ಆಯ್ತು ಮಾವ" – ನರೇಶನಿಗೆ ಒಂದು ರೀತಿ ಧೈರ್ಯ ಬಂತು. ಬೇಗ ಎದ್ದು ನಿಂತು ಶಾಲ್ಮಲಿಯ ಕಡೆ ನಡೆದ. ಜ್ವರದ ತಾಪದಿಂದ ಅವಳು ಮಲಗಿದ್ದಳು ಕೆಂಪಾದ ಅವಳ ಮುಖ ನೋಡಿ ಅವನಿಗೆ ಹೋಗಲು ಮನಸ್ಸಾಗಲಿಲ್ಲ. ಸಂದಿಗ್ಧದಲ್ಲಿ ಸಿಲುಕಿದವನಂತೆ ನಿಂತ.

"ಹೋಗಲೇ ಬೇಕೆಂದರೆ ಹೋಗು ಮಗು. ಎಲ್ಲ ಮುಗಿದ ಮೇಲೆ ಬೇಗ ಬಂದು ಬಿಡು" ಅಮ್ಮನ ಮಾತಿನಿಂದ ನಿರಾಳವಾದಂತೆನಿಸಿತು.

ನರೇಶ್‌ನನ್ನು ಅರ್ಥಮಾಡಿಕೊಂಡಿದ್ದೇನೆಂಬ ನಂಬಿಕೆ ಮುಗ್ಗರಿಸಿದಂತೆ ಭಾಸವಾಯಿತು. ಒಂದೊಂದು ಸಲಕ್ಕೂ ಅವನ ಬಣ್ಣಗಳು ಬದಲಾಗುತ್ತಿದ್ದವು. ಆದರೂ ತನ್ನನ್ನು ಕವಿದಿದ್ದ ಕತ್ತಲೆಯ ಬಲೆಯನ್ನು ಕತ್ತರಿಸಿ ವಿಶ್ವಾಸ ನಂಬಿಕೆಗಳನ್ನು ಬಲವಾಗಿ ಹಿಡಿದಿದ್ದಳು. ಆದರೆ ನರೇಶನ ವ್ಯಕ್ತಿತ್ವದ ಪತಂಗ ಸಿಡಿದು ಯಾವುದೋ ಮರದ ಚಿಗುರೆಲೆಯ ಮೇಲೆ ಸಿಕ್ಕಿ ಕುಳಿತಂತೆ ಕಾಣಿಸುತ್ತಿತ್ತು. ಭಾವನಾ ಲೋಕದಿಂದ ಆಗಾಗ ಬೀಳುತ್ತಲೇ ಯೋಚಿಸುತ್ತಿದ್ದಳು.

"ಸೂತ್ರ ನನ್ನ ಕೈಲಿದೆ ಆದರೆ ಭಾವನೆಯ ಗಾಳಿ ಪಟಗಳು ಎಲ್ಲಿವೆ? ಮರಗಳ ಮೇಲೆ ಸಿಕ್ಕಿ ಹಾಕಿಕೊಂಡು ಹರಿದ ಇವುಗಳನ್ನು ಅಂಟಿಸಿ ಎಲ್ಲಿವರೆಗೆ ಹಿಡಿದಿಡಲು ಸಾಧ್ಯ? ಭಾವನೆಗಳಲ್ಲಿ ಸ್ಥಿರತೆಯಿಲ್ಲದಿದ್ದರೆ ಅವು ನಿಲ್ಲುವುದಾದರೂ ಹೇಗೆ? ಅವುಗಳು ತರಂಗಗಳು ಮಾತ್ರವೇ ಬದುಕೆನ್ನುವುದು. ಕಲ್ಲೊಂದನ್ನು ಒಗೆದಾಗ ಹುಟ್ಟಿಕೊಂಡು ಕ್ಷಣದಲ್ಲಿ ಗುರುತಿಲ್ಲದಂತೆ ಸಾಯುವ ಆನಂದದ ಅಲೆಗಳೇ! ಗುರುತುಗಳಿಲ್ಲದಿದ್ದರೆ ಏನಾಯಿತು. ಅವುಗಳ ಕಂಪನದ ಧ್ವನಿಯಂತೂ ನೀರಿನ ಹರಿವು ಮತ್ತು ಅಲೆಗಳ ಸಂಬಂಧವನ್ನು ಕಾಪಾಡುತ್ತದೆ. ಪ್ರತಿಸಲ ಈ ಅಲೆಗಳು ಮೂಡಿ ಮರೆಯಾಗುವುದಾದರೆ, ಹುಟ್ಟುವುದಾದರೂ ಏಕೆಂದರೆ, ಅವುಗಳ ಬದುಕು ಸ್ಥಗಿತವೇ? ಸೀಮಿತವೇ? – ಇಂತಹದೇ ಹಲವು ಪ್ರಶ್ನೆಗಳಿಂದ ಶಾಲ್ಮಲಿಯ ಮನಸ್ಸು ಕದಡಿ ಹೋಗಿತ್ತು. ನರೇಶ ಬದಲಾಗುತ್ತಿದ್ದಾನೆ. ಎನಿಸಿದರೂ, ಹೇಗೆ, ಎಲ್ಲಿ ಎಂಬುದು ಸ್ಪಷ್ಟವಾಗಿರಲಿಲ್ಲ.

"ನಾನೂ ಬದಲಾಗುತ್ತಿದ್ದೇನೆ". ಆತ್ಮಾವಲೋಕನ ಮಾಡಿಕೊಳ್ಳುತ್ತಾ ಹೇಳಿಕೊಂಡಳು. ಮತ್ತೆ ತನ್ನ ವ್ಯಕ್ತಿತ್ವದ ವಿಶ್ಲೇಷಣೆಗೆ ತೊಡಗಿದಳು.

"ಹೆಂಡತಿಯಾಗಿ ನನ್ನಿಂದ ಕರ್ತವ್ಯ ಲೋಪವಾಗಿದೆಯೇ? ನನ್ನ ಅಧಿಕಾರ ಎಲ್ಲಿಯವರೆಗೆ?...ಬೇರೆಯವರ ಭಾವನೆಗಳನ್ನು ನಾನೆಷ್ಟು ಗೌರವಿಸುತ್ತಿದ್ದೇನೆ?"

ಅವನಲ್ಲಿನ ಪರಿವರ್ತನೆಗೆ ಕಾರಣವೇನೆಂದು ನೇರವಾಗಿ ಕೇಳುವ ಮನಸ್ಸಾಯಿತು. ಆದರೆ ಕೇಳಲಿಲ್ಲ. ಟ್ರೇನಿಂಗ್ ಮುಗಿದ ಮೇಲೆ ಹಿಂದಿರುಗಿ ಬಂದಾಗ ಕೇಳಿದರಾಯಿತೆಂದು ಸುಮ್ಮನಾದಳು.

"ನಾನಿಲ್ಲದೆ ನಿಮಗೆ ಬಹಳ ತೊಂದರೆಯಾಗಿರಬೇಕಲ್ಲ". ಹೋಗುವ ಮೊದಲು ಒಮ್ಮೆ ಕೇಳಿದ್ದಳು.

"ಹೌದು ಆದರೆ ಪ್ರಪಂಚ ಏನೂಂತ ತಿಳಿದು ಕೊಳ್ಳೋಕೆ ಒಂದು ಅವಕಾಶ ಸಿಕ್ಕಿದೆ.....ಅನುಭವ.....ಬಿಡುವ...." ನರೇಶ್ ನಕ್ಕು ಹೇಳಿದ.

"ಅನುಭವ!?......ಎಂಥ ಅನುಭವ?" ಬೆಚ್ಚಿ ಕೇಳಿದಳು. "ಅದೇ ಅಡಿಗೆ ಮಾಡೋದು; ಬಟ್ಟೆ ಒಗೆಯೋದು. ಜೊತೆಗೆ ಒಂದು ವಿದ್ಯಾವಂತ ಹೆಣ್ಣಿನ ಜೊತೆಗೆ ಜೀವನ ಹೇಗಿರುತ್ತೇಂತ ತಿಳಿಯೋದು" ನರೇಶ್ ತಮಾಷೆಯಾಗಿ ನುಡಿದ.

"ಹೌದೌದು ಎಷ್ಟು ಅಡಿಗೆ ಮಾಡ್ತೀರಾ ಎಷ್ಟು ಬಟ್ಟೆ ಒಗಿತೀರ........ಎಲ್ಲಾ ನನಗೆ ಗೊತ್ತಿದೆ" ಶಾಲ್ಮಲಿಯೂ ಕೊರಳು ಕೊಂಕಿಸಿ ನುಡಿದಳು.

"ನನ್ನ ಸ್ನೇಹಿತರೆಲ್ಲ ನನ್ನ ಬೆನ್ನ ತಟ್ಟುತ್ತಾರೆ. ಶಹಭಾಸ್ ಗಿರಿ ಕೊಡುತ್ತಾರೆ....... ಹೋಗಲಿ ಈಗ ನೀನೇ ಹೇಳು ಶಾಲು, ನೀನಿಲ್ಲದೆ. ಇದಕ್ಕಿಂತ ಚೆನ್ನಾಗಿ ಯಾರಿಗಾದರೂ ಇರುವುದಕ್ಕೆ ಸಾಧ್ಯವಾಗುತ್ತ ಹೇಗೆ!" – ನರೇಶ್ ಕೇಳಿದ.

"ಇಲ್ಲ" – ಭಾವ ಮುಗ್ಧಳಾಗಿ ಹೇಳಿದಳು, ಶಾಲ್ಮಲಿ ಎಷ್ಟೋ ಸಲ ತನ್ನನ್ನೇ ನಿಂದಿಸಿಕೊಳ್ಳುತ್ತಿದ್ದಳು. ಇದೆಲ್ಲ ಭ್ರಮೆಯೇ? – ಎಂದೂ ಪ್ರಶ್ನಿಸಿಕೊಳ್ಳುತ್ತಿದ್ದಳು. ಅಪ್ಪನ ಹೊರತಾಗಿ ಯಾವ ಗಂಡಸನ್ನು ಕಂಡವಳಲ್ಲ. ಅಪ್ಪನ ಥರ ಯಾರೂ ಇರೋದಿಲ್ಲ. ಒಂದು ವೇಳೆ ನರೇಶ್ ತನ್ನ ಅಮ್ಮನನ್ನು ನನ್ನಲ್ಲಿ ಕಾಣಲು ಪ್ರಯತ್ನಿಸುತ್ತಿರಬಹುದೇ? ಅದು ಸಾಧ್ಯವಾಗದೆ, ಹೀಗೆ ತನ್ನ ಮೇಲೆ ಸಿಟ್ಟಾಗುತ್ತಿರುವನೇ?

ತನ್ನೆಲ್ಲ ಪ್ರಶ್ನೆಗಳ ಕಟಕಟೆಯಲ್ಲಿ ನಿಂತು ತನ್ನ ತಪ್ಪುಗಳ, ದೌರ್ಬಲ್ಯಗಳ ವಿಚಾರಣೆ ನಡೆಸಿದಳು. ಆದರೂ ಮನಸ್ಸಿಗೆ ಶಾಂತಿ ಸಿಗಲಿಲ್ಲ. ತಾನು ನಂಬಿದ ವ್ಯಕ್ತಿಯೊಂದಿಗೆ ಹೊಂದಿಕೊಂಡು ಜೀವನಾಂತ್ಯದವರೆಗೆ ನಡೆಯಲು ಸಿದ್ಧಳಿರುವಾಗ, ಕ್ಷಣಗಳಲ್ಲಿ ಅವನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೇ? ಅವನ ಒಳಗನ್ನು ಗ್ರಹಿಸಲು ಸಾಧ್ಯವಾಗಿದ್ದರೆ ತನ್ನ ಅನುಭವಗಳು ತನಗೆ ದಕ್ಕುತ್ತಿದ್ದವು. ಆದರೆ "ನಗುವಾಗ, ತಿನ್ನುವಾಗ, ಆಡುವಾಗಲೆಲ್ಲ ಏನೋ ಒಂದು ಬಗೆಯ ಭೀತಿ ಕಾಡುತ್ತಿತ್ತು. ಯಾವ ಕ್ಷಣ, ಯಾವ ಮಾತು ನರೇಶ್ನಿಂದ ತಿರಸ್ಕೃತವಾಗುವುದೋ" "ಓಹ್ ಶಾಲೂ!" ಅದೆಲ್ಲ ನೆನ್ನೆಯ ಮಾತಾಯಿತು. ಆದದ್ದು ಆಗಿ ಹೋಯಿತು. ಮರೆತು ಬಿಡು. ಆಗಿಹೋದದ್ದನ್ನೇ ಹಿಡಿದುಕೊಂಡೇಕೆ ನೇತಾಡುತ್ತೀ? ವರ್ತಮಾನಕ್ಕೆ ಬಾ.....ವರ್ತಮಾನದಲ್ಲಿ ಬದುಕು.....ನಾನು ಹೇಳಿದ್ದನ್ನೆಲ್ಲ ಕೇಳಿಸಿಕೋ. ಅದನ್ನು ನಂಬು" – ಎನ್ನುವ ಅವನ ಮಾತುಗಳನ್ನೆಲ್ಲ ಎಲ್ಲಿ ಕೇಳಿಸಿಕೊಳ್ಳಬೇಕಾಗಿ ಬರುವುದೋ ಎನ್ನುವ ಹೆದರಿಕೆ?

"ಮುಂದೇನು?" – ಎಂದು ಮನಸ್ಸಿನಲ್ಲಿಯೇ ಕೇಳಿಕೊಂಡಳು. ಮನುಷ್ಯನ ಮನಸ್ಸು ಬುದ್ಧಿಗಳು ಮರಳಿಗೆ ಸಮಾನವೇ? ಮರಳಿನ ಮೇಲೆ ಬರೆದ ಅಕ್ಷರಗಳು ಕೇವಲ ಒಂದೇ ಒಂದು, ಅಲೆಯಿಂದ ಅಳಿಸಿ ಹೋಗಬಲ್ಲವು. ನಾನು ಮರಳಿನ ದಂಡೆಯಾಗಲು ಒಪ್ಪುವುದಿಲ್ಲ. ನನ್ನ ವ್ಯಕ್ತಿತ್ವ ಫಲವತ್ತಾದ ಮಣ್ಣಿನಂತೆ! ಅಲ್ಲಿ ಬೀಳುವ ಒಂದೊಂದು ಶಬ್ದವೂ ಮರವಾಗಿ ನಿಲ್ಲುತ್ತದೆ. ನರೇಶನ ಮಾತುಗಳು, ಭಾವಸ್ನಿಗ್ಧ ಶಬ್ದಗಳು ಕಾಡಾಗಿ ನಿಂತಿವೆ. ಅವುಗಳನ್ನು ಕತ್ತರಿಸುವುದಾಗಲೀ, ತನ್ನಿಂದ ಆಗದ ಮತು. ಇದನ್ನು ಅವನಿಗೆ ಹೇಳುವುದಾದರೂ ಹೇಗೆ? ಮಾಗಿಯ ಕಾಲ ಬಿಸಿಲಲ್ಲಿ ನಿಂತ ಶಿರೀಷ ಮರಗಳ ಕೊಂಬೆಗಳಲ್ಲಿ ಇಳಿಬಿದ್ದ ಕಾಯಿಗಳ ಹೊಂಬಣ್ಣದ ಹೊಗರು ಶುಭ್ರ ನೀಲಾಕ್ಕಾಶಕ್ಕೆ ಒಂದು ವಿಚಿತ್ರ ಸೌಂದರ್ಯವನ್ನು ನೀಡಿತ್ತು. ಗಾಳಿಗೆ ತೂಗಾಡುತ್ತಿದ್ದ

ಕಾಯಿಗಳೊಳಗಿನ ಬೀಜಗಳು ಮೃದಂಗದ ಮಧುರ ಧ್ವನಿಯನ್ನು ಹೊಮ್ಮಿಸಿದವು. ಈ ತುದಿಯಿಂದ ಆ ತುದಿವರೆಗೆ ನಿಂತ ಶಿರೀಷಗಳು ವಾತಾವರಣದಲ್ಲಿ ಒಂದು ಬಗೆಯ ಕಾಂತಿಯನ್ನು ಚೆಲ್ಲಿದ್ದವು. ಅಚ್ಚಹಸುರಿನ ನಡುವೆ ಚಿನ್ನದ ರಸವನ್ನು ಚೆಲ್ಲಿದಂತೆ ಕಾಣುತ್ತಿತುತ.

'ಇವೆಂತಹ ಮರಗಳು! ಒಂದು ಹಕ್ಕಿಯ ಗೂಡಾದರೂ ಬೇಡವೇ? ಅಳಿಲುಗಳು ಮಾತ್ರವೇ ಇದರ ಮೈ ಮೇಲೆಲ್ಲ ಓಡಾಡುತ್ತ ಕಾಯಿಗಳನ್ನು ಕುಕ್ಕಿ ಕುಕ್ಕಿ ತಿನ್ನುವಾಗಿನ ಸರಸರ ಶಬ್ದ ಮಾತ್ರ ಕೇಳಿಸುತ್ತಿದೆ." – ಕಿಟಕಿಯಿಂದ ನೋಡುತ್ತ ಯೋಚಿಸಿದಳು.

ಶಾಲ್ಮಲಿ ಪೇಟೆಯಿಂದ ವಸ್ತುಗಳನ್ನು ಕೊಂಡು ತರುವಾಗಲೆಲ್ಲ ಕಾವಲುಗಾರನ ಎಂಟು ಹತ್ತು ವರುಷದ ಮಗಳು, ರಾತ್ರಿಯ ಹೊತ್ತು ಅಪ್ಪ ಚಳಿ ಕಾಯಿಸಿಕೊಳ್ಳಲೆಂದು ಶಿರೀಷ ಕಾಯಿಗಗಳನ್ನು ಆರಿಸಿಕೊಳ್ಳುತ್ತಿದ್ದ ದೃಶ್ಯ ಕಣ್ಣಿಗೆ ಬೀಳುತ್ತಿತ್ತು. ಒಮ್ಮೊಮ್ಮೆ ಸಂತೋಷದಿಂದ ಕುಣಿಯುತ್ತಲೋ ಏಟು ತಿಂದು ಅಳುತ್ತಲೋ ಇದ್ದ ಅವಳನ್ನು ನೋಡಿದಾಗಲೆಲ್ಲ "ಈ ಹುಡುಗಿಯ ಕನಸುಗಳು ಏನಾಗಬಹುದು? ಆಲೊಚನೆಗಳೇನು?.... ಇವಳ ಪ್ರಪಂಚ ದೊಡ್ಡದೋ ಚಿಕ್ಕದೋ!....ಇಲ್ಲ! ಇವಳಿಗೆ ಅಂತಹ ಆಲೋಚನೆಗಳೇ ಬರುವುದಿಲ್ಲವೋ"....... "ಮುಖ್ಯವಾಗಿ ಹೆಣ್ಣಿನ ಅರ್ಥವೇನು? ಈ ಪ್ರಪಂಚದಲ್ಲಿ, ಬಂದಿರುವುದಾದರೂ ಯಾತಕ್ಕೆ? ಶತಪ್ರಯತ್ನ ಮಾಡಿದರೂ ಇವುಗಳಿಗೆ ಸಮಾಧಾನ ದೊರೆಯದೆ, ಪ್ರಶ್ನೆಗಳು ಒಳಗೇ ಚದುರಿ ಹೋಗುತ್ತಿದ್ದವು. ಶಿರೀಷದ ಕಾಯಿಗಳನ್ನು ಕುಕ್ಕಿ ಬೀಜಗಳನ್ನು ತಿಂದು, ಅವುಗಳ ಮೇಲಿನ ಹೊಟ್ಟನ್ನು ಮೈನಾ ಗಾಳಿಗೆ ತೂರಿಬಿಟ್ಟಾಗ, ಆ ಹೊಟ್ಟು ಗಾಳಿಯಲ್ಲಿ ತೇಲುತ್ತಾ ದಿಕ್ಕಾಪಾಲಾಗಿ ಎಲ್ಲೆಲ್ಲಿಗೋ ಹೋಗಿ ಬೀಳುವಂತಹ ಅನುಭವ ಅವಳದಾಗಿತ್ತು. ಬೆಳಗಿನಿಂದ ಸಂಜೆವರೆಗೆ ಸಮಯ ಅರಿವಿಗೆ ಬಾರದೆ ಹೇಗೋ ಸರಿದು ಹೋಗುತ್ತಿತ್ತು. ಚಿಕ್ಕ ಸಂಸಾರ! ಕೆಲಸವೂ ಕಡಿಮೆ! ಸುಮ್ಮನೆ ಮಾಳಿಗೆ ಮೇಲೆ ಹೋಗಿ ಅಡ್ಡಾಡಿ ಕಾಲ ಕಳೆಯುತ್ತಿದ್ದಳು. ಅಕ್ಕ ಪಕ್ಕದ ಮಹಡಿ ಮನೆಗಳಲ್ಲಿ ನಡೆಯುವ ಚಟುವಟಿಕೆಗಳನ್ನು ಗಮನಿಸುತ್ತಿದ್ದಳು. ಕೆಳಗಿನ ಮನೆಗಳಲ್ಲಿ ಇಣಿಕಿ ನೋಡುತ್ತಿದ್ದಳು. ಒಂದು ಕಡೆ ಮಹಡಿ ಮೇಲೆ ಎಡಗಡೆಯದರಲ್ಲಿ, ಸಾಮಾನ್ಯವಾಗಿ ಗಂಡಸರ ಪಂಚೆ, ಷರ್ಟು ಇತ್ಯಾದಿಗಳನ್ನು ಒಣಗಿ ಹಾಕಿರುತ್ತಿದ್ದರು. ಒಂದೊಂದು ಸಲ ಈ ಬಿಳಿ ಬಟ್ಟೆಗಳ ಮಧ್ಯೆ ಮಧ್ಯೆ ಬಣ್ಣ ಬಣ್ಣದ ಬಟ್ಟೆಗಳನ್ನು ಹಾಕಿರುತ್ತಿದ್ದರು. ಇಡೀ ದಿವಸ ಮುದುಕಿಯೊಬ್ಬಳು ಅಲ್ಲಿಯೇ ಬಿಸಿಲು ಕಾಯಿಸಿಕೊಳ್ಳುತ್ತಾ ಮಧ್ಯೆ ಮಧ್ಯೆ ಪಂಚೆಯ ಮೇಲೆ ಕೈಯಾಡಿಸಿ ಒದ್ದೆಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಿದ್ದಳು ಇಲ್ಲವೆ ಷರ್ಟಿನ ಸುಕ್ಕುಗಳನ್ನು ಸರಿಪಡಿಸುತ್ತಿದ್ದಳು. ಅವಳ ಪ್ರತಿಯೊಂದು ಕ್ರಿಯೆಯೆ ಹಿಂದೆ ಅವಳ ಸಂವೇದನೆಯ ತಂತು ಮಿಡಿಯುತ್ತಿರುವಂತೆ ಶಾಲ್ಮಲಿಗೆ ಅನಿಸಿತು.

ಕುತೂಹಲದಿಂದ ಒಮ್ಮೆ ಮನೆಯ ಮಾಲಿಕಳ ಬಳಿ ವಿಚಾರಿಸಿದಳು. "ಈ ಹೆಂಗಸು ಯಾರು ಆಂಟಿ?"

"ಶ್ರೀಮತಿ ವರ್ಮಾ!" ಅವಳು ಮುಗುಳ್ನಕ್ಕಳು.

"ಒಬ್ಬಳೇ ಇದ್ದಾಳೇನು?" ಶಾಲ್ಮಲಿ ಆಶ್ಚರ್ಯದಿಂದ ಯಾವುದೋ ರಹಸ್ಯವನ್ನು ಒಡೆಯಲು ಬಯಸಿದಂತೆ ಕೇಳಿದಳು.

"ನಾವು ಇವರನ್ನು ಮೊದಲ ಬಾರಿಗೇ ನೋಡಿದ್ದು. ಕಳೆದ ಇಪ್ಪತ್ತು ವರ್ಷಗಳಿಂದ ವರ್ಮಾ ಯಾವತ್ತೂ ಒಬ್ಬರೇ ಇದ್ದದ್ದಿಲ್ಲ. ತುಂಬ ಜನ ಇದ್ದ ಹಾಗೆ ಇತ್ತು. ಈಗೇನೋ ಹಳ್ಳಿಯಿಂದ ಹೆಂಡತಿಯನ್ನು ಕರೆಸಿಕೊಂಡಿದ್ದಾರೆಂತ ಕೇಳಿದೆ". ಅವಳ ನಗುವಿನಲ್ಲಿ ಕತೆಯೊಂದು ಅಡಗಿದಂತೆ ಇತ್ತು. ಎಲ್ಲಾ ಕೇಳಿದ ಮೇಲೆ ಶಾಲ್ಮಲಿಗೆ ಮನುಷ್ಯರ ಬದುಕುಗಳು ಬಹಳ ಜಟಿಲವಾಗಿರುವಂತೆನಿಸಿತು. ಯಾರು ದೋಷಿ, ಯಾರು ನಿರ್ದೋಷಿ ಜೀವನ ಪರ್ಯಂತ ಗಂಡನ ಸ್ಪರ್ಷಕ್ಕಾಗಿ ಹಂಬಲಿಸಿರುವ ಹೆಣ್ಣು ಈ ಮುದಿ ವಯಸ್ಸಿನಲ್ಲಿ ಅವನ ಬಟ್ಟೆಗಳನ್ನು ಸ್ಪರ್ಷಿಸುವುದರ ಮೂಲಕ ಮನಸ್ಸಿಗೆ ಆದ ಗಾಯಗಳನ್ನು ಮರೆತು ಸಂತೋಷದಿಂದಿರಲು ಪ್ರಯತ್ನಿಸುತ್ತಿರುವ ಈ ಹೆಂಗಸು ಯಾರು? ಚೆನ್ನಾಗಿ ಬಾಳಿ ಬದುಕಿದ ದಿನಗಳಲ್ಲಿ, ಜೊತೆಯಾಗಿದ್ದವರು ಯಾರು? ಅವರ ಕಷ್ಟದ ದಿನಗಳಲ್ಲಿ, ಹಾಸಿಗೆ ಹಿಡಿದ ದಿನಗಳಲ್ಲಿ ಅವರ ಸಹಾಯಕ್ಕೆ ಇರದೆ ಹೋದವಳು ಯಾರಿರಬಹುದು? ಈಗ ದಣಿದ ದಿನಗಳಲ್ಲಿ ಕೇವಲ ಮುದಿ ಹೆಂಗಸೊಬ್ಬಳು, ಜನ್ಮ ಜನ್ಮಾಂತರದಲ್ಲೂ ಸಂಗಾತಿಯಾಗಿರುತ್ತೇನೆಂದು ಅಗ್ನಿಸಾಕ್ಷಿಯಾಗಿ ಕೈ ಹಿಡಿದವಳು, ಇಂದು ತನ್ನ ಅಂದಿನ ಮಾತನ್ನು ನಿಭಾಯಿಸುತ್ತಿದ್ದಾಳೆ. ಆದರೆ ವರ್ಮಾರು ಯಾವ ಆಮಿಷದ ಬೆನ್ನುಹತ್ತಿ, ತಮ್ಮ ಪ್ರತಿಜ್ಞೆಯನ್ನು ಮರೆತಿದ್ದರು? ಬೌದ್ಧಿಕ ಸಾಹಚರ್ಯ ಹೊಂದಾಣಿಕೆಗಳು ಸಂಬಂಧಗಳ ಒರೆಗಲ್ಲಾಗುವುದೇ ಅಥವಾ ಮತ್ತೇನಾದರೂ ಇದೆಯೇ? ಇದ್ದರೆ, ಅದೇನು? ಶಾಲ್ಮಲಿಗೆ ಒಗಟೆನಿಸಿತು.

ಆ ದಿನದಿಂದ ಶಾಲ್ಮಲಿ ಕಿಟಕಿಯ ಮರೆಯಿಂದ ಅವರನ್ನು ಗಮನಿಸುತ್ತಿದ್ದಳು. ನೇರವಾಗಿ ದಿಟ್ಟಿಸಲು ಅವಳಿಗೆ ಧೈರ್ಯ ಸಾಲದಾಯಿತು. ದುಃಖದಿಂದ ತುಂಬಿರುವ ಈ ಮುಖವನ್ನು ಎದುರಿಸುವುದು ಸಾಧ್ಯವಿಲ್ಲ. ಇಂಥ ಸ್ಥಿತಿಗೆ ತಲುಪಿಯೂ ತನ್ನನ್ನು ಅದೃಷ್ಟವಂತಳೆಂದು ಭಾವಿಸಿಕೊಳ್ಳುವ ಈಕೆಯ ಬಗ್ಗೆ ಸಹಾನುಭುತಿ ತಳೆಯುವುದರಲ್ಲೂ ಅರ್ಥವಿಲ್ಲ. ನಂತರ ಅವಳಿಗೆ ಅನಿಸಿತು, ದೂರದಲ್ಲಿ ಕುಳಿತು ಒಬ್ಬರ ವಿಚಾರದಲ್ಲಿ ಯಾವುದೇ ತೀರ್ಮಾನವನ್ನು ತಲುಪುವುದು ಕೂಡ ಹಿಂಸೆಯೇ; ಅತ್ಯಾಚಾರವೇ. ಅವರ ಬಗ್ಗೆ ಯೋಚಿಸಿ ತೀರ್ಮಾನಿಸುವುದು ಎಲ್ಲಿಯ ನ್ಯಾಯ? ಸಂಬಂಧದ ಎಳೆಗಳು ಎಲ್ಲಿ, ಹೇಗೆ ಮುರಿಯುತ್ತವೆಯೋ ಮೂರನೆಯವರಿಗೆ ಹೇಗೆ ತಿಳಿಯಬೇಕು? ಈ ಎಲ್ಲ ಆಟ ಸಂಬಂಧಗಳ ಹೊಂದಾಣಿಕೆಯುಲ್ಲಿದೆ, ಇಲ್ಲದೆ ಇದ್ದರೆ ಸೌಂದರ್ಯಾನುಭೂತಿಯೂ ಒಂದು ಭ್ರಮೆಯಾಗುತ್ತದೆ; ಮೃಗತೃಷ್ಣೆಯಾಗುತ್ತದೆ!

ನರೇಶ್ ರಾತ್ರಿ ತಡವಾಗಿ ಬಂದ. ಬಹಳ ದಣಿದಿದ್ದ ಕಾರ್ ಅಪಘಾತದಲ್ಲಿ ಸ್ನೇಹಿತನೊಬ್ಬ ಗಾಯಗೊಂಡಿದ್ದ. ಗಾಯಗಳು ಅಷ್ಟಾಗಿ ಆಗಿರಲಿಲ್ಲ. ಆದರೆ ಸ್ಕೂಟರ್‌ಗೆ ಸಾಕಷ್ಟು ಜಖಂ ಆಗಿತ್ತು. ಪೋಲೀಸ್ ಕೇಸ್ ವಾಪಸ್ ತಗಳೋದು, ಕೈ ಬೆಚ್ಚಗೆ ಮಾಡೋದು....ಇದರಲ್ಲಿ ಹೊತ್ತಾಗಿ ಹೋಗಿತ್ತು.

ಊಟ ಆದ ಮೇಲೆ ನರೇಶ್ ಮಲಗಿದ್ದ. ಶಾಲ್ಮಲಿ ಹತ್ತಿರ ಹೋಗಿ ಕುಳಿತಳು. ಮತ್ತು ನಿಧಾನವಾಗಿ ಅವನ ಕಾಲು ಒತ್ತಿದಳು. ದಣಿದು ಹೋಗಿದ್ದ ನರೇಶ್‌ಗೆ ಬೇಗೆ ನಿದ್ದೆ ಹತ್ತಿತ್ತು. ಶಾಲ್ಮಲಿಗೆ ನಿದ್ದೆ ಬರಲಿಲ್ಲ. ಹೊರಳಾಡಿ ಹೊರಳಾಡಿ ಮೈಯೆಲ್ಲ ನೋವು ಕಾಣಿಸಿಕೊಂಡಿತು. ಮೆಲ್ಲಗೆ ನರೇಶನನ್ನು ಅಲುಗಾಡಿಸಿದಳು. ನರೇಶ್ ಮೈ ಮರೆತು ಮಲಗಿದ್ದ. ಅಲ್ಲಿಂದೆದ್ದು ಶಾಲ್ಮಲಿ ಮಾಳಿಗೆ ಮೇಲೆ ಹೋದಳು. ಮಂಜು ಬೀಳತೊಡಗಿತ್ತು. ಚಳಿಯಿಂದ ನಡುಗಿದಳು. ಆದರೂ ಆ ಕತ್ತಲಲ್ಲಿ ಬಹಳ ಹೊತ್ತು ನಿಂತಿದ್ದಳು. ಮತ್ತೆ ನಿಂತು ನಿಂತು ಸಾಕಾಗಿ ಒಳಗೆ ಬಂದು ಮನಸ್ಸಿಲ್ಲದ ಮನಸ್ಸಿನಿಂದ ಬಾಗಿಲನ್ನು ಮುಚ್ಚಿ ಎರಡನೆ ಬಾರಿ ಹಾಸಿಗೆಯಲ್ಲಿ ಮೈ ಚಾಚಿದಳು.

ಸಾಕಷ್ಟು ರಾತ್ರಿಯಾಗಿತ್ತು. ಆದರೂ ಶಾಲ್ಮಲಿಗೆ ನಿದ್ದೆಯು ಹತ್ತಲಿಲ್ಲ ಕತ್ತಲನ್ನು ಗಾಭರಿಯಿಂದ ದೃಷ್ಟಿಸಿದಳು. ಧೈರ್ಯ ಸಾಲದೆ ಹಾಸಿಗೆ ಮೇಲೆ ಎದ್ದು ಕುಳಿತಳು. ಉಸಿರು ಕಟ್ಟುವಂತಾಗಿತ್ತು. ಇಷ್ಟವಿಲ್ಲದಿದ್ದರೂ ಇವಳು ನರೇಶನ ಬಾಹುಗಳ ಮೇಲೆ ಕೈ ಇರಿಸಿದಳು.

"ಏನಾಗಬೇಕು..... ನಿದ್ದೆ ಮಾಡಲು ಬಿಡು" ಬೇಸರದಿಂದ ಹೇಳಿದ.

"ಪ್ಲೀಸ್ ನರೇಶ್, ನನಗೆ ನಿದ್ದೇನೇ ಬರ್‍ತಿಲ್ಲ, ಏನಾದರೂ ಮಾತಾಡು" ಮನವೊಲಿಸುವಂತೆ ಕೇಳಿದಳು.

"ನನಗೆ ನೆಮ್ಮದಿ ಇಲ್ಲ..... ಮಲಗುವುದಕ್ಕೆ ಬಿಡು." ನರೇಶ್ ಹೇಳಿದ. "ಈ ಕಡೆ ತಿರುಗು" ಎನ್ನುತ್ತಾ ಅವನ ಭುಜ ಹಿಡಿದು ತನ್ನೆಡೆಗೆ ಎಳೆದುಕೊಂಡಳು.

"ಉಫ್!" ಎನ್ನುತ್ತಾ ನರೇಶ್ ಎದ್ದು ಕುಳಿತ. ಆ ಕತ್ತಲಲ್ಲೇ ಅವಳನ್ನು ದುರುಗುಟ್ಟಿ ನೋಡಿದ ಮತ್ತೆ ಕೈ ಮುಂದಕ್ಕೆ ಮಾಡಿ ಅವಳ ದೇಹದ ಮೇಲೆ ಕೈಯಾಡಿಸಿದ.

"ಇದೇನಿದು?" ಶಾಲ್ಮಲಿ ಬೆಚ್ಚಿದಳು.

"ಇಷ್ಟು ರಾತ್ರಿಯಲ್ಲಿ ಇನ್ನೇನು ಮಾತಾಡಬೇಕು" ನಿದ್ದೆ ಗಣ್ಣಿನಲ್ಲಿ ಮಾತನಾಡುತ್ತೆ ಶಾಲ್ಮಲಿಯ ಕೈಯನ್ನು ಹಿಡಿದುಕೊಂಡ. ಈಗ ನನಗೆ ಮನಸ್ಸಿಲ್ಲ ನರೇಶ್. ಏನಾದರೂ ಮಾತಾಡು! ನಾನು ಬಹಳ..... ನರೇಶನ ಈ ಅವತಾರದಿಂದ ಅವಳ ಮನಸ್ಸಿಗೆ ನೋವಾಗಿತ್ತು. ಭಯವೂ ಆಗಿತ್ತು.

'ಕೈ ಬಿಡು!' ನರೇಶನ ನಿಷ್ಠುರವಾದ ಮಾತಿನಿಂದ ಶಾಲ್ಮಲಿ ಹತಾಶಳಾದಳು. ಆತ್ಮ ಸಮರ್ಪಣೆ ಮಾಡಿಕೊಳ್ಳದೆ ಬೇರೆ ದಾರಿಯೇ ಕಾಣಲಿಲ್ಲ. ನರೇಶನ ಕೋಪಕ್ಕೆ ಕಂಪಿಸಿದಳು. ಯಾರಿಗೆ ಹೇಳುವುದು? ಏನೆಂದು ಹೇಳುವುದು, ಗಂಟಲು ಕಟ್ಟಿತು. ಮೈಯೆಲ್ಲ ಛಿದ್ರ ಛಿದ್ರವಾಗಿತ್ತು. ಕಣ್ಣ ತುದಿಯಿಂದ ಒಂದೇ ಸಮನೆ ತೊಟ್ಟಿಡುತ್ತಿದ್ದ ಕಂಬನಿ ಅವಳ ಕೂದಲನ್ನು, ದಿಂಬನ್ನು ತೋಯಿಸಿತು.

ಒಂದು ಕ್ಷಣವೂ ಬದುಕಲು ಸಾಧ್ಯವಿಲ್ಲ ನನಗೆ! ಎಷ್ಟು ಅಸಭ್ಯವರ್ತನೆ! ಎಂತಹ ದುರ್ವ್ಯವಹಾರ!.... ಇದೆಲ್ಲ ಯಾಕೇಂತ! ಸಿಟ್ಟಿನಿಂದ ಹುಚ್ಚಿಯಾದಳು. ಕಣ್ಣು ಕಿತ್ತು ಕತ್ತಲ ಬಾವಿಯೊಳಗೆ ತನ್ನನ್ನು ಯಾರೋ ಎಸೆದಂತಾಯಿತು. ವಿಚಿತ್ರ ನೋವಿನಿಂದ ಚಡಪಡಿಸಿದಳು. ಸಂಬಂಧಗಳನ್ನು, ಭಾವನೆಗಳನ್ನು ಈ ಮಟ್ಟದಲ್ಲಿ ಅವಮಾನಗೊಳಿಸುವುದೇ! ಇಷ್ಟೊಂದು ನಿರ್ದಯತೆಯೇ! ಎಲ್ಲಿಗೆ ಬಂದು ಸಿಕ್ಕಿಬಿದ್ದೆ!...... ಅಯ್ಯೋ! ನನ್ನ ಅದೃಷ್ಟ!' ಅಂತ......ಹೌದು ನನ್ನ ಅದೃಷ್ಟ! ಕಾರಾವಾಸ! ಯಾತನೆ, ಅವಮಾನ, ನೋವು ಚಡಪಡಿಕೆ. ಕಣ್ಣು ಕಾಣದ ಕತ್ತಲ ಬದುಕು.....! ಶಾಲ್ಮಲಿ ಇಡೀ ರಾತ್ರಿ ಗಾಯಗೊಂಡ ಮೃಗದಂತೆ ನೋವಿನಿಂದ ಚಡಪಡಿಸುತ್ತಾ, ಅಡ್ಡಾಡುತ್ತಾ ಒಳಗೊಳಗೇ ಕುದಿಯುತ್ತ ಕಳೆದಳು.

'ಮನೆ' ಶಬ್ದದ ಮಾಯಾಜಾಲ! ಇದರೊಂದಿಗೆ ಇಷ್ಟೊಂದು ಮೋಹ! ನನಗೆ......ನನಗೆ. ಮಾಳಿಗೆ ಮೇಲೆ ಬಂದು ಅತ್ತುಬಿಟ್ಟಳು.

ದಿನ ಕಳೆಯಿತು. ಶಾಲ್ಮಲಿಯ ಒಳಗಿದ್ದ ಹೆಣ್ಣು ಒಂದೊಂದು ಆಘಾತ ಬಿದ್ದಾಗಲೂ ಬಂಡೇಳುತ್ತಿದ್ದಳು. ಆದರೆ ನಿಜವಾದ ಶಾಲ್ಮಲಿ ಮರ್ಯಾದೆಯ ಮುಖವಾಡ ಧರಿಸಿ ಒಳಗನ್ನು ಹತ್ತಿಕ್ಕುತ್ತಲೇ ಇದ್ದಳು. ಎಷ್ಟೇ ಪ್ರಯತ್ನಿಸಿದರೂ ಪ್ರತಿಸಲವೂ ಹೂಂಕರಿಸಿ ಸೆಟೆದು ನಿಲ್ಲುತ್ತಿದ್ದಳು. ಶಾಲ್ಮಲಿಯ ಎರಡೂ ವ್ಯಕ್ತಿತ್ವಗಳು ಪರಸ್ಪರ ಒಂದರೊಡನೊಂದು ಮುಖಾ ಮುಖಿಯಾಗಿ, ಒಂದನ್ನು ಮತ್ತೊಂದು ಪರಾಜಿತಗೊಳಿಸಲು ಯೋಚಿಸುತ್ತಿದ್ದವು. ಸಂಘರ್ಷದ ಹೊಡೆತ ತಾಳಲಾರದೆ ದೈಹಿಕ ದೌರ್ಬಲ್ಯದಿಂದಾಗಿ ಪ್ರಜ್ಞಾಶೂನ್ಯಳಾಗಿ ಬಿದ್ದಿದ್ದಳು. ಕರಗುತ್ತಿದ್ದ ಆಕ್ರೋಶದ ಬೆಂಕಿ ಅವಳ ನರಗಳು ಸಿಡಿಯುವಂತೆ ಮಾಡುತ್ತಿತ್ತು. ಬಹಳ ಹೊತ್ತು ಹಾಗೆಯೇ ಮಲಗಿ ಯೋಚಿಸುತ್ತಿದ್ದಳು. ಮುಂದಿನ ಬದುಕಿನ ಬಗ್ಗೆ ಕಲ್ಪಿಸಿಕೊಳ್ಳುತ್ತಿದ್ದಳು. ಆತ್ಮಹತ್ಯೆಯ ಯೋಚನೆ ಬಂತು. ಅವಳ ಕ್ರೋಧ ಕ್ರಮೇಣ ಶಾಂತವಾಗತೊಡಗಿತು. ನರೇಶನ ಬಗ್ಗೆ ಯೋಚಿಸಿದಾಗ, ಬಿಕ್ಕಿ ಬಿಕ್ಕಿ ಅಳುತ್ತಿರುವ ಅಪ್ಪ ಅಮ್ಮರನ್ನು ನೆನಪಿಸಿಕೊಂಡಾಗ ಕ್ರೋಧ ಭುಗಿಲೇಳುತ್ತಿತ್ತು.

ಶಾಲ್ಮಲಿ ಈಗ ಉತ್ಸಾಹಗೊಂಡು ಕ್ರಿಯಾ ಪೂರ್ಣವಾದ ರೀತಿಯಲ್ಲಿ ಬದುಕಲು ಕಲಿತಳು. ತನ್ನೆಲ್ಲ ವಿಚಾರಶಕ್ತಿಯನ್ನು ಬಿಟ್ಟು ಕೊಟ್ಟು ಇದ್ದಕ್ಕಿದ್ದಂತೆ ಒಬ್ಬ ಸರಳ ಸಾಧಾರಣ ಗೃಹಿಣಿಯಂತೆ, ಅಡಿಗೆ, ಮನೆ, ಮಕ್ಕಳು, ಗಂಡ ಇತ್ಯಾದಿಗಳ ಹೊರತು ಬೇರೆ ಯೋಚನೆಗಳಿಗೆ ಅವಕಾಶವೇ ಇಲ್ಲದಂತಹ ಸೋಗಿನಲ್ಲಿ ಜೀವಿಸತೊಡಗಿದಳು.

ಹಣೆ ತುಂಬ ಕುಂಕುಮ ನರೇಶನ ಮಾತಿಗೆ ವಿಧೇಯತೆ, ಒಮ್ಮೊಮ್ಮೆ ಸ್ಫೋಟಿಸುವಂತೆ ಆದಾಗ ಎದ್ದು ಹೋಗಿ ದಪ್ಪ ದಪ್ಪ ಪುಸ್ತಕಗಳನ್ನು ಓದುವುದು. ಅದರೊಳಗೆ ಪೆನ್ಸಿಲ್‌ನಲ್ಲಿ ಕೆಲವು ವಾಕ್ಯಗಳನ್ನು ದೊಡ್ಡ ಅಕ್ಷರಗಳಲ್ಲಿ ಬರೆದು ಅಲ್ಲಿ ಇಲ್ಲಿ ನೇತು ಹಾಕುವುದು ಇವೇ ಅವಳ ಚಟುವಟಿಕೆಗಳಾದವು. ಮನೆಯಲ್ಲಿನ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ತನ್ನೊಳಗೆ ತಾನೇ ಮೌನವಾಗಿರುತ್ತಿದ್ದಳು. ಗೆಳತಿಯರ ಮನೆಗೆ ಹೋಗುತ್ತಿದ್ದಳು. ಇಡೀ ದಿವಸ ಮನೆಯ ಹೊರಗೇ ಇದ್ದು ಸಂಜೆ ಮನೆಗೆ ಹಿಂತಿರುಗುತ್ತಿದ್ದಳು. ಆದರೂ ತನ್ನ ಈ ಹುಚ್ಚು ತನವನ್ನು ನರೇಶನೊಂದಿಗೆ ಹಂಚಿಕೊಳ್ಳಲಾಗಲಿಲ್ಲ. ನರೇಶ್ ಮಾತನಾಡುವುದೇ ಕಡಿಮೆಯಾಗಿತ್ತು. ಶಾಲ್ಮಲಿಯೂ ಮಾತಾಡುವುದನ್ನು ಅವನಿಗಿಂತ ಕಡಿಮೆ ಮಾಡಿದಳು.

'ಶಾಲ್ಮಲಿಯಲ್ಲಿ ಕಾಣಿಸಿಕೊಳ್ಳುತ್ತಿದ್ದ ಈ ಪರಿವರ್ತನೆ ನರೇಶನಿಗೆ ತಿಳಿದಿರಬಹುದೇ? ಅಥವಾ ತಿಳಿದುಕೊಳ್ಳುವಷ್ಟು ಅವನಲ್ಲಿ ಸಾಮರ್ಥ್ಯವಿದೆಯೇ? ಶಾಲ್ಮಲಿಗೆ ತಿಳಿಯದು. ಆದರೆ ಒಂದಂತೂ ಸ್ಪಷ್ಟವಾಗಿತ್ತು. ಶಾಲ್ಮಲಿ ದಾರಿ ತಪ್ಪಿದಳು. ತನ್ನನ್ನು ತಾನು ಅರ್ಥ ಮಾಡಿಕೊಳ್ಳುವ ಪ್ರಯತ್ನದಲ್ಲಿ ಎಲ್ಲಿಯೋ ಕಳೆದು ಹೋಗಿದ್ದಳು. ಶಾಲ್ಮಲಿ ಕೇವಲ ಒಂದು ಹೆಸರು. ಅವಳೊಳಗಿನ ಹೆಣ್ಣು ರೂಪಗಳನ್ನು ಪತ್ತೆ ಹಚ್ಚುವ ಪ್ರಯತ್ನದಲ್ಲಿದ್ದಳು, ಶಾಲ್ಮಲಿ ಎನ್ನುವುದು ಶಾಲ್ಮಲಿಗೆ ಕೊಟ್ಟ ಹೆಸರು ಮಾತ್ರವೇ ಅಲ್ಲ, ಯಾರಿಗಾದರೂ ಕೊಟ್ಟ ಹೆಸರಾಗಬಹುದು, ತನ್ನ ಹೆಸರು ಶಾಲ್ಮಲಿ ಎಂದಲ್ಲದೆ ಸುಜಾತ ಸರಿತಾ, ಮಧು, ಕಲ್ಪನಾ - ಯಾವ ಹೆಸರಾದರೂ ಆಗಬಹುದು. ಆದ್ದರಿಂದ ಹೆಸರು ಮುಖ್ಯವಾಗುವುದೋ, ಮನುಷ್ಯ ಮುಖ್ಯವಾಗುತ್ತಾನೋ, ಮನುಷ್ಯನ ಸಾರ್ಥಕತೆಯಿಂದ ಮಾತ್ರವೇ ಹೆಸರಿಗೆ ಸಾರ್ಥಕತೆ ಬರುವುದಲ್ಲವೇ?

ಆಲೋಚನೆಗಳ ಏರಿಳಿತಗಳೊಂದಿಗೆ ತೇಲುತ್ತಾ, ಮುಳುಗುತ್ತಾ ದಡ ಸೇರಬೇಕೆಂಬ ಕಾತರತೆಯಲ್ಲಿ ಎದೆ ಹೊಡೆದುಕೊಳ್ಳತೊಡಗಿತು. ಒಮ್ಮೊಮ್ಮೆ ಒಬ್ಬಳೇ ಇದ್ದಾಗ ಅವಳಿಗೆ ಅನಿಸುತ್ತಿತ್ತು ಇದೆಲ್ಲ ಎಷ್ಟು ದಿನ, ಟ್ರೈನಿಂಗ್ ಮುಗಿದು ಪೋಸ್ಟಿಂಗ್ ಬರುವವರೆಗೆ. ಇದೊಂದಾದರೆ ಒಂದು ನಿಶ್ಚಿತ ನೆಲೆಯನ್ನು ತಲುಪುತ್ತೇನೆ. ಆಗ ಈ ಅಲೆದಾಟ ಯಾವುದೂ ಇರುವುದಿಲ್ಲ. ನರೇಶ ಕೂಡಾ ಸರಿ ಹೋಗುತ್ತಾನೆ..... ನರೇಶ ಸರಿಯಾಗಿಯೇ ಇದ್ದಾನೆ ಅಲ್ವೆ! ಮತ್ತೆ ಶಾಲ್ಮಲಿಯ ಆಲೋಚನೆಗಳು ಚದುರಿ ಹೋಗುತ್ತಿದ್ದವು. ಚದುರಿ ಹೋದುದನ್ನು ಒಟ್ಟಿಗೆ ಸಂಗ್ರಹಿಸಿ ಇಡಲು ಅವಕಾಶವಾದರೂ ಎಲ್ಲಿದೆ ಶಾಲ್ಮಲಿಗೆ?....ಇದು ಕಷ್ಟವೆನಿಸಿತು.

ರಜೆಗಳು ಮುಗಿದಿದ್ದವು. ಅವಳಿಗೆ ಹೊರಡಬೇಕಿತ್ತು. ಟ್ರೈನಿಂಗ್ ಸಮಯವನ್ನು ಚೆನ್ನಾಗಿಯೇ ಬಳಸಿಕೊಂಡಳು. ಎಷ್ಟೊಂದು ಸಲ ನರೇಶನೇ, ಶಾಲ್ಮಲಿಯನ್ನು ಭೇಟಿಯಾಗಲು ಮಸೂರಿಗೆ ಬರುತ್ತಿದ್ದ. ಆಗ ಮಸೂರಿ ಶಾಲ್ಮಲಿಯನ್ನು ಆಕರ್ಷಿಸಿ ಸೆರೆಹಿಡಿಯುತ್ತಿತ್ತು. ಪ್ರತಿ ಹದಿನೈದು ದಿವಸಕ್ಕೊಮ್ಮೆ ಅವರಿಗೆ 'ಹನಿಮೂನ್' ಅವಕಾಶ

ಸಿಗುತ್ತಿತ್ತು. ನರೇಶ ಶಾಲ್ಮಲಿಯರ ಏಕಾಂತ ರೋಚಕವಾಗಿರುತ್ತಿತ್ತು. ವಿವಾಹದ ನಂತರ ದಿಲ್ಲಿಯಲ್ಲಿ ಸಾಧ್ಯವಾಗದ ಅದೃಷ್ಟ ಇಂತಹ ದಿನಗಳಲ್ಲಿ ಅವರಿಬ್ಬರಿಗೆ ಲಭಿಸಿತ್ತು. ಇದ್ದ ಒಂದು ಕೊಠಡಿಯಲ್ಲಿ, ಸ್ನೇಹಿತರು, ಹಳ್ಳಿಯಿಂದ ಬರುವ ನೆಂಟರಿಷ್ಟರು ಒಂದಲ್ಲ ಒಂದು ಕಾರಣಕ್ಕಾಗಿ ನರೇಶನನ್ನು ಭೇಟಿಯಾಗುವುದಕ್ಕಾಗಿ ಬರುತ್ತಲೇ ಇದ್ದರು. ನರೇಶನ ಮನೆ ಮಠ ಸಂಸಾರ ನೋಡಬೇಕೆನ್ನುವ ಕುತೂಹಲದಿಂದ ಬರುವ ಜನ ಬಂಡಿಗಟ್ಟಲೆ ಸಾಮಾನುಗಳು ತುಂಬಿದ ಕೊಠಡಿ ನೋಡಿ ನಿರಾಶರಾಗುತ್ತಿದ್ದರು. ಎಲ್ಲರ ಸರದಿ ಮುಗಿದು, ಸ್ವಲ್ಪ ಅವಕಾಶ ಸಿಕ್ಕಿತು ಎಂದುಕೊಳ್ಳುವಷ್ಟರಲ್ಲಿ ಆಫೀಸಿನ ಚಿಂತೆ, ದಣಿವುಗಳು ಆಕ್ರಮಿಸಿ ಬಿಡುತ್ತಿದ್ದವು. ಆದರೆ ಇಲ್ಲಿ ಹೋಟೆಲಿನಲ್ಲಿ........ ಯಾರದೊ ತೊಂದರೆಯಿಲ್ಲ......... ಬರೀ ಏಕಾಂತವೇ! ಇಡೀ ದಿನ ಏಕಾಂತಕ್ಕೆ ಭಗ ತರುವಂತಹವರು ಯಾರೂ ಇರಲಿಲ್ಲ. ಆದರೆ ನರೇಶ್ ಇಂತಹ ಹಳ್ಳಿಗಳ ಕಡೆ ಬರುವುದಕ್ಕೆ ಇಷ್ಟ ಪಡುತ್ತಿರಲಿಲ್ಲ. ಅದಕ್ಕೆ ರಜೆಗಳು ಬಂದಾಗಲೆಲ್ಲ ತಾನೇ ದಿಲ್ಲಿಗೆ ಓಡಿ ಹೋಗುತ್ತಿದ್ದಳು.

ಶಾಲ್ಮಲಿಯ ಅಂತರಂಗದ ಶೂನ್ಯತೆ ಕಡಿಮೆಯಾಗಲಿಲ್ಲ. ಯಾವಾಗಲೋ ಒಮ್ಮೊಮ್ಮೆ ಮಾತ್ರ ಜೀವನದ ರಸನಿಮಿಷಗಳು ಅವಳಿಗೆ ಸಿಗುತ್ತಿದ್ದವು. ಅದನ್ನು ಅವಳು ಅನುಭವಿಸುತ್ತಿದ್ದಳು. ಜೀವನದ ಒಂದೊಂದು ಕ್ಷಣವನ್ನೂ ಅನುಭವಿಸಬೇಕೆನ್ನಿಸುತ್ತಿತ್ತು. ಆದರೆ, ಅದು ಏಕಮುಖವಾದಲ್ಲಿ! ನಿನ್ನಷ್ಟದಂತೆ ನಾನು ಬದುಕಬಲ್ಲೆನೇ ಹೊರತಾಗಿ, ನಿಮ್ಮಿಷ್ಟದಂತೆ ನನ್ನನ್ನು ಹೇಗೆ ಬೇಕಾದರೂ! ಉಹುಂ ಇದು ಶಾಲ್ಮಲಿಗೆ ಸಾಧ್ಯವಾಗದ ಸಂಗತಿ. ಶಾಲ್ಮಲಿ ಅಭಿವ್ಯಕ್ತಿಯನ್ನೇ ಜೀವನವೆಂದು ಗ್ರಹಿಸಿದರೆ, ನರೇಶ್ ಭಾವನೆಗಳನ್ನು ಮರೆಮಾಚುವದರಲ್ಲಿ ನಿಪುಣನಾಗಿದ್ದ. ಶಾಲ್ಮಲಿ ತನ್ನನ್ನು ಹತ್ತಿಕ್ಕಿಕೊಂಡು ನರೇಶನಿಗೆ ತಿಳಿಸಿ ಹೇಳಲು ಪ್ರಯತ್ನಿಸಿದ್ದಳು. ನಿನ ಕೈ ಹಿಡಿದ ಬಾಳ ಸಂಗಾತಿಯೊಬ್ಬಳು ನಿನ್ನೊಂದಿಗೆ ರಾಶಿಗಟ್ಟಲೆ ಮಾತಾಡಬೇಕೆಂಬ ಕನಸುಗಳನ್ನು ಹೊತ್ತು ಬಂದರೆ, ಅದನ್ನು ನಿರ್ಲಕ್ಷಿಸುವುದು ಯಾವ ನ್ಯಾಯ?...." ಮತ್ತೆನೊಂದು ಕೊಂಡು ತನ್ನೊಳ್ಳಗೆ ಯೋಚಿಸುತ್ತಿದ್ದಳು. ಮೌನವೇ ಅಭಿವ್ಯಕ್ತಿ ಅನ್ನುವುದಾದರೆ, ಮಾತು, ಭಾಷೆ ಇವೆಲ್ಲ ಮನುಷ್ಯನಿಗೆ ಏಕೆ ಬೇಕು? ಶಾಲ್ಮಲಿಯ ವಿಚಾರಗಳು ಏಕ ಪಕ್ಷೀಯವೆನಿಸಿದರೂ ಏಕ ಪಕ್ಷೀಯಫಾಗಿರಲಿಲ್ಲ. ವ್ಯಕ್ತಿತ್ವವೆನ್ನುವ ತೆಂಗಿನ ಕಾಯನ್ನು ಒಡೆದು ಅದರ ಅಂತರಂಗದ ತಿರುಳನ್ನು ನೋಡಬಯಸಿದಳು. ಅದರೊಳಗಿನ ನೀರನ್ನು ಸವಿಯ ಬಯಸಿದಳು. ಆದರೆ ನರೇಶ್ ಒಂದಿಷ್ಟಾದರೂ ತನ್ನನ್ನು ತೋರಿಸಿಕೊಳ್ಳಲಿಲ್ಲ. ಆಫೀಸು ಆಫೀಸಿನಲ್ಲಿನ ವ್ಯಕ್ತಿಗಳು – ಇಷ್ಟಕ್ಕೆ ಮಾತ್ರವೇ ಅವನ ಮಾತು, ಆಲೋಚನೆಗಳು ಸೀಮಿತವಾಗಿದ್ದವು. ಒಮ್ಮೊಮ್ಮೆ ಬೇಸರಗೊಂಡು ಶಾಲ್ಮಲಿಯೊಂದಿಗೆ ಹೇಳುತ್ತಿದ್ದ" ನಮಗೇನಾಗಬೇಕಿದೆ? ಯಾರ ಯಾರ ವಿಚಾರದಲ್ಲಿ ನೀನು ತಲೆಕೆಡಿಸಿಕೊಳ್ಳುತ್ತಿರುವುದು, ಯಾಕೇಂತ ಅರ್ಥವಾಗೊಲ್ಲ. ನಿನಗೋ ಯೋಚನೆ ಮಾಡೋಕೆ ಒಂದು ನೆಪ ಬೇಕಾಗಿತ್ತು ಅಷ್ಟೆ.

"ಏನು ಹೇಳ್ತೀದ್ದೀ ನರೇಶ್, ಪಾಪ......." ಶಾಲ್ಮಲಿ ಹೇಳಿದಳು. "ಸರಿ, ನನ್ನ ತಲೆಗೆ ಸ್ವಲ್ಪ ಎಣ್ಣೆ ಹಚ್ಚು! ಇವತ್ತು ರಜ. ಕಾಲು ಚಾಚಿ ಮಲಗಿ ಬಿಡ್ತೀನಿ ಬಿಸಿಲಲ್ಲಿ, ಸಂಜೆಗೆ ಸಿವಾಗಿ ಹೋಗೋಣ" ಶಾಲ್ಮಲಿಯ ಮಾತನ್ನು ಅಲ್ಲಿಗೆ ಕತ್ತರಿಸುತ್ತಾ ಹೇಳಿದ.

"ಏನು ಬೆಲೆಗಳು! ಬಡವರ ಮೇಲೆ ನಿಜವಾಗಿಯೂ ಇದು ನಡೆಯುವ ಅತ್ಯಾಚಾರ!.....ಎಣ್ಣೆಯಾದ ಬೆರಳುಗಳನ್ನು ನರೇಶನ ಕೂದಲುಗಳಲ್ಲಿ ಆಡಿಸುತ್ತಾ ಹೇಳಿ ಸುಮ್ಮನಾದಳು.

"ಪ್ಲೀಸ್, ಬೋರ್ ಮಾಡಬೇಡ. ನಿನ್ನ ಈ ವೇದಾಂತ ಕೇಳೋಕೆ ನನಗೆ ಮನಸ್ಸಿಲ್ಲ. ಒಳ್ಳೆ ಸಿಹಿ ನಿದ್ದೆ ಬರ್ತಿದೆ......ಹಾಂ. ಇಲ್ಲಿ, ಕೆಳಗೆ ಶಾಬಾಷ್?" ನರೇಶ ಗೆಲುವಿನಿಂದ ಹೇಳಿದ ಶಾಲ್ಮಲಿ ಸಿಟ್ಟುಗೊಂಡು ಸುಮ್ಮನಾದಳು.

ಪ್ರಪಂಚ.....! ವಿಸ್ತಾರವಾಗಿದೆ! ಹಲವಾರು ಘಟನೆಗಳಿಂದ ತುಂಬಿದೆ. ದಿನನಿತ್ಯ ಹುಟ್ಟಿಕೊಳ್ಳುವ ಹೊಸ ಪರಿವರ್ತನೆಗಳು!..... ಇವುಗಳ ಬಗ್ಗೆ ವಿಚಾರ ಮಾಡುವುದನ್ನು ಬಿಟ್ಟು ಬಿಡಬೇಕೆ? ಇವುಗಳ ಬಗ್ಗೆ, ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಲು ಬೇರೆ ಕಡೆಗೆ ಹೋಗಬೇಕೆ? ಹಲವು ಧಾರೆಗಳಿಂದ ಮಾತ್ರವೇ ಮನುಷ್ಯನ ಸಂತುಷ್ಟಿ ಸಾಧ್ಯವಾಗುವುದು. ಒಂದು ಧಾರೆಯಿಂದ ದೊರೆಯುವುದೇನು? ಅಸಮಾಧಾನದಿಂದ ಹೇಳಿದಳು. ಪ್ರತಿದಿನ ನನ್ನಪ್ಪ ನನಗೆ ಸಿಗೊಲ್ಲ ಈಗ ನನಗೆ ಮಾತಾಡಬೇಕು......ಆದರೆ"

"ಹೊರಗಡೆ ಹಾಸಿಗೆ ಹಾಕು! ನಾನು ಬರ್ತೀನಿ" – ಹೇಳುತ್ತ ಟವೆಲಿನಿಂದ ಹಣೆಮೇಲಿದ್ದ ಎಣ್ಣೆ ಒರೆಸಿಕೊಂಡು ಬಾಚಣಿಗೆಯಿಂದ ಕೂದಲನ್ನು ಬಾಚಿಕೊಂಡು ಹೊರಗಡೆ ಬಿಸಿಲಿನಲ್ಲಿ ಅಡಿಯಿಂದ ಮುಡಿವರೆಗೆ ಹೊದ್ದು ಮಲಗಿದ.

"ಮದುವೆ ಅನ್ನೋ ಪದಕ್ಕೆ ಈಗೇನಾದರೂ ಅರ್ಥ ಇದೆಯಾ?" ಶಾಲ್ಮಲಿ ಹೊರಟು ನಿಂತಾಗ, ಸಮಾಧಾನದಿಂದ ಕೇಳಿದ, ನರೇಶ್.

"ಯಾಕೆ? ಏನಾಯ್ತು" – ವಸ್ತುಗಳನ್ನು ನೀಟಾಗಿ ಜೋಡಿಸುತ್ತಿದ್ದ ಶಾಲ್ಮಲಿ ಕೇಳಿದಳು.

"ನನಗೆ ಯಾಕೋ ನೀನು ಕೆಲಸಕ್ಕೆ ಹೋಗೋದು ಒಂದು ರೀತಿ ಸರಿ ಅನಿಸಿದರೆ, ಮತ್ತೊಂದು ಸಲ ಬಹುಶಃ ತೊಂದರೆ ಆಗಬಹುದೇನೋ ಅನ್ನೋ ಅನುಮಾನ ಬರುತ್ತೆ......ನಾನೇನೋ ಸುಖ ಪಡಬೇಕೂಂತ ಮದುವೆಯಾದೆ. ಹೊರಗಡೆ ಊಟ ಮಾಡಿ ಸಾಕಾಗಿ ಹೋಗಿತ್ತು. ಈಗ ಯಾಕೋ ಮತ್ತೆ ನನ್ನ ಹಣೇಲಿ ಅದೇ ಬರೆದಿದೆಯೇನೋ ಅನ್ಸತ್ತೆ?" ನರೇಶ್ ಸ್ವಲ್ಪ ಸೆಡವಿನಿಂದಲೇ ಹೇಳಿದ.

"ಇನ್ನು ಕೆಲವೇ ದಿನ! ವರ್ಷ ಎಲ್ಲ ಕಳೆದಿದ್ದೇವೆ ಒಂದೆರಡು ದಿವಸ ಮಾತ್ರ ತಡ್ಕೊಳ್ಳಿ. ನರೇಶನ ಭುಜಗಳ ಮೇಲೆ ತಲೆಯಾನಿಸಿ ಹೇಳಿದಳು.

"ನನ್ನ ಸಲುವಾಗಿ ಇದನ್ನೆಲ್ಲ ಬಿಡೋಕೆ ಆಗೋದಿಲ್ವೆ?" ಪ್ರಾರ್ಥಿಸುವ ದನಿಯಲ್ಲಿ ಹೇಳಿದ.

"ಖಂಡಿತಾ ಇಲ್ಲ" – ಕೋಪದಿಂದ ನುಡಿದಳು ಶಾಲ್ಮಲಿ.

"ಯಾಕಿಲ್ಲ?" – ನರೇಶ್ ಪ್ರಶ್ನಿಸಿದ.

"ಇಷ್ಟು ದಿನ ಎಳೆದದ್ದಾಯಿತು ಮಧ್ಯದಲ್ಲಿ ಹೇಗೆ ಬಿಡಲಿ? ಇಂತಹ ಕೆಲಸ ಎಲ್ಲರಿಗೂ ಸಿಗೋದಿಲ್ಲ" ಶಾಲ್ಮಲಿ ಪ್ರಯಾಣಕ್ಕೆಂದು ಹೊಂದಿಸಿಕೊಳ್ಳುತ್ತಿದ್ದ ಕೆಲಸ ಬಿಟ್ಟು ನರೇಶನ ಬಳಿ ಬಂದು ಕುಳಿತಳು.

"ಕೆಲಸ ಮಾಡೋ ಅಗತ್ಯ ನಿನಗೇನಿದೆ? ನಾನು ದುಡಿದುತರ್ತೀನಿ. ತಂದದ್ದೆಲ್ಲವನ್ನು ನಿನ್ನ ಕೈಗೇ ಕೊಡ್ತೀನಿ" – ಭಾರವಾದ ದನಿಯಲ್ಲಿ ಹೇಳಿದ.

"ಯಾಕೆ, ಸಂಪಾದನೆ ಮಾಡುವುದರಲ್ಲಿ ನಾನು ನಿಮಗೆ ಸಹಕರಿಸಬಾರದೇನು?" ಶಾಲ್ಮಲಿ ಕೇಳಿದಳು.

"ನೀನು ಮನೇಲಿದ್ದು, ಮನೆ ಮತ್ತು ನನ್ನನ್ನು ನೋಡಿಕೋ! ನನ್ನ ಮಟ್ಟಿಗೆ ಇಷ್ಟು ಸಹಾಯ ಮಾಡು, ಆಮೇಲೆ ನೋಡು, ಆಕಾಶದಿಂದ ನಕ್ಷತ್ರಗಳನ್ನೇ ತಂದು ನಿನ್ನ ಮುಂದೆ ಸುರೀತೀನಿ."

"ಓಹ್ ನರೇಶ್!" ಶಾಲ್ಮಲಿ ಮೊಟ್ಟ ಮೊದಲ ಬಾರಿಗೆ ನರೇಶ ಇಷ್ಟೊಂದು ಭಾವುಕತೆಯಿಂದ ಮಾತನಾಡಿದ್ದನ್ನು ನೋಡಿ ಮೈ ಮರೆಯುವಂತಾಯಿತು..... ಮತ್ತೆ ಚೇತರಿಸಿಕೊಂಡು, ಮನಸ್ಸಿನಲ್ಲಿ ಹೇಳಿಕೊಂಡಳು. ಅವನು ಹೀಗೆ ಹೇಳುತ್ತಿರುವ ಸಂದರ್ಭ ಎಂಥದು! ಅವಳು ಏನನ್ನಾದರೂ ಬಿಡಲು ಸಿದ್ಧ, ಆದರೆ.......

"ನೀನು ಹೇಳೋದೇನೋ ಸರಿಯಾಗಿದೆ, ಶಾಲೂ. ಆದರೆ ನನಗೆ ಮೊದಲಿನ ತರಹಾನೇ ಬದುಕೋದು ಬೇಕಾಗಿಲ್ಲ. ನನ್ನ ಬಟ್ಟೆ ನಾನೇ ಒಗೆಯೋದು, ಇಸ್ತ್ರಿ ಮಾಡೋದು, ಗುಡಿಸೋದು, ಸಾರಿಸುವುದು......ನನಗೆ ಸಾಕಾಗಿ ಬಿಡುತ್ತೆ! ಈ ಮನೆ ಜವಾಬ್ದಾರಿ ನೀನೇ ವಹಿಸಿಕೋ" – ಬೇಸರದಿಂದ ಹೇಳಿದ.

"ಕೇಳು ನರೇಶ್! ನಾನು ನಿಜ ಹೇಳ್ತಿದ್ದೀನಿ. ಇಷ್ಟೊಂದೆಲ್ಲ ಓದಿ ಕೇವಲ ಮನೆ ಕೆಲಸಗಳನ್ನು ಮಾಡುತ್ತ ಬದುಕೋದು ನನಗೂ ಸಾಧ್ಯವಿಲ್ಲ. ನನ್ನ ಚಿಂತೆಯನ್ನು ನನ್ನ ಅಸಹಾಯಕತೆಯನ್ನು ಅರ್ಥ ಮಾಡಿಕೋ! – ಶಾಲ್ಮಲಿ ತಿಳಿಸಿ ಹೇಳಿದಳು.

"ಅರ್ಥ ಆಗುತ್ತೆ. ಆದರೆ ಮನಸ್ಸು ಕೇಳೋಲ್ಲ" ನರೇಶ್ ಹೇಳಿ ಸುಮ್ಮನಾದ.

ಶಾಲ್ಮಲಿ ಮಂತ್ರಮುಗ್ಧಳಾಗಿ ಅವನನ್ನೇ ನೋಡುತ್ತಿದ್ದಳು. ಅವಳ ಸಂತೋಷಕ್ಕೆ ಎಣೆಯಿಲ್ಲದ್ದಾಯಿತು. ಪ್ರೀತಿಯಿಂದ ನರೇಶನನ್ನು ದಿಟ್ಟಿಸಿದಳು. ಮೊದಲ ಬಾರಿಗೆ

ನರೇಶನ ಪ್ರತಿಯಾಗಿ ಅವಳ ಹೃದಯದಲ್ಲಿ ಪ್ರೀತಿ ಮೂಡಿತು. ಒಂದು ಮಗು ಹಸಿವು, ತೃಷೆ, ವಿಶ್ರಾಂತಿಗಾಗಿ ತರಾಯಿಯ ಮೊರೆ ಹೋಗಲು ಬಯಸುವಂತೆ, ನರೇಶನ ಬಯಕೆಯಾಗಿತ್ತು. ಅದು ನಿಜವೂ ಆಗಿತ್ತು. ಹೊರಗಡೆಯಿಂದ ಹೆಣ್ಣು ಎಷ್ಟೇ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಂಡರೂ ಅಂತರಂಗದಲ್ಲಿ ಮಾತ್ರ ಆಕೆ ತಾಯಿಯೇ! ರಕ್ತಕ್ಕೆ ಬದಲಾಗಿ ಅವಳ ನರನಾಡಿಗಳಲ್ಲಿ ಮಮತೆಯ ಕೆಂಪು ಹರಿಯಿತು. ಅವಳ ಈ ಸ್ವಭಾವವೇ ಬೇರೆಯವರ ವಿಚಾರದಲ್ಲಿ ಇಷ್ಟೊಂದು ಸಹಾನುಭೂತಿಗೆ ಕಾರಣವಾಗಿತ್ತು. ಬಹಳ ಹೊತ್ತಿನವರೆಗೆ ಶಾಲ್ಮಲಿ ನರೇಶನ ತಲೆಯನ್ನು ತನ್ನ ಮಡಿಲಲ್ಲಿರಿಸಿಕೊಂಡು ನೇವರಿಸುತ್ತಿದ್ದಳು. ಯೋಚಿಸುತ್ತಿದ್ದಳು?..... ಒಳಗೊಳಗೆ ಹಿಗ್ಗುತ್ತಿದ್ದಳು.

ಈ ಬಾರಿ ಹೊರಟು ಟ್ರೇನ್ ಹತ್ತಿ ಕುಳಿತಾಗ ಎಲ್ಲ ನೆನಪಾಯಿತು. ಕಳಿಸಿ ಕೊಡುವಾಗ ಅಮ್ಮ ಏನನ್ನೋ ಕಳೆದು ಕೊಂಡವಳಂತೆ ಮಂಕಾಗಿ ಹೋದದ್ದು. ಅತ್ತೆ ಮನೆಗೆ ಬೀಳ್ಕೊಡುವಾಗ ಅತ್ತದ್ದು. ಮನೆಯಿಂದ ಹೊರಗೆ ಹೋಗುತ್ತಿರುವುದು, ಇನ್ನೊಮ್ಮೆ ಬರುವುದೇ ಇಲ್ಲವೆಂದು ಭಾವಿಸುವಂತೆ. ಅಮ್ಮನ ಇಂತಹ ಭಾವುಕತೆಗೆ ಅವಳು ಬೇಸರಗೊಂಡಳು. ಆದರೆ ಈಗ ತಾನು ಹೊರಡುತ್ತಿರುವಾಗ ಅದೇ ಭಾವನೆಗಳು. ಅಮ್ಮನ ಭಾವನೆಗಳು ಅಂದು ಹುಚ್ಚುತನವೆನಿಸಿದ್ದು, ಈಗ ತಾನೇ ಅಂತಹ ಭಾವನೆಗಳಿಗೆ ಬಲಿಯಾಗಿದ್ದಾಳೆ. ತಾನು ಹೊರಡುವಾಗ ಅಮ್ಮ ತನಗೆ ಏನೆಲ್ಲ ಹೇಳುತ್ತಿದ್ದಳು. ಶಾಲ್ಮಲಿ ನರೇಶನಿಗೆ ಅದೇ ರೀತಿ ಸೂಚನೆ ಸಲಹೆಗಲನ್ನು ಕೊಡುತಿದ್ದಳು. 'ಯಾವುದನ್ನು ಎಲ್ಲಿ ಇಟ್ಟಿದ್ದೀನಿ, ಅವನು ಏನು ಮಾಡಬೇಕು, ಹೇಗೆ ಮಾಡಬೇಕು, ಬೇಜಾರು ಮಾಡಿಕೊಳ್ಳಬಾರದು, ಅದೂ ಇದೂಂತ ಸಾವಿರ ಸೂಚನೆಗಳನ್ನು ನೀಡುತ್ತಿದ್ದಳು. ತಾನು ಈ ಬಾರಿ ಬೇಗ ಬಂದು ಬಿಡುತ್ತೇನೆಂದು ಹೇಳಿದಳು, ಆರೋಗ್ಯದ ಕಡೆ ಎಚ್ಚರಿಕೆ ವಹಿಸಬೇಕೆಂದು ತಾಕೀತು ಮಾಡಿ ಅವನಿಗೆ ಸಮಾಧಾನ, ಭರವಸೆಗಳನ್ನು ನೀಡಿದಳು.

ಪ್ರಪಂಚದಲ್ಲಿ ಎಷ್ಟೊಂದು ಜನ! ಈ ಜನರ ಮಧ್ಯೆ ನಮ್ಮನ್ನು ನಾವು ಗುರುತಿಸಿಕೊಳ್ಳುವುದು, ತಮ್ಮ ಮನೆ, ತಮ್ಮವರು ಎನ್ನುವ ಸಂಬಂಧಗಳಿಂದಲೇ ಅಲ್ಲವೇ!

ಹಾಗಾಗಿ ನರೇಶನನ್ನು ಪದೆ ಪದೇ ಹೀಗೆ ಒಂಟಿಯಾಗಿ ಬಿಡಬಾರದು, ನರೇಶ ಹೇಳಿದ್ದು ಸರಿ ಎನಿಸಿ ದಾರಿ ಉದ್ದಕ್ಕೂ ಆತ್ಮ ವಿಶ್ಲೇಷಣೆಯಲ್ಲಿ ತೊಡಗಿದಳು. ದೀರ್ಘ ಪ್ರಯಾಣದ ಅರಿವನ್ನೇ ಮರೆತಳು.

* * *

ಕೆಲಸ, ಬರೀ ಕೆಲಸ ಹೊಸ ಸವಾಲುಗಲು, ಹೊಸ ಪರಿಸರ. ಶಾಲ್ಮಲಿ ಎಲ್ಲವನ್ನು ಮರೆತು ಸಮಸ್ಯೆಗಳಲ್ಲಿ ತೊಡಗಿಸಿಕೊಂಡಳು. ಜಗತ್ತನ್ನು ನೋಡುವ, ಅರ್ಥಮಾಡಿಕೊಳ್ಳುವ ದೃಷ್ಟಿ ಇದ್ದಕ್ಕಿದ್ದಂತೆ ಬದಲಾಗಿತ್ತು. ಇದು ಇತಿಹಾಸ, ಭೂಗೋಳದ ಪುಸ್ತಕವಲ್ಲ, ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ಬಣ್ಣಗಳನ್ನು ತುಂಬಿ ಊಹಿಸಿಕೊಳ್ಳುವುದಕ್ಕೆ. ಜನಸಂಖ್ಯೆ, ಬೆಲೆ, ಅಕ್ಷಾಂಶ, ಶೀತಾಂಶ, ಉಷ್ಣಾಂಶಗಳನ್ನು ತಿಳಿಯುವುದಕ್ಕೆ. ಗತಕಾಲದ ಘಟನೆಗಳನ್ನು ಸ್ಮರಿಸಿಕೊಳ್ಳುವುದಕ್ಕೆ. ಜೀವಂತ ವ್ಯಕ್ತಿಗಳ ನಡುವೆ ಬದುಕಿದ್ದು ಜೀವಂತ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದಿಲ್ಲ. ಮುಂದಿನ ಯೋಜನೆಗಳು ನಿಂತಿರುವುದೇ ಇದರ ಮೇಲೆ. ದೇಶದ ಪ್ರಗತಿ, ಉನ್ನತಿಗಳು ಇವುಗಳ ಮೇಲೆ ನಿಂತಿದೆ.

ಈ ಮಧ್ಯೆ ನರೇಶನಿಂದ ಹಲವು ಪತ್ರಗಳು ಬಂದವು. ಪ್ರತಿಯೊಂದರಲ್ಲಿಯೂ ಅದೇ ಹಳೇ ಹಾಡು! ಓದಿ ಓದಿ ಶಾಲ್ಮಲಿಗೆ ಸಾಕೆನಿಸಿತ್ತು. ಓದಿದ್ದು, ಅರ್ಥ ಮಾಡಿಕೊಂಡದ್ದು ಎಲ್ಲ ಮುಗಿದಿತ್ತು. ಪ್ರತಿಸಲವೂ ಪುನರಾವರ್ತನೆಯಾಗುತ್ತಿದ್ದ ನರೇಶನ ಮಾತುಗಳು ಆಸಕ್ತಿಯನ್ನೇ ಹಾಳುಮಾಡಿತು. ಮಾದಕತೆಯ ಗುಂಗನ್ನು ಮುಗಿಸಿಬಿಟ್ಟಿತ್ತು. ನರೇಶನಿಗೆ ತಿಳಿಸಿ ಬರೆಯೋಣವೆನಿಸಿತು."

ಒಂದು ದಿನ ನರೇಶನಿಗೆ ಪತ್ರ ಬರೆಯಬೇಕೆನಿಸಿ ಬರೆದಳು. ನೋಡು, ಇಲ್ಲಿ ಏನೆಲ್ಲ ಇದೆ, ಆದರೆ ನಮಗೆ ಪಟ್ಟಣದಲ್ಲಿ ಇರುವವರಿಗೆ ಇದರ ಎಚ್ಚರವೂ ಇಲ್ಲ. ಯೋಜನೆಗಳು, ಹೊಸದಾಗಿ ನಡೆಯುವ ಕಾರ್ಯಕ್ರಮಗಳು, ಇವೆಲ್ಲ ಮುಖ್ಯವಾಗಿ ಯಾರಿಗೆ? ಯಾರು ಇದರಿಂದ ಲಾಭ ಪಡೆಯುವವರು? ಗೊತ್ತಿದೆಯೇನು! ಯಾವುದೇ ಪ್ರತಿಬಂಧಕಗಳು, ಕಾನೂನುಗಳು ಸಮಾಜದಲ್ಲಿ ವ್ಯಾಪಿಸಿರುವ ಭ್ರಷ್ಟಾಚಾರವನ್ನು ದೂರ ಮಾಡಲಾರವು. ಸಾಧ್ಯವಿಲ್ಲ. ನಾವು ನಮ್ಮನ್ನು ಶೋಧಿಸಿಕೊಳ್ಳಬೇಕು. ನಮ್ಮನ್ನು ನಾವು ಅರ್ಥಮಾಡಿಕೊಳ್ಳಬೇಕು. ಇಲ್ಲದಿದ್ದ ಪಕ್ಷದಲ್ಲಿ ಈ ಕಾಗದಗಳಲ್ಲಿ ಬರೆದಿರುವ ದೊಡ್ಡ ದೊಡ್ಡ ಮಾತುಗಳು, ನಾಯಕರ ಬಾಯಿಂದ ಬರುವ ಆಶ್ವಾಸನೆಗಳು ಅರ್ಥಹೀನವಾಗಿ ಮಾತ್ರ ಉಳಿಯುತ್ತವೆ.' ಎಲ್ಲಾ ಬರೆದ ಮೇಲೆ ಅದನ್ನು ಪೋಸ್ಟ್‌ಗೆ ಹಾಕದೆ ನರೇಶ್‌ನಿಗೆ, ಇದೆಲ್ಲಾ ಅರ್ಥಮಾಡಿಕೊಳ್ಳಲಾಗದ್ದು ಎನಿಸಿ ಬರೆದ ಪತ್ರವನ್ನು ತುಂಡು ತುಂಡು ಮಾಡಿ ಎಸೆದಳು. ಅರ್ಥಪೂರ್ಣವಾದ ಈ ಮಾತುಗಳಿಂದ ಅವನಿಗೆ ಬೇಸರವೇ ಆಗುತ್ತದೆ.

ಎರಡು ತಿಂಗಳ ನಂತರ ಶಾಲ್ಮಲಿ ಹಿಂತಿರುಗಿದಳು. ಪ್ರೀತಿಯಿಂದ ತುಂಬಿದ ನರೇಶನ ಪ್ರಾರ್ಥನೆ, ಈಗ ಪ್ರಾರ್ಥನೆಯಾಗಿ ಉಳಿಯದೆ ಉಗ್ರ ರೂಪವನ್ನು ತಳೆದಿತ್ತು. ಅವನ ಮಾತುಗಳು ಈಗ ಮೀರಲಾಗದ, ದಿಕ್ಕರಿಸಲಾಗದ ಆಜ್ಞೆಗಳಾಗಿದ್ದವು. ಇವನ ಈ ವಿಲಕ್ಷಣ ಹಠವನ್ನು ಅಪ್ಪನ ಮುಂದೆ ಹೇಳಿಕೊಂಡಳು. ಇಡೀ ಸಂಜೆ ಅಪ್ಪ ನರೇಶನ ಜೊತೆ ಕುಳಿತು ಮಾತಾಡಿದರು. ಮಾತು ಮುಗಿದು ಎದ್ದು ಬಂದಾಗ ಶಾಲ್ಮಲಿಯೊಂದಿಗೆ ಕೇವಲ ಇಷ್ಟೇ ಹೇಳಿದರು, ನಿನಗೆ ಗೊತ್ತಿದ್ದರೆ ನಾನು ನಿನ್ನನ್ನು

ಇಲ್ಲಿಗೆ ಕೊಡ್ತಿರಲಿಲ್ಲ ಶಾಲೂ. ದೊಡ್ಡವರು ಸರಿಯಾಗಿಯೇ ಹೇಳಿದ್ದಾರೆ. ಮನೆ ಮಠ ಎಲ್ಲಾ ವಿಚಾರಿಸಿ ಆದ ಮೇಲೆ ಹುಡುಗನ ವಂಶ ಎಂಥದ್ದು ಅನ್ನೋದನ್ನ ಸ್ವಲ್ಪ ಪರೀಕ್ಷಿಸಬೇಕು, ಅದೂ ಕೂಡ ಮುಖ್ಯ ಆಗುತ್ತೆ' ಅಂತ. ನರೇಶನ ಸಂಸ್ಕಾರಗಳು ನಿನಗಿಂತ ಭಿನ್ನ. ಅದು ಅವನ ಅಪರಾಧ ಅಲ್ಲ, ನಿನ್ನದೂ ಅಲ್ಲ. ಚಿಂತೆ ಮಾಡಬೇಕಾದ್ದು ನಾನು. ಓದಿದ ಹುಡುಗ ಅನ್ನೋ ಒಂದೇ ಕಾರಣದಿಂದ ಬೇರೆ ಯಾವುದರ ಕಡೆಗೂ ಹೆಚ್ಚು ಗಮನ ಕೊಡಲಿಲ್ಲ. ನಿಮ್ಮಿಬ್ಬರ ವಿಚಾರಧಾರೆಗಳು ಬೇರೆ ಬೇರೆ, ಎರಡು ಭಿನ್ನ ದಡಗಳಿದ್ದಂತೆ. ಪ್ರವಾಹದ ಜೊತೆ ಜೊತೆಯಲ್ಲಿಯೇ ಸಾಗಬೇಕಾಗಿದೆ! ನೀನು ತಿಳಿದವಳು ಮಗು, ಈ ಪ್ರವಾಹವನ್ನು ನಿರ್ವಹಿಸಬಲ್ಲೆ ಏಕಮುಖ ಪ್ರವಾಹದೊಂದಿಗೆ ಸಾಗುವುದು ಸಾಮಾನ್ಯ ವಿಷಯ. ಆದರೆ ಪ್ರವಾಹದ ವಿರುದ್ಧ ದಿಕ್ಕಿನಲ್ಲಿ ನಿಂತು ಯಾರೊಂದಿಗಾದರೂ ಸಾಗುವುದೆಂದರೆ ಬಹಳ ಕಷ್ಟದ ಕೆಲಸ. ನನಗೆ ನಂಬಿಕೆ ಇದೆ. ನೀನು ಯಾವಾಗಲೂ ನಡೆದುಕೊಳ್ಳುವ ಹಾಗೆ ಕಷ್ಟದ ಹಾದಿಯನ್ನೇ ಆಯ್ಕೆ ಮಾಡಿಕೊಳ್ಳುತ್ತೀ. ನಿನ್ನ ತಂದೆಯಾಗಿ ನಾನು ಕರ್ತವ್ಯ ನಿರ್ವಹಿಸಿದ್ದೇನೆ."

–ಶಾಲ್ಮಲಿಯ ಹೆಗಲ ಮೇಲೆ ಜೀವನದ ಹೊರೆ ಹೊರೆಸಿಬಿಟ್ಟರು.

ಶಾಲ್ಮಲಿಗೆ ಎಲ್ಲ ಅರ್ಥವಾಗಿತ್ತು. ಅವಳೊಬ್ಬಳೇ ಜೀವನ ಸಂಘರ್ಷವನ್ನು ಎದುರಿಸಲು ಸಿದ್ಧಳಾದಳು. ಈ ಒಂಟಿತನ ಅವಳಲ್ಲಿ ವಿಶ್ವಾಸವನ್ನು, ಚದುರಿದ ವ್ಯಕ್ತಿತ್ವಕ್ಕೆ ಒಂದು ಐಕ್ಯತೆಯನ್ನು ತಂದು ನೀಡಿತು. ಒಬ್ಬಳೇ ತೀರ್ಮಾನಗಳನ್ನು ತೆಗೆದುಕೊಳ್ಳಬೇಕಿತ್ತು.

"ಒಂದು ವೇಳೆ ನಾನು ಮದುವೇನೇ ಆಗದಿದ್ದರೆ!.......ಮದುವೆ ಆಗದಿದ್ದರೆ ಇಂತಹ ಅನುಭವಗಳಿಗೆ ಅವಕಾಶ ಎಲ್ಲಿತ್ತು! ಮದುವೆಯಾಗುವ ಹಕ್ಕನ್ನು ನಾನೇಕೆ ಬಿಡಲಿ? ತನ್ನ ಜೀವನವನ್ನು ರೂಪಿಸಿಕೊಳ್ಳಲು ಅವಳಿಗೆ ಈಗಲೂ ಸಾಧ್ಯವಿದೆ....ಆದದ್ದು ಆಗಿ ಹೋಯಿತು ಶಾಲ್ಮಲಿ ಸಮ್ಮತಿಸಿದಳು.

ಹೊರಡುವ ದಿನ ಮತ್ತೆ ಅದೇ ಪ್ರಶ್ನೆ. ಅದು ಕೊಡುವ ಉತ್ತರ ಜೀವನ ಪ್ರವಾಹದ ದಿಕ್ಕನ್ನೇ ಬದಲಿಸಬಹುದಿತ್ತು. ಸ್ವೀಕಾರವೋ, ತಿರಸ್ಕಾರವೋ, ಯಾವುದನ್ನಾದರೂ ಎದುರಿಸಬೇಕಿತ್ತು. ರಾತ್ರಿ ನರೇಶ್ ಊಟವಾದ ಮೇಲೆ ಕೇಳಿದ.

"ಶಾಲೂ, ಏನು ಯೋಚನೆ ಮಾಡಿದ್ದಿ?"

"ಏನೂ ಇಲ್ಲ" – ಸಹಜವಾಗಿಯೇ ಉತ್ತರಿಸಿದಳು.

"ನೋಡು, ನನ್ನ ಕಡೆ ಗಮನ ಕೊಡಲೇಬೇಕು" ಅಸಮಾಧಾನದಿಂದ ಹೇಳಿದ.

"ಸ್ವಲ್ಪ ದಿನ ಅಮ್ಮನನ್ನು ಕರೆಸಿಕೊಂಡರೆ ಹೇಗೆ?" ಶಾಲ್ಮಲಿ ಸಲಹೆ ನೀಡಿದಳು.

"ಅಂದ್ರೆ" ನೀನು ಮತ್ತೆ ವಾಪಸ್ ಹೋಗ್ತೀ – ಕ್ರೋಧದಿಂದ ಕಂಪಿಸಿದ.

"ಅರ್ಧದಲ್ಲಿ ಬಿಡೋದು ಸರಿ ಅಲ್ಲ ಅಂತ ಅನ್ನಿಸುತ್ತೆ. ದಯವಿಟ್ಟು ಕ್ಷಮಿಸು ನರೇಶ್! ಎಷ್ಟು ದೂರ ಮುಂದುವರೆದಿದ್ದೇನೇಂದ್ರೆ, ವಾಪಸ್ ಬರೋಕೆ ಸಾಧ್ಯವೇ ಇಲ್ಲ. ನೀನೇ ಸ್ವಲ್ಪ ಮುಂದೆ ಬಂದು ನನ್ನ ಜೊತೆ ಹೆಜ್ಜೆ ಹಾಕು! ನಾವು ನಿಲ್ಲಬಾರದು, ಮುಂದಕ್ಕೆ ಹೋಗುತ್ತಲೇ ಇರಬೇಕು" ಶಾಲ್ಮಲಿ ನರೇಶನ ಕೈ ಹಿಡಿದುಕೊಂಡಳು.

"ನೀವು ಹೆಂಗಸರು, ನಿಮ್ಮನ್ನು ಏನೂಂತ ತಿಳ್ಕೊಂಡಿದ್ದೀರೊ! ಹೊರಗಡೆ ಹೋಗದಿದ್ದರೆ, ಕೆಲಸ ಮಾಡದಿದ್ದರೆ ಪ್ರಪಂಚ ಮುಳುಗಿ ಹೋಗುತ್ತೇನು!......ನೋಡು ಒಂದು ತಿಳಿದುಕೋ. ನಿನ್ನ ಈ ನಿರ್ಣಯ ನನ್ನ ಭಾವನೆಗಳಿಗೆ ಸಂಬಂಧಿಸಿದ್ದಲ್ಲ; ಮನೆಗೆ ಸಂಬಂಧಿಸಿದ್ದು" – ಕೈ ಕೊಡವಿಕೊಂಡು ಹೊರಟು ನಿಂತ.

"ನನಗೆ ಗೊತ್ತಿದೆ, ನಂಬಿಕೇನೂ ಇದೆ, ಈ ಮನೆ ಭದ್ರವಾದ, ದೃಢವಾದ ನೆಲದ ಮೇಲೆ ನಿಂತಿರಬೇಕು ಅನ್ನೋದು". ಹೇಳುತ್ತ ಶಾಲ್ಮಲಿ ಸಾಮಾನುಗಳನ್ನು ಇಡತೊಡಗಿದಳು. ಮೇಲೆ ಬರುತ್ತಿದ್ದ ನರೇಶನನ್ನು ತಡೆಯಲಿಲ್ಲ. ಮನಸ್ಸಿನಲ್ಲಿಯೇ ಯೋಚಿಸಿದಳು. ನನ್ನ ಗಂಡನಿಗೆ ಮೂಡುವ ಸೂರ್ಯನನ್ನು ನಾನು ಕಾಣಿಸದಿದ್ದರೆ, ಬೇರೆ ಯಾರು ಕಾಣಿಸುತ್ತಾರೆ".....

ದೀರ್ಘ ಅನ್ವೇಷಣೆಯ ನಂತರ, ಶಾಲ್ಮಲಿಗೆ ತನ್ನೊಳಗಿನ ಹೆಣ್ಣು ಅರ್ಥವಾದಳು. ಅವಳಿಗೆ ಏನು ಬೇಕಾಗಿದೆ ಅನ್ನುವುದನ್ನು ಗುರುತಿಸಿದ ನಂತರ ಜೀವನದ ಹಾದಿಯಲ್ಲಿ ಆತ್ಮವಿಶ್ವಾಸದೊಂದಿಗೆ ನಡೆದಳು. ಅವಳಿಗೆ ನಂಬಿಕೆಯಿತ್ತು. ನರೇಶ ಕೂಡಾ ಭಾವನಾ ಜಗತ್ತಿನಿಂದ ಹೊರಗೆ ಬಂದು ಜೀವನದ ದೃಢವಾದ ನೆಲದ ಮೇಲೆ ಹೆಜ್ಜೆಯೊಂದಿಗೆ ಹೆಜ್ಜೆ ಹಾಕುವ ಸಾಮರ್ಥ್ಯವನ್ನು ಕಂಡುಕೊಳ್ಳುತ್ತಾನೆ ಎಂದು. ಅವನಾಗಿ ಅವನು ಕಂಡುಕೊಳ್ಳಲಿಲ್ಲವಾದರೆ ತಾನೇ ಅವನ ಕೈಯನ್ನು ಗಟ್ಟಿಯಾಗಿ ಹಿಡಿದರೆ ಆಯಿತು. ಜೊತೆಯಾಗಿಯೇ ಬಿಡುತ್ತಾನೆ. ಇಷ್ಟವಿರಲಿ, ಇಲ್ಲದಿರಲಿ! ಆಗ ಹೊಂಬೆಳಕಿನ ಬದುಕು ಅವನಿಗೆ ಪ್ರಿಯವಾಗುವುದು. ಮನಸ್ಸಿನ ಗಂಟುಗಳನ್ನು ಬಿಚ್ಚಿ, ಸ್ತ್ರೀ–ಪುರುಷ, ಗಂಡ–ಹೆಂಡತಿ ಸಂಬಂಧಗಳನ್ನು ಹೊಸ ನೆಲೆಗಟ್ಟಿನ ಮೇಲೆ ಭಾವಿಸುತ್ತಾನೆ. ಹಿಂದಿನದಕ್ಕಿಂತ ವಿಸ್ತಾರವಾದದ್ದನ್ನು ಕಾಣುತ್ತಾನೆ. ಅಲ್ಲಿ ವಿಚಾರಗಳಿಗೆ ತನ್ನದೇ ಆದ ರೀತಿಯೊಂದು ಇರುತ್ತದೆ. ಮುಕ್ತ ಪರಿಸರವೊಂದು ಸಿದ್ಧವಾಗಿರುತ್ತದೆ.

ಶಾಲ್ಮಲಿಯ ಸಹೋದ್ಯೋಗಿಗಳು ಏನಾದರೂ ಕೆಲಸದ ಮೇಲೆ ದಿಲ್ಲಿಗೆ ಬಂದರೆ, ತಪ್ಪದೆ ಅವಳನ್ನು ಭೇಟಿಯಾಗುತ್ತಿದ್ದರು. ನರೇಶನಿಗೂ ಚೆನ್ನಾಗಿ ಅವರೆಲ್ಲರ ಪರಿಚಯವಾಗಿತ್ತು. ಮೊದಲಲ್ಲಿ ಅವರನ್ನು ಅವರ ಭಾಷೆ, ರೀತಿ ನೋಡಿ ಕೇಳಿ ಸಂಕೋಚಪಡುತ್ತಿದ್ದ. ನಂತರ ಶಾಲ್ಮಲಿಯೊಂದಿಗೆ ಅವರು ನಡೆದುಕೊಳ್ಳುವ ರೀತಿ, ಅವಳ ಬಗ್ಗೆ ಅವರಿಗಿರುವ ಗೌರವ ಎಲ್ಲ ನೋಡಿದ ಮೇಲೆ ಅವರೊಂದಿಗೆ

ಸಹಜವಾಗಿಯೇ ವ್ಯವಹರಿಸಿದ. ಶಾಲ್ಮಲಿಯ ಸಹೋದ್ಯೋಗಿಗಳಲ್ಲಿ, ಪುರುಷರು! ದಿಲ್ಲಿಯಲ್ಲಿ ಇರುತ್ತಿದ್ದರು. ವಾಸ್ತವ ಬದುಕಿನ ಅನುಭವದಲ್ಲಿ ಅದು ಸಾಧ್ಯವಾಗಿರಲಿಲ್ಲವಾದ ಕಾರಣ ಶಾಲ್ಮಲಿಗೆ ಗಂಡಸರ ಜೊತೆಗಿದ್ದ ಸ್ನೇಹವನ್ನು ನರೇಶನಿಗೆ ನೋಡಿ ಸಹಿಸಿಕೊಳ್ಳುವುದು, ಜೀರ್ಣಿಸಿಕೊಳ್ಳುವುದು ಕಷ್ಟವೆನಿಸಿತು. ಆದರೂ ಅದನ್ನು ತೋರಿಸಿಕೊಳ್ಳಲಿಲ್ಲ. ತನ್ನ ಬಗ್ಗೆ ಅವರು, 'ಸಂಕುಚಿತ ದೃಷ್ಟಿಯ, ಗೊಡ್ಡು ಸಂಪ್ರದಾಯದ, ಹಿಂದುಳಿದ ವಿಚಾರಗಳುಳ್ಳ, ಒಬ್ಬ ಅಸೂಯೆಯುಳ್ಳ ಪತಿ ಎಂದು ತಿಳಿದುಕೊಂಡಾರೆಂಬ ಭಯದಿಂದ ಸುಮ್ಮನಿದ್ದ.

ಪೂಜೆಯ ರಜೆಗಳಲ್ಲಿ ಅತ್ತೆ ಮನೆಗೆ ಹೋದಾಗ, ಅವರ ನಂಬಿಕೆಯಂತೆ, ಸಂಪ್ರದಾಯದಂತೆ, ಉಪ್ಪಿಲ್ಲದ ಸಪ್ಪೆ ಊಟವನ್ನೇ ಮಾಡಿದಳು. ನರೇಶನ ಪಾದ ತೊಳೆದಳು, ಅರಳಿ ಮರದ ಎಲೆಗಳಿಂದ ಗಾಳಿ ಹಾಕಿ ಪಾದಗಳನ್ನು ಒಣಗಿಸಿದಳು. ಅತ್ತೆ-ಮಾವ ಕಡೆಗೆ ನರೇಶನೂ ದಿಗ್ಭ್ರಾಂತರಾದರು. ಅಲ್ಲಿಗೆ ತಕ್ಕಂತೆ ನಡೆದುಕೊಂಡಳು. ಹಳ್ಳಿಯ ಹೆಂಗಸರು ಶಾಲ್ಮಲಿಯನ್ನು ಸುತ್ತುವರೆದು ಕುಳಿತಾಗ, ನರೇಶನಿಗೆ ಏನೋ ಒಂದು ಥರಾ ಅನಿಸುತ್ತಿತ್ತು. ಕಡೆಗೆ ಸಂಕೋಚದಿಂದಲೇ ಕೇಳಿದ – ಇಲ್ಲಿ ನೀನು ಸಂತೋಷವಾಗಿರುವ ಹಾಗೆ ಕಾಣುತ್ತೀ?

"ಹೌದು ನಿಜ. ಇಷ್ಟೊಂದು ಪ್ರೀತಿ ಇಂಥ ನಡವಳಿಕೆ ನೋಡಿದರೆ ಯಾರ ಮನಸ್ಸು ಕರಗುವುದಿಲ್ಲ". ಶಾಲ್ಮಲಿ ಬಿಚ್ಚು ಮನಸ್ಸಿನಿಂದ ತನಗಾದ ಸಂತೋಷವನ್ನು ತೋರಿಸಿಕೊಂಡಳು. ಆದರೂ ನರೇಶನಿಗೆ ಏನೋ ಅನುಮಾನ! ಶಾಲ್ಮಲಿಯು ಔಪಚಾರಿಕತೆಯ ನಾಟಕ ಆಡುತ್ತಿರಬಹುದೇ? ಈ ಪಟ್ಟಣದ ಹುಡುಗಿಯರು ವ್ಯವಹಾರದಲ್ಲಿ ಬಹಳ ಜಾಣರು!

ನರೇಶನ ಮನೆಯ ಪರಿಸ್ಥಿತಿಯನ್ನು ಅಲ್ಲಿನ ಒಂದೊಂದು ವಸ್ತುವನ್ನು ನೋಡಿಯೇ ತಿಳಿದುಕೊಂಡಳು. ಮೂರು ಜನ ಮಕ್ಕಳನ್ನು ಓದಿಸಿ ದೊಡ್ಡವರನ್ನಾಗಿ ಮಾಡಿರುವುದು ಸಾಮಾನ್ಯವೇ! ಈ ವಿಚಾರ ಅವಳ ತಲೆಗೆ ಸುಳಿದದ್ದೇ, ಮಾವನ ಬಗ್ಗೆ ಗೌರವ ಮೂಡುತ್ತಿತ್ತು.

ಹಿಂತಿರುಗಿ ಬರುವಾಗ, ಅಪ್ಪ ಅಮ್ಮನನ್ನು ಜೊತೆಗೆ ಕರೆತರಲು ತುಂಬಾ ಬಲವಂತ ಮಾಡಿದಳು. ಆದರೆ ಮುಂದಿನ ವರುಷ ಬರುವುದಾಗಿ ಅವರಿಬ್ಬರೂ ಮಾತು ಕೊಟ್ಟರು. ಇರುವ ಹೊಲ ಗದ್ದೆ ಸ್ವಲ್ಪವೇ ಆದರೂ ಉಳೋದು, ಬಿತ್ತೋದು, ಫಸಲನ್ನು ತೆಗೆದಯೋದು ಇದ್ದೇ ಇರುತ್ತೆ. ಅದನ್ನೆಲ್ಲಾ ಯಾರಿಗೆ ಒಪ್ಪಿಸಿ ಬರಲು ಸಾಧ್ಯ? ಹಾಲು, ತುಪ್ಪ, ಮೊಸರು, ತೆಗೆಯುವವರು, ಅದರ ವ್ಯವಸ್ಥೆ ಮಾಡುವವರು ಯಾರು! ಈ ಎಲ್ಲಾ ಹೊರೇನೂ ತಮ್ಮವರಲ್ಲೇ ಯಾರಾದರೂ ಒಬ್ಬರ ಮೇಲೆ ಹಾಕಬೇಕು. ಸೊಸೆ ಹಠಮಾಡಿ ಅತ್ತೆಯ ಸಮಸ್ಯೆಗಳೆಲ್ಲವನ್ನು ತಿಳಿದುಕೊಂಡಳು.

ಸಣ್ಣ ಕುಟುಂಬದಲ್ಲಿ ಹುಟ್ಟಿದ ಶಾಲ್ಮಲಿಗೆ ಅತ್ತೆ ಮನೆಯಲ್ಲಿನ ತುಂಬಿದ ಸಂಸಾರ ನೋಡಿದಾಗ ಮುಗ್ಧಳಾಗಿ ಬಿಟ್ಟಿದ್ದಳು. ಎಂತಹ ತ್ಯಾಗ ಮಾಡಲೂ ಸಿದ್ಧರಿದ್ದರು. ದಿಲ್ಲಿಯಲ್ಲಿ ಇದೆಲ್ಲ ಎಲ್ಲಿ ಸಾಧ್ಯ? ಈ ಅನುಭವ ಹೊಸದಾಗಿತ್ತು. ಶಾಲ್ಮಲಿಯ ಮಗ್ನತೆಯನ್ನು ಗಮನಿಸಿದ್ದ ನರೇಶ್ ಹೇಳಿದ – ಶಾಲೂ ಇದೆಲ್ಲ ನಿನಗೆ ಈಗ ಬಹಳ ಖುಷಿ ಅಂತ ಅನ್ನಿಸಬಹುದು. ನಾಲ್ಕು ದಿನ ಜೊತೆಯಾಗಿರು ಆಗ ತಿಳಿಯುತ್ತೆ, ಸಮಸ್ಯೆಗಳೇನೂಂತ!

"ಹಾಗೆಲ್ಲ ಆಗೋದು ಸಾಧ್ಯವಿಲ್ಲ. ನಾನಂತೂ ಇಂಥದ್ದಕ್ಕೆ ಅವಕಾಶಾನೇ ಕೊಡೊಲ್ಲ" ಭರವಸೆಯಿಂದ ಹೇಳಿದಳು.

"ಹೆಂಗಸರ ಸ್ವಭಾವದ ಬಗ್ಗೆ ಯಾವ ಭರವಸೆ" – ನರೇಶ್ ನಕ್ಕ." ನೀನು ಒಂದೊಂದು ಸಲ ಏನೇನೋ ಮಾತಾಡ್ತೀ" –

ಅವನನ್ನು ದೂರುವಂತೆ ಹೇಳಿದಳು.

"ನಾನು ನೋಡಿದ್ದನ್ನೇ ಹೇಳುತ್ತಿದ್ದಿನಿ. ಪ್ರಪಂಚದಲ್ಲಿ ಎಲ್ಲ ಹೆಂಗಸರ ಹಾಗೇ ನೀನೂ ಕೂಡ!...... ಅತ್ತಿಗೆ, ಅಮ್ಮ, ಅತ್ತೆ...... ಇವರಂತೆಯೇ ನೀನೂ ಒಂದು ಹೆಣ್ಣು "ಅಲ್ವೇ?"

"ಯಾವಾಗಲೂ ನೀನು ಮಾತಿನ ಮಧ್ಯೆ ಹೆಣ್ಣು – ಗಂಡು ಅಂತ ಯಾಕೆ ವ್ಯತ್ಯಾಸ ಮಾಡ್ತೀ? ಸ್ವಭಾವ ಸ್ವರೂಪಗಳಿಂದ ಹೆಂಗಸರು ಬೇರೆ ಬೇರೆಯಾಗಿರಲು ಸಾಧ್ಯವಿಲ್ಲವೇನು?" ಶಾಲ್ಮಲಿಗೆ ಕೋಪ ಬಂತು.

"ಮಗೂ ಶಾಲ್ಮಲಿ" – ಅತ್ತೆಯ ಕೂಗು ಕೇಳಿದ ಕೂಡಲೇ ಎದ್ದು ಹೊರಟು ಬಿಟ್ಟಳು.

ಹೊರಗಡೆ ಅಂಗಳದಲ್ಲಿ ಮಂಚದ ಮೇಲೆ ಕುಳಿತು ಕಾಲನ್ನು ಕಲ್ಲಿನ ಮೇಲೆ ಇಟ್ಟುಕೊಂಡು ಅಲ್ತಾ ಹಾಕಿಸಿಕೊಂಡು ಎದ್ದ ಕೂಡಲೇ ಅವಳು ಮಗುವಿನ ಹಾಗೆ ಉತ್ಸಾಹದಿಂದ ಕುಣಿಯುತ್ತಿದ್ದಳು. ತುಂಬಿದ ಹಣೆ, ಬೆಳ್ಳಿ ಕಾಲುಂಗುರ, ಕೈ ತುಂಬ ಘಲ್ಲು ಘಲ್ಲೆನುವ ಬಳೆ ಇವೆಲ್ಲವೂ ಅವಳಿಗೆ ಮೋಹವೆನಿಸಿದವು. ತನ್ನ ಮನೆಗಿಂತ ಭಿನ್ನವಾದ ವಾತಾವರಣ ಇಲ್ಲಿ! ಮೂಲದ್ದು. ಆದರೆ ಇಲ್ಲಿ ಜೀವಂತ ಜೀವನ ಪದ್ಧತಿಗಳು! ಈ ಪದ್ಧತಿಗಳು, ಆಚರಣೆಗಳು ಜೀವನ ಅಭಿವ್ಯಕ್ತಿಯ ಒಂದು ವಿಧಾನ. ಅವಳಿಗೆ ಎಲ್ಲವೂ ಪ್ರಿಯವೇ ಇವೆಲ್ಲ ಇದ್ದರೇನೇ ಜೀವನದ ಪರಿಪೂರ್ಣತೆ.

ಹೊರಡುವ ದಿನ ಹಳ್ಳಿಗೆ ಹಳ್ಳಿಯೇ ನೆರೆದಿತ್ತು. ಭಾವಪೂರ್ಣ ಬೀಳ್ಕೊಡುಗೆ ಶಾಲ್ಮಲಿಯ ಅಂತರಂಗದ ಆಳದಲ್ಲಿ ಉಳಿಯಿತು. ಭೂಮಿಯನ್ನು ನೆಚ್ಚಿಕೊಂಡ ಈ ಜನ ತಮ್ಮ ಅಭಿವ್ಯಕ್ತಿಯಲ್ಲಿ ಎಷ್ಟೊಂದು ಪ್ರಾಮಾಣಿಕರು! ದಾರಿಯುದ್ದಕ್ಕೂ ಇದನ್ನೇ ಯೋಚಿಸುತ್ತಿದ್ದಳು.

"ಒಂದು ವಾರಕ್ಕೆ ಮಾತ್ರ ಹಳ್ಳಿಯಲ್ಲಿ ಇರೋಕೆ ಚೆನ್ನಾಗಿರುತ್ತೆ ಅದಕ್ಕಿಂತ ಹೆಚ್ಚಾದರೆ, ಬಹಳ ಬೇಸರವಾಗುತ್ತೆ. ನಮ್ಮ ದಿನಗಳನ್ನು ಕೇವಲ ಊಟ, ತಿಂಡಿ, ನಿದ್ದೆ, ಇವುಗಳಲ್ಲೇ ವ್ಯರ್ಥ ಮಾಡ್ತಿದ್ದೀವಿ, ಅನ್ಸತ್ತೆ" ನರೇಶ್ ಶಾಲ್ಮಲಿಗೆ ಹೇಳಿದ.

"ಇರಬಹುದು ಎಷ್ಟು ಹೇಳಿ ಶಾಲ್ಮಲಿ ಆಲೋಚನೆಗಳಲ್ಲಿ ಮುಳುಗಿದಳು. ಟ್ರೈನು ಟ್ರಾಕ್ ಬದಲಿಸಿದ್ದರಿಂದ ಒಂದು ಸಲ ಜಗ್ಗಿದಂತಾಯಿತು. ಮುಂದೆ ಚುಕ್..... ಚುಕ್.......

ನರೇಶ್ ರೈಲಿನ ಸದ್ದನ್ನು ಆಲಿಸುತ್ತಿದ್ದ. ನಂತರ ಶಾಲ್ಮಲಿಯ ಆಂತರ್ಯವನ್ನು ತಿಳಿಯುವುದಕ್ಕಾಗಿ, ಹಳ್ಳಿ, ಮನೆ ಅದೂ ಇದೂ ಅಂತ ಮಾತನಾಡತೊಡಗಿದ. ಆದರೆ ಆ ಮಾತುಗಳೆಲ್ಲ ನಕಾರಾತ್ಮಕವಾಗಿಯೇ ಧ್ವನಿಸುತ್ತಿದ್ದವು.

"ಮನುಷ್ಯ ಯಾವುದನ್ನು ಹೆಚ್ಚು ಪ್ರೀತಿಸುತ್ತಾನೋ ಅದಕ್ಕೆ ಸಂಬಂಧಪಟ್ಟ ಪ್ರತಿಯೊಂದೂ ಅವನಿಗೆ ಇಷ್ಟವಾಗುತ್ತೆ. ನಿನಗೆ ಇದೂ ಕೂಡಾ ಅರ್ಥವಾಗಲಿಲ್ಲವೇ ನರೇಶ?" ಮನಸ್ಸಿನಲ್ಲಿ ಇದ್ದುದನ್ನು ಹೇಳಿ ಬಿಟ್ಟಳು.

ದಿಲ್ಲಿ ತಲುಪಿ, ಸಾಮಾನುಗಳನ್ನು ಇನ್ನೂ ಮನೆ ಒಳಗೆ ಕೂಡಾ ಇಟ್ಟಿಲ್ಲ ಅಷ್ಟರಲ್ಲಿ ಮನೆಯ ಯಜಮಾನಿ ಅಪ್ಪನಿಗೆ ಟೈಫಾಯ್ಡ್ ಆಗಿರುವ ಸುದ್ದಿ ತಿಳಿಸಿದಳು. ಸಂತೋಷದಿಂದ ನಗುತ್ತಾ ಇದ್ದವಳು ಗಂಭೀರವಾದಳು. ಕೂಡಲೇ ತನ್ನ ಮನೆಗೆ ಹೋಗಲು ಸಿದ್ಧವಾದಳು.

"ಈಗಲೇ ಎಲ್ಲಿಗೆ ಹೊರಟೆ ಶಾಲ್ಮಲಿ! ಈಗ ತಾನೇ ಸುಸ್ತಾಗಿ ಬಂದಿದ್ದೇವೆ. ಅವರಿಗೆ ಗೊತ್ತಿದೆಯಲ್ಲ, ನಾವು ಊರಿಗೆ ಹೋಗಿರೋದು ಸ್ವಲ್ಪ ಸ್ನಾನಗೀನ ಮಾಡಿ, ತಿಂಡಿ ತಿಂದು ಆಮೇಲೆ ಹೋದರಾಯಿತು. ನರೇಶ್ ಆಕಳಿಸುತ್ತಾ ಹೇಳಿದ.

ಅಂದ್ರೆ?" ಏನೂ ಆಗದವನಂತೆ ಮಾತನಾಡಿದ ರೀತಿಯಿಂದ ಬೇಸರವಾಗಿ ಕೇಳಿದಳು. "ಟೀ ಮಾಡು ಈಗ ತಾನೇ ಬಂದಿದ್ದೇವೆ" ಎಂದು ಹೇಳುತ್ತಾ ನರೇಶ್ ಬಚ್ಚಲು ಮನೆ ಕಡೆಗೆ ನಡೆದ.

ಶಾಲ್ಮಲಿ ಟೀಗೆ ಎಸರಿಟ್ಟಳು. ಹಾಸಿಗೆ ಕೊಡವಿ, ಮೇಲಿನ ಹೊದಿಕೆಯನ್ನು ಬದಲಿಸಿದಳು. ನರೇಶನಿಗೆ ಟೀ ಕೊಟ್ಟು, ತನು ಬಚ್ಚಲಿಗೆ ಬಂದು ಮುಖದ ಮೇಲಷ್ಟು ನೀರನ್ನು ಸಿಂಪಡಿಸಿಕೊಂಡು ಹೊರಗೆ ಬಂದು ಹೇಳಿದಳು – ಬೇಗ ಟೀ ಕುಡಿ, ಹೋಗೋಣ.

"ನಾನು ಸಾಯಂಕಾಲ ಬರ್ತೀನಿ". ನರೇಶ್ ಹೇಳಿದ, ಟೀ ಕುಡಿಯುತ್ತಾ "ಹಾಗಾದರೆ ನಾನು ಹೋಗಿ ಬರ್ತೇನೆ. ನಿನಗೆ ಇಷ್ಟವಾದಾಗ ಬರಬಹುದು". ನರೇಶ್ ಹೀಗೆ ಕಲ್ಲು ಮನಸ್ಸಾಗುತ್ತಾನೆಂದು ಶಾಲ್ಮಲಿಗೆ ತಿಳಿದಿರಲಿಲ್ಲ. ಅವನನ್ನು ಹೊಡೆದು ಬಿಡುವಷ್ಟು

ಸಿಟ್ಟು ಬಂತು. 'ಶಾಲ್ಮಲಿಯ ತಂದೆ ತಾಯಿ ಒಂಟಿಯಾಗಿದ್ದಾರೆ, ಕಾಯಿಲೆ ಬಿದ್ದಿದ್ದಾರೆ' ಅನ್ನೋ ಪ್ರಜ್ಞೆ ಅವನಿಗೆ ಸ್ವತಃ ಇಲ್ಲವಾದ ಮೇಲೆ ಅವನಿಗೆ ಹೇಳಿ ಅವನ ಋಣವನ್ನು ನಮ್ಮ ತಲೆ ಮೇಲೆ ಯಾಕೆ ಹೊರಬೇಕು' ಎಂದು ಯೋಚಿಸಿದಳು.

"ಮಿಸಸ್ ಕುಮಾರ್, ನೀವೊಬ್ಬರೇ ಹೋಗ್ತಿದ್ದೀರಾ?" –

ಮನೆಯ ಮಾಲೀಕಳು ಶಾಲ್ಮಲಿಗೆ ಗೇಟು ತೆಗೆದು ಹೋಗುತ್ತಿರುವುದನ್ನು ನೋಡಿ ಕೇಳಿದಳು. "ಹೌದಾ ಇವರಿಗೆ ಸ್ವಲ್ಪ ಮೈ ಹುಷಾರಿಲ್ಲ" ಒಣನಗೆ ನಕ್ಕಳು.

ಹೇಳಿದಳು. "ಇಂಥ ಹೊತ್ತಲ್ಲಿ ನರೇಶ್‌ನೂ ಜೊತೆಗೆ ಬಂದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಇಬ್ಬರನ್ನೂ ನೋಡಿ ಅಪ್ಪ, ಅಮ್ಮ ಎಷ್ಟು ಸಂತೋಷ ಪಡುತ್ತಿದ್ದರು. ಆದರೆ ಅವನು ಅಳಿಯ! ಅಳಿಯನ ಜರ್ಬು ತೋರಿಸಬೇಕಲ್ಲವೇ? ಈ ಸಾಮಾಜಿಕ ಸಂಬಂಧಗಳು ಎಷ್ಟು ಪೊಳ್ಳು, ಎಷ್ಟು ಕೃತಕ?" – ಶಾಲ್ಮಲಿಯ ತಲೆ ಬಿಸಿ ಏರುತ್ತಿತ್ತು. ಮನಸ್ಸು ಖಿನ್ನವಾಗಿತ್ತು. ಮುಖವೇ ಬೇಸರವನ್ನು ಹೇಳುತ್ತಿತ್ತು.

ಮನೆ ತಲುಪಿದಾದ ಅಮ್ಮ ಅಪ್ಪನಿಗೆ ಜ್ಯೂಸ್ ಕುಡಿಸುತ್ತಿದ್ದಳು. ಕೇರಿಯ ಜನ ಒಂದಷ್ಟು ಮಂದಿ ಕುಳಿತಿದ್ದರು. ರಾಕೇಶ್ ಔಷಧಿ ತೆಗೆದುಕೊಂಡು ಜೊತೆಗೇ ಬಂದಿದ್ದ.

"ಬಂದೆಯಾ, ನನ್ನ ಶಾಲೂ" ಅಪ್ಪ ಅವಳನ್ನು ನೋಡಿ ಹೇಳಿದರು.

"ಹೇಗಿದೆ ಅಲ್ಲ" ಶಾಲ್ಮಲಿ ಅವರ ಎದೆಯ ಮೇಲೆ ಬಾಗಿದಳು. ಜ್ವರದಿಂದ ಅವರ ಮೈ ಸುಡುತ್ತಿತ್ತು. ಅವರು ತಮ್ಮ ನಿಶ್ಯಕ್ತವಾದ ಕೈಗಳಿಂದ ಬೆನ್ನು ತಟ್ಟಿದರು.

"ದಿಲ್ಲಿಗೆ ಯಾವಾಗ ಬಂದೆ? ಅತ್ತೆ ಮನೇಲಿ ಎಲ್ಲರೂ ಚೆನ್ನಾಗಿದ್ದಾರಾ?" ಅಮ್ಮ ಮಗಳನ್ನು ಪರೀಕ್ಷಿಸುವಂತೆ ನೋಡಿದರು.

"ಅಬ್ಬ! ಕೇಳಲೇ ಬೇಡ. ನನ್ನನ್ನು ಎಲ್ಲರು ಮೆಚ್ಚಿಕೊಂಡರು. ನರೇಶನ ತಂದೆ ತಾಯಿ, ಬಂಧು ಬಳಗ – ಎಲ್ಲರೂ

ಬಹಳ ಒಳ್ಳೆಯವರು" ಉತ್ಸಾಹದಿಂದ ಹೇಳಿದಳು.

"ಅವರ ಸೇವೆ ಗೀವೆ ಮಾಡಿದೆಯಾ. ಇಲ್ಲ ಮಂಚ ಹತ್ತಿ ಕುಳಿತು ಬಿಟ್ಟೆಯಾ?" ಅಮ್ಮ ಶಾಲ್ಮಲಿಯನ್ನು ಪರೀಕ್ಷಿಸುತ್ತ ಕೇಳಿದಳು.

"ಅಯ್ಯೋ ನೀನೂ ಸರಿ? ನಾನು ನೀರು ಕುಡಿಯೋಕೆ ಎದ್ದರೆ ಹತ್ತು ಜನ ಹುಡುಗೀರು ಓಡಿ ಬರುತ್ತಿದ್ದರು. ಶಾಲ್ಮಲಿ ಹೆಮ್ಮೆಯಿಂದ ಹೇಳಿದಳು. "ಹುಡುಗೀರು ಎಲ್ಲಿಂದ ಬಂದ್ರು. ಅಪ್ಪ ಕೇಳಿದರು.

"ನರೇಶನ ಮೂರು ಜನ ಚಿಕ್ಕಪ್ಪಂದಿರು ಮತ್ತು ಸೋದರತ್ತೆ ಮಕ್ಕಳು" ಅದೇ ಗೆಲುವಿನಲ್ಲಿ ಹೇಳಿದಳು.

ಅತ್ತೆ ಮನೆ ಪ್ರಸ್ತಾಪ ಮಾಡಿದ್ದೆ. ಶಾಲ್ಮಲಿಯ ಮುಖದ ಮೇಲಿನ ಕುಂಕುಮದ ಛವಿಯನ್ನು ನೋಡಿ ಅವರಿಬ್ಬರಿಗೆ ಸಂತೋಷವಾಯಿತು. ಮಗಳಿಗೆ ದೊರೆತ ಮರ್ಯಾದೆ, ಅವಳಿಗಾದ ಸಂತೋಷ, ಇವರ ಮನಸ್ಸಿಗೆ ನೆಮ್ಮದಿಯನ್ನು ನೀಡಿತು.

ಎಂಟುಗಂಟೆ ಸುಮಾರಿಗೆ ನರೇಶ ಶಾಲ್ಮಲಿಯ ಮನೆಗೆ ಬಂದ. ಅವನನ್ನು ನೋಡಿ ಹಿಗ್ಗಿದಳು. ಮಧ್ಯಾಹ್ನದಿಂದಲೇ ಅವನ ಪ್ರತೀಕ್ಷೆಯಲ್ಲಿದ್ದಳು. ಪ್ರತಿಸಲ ಗಂಟೆ ಹೊಡೆದಾಗಲೂ ಖುದ್ದಾಗಿ ಬಾಗಿಲ ಬಳಿ ಓಡಿ ಬಾಗಿಲು ತೆರೆಯುತ್ತಿದ್ದಳು. ಬಾಗಿಲು ತೆಗೆದಾಗ ಬೇರೆ ಯಾರನ್ನೋ ನೋಡಿ ನಿರಾಶೆಯಿಂದ ಸೋತು ಹಿಂತಿರುಗುತ್ತಿದ್ದಳು. ಅಪ್ಪ, ಅಮ್ಮ ಏನು ತಿಳಿದುಕೊಳ್ಳುವರೋ ಎಂಬ ಸಂಕೋಚದಿಂದ ಮುದುಡಿ ಮುದ್ದೆಯಾಗುತ್ತಿದ್ದಳು.

"ಮಧ್ಯಾಹ್ನ ಊಟ ಗೀಟ ಮಾಡಿದಿರಾ ಇಲ್ಲಾ?" ಶಾಲ್ಮಲಿ ಟೀ ಬಟ್ಟಲನ್ನು ನೀಡುತ್ತಾ ಕೇಳಿದಳು.

"ಇಲ್ಲ ಈಗ ಸ್ವಲ್ಪ ಹೊತ್ತಿಗೆ ಮುಂಚೆ ಕೊಂಚ ತಿಂಡಿ ತಿಂದೆ. ನಾಲ್ಕು ಗಂಟೆಗೆ ನಿದ್ದೆ ಮಾಡಿ ಎದ್ದಿದ್ದಿ" ಎಂದು ಹೇಳುತ್ತಾ ಕೈಯಲ್ಲಿ ಟೀ ಬಟ್ಟಲನ್ನು ಹಿಡಿದುಕೊಂಡೇ ಹೋಗಿ ಅಪ್ಪನ ಹಾಸಿಗೆ ಬಳಿ ಇದ್ದ ಕುರ್ಚಿಯಲ್ಲಿ ಕುಳಿತ. ಅಪ್ಪ ಜ್ವರದ ತಾಪದಲ್ಲಿ ಮಲಗಿದ್ದರು.

"ನಾನು ಬೇಗ ಬೇಗ ಏನಾದ್ರೂ ಮಾಡಿ ಬಿಡ್ತೀನಿ ಊಟಕ್ಕೆ. ನೀನು ಹೋಗಿ ಅಪ್ಪನ ಬಳಿ ಕೂತ್ಕೋ : ಅವರು ಕರೆದಾಗ, ನನಗೆ ಹೇಳು" – ಅಮ್ಮ ಹೇಳಿ ಅಡುಗೆ ಮನೆಕಡೆ ನಡೆದಳು.

ರಾತ್ರಿ ಊಟ ಆದ ಮೇಲೆ ನರೇಶ್ ಶಾಲ್ಮಲಿಗೆ ಸನ್ನೆಮಾಡಿ ಹೋಗೋಣ ಬಾ ಎಂದು ಕರೆದ. ಶಾಲ್ಮಲಿ ಬರಲು ಸನ್ನೆಯ ಮೂಲಕವೇ ನಿರಾಕರಿಸಿದಳು. ನರೇಶನ ಅರಳಿದ ಮುಖ ಬಾಡಿತು. ಶಾಲ್ಮಲಿಯ ಗೆಲುವೂ ಕಂದಿಹೋಯಿತು. ಇಬ್ಬರೂ ಮೌನವಾಗಿ ಒಬ್ಬರನ್ನೊಬ್ಬರು ನೋಡಿದರು ಮತ್ತು ಅಪ್ಪನು ಮಲಗಿದ್ದ ಚಾಪೆಯ ಮೇಲೆ ಹೋಗಿ ಕುಳಿತರು. ನರೇಶ ಅಪ್ಪನ ಜ್ವರದ ಚಾರ್ಟನ್ನು ಗಮನಿಸುತ್ತಿದ್ದ. ಶಾಲ್ಮಲಿ ಔಷಧಿಯ ಸೀಸೆಗಳನ್ನು ಜೋಡಿಸಿಡತೊಡಗಿದಳು. "ಹತ್ತು ಗಂಟೆ ಆಗಿದೆ, ಹೋಗೋದಕ್ಕೆ ತಡಮಾಡಬೇಡ" –

ಅಮ್ಮ ನಿಧಾನವಾಗಿ ಶಾಲ್ಮಲಿಯ ಕಿವಿಯ ಬಳಿ ಬಂದು ಹೇಳಿದಳು.

"ನಾನು ಇರ್ಬೇಕೂಂತ ಅಂದ್ಕೊಂಡಿದ್ದೀನಿ. ನೀನೂ ಇದದು ಬಿಡು!

ನಾಳೆ ರಜಾನೂ ಇದೆ" ಶಾಲ್ಮಲಿ ನರೇಶನ ಕಡೆ ತಿರುಗಿ ಹೇಳಿದಳು.

"ಹೌದು ಶಾಲ್ಮಲಿ ಹೇಳಿದ್ದು ಸರಿ. ಈಗ ಸಾಕಷ್ಟು ರಾತ್ರಿ ಆಗಿದೆ. ನೀವಿಬ್ಬರೂ ಬಹಳ ದಣಿದಿದ್ದೀರಿ ಬೇರೆ! ಈಗಲೇ ನಾನು ಹಾಸಿಗೆ ಸರಿಮಾಡ್ತೀನಿ" – ಅಮ್ಮ ಹೇಳುತ್ತಾ ಹೊರಗೆ ಹೊರಟಳು.

"ರಾತ್ರಿಗೆ ಇರೋದಿಲ್ಲ" ಶಾಲ್ಮಲಿಗೆ ಕೇಳುವಂತೆ ಹೇಳಿದ.

"ಹದಿನೈದು ದಿನದಿಂದ ಅಮ್ಮ ಒಬ್ಬರೇ ಅಪ್ಪನ ಸೇವೆ ಮಾಡ್ತಿದ್ದಾರೆ. ಅವರೊಬ್ಬರನ್ನೆ ಬಿಟ್ಟು ಬರಲೇ?" ಶಾಲ್ಮಲಿ ಸ್ವಲ್ಪ ಸಿಟ್ಟಿನಿಂದ ಹೇಳಿದಳು.

"ನೀನು ಇರು ನಾನು ಹೊರಟೆ! ನನ್ನ ಮನೆ ಹೊರತಾಗಿ ನನಗೆ ಬೇರೆಲ್ಲೂ ನಿದ್ದೆ ಹತ್ತೋದಿಲ್ಲ" ನರೇಶ್ ಹೇಳುತ್ತಾ ಎದ್ದು ನಿಂತ.

"ಬಾ ಮಗು, ಬಾ. ನಿನ್ನ ಹಾಸಿಗೆ ಸರಿಮಾಡಿದ್ದೇನೆ. ಅಳಿಯ ಮಗನಿಗಿಂತ ಪ್ರಿಯನಾಗ್ತಾನೆ". ಅಮ್ಮನ ಸ್ನೇಹ ಪೂರ್ಣವಾದ ಮಾತಿಗೆ ಪ್ರತಿ ಹೇಳಲು ನರೇಶ್‌ಗೆ ಸಾಧ್ಯವಾಗಲಿಲ್ಲ. ಕೊಠಡಿಯಿಂದ ಹೊರಗೆ ನಡೆದ. ಅವನ ಸ್ಥಿತಿಯನ್ನು ನೋಡಿ ಶಾಲ್ಮಲಿ ಮುಖ ಮುಚ್ಚಿಕೊಂಡು ನಕ್ಕಳು, ಆದರೂ ನಗುವಿನ ಸದ್ದು ನರೇಶನನ್ನು ಸ್ಪರ್ಶಿಸಿತು. ಅವನು ತಿರುಗಿ ದುರುಗುಟ್ಟಿ ನೋಡಿದ. ನಂತರ ಅವನೂ ನಕ್ಕು ಬಿಟ್ಟ.

"ಪ್ರತಿದಿನ ಬರದೇ ಇದ್ದರೂ ದಿನ ಬಿಟ್ಟು ದಿನವಾದರೂ ಆಫೀಸಿನಿಂದ ನೇರವಾಗಿ ಇಲ್ಲಿಗೆ ಬಂದು ಅಪ್ಪನನ್ನು ವಿಚಾರಿಸಿಕೊಂಡು ಹೋಗಬಾರದೇ ಎಂದುಕೊಂಡಳು. ಆದರೆ ನರೇಶನಿಗೆ ಕುಟುಂಬ, ಪರಿವಾರ ಸಂಬಂಧವಾದ ಶಿಸ್ತುಗಳ ಬಗ್ಗೆ ನಂಬಿಕೆಯೇ ಇಲ್ಲ. ಅವನಿಗೆ ಇದೆಲ್ಲ ಬೇಡವೆನಿಸಿಬಹುದು. ಆದರೆ ಸೌಜನ್ಯಕ್ಕಾದರೂ ಬರಬಾರದೇ.......... ನರೇಶನ ಇಂತಹ ನಡವಳಿಕೆಯಿಂದ ಶಾಲ್ಮಲಿ ಒಳಗೊಳಗೇ ಬೇಸರಪಡುತ್ತಿದ್ದಳು. ಈ ವಯಸ್ಸಿನಲ್ಲಿ ಅವನನ್ನು ತಿದ್ದುವುದೂ ಸಾಧ್ಯವಿರಲಿಲ್ಲ.

ಈ ದಿನವೂ ಶಾಲ್ಮಲಿ ಮನೆಯಲ್ಲಿ ಇಲ್ಲದ್ದನ್ನು ನೋಡಿ, ಅಲ್ಲಿಯೇ ಹೋಗಿರಬೇಕೆಂದುಕೊಂಡ. ಪ್ರತಿದಿನ ಹೀಗೆ ಮನೆ ಬಿಟ್ಟು ಹೋಗುವುದು ನರೇಶನಿಗೆ ರುಚಿಸಲಿಲ್ಲ. ಒಂದೇ ಊರಲ್ಲಿ ಅಪ್ಪನ ಮನೆ ಇದ್ದ ಮಾತ್ರಕ್ಕೆ, ಅಪ್ಪನ ಮುಂದೆ ಗಂಡನಿಗೆ ಬೆಲೆಯೇ ಇಲ್ಲವೆ. ಯಾವಾಗ ನೋಡಿದರೂ ಅಪ್ಪ, ಅಪ್ಪ! ಒಂದೇ ರಾಗ! ಅಪ್ಪನದೇ ಜಪ! ಮರೆತೂ ಕೂಡಾ ನಾನು ನನ್ನ ಅಪ್ಪನ ಮಾತನ್ನೇ ತೆಗೆಯೊಲ್ಲ. ಪ್ರೀತಿ ಗೌರವಗಳನ್ನು ಎದೆ ಒಳಗೆ ಇಟ್ಟುಕೊಳ್ಳಬೇಕೇ ಹೊರತಾಗಿ ಪದೇ ಪದೇ ತೋರಿಸಿಕೊಳ್ಳಬೇಕೆ?

"ಇವತ್ತು ಹೋಗುವುದಿಲ್ಲವೇ?" – ನರೇಶ್ ಬಡಬಡಿಸುತ್ತಾ ಬಟ್ಟೆ ಬದಲಾಯಿಸಿದ. ನಂತರ ಮೆಟ್ಟಿಲಿಳಿದು ಟೀ ಕುಡಿಯಬೇಕೆಂದು ಎಡಗಡೆ ನಡೆದ. ಟೀ ಕುಡಿದ ನಂತರ ತನ್ನ ಗೆಳೆಯ ಗಿರೀಶನ ಮನೆಯ ಕಡೆ ಹೊರಟ.

ರಾತ್ರಿ ಹನ್ನೊಂದು ಗಂಟೆಗೆ ಊಟ ಗೀಟ ಮುಗಿಸಿ ಮನೆಗೆ ಬಂದಾಗ ಶಾಲ್ಮಲಿ ಅಳುತ್ತಿದ್ದಳು. ದುಃಖದಿಂದ ಕಂಗಾಲಾಗಿ ಕುರ್ಚಿಯ ಮೇಲೆ ಕುಳಿತಿದ್ದಳು. ಅವಳನ್ನು ನೋಡಿದರೆ, ಕೆಟ್ಟ ಸಮಾಚಾರವೇ ಏನಾದರೂ ಇರಬಹುದೇ' ಎಂದು ಅನುಮಾನಿಸಿ ಕಂಪಿಸಿದ.

"ಓಹ್ ನರೇಶ್!" ಎಂದು ಹೇಳುತ್ತಾ ನರೇಶನನ್ನು ಅಪ್ಪಿಕೊಂಡಳು.

"ಸಮಾಧಾನ ಸಮಾಧಾನ!" ತಗ್ಗಿದ ದನಿಯಲ್ಲಿ ಹೇಳಿ ಅವಳ ತಲೆ ಮೇಲೆ ಪ್ರೀತಿಯಿಂದ ಕೈ ಇಟ್ಟ. ಮನಸ್ಸು ಅಪರಾಧ ಭಾವದಿಂದ ಕುಗ್ಗಿ ಹೋಯಿತು. ತಾನು ಈ ಸಮಯದಲ್ಲಿ ಹರಟೆ ಹೊಡೆಯುತ್ತಿದ್ದುದು ನೆನಪಾಗಿ ದುಃಖವಾಯಿತು...... ಪಾಪ,...... ಶಾಲ್ಮಲಿ ಇಲ್ಲಿ ಹೀಗೆ..... ನಾನು ಅಲ್ಲಿ!

ಶಾಲ್ಮಲಿಯನ್ನು ನಿಧಾನವಾಗಿ ತನ್ನಿಂದ ಬಿಡಿಸಿ ಮೆಲ್ಲಗೆ ನಡೆಸಿಕೊಂಡು ಹೋಗಿ ಹಾಸಿಗೆ ಮೇಲೆ ಕುಳ್ಳಿರಿಸಿದ. ನೀರು ತರಲೆಂದು ಒಳಗೆ ಹೋದ. ಅವಳ ಕಂಬನಿಯನ್ನು ಒರೆಸಿ, ನೀರು ಕುಡಿಸಿ, ನಿಧಾನವಾಗಿ ಮಲಗಿಸಿ ಅವಳ ಬಳಿ ಕುಳಿತ. ಇಷ್ಟು ಹೊತ್ತೂ ಎಲ್ಲಿಗೆ ಹೋಗಿದ್ದಿರಿ? ಭಾರವಾದ ದನಿಯಲ್ಲಿ ಕೇಳಿದಳು.

"ಏನೋ ಅರ್ಜೆಂಟ್ ಕೆಲಸವಿತ್ತು" – ನಿಧಾನವಾಗಿ ಹೇಳಿದ. "ನಾನು ನಿನಗೋಸ್ಕರ ಎಷ್ಟು ಹೊತ್ತು ದಾರಿ ಕಾದೆ! ಆಮೇಲೆ ಭಯ ಆಯ್ತು......ನಿನಗೇನಾದರೂ ಮೈ ಹುಷಾರಿಲ್ಲವೊ' ಎಂದು ಯೋಚಿಸಿ, ಅಮ್ಮನಿಗೆ ಯಾವುದೋ ನೆಪಹೇಳಿ ಇಲ್ಲಿಗೆ ಬಂದೆ. ಬಂದಾಗ ನೀನು ಕಾಣದೆ ಹೋದದ್ದನ್ನು ನೋಡಿ ನನಗೆ ಅನಿಸಿತು......... ನಿನಗೇನಾದರೂ....... ಉಫ್........ ನಾನಂತೂ ಹುಚ್ಚಿಯಾಗಿ ಬಿಟ್ಟೆ, ಏನು ಮಾಡಲಿ ಎಂದು ಯೋಚಿಸುತ್ತಿದ್ದೆ. ಯಾರ ಸಹಾಯವನ್ನು ಕೇಳುವುದು. ಅಪ್ಪನ ಜ್ವರ ಕಡಿಮೆಯಾಗಿತ್ತು. ಅಮ್ಮ ಖುಷಿಯಾಗಿಯೇ ಇದ್ದರು. ಲಖನವೂ ಮಾಮ ಬಂದಿದ್ದರು" ಮಾತಾಡುತ್ತಲೇ ಕಣ್ಣಲ್ಲಿ ತುಂಬಿದ್ದ ಕಂಬನಿಯನ್ನು ತೊಡೆದುಕೊಂಡಳು. ಆಶ್ಚರ್ಯದಿಂದ ಅವಳ ಮುಖವನ್ನೇ ನೋಡುತ್ತಿದ್ದ. ನರೇಶ ಮಾತುಗಳನ್ನು ಕೇಳಿ ಬೆಚ್ಚಿದ. "ಓಹ್ ಶಾಲೂ ನಾನು ಇನ್ನೇನೋ ಊಹಿಸಿದೆ. ಗಟ್ಟಿಯಾಗಿ ನಕ್ಕ. ಇಷ್ಟು ಹೊತ್ತೂ ಹಬ್ಬಿದ್ದ ಗಂಭೀರ ವಾತಾವರಣ, 'ನರನಾಡಿಗಳಲ್ಲಿ ನೋವು ವೇದನೆಗಳು ಒಮ್ಮೆಲೇ ಮಾಯವಾಗಿ ನಿರಾಳವೆನಿಸಿತು. ಇದ್ದಕ್ಕಿದ್ದಂತೆ ದೊರೆತ ಬಿಡುಗಡೆಯಿಂದ ನಕ್ಕು ನಕ್ಕು ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡ. "ಏನಾಯ್ತು"? ಶಾಲ್ಮಲಿ ಆಶ್ಚರ್ಯದಿಂದ ಕಣ್ಣುರೆಪ್ಪೆಗಳನ್ನು ಮಿಟುಕಿಸುತ್ತ ನರೇಶನನ್ನು ನೋಡಿ ಕೇಳಿದಳು, ನರೇಶನಿಗೆ ನಗುವ ಹುಚ್ಚು ಹಿಡಿದಿರಬಹುದೇ ಅನಿಸಿತು.

"ಈಗ ಮಲಗು. ಬೆಳಿಗ್ಗೆ ಎದ್ದು ಮಾತಾಡೋಣ". ಹೇಳುತ್ತಾ ನರೇಶ ದೀಪ ಆರಿಸಿ, ಪಕ್ಕಕ್ಕೆ ಹೊರಳಿದ.

ಒಂದು ದಿನ ಬ್ಯಾಂಕ್ ಬ್ಯಾಲೆನ್ಸಿನಲ್ಲಿದ್ದ ತನ್ನ ಹಣದ ಮೊತ್ತ ನೋಡಿ ಸ್ವರ್ಗ ಸಿಕ್ಕ ಹಾಗೆ ಅನಿಸಿತು. ಉತ್ಸಾಹದಿಂದ ಶಾಲ್ಮಲಿಗೆ ಹೇಳಿದ.

"ಶಾಲೂ ನಾವು ಯಾಕೆ ಯಾವುದಾದರೂ 'ಫ್ಲಾಟ್'ನ ಸ್ಕೀಂನಲ್ಲಿ ಹಣ ತೊಡಗಿಸಿಬಾರದು? ಇದಕ್ಕಿಂತ ಚೆನ್ನಾಗಿರೋ ಮನೆಗೆ ಹೋಗಬೇಕು. ನಿನ್ನ ಆಫೀಸ್ನವರು ಬರ್ತಿರ್ತಾರೆ. ಈ ಮನೆ ನೋಡಿ ಏನಂದ್ಕೋತಾರೆ?

"ಏನು ಹೇಳ್ತಾರೆ? ಅವರು ಬರೋದು ನಮ್ಮನ್ನು ನೋಡೋದಕ್ಕಾ ಇಲ್ಲ ನಮ್ಮ ಫ್ಲಾಟ್ ನೋಡೋದಕ್ಕಾ?" ಶಾಲ್ಮಲಿ ಮುನಿಸಿನಿಂದ ಹೇಳಿದಳು.

"ನೀನೇ ಒಂದು ಸಲ, ಒಳ್ಳೇ ಮನೆಗೆ ಹೋಗಿ ಇರ್ಬೇಕೂಂತಿಯಾ ಇನ್ನೊಂದು ಸಲ ಇದರ ಪ್ರಸ್ತಾಪ ಮಾಡಿದರೆ ಸಿಟ್ಟು ಮಾಡ್ಕೋತೀಯಾ." – ಭುಜ ಹಾರಿಸುತ್ತ ನರೇಶ ಹೇಳಿದ.

"ಮನೆ ಅಂತೂ ಇದೆಯಲ್ಲ. ಈಗ ಸರಕಾರ ಕೊಡೋ ಮನೆಯಲ್ಲಿ ಇದ್ದು ಬಿಡೋಣ. ಆ ಮೇಲೆ ಅಪ್ಪನ ಮನೆಗೆ ಹೋಗಿ ಬಿಡೋಣ. ಆ ಮನೆ ಅಂತೂ ನನ್ನ ಹೆಸರಿಗೇ ಇದೆ!" ಶಾಲ್ಮಲಿ ಹೇಳಿದಳು.

"ಹಾಗಾದರೆ ಇನ್ನೂ ಒಳ್ಳೇದೇ! ನೋಡು ನಮಗೆ ಇಬ್ಬರು ಮಕ್ಕಳು ಇದ್ದಾರೇಂದ್ರೆ, ಒಂದಕ್ಕೆ ನಿನ್ನ ಹೆಸರಿನ ಮನೆ ಆಯ್ತು. ಎರಡನೇದಕ್ಕೆ ಈಗಿನಿಂದಲೇ ಡಿ.ಡಿ.ಎ.ನಲ್ಲಿ ಬುಕ್ ಮಾಡಿಬಿಡೋಣ. ಆಮೇಲೆ ಸರಕಾರದ ಮನೆ ಪಡೆಯೋಕೆ ಪ್ರಯತ್ನ ಮಾಡೋಣ. ಸರಿತಾನೇ?" ನರೇಶ್ ಶಾಲ್ಮಲಿಯ ಕಡೆ ನೋಡುತ್ತಾ ಗಂಭೀರವಾಗಿ ಹೇಳಿದ.

"ಹಣ ಬ್ಯಾಂಕ್‌ನಲ್ಲೇ ಇರಲಿ ಬಿಡಿ. ಅದು ಅಲ್ಲೇ ಇದ್ದರೆ ನಿಮಗೇನಾದ್ರೂ ತೊಂದರೆ ಆಗ್ತಿದೆಯಾ?" ಎಂದು ನಗುತ್ತಾ ಅವನಿಂದ ಪಾಸ್‌ಬುಕ್ ಕಸಿದುಕೊಂಡು ಮೇಜಿನ ಡ್ರಾನಲ್ಲಿ ಹಾಕಿದಳು.

"ಹಾಗಾದರೆ ಇನ್ನೊಂದು ಕೆಲ್ಸ ಮಾಡೋಣ. ಸ್ವಲ್ಪ ಷೇರುಗಳನ್ನು ಕೊಂಡುಕೊಳ್ಳೋಣ. ಇಲ್ಲಾಂದ್ರೆ ಯಾವುದಾದರೂ ಪಾರ್ಟನರ್‌ಷಿಪ್‌ನಲ್ಲಿ ಸಣ್ಣ ಪುಟ್ಟ ಬಿಜಿನೆಸ್ ಮಾಡೋಣ. ಮೂಲ ಧನವೂ ಹಾಗೇ ಇರುತ್ತೆ, ಜೊತೆಗೆ ನಮ್ಮ ಆದಾಯ ಕೂಡಾ ಹೆಚ್ಚಾಗುತ್ತೆ. ನಾಳೆ ನಮ್ಮ ಕುಟುಂಬದ ಭವಿಷ್ಯಕ್ಕೆ ಆಗುತ್ತೆ". ಮಲಗಿಕೊಂಡೆ ಬೇರೆ ಯೋಜನೆಗಳನ್ನು ಯೋಚಿಸಿದ.

"ಏನ್ಸಮಾಚಾರ. ಬಹಳ ಎತ್ತರಕ್ಕೆ ಹೋಗ್ತಿದ್ದೀರ?" ಶಾಲ್ಮಲಿ ಕಣ್ಣು ಹೊರಳಿಸಿ ಕೇಳಿದಳು.

* * *

"ರೀ, ಕುಮಾರ್....... ನಿಮಗೆ ಫೋನ್ ಬಂದಿದೆ!" ಕೆಳಗಡೆಯಿಂದ ಮನೆಯ ಮಾಲಿಕಳ ಸ್ವರ ಕೇಳಿಸಿತು.

ನರೇಶ ಛಂಗನೆದ್ದು ಸ್ಲಿಪ್ಪರ್ ಹಾಕಿಕೊಂಡು ಮೆಟ್ಟಿಲಿಳಿದು ಕೆಳಗೆ ಬಂದ. ಶಾಲ್ಮಲಿಯ ಮಾವನಿಂದ ಫೋನ್ ಬಂದಿತ್ತು'. ಅಪ್ಪನ ಆರೋಗ್ಯ ಸುಧಾರಿಸಿದ ಸಂತೋಷಕ್ಕಾಗಿ ಸಂಜೆ ಪೂಜೆಯಿದೆ ಇಬ್ಬರೂ ಅಲ್ಲಿಗೇ ಊಟಕ್ಕೆ ಬರಬೇಕು' ಅನ್ನುವ ಸುದ್ದಿಯನ್ನು ನರೇಶ ಶಾಲ್ಮಲಿಗೆ ಕೊಟ್ಟ

"ನೋಡಿ, ಸ್ವಲ್ಪ ಬೇಗ ಹೋಗೋಣ. ಮಧ್ಯೆ ಎಲ್ಲಿಯಾದರೂ ಅಪ್ಪನಿಗಾಗಿ ಒಳ್ಳೆ ಉಡುಗೊರೆ ಕೊಂಡ್ಕೊಳ್ಳೋಣ" ಶಾಲ್ಮಲಿ ಹೇಳಿದಳು.

"ಹಾಗೇ ಆಗಲಿ" – ಎದ್ದು ನರೇಶ್ ಮುಖಕ್ಷೌರ ಮಾಡಿಕೊಳ್ಳಲು ಅಣಿಯಾದ.

"ಹಾಗಾದರೆ ನಾನು ಸ್ನಾನಕ್ಕೆ ಹೋಗ್ತೀನಿ" ಹೇಳುತ್ತಾ ಶಾಲ್ಮಲಿ ಮಂಚದ ಕೆಳಗಿದ್ದ ಸೂಟ್ಕೇಸನ್ನೆಳೆದು, ಮದುವೆಯ ಸೀರೆಗಳಲ್ಲಿ ಸ್ವಲ್ಪ ಸಿಂಪಲ್ ಆಗಿರುವುದನ್ನು ಆರಿಸಿಕೊಂಡಳು. ಶಾಲ್ಮಲಿ ಜೀವನದಲ್ಲಿ ಏನು ಬೇಕೆಂದು ಬಯಸಿದಳೋ, ಪ್ರಸ್ತುತ ಅವಳಿಗೆ ಅದೆಲ್ಲಾ ದೊರೆತಿದ್ದವು. ಇಡೀ ದಿವಸ ಕೆಲಸದಲ್ಲಿ ತೊಡಗಿದ್ದು ಆಫೀಸಿನಿಂದ ಮನೆಗೆ ಬಂದಾಗ ದಣಿವಿನ ಎಡೆಯಲ್ಲಿ ಏನೋ ಒಂದು ಬಗೆಯ ಉತ್ಸಾಹ. ಹುಮ್ಮಸ್ಸುಗಳು ಅವರ ನರನಾಡಿಗಳಲ್ಲಿ ಉಕ್ಕುತ್ತಿತ್ತು. ಅವಳನ್ನು ವಿಶ್ವಾಸದ ಗಟ್ಟಿ ನೆಲದ ಮೇಲೆ ಇರಿಸುತ್ತಿತ್ತು. ಮನಸ್ಸಿಟ್ಟು ನರೇಶನಿಗೆ ಬೇಕಾದ ರುಚಿ ರುಚಿಯಾದ (ಪದಾರ್ಥಗಳನ್ನು) ಅಡುಗೆ ಮಾಡಿ ಅವನಿಗೆ ಬಡಿಸುತ್ತಿದ್ದಳು.

ರಜೆಯ ಸಂಜೆಗಳಲ್ಲಿ ಕ್ಲಬ್ಬಿನಲ್ಲೋ ಇಲ್ಲ ಯಾರದಾದರೂ ಮನೆಯಲ್ಲೋ ಊಟವಾಗುತ್ತಿತ್ತು. ಗೆಳೆಯರು ಬರುವುದು ಈಗ ಕಡಿಮೆಯಾಗಿತ್ತು. ನರೇಶನಿಗೂ ಹೆಚ್ಚಾಗಿ ಆ ಕಡೆ ಗಮನ ಹೋಗುತ್ತಿರಲಿಲ್ಲ. ತನ್ನ ಗೆಳೆಯರಿಗಿಂತ ಶಾಲ್ಮಲಿಯನ್ನು ಕಾಣಲು ಬರುತ್ತಿದ್ದವರೊಂದಿಗೆ ಬೆರೆಯಲು ಮನಸ್ಸಾಗುತ್ತಿತ್ತು.

"ಹೊತ್ತಾಗಿ ಬರಬೇಕೂಂದ್ರೆ ಎಷ್ಟು ಕಷ್ಟವಾಗುತ್ತೆ. ನಾವು ಯಾಕೆ ಒಂದು ಕಾರನ್ನು ಬುಕ್ ಮಾಡಬಾರದು?" ಒಂದು ದಿನ ರಸ್ತೆಯ ಪಕ್ಕದಲ್ಲಿ ಬಸ್ಸಿಗಾಗಿ ಕಾದು ಕಾದು ಬೇಸರವಾಗಿ ಹೇಳಿದ.

"ಕಾರಿಲ್ಲದೆ ನಡೆಯುವವರೆಗೆ ನಡಿಯಲಿ" ಶಾಲ್ಮಲಿ ನಿರ್ಲಕ್ಷ್ಯದಿಂದ ಹೇಳಿದಳು.
"ನಿನ್ನನ್ನು ನೋಡುವುದಕ್ಕೆ ಬರುವವರ ಹತ್ತಿರವೆಲ್ಲ ಕಾರುಗಳಿವೆ. ಅವರು ನಮಗೆ ಲಿಫ್ಟ್ ಕೊಡುವಾಗ ನನಗೆ ಬಹಳ ಸಣ್ಣತನ ಅನಿಸುತ್ತೆ" ನರೇಶ್ ಹೇಳಿದ.

"ನಾವಿರುವುದು ದಿಲ್ಲಿಯಲ್ಲಿ. ಇಲ್ಲಿ ಎಲ್ಲರೂ ದೊಡ್ಡವರೇ. ಪ್ರತಿ ಎರಡನೆಯವನು ಮೊದಲಿನವನಿಗಿಂತ ದೊಡ್ಡವನಾಗಿಯೇ ಇರ್ತಾನೆ. ನಮ್ಮನ್ನು ನಾವು ನಿಯಂತ್ರಿಸಿಕೊಂಡು ಬದುಕದಿದ್ದರೆ, ನಮ್ಮ ಆಕಾಂಕ್ಷೆಗಳಿಗೆ ಕೊನೆಯೇ ಇರುವುದಿಲ್ಲ. ಎಲ್ಲಾ ಕಪ್ಪು ಹಣ!

"ಮನೆಗಳಲ್ಲಿ ಬ್ಯಾಂಕುಗಳಲ್ಲಿ ಏನೆಲ್ಲ, ಎಷ್ಟೆಲ್ಲಾ ತುಂಬಿದೆ!" ಶಾಲ್ಮಲಿ ಹೇಳಿದಳು.

ಸರಿಬಿಡು. ನಾವೇನು ಬೇರೆಯವರ ಮೇಲೆ ಅಸೂಯೆಪಟ್ಟು ಕಾತುರಗೊಳ್ತಿವಲ್ಲ. ಅದರ ಅಗತ್ಯ ನಮಗೆ ಇದೆ. ನೋಡು, ರಾತ್ರಿ ಹತ್ತೂವರೆ ಗಂಟೆ ಆಗ್ತಿದೆ". ನರೇಶ್ ಕರವಸ್ತ್ರದಿಂದ ಮುಖ ಒರೆಸಿಕೊಂಡ. "ಸರಿ ಆಯ್ತು. ನೀನೇ ಗೆದ್ದೆ ನಾನೇ ಸೋತೆ?" ಶಾಲ್ಮಲಿ ನಕ್ಕು ಹೇಳಿದಳು. ಬಸ್ ಬಂತು. ಇಬ್ಬರೂ ಹೋಗಿ ಹತ್ತಿದರು. ಬಸ್ಸಿನಲ್ಲಿ ಕುಳಿತು. ಹೊರಗಡೆ ರಸ್ತೆಯಲ್ಲಿ ಹೋಗಿ ಬರುತ್ತಿದ್ದ ಕಾರುಗಳ ಬಣ್ಣಗಳನ್ನು ಗಮನಿಸುತ್ತಾ, ತನಗೆ ಇಷ್ಟವಾಗಬಹುದಾದ ಬಣ್ಣದ ಆಯ್ಕೆಯನ್ನು ಮಾಡಿಕೊಳ್ಳುತ್ತಿದ್ದ. ಶಾಲ್ಮಲಿ ತನ್ನ ಆಫೀಸಿನ ಫೈಲುಗಳ ಬಗ್ಗೆ ಯೋಚಿಸುತ್ತಿದ್ದಳು.

ಶಾಲ್ಮಲಿ ಹುಟ್ಟಿದ್ದು ದಿಲ್ಲಿಯಲ್ಲಿ. ವಾಸ್ತವವಾಗಿ ದಿಲ್ಲಿ ಅವಳ ಹಿರಿಯರು ಬಾಳಿ ಬದುಕಿದ್ದ ಊರು. ಎಲ್ಲಿ ಚಿಕ್ಕದಾಗಿದ್ದಾಗ ಕಾಡಾಗಿತ್ತು. ದಿಲ್ಲಿ ದಿಲ್ಲಿಯಾಗಿತ್ತು. ಆದರೆ ಈಗ ಎಷ್ಟೊಂದು ಹೊಸ ಹೊಸ ಪ್ರದೇಶಗಳು ಹುಟ್ಟಿಕೊಂಡಿವೆ. ಶಾಲ್ಮಲಿ ಎಂದಾದರೂ ಕಣ್ಮರೆಯಾಗಿರುವ ಇಲಾಖೆಗಳ ಕಡೆ ಹೋದರೆ ಒಂದು ಕಾಲಕ್ಕೆ ಇಲ್ಲೆಲ್ಲ ಅರಾವಳಿ ಬೆಟ್ಟಗಳು, ಇವುಗಳ ಮಧ್ಯೆ ಹಬ್ಬಿದ್ದ ಗಿಡಗಳ ಸಮೂಹ, ಪೊದೆಗಳು ನೆನಪಾಗುತ್ತಿದ್ದವು. ಈಗ ಅವುಗಳ ಜಾಗದಲ್ಲಿ ನೋಡ್ತಾ ನೋಡ್ತಾ, ಡಿ.ಡಿ.ಎ. ಕಟ್ಟಿದ ಮನೆಗಳು, ರಸ್ತೆಗಳು, ಇಡಿಕಿರಿದ ಪೇಟೆಗಳು ಹುಟ್ಟಿಕೊಂಡಿವೆ. ಎತ್ತರವಾದ ಕಟ್ಟಡಗಳು, ದೊಡ್ಡ ದೊಡ್ಡ ವಿಸ್ತಾರವಾದ ಕಾಲೋನಿಗಳು – ಇವುಗಳನ್ನು ನೋಡಿದಾಗ ಶಾಲ್ಮಲಿ ಯೋಚಿಸುತ್ತಿದ್ದಳು – "ಮುಂದೆ ದಿಲ್ಲಿಯ ಗತಿಯೇನು?" ಪ್ರತಿವರ್ಷ ಇಷ್ಟೊಂದು ಜನ ಇಲ್ಲಿಗೆ ಎಲ್ಲಿಂದ ಬರುತ್ತಾರೆ?" ಎಂದು.

ಆಫೀಸಿನ ಕಿಟಕಿಯಿಂದ ನೋಡಿದಾಗಲೆಲ್ಲ, ಎಷ್ಟೊಂದು ಕ್ರೇನುಗಳು, ಉರುಳಿ ಬೀಳುತ್ತಾ ಏಳುತ್ತಾ ಇರುವ ಎಷ್ಟೊಂದು ಕಟ್ಟಡಗಳು ಕಾಣಿಸುತ್ತಿದ್ದವು. ಇಷ್ಟೊಂದು ಜನ, ತನಗೆ ಪರಿಚಯವಿಲ್ಲದ, ತನ್ನನ್ನು ಅರಿಯದ ಜನವೂ ಕೂಡಾ ತನ್ನ ಹಾಗೆಯೇ ಜೀವನವನ್ನು ಒಂದು ಸವಾಲೆಂದು ಸ್ವೀಕರಿಸಿ, ಸಂಘರ್ಷಕ್ಕೆ ಮಹತ್ವವನ್ನು ನೀಡುತ್ತಲೇ ಬದುಕುತ್ತಿರಬಹುದು ಈ ಪ್ರಪಂಚ. 'ಮನುಷ್ಯ' ಈ ಜನ – ಇದೆಲ್ಲದರ ಅರ್ಥವೇನು? ಎಂದೆಲ್ಲ ಯೋಚಿಸುತ್ತಿದ್ದಳು.

ಅಪ್ಪ ಅಂತೂ ದಿಲ್ಲಿ ಬಗ್ಗೆ ಏನೇನೋ ವಿಚಿತ್ರಗಳನ್ನು ಹೇಳುತ್ತಿದ್ದರು. ತಮ್ಮ ಕಣ್ಮುಂದೇನೇ ದಿಲ್ಲಿ ಎಲ್ಲಿಂದ ಎಲ್ಲಿಗೆ ಬೆಳೆದಿದೆ ಅನ್ನೋದನ್ನೂ ಕಣ್ಣಿಗೆ ಕಟ್ಟಿದ ಹಾಗೆ ವಿವರಿಸುತ್ತಿದ್ದರು. ಈ ದೊಡ್ಡ ದೊಡ್ಡ ಮಹಡಿಗಳ ನಡುವೆ ಪುಟ್ಟ ಹಳ್ಳಿಗಳು, ಅವುಗಳಲ್ಲಿ ಕಾಣುತ್ತಿದ್ದ ಕಟ್ಟಿದ ಎಮ್ಮೆಗಳು, ಹೊರಗೆ ಚಾಪೆಗಳ ಮೇಲೆ ಕುಳಿತಿರುತ್ತಿದ್ದ ಚೌಧರಿಗಳ ಕಣ್ಣುಗಳು – ಇವೆಲ್ಲವನ್ನು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಭೂಮಿನೆಲ್ಲಾ ದೊಡ್ಡ ದೊಡ್ಡ ಮೊತ್ತಕ್ಕೆ ಸರಕಾರಕ್ಕೆ ಮಾರಿ ಬಂದ ಹಣದಿಂದ ವಿಲಾಸಗಳಲ್ಲಿ

ಮುಳುಗಿದ್ದರು. ಕೆಲವರಂತೂ ಇಟ್ಟಿಗೆ ಭಟ್ಟಿಗಳ ಮಾಲಿಕರಾಗಿ ಬಿಟ್ಟಿದ್ದರು. ಹಳ್ಳಿಗಳ ಮಧ್ಯೆ ಹೊಸ ಹೊಸ ಬಡಾವಣೆಗಳು ಹುಟ್ಟಿಕೊಂಡಿದ್ದವು.

ಈ ಮಾತುಗಳನ್ನೆಲ್ಲ ನರೇಶ್‌ನೊಂದಿಗೆ ಹೇಳಿದಾಗ, ಅವಳು ಸರಕಾರದ ಕ್ವಾರ್ಟರ್ಸ್‌ಗಾಗಿ ಸರಿಯಾಗಿ ಪ್ರಯತ್ನ ಮಾಡುತ್ತಿಲ್ಲವೆಂದು ದೂರುತ್ತಿದ್ದ. ಈ ಊರಲ್ಲಿ (ದಿಲ್ಲಿ) ಪ್ರತಿಯೊಂದಕ್ಕೂ ಸ್ಪರ್ಧೆಯು ಓಟ ಇರುವಾಗ ಸುಮ್ಮನೆ ಕೈಕಟ್ಟಿ ಕುಳಿತುಕೊಳ್ಳುವವರು ಇನ್ನಿಲ್ಲದೆ ಸಾಯಬೇಕಾಗುತ್ತದೆ.

"ನಾನು ಬಹಳ ಜೂನಿಯರ್. ನನಗೆಲ್ಲಿ ಮನೆ ಸಿಗುತ್ತೆ" ಎಷ್ಟೋ ಸಲ ಈ ಮಾತನ್ನು ಹೇಳಿದ್ದಾಳೆ.

"ನೀನು ಪ್ರಯತ್ನವಂತೂ ಮಾಡು. ಯಾರನ್ನು ಕಾಣಬೇಕಂತೆ?" ವಿಚಾರಿಸು ಹೋಗಿ ಇಬ್ಬರೂ ಭೇಟಿ ಮಡಿ ಬರೋಣ. ನಮ್ಮ ಮಂತ್ರಿಗಳಿಂದ ಹೇಳಿಸಿದರೆ ಆಗೋದಿಲ್ವೇನು?" ನರೇಶ್ ಆತುರದಿಂದ ಹೇಳಿದ.

"ಯಾರ ಉಪಕಾರ ಯಾಕೆ ಬೇಕು?" ಕೆಲವು ವರ್ಷ ಆದ ಮೇಲೆ ತನಗೆ ತಾನೇ ಸಿಗುತ್ತೆ ನನ್ನ ಛಾನ್ಸ್ ಬಂದೇ ಬರುತ್ತೆ ಹುಬ್ಬು ಗಂಟಿಕ್ಕಿ ಹೇಳಿದಳು.

"ನೀನು ಮುಖ್ಯವಾಗಿರುವ ವಿಷಯಗಳನ್ನು ಸಲೀಸಾಗಿ ತಳ್ಳಿ ಹಾಕಿ ಬಿಡ್ತೀಯ. ನನಗೆ ಕೋಪ ಬರುವ ಹಾಗೆ ಮಾಡ್ತೀಯ, ಯಾರಿಂದಲೂ ಹೇಳಿಸುವುದಕ್ಕೆ ಇಷ್ಟ ಇಲ್ಲದಿದ್ರೆ ಬೇರೆ ಇನ್ನೇನಾದ್ರೂ ಮಾರ್ಗ ಹುಡುಕೋಣ ಲಂಚ ಕೊಟ್ಟು ನಿನ್ನ ಹೆಸರು ಬರುವ ಹಾಗೆ ಮಾಡೋಣ" ನರೇಶ್ ಹಠ ಹಿಡಿದವನಂತೆ ಹೇಳಿದ.

"ನೀನು ಸಣ್ಣ ಪುಟ್ಟ ವಿಷಯಗಳಿಗೆಲ್ಲ ಯಾಕಿಷ್ಟು ಉದ್ರೇಕಗೊಳ್ತೀ?" ಶಾಲ್ಮಲಿ ನರೇಶನನ್ನು ದಿಟ್ಟಿಸಿ ನೋಡಿದಳು.

"ಯಾಕೇಂದ್ರೆ ನೀನು ಹೆಣ್ಣು ನಿನಗೆ ಈ ಮಾತಿನ ಮಹತ್ವ ಅರ್ಥ ಆಗೊಲ್ಲ ಅಂತ. ನಾನು ಏನಾದರೂ ಹೇಳಿದರೆ ಅದರ ಕಡೆ ಲಕ್ಷ್ಯವೇ ಇರೋದಿಲ್ಲ ನಿನಗೆ. ಹೀಗೆ ಮಾಡಿದರೆ ಕೋಪ ಬರುತ್ತೋ ಇಲ್ವೋ?" ನರೇಶ್ ಅಸಮಾಧಾನದಿಂದ ಹೇಳಿದ.

"ನೋಡು, ನಿನಗೆ ನಾನು ಕೈ ಮುಗಿದು ಕೇಳಿ ಕೊಳ್ತೀನಿ. ದಯವಿಟ್ಟು ಇನ್ನು ಮುಂದೆ ಮಾತು ಮಾತಿಗೆ 'ಹೆಣ್ಣು ಹೆಂಗಸು' ಅಂತ ಟೀಕೆ ಗೀಕೆ ಮಾಡುವುದನ್ನು ಬಿಡು. ಎರಡನೆ ಮಾತು ಅಂದ್ರೆ, ಹೆಂಗಸಿನ ಬುದ್ಧಿ ಸಾಮರ್ಥ್ಯದ ಬಗ್ಗೆ ಸಂದೇಹ ಮಾಡುವುದನ್ನು ಬಿಡು. ನಾವು ಹೆಂಗಸರು – ಗಂಡಸರಾಗೋಲ್ಲ. ನಮ್ಮ ಕೆಲಸವೇ ನಮ್ಮ ಗುರುತು. ನಮ್ಮ ಬುದ್ಧಿ ನಮ್ಮ ಪರೀಕ್ಷೆ" – ಗಂಭೀರವಾಗಿ ಹೇಳಿದಳು.

"ಆಯ್ತು ಹೇಳೋದಿಲ್ಲ. ಆದರೆ ನಾನು ಹೇಳುವ ಹಾಗೆ ನೀನು ಮಾಡ್ತಿದ್ದೀ ಸರಿ. ಈಗ ಹೇಳು, ಮನೆ ವಿಚಾರದಲ್ಲಿ ಏನು ಮಾಡ್ಬೇಕಂತೀಯ? – ನರೇಶ್ ಮೊದಲಿನ ಧಾಟಿಯಲ್ಲಿಯೇ ಹೇಳಿದ.

"ನಾಳೆ ವಿಚಾರಿಸಿ ಹೇಳ್ತೀನಿ, ಏನು ಮಾಡಬಹುದೂಂತ! ಎಂದು ಹೇಳಿ ನರೇಶನ ಕುತೂಹಲವನ್ನು ತಣಿಸಿ, ಎದ್ದು ಟೆರ್ರೇಸ್ ಮೇಲೆ ಹೋಗಿ ಒಣಗಿದ ಬಟ್ಟೆಗಳನ್ನೆಲ್ಲ ತೆಗೆದಳು.

"ಕಾರು ಕೊಳ್ಳೋದಕ್ಕೆ ನೀನು ಆಪ್ಲಿಕೇಷನ್ ಕೊಟ್ಟಿದ್ದೀ ತಾನೇ?" ನರೇಶ್ ಅವಳನ್ನು ಅನುಸರಿಸುತ್ತ ಟೆರ್ರೇಸ್ ಮೇಲೇ ಹೋದ. "ಹೂಂ" ಶಾಲ್ಮಲಿ ನಿಧಾನವಾಗಿ ಹೂಂ ಗುಟ್ಟಿ, ತೆಗೆದಿರಿಸಿದ ಬಟ್ಟೆಗಳನ್ನು ಹಿಡಿದು ವೇಗವಾಗಿ ಒಳಗೆ ಹೋದಳು. ಒಂದೊಂದು ಸಲ ನರೇಶನ ಈ ವರ್ತನೆಯಿಂದ ಅಸಹ್ಯವಾಗುತ್ತಿತ್ತು. ಇವೆಲ್ಲ ಈಗಿನ ಕಾಲದಲ್ಲಿ ಅಗತ್ಯವೇ ಇದ್ದರೂ, ಎಲ್ಲವನ್ನೂ ಒಂದೇ ಸಲಕ್ಕೆ ಗಳಿಸಿಕೊಳ್ಳೋಕೆ ಹೇಗೆ ಸಾಧ್ಯವಾಗುತ್ತೆ?

ಎದ್ದರೆ ಕೂತರೆ ನರೇಶನ ತಲೇಲಿ ಕಾರು, ಮನೆ ಇವೆರಡೇ ಸುಳಿಯುತ್ತಿತ್ತು. ಇಲ್ಲಿವರೆಗೆ ಶಾಲ್ಮಲಿಗೆ ಪರಿಚಿತರಾದವರ ಮನೆಗಳಲ್ಲಿನ ಬದುಕಿನ ಶೈಲಿಯನ್ನು ಎಚ್ಚರಿಕೆಯಿಂದ ಗಮನಿಸಿದ್ದ. ಹಲವು ಸಲ ಸುತ್ತಿ ಬಳಸಿ ಅವರಲ್ಲಿನ ವಸ್ತುಗಳ ವಿಚಾರವಾಗಿ ತಿಳಿದುಕೊಂಡಿದ್ದ. ಅವನಲ್ಲಿ ಒಂದೇ ಒಂದು ಆಸೆ ಪ್ರಬಲವಾಗತೊಡಗಿತು – 'ಸಂಪೂರ್ಣವಾಗಿ ಗ್ರಾಮ್ಯ ಶೈಲಿಯಿಂದ ಮುಕ್ತಿ ಹೊಂದಿ ಇವರ ಹಾಗೆ ಅತ್ಯಂತ ಆಧುನಿಕವಾಗಿ ಬದುಕಬೇಕು' ಎಂದು ಅವನಿಗೆ ಶಾಲ್ಮಲಿಯ ತಂದೆ ತಾಯಿಗಳನ್ನು ನೋಡಿದಾಗಲೆಲ್ಲ ಆಶ್ಚರ್ಯವಾಗುತ್ತಿತ್ತು. ತಲೆ ತಲೆ ಮಾರುಗಳಿಂದ ದಿಲ್ಲಿಯಲ್ಲಿಯೇ ವಾಸವಾಗಿದ್ದು ಇಷ್ಟೊಂದು ಸರಳವಾಗಿ ಹೇಗೆ ಬದುಕುತ್ತಿದ್ದಾರೆ! ದಿಲ್ಲಿಯ ಜನನಿಬಿಡ ಇಲಾಖೆಯಲ್ಲಿದ್ದು ಕೇವಲ ಮೂರು ಕೋಣೆಗಳ ಮನೆ ಮಾಡಲು ಮಾತ್ರ ಸಾಧ್ಯವಾಯಿತೇ? – ಎಂದೆಲ್ಲ ಯೋಚಿಸಿ ಆಶ್ಚರ್ಯಪಡುತ್ತಿದ್ದ.

ನರೇಶನ ತಲೆಯಲ್ಲಿ ಹೊಸ ಹೊಸ ಯೋಚನೆಗಳು ರೂಪುಗೊಳ್ಳುತ್ತಿದ್ದವು. ಶಾಲ್ಮಲಿ ಸ್ವಲ್ಪ ತನ್ನೊಂದಿಗೆ ಸಹಕರಿಸಿದರೆ ಸಾಕಷ್ಟು ಸಾಧಿಸಬಹುದಿತ್ತು. ಆದರೆ ಅದೇಕೋ ಏನೋ, ಅವಳ ವಿಚಾರಗಳು ಯಾವುದೋ ಹಳೇ ಕಾಲದ, ಯಾವುದೋ ತಲೆಮಾರಿನ ವಿಚಾರಗಳಂತೆ ಹಿಂದುಳಿದಿದ್ದವು. ಒಳ್ಳೆ ಆಮೆ ನಡಿಗೆಯುಳ್ಳದ್ದಾಗಿದ್ದವು. ಕೆಲಸ ಮಾಡುವುದರಲ್ಲಿ ಅವಳಿಗೆ ಅದೇನು ಸುಖ ಸಿಗುತ್ತಿದೆಯೋ, ಅದರ ಲಾಭ ಪಡೆಯುವುದಕ್ಕೂ ಹಿಂಜರಿಯುತ್ತಾಳೆ. ಇರಲಿ ನಾನು ಕ್ರಮೇಣ ಅವಳನ್ನು ದಾರಿಗೆ ತರುತ್ತೇನೆ. ಈ ಹೆಂಗಸರೇ ಹೀಗೆ! ಕಷ್ಟ ಪಟ್ಟು ಕೆಲಸ ಮಾಡ್ತಾರೆ. ಆದರ ಬುದ್ಧಿ ಮಾತ್ರ ಉಪಯೋಗಿಸೋದಿಲ್ಲ. ಬರೀ ಕೆಲಸ ಕೆಲಸ! ಯಾವಾಗಲೂ ಕೆಲಸದಲ್ಲಿ ತೊಡಗಿರುತ್ತಾರೆ.

ನರೇಶ್ ತನ್ನ ಆಫೀಸ್ ಕೆಲಸಗಳಿಗಿಂತ ಶಾಲ್ಮಲಿಯ ಕೆಲಸಗಳಲ್ಲಿ ಆಸಕ್ತಿ ತೋರಿಸುತ್ತಿದ್ದ. ತನ್ನ ಭವಿಷ್ಯಕ್ಕಿಂತ ಶಾಲ್ಮಲಿಯ ಭವಿಷ್ಯ ಉಜ್ವಲವೆನಿಸತೊಡಗಿತು. ಅವನು ಬಯಸಿದ್ದು ಅವನಿಗೆ ಸಿಕ್ಕಿತ್ತು. ತನ್ನ ಅದೃಷ್ಟದ ಬಗ್ಗೆ ನಿಶ್ಚಿಂತನಾಗಿದ್ದ. ತನ್ನ ಅಂತಸ್ತು ಅಷ್ಟೇನೂ ದೊಡ್ಡದಾಗಿರಲಿಲ್ಲ. ಆದರೆ ಶಾಲ್ಮಲಿಯ ರೂಪದಲ್ಲಿ ದೊರೆತಿರುವುದೇ ಅವನಿಗೆ ಎಲ್ಲಕ್ಕಿಂತ ದೊಡ್ಡದು ಎನಿಸಿತ್ತು. ಆದ್ದರಿಮದಲೇ ಆತ್ಮತೃಪ್ತಿಗೆ ಎಣೆಯಿಲ್ಲವಾಗಿತ್ತು. ಆಫೀಸಿನಲ್ಲಿ ನಿಶ್ಚಿಂತವಾಗಿ ಗೆಳೆಯರ ಮಧ್ಯೆ ಸಂತೋಷವಾಗಿ ಕಾಲ ಕಳೆಯುತ್ತಿದ್ದ.

"ಯಾಕೆ ನೀನು ಯಾವಾಗಲೂ ಓದುವುದೇ ಇಲ್ಲ?" ಒಂದು ದಿನ ಶಾಲ್ಮಲಿ ನರೇಶನನ್ನು ಕೇಳಿದಳು.

"ಓದಬೇಕಾಗಿದ್ದುದನ್ನೆಲ್ಲ ಓದಿಯಾಯ್ತು. ಸಾಯೋ ತನಕ ವಿದ್ಯಾರ್ಥಿಯಾಗಿದ್ದುಕೊಂಡು ಓದುತ್ತಲೇ ಇರಬೇಕೇನೂ?" ನರೇಶ್ ಆರಾಮವಾಗಿ ಮಂಚದ ಮೇಲೆ ಮಲಗಿಕೊಂಡೇ ಹೇಳಿದ.

"ನಿನ್ನ ದೃಷ್ಟಿಯಲ್ಲಿ ಓದುವುದು ಅಂದ್ರೆ ಪಠ್ಯ ಪುಸ್ತಕಗಳು ಮಾತ್ರವೇನು?" ಶಾಲ್ಮಲಿ ನಕ್ಕಳು.

"ಸ್ವಲ್ಪ ಟಿ.ವಿ.ಆನ್ ಮಾಡು" ಅವಳ ಮಾತಿನ ಕಡೆ ಲಕ್ಷ್ಯವಿಲ್ಲದೆ ಹೇಳಿದ.

"ಯಾವಾಗಲಾದರೂ ಕತೇನೋ ಕಾದಂಬರೀನೋ, ಕವಿತೇನೋ ಓದುತ್ತಿರು. ಅದರಿಂದ ಜೀವನದಲ್ಲಿ ಏನೆಲ್ಲ ಕಲಿಯಬಹುದು, ಅರ್ಥ ಮಾಡಿಕೊಳ್ಳಬಹುದು. ಜ್ಞಾನ ವಿಸ್ತಾರವಾಗುತ್ತೆ ಸಂಬಂಧಗಳ ಸೂಕ್ಷ್ಮತೆಯ ಗಾಢ ಪರಿಚಯವಾಗುತ್ತೆ" ಎಂದು ಹೇಳುತ್ತ ಟಿ.ವಿ.ಯನ್ನು ಹಾಕಿದಳು.

"ಇದು ಸಾಹಿತ್ಯ ಅಲ್ಲ" ಟಿ.ವಿ.ಯಲ್ಲಿ ಬರುತ್ತಿದ್ದ ನಾಟಕ ನೋಡಿ ಹೇಳಿದ.

"ಇರಬಹುದು ಆದರೆ ನಾನು ಹೇಳುತ್ತಿರುವ ಈ ಸಾಹಿತ್ಯ ಆ ಸಾಹಿತ್ಯಕ್ಕಿಂತ ಬೇರೆ....ಗಂಭೀರವಾದ್ದು" ಶಾಲ್ಮಲಿ ಹೇಳಿದಳು.

"ಪ್ಲೀಸ್, ಜೀವನ ಅನ್ನೋದು ಈಗಲೇ ಬಹಳ ಗಂಭೀರವಾದ್ದು. ಸಾಹಿತ್ಯ ಅನ್ನೋ ಟಾನಿಕ್ ಕುಡಿಸಿ ಇನ್ನಷ್ಟು ದಷ್ಟ ಪುಷ್ಟ ಮಾಡಬೇಡ. ನರೇಶ್ ಗಹಗಹಿಸಿ ನಕ್ಕು, ಎದ್ದು ಕುಳಿತ. ಶಾಲ್ಮಲಿ ಕೈಲಿದ್ದ ಪುಸ್ತಕ ಮುಚ್ಚಿ ಸಿಟ್ಟಿನಿಂದ ಟಿ.ವಿ. ಕಡೆ ಕಣ್ಣು ಹಾಯಿಸಿದಳು. ಅಲ್ಲಿಂದ ಎದ್ದು ಹೊರಟಳು.

ಟೆರ್ರೇಸ್ ಮೇಲೆ ಹೋದರೂ ಅವಳಿಗೆ ನೆಮ್ಮದಿ ಸಿಗಲಿಲ್ಲ. ಪ್ರತಿ ಮನೆಯಿಂದ ಹೊರಟ ಟಿ.ವಿ. ಯ ಧ್ವನಿಗಳು ಅವಳ ಕಿವಿಗಳಲ್ಲಿ ಗುಂಯ್ ಗುಡತೊಡಗಿದವು. ಗಾಭರಿಯಿಂದ ಒಳಗೆ ಬಂದು ಅಡುಗೆ ಮನೆ ಕಡೆ ನಡೆದಳು. ಎಲ್ಲೂ ನೆಮ್ಮದಿ ಇಲ್ಲ! ಓದಬೇಕಾದರೆ ಈ ಮನೇಲಿ ಗತಿಯಿಲ್ಲ ಬಡಬಡಿಸುತ್ತಾ ಕಾಫಿ ಮಾಡತೊಡಗಿದಳು.

"ಶಾಲೂ ತಿನ್ನೋಕೆ ಏನಾದರೂ ಇದೆಯಾ?" ನರೇಶನ ಧ್ವನಿ ಕೇಳಿಸಿತು.

"ತಂದೆ" ಶಾಲ್ಮಲಿ ಉತ್ತರಿಸಿದಳು. ಬಾಂಡ್ಲಿ ಒಲೆ ಮೇಲಿಟ್ಟಳು ಸ್ವಲ್ಪ ಹೊತ್ತಿಗೆ ಉಪ್ಪಿಟ್ಟಿನ ಗಮಲು ಹಬ್ಬಿತು.

ಶಾಲ್ಮಲಿ ತನ್ನ ಸಿಟ್ಟನ್ನು ಮರೆತು, ನರೇಶನಿಗಾಗಿ ಮನಸ್ಸಿಟ್ಟು ಒಂದಿಷ್ಟು ತಿಂಡಿ ತಯಾರಿಸುತ್ತಿದ್ದಳು. ಮೆಲ್ಲಗೆ ಗುಣುಗುಣಿಸಿದಳು.

ಶಾಲ್ಮಲಿ ಆಫೀಸಿನಿಂದ ಹಿಂತಿರುಗಿದಾಗ ತನ್ನ ಹೆಸರಿಗೆ ಬಿದ್ದಿದ್ದ ಒಂದಷ್ಟು ಕಾಗದಗಳನ್ನು ನೋಡಿ ಹಿಗ್ಗಿದಳು. ಮೇಲೆ ಬಂದು ಬಾಗಿಲು ತೆಗೆದು ಪರ್ಸ್ ಮತ್ತು ಚೀಲವನ್ನು ಹಾಸಿಗೆ ಮೇಲೆ ಒಗೆದಳು. ತಕ್ಷಣ ಮೊದಲಿಗಿದ್ದ ಪತ್ರವನ್ನು ಓದಿದಳು. ಓದಿ ಅದನ್ನು ನರೇಶನಿಗೆ ತೆಗೆದಿರಿಸದಳು. ಮಿಕ್ಕವು ಕೆಲವು ಪಾಲಿಸಿ, ಅದೂ ಇದೂ ಬೇರೆ ಏನೇನೂ ಆಗಿದ್ದವು. ಎಲ್ಲವನ್ನೂ ನರೇಶನಿಗೆಂದಿರಿಸಿ ಕೈ ಕಾಲು ಮುಖ ತೊಳೆಯಲು ಹೋದಳು.

ಚಾ ಕುಡಿದು ದಣಿವಾರಿಸಿಕೊಂಡು, ನಂತರ ಮೇಲಿನಿಂದ ಕೆಳಗೆ ನೋಡಿದಳು ನರೇಶನ ಸ್ಕೂಟರ್ ಕಾಣಲಿಲ್ಲ.

"ಏನಿರಬಹುದು?" ಎಂದುಕೊಳ್ಳುತ್ತಾ ಕೈಗಡಿಯಾರವನ್ನು ನೋಡಿಕೊಂಡಳು. ಮನಸ್ಸಿಗೆ ಬೇಸರವಾಗಿ ಒಳಗೆ ಬಂದು ಕಿಟಕಿಯೊಳಗಿಂದ ರಸ್ತೆಯ ಕಡೆ ನೋಡತೊಡಗಿದಳು. ಅಲ್ಲಿಂದ ತಿರುಗಿ ದಿಂಬಿನ ಮೇಲಿದ್ದ ಅತ್ತೆಯ ಪತ್ರವನ್ನೆತ್ತಿಕೊಂಡು ಕುರ್ಚಿಯ ಮೇಲೆ ಕುಳಿತು ಓದತೊಡಗಿದಳು.

"ಯಾರದು?" ನರೇಶನ ಧ್ವನಿ ಕೇಳಿ ಬೆಚ್ಚಿದಳು. ಅವನು ಬಂದದ್ದು ಗೊತ್ತೇ ಆಗಿರಲಿಲ್ಲ.

"ನಿನ್ನ ಅಮ್ಮನಿಂದ ಬಂದಿದೆ! ಬರೋದಿಲ್ವಂತೆ! ಎಷ್ಟೊಂದು ಹೇಳಿದ್ದೆವು!" – ಶಾಲ್ಮಲಿ ಸೋತ ಧ್ವನಿಯಲ್ಲಿ ಹೇಳಿದಳು.

"ಅವರು ಮಾಡಿದ್ದು ಸರಿಯಾಗಿಯೇ ಇದೆ. ಒಂದೇ ಒಂದು ಕೋಣೆಯಲ್ಲಿ ಮಗ-ಸೊಸೆ ಜೊತೆ ಹೇಗೆ ಇರೋದೂಂತ ಯೋಚನೆ ಮಾಡಿದ್ದಾರೆ" ಹೇಳುತ್ತಾ ಚಪ್ಪಲಿಯ ಬೆಲ್ಟ್ ಬಿಚ್ಚತೊಡಗಿದ.

'ದಿಲ್ಲಿಯಲ್ಲಿ ಹೆಚ್ಚಿನ ಜನ ಹೀಗೇ ಬದುಕೋದು" ಶಾಲ್ಮಲಿ ಯಾವುದೋ ಯೋಚನೆಯಲ್ಲಿ ಮುಳುಗಿ ಹೇಳಿದಳು.

"ಹೌದು ನೀನು ಹೇಳುವುದಿಷ್ಟೇ! ಮನಸ್ಸಿನಲ್ಲಿ ಜಾಗ ಇರಬೇಕು; ಇದ್ರೆ ಮುಗೀತು!" ನರೇಶ್ ತಕ್ಷಣ ಬಟನ್ ಬಿಚ್ಚುತ್ತಾ ಹೇಳಿದ.

"ಬೇಸರವಾಯಿತಾ?" ನರೇಶ್ ಕೇಳಿದ.

"ಇಲ್ಲ" ಖಾಲಿಯಾದ ಬಟ್ಟಲಿಗೆ ಚಾ ತುಂಬುತ್ತಾ ಹೇಳಿದಳು.

"ಹಾಗಾದರೆ ಯಾಕೆ ಸುಮ್ಮನಿದ್ದಿ?" ನರೇಶ್ ಕೆಣಕಿದ.

"ನಾನು ಮನೆಗಾಗಿ ಪ್ರಯತ್ನ ಮಾಡುತ್ತಿಲ್ಲ ಅನ್ನೋ ವಿಚಾರವೇ ನಿನ್ನ ತಲೆಯಲ್ಲಿ ಬಲವಾಗಿ ಬೇರೂರಿದೆ. ನನ್ನ ಕೈಲಿ ಏನಿದೆ? ಆಗಬೇಕಾದ್ದು, ಸಮಯ ಬಂದರೆ ತನಗೆ ತಾನೇ ಆಗುತ್ತೆ. ಅಮ್ಮ ಬರದಿರುವ ಕಾರಣವನ್ನೂ ಈ ಮನೆ ಜೊತೆಗೆ ಸೇರಿಸುತ್ತಿದ್ದೀ, ಮದುವೆ ಆದಾಗ ಒಂದುವಾರ ಇದೇ ಮನೇಲಿ ಇದ್ದರಲ್ಲ" – ಶಾಲ್ಮಲಿಯ ಮುಖದ ಮೇಲೆ ನಿರಾಶೆ ಕವಿಯಿತು. "ನಾನು ಮನೆಯ ವಿಷಯ ಪ್ರಸ್ತಾಪ ಮಾಡಿದೆನಾ? – ನರೇಶ್ ಪ್ರತಿಯಾಗಿ ಕೇಳಿದ.

"ಎರಡು ಕೋಣೆ ಇರುವಂತಹ ಮನೆ ಹುಡುಕಿದರೆ ಎಲ್ಲಾದರೂ ಸಿಕ್ಕೇ ಸಿಗುತ್ತೆ" ಶಾಲ್ಮಲಿ ಹೇಳಿದಳು.

"ನಾನು ಒಂದ್ಮಾತು ಹೇಳ್ತೀನಿ ನೋಡು, ಶಾಲೂ. ನೀನು ಮನೆಯವರೊಂದಿಗೆ ಎಷ್ಟು ಚೆನ್ನಾಗಿ ಹೊಂದಿಕೊಂಡಿದ್ದೀಯೋ, ಮುಂದೆ ಅದರಿಂದ ನಿರಾಶೆ ಆದರೆ, ನನ್ನನ್ನು ದೂಷಿಸಬೇಡ. ಆಗ ಏನೇ ಆದರೂ ನನ್ನನ್ನು ಅಪರಾಧಿಯಾಗಿಸಬೇಡ. ನನ್ನ ಮನೆಯವರ ವಿಚಾರ ನನಗೆ ಚೆನ್ನಾಗಿ ಗೊತ್ತು. ಅತಿಯಾಗಿ ಹತ್ತಿರ ಬಂದರೆ ಕೊನೆಗೆ ಪರಿಣಾಮ ಏನಾಗುತ್ತೆ ಅಂತ ಕೂಡಾ ಗೊತ್ತು. ಅಮ್ಮನ ವಿಷಯ ಬಿಡು. ಬೇರೆಯವರು ಯಾರಾದರೂ ಈ ಮನೆಗೆ ಬಂದರೆ, ಹೋಗೋ ಮಾತೇ ಇರೊಲ್ಲ. ಆಗ ಮಾತ್ರ ನಿನ್ನಿಷ್ಟ! ಯೋಚನೆ ಮಾಡು. ಬೇರೆಯವರಿಗಾಗಿ ನಾನು ಯಾವುದೇ ಕಾರಣಕ್ಕಾಗಿ ಬಲಿಪಶುವಾಗಲು ಸಿದ್ಧವಾಗಿಲ್ಲ". ನರೇಶ ಸ್ಪಷ್ಟವಾಗಿ ಹೇಳಿಬಿಟ್ಟ.

ಇದೆಲ್ಲವನ್ನು ಕೇಳಿ ಶಾಲ್ಮಲಿ ಅವಾಕ್ಕಾಗಿ ನರೇಶನನ್ನೇ ದೃಷ್ಟಿಸಿ ನೋಡಿದಳು. ಸ್ವಲ್ಪ ಹೊತ್ತಿನ ನಂತರ ಕೇಳಿದಳು.

"ಯಾಕೆ ಹೀಗೆ ಯೋಚಿಸ್ತೀ. ಕಾರಣ ಏನು?"

"ನನಗೆ ಕಾರಣ – ಗೀರಣ ಗೊತ್ತಿಲ್ಲ. ಹೇಳಬೇಕಾದ್ದನ್ನು ಹೇಳಿ ಬಿಟ್ಟಿದ್ದೀನಿ" ನರೇಶ್ ಹೇಳಿದ. ಬಟ್ಟೆ ತೆಗೆದುಕೊಂಡು ಸ್ನಾನ ಮಾಡಲು ಹೊರಟ.

"ಗೊತ್ತಿಲ್ಲ?" ತನಗೆ ತಾನೇ ಹೇಳಿಕೊಂಡು ಮುಸುರೆ ಪಾತ್ರೆ ತೊಳೆಯಲು ಅಡುಗೆ ಮನೆ ಕಡೆ ನಡೆದಳು.

"ಇವತ್ತು ಹೊರಗಡೆ ಊಟ ಮಾಡೋಣ" ನರೇಶ್ ಬಚ್ಚಲಿನಿಂದ ಹೊರಗೆ ಬರುತ್ತಾ ಹೇಳಿದ.

“ಎಲ್ಲಿ?” ಶಾಲ್ಮಲಿ ಕೇಳಿದಳು.

“ಇನ್ನೂ ಯೋಚ್ನೆ ಮಾಡಿಲ್ಲ. ಹೋಗ್ತಾ ದಾರೀಲಿ ಯೋಚನೆ ಮಾಡಿದರೆ ಆಯ್ತು” ಹೇಳುತ್ತಾ ಉಳಿದ ಪತ್ರಗಳನ್ನು ಗಮನವಿಟ್ಟು ಓದತೊಡಗಿದೆ. ಆಮೇಲೆ ಹಳೇ ಪತ್ರಗಳ ಫೈಲಿನಲ್ಲಿ ಅವುಗಳನ್ನು ಇಡತೊಡಗಿದ.

ಶಾಲ್ಮಲಿ ನರೇಶ್‌ನೊಂದಿಗೆ ಎರಡು ಸ್ತರಗಳಲ್ಲಿ ಬದುಕುತ್ತಿದ್ದಳು. ಒಂದು ವ್ಯಾವಹಾರಿಕ ಸ್ತರದಲ್ಲಿ ಎರಡನೆಯದು ಮಾನಸಿಕ ಸ್ತರದಲ್ಲಿ. ಒಮ್ಮೊಮ್ಮೆ ಯೋಚಿಸುತ್ತಿದ್ದಳು – ನರೇಶನೂ ಕೂಡಾ ನನ್ನಂತೆ ನನ್ನೊಂದಿಗೆ ಎರಡು ಸ್ತರಗಳಲ್ಲಿ ಬದುಕುತ್ತಿರುವನೇ? ಒಂದು ಹೊರಗಿನ ಮತ್ತೊಂದು ಒಳಗಿನ ಸ್ತರ. ಇವನೊಂದಿಗೆ ಮಾತ್ರ ಯಾಕೆ ಹೀಗೆ? ಬೇರೆ ಮಾನವೀಯ ಸಂಬಂಧಗಳಿಗಿಂತ ಇವನ ಜೊತೆಗಿನ ಸಂಬಂಧ ಬೇರೆಯೇ?

ಶಾಲ್ಮಲಿ ಆಗಾಗ ಯೋಚಿಸುತ್ತಿದ್ದಳು. ನಾನೆಂದೂ ಅವನ ಆಫೀಸಿನ ಕೆಲಸಗಳಲ್ಲಿ ನನ್ನ ಅಭಿಪ್ರಾಯಗಳನ್ನು ಹೇರುವುದಿಲ್ಲ, ಆದರೂ ಅವನ ಕಷ್ಟಗಳು, ಸಮಸ್ಯೆಗಳು ಏನೂಂತ ತಿಳಿದು ಬೇರೆ ಬೇರೆ ದೃಷ್ಟಿಗಳಿಂದ ಅವುಗಳಿಗೆ ಪರಿಹಾರವನ್ನು ಯೋಚಿಸಿ ಅವನಿಗೆ ಸಲಹೆ ನೀಡುವ ಉದ್ದೇಶದಿಂದ ಪ್ರಶ್ನೆಗಳನ್ನು ಕೇಳಿರಬಹುದೇ ಹೊರತಾಗಿ ಎಂದೂ ನನ್ನ ಸಲಹೆಗಳನ್ನು ಅಭಿಪ್ರಾಯಗಳನ್ನು ಅವನ ಮೇಲೆ ಹೇರಲಿಲ್ಲ. ಆದರೆ ಇವನು ನನ್ನ ಪ್ರತಿಯೊಂದು ವಿಷಯದಲ್ಲಿಯೂ ತನ್ನ ಅಭಿಪ್ರಾಯವನ್ನೇ ಮೇಲಿಡುತ್ತಾನೆ. ಯಾಕೆ ಹೀಗೆ? ಪ್ರತಿಯೊಬ್ಬರಿಗೂ ತಮ್ಮ ಸಮಸ್ಯೆಗಳ ಒಳ ಹೊರಗುಗಳನ್ನು ತಿಳಿದುಕೊಳ್ಳುವ ಸಾಮರ್ಥ್ಯ ಇದ್ದೆ ಇರುತ್ತದೆ. ಬೇರೆಯವರಿಗಿಂತ ಹೆಚ್ಚಾಗಿ.

ಇದನ್ನು ಹೀಗೆಲ್ಲ ಯೋಚನೆ ಮಾಡಿದಾಗ ಅವಳಲ್ಲಿ ಒಂದು ರೀತಿ ಧೈರ್ಯ. ಸಂಯಮಗಳು ಮೂಡಿ, ಅಸಮಾಧಾನವನ್ನು ನುಂಗಿಕೊಳ್ಳಲು ಸಾಧ್ಯವಾಯಿತು. ಆದರೆ ಇವುಗಳಿಗೆ ಉತ್ತರ ಮಾತ್ರ ಹೊಳೆಯಲಿಲ್ಲ. ನರೇಶ್ ಕೆಲವು ವಿಷಯಗಳಲ್ಲಿ ತನ್ನಿಂದ ಅನುಚಿತವಾದ ಅಕ್ರಮವಾದ ಕೆಲಸಗಳನ್ನು ಮಾಡಿಸಿಕೊಳ್ಳಬೇಕೆ?

ಹತ್ತು ವರುಷಗಳ ಹಿಂದೆ ಅಪ್ಪ ಯಾವುದೋ ಸುಳ್ಳು ಆರೋಪಕ್ಕೆ ಒಳಗಾಗಿ ಸಸ್ಪಂಡ್ ಆಗಿದ್ದರು. ತಮ್ಮ ಪ್ರಾಮಾಣಿಕತೆಯನ್ನು ಸಿದ್ಧಪಡಿಸುವುದಕ್ಕಾಗಿ ಅಲುಗಿನ ಮೊನೆಯ ಮೇಲೆ ನಡೆಯುತ್ತಿದ್ದರು. ಅಮ್ಮ ತಿಳಿದವರೆಲ್ಲರ ಬೈಗಳನ್ನು ಕೇಳಿಸಿಕೊಂಡಳು, ವಿಷವನ್ನು ನುಂಗಿಕೊಂಡಳು. ಅಪ್ಪನಿಗೆ ಧೈರ್ಯವನ್ನು ತುಂಬುತ್ತಿದ್ದಳು. ಒಂದು ವರ್ಷದಲ್ಲಿ ಸ್ನೇಹಿತರು ಯಾರು, ಶತ್ರುಗಳು ಯಾರು ಅನ್ನುವುದನ್ನು ತಿಳಿದುಕೊಂಡಳು. ಸಹಾಯಕ್ಕೆ ಬರುವಂತಹ ಸ್ನೇಹಿತರು ಯಾರು, ಶತ್ರುಗಳು ಯಾರು ಅನ್ನುವುದನ್ನು ತಿಳಿದುಕೊಂಡಳು. ಸಹಾಯಕ್ಕೆ ಬರುವಂತಹ ಸ್ನೇಹಿತರೇ ಕಾಣುವುದಿಲ್ಲ. ಆದರೂ ಗೌರವ ಮರ್ಯಾದೆಗಳನ್ನು ಉಳಿಸಿಕೊಂಡು ಬದುಕಬೇಕಿತ್ತು. ಅಪ್ಪನಿಗೊದಗಿದ

ಸ್ಥಿತಿ ನೋಡಿ ಗುಟ್ಟಾಗಿ ಒಂದೆರಡು ಮನೆ ಪಾಠಗಳನ್ನು ಹಿಡಿದಳು. ಮೊದಲನೆ ವರ್ಷದ ಬಿ.ಎ. ಹೇಗೆ ಮುಗಿಸಿದಳೋ ದೇವರೇ ಬಲ್ಲ! ಎರಡನೇ ವರ್ಷ ಅಪ್ಪನ ಕೇಸ್‌ನಲ್ಲಿ ಇನ್ನೊಂದೆರಡು ಸಮಸ್ಯೆಗಳು ಎದುರಾಗಿದ್ದವು. ವರ್ಷದ ಕಡೆಯತನಕ ಇವರನ್ನು ಇದ್ದ ಕೆಲಸದಲ್ಲಿಯೇ ಮುಂದುವರೆಸಲಾಯಿತು. ಕಳೆದುಹೋದ ಗೌರವ ಪ್ರತಿಷ್ಠೆಗಳು ಮರಳಿದವು. ಆದರೆ ಗೆಳೆಯರು ಹೋದರು. ಕಳೆದುಕೊಂಡ ವಿಶ್ವಾಸ ಹಿಂತಿರುಗಲಿಲ್ಲ. ಮಾನಸಿಕವಾಗಿ ದೈಹಿಕವಾಗಿ ಜರ್ಝರಿತರಾಗಿದ್ದ ಅಪ್ಪ ಚೇತರಿಸಿಕೊಂಡರು.

ಶಾಲ್ಮಲಿ ಒಡೆದ ಹಾಲನ್ನೂ ಬಿಡದೆ ಕುಡಿದಳು. ಹೇಗೋ ಹೊಂದಿಕೊಂಡು ಹೋಗುವುದು ಅಂದರೆ, ಹೆಸರಿನ ಜೊತೆಗೆ ಒಂದು ಕತೆ ಕಟ್ಟಿಕೊಳ್ಳುವುದು. ಆ ಕತೆಗೆ ರೆಕ್ಕೆ ಪುಕ್ಕ ಹಚ್ಚಲು ಸ್ನೇಹಿತರು ನೆರೆಹೊರೆಯವರು, ಸಹೋದ್ಯೋಗಿಗಳು ಎಲ್ಲರೂ ಇರುತ್ತಾರೆ. ನರೇಶ್‌ನಿಗೆ ಇದೆಲ್ಲ ಹೇಗೆ ತಿಳಿಸುವುದು? ಮಂತ್ರಿಗಳಿಗೆ ಹೇಳಿಸಿ ಶಿಫಾರಸ್ಸಿನ ಮೂಲಕ ನಿಯಮ ಮುರಿದು ಮನೆಯನ್ನು ಗಿಟ್ಟಿಸಿಕೊಳ್ಳಬಹುದು. ಆದರ ಒಂದಲ್ಲ ಒಂದು ದಿನ ಶಾಲ್ಮಲಿ ಇದಕ್ಕೆ ಬೆಲೆ ತೆರಬೇಕಾಗುತ್ತದೆ. ತಪ್ಪು ಕೆಲಸ ಮಾಡಬೇಕಾಗುತದೆ; ಅಪಕೀರ್ತಿ ತಂದುಕೊಳ್ಳಬೇಕಾಗುತ್ತದೆ.

ಇದರಿಂದ ತಪ್ಪಿಸಿಕೊಳ್ಳಲು ಶಾಲ್ಮಲಿ ಒಂದು ದಾರಿ ಕಂಡುಕೊಂಡಳು. ನರೇಶನಿಗೆ ಸುಳ್ಳು ಭರವಸೆಗಳನ್ನು ಕೊಡುತ್ತಾ ಹೋಗುವುದು. ನಂಬಿಕಸ್ತ ಗೆಳೆಯನ ಮೂಲಕ ಮಂತ್ರಿಗಳಿಗೆ ಹೇಳಿಸಿದ್ದೀನಿ ಅಂತಲೋ, ಇಲ್ಲ ತಾನೇ ಖುದ್ದಾಗಿ ಕಂಡು ಮಾತನಾಡಿದ್ದೀನಿ ಅಂತಲೋ, ಹೇಳಿದರಾಯಿತು.....ಮಂತ್ರಿಗಳಿಗೆ ಹೇಳಿದ್ದಾಗಿದೆ. ಆದರೆ ಈ ವಿಚಾರದಲ್ಲಿ ಅವರಿಗೆ ಏನು ಮಾಡುವುದಕ್ಕೂ ಸಾಧ್ಯವಿಲ್ಲ. ಇಂಚಾರ್ಜ್ ಇರುವವರು ಅವರ ವಿರೋಧಿಗಳು. ಆದರೂ ನಿರಾಶರಾಗಬೇಕಾದ ಅವಶ್ಯಕತೆಯಿಲ್ಲ......... ಸಾಧ್ಯವಾದ ಮಟ್ಟಿಗೆ ತಾನು ಬೇರೆ ದಾರಿಗಳನ್ನು ಹುಡುಕುತ್ತಿದ್ದೇನೆ.......

ಇತ್ಯಾದಿ ಇತ್ಯಾದಿ.

ಅಮ್ಮ ಆಗಾಗ ಹೇಳುತ್ತಲೇ ಇದ್ದರು, ಪರಿವಾರದ ಸುಖಕ್ಕಾಗಿ ಏನೆಲ್ಲ ಮಾಡಬೇಕಾಗುತ್ತೆ ಅಂತ. ನಿಜ, ಸುಳ್ಳು- ಎಲ್ಲವನ್ನೂ ಬಿಟ್ಟು ಕೊಟ್ಟಾಗ ಮಾತ್ರವೇ ಮನೆಯ ಬುನಾದಿ ಗಟ್ಟಿಯಾಗಿರಲು ಸಾ[illegible]ಗುತ್ತದೆ.

ಒಂದು ಮನೆ ಉಳಿಸಬೇಕಾದರೆ ತನ್ನ ವ್ಯಕ್ತಿತ್ವವನ್ನು ಹೇಗೆಲ್ಲ ಬದಲಾಯಿಸಿಕೊಳ್ಳಬೇಕಾಗುತ್ತದೆ. ಅನಿಸಿತು. ಕೇವಲ ನಿಷ್ಠೆ ಸಮರ್ಪಣ ಭಾವಗಳಿಂದ ಕೆಲಸ ನಡೆಯುವುದಿಲ್ಲ. ಕೌಟುಂಬಿಕ ಕೂಟನೀತಿಯೂ ಸಂಬಂಧಗಳನ್ನು ಉಳಿಸಿ ಕಾಪಾಡಿಕೊಳ್ಳಲು, ಜೀವನವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಉಳಿಸಿಕೊಳ್ಳಲುಬೇಕಾಗುತ್ತದೆ. ಭಾವುಕತೆ ಹಲವೊಮ್ಮೆ ವ್ಯವಸ್ಥೆಯ ಶತ್ರುವಾಗಿ ಬಿಡುತ್ತದೆ. ಅನವಶ್ಯಕ ಚಿಂತೆಗೆ

ಸನ್ನಿವೇಶಗಳಿಗೆ ದಾರಿ ಮಾಡುತ್ತದೆ ಮತ್ತು ಸಂಬಂಧಗಳ ಬೇರುಗಳನ್ನೇ ಸಡಿಲಗೊಳಿಸುತ್ತದೆ. ಆದ್ದರಿಂದಲೇ ಈ ಗೃಹಸ್ಥಾಶ್ರಮ ಧರ್ಮದಲ್ಲಿ ಶ್ರದ್ಧೆಯ ಜೊತೆಗೆ ಸಂಯಮ, ಧೈರ್ಯಗಳೂ ಕೂಡಾ ಬೇಕಾಗುತ್ತದೆ. ಆದರೆ ಈ ಸಂಯಮದ ಅಭ್ಯಾಸವನ್ನು ಅವನು ಯೋಗಾಶ್ರಮದ ಕಡೆಗೆ ಕಳಿಸಿ ಬಿಟ್ಟಿದ್ದ.

ಶಾಲ್ಮಲಿ ಈ ರೀತಿಯಲ್ಲಿ ಯೋಚಿಸುವುದರ ಮೂಲಕ ಜೀವನದಾಳಕ್ಕೆ ಇಳಿದು ಮುತ್ತುಗಳನ್ನು ಸಂಗ್ರಹಿಸಲು ಪ್ರಯತ್ನಿಸುತ್ತಿರುವಾಗ ನರೇಶ, ಶಾಲ್ಮಲಿಯನ್ನು ತನ್ನ ದಾರಿಗೆ ತಂದುಕೊಂಡಿದ್ದೇನೆಂದು ಭಾವಿಸಿದ.

ಅಣ್ಣನ ಕಾಗದ ಬಂತು. ಅತ್ತಿಗೆಗೆ ತೀವ್ರವಾದ ಖಾಯಿಲೆ. ಆಪರೇಷನ್ ಮಾಡಿಸಲು ಹಣದ ಅತ್ಯವಶ್ಯಕತೆ ಇದೆ, ಅಂತ ಬರೆದಿತ್ತು. ಶಾಲ್ಮಲಿ ಕಾಗದ ಓದಿ ಇಟ್ಟಳು. ನರೇಶ್ ತನ್ನವರ ವಿಚಾರದಲ್ಲಿ, ಅವರೊಂದಿಗೆ ಶಾಲ್ಮಲಿ ಬೆಳೆಸುತ್ತಿರುವ ಸಂಬಂಧಗಳ ಬಗ್ಗೆ ಎಚ್ಚರಿಕೆಯನ್ನು ಈ ಮೊದಲೇ ಕೊಟ್ಟಿದ್ದ. ಆದ್ದರಿಂದ ಶಾಲ್ಮಲಿಗೆ ಏನೂ ಹೇಳಲಾಗಲಿಲ್ಲ. ಅದೂ ಕಾಗದ ನರೇಶ್‌ನ ಹೆಸರಿಗೇ ಬಂದಿರುವಾಗ!

ಮಾರನೆಯದಿನ ಆಫೀಸ್‌ಗೆ ಹೋಗುವಾಗ ನರೇಶ್ ಕಾಗದದ ವಿಚಾರ ಪ್ರಸ್ತಾಪ ಮಾಡಿದ. ಶಾಲ್ಮಲಿ, ಕಾಗದವನ್ನು ಓದಿದ್ದೇನೆಂದು ಹೇಳಿದಳು. ಜೊತೆಗೆ ಅತ್ತಿಗೆಗೆ ತೀರಾ ಅನಾರೋಗ್ಯವಾಗಿರುವುದನ್ನು ಓದಿದ ಮೇಲೆ, ಅವಕಾಶ ಮಾಡಿಕೊಂಡು ಕಾಗದವನ್ನು ಬರೆಯುತ್ತೇನೆಂದೂ ಹೇಳಿದಳು. ನರೇಶ್ ಮಾತಾಡದೆ ರೆಡಿಯಾಗುತ್ತಿದ್ದ. ಈಗ ಇಬ್ಬರೂ ಕೆಳಗಿಳಿದರು. ನರೇಶ್ ಕೇಳಿದ – ಕಾಗದದಲ್ಲಿ ಇನ್ನೂ ಏನೋ ಬರೆದಿದ್ದಾರಲ್ಲ?"

"ಪಾಪ! ಕಷ್ಟದಲ್ಲಿರಬೇಕು?" ಶಾಲ್ಮಲಿ ನಿಧಾನವಾಗಿ ಹೇಳಿದಳು.

"ನಾನು ಯೋಚ್ನೆ ಮಾಡ್ತಿದ್ದೀನಿ, ಒಂದು ಸಾವಿರ ರೂಪಾಯಿ ಮನಿಆರ್ಡರ್ ಮಾಡೋಣ ಅಂತ, ನೀನೇನಂತಿ?"

ನರೇಶನ ಧ್ವನಿಯಲ್ಲಿ ಸಲಹೆ ಕೇಳುವುದಕ್ಕಿಂತ ನಿರ್ಧಾರದ ಛಾಯೆಯೇ ಹೆಚ್ಚಾಗಿತ್ತು.

"ಖಂಡಿತ ಕಳಿಸೋಣ" ಶಾಲ್ಮಲಿ ಹೇಳಿದಳು ಮತ್ತು ಸ್ಕೂಟರ್ ಹಿಂಭಾಗದಲ್ಲಿ ಕುಳಿತಳು.

ಒಂದೆರಡು ಫರ್ಲಾಂಗ್ ಜೊತೆಗೇ ಹೋದರು. ಶಾಲ್ಮಲಿ ಬಸ್ ಹಿಡಿದು ಹೋದರೆ, ನರೇಶ್ ಸ್ಕೂಟರ್ ಮೇಲೆ ತನ್ನ ಆಫೀಸಿಗೆ ಹೋಗುತ್ತಿದ್ದ.

ಎರಡು ವರ್ಷಗಳಿಂದ ಹಣ ಇಲ್ಲವೆನ್ನುತ್ತಲೇ, ತನ್ನ ಮನೆಯವರಿಗೆಲ್ಲ ಸಾಕಷ್ಟು ಸಹಾಯ ಮಾಡಿದ ನರೇಶ್ ಹೆಸರಿಗೆ ಸಾಲವೆಂದು ತೆಗೆದುಕೊಳ್ಳುತ್ತಾನೆ. ಆದರೆ ಎಂದೂ ತಿರುಗಿಸಿ ಕೊಟ್ಟಿದ್ದಿಲ್ಲ. ಆದರೂ ಅವಳು ಆಕ್ಷೇಪಿಸಲಿಲ್ಲ. ಅವಳಿಗೆ

ದುಃಖವಾದದ್ದು, ತನ್ನ ಹತ್ತಿರವೇ ಸುಳ್ಳು ಹೇಳುತ್ತಿದ್ದಾನೆ! ಅವನ ಸೀಳು ನಾಲಿಗೆ ಮತ್ತಷ್ಟು ಬೇಸರ ತರಿಸಿತ್ತು. ತನ್ನ ಭಾವನೆಗಳಿಗೆ ಕಡಿವಾಣ ಹಾಕಿ ಅವನ ಮನೆಯವರಿಂದ ದೂರವಿಡುತ್ತಿದ್ದ. ತಾನು ಮಾತ್ರ ದಾನ ಧರ್ಮ ಮಾಡಿ ಸತ್ಯ ಹರಿಶ್ಚಂದ್ರನೆಂದು ಹೊಗಳಿಸಿಕೊಳ್ಳುತ್ತಿದ್ದ. ಇದಕ್ಕೆಲ್ಲ ತಾನು ಕೊಡಬೇಕಾದ ಬೆಲೆ? ಒಂದು ಕಡೆ ಬೇಕು ಮತ್ತೊಂದು ಕಡೆ ಬೇಡ! ಸಿಹಿ ಮಾತಿನ ಕಹಿ ಮತ್ತು ರಾಜನೀತಿ ಶಾಲ್ಮಲಿಗೆ ಅರ್ಥವಾಯಿತು. ಇಷ್ಟವಿಲ್ಲದಿದ್ದರೆ, ತನಗೆ ಬೇಡದ ಕೆಲಸವಾದರೆ ಶಾಲ್ಮಲಿಯ ಹೆಸರನ್ನು ಎಳೆದು ತರುತ್ತಿದ್ದ. ಹೆಸರು ಬರುವಂತಹ ಸಂದರ್ಭಗಳಲ್ಲಿ ತನ್ನ ಹೆಸರನ್ನು ಮುಂದಾಗಿಸುತ್ತಿದ್ದ. ಆದರೆ ಶಾಲ್ಮಲಿ ಯಾವಾಗಲೂ ನರೇಶ್ ಮತ್ತು ಸಂಬಂಧಿಗಳ ನಡುವಿನ ಸೇತುವೆಯಂತಿದ್ದಳು.

ಆದ್ದರಿಂದಲೇ ಒಬ್ಬರ ಮನೆಗೊಬ್ಬರು ಹೋಗಿ ಬರುವಷ್ಟರ ಮಟ್ಟಿಗಿನ ಸಂಬಂಧ ಉಳಿಮಕೊಂಡು ಬರಲು ಸಾಧ್ಯವಾಯಿತು.

ಮುಖ್ಯವಾದ ವಿಚಾರಗಳಿಗೆ ಸಂಬಂಧಿಸಿದ ನಿರ್ಧಾರಗಳನ್ನು ತೆಗೆದುಕೊಳ್ಳಲು ಕೇವಲ ನರೇಶನಿಗೆ ಮಾತ್ರವೇ ಅಧಿಕಾರ ಇತ್ತು. ಕೆಲವೇ ದಿನಗಳಲ್ಲಿ ನರೇಶನ ಬಗ್ಗೆ ಇದನ್ನು ಸ್ಪಷ್ಟವಾಗಿ ತಿಳಿದುಕೊಂಡಿದ್ದಳು. ಅಧಿಕಾರ ತಂತ್ರ ತನ್ನ ಬಳಿ ಇರಲಿಲ್ಲ. ಕುಟುಂಬದ ನೆಮ್ಮದಿಗಾಗಿ, ಅವನ ಹಠಗಳನ್ನು ತಣಿಸುವುದಕ್ಕಾಗಿ ಮನೆಯ ಸಾಮ್ರಾಜ್ಯ, ಅಧಿಕಾರಗಳನ್ನು ಅವನಿಗೆ ಒಪ್ಪಿಸಿದಳು. ಬೇಕಾದ್ದನ್ನು ಮಾಡಲಿ, ಅವಳು ಮಧ್ಯೆ ಪ್ರವೇಶಿಸುವುದಿಲ್ಲ. ಈ ನಿರ್ಣಯ ಮನಸ್ಸಿನಲ್ಲಿ ಮೂಡಿಸಿಕೊಂಡಂತೆ, ಶಾಲ್ಮಲಿ ದೃಢವಾಗತೊಡಗಿದಳು. ಆದರೆ ಒಳಗಿನದನ್ನು ತೋರಿಸಿಕೊಳ್ಳದೆ, ಹೊರನೋಟಕ್ಕೆ ಅವಳೂ ಸಲಹೆಗಳನ್ನು ನೀಡುತ್ತಿರುವಂತೆ ಕಾಣಿಸಿಕೊಂಡಳು. ಒಟ್ಟಿನಲ್ಲಿ ಅಧಿಕಾರ ಯಾರದಾದರೇನು? ಮನೆಯಂತು ಇಬ್ಬರಿಗೂ ಸೇರಿದ್ದು. ಯಾರಿಗಾದರೂ ಒಬ್ಬರಿಗೆ ಸ್ವಾತಂತ್ರ್ಯ ಕೊಟ್ಟಲ್ಲದೆ ಮನೆ ಉಳಿಯುವುದಿಲ್ಲ. ನರೇಶನ ವ್ಯವಹಾರಗಳನ್ನು ಶಾಲ್ಮಲಿ ಬೇರೆಯೇ ಆದ ತರ್ಕದ ತಕ್ಕಡಿಯಲ್ಲಿ ತೂಗುತ್ತಿದ್ದಳು. ತನ್ನನ್ನು ಮತ್ತು ತನ್ನ ತಿಳಿವಿನ ಬಟ್ಟನ್ನು ನರೇಶನ ಕಡೆಯ ತಕ್ಕಡಿ ತಟ್ಟೆಯಲ್ಲಿ ಹಾಕಿ ಬಿಡುತ್ತಿದ್ದಳು. ಇದರಿಂದಾಗಿ ಇಬ್ಬರೂ ಸಮಾನವಾಗಿ ಜೊತೆ ಜೊತೆಯಾಗಿ ನಡೆದು ಶಾಂತಿ ಪೂರ್ವಕವಾಗಿರಲು ಸಾಧ್ಯವಾದೀತು ಎನ್ನುವುದು ಶಾಲ್ಮಲಿಯ ಆಲೋಚನೆ.

ನರೇಶ್ ಶಾಲ್ಮಲಿಯನ್ನು ಒಂದು ವಿಶಿಷ್ಟ ರೀತಿಯಲ್ಲಿ ನಿರ್ಬಂಧಿಸ ತೊಡಗಿದಂತೆ, ಶಾಲ್ಮಲಿ ಮಾನಸಿಕವಾಗಿ ಬೆಳೆಯತೊಡಗಿದಳು. ತನ್ನ ವಿಚಾರಗಳು, ಬಯಕೆಗಳು ತನ್ನ ಚೈತನ್ಯಗಳೆಲ್ಲವೂ ಕೆಲಸದಲ್ಲಿ ಸಾಕ್ಷಾತ್ಕಾರಗೊಳ್ಳಬೇಕೆಂದು ಬಯಸಿದಳು. ಪರಿಣಾಮವಾಗಿ ಅವಳ ಕೆಲಸ ಕಾರ್ಯಗಳಲ್ಲಿ ನಿಷ್ಠೆ, ಉತ್ಸಾಹ, ಹುಮ್ಮಸ್ಸುಗಳು ಕಾಣಿಸಿಕೊಂಡು ಎಲ್ಲರಿಂದ ಮೆಚ್ಚುಗೆ, ಗೌರವಗಳನ್ನು ಗಳಿಸಿಕೊಂಡಳು.

ಇದರಿಂದಲೇ ಅವಳಿಗೆ ಜೀವನ ಸಾರ್ಥಕವೆನಿಸಿತು. ಕಷ್ಟದಿಂದ, ಪರಿಶ್ರಮದಿಂದ ಗಳಿಸಿಕೊಂಡ ಈ ಸ್ಥಿತಿ. ತನ್ನ ಬಗ್ಗೆ ಜನ ತಳೆದಿದ್ದ ಅಭಿಪ್ರಾಯವನ್ನು ನಿರಂತರವಾಗಿ ಉಳಿಸಿಕೊಳ್ಳಬೇಕೆಂಬುದಷ್ಟೇ ಅಲ್ಲ. ಅದನ್ನು ಮತ್ತಷ್ಟು ಭದ್ರ ಪಡಿಸಬೇಕೆಂದು ಬಯಸಿದಳು. ಇದಕ್ಕಾಗಿ ಜಾಗರೂಕತೆಯಿಂದ ಇರಬೇಕು. ಅಲ್ಲದೆ ಮತ್ತಷ್ಟು ಶ್ರಮವಹಿಸಿ ಕೆಲಸ ಮಾಡಬೇಕಾಗುತ್ತೆ. ತನ್ನ ಈ ಪರಿಶ್ರಮದಲ್ಲಿ ತನಗೆ ದೊರೆಯುತ್ತಿದ್ದ ಪೂರ್ಣ ಆತ್ಮ ತೃಪ್ತಿಗಾಗಿ ರೂಢಿಯ ಅಧಿಕಾರವನ್ನು ಬಿಟ್ಟು ಕೊಡುವುದು ಅವಳಿಗೆ ಕೆಡುಕೆನಿಸಲಿಲ್ಲ. ಅಧಿಕಾರ ಅವಳಿಗೆ ಅರ್ಥಹೀನವೆನಿಸಿತು. ಜೀವನದ ವಿಸ್ತೃತವಾದ ಕ್ಷೇತ್ರದೊಂದಿಗೆ ಬೆಸೆದುಕೊಂಡಿದ್ದ ಅವಳಿಗೆ ಇದಕ್ಕಿಂತ ಮಹತ್ವದ ಸಮಸ್ಯೆಗಳ ಬಗ್ಗೆ ಪರಿಹಾರಗಳನ್ನು ಯೋಚಿಸಬೇಕಿತ್ತು. ಅದೇ ಅವಳ ಅಧಿಕಾರ ಕ್ಷೇತ್ರವಾಗಿತ್ತು.

ಬೇಸಿಗೆಯಲ್ಲಿ ಬರಸಾತಿ ಮನೆ ಬೆಂಕಿಯ ಕುಲುಮೆಯಾಗಿರುತ್ತಿತ್ತು. ಇಡೀ ದಿವಸ ಆಫೀಸಿನಲ್ಲೇ ಕಳೆದ ಮೇಲೆ ಇಬ್ಬರೂ ಮನೆಗೆ ಬರುವಷ್ಟು ಹೊತ್ತಿಗೆ ಸೂರ್ಯನ ಬಿಸಿಲು ಟೆರ್ರೇಸ್ ಮೇಲೆ ವ್ಯಾಪಿಸಿರುತ್ತಿತ್ತು. ರಜೆ ದಿನಗಳಲ್ಲಿ, ಒಂದೆರಡು ಗಂಟೆ ಮಾತ್ರವಿದ್ದು ಮಧ್ಯಾಹ್ನದ ಹೊತ್ತಿಗೆಲ್ಲ ಬಿಸಿಲು ಮರೆಯಾಗಿ, ತಣ್ಣಗೆ ಹಿತವಾಗಿ ಇರುತ್ತಿದ್ದುದರಿಂದ ಸಂಜೆವರೆಗೆ ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಜಗವಾಗಿರುತ್ತಿತ್ತು. ಇಡೀ ದಿವಸ ಬಿಸಿಲು, ಬೆವರುಗಳಿಂದ ದಣಿದಿದ್ದ ಇಬ್ಬರೂ ಶರಬತ್ ಕುಡಿಯುತ್ತಾ ಟೆರ್ರೇಸ್‌ನಲ್ಲಿ ಕುಳಿತರು.

"ನಾನು ರಾತ್ರಿ ಡಿನರ್‌ಗೆ ಹೋಗಬೇಕಾಗಿದೆ. ಕೈಲಾಶ್ ಕರೆದಿದ್ದಾನೆ. ಆದರೆ ಈ ಸೆಕೆಯಲ್ಲಿ ಎಲ್ಲಿಗೂ ಹೋಗುವ ಮನಸ್ಸಿಲ್ಲ" ಖಾಲಿಯಾದ ಲೋಟವನ್ನು ಟೀಪಾಯ್ ಮೇಲೆ ಇಡುತ್ತಾ ಹೇಳಿದ, ನರೇಶ್.

"ಹಾಗಾದರೆ ಕೆಳಗೆ ಹೋಗಿ ಫೋನ್ ಮಾಡಿ ಬಿಡಿ" ಬಿಚ್ಚಿದ ಕೂದಲನ್ನು ಸರಿಪಡಿಸಿಕೊಳ್ಳುತ್ತಾ ಹೇಳಿದಳು.

"ಅವನು ಬೇಸರಪಟ್ಕೊಳ್ತಾನೆ" ಮನಸ್ಸಿಲ್ಲದ ಮನಸ್ಸಿನಿಂದ ಹೇಳಿದ, ನರೇಶ್.

"ಮನಸ್ಸು ಇಲ್ಲಾಂದ್ರೆ, ಹೋಗಿ ಬೋರ್ ಮಾಡಿಸಿಕೊಳ್ಳೋದು ಯಾಕೆ?" ಎಂಜಲು ಲೋಟಗಳನ್ನು ತೆಗೆಯುತ್ತಾ ಹೇಳಿದಳು.

"ಈ ಪ್ರಪಂಚದಲ್ಲಿ ಎಷ್ಟೊಂದು ಕೆಲಸಗಳನ್ನು ಹೀಗೆ ಮನಸ್ಸಿಲ್ಲದೇನೇ ಮಾಡಬೇಕಾಗುತ್ತೆ. ಹಾಗೇ....... ಇದೂ ಒಂದು ಹೇಳಿ ಬಿಟ್ಟಿದ್ದೀನಿ, ಹೋಗಲೆ ಬೇಕು". ಹೇಳುತ್ತಾ ಎದ್ದು ಬಚ್ಚಲು ಮನೆಗೆ ನಡೆದ.

ಶಾಲ್ಮಲಿ ನರೇಶನ ಮಾತು ಕೇಳಿ ಸೆಟೆದು ನಿಂತಳು. ಅವನ ಮಾತಿನ ಅರ್ಥ ತಿಳಿಯಲು ಪ್ರಯತ್ನಿಸಿದಳು. ಹೋಗುತ್ತಿದ್ದ ನರೇಶನ ಮುಖ ಭಾವವನ್ನು ಗಮನಿಸಬೇಕೆಂದುಕೊಂಡಳು. ಆದರೆ ಆಗಲಿಲ್ಲ. ಯೋಚಿಸಿದಳು. ಅವನಾಡಿದ ಮಾತಿಗೆ

ಹಿನ್ನೆಲೆ ಇರಬೇಕು ಅಥವಾ ಸ್ವಲ್ಪ ಹೊತ್ತಿನ ನಂತರ ನರೇಶ್ ಸ್ನಾನ ಗೀನ ಮುಗಿಸಿ ರೆಡಿಯಾಗಿ ಹೊರಟು ಬಿಟ್ಟಿದ್ದ. ತನಗಾಗಿ ಏನನ್ನು ಮಾಡಿಕೊಳ್ಳುವ ಮನಸ್ಸಾಗಲಿಲ್ಲ. ತನ್ನನ್ನು ಒಂಟಿಯಾಗಿ ಬಿಟ್ಟು ಹೀಗೆ ಹೋಗುವುದು ಅವಳಿಗೆ ಎಂದೂ ಸರಿ ಎನಿಸಿರಲಿಲ್ಲ. ಅದೂ ಆಫೀಸಿನಿಂದ ಬಂದ ಮೇಲೆ ಇನ್ನೂ ಬೇಸರವಾಗುತ್ತಿತ್ತು. ಆದರೆ ಶಾಲ್ಮಲಿಯ ಬೇಕು ಬೇಡಗಳು ನರೇಶನಿಗೆ ಲಕ್ಷಕ್ಕೆ ತೆಗೆದುಕೊಳ್ಳಬೇಕೆನಿಸುತ್ತಿರಲಿಲ್ಲ. ಶಾಲ್ಮಲಿ ಸ್ನಾನ ಮಾಡಿ ಬಂದು ಹೊರಗಡೆ ಇದ್ದ ಕುರ್ಚಿಯಲ್ಲಿ ಕುಳಿತಳು.

ಅಲ್ಲಿ ಇಲ್ಲಿ ಎಲ್ಲರ ಟೆರ್‍ರೇಸ್‌ಗಳ ಮೇಲೆ ಸುಂದರ ಬೆಳಕು ಚೆಲ್ಲಿತ್ತು. ವರ್ಮಾಜಿಯವರ ಟೆರ್‍ರೇಸ್ ಮೇಲೆ ಅವರ ಹೆಂಡತಿ ಸುಮ್ಮನೆ ಕುಳಿತು ಅಸ್ಪಷ್ಟ ಆಕಾಶದಲ್ಲಿ ಯಾವುದೋ ನಕ್ಷತ್ರಕ್ಕಾಗಿ ಹುಡುಕುತ್ತಿರುವಂತೆ ಕಾಣಿಸಿತು. ಅವರನ್ನು ಕಂಡಾಗ ಯಾವಾಗಲೂ ಆಗುವ ರೀತಿಯಲ್ಲಿ ಶಾಲ್ಮಲಿಯ ಹೃದಯ ಕರಗಿತು.

ಜೀವನ ಒಮ್ಮೊಮ್ಮೆ ತಪಸ್ಸಿನಂತೆ ತೋರುತ್ತದೆ. ಈ ತಪಸ್ಸು ವಿವಶತೆಯಿಂದಾಗಿ ಉಂಟಾಗಿದ್ದರೂ ಇರಬಹುದು. ಆದರೆ ದೇವರೇ ಇಂತಹ ಒಂಟಿತನದ ಬದುಕು ಯಾರ ಪಾಲಿಗೂ ಬಾರದಿರಲಿ!

ಹುಣ್ಣಿಮೆಯ ಬೆಳ್ದಿಂಗಳ ಬೆಳಕು ಟೆರ್‍ರೇಸನ್ನು ತುಂಬಿತ್ತು. ಭೂಮಿಯ ಮೇಲೆ ಶೀತಲತೆ ಸುರಿದಂತಿತ್ತು. ದಣಿದ ಶಾಲ್ಮಲಿ ಮೇಲೆ ಬಂದಳು. ಚೆಲುವಾದ ನೋಟವನ್ನು ಗಮನಿಸಿ ಆಶ್ಚರ್ಯಚಕಿತಳಾದಳು. ಮುಖ್ಯವಾದ ಕಾಗದಗಳನ್ನು ಪರಿಶೀಲಿಸಬೇಕಾಗಿತ್ತು. ನರೇಶ್ ಟೂರ್ ಮೇಲೆ ಹೋಗಿದ್ದ ಅದಕ್ಕೆಂದೇ ಆಫೀಸಿನ ಫೈಲುಗಳನ್ನು ಮನೆಗೇ ತಂದಿದ್ದಳು. ಇಡೀ ಸಂಜೆ ಆ ಫೈಲುಗಳಲ್ಲಿ ತೊಡಗಿದ್ದಳು. ನಾಲ್ಕೂ ಕಡೆ ಒಮ್ಮೆ ದೃಷ್ಟಿ ಹಾಯಿಸಿದಳು. ಒಮ್ಮೆ ಆಕಳಿಸಿದಳು. ದಣಿವೆಲ್ಲ ಮರೆಯಾಯಿತು. ಹಾಲು ಬೆಳ್ದಿಂಗಳ ಸೊಬಗು ಅವಳನ್ನು ಪೂರ್ತಿಯಾಗಿ ಆಕ್ರಮಿಸಿತು.

"ನಾನೊಂದು ಹಕ್ಕಿಯಾಗಿದ್ದಿದ್ದರೆ! ಶಾಲ್ಮಲಿ ತನ್ನೆರಡು ಬಾಹುಗಳನ್ನು ಚಾಚಿ ಬೆಳ್ದಿಂಗಳನ್ನು ತನ್ನೊಳಗೆ ತುಂಬಿಕೊಳ್ಳುವಂತೆ ನಿಧಾನವಾಗಿ ಹೆಜ್ಜೆಯಿಟ್ಟಳು.

ಎತ್ತರ, ಇನ್ನೂ ಎತ್ತರ, ಇನ್ನೂ ಎತ್ತರಕ್ಕೆ ಹಾರುತ್ತಿದ್ದೆ ಎಂದು ಯೋಚಿಸುತ್ತ ಶಾಲ್ಮಲಿ ಹಕ್ಕಿಯ ರೆಕ್ಕೆಯ ಹಾಗೆ ತನ್ನ ಬಾಹುಗಳನ್ನು ಹರಡಿ ಪ್ರಕೃತಿಯೊಂದಿಗೆ ತನ್ನ ಅಸ್ತಿತ್ವವನ್ನು ಸಮೀಕರಿಸಿಕೊಳ್ಳುತ್ತಿದ್ದಳು.

"ಆಂಟಿ, ನೀವೇನು ಎಕ್ಸರ್‌ಸೈಜ್ ಮಾಡುತ್ತಿದ್ದೀರಾ?" ತೀಕ್ಷ್ಣವಾದ ಧ್ವನಿ ಕೇಳಿಸಿತು.

"ಓಹ್!" ಕಣ್ಣು ಬಿಡಿಸಿ, ನಾಚಿ ನಗುತ್ತಾ ಶಾಲ್ಮಲಿ ಮನೆ ಮಾಲಿಕಳ ಮೊಮ್ಮಗಳ ಕಡೆ ನೋಡಿದಳು.

"ಅಮ್ಮನಿಗೆ ಫೆಮಿನಾ ಬೇಕಂತೆ", ಹತ್ತು ಹನ್ನೆರಡು ವರ್ಷದ ಚಾರು ಆತುರದಿಂದ ಕೇಳಿದಳು.

"ಇರು ತರ್ತೀನಿ" ಶಾಲ್ಮಲಿ ಹೇಳಿದಳು.

"ಚಿತ್ರಹಾರ್ ಬರ್ತಿದೆ" ಸಹನೆ ಇಲ್ಲದೆ ಹೇಳಿದಳು.

"ಓದುವುದು ಯಾವಾಗ?" ಒಳಗೆ ಹೋಗುತ್ತ ಕೇಳಿದಳು, ಶಾಲ್ಮಲಿ

"ಎಂಟು ಗಂಟೆ ಒಳಗೇ ಮುಗಿಸಿ ಬಿಡ್ತೀನಿ ಓದುವುದನ್ನು ಇಲ್ಲಾಂದ್ರೆ ಅಮ್ಮ ಟಿ.ವಿ. ನೋಡೋಕೆ ಬಿಡೋದಿಲ್ಲ. ಥ್ಯಾಂಕ್ಯು ಆಂಟಿ!" ಚಾರು ಜಿಗಿದು ಫೆಮಿನಾವನ್ನು ಕಿತ್ತುಕೊಂಡು ಮೆಟ್ಟಿಲಿಳಿದು ಓಡಿದಳು. ಶಾಲ್ಮಲಿ ಫೋಲ್ಡಿಂಗ್ ಮಂಚ ಬಿಡಿಸಿ ಹಾಸಿಗೆ ಹಾಸತೊಡಗಿದರು. ಕೆಳಗೆ ಶುಕ್ಲಾಜಿ ಮನೆಯಿಂದ ಘಂಟೆಯ ಸದ್ದು ಕೇಳಿಸಿತು ಮತ್ತು ಪ್ರತಿದಿನದ ಹಾಗೆ ಇವತ್ತೂ ಮಗನ ಮೇಲೆ ಕೋಪ ಮಾಡಿಕೊಳ್ಳುತ್ತಿದ್ದರು. ಮತ್ತೆ ಅವನು ಕಾರನ್ನು ಢಿಕ್ಕಿ ಹೊಡೆದು ಬಂದಿದ್ದಾನೆ. ಮಹಡಿ ಮೇಲೆ ಇರುವುದರಿಂದ ಸಾಕಷ್ಟು ಲಾಭ ಇದೆ. ಯಾರ ಸ್ನೇಹವನ್ನೂ ಮಾಡದೆ, ಯಾರ ಮನೆಗೂ ಹೋಗದೆ, ಎಲ್ಲರ ಮನೆಗಳ ಸುದ್ದಿ ಸಮಾಚಾರಗಳು ತಿಳಿಯುತ್ತಿದ್ದವು.

ಒಂಬತ್ತು ಗಂಟೆ ಆಗುವುದರಲ್ಲಿತ್ತು. ಶಾಲ್ಮಲಿಗೆ ಹಸಿವಾಯಿತು. ಆದರೆ ಒಬ್ಬಳೇ ಊಟ ಮಾಡಲು ಬೇಸರವೆನಿಸಿ ಬೆಳಿಗ್ಗೆ ಮಾಡಿದ ತರಕಾರಿಯನ್ನೇ ಬಿಸಿ ಮಾಡಿಕೊಂಡು ಬ್ರೆಡ್ ಜೊತೆಗೆ ತಿಂದಳು. ವಾರ್ತೆಗಳನ್ನು ಕೇಳಬೇಕೆನಿಸಿ ಟಿ.ವಿ.ಮುಂದೆ ಕುಳಿತಳು.

ಸಾಕಷ್ಟು ರಾತ್ರಿಯಾಗಿತ್ತು. ಅಕ್ಕಪಕ್ಕದ ಮನೆಗಳಲ್ಲಿ ಸದ್ದಡಗಿತ್ತು. ಒಂದಾದ ಮೇಲೊಂದರಂತೆ ಮನೆಗಳಲ್ಲಿನ ದೀಪಗಳು ಕಣ್ಣು ಮುಚ್ಚಿದವು. ಬೀದಿಯಲ್ಲೂ ಗಲಾಟೆ ಇರಲಿಲ್ಲ. ಬಹಳ ಹೊತ್ತು ಟೆರ್ರೇಸ್‌ನಲ್ಲಿ ಅಡ್ಡಾಡುತ್ತಿದ್ದಳು. ಮೌನದಲ್ಲಿ ಮುಳುಗಿದ್ದ ಮೊಹಲ್ಲಾವನ್ನು ನೋಡುತ್ತಿದ್ದಳು.

ಕತ್ತಲಲ್ಲಿ ಚೆಲ್ಲಿದ್ದ ಬೆಳ್ದಿಂಗಳು ಇನ್ನಷ್ಟು ದಟ್ಟವಾಗಿತ್ತು. ಮನೆಗಳ ಮೇಲೆಲ್ಲ ಬಿದ್ದು ಒಂದೊಂದನ್ನೂ ಒಂದು ಹೊಸ ಬೆಳಕಿನಿಂದ ಬೆಳಗಿತ್ತು. ತರಿತರಿಯಾದ ಮಣ್ಣಿನ ಮೇಲೆ ಎರಡು ಬೆರಳುಗಳಿಂದ ಚೌಕಾಕಾರದ ಗೆರೆಗಳನ್ನು ಎಳೆಯುವ ಬಾಲ್ಯದಲ್ಲಿನ ಆಟದ ನೆನಪಾಯಿತು. ಉದ್ದನೆಯ ಸರಪಳಿಯ ಹಾಗೆ ಮೂಡಿದ ಆ ಬಳ್ಳಿಗಳು! ಅದೇ ರೀತಿ ಬೆಳ್ದಿಂಗಳು ಆ ಮನೆಗಳನ್ನು ಬಗೆ ಬಗೆಯ ಬಳ್ಳಿಗಳ ಆಕಾರಕ್ಕೆ ಬದಲಿಸಿತ್ತು. ಸ್ವಲ್ಪ ಹೊತ್ತು ಅಡ್ಡಾಡಿ ಬಂದು ಹಾಸಿಗೆ ಮೇಲೆ ಮೈ ಚಾಚಿದಳು. ಮೇಲೆ ವಿಸ್ತಾರವಾದ ನೀಲಾಕಾಶ. ಅದರಲ್ಲಿ ಹೊನ್ನಿನ ಚಂದ್ರ, ಅದರ ಸುತ್ತಲೂ ಹೊಂಗಿರಣಗಳ ಪರಿವೇಶ. ಎಷ್ಟು ದೊಡ್ಡದು, ವಿಶಾಲವಾದ್ದು! ಈ ಪ್ರಕಾಶದಲ್ಲಿ, ಈ ಬೆಳಕಿನಲ್ಲಿ ಕ್ಷತ್ರಗಳೆಲ್ಲಾ ಮರೆಯಾಗಿವೆ! ಬೆಳ್ದಿಂಗಳ ತಂಪನ್ನು ಕಣ್ಣಲ್ಲಿ ತುಂಬಿಕೊಳ್ಳತೊಡಗಿದಳು. ಮನಸ್ಸಿಗೆ ಸಂತೋಷದ ಉನ್ಮತ್ತತೆ ಕವಿಯಿತು. ಹಾಗೆಯೇ ನಿದ್ದೆಯಿಂದ ಕಣ್ಣೆಳೆಯಿತು. ದಣಿವಿನ

ಗಂಟುಗಳು ಸಡಿಲಿದವು. ಆಗತಾನೇ ನಿದ್ದೆ ಹತ್ತಿರಬೇಕು. ಶಾಲ್ಮಲಿಗೆ ಬಿದ್ದಂತೆನಿಸಿತು. ತಕ್ಷಣ ಕಣ್ಣು ಬಿಟ್ಟು ನೋಡಿದರೆ, ತಾನಿನ್ನೂ ಹಾಸಿಗೆ ಮೇಲೇ ಇರುವುದು ಗಮನಕ್ಕೆ ಬಂತು ಎಷ್ಟೋ ಸಲ ಹೀಗೆ ನಿದ್ದೆಯಲ್ಲಿ ಕೆಳಗೆ ಬಿದ್ದಂತೆ ಭಾಸವಾಗುತ್ತಿತ್ತು. ಯಾಕೋ ಏನೋ? ಪಕ್ಕಕ್ಕೆ ಹೊರಳಿ ಮತ್ತೊಮ್ಮೆ ನಿದ್ದೆಗಿಳಿದಳು.

ಅಬ್ಬ! ಏನು ಸುಡ್ತಾ ಇದೆ. ನಿದ್ದೆ ಬಾರದೆ ಕಣ್ಣು ಬಿಟ್ಟಳು. ಮೈಯೆಲ್ಲ ವಿಚಿತ್ರವಾದ ಶೀತಲ ಬೆಂಕಿಯಲ್ಲಿ ಬೇಯುತ್ತಿರುವಂತಹ ಅನುಭವ. ಏನು ಮಾಡಲೂ ತಿಳಿಯಲಿಲ್ಲ. ಮತ್ತೆ ಹಾಸಿಗೆ ಮೇಲೆ ಎದ್ದು ಕುಳಿತಳು. 'ಇಷ್ಟೊಂದು ದಟ್ಟವಾದ ಬೆಳ್ದಿಂಗಳಲ್ಲಿ ಮಲಗುವುದು ಸಾಧ್ಯವಿಲ್ಲ' – ಹೇಳಿಕೊಳ್ಳುತ್ತಾ ಒಳಗೆ ಕೋಣೆಯ ಕಡೆ ನಡೆದಳು. ಬಾಗಿಲು ತೆಗೆದು ಹಾಸಿಗೆಯ ಮೇಲೆ ಕುಳಿತಳು. ಒಳಗಿನ ಧಗೆ ಮೈ ಮೇಲೆ ಕವಿದಿದ್ದ ಬೆಳ್ದಿಂಗಳ ಮಂಜನ್ನು ಕರಗಿಸತೊಡಗಿತು. ಒಂದು ಬಗೆಯ ನಡುಕ ಆರಂಭವಾಯಿತು. ಗಾಭರಿಯಿಂದ ಕಂಬಳಿ ಎಳೆದುಕೊಂಡು ಹೊದ್ದುಕೊಂಡಳು.

ಮಂಜಿನ ತೀಕ್ಷ್ಣತೆಯ ಬಗ್ಗೆ ಕೇಳಿದ್ದಳು. ಆದರೆ ಬೆಳ್ದಿಂಗಳು ಸುರಿಸುವ ಮಂಜಿನ ಮಳೆಯನ್ನು ನೋಡಿದ್ದು ಇದೇ ಮೊದಲು.

ಹೋಳಿಹಬ್ಬದ ಉಪದ್ರವ ಎಲ್ಲ ಮುಗಿದಿತ್ತು. ಹೂವುಗಳಿಂದ ತುಂಬಿದ್ದ ದಿಲ್ಲಿ ಬಿಸಿಗಾಳಿಯ ಅನುಭವಕ್ಕೆ ಒಳಗಾಗಿತ್ತು. ನೀಲಿ ಹಳದಿ, ಗುಲಾಬಿ ಹೂಗಳಿಂದ ತುಂಬಿದ್ದ ಬುಟ್ಟಿಗಳು ಅದೃಶ್ಯವಾಗ ತೊಡಗಿದವು. ಬೆವರಿನ ಧಾರೆಗಳು, ಆರಿದ ಗಂಟಲು! ಹಕ್ಕಿಗಳು ಹಾರುವುದನ್ನೇ ಮರೆತು ಮರಗಳ ಮರೆಯಲ್ಲಿ ಮೂಲೆಗಳಲ್ಲಿ ಕುಳಿತು ಏದುಸಿರು ಬಿಟ್ಟವು.

ಇಲ್ಲಂತೂ ಪ್ರತಿಯೊಂದು ಋತುವೂ ತಲ್ಲಣಗೊಳಿಸಿಯೇ ಮುಂದೆ ಸಾಗುತ್ತದೆ. ಈ ಋತುಗಳ ಪರಿಣಾಮದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಒಂದು ಸಾಕು ಸಾಕೆನಿಸಿ ಮತ್ತೊಂದು ಋತುವಿನ ಆಗಮನಕ್ಕೆ ಕಾಯುವುದರಲ್ಲಿಯೂ ಹುಸಿಸಾಂತ್ವನವೇ! ಒಂದು ಹದಿನೈದು ಇಪ್ಪತ್ತು ದಿವಸ ಮಾನವರನ್ನು ಸತ್ಕರಿಸಿ ಸಂತೃಪ್ತಿ ಪಡಿಸಿ, ಮತ್ತೆ ತನ್ನ ಪ್ರತಾಪವನ್ನು ತೋರಿಸಲು ಆರಂಭಿಸುತ್ತೆ. ಅದೂ ಈ ಗ್ರೀಷ್ಮದ ಅಬ್ಬರವಂತು ಹೇಳಲು ಸಾಧ್ಯವೇ ಇಲ್ಲ. ಎಲ್ಲ ಕಡೆಯಿಂದಲೂ ಒಂದೇ ಚೀತ್ಕಾರ, ಮಳೆ ಯಾವಾಗ ಬರುತ್ತೆ? ಮಳೆ ಯಾವಾಗ ಬರುತ್ತೆ? – ಶಾಲ್ಮಲಿ ಕರವಸ್ತ್ರದಿಂದ ಮುಖ ಒರೆಸಿಕೊಂಡಳು. ಬಸ್ ಸ್ಟಾಪಿನಲ್ಲಿ ಬಸ್ಸಿಗಾಗಿ ಕಾಯುತ್ತಿದ್ದಳು. ನಡೆದು ಹೋಗಲು ಮನಸ್ಸು ಆಗಲಿಲ್ಲ. ಮನೆ ದೂರವೇನೂ ಇರಲಿಲ್ಲ. ಆದರೆ ನಡೆದುಕೊಂಡೇ ಹೋಗಬಹುದಾದಷ್ಟು ಹತ್ತಿರವೂ ಇರಲಿಲ್ಲ.

ತನ್ನ ಮುಂದಿನಿಂದಲೇ ನರೇಶ್ ಹೋದದ್ದು ಕಾಣಿಸಿತು. ಸ್ಕೂಟರ್ ಹಿಂದೆ ಯಾರೋ ಕುಳಿತಿದ್ದರು. ಇಬ್ಬರೂ ಮಾತಿನಲ್ಲಿ ಮಗ್ನರಾಗಿದ್ದರು. ಶಾಲ್ಮಲಿ ಕೈ ಬೀಸುತ್ತಲೇ

ಇದ್ದಳು. ಖಿನ್ನ ಮನಸ್ಕಳಾಗಿ ಆಕಡೆ ಈಕಡೆ ನೋಡಿದಳು. ದೂರದಲ್ಲೆಲ್ಲೂ ಸ್ಕೂಟರ್ ಕಾಣಲಿಲ್ಲ. ಮತ್ತೆ ಯಾವುದಾದರೂ ವಾಹನ ಸಿಗಬಹುದೇನೋ ಎಂದು ಎದುರು ನೋಡಿದಳು. ಅಷ್ಟರಲ್ಲಿ ಎದುರಿನಿಂದ ಯಾವುದೋ ಬಸ್ ಬರುವಂತೆ ಕಾಣಿಸಿತು. ನಂಬರ್ ನೋಡಿದಳು ಯೋಚಿಸಿದಳು ಮತ್ತೆ ಹೆಜ್ಜೆ ಹಾಕಿದಳು.

"ಅಮ್ಮನ ಮನೆಗೆ ಹೋಗ್ತೀನಿ ಅಲ್ಲಿಂದ ಫೋನ್ ಮಾಡಿ, ನರೇಶನನ್ನು ಬರೋಕೆ ಹೇಳ್ತೀನಿ ಎಂದು ಕೊಂಡು ಬಸ್ ಹತ್ತಿದಳು. ಬೆವರಿನಿಂದ ತೊಯ್ದು, ತಲೆನೋವನ್ನು ಸಹಿಸಿಕೊಂಡು ಹೋಗಿ ಸೀಟಿನಲ್ಲಿ ಕುಳಿತಳು. ಬಸ್ ಕದಲಿದಾಗ ಸ್ವಲ್ಪ ಗಾಳಿಯಾಡಿದಂತಾಯಿತು. ಕಿಟಕಿ ಕಡೆ ಮುಖಮಾಡಿ ಗಾಳಿ ಹೀರಿದಳು. ಬೆವರನ್ನು ಒರೆಸಿಕೊಂಡಳು.

"ಹೇಗಿದ್ದೀಯ ಶಾಲೂ? ಇದೇನು ಇದ್ದಕ್ಕಿದ್ದ ಹಾಗೆ? ತುಂಬಾ ಸುಸ್ತಾದ ಹಾಗೆ ಇದ್ದೀ?" ಮಗಳ ಕಾಂತಿಹೀನವಾದ ಮುಖವನ್ನು ನೋಡಿ ಚಿಂತೆಗೆ ಒಳಗಾದಳು. ಕೈಲಿದ್ದ ಕೆಲಸವನ್ನು ಅಲ್ಲಿಯೇ ಬಿಟ್ಟು, ಬಾಗಿಲು ತೆಗೆದು ಶಾಲ್ಮಲಿ ಕಡೆ ನಡೆದಳು.

"ಅಮ್ಮ ಆಫೀಸಿನಿಂದ ನೇರವಾಗಿ ಇಲ್ಲಿಗೆ ಬಂದೆ" ಎದುರಿಗಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಹೇಳಿದಳು.

"ಬಾ ಒಳಗೆ ಫ್ಯಾನ್ ಕೆಳಗೆ! ನಾನು ಸ್ವಲ್ಪ ಶರಬತ್ ಮಾಡ್ತೀನಿ. ಅವಳನ್ನು ಎಬ್ಬಿಸುತ್ತಾ ಹೇಳಿದಳು ಅಮ್ಮ.

"ಅಪ್ಪ ಎಲ್ಲಿದ್ದಾರೆ?" – ಫ್ಯಾನ್ ಕೆಳಗೆ ನಿಂತು ಕೇಳಿದಳು. ಒಳಗಿನಿಂದಲೇ ಉತ್ತರಿಸಿದಳು. ಚೆನ್ನಾಗಿ ಸೋಪು ಹಚ್ಚಿಕೊಂಡು ಬಕೆಟ್‌ನಲ್ಲಿದ್ದ ತಣ್ಣನೆಯ ನೀರಿನಿಂದ ಕೈ ಕಾಲು ಮುಖ ತೊಳೆದುಕೊಂಡಳು.

"ಸ್ನಾನ ಮಾಡೋದಾದ್ರೆ ಮಾಡು. ಒಗೆದ ಸೀರೆ ಕೊಡ್ತೀನಿ" – ಬಚ್ಚಲ ಮನೆಯ ಬಾಗಿಲು ಬಳಿಯಿಂದಲೇ ಅಮ್ಮ ಹೇಳಿದಳು.

"ಇಲ್ಲ, ಬೇಡಮ್ಮ" ಎಂದು ಹೇಳುತ್ತಾ ಹೊರಗೆ ಬಂದಳು. ಮುಖ ಒರೆಸಿಕೊಳ್ಳೆಯೇ ಬಂದು ಫ್ಯಾನ್ ಕೆಳಗೆ ಕುರ್ಚಿ ಎಳೆದುಕೊಂಡು ಕುಳಿತಳು. ಅಮ್ಮ ಕೊಟ್ಟ ನಿಂಬೆಹಣ್ಣಿನ ಶರಬತ್ತನ್ನು ಗುಟುಕು ಗುಟುಕಾಗಿ ಕುಡಿಯತೊಡಗಿದಳು.

"ಅಮ್ಮ ನೀನ್ಯಾಕೆ ನಮ್ಮ ಜೊತೆ ಇರಬಾರದು?" ಇದ್ದಕ್ಕಿದ್ದಂತೆ ವಿಚಿತ್ರ ಪ್ರಶ್ನೆ ಕೇಳಿ ಮೂಲೆಯಲ್ಲಿದ್ದ ದಿವಾನ್ ಮೇಲೆ ಹೋಗಿ ಮೈ ಚಾಚಿದಳು.

"ನಾನೇ?..... ನೀನೇ ಬಂದು ಬಿಡು. ಈ ಮೂರು ಕೋಣೆಗಳು ನಮ್ಮಿಬ್ಬರಿಗೆ ಹೆಚ್ಚೇ. ನೀನು ಹೋದಾಗಿನಿಂದ ಮನೆಯೆಲ್ಲ ಬಣ ಬಣಗುಟ್ಟುತ್ತಿದೆ". ಅಮ್ಮ ಹೇಳುತ್ತಾ ಚಿಂತೆಗೊಳಗಾದರು.

"ನೀವು ಯಾಕೆ ನನ್ನನ್ನು ಕಳಿಸಿಕೊಟ್ಟಿರಿ?" ಶಾಲ್ಮಲಿ ಕಾಲು ಚಾಚುತ್ತ ಹೇಳಿದಳು.

"ನಿಂಗೇನು ಹುಚ್ಚು ಹಿಡಿದಿದೆಯಾ? ಹೆಣ್ಣು ಹುಡುಗೀನ ಯಾರು ಇಟ್ಕೋತಾರೆ ಮನೇಲಿ?" ಅಮ್ಮ ನಗುತ್ತಾ ಹೇಳಿದಳು.

"ಹುಡುಗೀನ ಕಳಿಸಿಕೋಡೋ ಬದಲು ಹುಡುಗನ್ನೆ ಯಾಕೆ ಕಳಿಸಿ ಕೊಡಬಾರದಮ್ಮ ಕನ್ಯಾದಾನದ ಬದಲು ಕುಮಾರದಾನಯಾಕೆ ಆರಂಭ ಮಾಡಬಾರದು!"

ಗಹಗಹಿಸಿ, ತನ್ನ ಮಾತಿಗೆ ತಾನೇ ನಕ್ಕಳು.

"ಬಾಯ್ಮುಚ್ಚು. ಹುಚ್ಚು ಹುಡುಗಿ!" ಅಮ್ಮ ಮುಗುಳ್ನಕ್ಕಳು.

"ನಿಜವಾಗಲೂ! ನಾ ಹೇಳಿದ ಹಾಗೆ ಆದರೆ, ಅತ್ತೆ ಅಳಿಯನನ್ನು ಬೈತಾ ಇದ್ರೆ..... 'ನಿಮ್ಮಪ್ಪ ಅಮ್ಮ ಏನು ಕಲಿಸಿದ್ದಾರೆ, ಹಾಳಾದವ್ನೆ! ಸರಿಯಾದ ನಡವಳಿಕೆ ಕಲಿಸಿಲ್ಲ. ಮೂರು ಕಾಸು ವರದಕ್ಷಿಣೆ ಇಲ್ಲ......" ಹೇಳುತ್ತಾ ಹೋದಂತೆ ಶಾಲ್ಮಲಿ ತನ್ನ ಕಣ್ಮುಂದೆ ಅಸಹಾಯಕ ಗಂಡಸನ್ನು ಕಲ್ಪಿಸಿಕೊಂಡು ಖುಷಿ ಪಡತೊಡಗಿದಳು. ಹತ್ತಾರು ಮಾತು ಕೇಳ್ತಾ, ಹೊಸ ಮನೆಯ ರೀತಿ ರಿವಾಜುಗಳನ್ನು ಕಲಿಯಲು ಪ್ರಯತ್ನಿಸುತ್ತಾ, ತಲೆ ಬಗ್ಗಿಸಿಕೊಂಡು, ಕಾಲಿನ ಉಗುರುಗಳಿಂದ ನೆಲ ಕೆರೆಯುತ್ತ ಉಕ್ಕಿ ಬರುತ್ತಿರುವ ಕಣ್ಣೀರನ್ನು ಮರೆಮಾಚಲು ಪ್ರಯತ್ನಿಸುತ್ತಾ ನಿಂತಿರುವವನನ್ನು ಕಣ್ಮುಂದೆ ತಂದುಕೊಂಡಳು.

"ಏನು ನಮ್ಮ ಹುಡುಗಿ ಬಹಳ ನಗ್ತಾ ಇದ್ದಾಳಲ್ಲ!" ಅಪ್ಪ ಒಳಗೆ ಪ್ರವೇಶಿಸುತ್ತಾ ಕೇಳಿದರು.

"ಅಪ್ಪಾ" ಇಷ್ಟು ಹೇಳಿ ಶಾಲ್ಮಲಿ ದಿವಾನ ಮೇಲೆ ಮಲಗಿದಳು. ಏನೂಂತ ತಿಳಿಯದೇನೇ ಅಪ್ಪ ಕೂಡಾ ಶಾಲ್ಮಲಿ ನಗುವುದನ್ನು ನೋಡಿ ತಾವೂ ನಕ್ಕರು.

"ನಿಮ್ಮಿಬ್ಬರಿಗೂ ಏನಾಗಿದೆ" – ಎನ್ನುತ್ತಾ ತನಗೂ ನಗುವನ್ನು ತಡೆಯಲಾಗದೆ ನಕ್ಕಳು ಅಮ್ಮ.

"ಶಾಲು, ಕೇಸರಿಯ ಗದ್ದೆ" ಅಪ್ಪ ಹತ್ತಿರ ಬಂದು ಪ್ರೀತಿಯಿಂದ ತಲೆಯ ಮೇಲೆ ಮೆಲ್ಲಗೆ ಒಂದು ಏಟುಹಾಕಿ ಹೇಳಿದರು.

"ಅಮ್ಮ ಸಾಮಾನಿನ ಚೀಲ ತೆಗೆದುಕೊಂಡು ಒಳಗೆ ಹೋದರು. ಶಾಲ್ಮಲಿ ಸ್ಯಾಂಡಲ್ ಧರಿಸತೊಡಗಿದಳು. ಅವಳು ಏಳುತ್ತಿರುವುದನ್ನು ನೋಡಿ ಅಪ್ಪ ಪ್ರಶ್ನಾರ್ಥಕವಾಗಿ ಅವಳ ಕಡೆ ನೋಡಿದರು. "ಹೊರಟು ಬಿಟ್ಟಿಯಾ?" ಕೇಳಿದರು.

"ಇಲ್ಲ, ಸ್ವಲ್ಪ ಫೋನ್ ಮಾಡಿ ಬರ್‍ತೀನಿ, ನರೇಶ್‌ಗೆ ಇಲ್ಲಿಯೇ ಬಾ ಅಂತ ಹೇಳ್ತೀನಿ. ನಾನು ನೇರವಾಗಿ ಆಫೀಸಿನಿಂದ ಬಂದೆ" – ಹೇಳುತ್ತಾ ಪಕ್ಕದ ಪಾಂಡೇಯವರ ಮನೆಗೆ ಹೊರಟಳು.

"ಏನ್ಸಮಾಚಾರ ಶ್ಯಾಮಲ? ಇವತ್ತು ಬಹಳ ಸಂತೋಷವಾಗಿ ಇರುವ ಹಾಗೆ ಕಾಣಿಸ್ತಿದ್ದಾಳೆ, ನಮ್ಮ ಶಾಲೂ!" ಕುತೂಹಲದಿಂದ ಅಪ್ಪ ಅಡುಗೆ ಮನೆಗ ನಡೆದೇ ಕೇಳಿದರು.

"ಗೊತ್ತಿಲ್ಲ. ಬಂದಾಗ ಅವಳ ಮುಖ ನೋಡಿ ಗಾಭರಿಯಾದೆ. ಏನಾಯ್ತೋ ಅಂತ ಹೆದರಿದೆ. ಆಮೇಲೆ ಇದ್ದಕ್ಕಿದ್ದ ಹಾಗೆ ತಮಾಷೆಯಾಗಿ ಮಾತಾಡ್ತಾ ನಗೋಕೆ ಶುರು ಮಾಡಿದಳು" – ಹೇಳುತ್ತಾ ಹೇಳುತ್ತಾ ಅಮ್ಮನಿಗೂ ನಗುಬಂತು.

"ಏನಾಯ್ತೇ?" ಹೊರಡುತ್ತಿದ್ದವರು ಕೇಳಿದರು.

"ಏನೂ ಇಲ್ಲ". ಬರುತ್ತಿದ್ದ ನಗುವನ್ನು ತುಟಿಕಚ್ಚಿ ತಡೆಯಲು ಪ್ರಯತ್ನಿಸಿದಳು. ಅವಳ ಕಣ್ಮುಂದೆ ಶಾಲ್ಮಲಿಯ ಚಿತ್ರ ಮೂಡಿ ಬಂತು.

"ಮೊದಲು ನಗೋದು ಮುಗಿಸು. ಆಮೇಲೆ ಚಹಾ ಸೋಸುವಿಯಂತೆ" ಅಪ್ಪ ಹೇಳಿ ಹೆಜ್ಜೆ ಹಾಕಿದರು.

ರಾತ್ರಿ ಒಂಬತ್ತು ಗಂಟೆ ಆಯಿತು. ನರೇಶ್ ಬರಲಿಲ್ಲ. ನರೇಶನಿಗಾಗಿ ಕಾದು ಕಾದು ಸಾಕಾಗಿ ಎರಡನೆ ಸಲ ಫೋನ್ ಮಾಡಿ ಬರಲು ಹೋದವಳು ಜೋಲು ಮುಖ ಹಾಕಿಕೊಂಡು ಮರಳಿದಳು. "ಏನಾಯ್ತು" – ಅಮ್ಮ ಚಿಂತೆಯಿಂದ ಕೇಳಿದಳು.

"ಆಯ್ತು. ನಾನು ಬರ್ತೀನಿ ಅಮ್ಮ" ಶಾಲ್ಮಲಿ ಹೇಳಿದಳು.

"ಯಾಕೆ? ನರೇಶ್ ಬರೋದಿಲ್ವಂತ?" ಕನ್ನಡಕವನ್ನು ಸರಿಪಡಿಸಿಕೊಳ್ಳುತ್ತಾ ಅಪ್ಪ ಕೇಳಿದರು.

"ಇನ್ನೂ ಮನೆಗೇ ಬಂದಿಲ್ಲ. ಆಗಲೇ ನಾನು ಫೋನ್ ಮಾಡಿದಾಗ ಮನೆಯ ಯಜಮಾನಿ ಫೋನ್ ತಗೊಂಡಿದ್ದು. ಈಗ ಅವರ ಸೊಸೆ ಹೇಳಿದಳು, ಏಳು ಗಂಟೆ ಸುಮಾರಿಗೆ ನರೇಶ್ ಫೋನ್ ಮಾಡಿ ಹೇಳಿದ್ನಂತೆ ಊಟಕ್ಕೆ ಮನೆಗೇ ಬರ್ತೀನಿ, ಆದರೆ ಬರೋದು ಒಂಬತ್ತು, ಹತ್ತು ಗಂಟೆ ಸುಮಾರಿಗೆ ಅಂತ ಹೇಳಿದನಂತೆ. ಏನೋ ಕೆಲಸ ಇದೆಯಂತೆ. ಶಾಲ್ಮಲಿ ಹೇಳಿ, ಹೊರಟು ನಿಂತಳು.

"ನೋಡು ಮಗು, ನೀನು ನಂ ಜೊತೆ ಊಟ ಮಾಡು. ನಿನ್ನ ಗಂಡನಿಗೆ ಇಲ್ಲಿಂದಲೇ ಊಟ ಕಟ್ಟಿಕೊಡ್ತೀನಿ" ಎಂದು ಬೇಗನೆ ಕುಳಿತಲ್ಲಿಂದ ಎದ್ದರು.

"ಬೇಡಮ್ಮ ಇಬ್ಬರ ಊಟವನ್ನೂ ಪ್ಯಾಕ್ ಮಾಡು ಊಟಕ್ಕೇಂತ ಕೂತರೆ ಲೇಟಾಗಿ ಬಿಡುತ್ತೆ" ಹೇಳುತ್ತಾ ಶಾಲ್ಮಲಿ ತನ್ನ ಪರ್ಸ್ ಕೈಗೆತ್ತಿಕೊಂಡಳು.

"ಬೇಸರ ಮಾಡ್ಕೋ ಬೇಡ ಮಗು. ಕೂತ್ಕೋ ಅಮ್ಮ ಊಟ ಬಡಿಸಿ ಬಿಡ್ತಾಳೆ". ಅಪ್ಪ ಸಮಾಧಾನ ಪಡಿಸುವಂತೆ ಹೇಳಿದರು.

"ಹೊರಗಡೆ ಗೇಟ್‌ಗೆ ಬೀಗ ಹಾಕಿ ಬಿಡ್ತಾರೆ, ಹತ್ತು ಗಂಟೆ ಮೇಲೆ ಒಂದು ಬೀಗದ ಕೈ ನನ್ನ ಹತ್ತಿರ ಇದೆ. ಅವನು ಬಂದಾಗ, ತೊಂದರೆ ಆಗುತ್ತೆ. ಅವನಿಗೆ ಬೀಗದ ಕೈ ಎಲ್ಲಿದೇಂತ ಗೊತ್ತಿಲ್ಲ. ಕೆಳಗಿನ ಮನೆಯವರನ್ನು ಎಬ್ಬಿಸಬೇಕಾಗುತ್ತೆ". ಶಾಲ್ಮಲಿ ಚಿಂತಿತಳಾದಳು.

ಸಂತೋಷ, ನಗುವಿನಿಂದ ತುಂಬಿದ್ದ ಮನೆಯ ವಾತಾವರಣದಲ್ಲಿ ಗಂಭೀರತೆ ಕವಿಯಿತು. ಅಮ್ಮ ಬೇಗ ಬೇಗನೆ ಊಟವನ್ನು ಕ್ಯಾರಿಯರ್‌ನಲ್ಲಿಟ್ಟು ಶಾಲ್ಮಲಿಯ ಕೈಗೆ ಕೊಟ್ಟಳು.

ಶಾಲ್ಮಲಿ ಹೋದ ಮೇಲೆ ಅಮ್ಮ ಅಪ್ಪನ ದಾರಿಕಾಯುತ್ತ ಬಾಗಿಲಲ್ಲೇ ನಿಂತಳು. ಅಪ್ಪ ಬಂದರು. ಅಮ್ಮ ಅಡುಗೆ ಮನೆಗೆ ಹೋಗಿ ಊಟಕ್ಕೆಲ್ಲ ತೆಗೆದಿರಿಸಿದಳು. ಅಪ್ಪ ಕೈ ಕಾಲು ಮುಖ ತೊಳೆಯಲೆಂದು ಹೊರಗಿನ ಬಾಗಿಲನ್ನು ಭದ್ರಪಡಿಸಿ ಬಚ್ಚಲು ಕಡೆಗೆ ಹೊರಟರು.

"ಬಸ್ ಸಿಕ್ತಾ?"

"ಹೌದು"

"ಇಷ್ಟು ಹೊತ್ತಿಗೆ ಮನೆ ಸೇರಿರಬೇಕಲ್ಲ?"

"ಧಾರಾಳವಾಗಿ. ಏನು ಒಂದು ಹದಿನೈದು ನಿಮಿಷದ ದಾರಿ, ಅಷ್ಟೆ"

"ಗಂಟೆ ಎಷ್ಟು?"

"ಹತ್ತು ಆಗಲಿದೆ."

"ತಿಂದು ಹೋಗಿದ್ದರೆ, ಅವಳಿಗೆ ಇಷ್ಟವಾದ ತರಕಾರಿ".

"ಹೊತ್ತಾಗಿ ಹೋಗಿತ್ತಲ್ಲ!"

"ಹೊತ್ತಾಗಿತ್ತು ಸರಿ, ಆದರೆ......"

"ನರೇಶ ಯಾಕೆ ಇಷ್ಟು ತಡವಾಗಿ ಮನೆಗೆ ಬರ್ತಾನೆ?"

"ಕೆಲಸ ಇರಬಹುದು".

"ಐದು ಗಂಟೆಗೆ ಆಫೀಸ್ ಮುಗಿಯುತ್ತೆ. ಆಮೇಲೆ ಏನು ಕೆಲಸ ಇರುತ್ತೆ?"

"ಸಾಮಾನ್ಯವಾಗಿ ದಿನ ಬಿಟ್ಟು ದಿನ ತಡವಾಗಿಯೇ ಬರ್ತಾನೆ"?

"ಕೆಲಸ ಇರಬಹುದು."

"ಐದು ಗಂಟೆಗೆ ಆಫೀಸ್ ಮುಗಿಯುತ್ತೆ. ಆಮೇಲೆ ಏನು ಕೆಲಸ ಇರುತ್ತೆ?"

"ಸಾಮಾನ್ಯವಾಗಿ ದಿನ ಬಿಟ್ಟು ದಿನ ತಡವಾಗಿಯೇ ಬರ್‍ತಾನೆ"

"ನಿನಗೆ ಯಾರು ಹೇಳಿದರು? ಶಾಲೂ?"

"ಇಲ್ಲ"

"ಹಾಗಾದರೆ?"

"ಶಾಲೂ ಮಾತಿಂದ ಅರ್ಥಮಾಡಿ ಕೊಂಡೆ."

"ಯಾವಾಗಲಾದರೂ ವಿಚಾರಿಸಿದಿರಾ"

"ಮುಂದಿನ ಸಲ ಬಂದಾಗ ಕೇಳ್ತೀನಿ."

"ಶಾಲ್ಮಲಿ ಸುಖವಾಗಿ ಇದ್ದಾಳೆ ತಾನೇ?"

"ಹಾಗೇನೋ ಅನ್ಸತ್ತೆ."

"ಮನಸ್ಸಿಗೆ ಒಂದೊಂದು ಸಲ ಅನುಮಾನ ಬರುತ್ತೆ......ಎಲ್ಲಾದರೂ......"

"ಏನು ಅನುಮಾನ?"

"ಅದೇ! ಅವಳೇನಾದರೂ ನಮ್ಮಿಂದ ವಿಷಯ ಬಚ್ಚಿಡುತ್ತಿದ್ದಾಳೇನೋ ಅಂತ!"

"ಇದ್ದರೂ ಇರಬಹುದು, ಆದರೆ......"

"ಈ ಸಲ ಬಂದರೆ ಕೇಳಿ ನೋಡು ಶ್ಯಾಮಲ್"

"ಆಯ್ತು ವಿಚಾರಿಸ್ತೇನೆ"

"ಏನೇ ಕಷ್ಟಬಂದರೂ, ಸಹಿಸಿಕೊಳ್ಳೋ ಶಕ್ತಿ ಅವಳಿಗಿದೆ – ಅನ್ನೋದರಲ್ಲಿ ನನಗೆ ಪೂರ್ತಿ ಭರವಸೆ ಇದೆ.

"ಪ್ರತಿ ಹೆಂಗಸಿಗೂ ಆ ಶಕ್ತಿ ಇದ್ದೇ ಇರುತ್ತೆ."

"ಸಮಯ ಬಿದ್ದರೆ, ಅವಳು ತನ್ನ ಕಷ್ಟವನ್ನು ಯಾರಿಗೂ ಹೇಳಿಕೊಳ್ಳದೇ, ಒಬ್ಬಳೇ ಅದನ್ನು ಎದುರಿಸುತ್ತಾಳೆ."

"ಪ್ರತಿಯೊಬ್ಬರಿಗೂ ಹಾಗೆ ಮಾಡಲೇ ಬೇಕಾಗುತ್ತೆ". "ಅದು ಸರಿ. ಆದರೆ ಶಾಲೂ ಸಾಮರ್ಥ್ಯ ಬೇರೆಯವರಿಗಿಂತ ಭಿನ್ನ."

"ಪ್ರತಿಯೊಬ್ಬರಿಗೂ ಹಾಗೇ ಅನ್ಸತ್ತೆ". ಊಟ ಮಾಡಿ ಇಬ್ಬರೂ ಎದ್ದರು. ಅಡಿಗೆನೆಲ್ಲಾ ತೆಗೆದಿರಿಸಿ, ಸೋಂಪಿನ ಬಟ್ಟಲನ್ನು ಅಪ್ಪನ ಮುಂದಿಟ್ಟಳು. ಸೋಂಪನ್ನು ಬಾಯಿಗೆ ಹಾಕಿಕೊಂಡು ಮೆಲ್ಲುತ್ತಾ ಇಬ್ಬರೂ ಯೋಚನೆಯಲ್ಲಿ ಮುಳುಗಿದರು. ಆಮೇಲೆ ದೀಪ ಆರಿಸಿ ಮಲಗಿದರು.

"ಏನೇ ಕೇಳಿಸಿ ಕೊಳ್ಳುತ್ತಿದ್ದೀಯ?"

"ಹೂಂ! ಏನು ಹೇಳಿ?"

"ಶಾಲ್ಮಲಿ ಮದುವೆಯಾಗಿ ಸುಮಾರು ವರ್ಷ ಆಯ್ತಲ್ಲ?"

"ಹೌದು"

"ಇನ್ನೂ ಯಾಕೆ ಹೀಗೇ ಇದ್ದಾಳೆ."

"ಕುಟುಂಬ ಯೋಜನೆ"

"ಕುಟುಂಬ ಎಲ್ಲಿದೆ? ಕುಟುಂಬ ಯೋಜನೆ ಬಗ್ಗೆ ಮಾತಾಡೋಕೆ?"

"ಹೊಸ ಆಲೋಚನೆಗಳು."

"ಅದೆಲ್ಲ ಇರಲಿ. ನೀನು ಸರಿಯಾಗಿ ವಿಚಾರಿಸಿ ನೋಡಿದೆಯಾ ಏನಾದರೂ ಹೆಚ್ಚು ಕಮ್ಮಿ..?"

"ಯೋಚನೆ ಮಾಡಬೇಕಾದ್ದು ಏನೂ ಇಲ್ಲ."

"ನೀನು ಹೇಳಿದರೆ ಆಯ್ತು ಬಿಡು"

"ನರೇಶನಿಗೆ ಇನ್ನೂ ಮನಸ್ಸಿಲ್ಲ."

ಅದೇನೋ ಸರಿ. ಇನ್ನೂ ಸಂತೋಷವಾಗಿ ಕಾಲ ಕಳೆಯಬೇಕಾದ ವಯಸ್ಸು ಅವರದು."

"ಹೌದು ಒಂದು ಸಲ ಹೆಣ್ಣು ಇದರಲ್ಲಿ ಸಿಕ್ಕಿಬಿದ್ದರೆ ಮುಗೀತು?"

"ಅದರ ಸುಖ ಅದಕ್ಕಿದೆ."

"ಸುಖ ಇದೆ. ಆದರೆ ಆ ಸುಖ ನೋವಿನ ಸುಖ!"

"ಯಾಕೆ ನಗ್ತೀಯ?"

"ಶಾಲೂ ಬಾಲ್ಯದ ನೆನಪಾಯಿತು".

"ಎಷ್ಟು ದುಂಡು ದುಂಡಗೆ ಇದ್ದಳು."

"ಹೌದು."

"ನೀನು ಯಾವಾಗಲಾದರೂ ಹೊಡೆದರೆ ನನ್ನ ಮನಸ್ಸಿಗೆ ತುಂಬ ನೋವಾಗ್ತಿತ್ತು."

"ಹೌದು ಅಮ್ಮನ ಮನಸ್ಸಿಗೆ ನೋವಾದಾಗಲೇ ಹೊಡೆಯೋದು."

"ಅಂದ್ರೆ?"

"ನಿನಗೆ ಅರ್ಥ ಆಗೊಲ್ಲ ಬಿಡು."

"ನನಗೆ ಒಂದು ಮಾತ್ರ ಅರ್ಥ ಆಗಿದೆ. ಶಾಲೂ ವಿಚಾರದಲ್ಲಿ ನಾನು ಕಂಡ ಕನಸುಗಳು ಸಾಕಾರಗೊಂಡಿವೆ. ಶಾಲೂ ಯಾರ ಮೇಲೂ ನಿರ್ಭರಳಲ್ಲ. ತನ್ನ ಕಾಲ ಮೇಲೆ ತಾನು ನಿಂತಿದ್ದಾಳೆ."

"ದೇವರು ಅವಳನ್ನು ಚೆನ್ನಾಗಿ ಇಟ್ಟಿರಲಿ"

"ಅವಳೇ ನನಗೆ ಮಗ, ಮಗಳು, ಎಲ್ಲಾ!"

"ಮನಸ್ಸಿಗೆ ಸಮಾಧಾನ ತಂದು ಕೊಳ್ತಿದ್ದೀಯ?"

"ನಿಜವಾಗಲೂ ಹೇಳ್ತಿದ್ದೀನಿ"

"ನಮ್ಮ ಮಗ ಬದುಕಿ ಇದ್ದಿದ್ದರೆ ಇವತ್ತು....."

"ಹೇಳು. ಯಾಕೆ ಸುಮ್ಮನಾದೆ?"

"ಏನಿಲ್ಲ."

"ಏನಾದರೂ ಹೇಳು! ಮಾತನ್ನು ಅರ್ಧಕ್ಕೆ ನಿಲ್ಲಿಸಬೇಡ ಶ್ಯಾಮಲ್"

"ಹುಡುಗ ಇದ್ದಿದ್ದರೆ, ಮನೇಲಿ ಹೀಗೆ ನೀರವತೆ ಕವಿದು ಇರ್ತಿರಲಿಲ್ಲ."

"ಬಹುಶ......."

"ಮನೆ ತುಂಬಿರುತ್ತಿತ್ತು. ಸೊಸೆ ಮೊಮ್ಮಕ್ಕಳು......"

"ಅದಕ್ಕಾಗಿ ಈಗ ಅಳ್ತಿದ್ದೀಯೇನು?"

"ಇಲ್ಲ, ಇಲ್ಲ"

"ಮತ್ತೆ?"

"ಯಾವುದು ಇಲ್ಲವೊ ಅದಕ್ಕಾಗಿ......'

ಇದಾದ ನಂತರ ಬಹಳ ಹೊತ್ತು ನಿಸ್ತಬ್ಧತೆ ಹರಡಿತ್ತು.

ಅಮ್ಮ ಅಳುತ್ತಿದ್ದಳೋ ಅಥವಾ ಕಂಬನಿ ಬತ್ತಿ ಹೋಗಿತ್ತೋ, ತಿಳಿಯುವಂತಿರಲಿಲ್ಲ. ಅಪ್ಪ ಎದೆ ಮೇಲೆ ಕೈ ಇಟ್ಟುಕೊಂಡು ಜಡವಾಗಿ ಬಿದ್ದಿದ್ದರು. ಕತ್ತಲಲ್ಲಿ ಅವರ ಕಣ್ಣು ತಿರುಗುತ್ತಿದ್ದ ಫ್ಯಾನ್‌ನ ಮೇಲಿತ್ತು. ಹೊರಗಿನಿಂದ ಬೆಳಕಿನ ಗೋಲಾಕಾರವೊಂದು ಅದರ ಮೇಲಿನಿಂದ ಹಾದು ಹೋಗುತ್ತಿತ್ತು.

"ಇದು ಪೂರ್ವಗ್ರಹ....."

"ಇದೇ ಜೀವನದ ವಾಸ್ತವ ಸತ್ಯ. ಯಥಾರ್ಥತೆ"

"ಇದೇ ಯಾಕೆ ಯಥಾರ್ಥ."

"ಯಾಕೇಂದ್ರೆ, ಇದರೊಂದಿಗೆ ನಮ್ಮ ಭವಿಷ್ಯ ಬೆಸೆದಿದೆ."

"ಒಂದು ವೇಳೆ ಮಗ ಇದ್ದಾ ಅಂದ್ರೂ, ನಮ್ಮ ಹತ್ತಿರವೇ ಇರಬೇಕೂನ್ನೋದು ಏನಿತ್ತು?

"ಇನ್ನೆಲ್ಲಿಗೆ ಹೋಗ್ತಿದ್ದ?"

"ವಿದೇಶದಲ್ಲಿಯೇ ನೆಲೆಸಿದ್ದರೆ?"

"ವಾಪಸ್ ಬರ್ತಿದ್ದ, ಎಂದಾದ್ರೂ"

"ಶಾಲ್ಮಲಿ ಹತ್ತಿರವೇ ಇದ್ದಾಳಲ್ಲ?"

"ಹತ್ತಿರ ಇದ್ದ ಮೇಲೆ, ಮಗಯಾಕೆ ನೆನಪಿಗ ಬರ್ತಾನೆ?"

"ಅದು ನೀನು.......

"ನಾನಲ್ಲ....... ಪ್ರಪಂಚದ ರೀತಿ. ಈಗೆಲ್ಲಿ ಅವಳು ನಮ್ಮವಳು. ನಮ್ಮವಳಾಗಿ ಉಳಿದಿದ್ದರೆ, ಯಾಕೆ ಇಷ್ಟು ಹೆದರಿಕೊಂಡು ಇಷ್ಟು ರಾತ್ರಿಯಾಗಿರುವಾಗ ತನ್ನ ಮನೆ ಕಡೆ ಓಡ್ತಿದ್ಲು?"

"ಮದುವೆ ಆಗಿರುವವಳು ಅವಳಿಗೂ ಅವಳ ಕರ್ತವ್ಯ ಅವಳ....."

"ಅದಕ್ಕೇ ಹೇಳ್ತಿರೋದು ಹುಡುಗಿ ಎಂದಿದ್ದರೂ ಹೊರಗಿನವಳು. ಎಲ್ಲಿ ಸೇರಬೇಕಿತ್ತೋ, ಅಲ್ಲಿಗೆ ಸೇರಿದ್ದಾಳೆ."

"ಪಾಪ ಶಾಲ್ಮಲಿಯನ್ನು ದೂರುತ್ತಿಲ್ಲ."

"ಹಾಗಾದರೆ?"

"ನೀವು ಗಂಡಸರು ಬಹಳ ಕಠೋರ ಮನಸಿನವರು!"

"ಅಯ್ಯೋ ನಾನೇನು ಮಾಡಿದೆ?"

"ಸರಳವಾದ ಒಂದು ಮಾತನ್ನು ಒಪ್ಪಿಕೊಳ್ಳುವ ಇಷ್ಟ ಇಲ್ಲದೆ ಬೇರೆಯವರ ಮನಸ್ಸನ್ನು ಕುಕ್ಕಿ ಬಿಡ್ತೀರಿ!"

"ಕಷ್ಟ ಬಂತೂ ಅಂತ ಹೆದರಿಕೊಂಡರೆ, ಅವನು ಗಂಡಸು ಹೇಗಾದಾನು?"

"ಸತ್ಯವನ್ನು ಒಪ್ಪಿಕೊಳ್ಳದೆ ಇರೋದು ಸತ್ಯ ಏನೂಂತ ತಿಳಿದೂ ಅದರ ಬಗ್ಗೆ ನಿರ್ಲಕ್ಷ್ಯದಿಂದ ಇರೋದೆ ಏನು ಗಂಡಸ್ತನ?"

"ಇಲ್ಲ ಅದು ಹೆಣ್ತನ" ಮೌನ!......

ಕೋಣೆಯಲ್ಲಿನ ನೀರವತೆ ಮತ್ತಷ್ಟು ದಟ್ಟವಾಯಿತು. ಇಬ್ಬರೂ ಒಬ್ಬರನ್ನೊಬ್ಬರು ತಮ್ಮನ್ನು ತಾವು ಸಂಭಾಳಿಸಿಕೊಳ್ಳುತ್ತಲೇ ಇಲ್ಲವೆ ಒಬ್ಬರಿಂದೊಬ್ಬರು ತಮ್ಮನ್ನು ಮರೆಮಾಚುತ್ತಲೋ ತಮ್ಮ ಹಣೆಬರಹದ ಚಿಂತೆಯಲ್ಲಿ ಮುಳುಗಿದರು.

ಬಸ್ ಇಳಿದು ಶಾಲ್ಮಲಿ ವೇಗವಾಗಿ ರಸ್ತೆಯನ್ನು ದಾಟುತ್ತಿರುವಾಗ ನರೇಶನ ಸ್ಕೂಟರ್ ಗಲ್ಲಿಯ ಒಳಗೆ ಹೋದದ್ದನ್ನು ನೋಡಿದಳು. ಮನಸ್ಸಿನಲ್ಲಿಯೇ ದೇವರಿಗೆ ಕೃತಜ್ಞತೆ ಹೇಳಿದಳು. ಮುಂದೆ ನಡೆದಳು. ಗೇಟಿಗೆ ಬೀಗ, ಹಾಕಲು ಮಿಸೆಸ್ ಖನ್ನಾ ಕೋಣೆಯಿಂದ ಹೊರಗೆ ಬರುತ್ತಿದ್ದಂತೆ ನರೇಶನ ಸ್ಕೂಟರ್ ನಿಂತ ಶಬ್ದ ಕೇಳಿಸಿತು.

"ಬಂದು ಬಿಟ್ರಾ?" – ಹೇಳುತ್ತಾ ಬಾಗಿಲನ್ನು ತೆರೆದಳು.

"ಥ್ಯಾಂಕ್ಸ್" ಹೇಳುತ್ತಾ ನರೇಶ್ ಸ್ಕೂಟರನ್ನು ತಳ್ಳಿಕೊಂಡು ಮೇಲೆ ತಂದು ಲಾಕ್ ಮಾಡಿದ.

"ಸಾರಿ ಮಿಸೆಸ್ ಕುಮಾರ್...... ನನಗೆ ಗೊತ್ತಿರಲಿಲ್ಲ. ನೀವು ಅಮ್ಮನಿಗೆ ವಿಷಯ ತಿಳಿಸಿದ್ದಿರಿ ಅಂತ." ಮನೆಯ ಮಾಲೀಕಳ ಸೊಸೆ ವಿಷಾದ ವ್ಯಕ್ತ ಪಡಿಸಿದರು, ಮತ್ತು ಗೇಟಿಗೆ ಬೀಗ ಹಾಕಿದರು.

"ಸದ್ಯ ಬಂದು ಬಿಟ್ಟೆ. ಇಲ್ಲದೆ ಇದ್ದಿದ್ದರೆ ನರೇಶ್ ತಮ್ಮನ್ನು ಎಬ್ಬಿಸಬೇಕಾಗ್ತಿತ್ತು." ಶಾಲ್ಮಲಿ ಕೃತಜ್ಞತಾ ಭಾವದಿಂದ ಹೇಳಿ ಬೇಗ ಬೇಗ ಮೆಟ್ಟಲು ಹತ್ತಿದಳು.

"ಎಲ್ಲಿ ಹೋಗಿದ್ದೆ?" ನರೇಶ್ ಚಪ್ಪಲಿಯ ಬೆಲ್ಟ್ ಬಿಚ್ಚುತ್ತಾ ಹೇಳಿದ.

"ಅಮ್ಮನ ಮನೆಗೆ". ಶಾಲ್ಮಲಿ ಉತ್ತರಿಸುತ್ತಾ ಇನ್ನೂ ಬಿಸಿಯಾಗಿಯೇ ಇದ್ದ ಊಟವನ್ನು ತಟ್ಟೆಗಳಲ್ಲಿ ತೆಗೆದಿರಿಸಿದಳು.

"ಬಹಳ ಚೆನ್ನಾಗಿದೆ! ಬೆಳಗಿನಿಂದ ಹೋಗುವ ಕಾರ್ಯಕ್ರಮವನ್ನೇ ಯೋಚಿಸಿರಲಿಲ್ಲ. ಇದ್ದಕ್ಕಿದ್ದಂತೆ ಹೇಗೆ ಹೊರಟು ಬಿಟ್ಟೆ?" ನರೇಶ್ ಆಶ್ಚರ್ಯದಿಂದ ಕೇಳಿದ.

"ಅವರೆಲ್ಲ ಹೇಗಿದ್ದಾರೇಂತ ಮೊದಲು ಕೇಳಬಾರದಾ?"

"ಹೌದು ಅಪ್ಪ ಹೇಗಿದ್ದಾರೆ? ಅಮ್ಮ ಹೇಗಿದ್ದಾರೆ? ಸ್ವಲ್ಪ ನಾಚಿ ಕೇಳಿದ.

"ಎಲ್ಲ ಚೆನ್ನಾಗಿದ್ದಾರೆ. ನಿನ್ನನ್ನು ತುಂಬಾ ಕೇಳಿದ್ರು, ನಮ್ಮಿಬ್ಬರಿಗೂ ಒಬ್ಬರಿಗೊಬ್ಬರಿಗೆ ವಿಷಯ ತಿಳಿಸೋದಕ್ಕೆ ಆಗಲಿಲ್ಲ. ಇಲ್ಲಾಂದ್ರೆ ಒಂಬತ್ತು ಗಂಟೆವರೆಗೆ ಊಟಕ್ಕೆ ನಿನ್ನನ್ನು ನಿರೀಕ್ಷಿಸುತ್ತಿರಲಿಲ್ಲ. ನಾನೂ ಬಹಳ ಮುಂಚೇನೇ ಬಂದ್ಬಿಡ್ತಿದ್ದೆ"

ಎಂದು ಹೇಳಿ, ಸಂಜೆ ನಡೆದ ಸಂಗತಿಗಳನ್ನೆಲ್ಲಾ ಸಾದ್ಯಂತವಾಗಿ ವಿವರಿಸಿದಳು.

"ಏನಾದರೂ ಹೇಳು, ಹೆಣ್ಣು ಮಕ್ಕಳಿಗೆ ತವರಿನ ಮೋಹ ಬಿಡೋದಿಲ್ಲ" ತನಗೆ ತಾನೇ ಹೇಳಿಕೊಂಡಂತೆ ಹೇಳಿದ.

ಊಟ ಮುಗಿದ ಮೇಲೆ ನರೇಶ ಸ್ವಲ್ಪ ಹೊತ್ತು ಟೆರ್ರೇಸ್ ಮೇಲೆ ಅಡ್ಡಾಡಿದ. ನಂತರ ಶಾಲ್ಮಲಿ ಹಾಸಿದ ಹಾಸಿಗೆಯ ಮೇಲೆ ಮಲಗಿದ. ಸ್ವಲ್ಪ ಹೊತ್ತು ಶಾಲ್ಮಲಿ ಅವನೇನಾದರೂ ಹೇಳಬಹುದೂಂತ ಕಾದಳು. ಸಂಜೆ ಯಾವ ಕೆಲಸದಲ್ಲಿ ಮುಳುಗಿದ್ದ ಅನ್ನೋದನ್ನ ತಿಳಿಸಬಹುದೂಂತ ನಿರೀಕ್ಷಿಸಿದರೆ, ಅವನು ಎರಡೂ ಕೈಗಳನ್ನು ತಲೆಯಡಿಗೆ ಕೊಟ್ಟು ವಿಸ್ತಾರವಾದ ತೆರೆದ ಆಕಾಶವನ್ನು ದಿಟ್ಟಿಸುತ್ತಿದ್ದ. ಶಾಲ್ಮಲಿ ಕೀಟಲೆಗಾಗಿ ಅವನ ತುಟಿಗಳನ್ನು ಮೆಲ್ಲಗೆ ಅಲುಗಾಡಿಸಿದಳು. ಅವಳ ಈ ಕೆಲಸಕ್ಕೆ ನರೇಶ್ ಒಂದು ಸಲ ಅವಳ ಕಡೆ ನೋಡಿದ. ಆದರೆ ಮಾತಾಡಲಿಲ್ಲ. ಶಾಲ್ಮಲಿ ಮತ್ತೆ ಅದೇ ಕೀಟಲೆ ಮಾಡಿದಳು.

ಈಗ ನರೇಶ್ ನಕ್ಕ.

"ಮೂರನೇ ಸಲವೂ ತಂತಿ ಮಿಡಿಯಬೇಕೇ ಅಥವಾ ಧ್ವನಿ ಹೊರಡುತ್ತಾ?" ಶಾಲ್ಮಲಿ ನಕ್ಕು ಕೇಳಿದಳು.

"ತುಂಬ ಸುಸ್ತಾಗಿದೆ. ಇಪ್ಪತ್ತು ಮೈಲಿ ಸ್ಕೂಟರ್ ಓಡಿಸಿದ್ದೇನೆ. ದಾರಿ ಕೂಡಾ....." ನರೇಶ್ ಸಾಕಾಗದವನಂತೆ ಹೇಳಿದ.

"ಎಲ್ಲಿ ಹೋಗಿದ್ದೆ?" ಶಾಲ್ಮಲಿ ಕುತೂಹಲದಿಂದ ಕೇಳಿದಳು.

"ಕೈಲಾಶ್‌ನ ಕೆಲಸ ಇತ್ತು. ಆಮೇಲೆ ತಿಳಿಸ್ತೀನಿ. ಈಗ ಮಲಗೋದಕ್ಕೆ ಬಿಡು" ಎಂದು ಹೇಳಿ ನರೇಶ್ ಮತ್ತೆ ಯೋಚನೆಯಲ್ಲಿ ಮುಳುಗಿದ. ಶಾಲ್ಮಲಿ ಅವನ ಹಾವ ಭಾವಗಳನ್ನು ಬದಲಾಗುತ್ತಿರುವ ಮುಖ ಭಾವಗಳನ್ನು ಗಮನಿಸುತ್ತಿದ್ದಳು. ಅವಳಿಗೆ ತಡೆಯಲು ಸಾಧ್ಯವಾಗದೆ ಹೋದಾಗ ಕೇಳಿಯೇ ಬಿಟ್ಟಳು – ನನ್ನಿಂದ ನೀನು ಏನೋ ಮರೆಮಾಚುತ್ತಿದ್ದೀ?"

ನರೇಶ್ ಇದಕ್ಕೂ ಉತ್ತರ ಕೊಡಲಿಲ್ಲ. ಸರಿ ಅದೇ ಯೋಚನೆಯಲ್ಲಿ ನೆಟ್ಟಗೆ ಮಲಗಿದ. ನರೇಶ್ ತನ್ನ ಕಡೆ ನೋಡಬಹುದು, ತನ್ನ ಜೊತೆ ಮಾತಾಡಬಹುದು ಅಂತ ಕಾದಳು. ಮಾತನಾಡುವುದಿರಲಿ, ತನ್ನ ಜಾಗದಿಂದ ಸ್ವಲ್ಪವೂ ಕದಲದೆ ಇರುವುದನ್ನು ನೋಡಿ ಸುಮ್ಮನಿರುವುದು ವಾಸಿ ಎಂದುಕೊಂಡಳು. ಅಂಗೈ ಮೇಲಿದ್ದ ತಲೆಯನ್ನು ದಿಂಬಿನ ಮೇಲಿರಿಸಿ ಪಕ್ಕ ಹೊರಳಿ ಕಣ್ಣು ಮುಚ್ಚಿಕೊಂಡಳು.

"ಬಹಳ ಸ್ವಾವಲಂಬಿ ಆಗ್ತಿರೋ ಹಾಗಿದೆ?" ಇನ್ನೇನು ನಿದ್ದೆ ಹತ್ತಬೇಕು. ಅಷ್ಟರಲ್ಲಿ ನರೇಶನ ಧ್ವನಿಮಾರ್ದನಿಸಿತು.

ಒಂದು ಕ್ಷಣ ಅವಳಿಗೆ ಇದು ಕನಸಿನಲ್ಲಿ ಕೇಳಿದ್ದೋ ಇಲ್ಲ ನಿಜವಾಗಿಯೋ ಎಂಬುದು ಸ್ಪಷ್ಟವಾಗಿರಲಿಲ್ಲ....

"ನನಗೆ ಹೇಳ್ತಿದ್ದೀಯ?" ಶಾಲ್ಮಲಿ ಮತ್ತಿನಲ್ಲಿ ಮುಳುಗಿ ಹೇಳಿದಳು.

"ಹೌದು"

"ನಾನು ನಿನಗೆ ಕೆಲಸ ಮಾಡೋಕೆ ಸ್ವಾತಂತ್ರ್ಯ ಕೊಟ್ಟದ್ದರ ಅರ್ಥ ನಿನಗೆ ಮನಸಿಗೆ ಬಂದ ಹಾಗೆ ಮಾಡೂಂತಲ್ಲ" ನರೇಶನ ಗಡಸು ಧ್ವನಿ ಕೇಳಿಸಿತು.

"ನಾನು ಮನೆಗೆ ಹೋಗಿದ್ದೆ?" ಹಿಂಜರಿಕೆಯಿಂದಲೇ ಹೇಳಿದಳು.

"ಎಲ್ಲಾದರೂ ಹೋಗು.......ನಾನಿಲ್ಲದೆ ಹೇಗೆ ಹೋದೆ? ಇಷ್ಟು ಹೊತ್ತೂ ನೀನು ಮನೆಯಲ್ಲೇ ಇರಬಹುದು ಅನ್ನೋ ಕಲ್ಪನೆಯಲ್ಲಿದ್ದೆ" –

ನರೇಶನ ಕೋಪ ಹೆಚ್ಚಾಯಿತು.

"ಇದ್ದಕ್ಕಿದ್ದಂತೆ ಮನಸ್ಸಾಯಿತು. ಅದಕ್ಕೇ ಹೋದೆ. ಬೆಳಿಗ್ಗೇನೇ ಎಲ್ಲಾ ಹೇಳಿ ಸಂಜೆ ಕೆಲಸ ಮಾಡೋದು ಸಾಧ್ಯವಿಲ್ಲ. ನಿನಗೆ ಹೇಗೆ ಇದ್ದಕ್ಕಿದ್ದಂತೆ ಕೆಲಸ ಬೀಳುತ್ತೆ. ಹಾಗೆ!" ಶಾಲ್ಮಲಿ ನಿಗ್ರಹದಿಮದಲೇ ಹೇಳಿದಳು.

"ನನ್ನನ್ನು ಅನುಕರಣೆ ಮಾಡೋಕೆ ಹೋಗಬೇಡ. ನಾನು ಗಂಡಸು. ಎಲ್ಲಿಗೆ ಬೇಕದರೂ ಹೋಗಬಹುದು. ನೀನು ಹೆಂಗಸು. ಹೆಂಗಸಿನ ಹಾಗೆ ಇರುವುದನ್ನು ಕಲಿತುಕೊ. ಇಷ್ಟು ರಾತ್ರಿ ಆಗಿದೆ. ಅದೂ ಒಬ್ಬಳೇ!....."

ಸಿಟ್ಟಿನಿಂದ ಎದ್ದು ಕುಳಿತ. ಸಿಟ್ಟಿನ ಭರದಲ್ಲಿ ಮಾತು ಹೊರಡಲಿಲ್ಲ. ಶಾಲ್ಮಲಿಯ ಮನಸ್ಸಿಗೆ ತುಂಬಾ ನೋವಾಯಿತು. ಸುಮ್ಮನೆ ಅಳುತ್ತಾ ನರೇಶನನ್ನು ದಿಟ್ಟಿಸುತ್ತಾ ಕುಳಿತಳು. ನರೇಶ್ ಹೇಳುತ್ತಲೇ ಹೋದ. ಶಾಲ್ಮಲಿ ಮೌನವಾಗಿ ಕೇಳುತ್ತಲೇ ಇದ್ದಳು.

"ನಾಳೆ ನನ್ನ ರಾಜೀನಾಮೆ ಪತ್ರ ತೆಗೆದುಕೊಂಡು ಹೋಗು. ನಿನ್ನಿಂದ ನನಗೆ ಸ್ವಾತಂತ್ರ್ಯದ ಭಿಕ್ಷೆ ಬೇಕಾಗಿಲ್ಲ. ನೀನು ಕೊಟ್ಟ ಬಿಡುಗಡೆಯ ಬಂದೀವಾಸ ನನಗೆ ಸಾಕಾಗಿದೆ." ಶಾಲ್ಮಲಿ ತಿರುಗಿ ಬಿದ್ದಳು. ಧಾರಾಕಾರವಾಗಿ ಕಂಬನಿ ಅವಳ ಕೆನ್ನೆಗಳ ಮೇಲಿಂದ ಜಾರಿತು.

"ಈ ನಾಟಕ ಸಾಕು ಮಾಡು."

"ನನಗೆ ನನ್ನ ಅಧಿಕಾರ ಸಿಗುವವರೆಗೆ ಈ ನಾಟಕ ನಡೆಯುತ್ತಲೇ ಇರುತ್ತೆ." ರೋಷ ತುಂಬಿದ ದನಿಯಲ್ಲಿ ಹೇಳಿದಳು.

"ನಿನಗೆ ಅಧಿಕಾರ ಕೊಡುವವನು ನಾನು, ತಿಳೀತಾ!" ನರೇಶ್ ಮತ್ತಷ್ಟು ಉರಿದೆದ್ದು ಹೇಳಿದ.

"ನನಗೆ ಅಧಿಕಾರಕೊಡುವವನು ನೀನೂಂತ, ನೀನು ಬೇಕಾದರೆ ತಿಳ್ಕೊ. ಆದರೆ ಯಾರೂ ಯಾರಿಗೂ ಅಷ್ಟು ಸುಲಭವಾಗಿ ಅಧಿಕಾರ' ಕೊಡೋದಿಲ್ಲ. ಅಧಿಕಾರ ಬೇಕು ಅಂದುಕೊಂಡವರು ಹೋರಾಟ ನಡೆಸಿ ತೆಗೆದುಕೊಳ್ತಾರೆ." ಶಾಲ್ಮಲಿ ಸಿಡಿಮಿಡಿಗೊಂಡು ಹೇಳಿದಳು.

ದುಃಖ ಮತ್ತು ಅವಮಾನದ ಬೆಂಕಿಯಲ್ಲಿ ಅರಳಿನಂತೆ ಪಟಪಟ ಸಿಡಿದು ದಿಟ್ಟಿಸತೊಡಗಿದಳು. ಶಾಲ್ಮಲಿ ಮೊಳಕಾಲುಗಳ ಮಧ್ಯೆ ತಲೆ ಇಟ್ಟುಕೊಂಡು ಬಿಕ್ಕುತ್ತಿದ್ದಳು. ಸ್ವಲ್ಪ ಹೊತ್ತಾದ ನಂತರ ನರೇಶನ ಉಮ್ಮಳ ಕಡಿಮೆಯಾಯಿತು. ಮನಸ್ಸಿನಲ್ಲಿಯೇ ತನಗೆ ಧಿಕ್ಕಾರ ಹೇಳಿದ. ಇದ್ದಕ್ಕಿದ್ದಂತೆ ಅವನಿಗೆ ಏನಾಯಿತು? ಶಾಲ್ಮಲಿ ಹೋಗಿದ್ದು ಅವಳ ಅಮ್ಮನ ಮನೆಗೆ ತಾನೇ? ಅಂಥಾದ್ದರಲ್ಲಿ ಗಂಡನಾದವನು ಹೆಂಡತಿ ಜೊತೆ ಹೀಗೆ ವರ್ತಿಸಬಹುದೇ?

ಪಾಪ! ನರೇಶ್ ತಾನೇ ಏನ್ಮಾಡ್ತಾನೆ? ಪ್ರತಿದಿನ ಅವನಿಗೆ, ಶಾಲ್ಮಲಿ ತನಗಿಂತ ಎತ್ತರಕ್ಕೆ ಬೆಳೀತಾ ಇದ್ದಾಳೆ, ಮತ್ತು ತನ್ನನ್ನು ಪೂರ್ತಿಯಾಗಿ ಕವಿದುಬಿಡುತ್ತಿದ್ದಾಳೆ ಅನ್ನುವ ಭಯ ಕಾಡುತ್ತಿತ್ತು.

ಶಾಲ್ಮಲಿಯನ್ನು ಕಡಿವಾಣ ಹಾಕಿ ನಿಯಂತ್ರಿಸದಿದ್ದರೆ, ಇವಳು ತನ್ನ ಜಾಗದಲ್ಲಿ ಇರುವುದಿಲ್ಲ.

'ನಾನು ನಿನ್ನ ನೆರಳು, ನಿನ್ನ ಪ್ರತಿಧ್ವನಿ, ನಿನ್ನಷ್ಟೇ ವಿಸ್ತಾರ ಅಲ್ಲ', ಎಂದುಕೊಳ್ಳುತ್ತ ಇಂತಹ ಭ್ರಮೆಯಲ್ಲಿ ನಾನು ಬದುಕುವುದಿಲ್ಲ ನರೇಶ್. ಇದು ನನ್ನ ದೌರ್ಬಲ್ಯವೋ, ನನ್ನ ಹಿರಿಮೆಯೋ ಏನು ಬೇಕಾದರೂ ಹೇಳು. ನನ್ನ ಒಳ್ಳೇದು ಕೆಟ್ಟದ್ದು ಯಾವುದೂಂತ ನನಗೆ ಗೊತ್ತಿದೆ. ನಾನು ಬರೇ ಹಾಳೆ ಅಲ್ಲ. ಅದರಲ್ಲಿ ನಿನ್ ಸಹಿ ಹಾಕಲು ಸಾಧ್ಯವಿಲ್ಲ ಅನ್ನೋದು ಗೊತ್ತಿದೆ. ಬಹಳ ಎಚ್ಚರಿಕೆಯಿಂದ ಬಾಲ್ಯದಲ್ಲಿ ಅಪ್ಪ ಬಿಡಿಸಿದ ಒಂದು ಅರಳಿದ ಹೂವಿನ ಚಿತ್ರ ನಾನು. ಪ್ರತಿಯೊಂದು ರೇಖೆಯಲ್ಲಿಯೂ ಅವರ ಆತ್ಮವಿದೆ. ಇಪ್ಪತ್ತು ವರ್ಷಗಳಿಂದ ಅಪ್ಪ ತಿದ್ದಿ ತಿದ್ದಿ ಒಂದು ಸುಂದರ ರೂಪವನ್ನು ಆಕಾರವನ್ನು ನೀಡಿದ್ದಾರೆ. ಬಿಟ್ಟ ಕಣ್ಣುಗಳಿಂದ ಅಪ್ಪನ ಕಣ್ಣುಗಳಿಂದ ತೊಟ್ಟಿಡುತ್ತಿದ್ದ ಹನಿ ಹನಿ ಕಣ್ಣೀರನ್ನು ನನ್ನ ಮೇಲೆ ಬಿದ್ದಂತೆ ಅನುಭವಿಸಿದ್ದೇನೆ. ನೀನು ಹೇಳುವುದರಿಂದ ಇಪ್ಪತ್ತು ವರ್ಷಗಳ ಆ ಬದುಕನ್ನು ಮರೆತು ಬಿಡಲೇನು? ನೀನು ನೀಡುವ ಯಾಂತ್ರಿಕ ಡಿಜೈನನ್ನು ನನ್ನ ವ್ಯಕ್ತಿತ್ವದೊಂದಿಗೆ ಹೊಂದಿಸಿಕೊಳ್ಳಲೇನು? ಇದರಲ್ಲಿ ನಿನ್ನ ಶ್ರಮವಾಗಲೀ, ನಿನ್ನ ಆತ್ಮವಾಗಲಿ ಆಳವಾಗಲೀ, ವಿಸ್ತಾರವಾಗಲಿ ಇವೆಯೇನು? ಅಲ್ಲದೆ ಇಲ್ಲಿವರೆಗೆ ನಾವು ಜೊತೆಯಾಗಿ ಬಾಳಿದ ಕೆಲವೇ ಕೆಲವು ವರ್ಷಗಳಲ್ಲಿ ನನ್ನನ್ನು ಒಂದೇ ಸಲಕ್ಕೆ ಪರಿವರ್ತಿಸಬೇಕೆನ್ನುವೆಯಾ?....ಇದು ಸಾಧ್ಯವೇ?

ಒಂದು ವೇಳೆ ನೀನು ನಿರೀಕ್ಷಿಸುವ ಹಾಗೆ ಕಣ್ಣು ಮುಚ್ಚಿಕೊಂಡು ಎಲ್ಲವನ್ನು ನೀನು ಹೇಳಿದ ಹಾಗೆ ಒಪ್ಪಿಕೊಂಡು ನಿನ್ನ ಸಂತೋಷಕ್ಕಾಗಿ ನನ್ನ ಗತ ಜೀವನನ್ನು ಮರೆತು ಬಿಟ್ಟೆ ಅಂತ ಇಟ್ಟುಕೋ. ಒಂದಾನೊಂದು ದಿನ ನಮ್ಮ ಮಗ ನನ್ನ ಇಷ್ಟದ ಪ್ರಕಾರ ನನ್ನನ್ನು ನಿರೀಕ್ಷಿಸುತ್ತಾನೆ. ಅದರಂತೆ ನನ್ನ ವ್ಯಕ್ತಿತ್ವವನ್ನು ರೂಪಿಸಲು ಯತ್ನಿಸುತ್ತಾನೆ. ಹೇಳು, ಆಗ ನಾವು ಹೆಂಗಸರು ಏನ್ಮಾಡಬೇಕು? ನಾವೇನು ಹಸಿಮಣ್ಣೆ? ಎಷ್ಟು ಸಲ ನಮ್ಮ ಆಕಾರ ಕೆಡಿಸಿ ಹೊಸ ಹೊಸ ರೂಪ ಆಕಾರ ಕೊಡಲು ಪ್ರಯತ್ನಿಸುತ್ತೀರಿ?.... ಅಂದರೆ ನಮಗೆ ಯಾವ ಅಸ್ತಿತ್ವವೂ ಇಲ್ಲ, ಅಧಿಕಾರವೂ ಇಲ್ಲ? ಮದುವೆಯ ಅರ್ಥ?..... ಹಿಂದಿನ ಬದುಕನ್ನು ಮರೆತು ಯಾರೋ ಒಬ್ಬರ ಇಷ್ಟಕ್ಕೆ ವಿಚಾರಗಳಿಗೆ ಗುಲಾಮರಾಗುವುದೇ?

ಶಾಲ್ಮಲಿಯ ಮನಸ್ಸು ಇನ್ನೂ ಪೂರ್ವಸ್ಥಿತಿಗೆ ಬಂದಿರಲಿಲ್ಲ. ಅವಳಿಗೆ ಭ್ರಮನಿರಸನವಾಗಿತ್ತು. ನರೇಶನನ್ನು ನೆನ್ನೆ ಅವತಾರದಲ್ಲಿ ನೋಡಿದ ಮೇಲೆ ಅವಳಿಗಿದ್ದ ನಂಬಿಕೆ ಕುಸಿದು ಬಿತ್ತು.

ನರೇಶ್ ಈ ರೀತಿ ವರ್ತಿಸಿದ್ದು ಮೊದಲ ಸಲ. ಅವನ ಕ್ರೌರ್ಯ ಅಸಹ್ಯವೆನಿಸಿತು.

"ಆಫೀಸಿಗೆ ಹೋಗಿಲ್ವೇನು?"

"ಇಲ್ಲ"

"ಯಾಕೆ?"

"ಕಾರಣ ನಿನಗೇ ಗೊತ್ತು."

"ರಾತ್ರಿ ನಡೆದದ್ದನ್ನು ಇನ್ನೂ ತಲೇಲಿ ಇಟ್ಕೊಂಡಿದ್ದೀಯ?"

"ಹಾಗಾದರೆ ಅದನ್ನು ಏನು ಮಾಡಲಿ?"

"ಮರೆತು ಬಿಡು."

"ಅಂದರೆ,.....ನನ್ನನ್ನು ಬಿಡುಗಡೆ ಮಾಡಿದ್ದೀಯ?"

"ಆಫಿಸ್‌ಗೆ ಹೋಗೋಕೆ ನಿನ್ನನ್ನು ಯಾವತ್ತೂ ನಿರ್ಬಂಧಿಸಿಲ್ಲ."

"ಆಫೀಸ್‌ಗೆ ಹೋಗೋಕೆ ಸ್ವತಂತ್ರಳು.......ಮನೆಗೆ ಬಂದ ಮೇಲೆ....."

"ನೋಡು ಶಾಲು ಸುಮ್ಮನೆ ಸಣ್ಣದನ್ನು ದೊಡ್ಡದು ಮಾಡಬೇಡ."

"ಆಫೀಸಿಗೆ ಹೋಗ್ತೀನಿ. ಹೋದ ಮೇಲೆ ಬೇರೆ ಏನೋ ಕೆಲಸ ಬೀಳುತ್ತೆ.....ಅದಕ್ಕಿಂತ ಮನೇಲಿದ್ದು ಅಚ್ಚುಕಟ್ಟಾಗಿ ಮನೆ ನೋಡಿಕೊಳ್ತೀನಿ. ಎಲ್ಲ ಹೆಂಗಸರ ಹಾಗೆ ಮನೇಲಿ ಕೂತ್ಕೋಳ್ತೀನಿ. ಮತ್ತು....."

"ನಾನು ಮೊದಲೇ ನಿನಗೆ ಹೀಗೆ ಮಾಡು ಅಂತ ಹೇಳಿದ್ದೆ. ಆಗ ನೀನು ಒಪ್ಪಲಿಲ್ಲ. ಮತ್ತೆ ಈಗ...."

"ಈಗ ನೀನು ಕೊಟ್ಟ ದಾನದಲ್ಲಿನ ಸ್ವಾತಂತ್ರ್ಯವನ್ನು ಬೈಯುತ್ತಿದ್ದೀ."

"ಸ್ವಾತಂತ್ರ್ಯ ಅನ್ನೋದಕ್ಕೆ ಒಂದು ಮಿತಿ ಇದೆ."

"ಆ ಮಿತಿ ಎಲ್ಲೀವರೆಗೆ ಅಂತ?"

"ನನ್ನ ತಲೆ ತಿನ್ನಬೇಡ."

"ಹೌದು, ನಿನ್ನ ಆಲೋಚನೆಗಳು ಇಲ್ಲಿಗೇ ಮುಗಿಯುತ್ತೆ....."

"ಸುಮ್ಮನಿರ್ತೀಯ?"

"ಇದೋ ಈಗಲೇ"

ಕೋಣೆಯಲ್ಲಿ ಮೌನ ಕವಿಯಿತು. ಶಾಲ್ಮಲಿ ಮುಖ ಬಿಗಿದುಕೊಂಡೆ ಅಡುಗೆ ಮನೆಶುಭ್ರ ಮಾಡ ತೊಡಗಿದಳು. ನರೇಶ್ ಆಫೀಸಿಗೆ ಹೋಗಲು ಅಣಿಯಾದ. ಶಾಲ್ಮಲಿ ಆಳವಾದ ನೋವಿನಲ್ಲಿ ಮುಳುಗಿದಳು.

ನಿನ್ನನ್ನು ಅರ್ಥಮಾಡಿಕೊಳ್ಳಬೇಕೆನ್ನುವ ಜಿಜ್ಞಾಸೆಯಿಂದ ನನ್ನನ್ನು ನಿನ್ನ ಬಳಿ ತೆರೆದುಕೊಂಡೆ. ನನ್ನ ತಪ್ಪುಗಳನ್ನು ನಿನ್ನ ಮುಂದೆ ಇಟ್ಟ ಉದ್ದೇಶ, ನಮ್ಮ ಜೀವನದಲ್ಲಿ ಯಾವುದೇ ಅಪಘಾತಗಳು ಸಂಭವಿಸದಿರಲಿ ಎಂದು, ಒಬ್ಬರನ್ನು ಒಬ್ಬರು ಅರ್ಥಮಾಡಿಕೊಂಡು ಪರಸ್ಪರ ದೌರ್ಬಲ್ಯಗಳನ್ನು ಮರೆತು ಸಹಮತರಾಗಿ ಬಾಳಬೇಕು, ಎಂದು. ಆದರೆ ನೀನು ಮಾಡಿದ ಗಾಯ ಎಲ್ಲಿ ಆಗಬಾರದೂಂತ ಬಯಸಿದ್ದೆನೋ ಅಲ್ಲಿಯೇ ಮಾಡಿದೆ. ನಾನು ನಿನಗೆ ಹೇಳಿದ್ದೆ. ನಾನೊಂದು ಕಂದರ ನೀನು ಅಲ್ಲಿ ನಿಂತು ಹೇಗೆ ಧ್ವನಿ ಹೊರಡಿಸಿದರೆ, ಹಾಗೆಯೇ ಪ್ರತಿ ಧ್ವನಿಸುತ್ತೇನೆ ಎಂದು."

"ಸರಿ ನಾನು ಹೊರಟೆ" .

"ಸಂತೋಷ"

"ಸಂತೋಷ"

"ಹೌದು. ಇದು ಸುಳ್ಳಲ್ಲ"

"ಉಫ್. ನನ್ನನ್ನು ಹುಚ್ಚನಾಗಿ ಮಾಡಿ ಬಿಡ್ತೀಯ"

"ಹಾಗೆ ಮಾಡಿದವನು ನೀನು."

"ಆಫೀಸಿಗೆ ಹೋಗು! ಎಲ್ಲ ಸರಿ ಹೋಗುತ್ತೆ."

"ಯೋಚನೆ ಮಾಡ್ತೀನಿ. ಒಂದು ವಾರ ರಜ ತಗೊಂಡು ನೋಡ್ತೀನಿ"

"ನೀನು ನನಗೆ ಶಿಕ್ಷೆ ಕೊಡ್ತಿದ್ದೀಯ?"

"ನಾನು?"

"ಇಲ್ಲದಿದ್ದರೆ ನಾನೇ?"

"ಪ್ಲೀಸ್"

"ಏನೋ ಒಂದು ಮಾತು ಅಡಿ ಶಾಪಗ್ರಸ್ತನಾಗಿದ್ದೇನೆ"

ನರೇಶ್‌ನ ಮಾತಿನಲ್ಲಿ ನೋವು ತುಂಬಿತ್ತು. ಶಾಲ್ಮಲಿಗೆ ಉತ್ತರಿಸಲಾಗಲಿಲ್ಲ ನರೇಶ್ ಅಲಮಾರಿನ ಮೇಲೆ ಇಟ್ಟಿದ್ದ ಫೈಲನ್ನು ತೆಗೆದುಕೊಂಡು ಹಾಳೆಗಳನ್ನು ತಿರುವಿ ಹಾಕಿದ. ನಂತರ ಶಾಲ್ಮಲಿಯ ಬಳಿಗೆ ಬಂದು ಹೇಳಿದ. ಹೀಗೇ ಮಾಡಬೇಕೂಂತ ಇದ್ದರೆ, ಇದರ ಅಗತ್ಯ ಏನಿತ್ತು?"

"ನೀನೇ ಇಷ್ಟ ಪಟ್ಟದ್ದು"

"ನಿನ್ನ ಇಷ್ಟದ ಎಲ್ಲೆ ಮೀರಿದ್ದು."

"ಹಾಗಾದರೆ, ಬಿಟ್ಟು ಬಿಡು ಇದನ್ನು."

"ನಾನು ಬೇಡ ಅನ್ನೊಲ್ಲ"

"ಹಾಗಾದರೆ ತಗೊಂಡು ಬಿಡು"

"ಇದನ್ನು ತಗೊಳ್ಳೋದು ನೀನು ಆಫೀಸಿಗೆ ಹೋಗೋದರ ಮೇಲೆ ನಿಂತಿದೆ."

"ನಾನು ಇದಕ್ಕೋಸ್ಕರ ಕೆಲಸ ಮಾಡೋದಾ? ನಾನೇನು ನಿನ್ನ ಬಂದಿ ಸೇವಕನೇನು?"

"ಇಲ್ಲ ಬಂದಿ ಆಫೀಸರ್"

"ಇದೇನು ತಮಾಷೆ!"

"ಇದು ಸತ್ಯ". ಶಾಲ್ಮಲಿ ನರೇಶನನ್ನು ದಿಟ್ಟಿಸುತ್ತಿದ್ದಳು. ನರೇಶ್‌ನ ಮುಖದ ಮೇಲಿನ ಮುಗುಳ್ನಗೆಯ ಅರ್ಥವನ್ನು ಸರಿಯಾಗಿ ಗ್ರಹಿಸಲಾಗಲಿಲ್ಲ. ಅದರಲ್ಲಿ ಆಜ್ಞೆಯ ಅಥವಾ ಶಾಪಿಸುವ ಧ್ವನಿ ಇತ್ತೋ, ಅಥವಾ ಅಧಿಕಾರವನ್ನು ಪ್ರಶ್ನಿಸುವಂತಿತ್ತೋ, ಇಲ್ಲಿ ಸಂಬಂಧವನ್ನು ಮೊದಲಿನಂತೆ ಸ್ಥಾಪಿಸುವ ಪ್ರಯತ್ನವಿತ್ತೋ, ತಿಳಿಯಲಾಗಲಿಲ್ಲ.

"ಯೋಚ್ನೆ ಮಾಡ್ತಿದ್ದೀಯ?' ಇಲ್ಲ"

"ಏನಾದರೂ ಯೋಚ್ನೆ ಮಾಡ್ತಿರಬೇಕು?"

"ಒಂದೊಂದು ಸಲ ನನಗೆ ನೀನು ಬಹಳ ಹೊಸಬನಂತೆ ಕಾಣಿಸ್ತೀಯ?"

"ಒಳ್ಳೇದೇ"

"ಯಾಕೆ?"

"ಹೊಸದು ಯಾವಾಗಲೂ ಹಳೇದಾಗಿರೊಲ್ಲ"

"ಆದರೆ ಹೊಸದು, ನನ್ನದಲ್ಲ ಬೇರೆಯವರದು, ಅನ್ನುವ ಭಾವನೆ ಮೂಡಿಸುತ್ತಲ್ಲ, ಅದಕ್ಕೆ?"

"ಹಾಗೇನೂ ಇಲ್ಲ. ಅದೆಲ್ಲ ನಿನ್ನ ಭ್ರಮೆ.

"ನನ್ನನ್ನು ಅರ್ಥಮಾಡಿಕೊಳ್ಳಲು ಯಾಕೆ ನೀನು ಒಪ್ಪೋದಿಲ್ಲ ನರೇಶ್?"

"ಇದೆಲ್ಲ ಆಮೇಲೆ ಮಾತಾಡೋಣ. ಮೊದಲು ನೀನು ರೆಡಿಯಾಗು"

"ನಿನ್ನ ಹತ್ತಿರ ಸ್ವಲ್ಪ ಮಾತಾಡಬೇಕು"

"ಹೇಳೋಕೆ, ಕೇಳೋಕೆ ಸಮಯವಿಲ್ಲ. ಈಗಲೇ ಹತ್ತು ಗಂಟೆಯಾಯಿತು.

"ಕೇಳೂಂದ್ರೆ!"

"ನೋಡು ರೆಡಿಯಾಗಿ ಕೆಳಗೆ ಬಾ. ನಾನು ಅಷ್ಟರಲ್ಲಿ ಸ್ಕೂಟರ್ ಹೊರಗೆ ತೆಗೀತೀನಿ."

ಶಾಲ್ಮಲಿಯಲ್ಲಿನ ಆವೇಗ, ಮಾನಸಿಕ ನೋವು ಯಾವುದಕ್ಕೂ ನರೇಶ್‌ನಿಂದ ಸರಿಯಾದ ಸಮಾಧಾನ ದೊರೆಯದೆ ತಣ್ಣಗಾಯಿತು. ಅವನು ಮೊದಲಿನಂತಾದ. ಆದರೆ ಶಾಲ್ಮಲಿ! ಸಿಟ್ಟಿನಿಂದಲೇ ಬಟ್ಟೆ ಬದಲಿಸಿ ಕೆಳಗೆ ಇಳಿದಳು. ಶಾಲ್ಮಲಿಯ ತಲೆಯಲ್ಲಿ ಏನೋ ಸುಳಿಯಿತು.

"ಕಾರಿನ ವಿಚಾರಕ್ಕೇನಾದರೂ ಇವನು.....?"

"ಛೆ! ಛೆ! ಇರಲಾದುರ. ಇದೇನು ಯೋಚನೆ ಮಾಡ್ತಿದ್ದೀನಿ?" ಶಾಲ್ಮಲಿ ಕಂಪಿಸಿ, ಮೆಟ್ಟಿಲು ಇಳಿಯತೊಡಗಿದಳು. ಯಾವುದೇ ನಿರ್ಧಾರವನ್ನು ತಲುಪುವವರೆಗೆ ಶಾಲ್ಮಲಿಯ ಮನಸ್ಸಿಗೆ ನೆಮ್ಮದಿ ಇರುತ್ತಿರಲಿಲ್ಲ. ಒಳಗಿಂದೊಳಗೇ ಲಾವಾರಸ ಕುದಿಯುತ್ತಿತ್ತು. ಒಂದೊಂದು ಸಲ ನರೇಶ್ ಬಹಳ ಮುಗ್ಧ, ಏನೂ ತಿಳಿದಿಲ್ಲ. ಯೋಚ್ನೆ ಮಾಡೋ ಸಾಮರ್ಥ್ಯವೂ ಹೆಚ್ಚಾಗಿಲ್ಲ. ಅವನಿಂದ ಸೂಕ್ಷ್ಮತೆಯನ್ನು ಅಪೇಕ್ಷಿಸುವುದು ವ್ಯರ್ಥ ಎಂದು ಅನಿಸಿದರೆ ಮತ್ತೊಂದು ಸಲ ಕ್ಷಣ ಮಾತ್ರದಲ್ಲಿ

ಉತ್ತೇಜಿತಳಾಗಿ, ಪ್ರತಿದಿನ ಈ ರೀತಿ ಒಪ್ಪಂದದ ಕತ್ತಿಯನ್ನು ನನ್ನ ಮೇಲೆ ಬೀಳೋಕೆ ಬಿಡೋದಿಲ್ಲ ಎಂದುಕೊಳ್ಳುತ್ತಿದ್ದಳು. ನರೇಶನೂ ತನ್ನ ಮನಸ್ಸಿನ ಬಗ್ಗೆ ಮನೆ ಬಗ್ಗೆ ಕುಟುಂಬದ ಬಗ್ಗೆ ಲಕ್ಷ್ಯ ಕೊಡಬೇಕಾಗಿದೆ, ಅನಿಸುತ್ತಿತ್ತು.

ಕೆಲವು ತಿಂಗಳ ನಂತರ ಕಾರು ಕೊಂಡಾಯಿತು. ಮನೆಯೊಂದು ಇನ್ನೂ ಸಾಧ್ಯವಾಗಿರಲಿಲ್ಲ. ಕಾರು ಬಂದದ್ದೇ, ನರೇಶನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕಾರನ್ನು ತೊಳೆಯೋರು ಕ್ಲೀನ್ ಮಾಡೋದು, ಇವುಗಳಲ್ಲೇ ನರೇಶ್ ಬೆಳಗಿನ ಹೊತ್ತನ್ನು ಕಳೆದು ಬಿಡುತ್ತಿದ್ದ. ಕಾರು ಬಂದದ್ದರಿಂದ ಶಾಲ್ಮಲಿಗೆ ತನ್ನ ಬದುಕಿನಲ್ಲಿ ಯಾವುದೋ ಹೊಸ ತಿರುವು ಬಂದಂತೆನಿಸಲಿಲ್ಲ. ಒಂದು, ಸಂಜೆ ಹೊತ್ತು ತಿರುಗಾಡಿಕೊಂಡು ತಡವಾಗಿ ಬರಬಹುದಾಗಿತ್ತು. ಅವಳ ಮನಸ್ಸನ್ನು ಕವಿದಿದ್ದ ಕಹಿ ಕ್ರಮೇಣ ಕಡಿಮೆಯಾಯಿತು. ಆದರೆ ಆಗೊಮ್ಮೆ ಈಗೊಮ್ಮೆ ಅವ್ಯಕ್ತ ನೋವೊಂದು ಕಾಣಿಸಿಕೊಳ್ಳುತ್ತಿತ್ತು.

ಒಂದು ಬಗೆಯ ಬೇಸರ, ಅಸಮಾಧಾನಗಳು ಅವಳ ಮನಸ್ಸನ್ನು ಕಾಡತೊಡಗಿದವು. ತಾನು ಬದುಕುತ್ತಿರುವುದು ಸುಳ್ಳಿನ, ಭ್ರಮೆಯ ನೆರಳಿನಲ್ಲಿ. ಸತ್ಯ ಅನ್ನುವುದು ಎಲ್ಲಿಯೋ ಅಡಗಿದೆ. ನಿರ್ಬಂಧ ರಸ್ತೆಯಲ್ಲಿ ಸಾಗುತ್ತಿರುವ ತನ್ನ ಜೀವನ ಚರಕದಿಂದ ಹೊರಡುತ್ತಿರುವ ಎಳೆಗಳು ತನ್ನ ಆತ್ಮದ್ದಲ್ಲ ಎಂದು ಎಷ್ಟೋ ಸಲ ಅಂದುಕೊಳ್ಳುವುದುಂಟು, "ಅವನಾಡುವ ಮಾತುಗಳ ಹಿಂದೆ ಅಡಗಿರುವ ಅರ್ಥಗಳನ್ನು ಅನ್ವೇಷಿಸುವುದನ್ನು ನಿಲ್ಲಿಸಬೇಕು. ಆದರೆ ಅವಳ ಮನಸ್ಸು ಅವಳ ಆಲೋಚನೆಗಿಂತ ಭಿನ್ನವಾಗಿ ನಡೆದುಕೊಳ್ಳುವುದೇಕೆ? ಅವಳ ಅಂತರ್ದೃಷ್ಟಿಯೇ ಅವಳ ಬದುಕಿಗೊಂದು ಶಾಪವಾಗಿ ಪರಿಣಮಿಸುತ್ತಿರುವುದೇಕೆ? ಬದುಕಿನ ಸಣ್ಣಪುಟ್ಟ ಸಂತೋಷಗಳೂ ಅವಳಿಂದ ದೂರವಾಗುತ್ತಿರುವುದೇಕೆ? ಶಬ್ದಗಳ ಮಾತುಗಳ ಭ್ರಮೆ ಅವಳಿಗೆ ಸುಖವನ್ನು ನೀಡುವುದಿಲ್ಲ. ಅವಳ ದೃಷ್ಟಿಗೆ ತೋಚುವುದನ್ನು ಅಥವಾ ಶಬ್ದ ಆಚರಣೆಗಳು ಯತಾರ್ಥತೆಗಿಂತ ಬೇರೆಯಾಗಿ ಕಾಣಿಸಿಕೊಂಡು ಅಪನಂಬಿಕೆಗೆ ಎಡೆಮಾಡುತ್ತಿಲ್ಲವೆ?

"ಶಾಲೂ"

"ಏನು?"

"ವಿದೇಶಕ್ಕೆ ಹೋಗಬೇಡವೇ?"

"ಹೋಗಬೇಕಾಗಿದೆ. ಆದರೆ ಯಾಕೆ?"

"ಹಣ ಸಂಪಾದಿಸಲು."

"ನಾನು ಅಂದ್ಕೊಂಡೆ. ಸುತ್ತಾಡಿ ಬರೋಕೆ ಅಂತಾ."

"ಸುತ್ತಾಡೋದನ್ನ ಸಂಪಾದನೆ ಜೊತೆಗೇ ಮಾಡಬಹುದು"

"ಆಯ್ತು"

"ಆಯ್ತು ಏನು! ಏಜಂಟನೊಬ್ಬನ ಹತ್ತಿರ ಮಾತಾಡಿದ್ದೇನೆ"

"ಎಲ್ಲಿಗೇಂತ?"

"ನಿನಗೆ ತಮಾಷೆಯಾಗಿದೆ."

"ಇಲ್ಲ ಸಂತೋಷ ಆಗಿದೆ"

"ಕುವೈತ್ ಇಲ್ಲ ದುಬಾಯ್."

"ಏನು ಕೆಲಸ ಸಿಗುತ್ತೆ?"

"ಸದ್ಯಕ್ಕೆ ನಮಗೆ ಯೋಗ್ಯವಾದ ಕೆಲಸ ಇಲ್ಲ."

"ಮತ್ತೆ?"

"ನಿನ್ನ ಅಭಿಪ್ರಾಯ ತಿಳಿದುಕೊಳ್ಳೋಣಾಂತ."

"ನಿನಗೆ ಯಾಕೆ ಇಂತಹ ಆಲೋಚನೆಗಳು ಬರುತ್ತೆ, ನರೇಶ್?"

"ಚೆನ್ನಾಗಿ ಹಣ ಸಂಪಾದಿಸಬೇಕೂಂತ!"

"ಅಷ್ಟೊಂದು ಹಣಾನ ಏನು ಮಾಡ್ತೀಯ?"

"ಸುಖವಾಗಿ ಜೀವಿಸ್ತೀನಿ. ಮನಸ್ಸಿಗೆ ಬೇಕಾದ್ದನ್ನು ಮಾಡ್ತೀನಿ."

"ನಿನ್ನ ಮನಸ್ಸಿನಲ್ಲಿ ಮುಖ್ಯವಾಗಿ ಏನಿದೆ?"

"ಶಾಲ್ಮಲಿ ಪುಸ್ತಕದ ಪುಟಗಳನ್ನು ತಿರುವಿ ಹಾಕತೊಡಗಿದಳು. ಅವಳ ಧ್ಯಾನ ಅಕ್ಷರಗಳ ಮೇಲಿಲ್ಲದೆ ನರೇಶನ ಕಡೆಗಿತ್ತು. ನಿರಾಳವಾಗಿ ಹಾಸಿಗೆ ಮೇಲೆ ಕಾಲು ಚಾಚಿಕೊಂಡು ಮಲಗಿ ಪತ್ರಿಕೆಗಳ ಪುಟಗಳನ್ನು ತಿರುವುತ್ತಾ ಏನನ್ನೋ ಆಲೋಚಿಸುತ್ತಾ, ಸಣ್ಣಗೆ ಸಿಳ್ಳು ಹೊಡೆಯುತ್ತಿದ್ದ.

ನರೇಶ್ ಯಾಕೆ ಒಂದು ಕಡೆ ಸ್ಥಿರವಾಗಿ ನಿಲ್ಲೊಲ್ಲ. ಯಾವಾಗಲೂ ತನ್ನದಲ್ಲದರ ಕಡೆಗೂ ನುಗ್ಗುವ ಪ್ರಯಾಸದಲ್ಲಿ ಇರುತ್ತಾನೆ. ತನ್ನ ವಿಚಾರ, ಪರಿಶ್ರಮಗಳನ್ನು ತನ್ನ ಕ್ಷೇತ್ರದ ಕೆಲಸದಲ್ಲಿ ಯಾಕೆ ತೊಡಗಿಸುವುದಿಲ್ಲ. ಆಫೀಸಿನ ಕೆಲಸಗಳಿಂದ ವಿಮುಖವಾಗಿ ಬೇರೇನೋ ಕೆಲಸಗಳಲ್ಲಿ ಸಿಲುಕಿರುತ್ತಾನೆ. ಯಾವಾಗಲೂ ಆಕಾಶದಲ್ಲೇ ಇರುತ್ತಾನೆ. ಅವನನ್ನು ಒಂದು ಕಡೆ ಇದ್ದಾನೆ ಅಂತ ತಿಳಿದು ಹುಡುಕುವಷ್ಟರಲ್ಲಿ ಅಲ್ಲಿಂದ ಮತ್ತೆಲ್ಲಿಗೋ ಹೋಗಿ ನಿಂತಿರುವುದು ಕಾಣಿಸುತ್ತೆ. ಇವನ ವ್ಯಕ್ತಿತ್ವದಲ್ಲಿ ಒಂದು ಸ್ಥಿರವಾದ ನೆಲೆಯೇ ಇಲ್ಲ? ಅಲೆದಾಟ..... ಸದಾ ಅಲೆದಾಟ..... ಅಲೆದಾಟದಿಂದ

ಪ್ರಪಂಚವನ್ನೇನೋ ಸುತ್ತಾಡಿ ಬರ್ತಾನೆ. ಆದರೆ ತನ್ನ ಗುರಿಯನ್ನೇ ಕಳೆದುಕೊಳ್ತಾನೆ. ನರೇಶನ ಗುರಿ ಇನ್ನೇನೋ ಇರಬೇಕು.

ಇದು ಕೇವಲ ಅವನ ಮಧ್ಯಂತರ ನಿಲ್ದಾಣವಿರಬೇಕು. ನಾನು ಇದನ್ನೇ ತಪ್ಪಾಗಿ ಅವನ ಕಟ್ಟ ಕಡೆಯ, ಸ್ಥಿರ ಲಕ್ಷ್ಯವೆಂದು ಗ್ರಹಿಸಿರಬೇಕು.

"ಯಾವಾಗಲೂ ಅದೇನನ್ನು ಯೋಚನೆ ಮಾಡ್ತಿರ್ತಿ?"

"ಏನೂ ಇಲ್ಲ."

"ಅದು ಹೇಗೆ? ಯೋಚ್ನೆ ಮಾಡ್ತಿರ್ತೀಯಾ ಯೋಚನೆ ಇಲ್ಲಾಂತೀಯ!"

"ಸಾಕು"

"ಯಾವಾಗಲೂ ಹೀಗೆ ಗಂಭೀರವಾಗಿ ಇರೋದ್ರಿಂದ ನಿನಗೆ ಬೇಸರ ಆಗೊಲ್ವೆ?"

"ಆ ಗಂಭೀರತೇನೆ ನನ್ನ ವೇಷ ಇರಬಹುದು."

"ಹಾಗಾದರೆ ಆ ವೇಷ ಬದಲಾಯಿಸಿಕೊ!"

"ನಿನಗೆ ಇದು ಹಿಡಿಸೋದಿಲ್ವೇನು?"

"ಚೆನ್ನಾಗೇನೋ ಇರುತ್ತೆ ಆದರೆ ಯಾವಾಗ್ಲೂ ಅಲ್ಲ"

"ಸರಿ ಹಾಗಾದರೆ ಹೇಳು!"

"ಕೇಳು"

"ಒಂದು ಸಲ ಯೋಚನೆ ಮಾಡು, ನಾನು ಸ್ವಲ್ಪ ದಿನ ನಿನ್ನ ಹೆಂಡ್ತಿ ಅಲ್ಲ ಅಂತ ಅಂದ್ಕೊ, ಆಗ ನಿನಗೆ ಹೇಗನ್ನಿಸುತ್ತೆ."

"ಬೇರೆ ಹೆಂಗಸರ ಕಡೆ ನಾನು ಹೆಚ್ಚಾಗಿ ನೋಡೊಲ್ಲ."

"ಅದೆಲ್ಲ ಬೇಡ!"

"ಸತ್ಯವಾಗಲೂ ಹೇಳ್ತೀನಿ"

"ಹೋಗಲಿ ಬಿಡು, ಈಗ ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಡು."

"ಯೋಚನೆ ಮಾಡೋಕೆ ಬಿಡು."

"ಆಯ್ತು ಯೋಚನೆ ಮಾಡು."

"ನನ್ನ ಯೋಚನೆಯಲ್ಲಿ ಒಂದು ವ್ಯಕ್ತಿತ್ವ ಇದೆ. ಅದು ತನ್ನೊಳಗಿನ ಬಿರುಗಾಳಿಯನ್ನು ಬಹಳ ಮರ್ಯಾದೆಯಿಂದ ಗಂಭೀರತೆಯ ಚೌಕಟ್ಟಿನಲ್ಲಿ ಬಂಧಿಸಿದೆ."

"ಪ್ರಭಾವಿತವಾಗುತ್ತಿದೆಯೇ?"

"ನಾನೇನೂ ಹೇಳೋದಿಲ್ಲ."

"ಆದರೂ"

"ಹೆಂಗಸಿನಿಂದ ಪ್ರಭಾವಿತರಾಗೋದು ಏನಿದೆ?"

"ನಾನು ಹೆಂಗಸಿನ ವಿಷಯ ಹೇಳ್ತೀಲ್ಲ. ಒಂದು ವ್ಯಕ್ತಿತ್ವದ ಬಗ್ಗೆ ಮಾತಾಡ್ತಿದ್ದೀನಿ."

"ಆದರೆ ನಾನಿಲ್ಲಿ ಹೆಂಗಸಿನ ವ್ಯಕ್ತಿತ್ವದ ವಿಚಾರವನ್ನೇ ಹೇಳ್ತಿರೋದು."

"ಆಯ್ತು. ಮುಂದೆ ಹೇಳು."

"ನಿನಗೆ ಇಷ್ಟ ಆಯಿತಾ...... ಇಷ್ಟ ಆದರೆ, ಅದೇನೂಂತ ತಿಳ್ಕೊ."

"ತಿಳ್ಕೊಂಡೆ"

"ತಿಳ್ಕೊಂಡೆಯಲ್ಲ ದಯವಿಟ್ಟು ಇನ್ನಾದರೂ ನೀನು ನನ್ನನ್ನು ಪ್ರಶ್ನೆಗಳ ಕಟಕಟೆಯಿಂದ ಪಾರು ಮಾಡ್ತೀಯ! ಹೋಗಿ ಒಂದು ಸಿಗರೇಟು ತಗೊಂಡು ಬರ್ತೀನಿ."

ಇದಾದ ಮೇಲೆ ನರೇಶ್ ಪೇಟೆಗೆ ಹೋದ. ಶಾಲ್ಮಲಿ ಎದ್ದು ಬಟ್ಟೆ ಒಗೆಯಲು ಹೋದಳು. ಮನೆಯ ಮಾಲಿಕಳು ಕೆಲಸದವಳಿಗಾಗಿ ಹೇಳಿದ್ದರು. ಒಂದೆರಡು ಸಲ ಕಳಿಸಿಯೂ ಇದ್ದಳು. ಆದರೆ ಶಾಲ್ಮಲಿ ಕೆಲಸದವಳನ್ನು ಇಟ್ಟುಕೊಳ್ಳುವ ಇಷ್ಟವಿಲ್ಲದೆ, ಮುಂದೂಡುತ್ತಲೇ ಇದ್ದಳು. ಇರುವುದು ಸಣ್ಣಮನೆ. ಒಂದು ಕೊಠಡಿ, ಒಂದು ಅಡಿಗೆ ಮನೆ. ಮನೆಯ ಗುಟ್ಟುಗಳೆಲ್ಲ ಅಡಗಿರುವುದೇ ಅಲ್ಲಿ! ಅಂಥಾದ್ದರಲ್ಲಿ ಬಟ್ಟೆಗೆ, ಪಾತ್ರೆಗೆ ಅಂತ ಕೆಲಸದವಳು ಓಡಾಡಿದರೆ ಏನು ಚೆನ್ನಾಗಿರುತ್ತೆ. ಕೆಲಸಕ್ಕೆ ಹೋದಾಗಿನಿಂದ ಮನೆ ಮಾಲಿಕಳು ಮಾತು ಮಾತಿನಲ್ಲೆ ತಮಾಶೆ ಮಾಡ್ತಾ, ಜಿಪುಣಿ ಅಂತ ಕರೆಯುತ್ತಲೋ, ಇಲ್ಲ ಮನೆಯ ಬಾಡಿಗೆ ಹೆಚ್ಚು ಮಾಡುವ ಸೂಚನೆ ಕೊಡುತ್ತಲೋ ಇರುತ್ತಿದ್ದಳು.

ನರೇಶ್ ತನ್ನ ಮಿತ್ರರನ್ನು ಊಟಕ್ಕೆ ಕರೆದಿದ್ದ. ಶಾಲ್ಮಲಿ ಐದು ಗಂಟೆಗೆಲ್ಲಾ ಅಡುಗೆ ಮುಗಿಸಿದಳು. ಸ್ನಾನ ಮಾಡಿ ಚೆನ್ನಾಗಿ ರೆಡಿಯಾದಳು. ನರೇಶ್ ಸೋಡಾ ಬಾಟಲಿಗಳನ್ನು ತರಲು ಹೋಗಿದ್ದ. ಶಾಲ್ಮಲಿ ಹೊರಗೆ ಕುರ್ಚಿಗಳನ್ನು ಹಾಕಿ ಕುಳಿತುಕೊಳ್ಳಲು ವ್ಯವಸ್ಥೆ ಮಾಡಿದ್ದಳು. ಎರಡು ಫೋಲ್ಡಿಂಗ್ ಮಂಚಗಳನ್ನೂ ತಂದು ದಿವಾನ್ ರೀತಿಯಲ್ಲಿ ಅದರ ಮೇಲೆ ಹಾಸಿ, ಕುಶನ್‌ಗಳನ್ನು ಇರಿಸಿದ್ದು.

ಬಹಳ ದಿನಗಳ ನಂತರ ಮನೆಯಲ್ಲಿ ಸದ್ದುಗದ್ದಲ ಕೇಳಿಸಿತ್ತು. ನಗು, ಕೀಟಲೆ ಬಿಸಿ ಬಿಸಿ ಮಾತುಕತೆ ಶಾಲ್ಮಲಿಗೆ ಹಿಡಿಸಿತು. ನರೇಶನ ಸ್ನೇಹಿತರನ್ನು, ಅವರ

ಹೆಂಡತಿಯರನ್ನು ಸತ್ಕರಿಸುವುದು ಎಲ್ಲ ಅವಳಿಗೆ ಇಷ್ಟವಾಯಿತು. ಎಲ್ಲರೊಂದಿಗೆ ಮುಕ್ತವಾಗಿ ಮಾತಾಡಿದಳು. ಆದರೆ ಅದೇಕೋ ಏನೋ. ನರೇಶ್‌ನ ಸ್ನೇಹಿತರ ಹೆಂಡಂದಿರಿಗೆ ಇವಳೊಂದಿಗ ಮಾತುಕತೆಯಾಡಲು ಸಂಕೋಚವಾಗುತ್ತಿರುವಂತೆ ಅನಿಸಿತು. ಬಹುಶಃ ತಾವು ಗೃಹಿಣಿಯರು ಮಾತ್ರವಾಗಿದ್ದು, ಶಾಲ್ಮಲಿ ಓದಿ ಕೆಲಸಕ್ಕೆ ಹೋಗುತ್ತಿದ್ದಾಳೆ. ಅನ್ನುವ ಕಾರಣಕ್ಕೆ ಆದ ಭಯ, ಸಂಕೋಚದಲ್ಲಿ ಕಾಣಿಸಿಕೊಳ್ಳುತ್ತಿದ್ದಿರಬೇಕು. ಆದರೆ ಶಾಲ್ಮಲಿಗೆ ಆ ಭಾವನೆಯೇ ಇರಲಿಲ್ಲ. ಹೆಣ್ಣು ಏನೆಲ್ಲ ಸಾಧಿಸಿದರೂ ಗೃಹಿಣಿಯಾಗಿಯೇ ಉಳಿಯುತ್ತಾಳೆ ಎನ್ನುವ ನಂಬಿಕೆ. ಆದ್ದರಿಂದ ಎಲ್ಲಾ ಹೆಂಗಸರೂ ಒಂದೇ ಜಾತಿಯವರೆಂದಾದ ಮೇಲೆ ಪರಸ್ಪರ ಮಾತಾಡೋಕೆ ಸಂಕೋಚ ಯಾಕೆ?

"ನೋಡು ಹುಡುಗಿ ವಿದ್ಯಾವಂತಳಾಗಿದ್ದರೆ, ಹಣದ ಆಸೆ ಬಿಡು. ಯಾಕೇಂದ್ರೆ ಅವಳು ಹೇಗಿದ್ದರೂ ಹಣ ಉತ್ಪಾದಿಸುವ ಯಂತ್ರವಾಗಿರುತ್ತಾಳೆ. ನನ್ನದೇ ವಿಚಾರತಗೊ" – ಎಲ್ಲರ ಮಾತಿನ ನಡುವೆ ನರೇಶ್‌ನ ಮಾತು ತನ್ನ ಕಿವಿತನಕ ಬಂತು. ಬೆಚ್ಚಿ ಬಿದ್ದು ನರೇಶ್‌ನ ಕಡೆ ನೋಡಿದಳು. ಸ್ನೇಹಿತರಿಂದ ಬಳಸಿ ಕುಳಿತಿದ್ದ.

"ನಿನ್ನ ಅದೃಷ್ಟದ ಜೊತೆಗೆ ನಮ್ಮದನ್ನು ಹೋಲಿಸಬೇಡ......ಹುಡುಗಿ ಬರೀ ಟೀಚರ್ ವಿಶ್ವವಿದ್ಯಾಲಯದಲಲ್ಲ, ಸ್ಕೂಲಿನಲ್ಲಿ ಪಾಠ ಹೇಳೋದು, ಅರ್ಥವಾಯಿತಾ..... ಇನ್ನೊಂದು ಕಡೆ ಎರಡು ಲಕ್ಷ. ಹುಡುಗಿ ಬರೀ ಇಂಟರ್ ಓದಿದ್ದಾಳೆ" ಅಸಮಾಧಾನದಿಂದ ಚಂದ್ರಮೋಹನ್ ಹೇಳಿದ.

"ಎರಡನೆಯವಳೇ ಸರಿ ಅನ್ಸತ್ತೆ". ರಾಜನ್ ತೀರ್ಮಾನ ಕೊಟ್ಟ.

"ರಾಜನ್ ಹೇಳಿದ್ದು ಸರಿ". ನರೇಶ್ ಏನನ್ನೋ ಯೋಚಿಸುತ್ತಾ ಹೇಳಿದ.

"ಹುಡುಗಿ ಅಪ್ಪ ಏನ್ಮಾಡ್ತಾರೆ?" ರಾಜನ್ ಕೇಳಿದ.

"ಸಣ್ಣ ಪುಟ್ಟ ವ್ಯಾಪಾರ.....ಯಾವುದೊ....."

"ಹಾಗಾದರೆ ನಿನ್ನ ಭವಿಷ್ಯ ಬಹಳ ಚೆನ್ನಾಗಿದೆ ಅನ್ಸತ್ತೆ." ನರೇಶ್ ಗಹಗಹಿಸಿ ನಕ್ಕ.

ನರೇಶ್ ಈಗ ಮತ್ತೆ ಪರಕೀಯನಾಗಿ ಕಾಣಿಸಿದ. ಈ ವ್ಯಕ್ತಿಯನ್ನು ಮೊಟ್ಟ ಮೊದಲ ಬಾರಿ ಕಾಣುತ್ತಿದ್ದೇನೆ ಎನಿಸಿತು. ಅವನ ಹಾವಭಾವಗಳೆಲ್ಲ ಸಾಮಾನ್ಯವಾದ್ದೇ. ಪ್ರತಿದಿನ ಬಸ್‌ನಲ್ಲಿ, ಆಫೀಸಿನಲ್ಲಿ, ರಸ್ತೆಗಳಲ್ಲಿ, ಪೇಟೆಯಲ್ಲಿ ನೋಡುವಂಥವರೆ! ಇವರನ್ನು ನೋಡಿದರೂ, ನೋಡದಿದ್ದರೂ ಒಂದೇ!

"ನೀವು ಇಷ್ಟೊಂದು ಓದಿದವರಾದರೂ, ಎಷ್ಟು ಚೆನ್ನಾಗಿ ಮಾತಾಡ್ತೀರಿ! ಯಾರೋ ಒಬ್ಬರು ಹೆಂಗಸರು ಮಾತಾಡಿದ್ದು ಕೇಳಿಸಿ ಬೆಚ್ಚಿದಳು. ನಂತರ ಮುಗುಳ್ನಕ್ಕಳು.

ಇನ್ನೊಬ್ಬಳು ಹೇಳಿದಳು – ಚೆನ್ನಾಗಿ ಮಾತಾಡುವುದಿರಲಿ..... ಅತ್ತಿಗೆಯಂತು ಅಪ್ಸರೆ, ನೋಡಿದರೆ ಸಾಕು, ಮುಗ್ಧರಾಗಿ ಬಿಡ್ತಾರೆ.

ಈ ಮಾತು? ಈ ಸ್ನೇಹಿತರು, ಯಾರಿಗಾಗಿ? ನನಗೋ ನರೇಶನಿಗೋ? ಈ ಮನಃಸ್ಥಿತಿಯುಳ್ಳವರು ನರೇಶನಿಗೆ ಏನನ್ನು ಕೊಡಲು ಸಾಧ್ಯ? ಈ ಔಪಚಾರಿಕ ಸಂಬಂಧಗಳನ್ನು, ಸತ್ಕಾರವನ್ನು ನಿಭಾಯಿಸುವಲ್ಲಿ ಬೇಸರವೆನಿಸಿತು.

ಇವರ ಈ ಸುಳ್ಳು ಪ್ರಶಂಸೆಯನ್ನು ಕೇಳುತ್ತಾ ಬಹಳ ಹೊತ್ತು ಅಲ್ಲಿರುವುದು ಸಾಧ್ಯವಿಲ್ಲವೆನಿಸಿತು. ಅವರ ಪ್ರಶಂಸೆಗಾಗಿ ವಿನೀತಳಾಗಿರುವ ನಾಟಕ ತನ್ನಿಂದಾಗೊಲ್ಲ. ನರೇಶನಿಗೆ ಇದೆಲ್ಲ ಹಿಡಿಸಿದರೂ ಹಿಡಿಸಬಹುದು. ಆದರೆ ತನಗೆ ಅದರ ಪ್ರಲೋಭನೆ ಬೇಕಾಗಿಲ್ಲ.

ಅಡಿಗೆ ಬಿಸಿಮಾಡಲು ಅಡುಗೆ ಮನೆಗೆ ನಡೆದಳು. ಹೊರಗಿನಿಂದ ಬರುತ್ತಿದ್ದ ಮಾತುಗಳು ಕೇಳಿ ಬರುತ್ತಿದ್ದವು. ಆದರೆ ಅವುಗಳ ತಲೆಬುಡ ಅರ್ಥವಾಗುತ್ತಿರಲಿಲ್ಲ. ಸುಮ್ಮನೆ ಹೊತ್ತು ಕಳೆಯೋದಕ್ಕೆ ಹರಟೆ ಹೊಡೆಯುತ್ತಿದ್ದರು.

ಅತಿಥಿಗಳೆಲ್ಲ ಹೋದ ಮೇಲೆ ಎಂಜಲು ತಟ್ಟೆ, ಮುಸುರೆಪಾತ್ರೆ, ಖಾಲಿ ಶೀಶೆಗಳು ಎಲ್ಲ ತೆಗೆದು ಒಪ್ಪ ಮಾಡತೊಡಗಿದಳು. ರಸ್ತೆ ತನಕ ಅವರನ್ನು ಕಳಿಸಿ ಕೊಡಲು ಹಾಗೆ ಪಾನ್ ಕೊಡಿಸಲು ಜೊತೆಗೆ ಹೊರಟ. ರಾತ್ರಿ ಹನ್ನೊಂದು ಗಂಟೆ ಆಗುವುದರಲ್ಲಿತ್ತು. ಶಾಲ್ಮಲಿ ದಣಿದು ಹೋಗಿದ್ದಳು. ನರೇಶ್ ಮೆಟ್ಟಿಲೇರುತ್ತಿರುವ ಸದ್ದು ಕೇಳಿಸಿತು. ಅವನು ಗುಣುಗುಣಿಸುವ ಧ್ವನಿಯೂ ಕೇಳಿಸಿತು.

"ಬೆಳಿಗ್ಗೆ ಮಾಡಿದರಾಯಿತು" – ಪಾನ್ ಅವಳ ಕಡೆ ಕೊಡುತ್ತಾ ಹೇಳಿದ.

"ಬೆಳಿಗ್ಗೆ ಆಫೀಸಿದೆಯಲ್ಲ! ಅರ್ಧ ಕೆಲಸ ಈಗ ಮಾಡಿ ಬಿಡ್ತೇನೆ" ಪಾನನ್ನು ಬಾಯಲ್ಲಿಟ್ಟುಕೊಳ್ಳುತ್ತ ಉಳಿದ ಅಡುಗೆಯನ್ನು ಫ್ರಿಜ್‌ನಲ್ಲಿ ಇಡತೊಡಗಿದಳು.

"ಡಿನರ್ ಎ ಒನ್ ಇತ್ತು. ಶಾಲು, ಸ್ನೇಹಿತರ ಮುಂದೆ ನನ್ನ ಸ್ಟೇಟಸ್ ಹೆಚ್ಚಿತು." ನರೇಶ್ ಬಹಳ ಪ್ರೀತಿಯಿಂದ ಹೇಳಿದ.

"ನಿನಗೆ ಸಂತೋಷ ಆಯ್ತಲ್ಲ ಅಷ್ಟೆ ಸಾಕು". ತನ್ನ ಭುಜದ ಮೇಲಿಟ್ಟಿದ್ದ ನರೇಶನ ಕೈಯ ಮೇಲೆ ಮೆಲ್ಲಗೆ ತಟ್ಟಿ ಹೇಳಿದಳು, ಶಾಲ್ಮಲಿ.

"ನಿನ್ನನ್ನು ಅವರ ಮನಸುಗಳಲ್ಲಿ ಉಳಿಸಬೇಕು ಅಂತ ಇದ್ದೆ. ಅಲ್ಲದೆ ನಾನು ಯಾಕೆ ಸುಖವಾಗಿದ್ದೀನಿ. ಅನ್ನೋದು ಅವರಿಗೆ ತಿಳಿಯಬೇಕೂಂತ ಆಸೆ ಪಟ್ಟೆ." ನರೇಶ್ ಹೆಮ್ಮೆಯಿಂದ ಹೇಳಿದ.

"ಹೌದು ಯಾಕೇ?" ಶಾಲ್ಮಲಿ ಕೇಳಿದಳು.

"ನಾಯಾಕೆ ಹೇಳಲಿ?" ನರೇಶ್ ಹೇಳುತ್ತಾ ಗಹಗಹಿಸಿ ನಕ್ಕು ಬಾಯಲ್ಲಿ ಸಿಗರೇಟು ಇರಿಸಿಕೊಂಡ. ಶಾಲ್ಮಲಿಯ ಮನಸ್ಸು ಒಂದು ಕ್ಷಣ ಹಿಗ್ಗಿತು; ಮತ್ತೆ ಬಾಡಿತು. ಅವಳ ಕೆಲಸದಲ್ಲಿ ಮುಳುಗಿದಳು.

"ಈಗ ಕೆಲಸ ನಿಲ್ಲಿಸಿ ನನಗೆ ಹಾಸಿಗೆ ಹಾಸಿಕೊಡು" – ಸ್ವಲ್ಪ ಅಸಮಾಧಾನದಿಂದ ಹೇಳಿದ.

"ಹಾಸಿಗೆ ಇಲ್ಲೇ ಇದೆ. ನೀನೇ ಹಾಕ್ಕೋಬಾರದೆ? ನನಗೆ ನೋಡು, ಬಿಡುವೇ ಇಲ್ಲ" ಕೆಲಸದಲ್ಲಿ ಮಗ್ನಳಾಗಿ ಹೇಳಿದಳು.

"ಇದೆಲ್ಲ ನನ್ನ ಕೈಲಿ ಆಗೋದಿಲ್ಲ" ಹೇಳುತ್ತಾ ನರೇಶ್ ಹೊರಗೆ ಹೊರಟ.

ಶಾಲ್ಮಲಿಗೆ ಸಿಟ್ಟು ನೆತ್ತಿಗೇರಿತು. ಆದರೂ ಗೊಣಗುತ್ತಲೇ ಹಾಸಿಗೆಯನ್ನು ಎತ್ತಿಕೊಂಡು ಬಂದು ಮಂಚದ ಮೇಲೆ ಬಿಡಿಸಿದಳು.

"ನನಗೆ ಸ್ವಲ್ಪ ಸಹಾಯ ಮಾಡಿದರೆ ನಿಮ್ಮ ಗಂಟೇನು ಹೋಗುತ್ತೆ? 'ಗಂಡ' ಅನ್ನೋ ಹೆಸರಿಗೆ ಗ್ರಹಣ ಹಿಡಿಯುತ್ತೇನೂ? – ಸಿಟ್ಟಿನಿಂದಲೇ ಹೇಳಿದಳು.

"ಹಾಗಲ್ಲ ಶಾಲೂ. ನಿನ್ನ ಕೈಲಿ ಮಾಡಿಸಿಕೊಂಡರೆ ನನಗೇನೋ ಒಂದು ಥರಾ ತೃಪ್ತಿ ನಮ್ಮನ್ನು ನೋಡಿಕೊಳ್ಳೋಕೂ ಒಬ್ಬರಿದ್ದಾರೆ ಅನ್ನೋ ಸಮಾಧಾನ". ಸಿಗರೇಟನ್ನು ಆರಿಸಿ, ಬಂದು ಮಲಗಿದ.

"ನಮಗೂ ಹಾಗೇ ಅನ್ಸತ್ತೆ. ಆ ಸುಖ ನಮಗೆ ಬೇಡವೇ?" –

ಶಾಲ್ಮಲಿ ನಿಧಾನವಾಗಿ ಹೇಳಿದಳು.

"ಏನಾದರೂ ಹೇಳಿದೆಯಾ?" –

ನರೇಶ್ ಕೇಳಿದ.

"ಬೇಕಾದಷ್ಟು ಹೇಳ್ತೀನಿ. ನೀನು ಕೇಳ್ಬೇಕಲ್ಲ? – ಶಾಲ್ಮಲಿ.

ಕೋಪದಲ್ಲಿ ಒಳಗೆ ಹೋಗಿ ಕೆಲಸದಲ್ಲಿ ತೊಡಗಿದಳು. ಪಾತ್ರೆಗಳ ಸದ್ದು ಹೆಚ್ಚಾಯಿತು. ನರೇಶನ ನಿದ್ದೆಯ ಮತ್ತಿಗೆ ಭಂಗ ಉಂಟಾಯಿತು.

ಮನೆ ಕೆಲಸದಲ್ಲಿ ಶಾಲ್ಮಲಿಗೆ ಸಹಾಯ ಮಾಡಿ ನರೇಶ್ ತನ್ನ ಪ್ರತಿಷ್ಠೆಯನ್ನು ಕಳೆದುಕೊಳ್ಳಲು ಸಿದ್ಧನಾಗಿರಲಿಲ್ಲ. ಹೆಂಡತಿ ಜೊತೆ ಇರೋದೇ ಜನರ ದೃಷ್ಟೀಲಿ ಅಸಹಾಯಕ ಸ್ಥಿತಿ, ಎನಿಸಿರುವಾಗ ಮನೆ ಕೆಲಸದಲ್ಲಿ ತೊಡಗಿ ಕೈಲಾಗದವ, ಅಮ್ಮಾವ್ರ ಗಂಡ ಅಂತ ಕರೆಸಿಕೊಳ್ಳಲಾರ! ಅವನಿಗೆ ಒಂದು ವಿಷಯವಂತೂ ಸ್ಪಷ್ಟವಾಗಿತ್ತು. ಶಾಲ್ಮಲಿಯನ್ನು ತಿದ್ದುವುದು. ಒಂದು ಹಂತದವರೆಗೆ ಮಾತ್ರ ಸಾಧ್ಯ. ನಂತರದ ಸ್ಥಿತಿ

ನರೇಶ್‌ನಿಗೇ ಕಷ್ಟದಾಯಕವಾಗಬಹುದು. ಅಷ್ಟೊಂದು ದಯನೀಯ ಸ್ಥಿತಿವರೆಗೆ ಹೋಗೋದಕ್ಕೆ ನರೇಶ್ ಸಿದ್ಧನಾಗಿರಲಿಲ್ಲ. ಆದ್ದರಿಂದಲೇ ನರೇಶ್ ಎಲ್ಲವನ್ನೂ ಆಲೋಚಿಸಿದ ನಂತರ ತನ್ನ ವರ್ತನೆಯನ್ನೇ ಬದಲಾಯಿಸಿಕೊಂಡ.

ಇದನ್ನು ಶಾಲ್ಮಲಿ ಗಮನಿಸದೆ ಇರಲಿಲ್ಲ. ಅವಳಿಗೆ ಸಂತೋಷವೂ ಆಯಿತು. ನರೇಶ್ ವ್ಯವಹಾರ ಕುಶಲನಾಗುತ್ತಿದ್ದಾನೆ. ಮಾತಿನಲ್ಲಿ ಸಿಹಿತನ, ರೀತಿಯಲ್ಲಿ ನಯ ಹೆಚ್ಚುತ್ತಿದೆ. ಆದರೆ ತನ್ನ ಜೊತೆ ಮಾತನಾಡುವಾಗಲೂ ಈ ಬಗೆಯ ಔಪಚಾರಿಕತೆ, ತೋರಿ ಬರುವ ಕೃತಕತೆ ಅವಳಿಗೆ ಸಹಿಸಲಾಗುತ್ತಿರಲಿಲ್ಲ. ಏನಾದರೂ ಮಾತು ಬಂದರೆ, ಕೇಳಿದರೆ, ಸಹಜವಾಗಿ ಉತ್ತರ ಕೊಡಬಹುದಾಗಿದ್ದನ್ನೂ ಏನೋ ಬಹಳ ಯೋಚನೆ ಮಾಡಿ, ತೂಗಿ ನೋಡಿ ಕೊಡುವುದನ್ನು ಕಂಡಾಗ ಶಾಲ್ಮಲಿಗೆ ಬಹಳ ಬೇಸರವಾಗುತ್ತಿತ್ತು.

ಅವನ ಈ ರೀತಿ, ಅದೂ ಸ್ನೇಹಿತರ ಜೊತೆಗೆ ಇರುವಾಗ, ಸಭೆ, ಸಮಾರಂಭಗಳಲ್ಲಿ ಕುಳಿತಿರುವಾಗ, ಶಾಲ್ಮಲಿಯನ್ನು ಮುಕ್ತ ಕಂಠದಿಂದ ಹೊಗಳಿದಾಗ, ಏನು ಮಾಡಬೇಕೆಂದು ತೋಚದೆ ಆ ಕಡೆ ಈ ಕಡೆ ನೋಡುತ್ತಾ ಕುಳಿತಿರಬೇಕಾದ ಸಂದರ್ಭದಲ್ಲಿ ಬಹಳ ಬೇಸರ ಬರಿಸುತ್ತಿತ್ತು.

ಶಾಲ್ಮಲಿಯ ದೃಷ್ಟಿ, ಅವಳ ಉದ್ದೇಶ, ನರೇಶನಲ್ಲಿ ಅಕಾರಣವಾಗಿ ತಪ್ಪುಗಳನ್ನು ಹೊರಗೆ, ಅಗೆದಗೆದು ದೋಷಗಳನ್ನು ಹೆಕ್ಕಿ ತೆಗೆಯುವುದಲ್ಲ. ತನ್ನ ಬಾಳಸಂಗಾತಿಯ ಜೊತೆಯಲ್ಲಿ ಸಮಾನ ನೆಲೆಯಲ್ಲಿ ಒಂದೊಂದು ಕ್ಷಣದ ಬದುಕನ್ನೂ ಬದುಕಬೇಕೆನ್ನುವ ಬಯಕೆ ಅವಳ ಪಾಲಿಗೆ ಬರೀ ಮರೀಚಿಕೆಯಾಯಿತು. ಪದೇ ಪದೇ ಮೋಸಕ್ಕೆ ಒಳಗಾಗುತ್ತಿದ್ದಳು.

ಒಂದೇ ಕೋಣೆಯ ಬರಸಾತಿ ಮನೆ ಬಿಟ್ಟು ವಿಶಾಲವಾದ ಸರಕಾರಿ ಕ್ವಾರ್ಟರ್ಸ್‌ನಲ್ಲಿ ವಾಸಿಸುವುದೇ ಸ್ವರ್ಗ ಸಿಕ್ಕಂತಾಗಿತ್ತು. ಹೊರಗಡೆ ಲಾನ್‌ನಲ್ಲಿ ಕುಳಿತು ಬೇಕಾ ತನ್ನ ಕೈಗಳಿಂದ ನೀಡುವ ಚಹಾ ಕುಡಿಯುತ್ತ ಬಿಸಿ ಬಿಸಿ ಪಕೋಡಾ ಮೆಲ್ಲುತ್ತಾ ಸಂತೋಷಗಳಿಂದ ಒಬ್ಬರನ್ನೊಬ್ಬರು ದಿಟ್ಟಿಸುತ್ತಿದ್ದಾರೆ. ಒಬ್ಬರ ದೃಷ್ಟಿಯಲ್ಲಿ, ಏನನ್ನೋ ಸಾಧಿಸಿದ ಸಂತೋಷ ತುಳುಕಿದರೆ, ಇನ್ನೊಬ್ಬರ ದೃಷ್ಟಿಯಲ್ಲಿ ಯಾರ ಸುಖಕ್ಕೋ ನೀಡಿದ ಬಲಿದಾನದ ಛಾಯೆ ಇತ್ತು.

ನರೇಶನ ತಾಯಿ ಊರಿಂದ ಬಂದು ತಿಂಗಳಾಗಿತ್ತು. ಶಾಲ್ಮಲಿ, ಅಮ್ಮ ಅತ್ತೆ, ಅಂತ ವ್ಯತ್ಯಾಸ ಮಾಡಲಿಲ್ಲ. ಅಮ್ಮನಿಗಿಂತ ಹೆಚ್ಚಾಗಿ ಸೇವೆ ಮಾಡಿದಳು. ಅತ್ತೆ ಜೊತೆ ಅನವಶ್ಯಕವಾಗಿ ಚರ್ಚೆ ಮಾಡುತ್ತಿರಲಿಲ್ಲ. ಯಾವ ರೀತಿಯಿಂದಲೂ ಅವರಿಗೆ ತೊಂದರೆ ಮಾಡದೆ ತುಂಬಾ ಅಕ್ಕರೆಯಿಂದ ಅತ್ತೆಯನ್ನು ನಡೆಸಿಕೊಳ್ಳುತ್ತಿದ್ದಳು. ಅತ್ತೆಗೂ ಶಾಲ್ಮಲಿಯ ಬಗ್ಗೆ ತುಂಬು ವಾತ್ಸಲ್ಯ ಅವಳನ್ನು ಕಂಡರೆ ಪ್ರಾಣ ಬಿಡುತ್ತಿದ್ದರು. ಶಾಲ್ಮಲಿ ಒಮ್ಮೊಮ್ಮೆ

ಅವರ ತಲೆಗೆ ಎಣ್ಣೆ ಹಚ್ಚಿದಾಗ, ಕಾಲು ಒತ್ತಿದಾಗ ಅತ್ತೆ ಸಂಕೋಚದ ಮುದ್ದೆಯಾಗುತ್ತಿದ್ದರು. "ಬೇಡ ಮಗು ಬೇಡ. ಇಷ್ಟೊಂದು ಓದಿದ ನೀನು ನನ್ನ ಕಾಲು ಮುಟ್ಟೋದೇ?" ಅಂತ ಕಾಲನ್ನು 'ಬೇಡ ಬೇಡಾಂತ' ಹಿಂದಕ್ಕೆಳೆದುಕೊಳ್ಳುತ್ತಿದ್ದರು.

"ಬಿಡಿ ಅಮ್ಮಾಜಿ ಓದಿದ ಮಾತ್ರಕ್ಕೆ ಸೇವೆ ಮಾಡೋದನ್ನ ಮರೀಬೇಕೆ?" ನಗುತ್ತಾ ಹೇಳುತ್ತಿದ್ದಳು ಶಾಲ್ಮಲಿ.

"ನನ್ನ ಅದೃಷ್ಟ!....... ಜೀವನದ ಉದ್ದಕ್ಕೂ ದುಡಿಯೋದೇ ಆಯ್ತು. ನಮಗೆಲ್ಲ ಗೊತ್ತಾಗಬೇಕು. ಸೇವೆ–ಸುತ್ತಾಟ ಇತ್ಯಾದಿ". ಒಂದು ವಿಚಿತ್ರ ಸಂಭ್ರಮದಿಂದ ಹೇಳುತ್ತಿದ್ದರು.

"ದೊಡ್ಡವರ ಸೇವೇಲಿ ಇರೋ ಸುಖ ಬೇರೆಯಾವುದರಲ್ಲಿ ಇರುತ್ತೆ ಅಮ್ಮಾಜಿ!" ಶಾಲ್ಮಲಿ ತುಂಬಾ ಸಲುಗೆಯಿಂದ ಹೇಳಿದಳು.

"ಅದೇನೋ ಸರಿ! ಆದರೆ ಒಂದೊಂದು ಸಲ ಮನಸ್ಸಿಗೆ ದುಃಖ ಆಗುತ್ತೆ. ಇಷ್ಟೆಲ್ಲ ಮಾಡಿದರೂ...." ಹೇಳುತ್ತಾ ಮೌನ ತಳೆದರು.

ಚಳಿಗಾಲದ ಮಧ್ಯಾಹ್ನ, ರಜಾ ಬೇರೆ. ಮೆತ್ತಗೆ ಹಣ್ಣಾಗಿರುವ ಸೀಬೆಕಾಯನ್ನು ಹೋಳು ಮಾಡಿ, ಅದರ ಮೇಲೆ ಉಪ್ಪು ಉದುರಿಸಿ ನೀಡಿದಾಗ, ಇಲ್ಲ ನಿಂಬೆ ಹಣ್ಣಿನ ರಸ ತೆಗೆದು ಕೊಟ್ಟಾಗ, ಅತ್ತೆ ಗದ್ಗದಕಂಠರಾಗಿ ತಮ್ಮ ಮನಸ್ಸನ್ನು ಸೊಸೆಯ ಮುಂದೆ ನಿಸ್ಸಂಕೋಚವಾಗಿ ತೆರೆದಿರಿಸುತ್ತಿದ್ದರು. ಎಂದೆಂದಿನದೋ ಸುಖ, ದುಃಖದ ಸಂದರ್ಭಗಳನ್ನು ವಿವರಿಸುತ್ತಿದ್ದರು. ಒಮ್ಮೊಮ್ಮೆ ಸಂತೋಷದಿಂದ ನಗುತ್ತಿದ್ದರೆ, ಮತ್ತೊಮ್ಮೆ ಒದ್ದೆಯಾದ ಕಣ್ಣುಗಳನ್ನು ಸೆರಗಿನಿಂದ ಒರೆಸಿಕೊಳ್ಳುತ್ತಿದ್ದರು.

"ಅಮ್ಮನ ಹತ್ತಿರ ಅದೇನು ಅಷ್ಟೊಂದು ಮಾತು!" ನಗುತ್ತಾ ಪ್ರವೇಶಿಸಿದ ನರೇಶ್ ಶಾಲ್ಮಲಿಯತ್ತ, ಪರೀಕ್ಷಿಸುವಂತೆ ನೋಡಿದ.

"ಯಾಕೆ?" ಶಾಲ್ಮಲಿ ತಿರುಗಿ ನರೇಶನನ್ನು ಪ್ರಶ್ನಿಸಿದಳು.

"ಯಾಕೇಂದ್ರೆ?.....ಅಮ್ಮ ಇವತ್ತಿನವರೆಗೆ ಇಷ್ಟು ಮಾತಾಡಿದ್ದನ್ನು ನಾನು ನೋಡಿಯೇ ಇಲ್ಲ, ಯಾವಾಗಲೂ ಒಂದೇ ಸಮನೆ ಕೆಲಸ...... ಕೆಲಸ........ಹಾಸ್ಟೆಲ್‌ಗೆ ಸೇರಿದ್ದ ನಾನು ರಜೆಯಲ್ಲಿ ಮನೆಗೆ ಬಂದಾಗ, ನಾವಿಬ್ಬರೂ ಮಾತಾಡ್ತಿದ್ದದ್ದು ಬರೀ ಊಟ ಮಾಡುವಾಗಷ್ಟೇ! ಊಟದ ಬಗ್ಗೆ ಕೇಳೊದು, ಗಾಳಿ ಹಾಕೋದು!..... ಅಲ್ಲಿಗೇ ಮುಗೀತಿತ್ತು, ನಮ್ಮ ಸಂವಾದ! ಅಮ್ಮ ಮಾತಾಡ್ತಾರೆ ಅಂದ್ರೆ, ನನಗೆ ನಂಬೋದಕ್ಕೆ ಆಗಲಿಲ್ಲ. ಅದೂ ನಿಂಜೊತೆ! ನಿನ್ ತರ್ಕಕ್ಕೆ ನಾನೇ ಸುಸ್ತಾಗಿ ಹೋಗ್ತೀನಿ, ಅಂಥಾದ್ದರಲ್ಲಿ ಅಮ್ಮ ಹೇಗೆ ಅಷ್ಟೊಂದು ಮಾತಾಡ್ತಾರೆ ನಿಂಜೊತೆ?" ನರೇಶ ಬಿದ್ದು ಬಿದ್ದು ನಕ್ಕ.

ಹೆಂಗಸರ ಕಷ್ಟ ಸುಖ ವಿಚಾರಿಸುವುದು, ಅವರ ಹೃದಯಾನ ಅರ್ಥ ಮಾಡ್ಕೊಳ್ಳೋದು ಗಂಡಸಿನ ದೃಷ್ಟೀಲಿ ಅವಮಾನ. ಅವನಿಗೆ ಯಾವಾಗಲೂ ಒಂದು ವಿಚಾರ ಮಾತ್ರ ಸಂತೋಷ ಕೊಡುತ್ತೆ. ತಮ್ಮಿಂದಲೇ ಹೆಣ್ಣು 'ಸುಮಂಗಲಿ' ಅಂತ ಕರಿಸಿಕೊಳ್ತಾಳೆ ಅನ್ನೋ ಸಂಭ್ರಮದೊಂದಿಗೆ ಬೀಗುವ ಗಂಡಸಿನ ಮುಂದೆ ಹೆಣ್ಣು ಕಷ್ಟ ಸುಖಗಳನ್ನು ಹೇಗೆ ಹೇಳಿಕೊಂಡಾಳ? ಅನ್ನ, ಬಟ್ಟೆ, ಮನೆ, ಮಕ್ಕಳು – ಏನೇ ಕಡಿಮೆ ಆದರೂ ಅದು ಅವಳ ಅದೃಷ್ಟ' ಅಂತ ದೂರುವುದು ಗಂಡಸಿನ ಕೆಲಸ.

ಮೇಲಿಂದ ಮೇಲೆ ಈ ಮಾತುಗಳನ್ನು ಶಾಲ್ಮಲಿ ಅತ್ತೆಯಿಂದ ಒಂದು ವರ್ಷದಿಂದ ಕೇಳುತ್ತಲೇ ಇದ್ದಳು. ಅದನ್ನು ತನ್ನ ರೀತಿಯಿಂದ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಳು. ಅತ್ತೆಗೆ ಹತ್ತಿರವಾಗುತ್ತಿದ್ದಳು. ಒಂದು ಹೆಣ್ಣಿನ ಮನಸ್ಸನ್ನು ಹೆಣ್ಣು ಮಾತ್ರವೇ ಸರಿಯಾಗಿ ಅರ್ಥಮಾಡಿಕೊಳ್ಳುತ್ತಾಳೆ. ಆದರೆ ಗಂಡಸಿಗೆ ಅದು ಸಾಧ್ಯವಿಲ್ಲ. ಅದಕ್ಕೇ ಬಹುಶಃ ಹೆಣ್ಣು ಗಂಡು ಸೃಷ್ಟಿಯಲ್ಲಿ ವ್ಯತ್ಯಾಸಗಳಿರುವುದು. ಈ ವ್ಯತ್ಯಾಸಗಳನ್ನು ಪುರುಷ ತನ್ನ ಅನುಕೂಲಕ್ಕೆ ತಕ್ಕ ಹಾಗೆ ಸಾಮಾಜಿಕ ನಿಯಮಗಳನ್ನಾಗಿ ಪರಿವರ್ತಿಸಿಕೊಂಡ, ಅಷ್ಟೆ!

ಯೋಚಿಸಿದಷ್ಟೂ ಶಾಲ್ಮಲಿಗೆ 'ಗಂಡು ಹೆಣ್ಣು' ನಡುವಿನ ಅಂತರ ಹಿರಿದಾಗುತ್ತಲೇ ಇರುವಂತೆನಿಸಿತು. ಆದರೆ ಇದರಲ್ಲಿ ದೋಷ ಒಬ್ಬರದಲ್ಲ. ಸಮಾಜವೂ ಸೇರಿಕೊಂಡಿದೆ ಎಂದು ಹೊಳೆದಾಗ ಸ್ವಲ್ಪ ಸಮಾಧಾನವಾಗುತ್ತಿತ್ತು. ಎಲ್ಲಿಯವರೆಗೆ ಸಾಮಾಜಿಕ ದೃಷ್ಟಿಕೋನದಲ್ಲಿ ಬದಲಾವಣೆಯಾಗುವುದಿಲ್ಲವೋ ಅಲ್ಲಿಯವರೆಗೆ ಹಳೆಯ ವ್ಯವಸ್ಥೆ ಮುರಿದು ಹೊಸದು ಬರಲು ಸಾಧ್ಯವಿಲ್ಲ.

* * *

ಬೇಸಿಗೆ ಕಾಲ, ಬಿಸಿಗಾಳಿ, ಕೆಂಡಕಾರುವ ಆಕಾಶ. ಜೊತೆಗೆ ನಾಗಪುರಕ್ಕೆ ಪ್ರಯಾಣ. ಶಾಲ್ಮಲಿಗೆ ಹೋಗುವುದಕ್ಕೆ ಮನಸ್ಸಾಗಲಿಲ್ಲ. ಅತ್ತೆಯ ಆರೋಗ್ಯ ಬೇರೆ ಕೆಡುತ್ತಿತ್ತು. ಅಮ್ಮನ ಜವಾಬ್ದಾರಿ ನರೇಶ್‌ಗೆ ಒಪ್ಪಿಸುವುದು ಸಾಧ್ಯವಿರಲಿಲ್ಲ. ಅವನು ಅದರ ಕಡೆ ಲಕ್ಷ್ಯ ಕೊಡ್ತಾನೆ ಅನ್ನೋ ಆಸೆ ಇರಲಿಲ್ಲ. ಜೇಲಾ ಬೇರೆ ರಜೆ ಬೇಕೂಂತ ಇದ್ದಾಳೆ. ಶಾಲ್ಮಲಿಗೆ ಏನು ಮಾಡಬೇಕೋ? – ಹೊಳೆಯಲಿಲ್ಲ.

ಸ್ವಲ್ಪ ಯೋಚನೆ ಮಾಡಿದ ಮೇಲೆ ಅಮ್ಮನಿಗೆ ಅತ್ತೆಯ ಜವಾಬ್ದಾರಿ ಒಪ್ಪಿಸುವುದು ಸರಿಯೆನಿಸಿತು. ಹೇಗಿದ್ದರೂ ಅಮ್ಮ ಬರೋದೇ ಇಲ್ಲ. ಈ ನೆಪದಲ್ಲಿಯಾದರೂ ಬರುತ್ತಿರಲಿ, ಎಂದುಕೊಂಡು ಸಂಜೆ ಆಫೀಸಿನಿಂದ ನೇರವಾಗಿ ಅಮ್ಮನ ಮನೆಗೆ ಹೋದಳು. ಅವರಿಗೆ ವಿಷಯ ತಿಳಿಸಿ ಬಂದಳು.

"ನೋಡು ನಾನು ಒಂದು ವಾರದ ಮಟ್ಟಿಗೆ ನಾಗಪುರಕ್ಕೆ ಹೋಗಬೇಕಾಗಿದೆ. ಅಪ್ಪ–ಅಮ್ಮ ಇಬ್ಬರೂ ಬರ್ತಿರ್ತಾರೆ. ಅಮ್ಮಾಜಿ ಬೇಜಾರೂ ಕಳೆಯುತ್ತೆ. ನೀನು ಆಫೀಸ್

ಮುಗಿದ ಮೇಲೆ ನೇರವಾಗಿ ಮನೆಗೆ ಬಂದು ಬಿಡು. ಒಂದು ವಾರದ ಮಟ್ಟಿಗೆ!" ರಾತ್ರಿ ಶಾಲ್ಮಲಿ ಊಟದ ಟೇಬಲ್ ಮುಂದೆ ಕುಳಿತ ನರೇಶ್‌ಗೆ ಹೇಳಿದಳು.

"ಆಯ್ತು ಪ್ರಯತ್ನ ಮಾಡ್ತೀನಿ" ನರೇಶ್ ನಿಧಾನವಾಗಿ ಹೇಳಿದ.

"ಬೇಲಾ ರಜೆ ಬೇಕೂಂತ ಹೇಳಿದಳು. ಆದರೆ ನಾನು ಅವಳಿಗೆ ಈಗ ಬೇಡ, ಆಮೇಲೆ ತಗೋಂತ ಹೇಳಿದ್ದೀನಿ, ಆಗೋದೇ ಇಲ್ಲಾಂದ್ರೆ ಬೇರೆ ಯಾರಾದ್ರೂ ಬಂದು ಕೆಲಸ ಮಾಡಿ ಕೊಟ್ಟು ಹೋಗೋಕೆ ವ್ಯವಸ್ಥೆ ಮಾಡ್ತೀನಿ. ಕಿಶೋರಿ ಅಡಿಗೆ ಕೆಲಸ ನೋಡಿಕೊಳ್ತಾನೆ." – ಶಾಲ್ಮಲಿ ಹೇಳುತ್ತಲೇ ಇದ್ದಳು.

"ನೀನೇನೂ ತಲೆಕೆಡಿಸಿಕೊಳ್ಳಬೇಡ. ನಾನು ಎಲ್ಲ ನೋಡ್ಕೊಳ್ತೀನಿ" – ಹೇಳುತ್ತಾ ನರೇಶ್ ಸಿಂಕ್ ಬಳಿ ಕೈ ತೊಳೆಯಲು ಎದ್ದು ಹೋದ.

"ಡಾಕ್ಟರ್ ಸಪನಾಗೆ ಫೋನ್ ಮಾಡಿ ಹೇಳಿದ್ದೀನಿ. ದಿನ ಬಿಟ್ಟು ದಿನ ಬಂದು ನೋಡ್ಕೊಂಡು ಹೋಗ್ತಾಳೆ". ಉಪ್ಪಿನಕಾಯಿ ಜಾಡಿಯ ಮುಚ್ಚಳ ಮುಚ್ಚುತ್ತಾ ಹೇಳಿದಳು.

"ನನಗೂ ಏನಾದರೂ ಹೇಳೋದಿದ್ರೆ ಹೇಳು". ನರೇಶ್ ಡ್ರಾಯಿಂಗ್ ರೂಂ ಕಡೆಗೆ ಹೋಗುತ್ತಾ ಹೇಳಿದ.

"ಹೆಚ್ಚು ಕುಡಿಬೇಡ. ದಯವಿಟ್ಟು ನಿನ್ನ ಗೆಳೆಯರನ್ನು ಮನೆಗೆ ಕರೀಬೇಡ. ಹೋದ ಸಲ ಅಮ್ಮ ಹೆದರಿಕೊಂಡು ಬಿಟ್ಟಿದ್ದರು. ಬಹುಶಃ ಸುರೇಶ್ ಪ್ಲೇಟ್ ಗೀಟ್ ಒಡೆದು ಹಾಕಿರಬೇಕು." ಶಾಲ್ಮಲಿ ಕೈ ತೊಳೆಯುತ್ತಾ ನಿಧಾನವಾಗಿ ಹೇಳಿದಳು.

"ತಲೆತಿನ್ನೋಕೆ ಶುರುವಾಯ್ತು". ಅಸಮಾಧಾನದಿಂದ ನರೇಶ್ ಹೇಳಿದ.

"ನೋಡು, ನಾನು ನಿನ್ನನ್ನು ಕುಡೀಬೇಡ ಅಂತ ನಿರ್ಬಂಧಿಸೊಲ್ಲ. ಆದರೆ ಯಾವುದೂ ಅತಿಯಾಗುವುದು ಕೆಡುಕಿಗೆ ದಾರಿ ಮಾಡುತ್ತೆ. ಅಲ್ಲದೆ, ಅದರಿಂದ ಅಮ್ಮಾಜಿಗೆ ದುಃಖ ಆಗುತ್ತೆ. ಅದನ್ನು ಮಾಡುವುದರಿಂದ ನಿನಗೇನು ಸುಖ ಸಿಗುತ್ತೆ?" ಶಾಲ್ಮಲಿ ನರೇಶ್‌ನ ಹಿಂದೆ ಹೋಗುತ್ತಾ ಹೇಳಿದಳು.

"ಶಾಲೂ, ನಿನ್ನ ತರ್ಕ, ನಿನ್ನ ಚರ್ಚೆ, ಮೊದಲು ಇದ್ದದ್ದು ಸಾಲದೂಂತ ಈಗ ಉಪದೇಶ ಬೇರೆ ಶುರು ಮಾಡಿದೆಯಾ?" ತಲೆ ಕೆರೆದುಕೊಳ್ಳುತ್ತಾ ಹೇಳಿದ.

"ಆಯ್ತು ಬಿಡು, ಈ ಸೋಂಪು ತಗೊ". ಶಾಲ್ಮಲಿ ಸೋಂಪಿನ ಡಬ್ಬಿ ಅವನ ಮುಂದೆ ಚಾಚಿದಳು.

"ಜೊತೆಗೆ ಯಾರು ಬರ್ತಿದ್ದಾರೆ?" ನರೇಶ್ ಸೋಫಾದಲ್ಲಿ ಕುಕ್ಕರಿಸುತ್ತಾ ಹೇಳಿದ.

"ಡೈರೆಕ್ಟರ್ ರಾಮನಿವಾಸ್ ಮತ್ತು ಅವರ ಅಸಿಸ್ಟೆಂಟ್ ಬನವಾರಿ" ಶಾಲ್ಮಲಿ ಟಿ.ವಿ. ಬಟನ್ ಒತ್ತುತ್ತಾ ಹೇಳಿದಳು. ಇಂಗ್ಲೀಷ್ ಸಮಾಚಾರ ಶುರುವಾಗಿತ್ತು. ಇಬ್ಬರೂ ಸುಮ್ಮನೆ ಕುಳಿತು ಸೋಂಪು ಮೆಲ್ಲುತ್ತಾ ಕೇಳತೊಡಗಿದರು.

ಶಾಲ್ಮಲಿಗೆ ಜೀವನದಲ್ಲಿ ಬಯಸಿದ್ದೆಲ್ಲವೂ ಲಭಿಸಿತ್ತು. ಸುಖ, ಶ್ರೀಮಂತಿಕೆ, ಗೌರವ ಎಲ್ಲವೂ ಆದರೆ ಮಕ್ಕಳಿಲ್ಲದ ಕೊರತೆ ಕಾಡತೊಡಗಿತ್ತು. ನರೇಶ್ ಸೂಕ್ಷ್ಮವಾಗಿಯಾದರೂ ಇದರ ಬಗ್ಗೆ ಪ್ರಸ್ತಾಪ ಮಾಡಬಹುದೂಂತ ಕಾದಿದ್ದಾಯಿತು. ಆದರೆ ಅವನಿಗೆ ಸ್ನೇಹಿತರು, ಕ್ಲಬ್ ಇವುಗಳಲ್ಲಿ ಎಷ್ಟು ಮುಳುಗಿದ್ದನೆಂದರೆ, ಅವನಿಗೆ ಬದಲಾವಣೆ ಬೇಕಾಗಿಯೇ ಇರಲಿಲ್ಲ. ಸಾಯಂಕಾಲ ಆರೂವರೆ ಗಂಟೆಗೆ ಕಾರ್ ತಗೊಂಡು ಹೋದರೆ ಒಂಬತ್ತು ಗಂಟೆಗೆ ಮುಂಚೆ ಬರುತ್ತಿರಲಿಲ್ಲ. ಈ ಒಂದೆರಡು ಗಂಟೆಗಳು ಕಾಯೋದು ಅವಳಿಗೆ ದೊಡ್ಡದೆನಿಸಲಿಲ್ಲ. ಅತ್ತೆಯನ್ನು ನೋಡಿಕೊಳ್ಳೋದು ಮನೆ ಕೆಲಸ – ಇವುಗಳಲ್ಲೇ ಸಮಯ ಕಳೆದು ಹೋಗುತ್ತಿತ್ತು. ನರೇಶ್ ಬರುವ ಹೊತ್ತಿಗೆ ಅತ್ತೆಯ ಊಟ ಗೀಟ ಎಲ್ಲ ಮುಗಿದು ಮಲಗಿರುತ್ತಿದ್ದರು. ಎಷ್ಟೋ ಸಲ ಬಾಯ್ತುಂಬ ಹರಸುತ್ತಿದ್ದುದುಂಟು. "ಹಾಲು ತುಪ್ಪದಲ್ಲಿ ಕೈ ತೊಳೆಯುವಂತಾಗಲಿ. ಆದಷ್ಟು ಬೇಗ ನಿನ್ನ ಮಡಿಲು ತುಂಬಲಿ ಮಗಳೆ, ನೆಮ್ಮದಿಯಿಂದ ಕಣ್ಮುಚ್ಚುತ್ತೇನೆ" ಎನ್ನುತ್ತಿದ್ದರು.

ಅತ್ತೆಯ ಈ ಮಾತುಗಳು ನೆನಪಾಗಿ ಮನಸ್ಸಿಗೆ ಕಚಗುಳಿ ಇಟ್ಟಂತಾಗುತ್ತಿತ್ತು. ದುಂಡು ದುಂಡಗೆ ಸುಂದರ ಮುಖದ ಮಗುವನ್ನು ಕಣ್ಮುಂದೆ ಚಿತ್ರಿಸಿಕೊಳ್ಳುತ್ತಿದ್ದಳು. ಒಂದು ಸಲ ಶಾಲ್ಮಲಿ, ನರೇಶನ ಮುಂದೆ ತನ್ನ ಆಸೆಯನ್ನು ಹೇಳಿಕೊಂಡೇ ಬಿಟ್ಟಳು.

"ನೀನೇ ನೋಡ್ಕೊಳ್ಬೇಕಾಗುತ್ತೆ. ಯೋಚ್ನೆಮಾಡು" – ಎಂದು ಹೇಳುತ್ತಾ ಪಕ್ಕ ಹೊರಳಿ ಮಲಗಿದ.

ಇವನೆಂಥ ವಿಚಿತ್ರ ಮನುಷ್ಯ. ವಿಷಯ ತಿಳಿದಾಗ ಮಾತಾಡೋದೇ ಇಲ್ಲ. ಮಾತಾಡಿದರೂ ಅಸಂಬದ್ಧವಾಗಿ ಏನೇನೋ ಉದಾಹರಣೆಗಳನ್ನು ಕೊಡೋಕೆ ಶುರು ಮಾಡ್ತಾನೆ. ಶಾಲ್ಮಲಿಗೆ ಸಿಟ್ಟು ಬಂತು. ಅವನ ತೋಳನ್ನು ಒತ್ತಿ ಹೇಳಿದಳು. "ನಾನು ಹೇಳ್ತಿರೋ ವಿಷಯ ನಿನಗೂ ಸಂಬಂಧಿಸಿದ್ದಲ್ಲವೇನು? ಮಲಗಿ ಗೊರಕೆ ಹೊಡೆಯೋಕೆ?"

"ಸರಿ ಹಾಗಾದರೆ ಏನ್ಮಾಡಲಿ? ಕೇಳಿದ್ದಾಯ್ತು ಅದೂ ಆಗುತ್ತೆ." ನರೇಶ್ ಜೋರಾಗಿ ಆಕಳಿಸುತ್ತಾ ಹೇಳಿದ."

"ಸ್ವಲ್ಪ ಮಾತಾಡೋಣ". ಶಾಲ್ಮಲಿ ಹೇಳುತ್ತಾ ನರೇಶನ ತೋಳಿನ ಮೇಲೆ ಭಾವ ವಿಹ್ವಲತೆಯಿಂದ ಗಲ್ಲವನ್ನು ಆನಿಸಿ ನಗಲು ತೊಡಗಿದಳು. ಇದರಲ್ಲಿ ಮಾತಾಡೋದು ಏನಿದೆ? ನಿಂದು ಬಹಳ ವಿಚಿತ್ರ!" ನರೇಶನಿಗೆ ನಗು ಬಂತು. ಎದ್ದು ಕುಳಿತ.

ಈಗ ರಾತ್ರಿ ಹನ್ನೊಂದು ಗಂಟೆ ಆಗ್ತಿದೆ. ಕಾಫಿ ಇಲ್ಲದೆ ಪ್ಲಾನಿಂಗ್ ಕಷ್ಟ ಆಗುತ್ತೆ!" ತಲೆ ಬಳಿ ಇದ್ದ ಸಿಗರೇಟನ್ನು ಎತ್ತಿಕೊಂಡು ಬಾಯಲ್ಲಿಟ್ಟುಕೊಂಡ.

"ಇದೋ ಈಗಲೇ ಮಾಡ್ಕೊಂಡು ಬರ್ತೀನಿ". ಶಾಲ್ಮಲಿ ನರೇಶ್‌ನ ಕೈಯಿಂದ ಲೈಟರ್ ತೆಗೆದುಕೊಂಡು ಸಿಗರೇಟ್ ಹತ್ತಿಸಿದಳು ಗುಣಗುಣಿಸುತ್ತಾ ಕೋಣೆಯಿಂದ ಆಚೆಗೆ ಬಂದಳು.

ಗುಡುಗಿನ ಶಬ್ದ ಕೇಳಿಸಿತು. ನರೇಶ್ ಕಿಟಕಿಯಿಂದ ಹೊರಗೆ ಇಣುಕಿದ. ನಕ್ಷತ್ರಗಳು ಮರೆಯಾಗಿದ್ದವು. ಮೋಡಗಳು ಕವಿದಿದ್ದವು. ಹಾಸಿಗೆಯಿಂದ ಎದ್ದು ಕೆಳಗೆ ಇಳಿದು ಅಡುಗೆ ಮನೆ ಕಡೆ ಮುಖ ಮಾಡಿ ಹೇಳಿದ. – ಶಾಲೂ ಕಾಫಿ ವರಾಂಡಾದಲ್ಲಿ ಕುಡಿಯೋಣ."

ಮಳೆ ಹನಿಯ ತೊಡಗಿತು. ತಣ್ಣನೆಯ ಗಾಳಿಯಲ್ಲಿ ಮೊದಲ ಮಳೆಯ ಕಂಪು ವಾತಾವರಣವನ್ನು ತುಂಬಿ ಹಿತವಾಗಿಸಿತ್ತು. ಸಿಗರೇಟು ಸೇದಿದ ಆನಂದ ನರೇಶನ ಮುಖದಲ್ಲಿ ಬಿಂಬಿಸುತ್ತಿತ್ತು. ಶಾಲ್ಮಲಿ ಕಾಫಿ ಮಾಡಿ ತರುವಷ್ಟರಲ್ಲಿ ಹನಿ ಹನಿಯಾಗಿ ಬೀಳುತ್ತಿದ್ದ ಮಳೆ ಧಾರಾಕಾರವಾಗಿ ಸುರಿಯತೊಡಗಿತು. ಮಳೆಯ ಚಿನುಕುಗಳು ವರಾಂಡಕ್ಕೂ ಹಾರಿ ಥಂಡಿಯಾಗಿತ್ತು. ಶಾಲ್ಮಲಿ ಕಾಫಿ ಟ್ರೇಯನ್ನು ಮೇಜಿನ ಮೇಲಿಟ್ಟು, ಬಟ್ಟಲನ್ನು ನರೇಶನ ಕೈಗೆ ಕೊಟ್ಟು ತಾನೂ ಒಂದು ಬಟ್ಟಲನ್ನು ಕೈಗೆತ್ತಿಕೊಂಡು ಕಾಫಿ ಗುಟುಕರಿಸುತ್ತಾ ಕುಳಿತವಳು ಇದ್ದಕ್ಕಿದ್ದಂತೆ ಬಟ್ಟಲನ್ನು ಮೇಜಿನ ಮೇಲಿರಿಸಿ, "ನರೇಶ್ ನೀನೂ ಬರ್ತೀಯ?" ಎಂದು ಕೇಳುತ್ತಾ ಮೆಟ್ಟಿಲಿಳಿದು ಹೊರಗೆ ಬಂದು ಮಳೆಗೆ ಮೈಯ್ಯೊಡ್ಡಿ ನಿಂತಳು.

ಅವಳ ಅವತಾರ ನೋಡಿ ನರೇಶನಿಗೆ ನಗು ಬಂತು. 'ಶಾಲೂ ನಿಜವಾಗಿಯೂ ಇನ್ನೂ ಮಗು, ಮುಗ್ಧೆ' ತಿಳಿವಳಿಕೆಯಿದೆ, ಸೌಂದರ್ಯ ಇದೆ, ಗಾಂಭೀರ್ಯ ಇದೆ, ಇಷ್ಟೆಲ್ಲ ಹೊಂದಿರುವ ಹೆಣ್ಣನ್ನು ಹೆಂಡತಿಯಾಗಿ ಪಡೆದ ಯಾರಿಗೆ ತಾನೆ ಹೆಮ್ಮೆ ಅಂತ ಅನಿಸೋಲ್ಲ! ಇವಳಲ್ಲಿ ಎಂತಹ ಮೋಹಕ ವ್ಯಕ್ತಿತ್ವದ ಆಕರ್ಷಣೆಯಿದೆ! ಮಾತಿನಲ್ಲೂ ಮಧುರ! ಒಬ್ಬ ಗಂಡಸು ಹೆಣ್ಣಿನಲ್ಲಿ ಇದ್ದಕ್ಕಿಂತ ಇನ್ನೇನನ್ನು ಕಾಣಲು ಸಾಧ್ಯ? ಪಡೆಯಲು ಸಾಧ್ಯ? ಯಾವುದರಲ್ಲಿ ಅವನಿಗೆ ತೃಪ್ತಿ ಬೇಕಾಗಿದೆ? ಹಣದಲ್ಲಿ, ಮೋಹದಲ್ಲಿ, ಸೇವೆಯಲ್ಲಿ, ಸಮರ್ಪಣ ಭಾವದಲ್ಲಿ, ಆದರದಲ್ಲಿ ಸೇರಿವೆ. ನರೇಶ ಕುಳಿತೇ ಇದ್ದ. ಶಾಲ್ಮಲಿ ಕೈಗಳನ್ನು ಚಾಚಿ ಮಳೆಯಲ್ಲಿ ತೋಯುತ್ತಾ, ನಗುತ್ತಾ, ಅರಳುವುದನ್ನು ಕಂಡಾಗ ಅವನಿಗೆ ವಿಚಿತ್ರ ಆನಂದದ ಅನುಭವವಾಯಿತು.

"ಸಾಕು ಬಾ. ಮಳೆ ಸ್ನಾನ ನಿಲ್ಲಿಸು. ಶೀತ ಆಗುತ್ತೆ."

ನರೇಶ್ ಅವಳನ್ನು ಕರೆದ.

"ನೀನು ಬರೋದಿಲ್ವೆ?" ಶಾಲ್ಮಲಿ ಕೇಳಿದಳು.

"ಇಲ್ಲಪ್ಪ!" ಎಂದು ಹೇಳುತ್ತಾ ನರೇಶ್ ವರಾಂಡದಲ್ಲಿ ನಿಂತಿದ್ದ ಶಾಲ್ಮಲಿಯ ತೊಯ್ದ ಮುಖದ ಮೇಲಿಂದ ಕೂದಲನ್ನು ಸರಿಸಿದ.

ಡ್ರೆಸ್ಸಿಂಗ್ ಗೌನ್ನಲ್ಲಿದ್ದ ಶಾಲ್ಮಲಿ ವಿಚಿತ್ರ ಸುಖದಲ್ಲಿ ಮುಳುಗಿ ಕಾಫಿ ಗುಟುಕರಿಸಿದಳು.

"ಇವಳೂಂದ್ರೆ ನನಗೆ ಸಾಯೋ ಹಾಗೆ ಆಗುತ್ತೆ! ಇನ್ನೂ ಎಷ್ಟು ಜನ ಇವಳಿಗಾಗಿ ಪ್ರಾಣ ಬಿಡ್ತಿದ್ದಾರೋ!" ಇದ್ದಕ್ಕಿದ್ದಂತೆ ಅನುಮಾನದ ಕಾಳ ಸರ್ಪವೊಂದು ಮಳೆಯಲ್ಲಿ ತೋಯುತ್ತಾ ಎಲ್ಲಿಂದಲೋ ಬಂದು ನರೇಶನ ತಲೆ ಹೊಕ್ಕಿತು.

ರಾತ್ರಿಯ ಮಳೆ ಶಾಲ್ಮಲಿಯ ಮುಖದ ಮೇಲೆ ಒಂದು ಬಗೆಯ ಕಾಂತಿಯನ್ನು ಚೆಲ್ಲಿತ್ತು. ಹೊಳೆವ ಕಣ್ಣುಗಳು ಮಂದಹಾಸದಿಂದ ಮಿರುಗುವ ತುಟಿಗಳು, ತನ್ನೊಳಗೆ ತಾನೇ ಗುಣುಗುಣಿಸುತ್ತಿರುವ ಧ್ವನಿ ಕೇಳಿ ಪತ್ರಿಕೆ ಓದುತ್ತಿದ್ದ ನರೇಶ್ ಸ್ತಂಭಿತನಾದ. ತಲೆ ಕೊಡವಿದ. ಆದರೂ ಒಳಗೆ ಹೊಕ್ಕ ನಾಗರದ ಸರಸರ ಸದ್ದು ನಿಲ್ಲಲಿಲ್ಲ.

"ಇದು ನನ್ನ ಭ್ರಮೆಯೋ ಅಥವಾ ಪುರುಷ ಸಹಜ ಅಸೂಯೆಯೋ?" – ಎದ್ದು ತೂಕಡಿಸುತ್ತಲೇ ಬರಿಗಾಲಲ್ಲಿ ನಡೆದು ಬಂದು ವರಾಂಡದಲ್ಲಿ ನಿಂತ.

* * *

ಎಲೆಗಳ ಮೇಲೆ ಬಿದ್ದ ಮಳೆ ಹನಿಗಳು ಹೊಳೆಯುತ್ತಿದ್ದವು. ಇಡೀ ವಾತಾವರಣವೇ ಮಳೆಯಿಂದ ತೊಯ್ದು ಶುಭ್ರವಾಗಿತ್ತು. ಗುಣುಗುಣಿಸುತ್ತಾ ಪೋರ್ಟಿಕೋವನ್ನು ಹಾದು ನಡೆಯತೊಡಗಿದ. 'ನೆನ್ನೆಯ ತನಕ ಎಷ್ಟು ಬಿಸಿಲಿತ್ತು. ಇವತ್ತು ನೋಡಿದರೆ ಹಾಯೆನಿಸುತ್ತೆ! ದಿಲ್ಲಿಯ ಹವಾಗುಣವೇ ಸರಿ!

"ಏನಯ್ಯಾ ಮಿತ್ರ. ಇನ್ನೂ ರೆಡಿಯಾಗಿಲ್ವೆ? ಒಂಬತ್ತು ಗಂಟೆ ಆಯ್ತು". ಎದುರುಗಡೆಯಿಂದ ಗಿರೀಶ ಬರುತ್ತಿರುವುದು ಕಾಣಿಸಿತು.

"ಇದೋ ಬಂದೇ ಬಿಟಡ್ಜೆ" ನರೇಶ್ ನಗುತ್ತಾ ಹೇಳಿದ.

"ಹತ್ತುಗಂಟೆಗೆ ಅಲ್ಲಿರಬೇಕಲ್ಲಯ್ಯ". ಗಿರೀಶ ಸ್ಕೂಟರ್ ಇಳಿಯುತ್ತಾ ಹೇಳಿದ.

"ಹೋಗಬಹುದು ಬಿಡೊ". ಭುಜ ಹಾರಿಸಿದ.

"ನಿನ್ನ ಹೆಂಡತಿ ಏನೋ ಆಫೀಸರ್. ಆದರೆ ನೀನು ಲಾರ್ಡ್ ಸಾಹಬ್ ಅಲ್ವಲ್ಲ. ಬಾಸ್ ಆದವರಿಗೆ ಇದೆಲ್ಲ, ನಮಗೆಲ್ಲಿ." – ಗಿರೀಶ್ ಸಿಟ್ಟಾಗಿ ಹೇಳಿದ.

"ಅಂದ್ರೆ?" ಸಾಮಾನ್ಯವಾಗಿ ವಿನೋದವಾಗಿ ಮಾತಾಡುತ್ತಿದ್ದ ಗಿರೀಶನ ಮಾತು ನರೇಶನಲ್ಲಿ ಗರ್ವ ಮೂಡಿಸಿತು.

"ಅಂದ್ರೆ ಏನು, ಸ್ಪಷ್ಟವಾಗಿಯೇ ಇದೆಯಲ್ಲ. ಈ ಆಡಂಬರ ಬರಸಾತಿ ಮನೆಯಲ್ಲಿತ್ತಾ?.... ನೋಡು ಅತ್ತಿಗೆ ಬಂದ್ರು.....ನಮಸ್ಕಾರ!" ಶಾಲ್ಮಲಿಯನ್ನು ನೋಡಿದ ಗಿರೀಶ್ ಸಂಕೋಚದಿಂದ, ಕೈ ಜೋಡಿಸಿದ.

"ನಮಸ್ಕಾರ! ಹೇಗಿದ್ದೀರಿ ಗಿರೀಶ್ ಅವರೇ?" ಶಾಲ್ಮಲಿ ಕೇಳಿದಳು.

"ಎಲ್ಲ ತಮ್ಮ ಕೃಪೆ" ಗಿರೀಶ್ ಹೇಳಿದ.

"ಚಹಾ ತಗೋತೀರಾ ಇಲ್ಲ ಶರಬತ್? ಈಗಲೇ ಕಳಿಸಿಕೊಡ್ತೀನಿ" ಹೇಳುತ್ತಾ ಶಾಲ್ಮಲಿ ಬಂದವಳೇ ಮತ್ತೆ ಹಿಂತಿರುಗಿದಳು.

"ಏನಾಯ್ತು? ಧೈರ್ಯ ಸತ್ತು ಹೋಯ್ತಾ?" ನರೇಶ್ ಗಿರೀಶ್‌ನ ಬೆನ್ನ ಮೇಲೆ ಹೊಡೆದ.

"ಲೋ ಮಿತ್ರ.....!' ಕಿಸಿಯುತ್ತಾ ಗಿರೀಶ್ ತಲೆ ಕೆರೆದುಕೊಂಡ.

"ಜೋರು ಮಾಡಿದೆ! ಈಗ ಮಾತಾಡೋಕೆ ಆಗೋದಿಲ್ಲೇನು?..... ಏನು ಗೊತ್ತು ನಾಳೆ ಇದೇ ಆಫೀಸಿಗೆ ಹೋಗಬೇಕಾಗುತ್ತೋ ಏನೋ!" ನರೇಶ್ ನಕ್ಕ.

"ಹೋದರು ಹೋಗಬಹುದು. ಈ ಪ್ರಪಂಚದಲ್ಲಿ ಏನು ಬೇಕಾದರೂ ಆಗಬಹುದು..... ಮೊದಲು ನೀನು ಹೋಗಿ ರೆಡಿಯಾಗು ಮಾರಾಯ!" ಗಾಭರಿಯಿಂದ ಗಡಿಯಾರ ನೋಡಿ ಹೇಳಿದ.

"ನೀನು ಚಾ ಕುಡಿ. ಅತ್ತಿಗೆ ಹತ್ತಿರ ಮಾತಾಡ್ತಿರು. ನಾನು ಈಗಲೇ ಬಂದು ಬಿಟ್ಟೆ!" ನಗುತ್ತಾ ನರೇಶ್ ಮನೆ ಒಳಗೆ ನಡೆದ.

"ಹೋಗ್ತೀಯೋ ಇಲ್ಲೋ", ಎನ್ನುತ್ತಾ ನರೇಶನ ಮೇಲೆ ಕೈ ಎತ್ತಿದ. ಹೋಗಿ ಕುರ್ಚಿಯಲ್ಲಿ ಕುಳಿತ. ಗಿರೀಶ್.

"ಒಳಗೆ ಬಹಳ ಸೆಕೆ. ಅದಕ್ಕೆ ಇಲ್ಲಿಗೇ ಚಾ ತರಿಸಿದೆ" – ಹೇಳುತ್ತಾ ಶಾಲ್ಮಲಿ ಹೊರಗೆ ಬಂದಳು. ಬೇಲಾ ಇಟ್ಟಿದ್ದ ಚಹದ ಟ್ರೇ ಕಡೆಗೆ ಕೈ ಚಾಚಿದಳು.

"ಏನಂದ್ರಿ!" ಗಿರೀಶ ಹೇಳಿದ.

"ಆರಾಮವಾಗಿ ಚಾ ಕುಡೀರಿ. ಬಂದೆ!..,... ಇಲ್ಲಾಂದ್ರೆ ನನಗೂ ಲೇಟಾಗುತ್ತೆ" – ಹೇಳುತ್ತಾ ಶಾಲ್ಮಲಿ ಎದ್ದು ಹೊರಟಳು.

ಅವಳು ಹೋದ ಮೇಲೆ ಗಿರೀಶ್ ನಿರಾಳವಾಗಿ ಉಸಿರಾಡಿದ. ಬಿಸಿ ಬಿಸಿ ಚಹವನ್ನು ಗುಟುಕು ಗುಟುಕಾಗಿ ಕುಡಿಯಲಾರಂಭಿಸಿದ. ಮಧ್ಯೆ ಮಧ್ಯೆ ಗಡಿಯಾರದ ಮುಳ್ಳುಗಳನ್ನು ಗಮನಿಸುತ್ತಿದ್ದ. ದೊಡ್ಡ ಮುಳ್ಳು ನಿಮಿಷಗಳನ್ನು ದಾಟಿ ಹೋಗುತ್ತಿತ್ತು.

ಶಾಲ್ಮಲಿಗೆ ಆಫೀಸ್ ಕೆಲಸದಿಂದ ತಲೆ ಕೆಟ್ಟು ಹೋಗಿತ್ತು. ತನಗೆ ಗೊತ್ತಾಗಿರೋದನ್ನು ಬೇರೆಯವರಿಗೆ ಹೇಳಲೂ ಸಾಧ್ಯವಾಗುವಂತಿರಲಿಲ್ಲ. ಹೇಗೋ ಅವಳಿಗೆ ಮುಂದಾಗುವ ಅನಾಹುತದ ವಾಸನೆ ಹತ್ತಿಬಿಡುತ್ತಿತ್ತು. ಅದು ತಿಳಿದ ಕ್ಷಣದಿಂದ ಶಾಲ್ಮಲಿಯ ಮನಸ್ಸಿನಲ್ಲಿ ಕೋಲಾಹಲವೆದ್ದಿತ್ತು. ಅವಳ ಅನುಮಾನ, ಆತಂಕಗಳಿಗೆ ಬಲವಾದ ಯಾವುದೇ ಕಾರಣ ಇರಲಿಲ್ಲ. ಆದರೂ ಅದನ್ನೇ ಯೋಚಿಸುತ್ತಾ, ಇಲ್ಲ ಸಲ್ಲದ್ದನ್ನು ಕಲ್ಪಿಸಿಕೊಳ್ಳುತ್ತ ಅನವಶ್ಯಕವಾಗಿ ತಲೆ ಕೆಡಿಸಿಕೊಂಡಿದ್ದಳು. ಯಾರಿಗಾದರೂ ತನ್ನ ಅನುಮಾನ, ಸಂದೇಹಗಳನ್ನು ಹೇಳಿದರೆ, ಯಾರೂ ನಂಬುವಂತಿರಲಿಲ್ಲ. ಅವುಗಳನ್ನು ನಿರಾಧಾರವಾದ್ದೆಂದು ತಳ್ಳಿ ಹಾಕುವ ಸಾಧ್ಯತೆಯೇ ಹೆಚ್ಚಾಗಿತ್ತು.

ತನ್ನ ಸುತ್ತಲೂ ನಡೀತಿರೋದು ಪ್ರತ್ಯಕ್ಷವಾಗಿ ನೋಡುತ್ತಿರುವಾಗ, ತನ್ನ ಸಂದೇಹಗಳು ಯಾಕೆ ನಿಜವಾಗಿರಬಾರದು? ಸಂಜೆ ಆಫೀಸಿನಿಂದ ಮನೆಗೆ ಬಂದಾಗ ಅವಳ ತಲೆ ತುಂಬ ಇವೇ ಆಲೋಚನೆಗಳು!

"ಯಾಕೆ ಶಾಲೂ ಹಾಗಿದ್ದೀ?" ಅವಳ ಮುಖ ನೋಡಿ ಕೇಳಿದ ನರೇಶ್.

"ಏನೂ ಇಲ್ಲ" ಒಣನಗೆ ನಕ್ಕಳು.

"ಆದರೂ!" ನರೇಶ್ ಆಗ್ರಹ ಪಡಿಸಿದ.

"ಕಳೆದ ಸೋಮವಾರದ ಮೀಟಿಂಗ್ ಬಗ್ಗೆ ಯೋಚ್ನೆ ಮಾಡ್ತಿದ್ದ. ಸಮೀರ್ ಪಾಂಡೆ ಕೆಲವು ಪ್ರಶ್ನೆಗಳನ್ನು ಎತ್ತಿದರು. ಆಗ ನನಗೆ ಅನ್ನಿಸಿತು. ಇವುಗಳಿಗೆ ಸಂಬಂಧಿಸಿದಂತೆ ಏನೋ ಮಸಲತ್ತು ನಡೀತಿದೆ' ಅಂತ. ಅಲ್ಲದೆ ಡೈರೆಕ್ಟರ್ ರಾಮನಿವಾಸ್ ತುಂಬ ಜನಾನ ಇದರಲ್ಲಿ ಇನ್ ವಾಲ್ವ್ ಮಾಡೋ ಹಾಗೆ ಕಾಣುತ್ತೆ. ಆಮೇಲೆ....."

"ಹೂ! ಇದು ಸತ್ಯನಾರಾಯಣ ಕಥೆ ಆದ ಹಾಗಾಯ್ತು" – ನರೇಶ್ ಹೇಳಿದ.

"ಅಮ್ಮಾಜಿ ಕರೀತಿದ್ದಾರೆ ನಿಮ್ಮನ್ನು". ಬೇಲಾ ಚಹಾ ಕೊಡುತ್ತ ನಿಧಾನವಾಗಿ ಶಾಲ್ಮಲಿಗೆ ಹೇಳಿದಳು.

"ಈಗಲೇ ಬಂದೆ" – ಹೇಳುತ್ತಾ ಶಾಲ್ಮಲಿ ಎದ್ದಳು.

"ನೀವಿಬ್ಬರೂ ಮಾತಾಡ್ತಾ ಕೂತ್ಬಿಟ್ರೆ, ನನ್ನ ಸಾಯಂಕಾಲಗಳೆಲ್ಲ ಹಾಳಾಗುತ್ತೆ. ನಾನು ಹೊರಟೆ. ರಾತ್ರಿ ಊಟಕ್ಕೆ ಬರೋದಿಲ್ಲ, ಕಾಯಬೇಡ" – ಹೇಳುತ್ತ ನರೇಶ್ ಎದ್ದ.

"ಯಾರ ಮನೇಲಿ ಇವತ್ತು?" ಶಾಲ್ಮಲಿ ಆಕಳಿಸುತ್ತಾ ಕೇಳಿದಳು.

ಕುಮುದ್ ಮನೇಲಿ", – ನರೇಶ್ ಟೈ ಸರಿಮಾಡಿಕೊಳ್ಳುತ್ತಾ ಹೇಳಿದ.

"ನನಗಿಲ್ವ ಇನ್ವಿಟೇಷನ್?" – ಆಶ್ಚರ್ಯದಿಂದ ಶಾಲ್ಮಲಿ ಕೇಳಿದಳು.

"ಇತ್ತು. ಆದರೆ ನಾನೇ ಅವಳು ಬರೋದಿಲ್ಲ ಅಂತ ಹೇಳಿಬಿಟ್ಟೆ. ನಂ ಜೊತೆ ಕುಡಿಯೋದೂ ಇಲ್ಲ, ನಮ್ಮನ್ನು ಕುಡಿಯೋಕೂ ಬಿಡೋಲ್ಲ. ಅದಕ್ಕೇ ನಾನೇ ಬೇಡಾಂತ ಅವರಿಗೆ ಹೇಳಿ ಬಿಟ್ಟೆ". – ನಗುತ್ತಾ ಹೇಳಿದ. ಕಾರು ಹೊರಗೆ ತೆಗೆಯಲು ಷೆಡ್‌ನ ಕಡೆ ನಡೆದ.

'ನರೇಶ್ ಈಚೀಚೆಗೆ ನನ್ನನ್ನು ಕರೆಯೋದೇ ಇಲ್ಲ. ಏನಾದರೂ ನೆಪ ಹೇಳೋಕೆ ಶುರು ಮಾಡಿದ್ದಾನೆ' ಎಂದು ಅವನನ್ನೇ ದಿಟ್ಟಿಸುತ್ತಾ ತನ್ನಲ್ಲೇ ಹೇಳಿಕೊಂಡಳು.

ಕಾರು ಗೇಟಿನಿಂದ ಹೊರಗೆ ಹೊರಟಿತು. ಶಾಲ್ಮಲಿ ಸುಮ್ಮನೆ ನೋಡುತ್ತಾ ಕುಳಿತಳು. ನಂತರ ಒಳಗೆ ಹೋಗಿ ಬೇಲಾಗೆ ಚಹಾನ ಅಮ್ಮಾಜಿ ರೂಂಗೆ ತರಲು ಹೇಳಿ. ಬೆಡ್ರೂಂ ಹೊಕ್ಕಳು. ಪರ್ಸ್‌ನ್ನು ಪಕ್ಕಕ್ಕೆ ಇರಿಸಿ ಮುಖ ತೊಳೆದುಕೊಂಡಳು.

ಸ್ಯಾಂಡಲ್ಸ್ ಬಿಚ್ಚಿಟ್ಟು, ಸ್ಲಿಪ್ಪರ್ ಮೆಟ್ಟಿಕೊಂಡು ಅಮ್ಮಾಜಿ ಇದ್ದ ರೂಂಗೆ ಹೋದಳು.

"ಹೇಗಿದ್ದೀರಿ ಅಮ್ಮಾಜಿ" ಶಾಲ್ಮಲಿ ಅವರ ಬಳಿ ಕುಳಿತುಕೊಳ್ಳುತ್ತಾ ಕೇಳಿದಳು.

"ಚೆನ್ನಾಗಿ ಇದ್ದೀನಮ್ಮ." ನಕ್ಕು ಹೇಳಿದರು.

"ಚಹಾ ಮಾಡಲೇ?" ಶಾಲ್ಮಲಿ ಕೇಳಿದಳು.

"ಬೇಡ ಮಗು. ಈಗ ತಾನೇ ಬೇಲಾ ಹಾಲು ತಂದುಕೊಟ್ಟಳು." ಎಂದು ಹೇಳುತ್ತಾ ದಿಂಬಿನ ಕೆಳಗೆ ಕೈ ಇರಿಸಿ ಏನನ್ನೋ ಹುಡುಕಾಡ ತೊಡಗಿದರು.

"ನಾನು ತೆಗೆದು ಕೊಡಲೇ?" ಶಾಲ್ಮಲಿ ಕೇಳಿದಳು.

"ಊರಿನಿಂದ ಕಾಗದ ಬಂದಿತ್ತು ಮಗು. ಅವನಿಗೆ ಓದೂಂತ ಕೊಟ್ಟೆ. ಆದರೆ ಅವನಿಗೆ ಓದಲು ಪುರಸೊತ್ತಿಲ್ಲ? ನಿನ್ನ ಸೊಸೆ ಬರ್ತಾಳೆ. ಓದಿ ಹೇಳ್ತಾಳೆ. ನನಗೀಗ ಹೊತ್ತಾಯ್ತು' ಅಂತ ಹೇಳಿ ಹೊರಟೇ ಬಿಟ್ಟ" ಅಮ್ಮಾಜಿ ಪತ್ರ ಶಾಲ್ಮಲಿ ಕೈಯಲ್ಲಿರಿಸಿದರು.

"ಹೌದಮ್ಮ ಆಫೀಸ್ ಕೆಲಸ. ಅರ್ಜೆಂಟ್ ಅಂತ ಹೇಳ್ತಿದ್ರು". – ಶಾಲ್ಮಲಿ ಕಾಗದ ಬಿಡಿಸಿ ಓದಲು ತೊಡಗಿದಳು. "ದೇವರು ನಿನ್ನನ್ನು ಚೆನ್ನಾಗಿ ಇಟ್ಟಿರಲಿ ಮಗು. ಹೊಟ್ಟೇಲಿ ಹುಟ್ಟಿದ ಮಗಳೂ ಕೂಡಾ ನಿನ್ನ ಹಾಗೆ ಇಷ್ಟು ಚೆನ್ನಾಗಿ ನೋಡಿಕೊಳ್ಳೋದು ಸಾಧ್ಯವಿಲ್ಲ. ಎಷ್ಟಾದರೂ ಬೇರೆಯವರ ಸ್ವತ್ತು ಬೇರೆಯವರದೇ!" ಪ್ರೀತಿಯಿಂದ ಶಾಲ್ಮಲಿಯ ಮೊಣಕಾಲ ಮೇಲೆ ಕೈಯಾಡಿಸಿದರು.

"ನಾನು ನಿಮ್ಮ ಮಗಳೇ ಅಲ್ವೆ!" ಅವರನ್ನು ಅಪ್ಪಿ ಹೇಳಿದಳು.

"ಇದಕ್ಕೆ ಉತ್ತರ ಬರೆದು ಬಿಡು. ನನ್ನ ಮನಸಿಗೂ ಸಂತೋಷವಾಗುತ್ತೆ."

ಅಮ್ಮಾಜಿ ನಿಧಾನವಾಗಿ ಯೋಚಿಸುತ್ತಾ ಹೇಳಿದರು.

"ಇದೋ, ಚಾ ಕುಡಿದು ಬಿಟ್ಟು, ಕಾಗದ, ಪೆನ್ನು ತರ್ತೀನಿ" – ಶಾಲ್ಮಲಿ ಹೇಳಿದಳು.

ರಾತ್ರಿ, ಲ್ಯಾಂಪ್‌ನ ಬೆಳಕಿನಲ್ಲಿ ಕೆಲವು ಕಾಗದ ಪತ್ರಗಳನ್ನು ನೋಡುತ್ತಾ, ಯೋಚಿಸುತ್ತಿದ್ದಳು. ಮುದಿವಯಸ್ಸಿನಲ್ಲಿ ಅಪ್ಪ ಅಮ್ಮಂದಿರಿಗೆ ಮಕ್ಕಳ ಅಗತ್ಯ ಹೆಚ್ಚಾಗಿರುವಾಗಲೇ, ಅವರು ಎಷ್ಟು ದೂರ ಹೊರಟು ಹೋಗ್ತಾರೆ. ತಮ್ಮ ತಮ್ಮದೇ ಕೆಲಸಗಳಲ್ಲಿ ಮುಳುಗಿ ಬಿಡ್ತಾರೆ. ಅಪ್ಪ-ಅಮ್ಮಂದಿರ ಕಾಳಜೀನೇ ಇಲ್ಲದೆ ಎಲ್ಲದರಿಂದ ಬಿಡುಗಡೆ ಆದ ಹಾಗೆ ನಡೆದುಕೊಳ್ತಾರೆ. ತಿಂಗಳಿಗೆ ಒಂದಿಷ್ಟು ಹಣ ಕಳಿಸುವುದರೊಂದಿಗೆ ತಮ್ಮ ಜವಾಬ್ದಾರಿ ಮುಗೀತು ಅಂತ ಭಾವಿಸ್ತಾರೆ, ಅದೇ ನನ್ನ ಗಂಡನ ಹಾಗೆ, ಹಣ ಕಳಿಸಿಬಿಟ್ಟು.....

ಫೈಲುಗಳನ್ನು ಮುಚ್ಚಿಟ್ಟು ಗಡಿಯಾರ ನೋಡಿಕೊಂಡಳು. ಹತ್ತೂವರೆ ಆಗಿತ್ತು. ಬೇಲಾ ಅಡುಗೆ ಮನೆ ಎಲ್ಲ ಒಪ್ಪಗೊಳಿಸಿದ್ದಳು. ಅವಳ ಖಟ್ ಖಟ್ ಶಬ್ದ ನಿಂತಿತ್ತು. ಶಾಲ್ಮಲಿ ಎದ್ದು ಕೊಠಡಿಯಲ್ಲಿ ನಿಧಾನವಾಗಿ ಅಡ್ಡಾಡತೊಡಗಿದಳು.

"ಕೆಲಸ ಮುಗೀತು". ಬೇಲಾ ಸೀರೆಯ ಸೆರಗಿನಲ್ಲಿ ಕೈ ಒರೆಸಿಕೊಳ್ಳುತ್ತ ಪರದೆಯ ಹಿಂದಿನಿಂದ ಹೇಳಿದಳು.

"ಸರಿ!" ಎಂದು ಹೇಳಿ ಅಡುಗೆ ಮನೆ ಬಾಗಿಲು ಮುಚ್ಚಿದಳು. ಮತ್ತು ಡ್ರಾಯಿಂಗ್ ರೂಮು ಮತ್ತು ಬಾಗಿಲಿನ ಚಿಲಕ ಹಾಕಿ, ಒಳಗೆ ಬಂದು ಮಲಗಿದಳು.

ಹೊರಗೆ ನಿಸ್ತಬ್ಧತೆ ಕವಿಯಿತು. ಘೂರ್ಕಾದ ಖಟ್-ಖಟ್ ಪ್ರಾರಂಭವಾಯಿತು. ಶಾಲ್ಮಲಿ ಶೂನ್ಯದೃಷ್ಟಿಯಿಂದ ಮೇಲೆ ಸೀಲಿಂಗ ದಿಟ್ಟಿಸುತ್ತಿದ್ದಳು.

* * *

ಹೋಳಿ ಹಬ್ಬಕ್ಕೆ ಮೂರು ದಿವಸ ಮಾತ್ರ ಬಾಕಿ ಇತ್ತು. ಶಾಲ್ಮಲಿ ಸಮಯ ಸಿಕ್ಕಾಗ ಕಡುಬಿನ ಹೂರಣ ಮಾಡಿಟ್ಟಿದ್ದಳು. ಆದರೆ ಕಡುಬು ಮಾಡುವುದಕ್ಕೆ ಅವಕಾಶವೇ ಬರಲಿಲ್ಲ. ಅಮ್ಮಾಜಿ ಎಷ್ಟೋ ಸಲ ನೆನಪು ಮಾಡಿದಳು. ಕೂತು ತಾನೆಲ್ಲ ಹೂರಣ ತುಂಬಿಸಿ ಕೊಡುವುದಾಗಿಯೂ ಬೇಲಾ ಎಣ್ಣೆಯಲ್ಲಿ ಕರೆದು ಕೊಡುತ್ತಾಳೆಂದೂ ಹೇಳಿದರು. ಆದರೆ ಶಾಲ್ಮಲಿ ಪ್ರತಿವರ್ಷದ ಹಾಗೆ ತಾನೇ ಮಾಡಬೇಕೆಂದುಕೊಂಡಳು.

ಆಫೀಸಿನಿಂದ ಬಂದ ಕೂಡಲೇ ಬೇಲಾಗೆ ಮೈದಾ ಹಿಟ್ಟು ಕಲೆಸುವುದಕ್ಕೆ ಹೇಳಿ, ಚಹ ಕುಡಿಯಲು ಕುಳಿತಳು. ಬೇಕಾದ ವಸ್ತುಗಳನ್ನೆಲ್ಲಾ ಬೆಳಿಗ್ಗೇನೇ ತೆಗೆದಿರಿಸಿದ್ದಳು. ನರೇಶ್ ಇನ್ನೂ ಬಂದಿರಲಿಲ್ಲ. ಅಮ್ಮಾಜಿ ಕೋಣೆಯಲ್ಲಿಯೇ ಕುಳಿತು ಚಹ ಕುಡಿಯುತ್ತಾ ಬೆಳಗಿನ ಸಮಾಚಾರ ಪತ್ರದ ಪುಟಗಳನ್ನು ತಿರುವಿ ಹಾಕುತ್ತಿದ್ದಳು ರೋಚಕ ಸುದ್ದಿಗಳಿದ್ದರೆ, ಅಮ್ಮಾಜಿಗೆ ಓದಿ ಹೇಳುತ್ತಿದ್ದರು.

ಇದೇ ಕೋಣೆಯಲ್ಲಿಯೇ ಮೇಜಿನ ಮೇಲೆ ಪೇಪರ್ ಹಾಸಿ ಶಾಲ್ಮಲಿ ಮಣೆ ಮೇಲೆ ಪೂರಿಗಳನ್ನು ಲಟ್ಟಿಸಿದಳು. ಅಮ್ಮಾಜಿ ಅದರಲ್ಲಿ ಹೂರಣ ತುಂಬಿ ತುದಿಗಳನ್ನು ಮಡಚುತ್ತಿದ್ದರು.

"ನಾನು ಒಬ್ಬಳೇನೆ ಎರಡು ಮೂರು ಕಿಲೋದಷ್ಟು ಮೈದಾನದಲ್ಲಿ ಕಡುಬುಗಳನ್ನು ಒಂದೇ ಸಲಕ್ಕೆ ಮಾಡಿ ಬಿಡುತ್ತಿದ್ದೆ. ನನ್ನ ಅತ್ತೆ ಸ್ವಲ್ಪ ನಿಷ್ಠುರ ಸ್ವಭಾವದವರು. ಆದರೆ ಮನಸ್ಸಿನಿಂದ ಒಳ್ಳೆಯವರು. ಆದರೆ ಪ್ರತಿಸಲ ಯಾರು ಮನಸ್ಸನ್ನು ಬಿಚ್ಚಿ ನೋಡ್ತಾರೆ ಹೇಳು! ನಾನು ತುಂಬಿದ ಬಸುರಿ. ಹೋಳಿ ಹಬ್ಬ ಮುಗೀತು. ಇವನು ಹುಟ್ಟಿದ. ನಗುತ್ತಾ ಸೀರೆಯ ಸೆರಗಿನಿಂದ ಮುಖ ಮುಚ್ಚಿಕೊಂಡರು.

"ಆಮೇಲೆ?" – ಅವರ ಮುಖದಲ್ಲಿ ಮೂಡಿದ ನಾಚಿಕೆಯ ಕೆಂಪು ಅವರ ಯೌವ್ವನದಲ್ಲಿನ ದಿನಗಳನ್ನು ಕಾಣಿಸುತ್ತಿತ್ತು.

"ಮಗು, ನನ್ನ ಅತ್ತೆ ಆಗ ನನಗೆ ಮಾಡಿದ ಸೇವೆ ನೆನೆಸಿಕೊಂಡರೆ ಸಾಕು! ಆಗಲೇ ನಾನು ಅವರನ್ನು ಅರ್ಥ ಮಾಡಿಕೊಂಡದ್ದು. ಅವರನ್ನು ಅರ್ಥ ಮಾಡಿಕೊಳ್ಳಲು ಒಂದು ಅವಕಾಶ ಸಿಕ್ತು. ಕಡೆ ತನಕ ನಾನು ಅದನ್ನು ಉಳಿಸಿಕೊಂಡೆ. ಮೈಯೆಲ್ಲ ವ್ರಣ......ಮೂರು ತಿಂಗಳು ಪೂರ್ತಿ ಹಾಸಿಗೆ ಹಿಡಿದು ಮಲಗಿದ್ದರು. ಮಕ್ಕಳು ಮರಿ, ಮನೆ, ಸಂಸಾರ, ಮೂರುಜನ ಮೈದುನರು, ಇಬ್ಬರು ಚಿಕ್ಕತ್ತೆಯರು ಇವರನ್ನೆಲ್ಲಾ ನೋಡಿಕೊಂಡು ಹಗಲು–ರಾತ್ರಿ ಅವರ ಸೇವೆ ಮಾಡಿದೆ. ನಮ್ಮನ್ನೆಲ್ಲ ಬಿಟ್ಟು ಹೋದರು. ಮಾಡೋಕೆ ಕೆಲಸವೇ ಇಲ್ಲದಂತಾಯಿತು. ಮನೆ ಎಲ್ಲ ಬಣ ಬಣಗುಡುತ್ತಿತ್ತು.

ಅವರಿಲ್ಲದಿದ್ದಾಗ, ಅವರ ಬೈಗಳೂ ಮಧುರವೆನಿಸತೊಡಗಿದವು. ಪಾಪ ಬಹಳ ನೊಂದಿದ್ದರು". ಅಮ್ಮಾಜಿ ಧೀರ್ಘವಾಗಿ ಉಸಿರೆಳೆದು ಹೇಳಿದರು.

"ಯಾಕೆ ಅಮ್ಮಾಜಿ?" ಶಾಲ್ಮಲಿಯ ಲಟ್ಟಿಸುತ್ತಿದ್ದ ಕೈಗಳು ನಿಂತುಬಿಟ್ಟವು.

"ಮೂರು ಮೂರು ಜನ ವಾರಗಿತ್ತಿಯರು, ಮೇಲೆ ಅವರ ಅತ್ತೆ ಬೇರೆ. ಬಹಳ ಅತ್ಯಾಚಾರಿ ಹೆಂಗಸು. ತುಂಬಾ ಕಷ್ಟ ಪಟ್ಟರು ಅವರ ಕೈ ಕೆಳಗೆ. ನಮ್ಮ ಹೆಂಗಸರ ಹಣೆ ಬರಹವೇ ಇಷ್ಟು! ಯಾರಾದರೂ ನೊಂದಿದ್ದರೆ, ಸಮಾಧಾನಮಾಡಿ, ನೋವನ್ನು ಕಡಿಮೆ ಆಗಿಸುವುದಕ್ಕೆ ಬದಲಾಗಿ ಇನ್ನಷ್ಟು ಮುಳ್ಳಾಡಿಸ್ತೀವಿ.

ನಾವು ನಮ್ಮ ಪಾಲಿಗೆ ಪಡೆದದ್ದನ್ನೇ ಇನ್ನೊಬ್ಬರಿಗೆ ಕೊಡ್ತೇವೆ. ದುಃಖದಿಂದ ಕೊರಳು ಕೊಂಕಿಸಿದರು.

"ಯಾವಾಗಲೂ ಹೀಗೇ ಇರೋದಿಲ್ಲ ಅಮ್ಮಾಜಿ". ಶಾಲ್ಮಲಿ ಪ್ರತಿಯಾಗಿ ಹೇಳಿದಳು.

"ಇರಬಹುದು ಮಗು. ಅಪವಾದಗಳು ಇಲ್ಲದೆ ಇಲ್ಲ. ಆದರೆ ನನಗೆ ತಿಳಿದ ಹಾಗೆ ಅತ್ಯಾಚಾರವನ್ನು ಸಹಿಸುತ್ತಾ ಸಹಿಸುತ್ತಾ ನಾವೂ ಎಷ್ಟು ನಿರ್ದಯಿಗಳಾಗ್ತೇವೆಂದ್ರೆ,

ಬೇರೆಯವರನ್ನು ಹಿಂಸಿಸುವುದಕ್ಕೆ ಆರಂಭಿಸಿಬಿಡ್ತೇವೆ. ಏಟು ತಿಂದು ತಿಂದು ಏಟು ಕೊಡುವುದನ್ನೇ ಕಲಿತೇವೆ." ಅಮ್ಮಾಜಿ ಹೇಳಿ ಸುಮ್ಮನಾದರು. ಕೋಣೆಯಲ್ಲಿ ಸ್ವಲ್ಪ ಹೊತ್ತು ಮೌನ ಕವಿದಿತ್ತು.

"ಈ ಥರ ಎಲ್ಲರ ಜೊತೆಗೂ ಆಗುತ್ತೆ. ಹೆಂಗಸರನ್ನೇ ಯಾಕೆ ದೂರಬೇಕು." ಶಾಲ್ಮಲಿಗೆ ಬೇಸರವಾಯಿತು.

"ನಾನೆಲ್ಲಿ ದೂರುತ್ತಿದ್ದೇನೆ ಮಗು. ಇದು ದೂರಲ್ಲ, ದೂಷಣೆ ಅಲ್ಲ. ಇದು ಸತ್ಯ. ನಾನು ಹೆಣ್ಣು ಗಂಡುಗಳು ಕೂಡಿ ಬದುಕುವ ಜಗತ್ತನ್ನು ನೋಡಿಲ್ಲ. ನೋಡಿದ್ದೆಲ್ಲ ಹೆಂಗಸರ ಪ್ರಪಂಚ. ಗಂಡಸರಿಂದಾಗಿ ಒಬ್ಬರ ಬಗ್ಗೆ ಒಬ್ಬರು ಅಸೂಯೆ ಪಡೋದು. ಇಲ್ಲ ಒಂದಾಗೋದು. ಇನ್ನೂ ಒಂದನ್ನು ಗಮನಿಸಿದ್ದೇನೆ. ಹೆಂಗಸು ಈರ್ಷ್ಯೆ ಉಳ್ಳವಳಲ್ಲ. ಅದೆಲ್ಲ ಗಂಡಸಿನ ಕೈವಾಡ. ಅವನು ನಮ್ಮ ದೇವರ ಹಾಗೆ ಇರುವ ದೇವತೆ!" ಅಮ್ಮಾಜಿ ಹೇಳುತ್ತಲೇ ಇದ್ದರು. ಮನಸ್ಸಿನ ಗಂಟುಗಳು ಬಿಚ್ಚಿಕೊಳ್ಳುತ್ತಾ ಹೋದವು. ಕಡುಬುಗಳ ಬಾಯನ್ನು ಉಗುರಗಳಿಂದ ಕಲಾತ್ಮಕವಾಗಿ ತಿರುಚಿ ಮುಚ್ಚುತ್ತಿದ್ದರು.

"ಅಮ್ಮಾಜಿ, ನೀವು ಒಮ್ಮೊಮ್ಮೆ ಹೆಂಗಸರ ಪರವಾಗಿ ಮಾತಾಡ್ತೀರಿ, ಮತ್ತೊಮ್ಮೆ ಗಂಡಸರ ಪರವಾಗಿ ಮಾತಾಡ್ತೀರಿ". ಶಾಲ್ಮಲಿ ಅವರ ಚದುರಿದ ವಿಚಾರಗಳನ್ನು ಒಂದಾಗಿ ಪೋಣಿಸಿ ಹೇಳಿದಳು.

"ಮಗಳೆ ನಾವಿದ್ದದ್ದು ಗುಲಾಮರಾಗಿ, ದಾಸಿಯರಾಗಿ, ನಿನ್ನನ್ನು ನೋಡಿದಾಗ ಅನ್ನಿಸಿತು. ಹೋಗಲಿ ಬಿಡು. ಎಲ್ಲೊ ಒಂದು ಕಡೆ ಹೆಣ್ಣು ಸ್ವತಂತ್ರಳಾಗಿ ಇದ್ದಾಳೆ. ನನಗೆ ಭಯವೂ ಆಗಿತ್ತು. ಇದು ಎಲ್ಲೀವರೆಗೆ ಇರುತ್ತೋ ಅಂತ! ಪಟ್ಟಣದ ಹುಡುಗಿ..... ಏನೇನೋ ಕೇಳಿದ್ದೆ. ಇತ್ತೀಚಿನ ವರ್ಷಗಳಲ್ಲಿ ನಿನ್ನ ಜೊತೆ ಇದ್ದ ಮೇಲೆ ನನಗೆ ಗೊತ್ತಾಯಿತು. ಹೆಣ್ಣು ಎಂದಿಗೂ ಸ್ವತಂತ್ರವಾಗಿಲ್ಲ" ಅಂತ. ಯಾವಾಗಲೂ ಗೂಟಕ್ಕೆ ಕಟ್ಟಿ ಹಾಕಿರುತ್ತೆ. ಇಲ್ಲಿ ಕಟ್ಟಿರುವ ಹಗ್ಗ ಸ್ವಲ್ಪ ಉದ್ದವಾಗಿರುತ್ತೆ. ನನ್ನ ಮಗನೂ ಇದ್ದಾನೆ! ಒಂಬತ್ತು ತಿಂಗಳು ಹೊತ್ತು ಹೆತ್ತು ಸಾಕಿ, ಸಲಹಿದೆ! ನಿನಗೆ ನಾನು ಜನ್ಮ ಕೊಡಲಿಲ್ಲ. ಇಬ್ಬರನ್ನೂ ನೋಡ್ತಿದ್ದೀನಿ! ಅವನ ವ್ಯವಹಾರಗಳಿಂದ ನೀನು ಎಷ್ಟು ಸುಖವಾಗಿದ್ದೀಯೋ ನನಗೆ ಗೊತ್ತಿಲ್ಲ! ಆದರೆ ಭಗವಂತನ ಸಾಕ್ಷಿಯಾಗಿ ಹೇಳ್ತೀನಿ. ನಿನಗೋಸ್ಕರ ನನ್ನ ಮನಸ್ಸು ಕುದಿಯುತ್ತೆ. ನನಗೆ ಬಹಳ ನೋವಾಗುತ್ತೆ. ಅವನಿಗೆ ಏನು ಹೇಳಬೇಕು? ನನ್ನಂಥ ಅಕ್ಷರಜ್ಞಾನ ಇಲ್ಲದವಳ ಮಾತು ಕೇಳ್ತಾನಾ, ನನ್ನ ಉಪದೇಶವನ್ನು ತಲೆಗೆ ತಗೋತಾನಾ, ನನಗಾಗಿ ಅವನ ಹತ್ತಿರ ಬಿಡುವೇ ಇಲ್ಲದಿರುವಾಗ? – ಅಮ್ಮಾಜಿಯ ಸ್ವರ ತುಂಬಿ ಬಂತು.

ಏನು ಹೇಳ್ಬೇಕು ತೋಚಲಿಲ್ಲ. ಶಾಲ್ಮಲಿಯ ದೃಷ್ಟಿ ಅಮ್ಮಾಜಿ ಮುಖದ ಮೇಲೆ ನಿಂತಿತು. ಲಟ್ಟಣಿಗೆ ಕೈಯಲ್ಲಿ ಹಾಗೇ ಉಳಿಯಿತು. ಮನಸ್ಸಿನಲ್ಲಿ ಏನೋ ತಳಮಳವೆನಿಸಿತು.

ಯಾವುದನ್ನು ನಾನು ಇಷ್ಟೊಂದು ರಹಸ್ಯವಾಗಿ ಇಟ್ಟಿದ್ದೆನೋ, ಅಮ್ಮಾಜಿ ಹೇಗೆ ಪತ್ತೆ ಹಚ್ಚಿದರು? ಎಷ್ಟು ಸುಲಭವಾಗಿ ಹೇಳಿಬಿಟ್ಟರು? ಹೇಳುವ ಮಾತುಗಳ ಹಿಂದೆ ಹೇಳದೇ ಇರುವ ಗುಟ್ಟುಗಳೆಲ್ಲ ತೆರೆದುಕೊಳ್ಳುತ್ತವೇನು?

"ನೀನು ತುಂಬ ಸ್ವಾಭಿಮಾನಿ. ನನಗೆ ಗೊತ್ತಿದೆ. ನಾನು ಮೊದಲು ಹೀಗೇ ಇದ್ದೆ..... ಬರ್ತಾ ಬರ್ತಾ ಜೀವನದಲ್ಲಿನ ಆಗು ಹೋಗುಗಳ ಜೊತೆಗೆ, ಅರ್ಥಮಾಡಿಕೊಂಡೆ. ಸ್ವಾಭಿಮಾನ ಹೆಣ್ಣಿನ ಆತ್ಮದ ಭೂಷಣವಾಗಿ ಉಳಿಯಲಾರದು. ಅಲ್ಲಿ ಉಳಿಯುವುದೇನಿದ್ದರೂ ಧೈರ್ಯ, ಬಲಿದಾನ ಅದನ್ನೇ ಎಲ್ಲರೂ ಕರುಣೆ ಅಂತಾರೆ. ಅಮ್ಮಾಜಿ ಮಾತನ್ನು ಮುಂದುವರೆಸಿದರು. ಅತ್ಯಂತ ಭಾವುಕತೆಯಲ್ಲಿ ತಮ್ಮೆದೆಯನ್ನೇ ತೆರೆದಿರಿಸಿದರು. ಇನ್ನು ಅವರು ನಿಲ್ಲುವುದಿಲ್ಲ.?

"ಹಾಗಾದರೆ ಹೆಂಗಸರು ನಿಷ್ಠುರರಾಗಿರುವುದಿಲ್ಲವೇ?" – ಆಶ್ಚರ್ಯದಿಂದ ಶಾಲ್ಮಲಿ ಕೇಳಿದಳು.

ಹೆಂಗಸರ ಮಧ್ಯೆ ವೈಮನಸ್ಯ ಬರೋದೂ ಇವರಿಂದಲೇ. ಮನೆ ಮುಂದೆ ಕಟ್ಟಿರುವ ಹಸು ಕೊಂಬುಗಳಿಂದ ತಾನೇ ಯಾಕೆ ತಿವಿದುಕೊಳ್ಳುತ್ತೆ ಹೇಳು?" ಅಮ್ಮಾಜಿ ಹೇಳುತ್ತಾ ಹೇಳುತ್ತಾ ವಿಷಾದದ ನಗೆ ನಕ್ಕರು.

"ಏನು ಎಲ್ಲರೂ ಇಲ್ಲೇ ಸೇರಿ ಬಿಟ್ಟಿದ್ದೀರಿ?" – ನರೇಶ್ ಕೋಣೆಯೊಳಗೆ ಇಣುಕಿ ಹೇಳಿದ.

"ನೀವು ಯಾವಾಗ ಬಂದಿರಿ?" ಶಾಲ್ಮಲಿ ತಿರುಗಿ ಕೇಳಿದಳು.

"ನಂ ಜೊತೆ ಕೆಲವರು ಬಂದಿದ್ದಾರೆ. ಚಹ ಕಳಿಸಿಕೊಡು" – ಹೇಳುತ್ತಾ ನರೇಶ್ ಒಳಗೆ ಬಂದ.

"ಎಷ್ಟು ಜನ ಇದ್ದಾರೆ?" ಶಾಲ್ಮಲಿ ಕೈಯನ್ನು ಟವೆಲಿನಲ್ಲಿ ಒರೆಸಿಕೊಂಡಳು.

"ಒಂದು ಎಂಟ್ಹತ್ತು! ಅಮ್ಮ ನಿನ್ನ ಆರೋಗ್ಯ ಹೇಗಿದೆ? ಔಷಧಿ ತಗೋತಿದ್ದೀ ತಾನೇ?" ಹೇಳುತ್ತಾ ನರೇಶ್ ಅಲ್ಲಿಂದ ಹೊರಗಡೆ ಹೊರಟ.

"ಎಂಥಾ ಉಪಕಾರ ಮಾಡಿಬಿಟ್ಟ ಇವತ್ತು, ಇವನು! ಉತ್ತರ ಕೇಳಿಸಿಕೊಳ್ಳುವದಕ್ಕೂ ಆಗಲಿಲ್ಲ!" ಅಮ್ಮ ಬಿಟ್ಟು ಬಿಟ್ಟು ಹೇಳಿದರು.

"ಅಮ್ಮಾಜಿ!' ಶಾಲ್ಮಲಿ ಸ್ನೇಹದಿಂದ ಅವರ ಭುಜದ ಮೇಲೆ ತಟ್ಟಿದಳು ಮತ್ತು ಅಲ್ಲಿಂದ ಅಡುಗೆ ಮನೆ ಕಡೆ ನಡೆದಳು.

ಶಾಲ್ಮಲಿಯ ಮಾನಸಿಕ ದಣಿವು ಅವಳ ಮುಖದ ಮೇಲೆ ಸದಾ ಕವಿದಿರುತ್ತಿತ್ತು. ಎಷ್ಟು ಪ್ರಯತ್ನಿಸಿದರೂ ಏನೇ ಅಲಂಕರಿಸಿಕೊಂಡರೂ ಅದು ಕಾಣಿಸಿಕೊಳ್ಳದೆ

ಉಳಿಯಲಿಲ್ಲ. ಅವಳ ಮುಖವೇ ಮನಸ್ಸನ್ನು ಬಿಂಬಿಸುತ್ತಿತ್ತು. ಒಂದೆರಡು ಬಾರಿ ಅಮ್ಮಾಜಿ (ಅತ್ತೆ) ಕೇಳಿದರೂ ಕೂಡ!

"ಯಾಕೆ, ಯಾಕೆ ಮಗಳೆ ತುಂಬ ಸುಸ್ತಾಗಿ ಕಾಣಿಸ್ತೀ? ಏನಾದರೂ ಸಂತೋಷದ ಸುದ್ದಿ ಇದೆಯೇನು? ನನಗೆ?.....

"ಇಲ್ಲ ಅಮ್ಮ ಆಫೀಸಿನಲ್ಲಿ ತುಂಬ ಕೆಲಸ. ಊಹಿಸಿಕೊಳ್ಳಲು ಆಗುವುದಿಲ್ಲ". ಶಾಲ್ಮಲಿ ಹೇಳುತ್ತಿದ್ದಳು.

"ಇಲ್ಲ! ಏನೋ ಇದೆ. ಆಫೀಸಿನಲ್ಲಿ ಸಹಾಯ ಮಾಡೋವ್ರು, ಮನೆಯಲ್ಲಿ ಕೆಲಸದವರು ಇರುವಾಗ, ನಿನ್ನ ತಲೆ ಮೇಲೆ ಭಾರ ಏನು ಇರಲಿಕ್ಕೆ ಸಾಧ್ಯ?" – ದುಃಖದಿಂದ ಹೇಳುತ್ತಿದ್ದರು.

"ನಿಮಗೇನಾಯ್ತು?" ಶಾಲ್ಮಲಿ ಆಶ್ಚರ್ಯದಿಂದ ಕೇಳಿದಳು.

"ಮುದಿತನ....? – ಇದಕ್ಕೆ ನಿನ್ನ ಹತ್ತಿರ ಔಷಧಿ ಇದೆಯೇನು? – ಅಮ್ಮಾಜಿ ಅವಳನ್ನು ರೇಗಿಸುತ್ತಿದ್ದರು.

"ನನ್ನ ಹತ್ತಿರವೇ? – ನಕ್ಕು ಬಿಡುತ್ತಿದ್ದಳು ಶಾಲ್ಮಲಿ.

ಶಾಲ್ಮಲಿ ತನ್ನಲ್ಲಿ ಪರಿವರ್ತನೆಗೆ ತಾನೇ ಆಶ್ಚರ್ಯ ಪಡುತ್ತಿದ್ದಳು. ಯಾವಾಗಲೂ ಅಮ್ಮನ ಮೇಲೆ ಸಿಟ್ಟು, ಅವಳ ಪ್ರತಿ ಮಾತಿಗೂ ಕೋಪ, ಅಮ್ಮ ದಂಡಿಸಿ ಏನಾದರೂ ಹೇಳಿದರೆ, "ಸಹಾಯಕ್ಕೆ ಅಪ್ಪನನ್ನು ಕರೆಯೋದು – ಹೀಗೆಲ್ಲ ಇದ್ದದ್ದು. ಈಗ ಅಮ್ಮನಿಗೆ ಅವಳು ಆಪ್ತವಾಗುತ್ತಿದ್ದಳು. ಅಮ್ಮನ ವಿಚಾರದಲ್ಲಿ ಅವಳೆದೆಯಲ್ಲಿ ಈಗ ಸದಾ ಸಹಾನುಭೂತಿ ಇರುತ್ತಿತ್ತು. ಅಪ್ಪ ಅಮ್ಮನನ್ನು ರೇಗಿಸುತ್ತಿದ್ದಾಗ, ಆನಂದ ಪಡುತ್ತಿದ್ದ ಶಾಲ್ಮಲಿ ಈಗ ಅಂತಹ ಸಂದರ್ಭ ಬಂದಾಗ ಅಪ್ಪನ –ಹಾಸ್ಯವ್ಯಂಗ್ಯಗಳನ್ನು ಗಂಭೀರವಾಗಿ ತೆಗೆದುಕೊಂಡು ಅಪ್ಪನ ಮೇಲೇ ತಿರುಗಿ ಬೀಳುತ್ತಿದ್ದಳು.

ಶಾಲ್ಮಲಿ ಅತ್ತೆಯ ಮೂಲಕವಾಗಿ ಅಮ್ಮನನ್ನು ಅರ್ಥ ಮಾಡಿಕೊಳ್ಳತೊಡಗಿದಳು. ಅವರ ನೋವು – ನಲಿವುಗಳು ಈಗ ಅವಳ ಗ್ರಹಿಕೆಗೆ ಬರುತ್ತಿದ್ದವು. ತಂದೆಯ ಪ್ರೀತಿಯಲ್ಲಿ ಕುರುಡಾಗಿ ಅಮ್ಮನನ್ನು ಶತ್ರುವೆಂದು ಭಾವಿಸುತ್ತಿದ್ದಳು. ಆದರೆ ಈ ಗೆಳತಿ ಎಂಥವಳೆಂದರೆ ಬೇರೊಬ್ಬರ ಅಂತರಂಗವನ್ನು ತಿಳಿದುಕೊಳ್ಳುವಳೇ ಹೊರತು ತನ್ನನ್ನು ಮಾತ್ರ ಬಿಟ್ಟುಕೊಡುವವಳಲ್ಲ!

"ಏನು ಮಗಳೆ, ನಮ್ಮನ್ನು ಮರೆತು ಬಿಟ್ಟೆಯಾ ಹೇಗೆ? ಬಹಳ ದಿವಸಗಳ ಮೇಲೆ ಬಂದಿದ್ದೀ! ಎಲ್ಲರೂ ಆರೋಗ್ಯವಾಗಿ ಇದ್ದಾರೆ ತಾನೇ?" ಅಪ್ಪ ಸುತ್ತಾಡಿಕೊಂಡು ಬಂದಿದ್ದರು. ಕೈಕೋಲನ್ನು ಮೂಲೆಯಲ್ಲಿ ಇಡುತ್ತಾ ನುಡಿದರು.

ಸಂಜೆ ಹೊತ್ತು ಅತ್ತೆಯವರನ್ನು ಒಬ್ಬರನ್ನೇ ಬಿಡೋದು ಚೆನ್ನಾಗಿರೊಲ್ಲ. ಬೆಳಗ್ಗೆ ಎಲ್ಲ ಆಫೀಸೇ ಆಗ್ಬಿಡುತ್ತೆ. ಶಾಲ್ಮಲಿ ಹೇಳಿದಳು.

"ನೀನು ಹೇಳ್ತಿರೋದು ಸರಿ ಮಗಳೆ! ಮಗಳು ಯಾವಾಗಲೂ ಬೇರೆಯವರ ಆಸ್ತಿ ಅಲ್ವೆ! ಈಗ ನಾವು.............ಇರಲಿ, ಅದೆಲ್ಲ..............ಹೇಳು, ನಮ್ಮ ಮಗಳು ಅಳಿಯಂದಿರು ಹೇಗಿದ್ದಾರೆ?" ಅಪ್ಪ ಬೇಸರದ ಧ್ವನಿಯನ್ನು ತಕ್ಷಣ ಮರೆಮಾಚಿ ಜೋರಾಗಿ ಗಹಗಹಿಸಿ ನಕ್ಕು ಮತ್ತೊಂದು ಕೋಣೆಯನ್ನು ಹೊಕ್ಕರು.

ಶಾಲ್ಮಲಿಯ ಮನಸ್ಸು ಹಿಂಡಿದಂತಾಯಿತು. ಮೂರು ತಿಂಗಳ ನಂತರ ಮನೆಗೆ ಬಂದಿದ್ದಾಳೆ. ಏನೆಲ್ಲ ಕಷ್ಟಗಳು? ಹೇಳೋಕೆ ಏನೂ ಇಲ್ಲದಿದ್ದರೂ, ಅನುಭವಿಸುವುದಕ್ಕೆ ಬೇಕಾದಷ್ಟಿದೆ, ನೋಡೋಕೆ ಮೇಲಿಂದ ಎಲ್ಲಾ ಚೆನ್ನಾಗಿದೆ!

ರಾತ್ರಿ ಮಲಗುವುದಕ್ಕೆ ಮೊದಲು ಅಪ್ಪನ ನೆನಪಾಯಿತು. ಅಮ್ಮ ಹೇಳುತ್ತಿದ್ದರು. ಒಂದು ಸಲ ಮಧ್ಯರಾತ್ರಿ ಇದ್ದಕ್ಕಿದ್ದಂತೆ ಬಿಸ್ಕತ್ ಬೇಕೂಂತ ಹಟ ಮಾಡಿದಳು. ಅವಳನ್ನು ಸಮಾಧಾನ ಮಾಡುವಷ್ಟು ಹೊತ್ತಿಗೆ ಪ್ರಾಣಕ್ಕೆ ಬಂತು! ನೀರಿನ ಆಚೆ ಬಿದ್ದ ಮೀನಿನ ಹಾಗೆ ಇಡೀ ರಾತ್ರಿ ಚಡಪಡಿಸಿದರು. ಬೆಳಗಾಗಿದ್ದೆ ಮೊದಲು ಬಿಸ್ಕತ್ತು ಅಂತ ಓಡಿ ಒಂದೇ ಸಲಕ್ಕೆ ಅಷ್ಟೊಂದು ಬಿಸ್ಕತ್ತು ಡಬ್ಬಗಳನ್ನು ತಂದು ತುಂಬಿದ ಮೇಲೆ ಆಫೀಸಿಗೆ ಹೋದರು' ಎಂದದ್ದೆಲ್ಲ ಮರುಕಳಿಸಿತು.

ಅರ್ಧ ರಾತ್ರಿಯಲ್ಲಿ ಅಪ್ಪ ಅಮ್ಮನಿಗೆ ಏನಾದರೂ ಅಗತ್ಯ ಬಿದ್ದರೆ ತಂದು ಕೊಡುವವರು ಯಾರು? ಯಾರನ್ನು ಕೂಗಲಿಕ್ಕೆ ಆಗುತ್ತೆ? ಅವರು ತನ್ನನ್ನು ಬೆಳೆಸಿ ದೊಡ್ಡವಳನ್ನಾಗಿ ಮಾಡಿದ್ದು ಯಾತಕ್ಕಾಗಿ, ತನ್ನ ಸುಖಕ್ಕಾಗಿಯೇ? ಅದು ಅವರ ಕರ್ತವ್ಯ ಅಂತ ಭಾವಿಸಿ ಸುಮ್ಮನಾದರೆ, ತನ್ನ ಕರ್ತವ್ಯ ಅವರ ಬಗ್ಗೆ ಇಲ್ಲವೇ? ಮುಪ್ಪಿನಲ್ಲಿ, ಅವರ ಸಹಾಯ, ಹುಡುಗಿಯಾದ ಮಾತ್ರಕ್ಕೆ ಮಾಡಬೇಕಾದ್ದು ಜವಾಬ್ದಾರಿ ಇಲ್ಲವೇ? ಅಪ್ಪ ಅಮ್ಮನನ್ನು ತನ್ನ ಮನೆ ಒಳಗೆ ತಂದು ಇಟ್ಟುಕೊಳ್ಳುವ ಹಾಗಿಲ್ಲ. ಮುಪ್ಪಿನಲ್ಲಿ, ಅತ್ತೆ ಮಾವರ ಸೇವೆ ಮಾಡಿದ ಹಾಗೆ ಮಾಡುವ ಹಾಗಿಲ್ಲ! ಯಾಕೆ? ಸಹಜವಾಗಿ ಹೆಣ್ಣು ಮಕ್ಕಳೇ ನಿರ್ದಯಿಗಳಾಗಿರುತ್ತಾರೆಯೋ, ಅಥವಾ ಸಾಮಾಜಿಕ ನಿರ್ಬಂಧಗಳೋ! ಸಮಾಜ ಅವರ ವಿಚಾರದಲ್ಲಿ ನಿಯಮಗಳನ್ನೇಕೆ ರೂಪಿಸಿಲ್ಲ. ಗಂಡು ಮಕ್ಕಳೇ ಇಲ್ಲದ ತಂದೆ ತಾಯಿಗಳು ಎಲ್ಲಿ ಹೋಗಬೇಕು?

ಅಗತ್ಯ ಬಿದ್ದರೆ ಅವಳು ಈ ನಿಯಮಗಳನ್ನು, ಸಮಾಜದ ರೀತಿನೀತಿಗಳನ್ನು ಮುರಿದೆಸೆಯುತ್ತಾಳೆ. ಯಾವ ಪ್ರೀತಿಯಿಂದ ಇಬ್ಬರೂ ನನ್ನನ್ನೂ ದೊಡ್ಡವಳನ್ನಾಗಿ ಮಾಡಿದರೋ ಅದೆಲ್ಲವನ್ನು ಮರೆತು ಹೊಸ ಸಂಬಂಧಗಳಲ್ಲಿ ಮುಳುಗಿ ಹಳೆಯ ಸಂಬಂಧವನ್ನು ನಾನೇಕೆ ಮರೆತೆ? ಒಂದೇ ಊರಲ್ಲಿ ಇದ್ದುಕೊಂಡು ಎಂದೂ ಅಮ್ಮನ ಸೇವೆ ಮಾಡಲಿಲ್ಲ, ನಾನು ಚೆನ್ನಾಗಿ, ಸುಖವಾಗಿ ಇದ್ದೀನಿ ಅನ್ನುವುದನ್ನು ತೋರಿಸಿಕೊಳ್ಳಬೇಕೆಂಬುದಕ್ಕೆ ನಾನು ಕಿವಿಗೊಡಲಿಲ್ಲ.

ರಾತ್ರಿ ಇಡೀ ನಿದ್ದೆಯಿಲ್ಲದೆ ಹೊರಳಾಡಿದಳು. ಮುದಿ ತಂದೆ ತಾಯಿಯರ ಮುಖಗಳು ದಯನೀಯ ಸ್ಥಿತಿಯಲ್ಲಿ ಅವಳ ಕಣ್ಮುಂದೆ ಸುಳಿದವು.

* * *

ದಸರಾ ರಜೆಗಳು, ಶಾಲ್ಮಲಿಯ ಭಾವಂದಿರು ತಮ್ಮ ಪರಿವಾರಗಳೊಂದಿಗೆ ಬಂದಿದ್ದಾರೆ. ಮಕ್ಕಳಿಗೆ ಸ್ಕೂಲಿಗೆ ರಜೆ ಬೇರೆ! ಮೂರು ಜನ ಅಣ್ಣತಮ್ಮಂದಿರು ಇಸ್ಪೀಟ್ ಆಡ್ತಾ ಕೂತುಬಿಡುತ್ತಿದ್ದರು. ಇಬ್ಬರು ವಾರಗಿತ್ತಿಯರೂ ಟಿ.ವಿ.ಮುಂದೆ ಕುಳಿತು ಬಿಡುತ್ತಿದ್ದರು. ಮಕ್ಕಳು, ಅಡುಗೆ, ಅದು ಇದೂಂತ ನೋಡಿಕೊಳ್ಳೋ ಹೊತ್ತಿಗೆ ಶಾಲ್ಮಲಿಗೆ ಪ್ರಾಣಕ್ಕೆ ಬರುತ್ತಿತ್ತು.

ಈ ಪ್ರಪಂಚದ ರೀತೀನೇ ವಿಚಿತ್ರ, ಬಾಯಿಬಿಟ್ಟು ಹೇಳುವವರೆಗೆ ಅರ್ಥಮಾಡಿಕೊಳ್ಳುವುದೇ ಇಲ್ಲ. ತಮ್ಮ ಭಾರವನ್ನೆಲ್ಲ ಇನ್ನೊಬ್ಬರ ತಲೆ ಮೇಲೆ ಹಾಕಿದ್ದು ಸಾಲದೆಂಬಂತೆ, ಅವರ ಬೇಡಿಕೆಗಳಿಗೆ ಕೊನೆ ಮೊದಲಿಲ್ಲದೆ ಹೋಗುತ್ತೆ. ಶಾಲ್ಮಲಿ ರಾತ್ರಿ ಬಹಳ ಸುಸ್ತಾಗಿ, ತಲೆನೋವಿನ ಮಾತ್ರೆ ನುಂಗಿ ಮಲಗಿದಳು. ತುಂಬಾ ಹೊತ್ತು ಕಾಲು ನೋವಿನಿಂದಾಗಿ ನಿದ್ದೆ ಬರಲಿಲ್ಲ. ಎಲ್ಲರ ಸ್ವಭಾವ ರೀತಿಗಳ ಬಗ್ಗೆ ಯೋಚನೆ ಮಾಡಲಾರಂಭಿಸಿದಳು.

"ಕುಂತಿಯನ್ನು ನಿನ್ನ ಹತ್ತಿರವೇ ದಿಲ್ಲಿಯಲ್ಲಿ ಇರಿಸಿಕೋ" ನರೇಶನ ದೊಡ್ಡಣ್ಣನ ಹೆಂಡತಿ ಶಾಲ್ಮಲಿಗೆ ಹೇಳಿದಳು.

"ಇಷ್ಟು ಚಿಕ್ಕ ಮಗೂನ ಯಾರು ನೋಡಿಕೊಳ್ತಾರೆ? ನಾನಂತು ಆಫೀಸಿನಲ್ಲಿರುತ್ತೇನೆ." ಶಾಲ್ಮಲಿ ಗಾಭರಿಯಿಂದ ಹೇಳಿದಳು.

"ಅಯ್ಯೋ, ಆಯಾನ ಇಟ್ಟುಕೊಂಡರೆ ಆಯ್ತು. ಜೊತೆಗೆ ಅತ್ತೆ ಇಲ್ಲೇ ಇದ್ದಾರೆ. ಇಡೀ ದಿನ ಬಿಡುವಾಗಿಯೇ ಇರ್ತಾರೆ. ಮೊಮ್ಮಗಳಿಗೆ ತಿನ್ಸೋದು ಗಿನ್ಸೋದು ನೋಡ್ಕೋತಾರೆ." ಅಣ್ಣನ ಹೆಂಡತಿ ಬಿಡೋಹಾಗೆ ಕಾಣಲಿಲ್ಲ.

"ಈಗ ವಿಶ್ರಾಂತಿ ತಗೊಳ್ಳೋ ವಯಸ್ಸು ಅವರದು" – ಶಾಲ್ಮಲಿ ಹೇಳಿದಳು.

"ಅಮ್ಮಾಜಿ ಮನಸ್ಸಿಗೆ ಗಾಭರಿಯಾಗಿರಬೇಕು ಇಲ್ಲಿ. ಜೊತೆಗೇ ಕರ್ಕೊಂಡು ಹೋಗೋಣಾಂತ ಯೋಚ್ನೆ ಮಾಡ್ತಿದ್ದೀನಿ. ಅಲ್ಲಿ ಮಕ್ಕಳಿಗೂ ಒಳ್ಳೆ ಜೊತೆ ಸಿಕ್ಕ ಹಾಗೆ ಆಗುತ್ತೆ." ಚಿಕ್ಕಣ್ಣನ ಹೆಂಡತಿ ಹೇಳುತ್ತಲೇ ತೊಡೆಯ ಮೇಲಿನ ಮಗುವನ್ನು ತಟ್ಟುತ್ತಿದ್ದಳು.

"ನಾನಿಲ್ಲಿ ಬಹಳ ಸುಖವಾಗಿದ್ದೀನಿ., ಮಕ್ಕಳೇ! ನೀವಿಬ್ಬರೂ ನನ್ನ ಬಗ್ಗೆ ಚಿಂತೆ ಮಾಡಬೇಡಿ!" ಚಿಕ್ಕವಳು ಸಿಡುಕಿನಿಂದ ಹೇಳಿದಳು–

"ಇದ್ದಿರಲಿ ಬಿಡು....ನಮಗೇ ದುಡ್ಡು ಉಳೀತು." ದೊಡ್ಡವರು ಚಿಕ್ಕವಳೊಂದಿಗೆ ಪಿಸುಪಿಸು ಮಾತಾಡಿ ಹೇಳಿದಳು.

"ಸುಖವಾಗಿದ್ದರೆ ಇರಲಿ ಬಿಡು. ಇವರನ್ನು ನೋಡ್ಕೊಂಡು ಹೋಗೋಣ. ಹಾಗೇ ಅವರ ಸೊಸೆಯನ್ನೂ ದರ್ಶನ ಮಾಡಿ ಹೋಗೋಣಾಂತ, ಅದೂ ಆಫೀಸರ್ ಬೇರೆ ಅಲ್ವೆ" ಬಂದದ್ದಾಯಿತು. ನಮ್ಮಂತಹ ಕ್ಲಾರ್ಕ್‌ಗಳ ಮನೆಗೆ ಯಾಕೆ ಬಂದಾರು!" ಸಣ್ಣ ವಿಷಯಾಂತಲೇ ಮಾತಾಡ್ತಾ ಮಾತಾಡ್ತಾ, ಚುಚ್ಚುವುದನ್ನು ಮರೆಯಲಿಲ್ಲ!!

ಒಬ್ಬರ ಸಂಪಾದನೆಯಲ್ಲಿ ಹೇಗೆ ನಿಭಾಯಿಸೋಕೆ ಆಗುತ್ತೆ, ದಿನಾ ದಿನಾ ಎಲ್ಲಿಗಾದರೂ ಯಾತ್ರೆಗೆ ಹೊರಡೋಕೆ "ದೊಡ್ಡವಳು ಉರೀತಾ ಹೇಳಿದಳು.

"ಈಗ ಓದೋಕೆ ಶುರು ಮಾಡ್ಕೊಳ್ಳಿ ಅಕ್ಕ" ಚಿಕ್ಕವಳು ಕೀಟಲಿಸಿದಳು.

"ನೀನೇ ಓದು. ಹೇಗಿದ್ದರೂ ಹತ್ತನೇ ತರಗತಿ ಫೇಲಾಗಿದ್ದೀಯಲ್ಲ" – ದೊಡ್ಡವಳಿಗೆ ಕೋಪ ಬಂತು.

"ಅಮ್ಮಾವ್ರೆ....." ಆಗ ಅದೇ ಹೊತ್ತಿಗೆ ಬೇಲಾ ಏನೋ ಹೇಳಬೇಕೂಂತ ಒಳಗೆ ಬಂದವಳು ಎಲ್ಲರ ಗಂಭೀರವಾದ ಮುಖಗಳನ್ನು ನೋಡಿ ಹಿಂತಿರುಗಿದಳು.

"ಮಗಳೇ, ಇವರದೆಲ್ಲ ಇದ್ದದ್ದೇ! ಮೊದಲು, ಬಂದವರಿಗೆ ಆದರ ಆತಿಥ್ಯ ನೀಡುವುದರ ಕಡೆ ಗಮನಕೊಡು." – ಅತ್ತೆ ಆ ನೀರವತೆಯನ್ನು ಮುರಿದು ಹೇಳಿದಳು.

"ನಾನೇನು ಹೇಳಿದೆ ಅತ್ತೆಯವರೇ! ಅವಳೇ ನಿಮಗೆ ದೊಡ್ಡವಳಾದಳಲ್ಲ!" ಹೋಗಿ ಅವರ ಹತ್ತಿರ ಕೇಳ್ತೀನಿ, "ಏನು ನಮ್ಮನ್ನು ಅವಮಾನ ಮಾಡಬೇಕೂಂತ ಕರ್ಕೊಂಡು ಬಂದ್ರಾ ಹೇಗೆ?" – ಅಂತ ಕೇಳಿಯೇ ಕೇಳ್ತೀನಿ. ನಾವು ಬಡವರಾಗಿರೋದು ನಮ್ಮ ಮನೇಲಿ. ಯಾರ ಮುಂದೂ ಕೈಯೊಡ್ಡಲಿಲ್ಲವಲ್ಲಾ? ಹೇಳುತ್ತಾ ದೊಡ್ಡವಳು ಡ್ರಾಯಿಂಗ್ ರೂಂ ಕಡೆ ನಡೆದಳು.

"ಬೆಂಕಿ ಹಚ್ಚಿ ಬಿಟ್ಟೆಯಲ್ಲ ಮಹಾರಾಣಿ" ಚಿಕ್ಕವಳು ಶಾಲ್ಮಲಿ ಮೇಲೆ ಎಗರಿಬಿದ್ದಳು.

"ಅಮ್ಮಾಜಿ ನಾನೇನು ಮಾಡಿದೇ?" – ಗಾಭರಿಯಿಂದ ಶಾಲ್ಮಲಿ ಕೇಳಿದಳು. ಅವಳಿಗೆ ಅವರ ಈ ಮಾತುಗಳ ತಲೆ ಬುಡ ತಿಳಿಯಲಿಲ್ಲ.

"ಏನು ವಿಷಯ ಶಾಲೂ?" ನರೇಶ್ ಸಿಟ್ಟಿನಿಂದಲೇ ರೂಂಒಳಗೆ ಪ್ರವೇಶಿಸಿದ.

"ನನಗೇನು ಗೊತ್ತು ನರೇಶ್? ನನಗಂತೂ ನಂದೇ....." ನೋವಿನಿಂದ ನರೇಶ್‌ನ ಮುಖವನ್ನು ನೋಡಿದಳು.

"ನಾನು ಅತ್ತಿಗೆ ವಿಚಾರವಾಗಿ ನಿನ್ನ ಹತ್ತಿರ ಏನೋ ಹೇಳಿದ್ದೆ. ಸರಿ, ಆದರೆ ಬಂದ ಅತಿಥಿಗಳನ್ನು ಹೀಗೆ ಅವಮಾನ ಮಾಡೋದು ಕೆಟ್ಟದಾಗಿ ನಡ್ಕೊಳ್ಳೋದು....." ನರೇಶ್ ಕೋಪದಲಿ ಹೇಳಿದ.

"ನಾನು......ನಾನು.......ಬಾಯೇ ತೆಗೀಲಿಲ್ಲ, ನರೇಶ್" ಶಾಲ್ಮಲಿ ಕಣ್ಣಲ್ಲಿ ನೀರು ತುಂಬಿಕೊಂಡು ಹೇಳಿದಳು.

"ಮೊದಲನೇ ಸಲ ಅವರು ನಮ್ಮ ಮನೆಗೆ ಬಂದಿರುವಾಗ ಅವರನ್ನು ಹೀಗೆಲ್ಲ ಬೈಯೋದೇ ಸಂಬಂಧಗಳಲ್ಲಿ ಹಣ, ಅಧಿಕಾರ, ಅಂತಸ್ತು ಯಾಕೆ ಬರಬೇಕು?" – ನರೇಶ್‌ನ ಧ್ವನಿಯಲ್ಲಿ ಸಿಟ್ಟು ತುಂಬಿತುಳುಕಿತ್ತು.

ಮಗು, ಇವರ ವಿಚಾರ ನಿನಗೆ ಗೊತ್ತಿರೋದೇ! ವಿನಾಕಾರಣ ಇವಳ ಮೇಲೆ ಕೆಂಡ ಕಾರ್ತಿದ್ದಾರೆ." ಅಮ್ಮ ಮಧ್ಯೆ ಪ್ರವೇಶಿಸಿ ಹೇಳಿದರು.

ಶಾಲ್ಮಲಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ನರೇಶ್ ನಾಚಿಕೆಯಿಂದ ಹೊರಟು ಹೋದ. ಚಿಕ್ಕವಳು ಸಿಟ್ಟಿನಲ್ಲಿಯೇ ಮಗುವನ್ನು ಎತ್ತಿಕೊಂಡು ಹೊರಗೆ ಹೋದಳು.

* * *

ಮನೆಗೆ ಬಂದಿದ್ದವರೆಲ್ಲ ಹೋಗಿ ಮನೆ ತಣ್ಣಗಿತ್ತು. ನೆಮ್ಮದಿಯ ಉಸಿರಾಡಿದಳು. ಕ್ರಮೇಣ ಗೊತ್ತಾಯ್ತು. ಮನೇಲಿದ್ದ ವಸ್ತುಗಳಲ್ಲಿ ಬಹಳಷ್ಟು ಅದೃಶ್ಯವಾಗಿದ್ದವು. ಆದರೂ ಬಾಯಿ ತೆಗೆದು ಚಕಾರ ಹೇಳಲಿಲ್ಲ. ಅಮ್ಮಾಜಿಗೆ ಎಲ್ಲ ಗೊತ್ತಾಗಿತ್ತು. ನರೇಶ್‌ನಿಗೆ ತನ್ನ ವಸ್ತುಗಳ ಅಗತ್ಯ ಬಿದ್ದಾಗ ಅವುಗಳಿಗಾಗಿ ಹುಡುಕಾಡಿದಾಗ ತಿಳೀತಿತ್ತು. ಅವೆಲ್ಲ ಏನಾದವು ಅಂತ! ಒಂದು ದಿನ ತನ್ನ ಶರ್ಟ್ ಮತ್ತು ಶೂ ಕಾಣದೆ ಹೋದಾಗ ಸಿಡಿದೆದ್ದ – "ಇವರಂತು ಕೊಳ್ಳೆ ಹೊಡೆದು ಹೋದರು."

"ಇವತ್ತು ಆಫೀಸಿನಿಂದ ಬರುವಾಗ ತಂದುಕೊಡ್ತೇನೆ" – ಶಾಂತವಾಗಿ ಹೇಳಿದಳು.

"ನಿನ್ನ ಧೈರ್ಯ ಸಾಕು ಮಗಳೆ! ಇದನ್ನೇ ಸಂಸ್ಕಾರ ಅಂತ ಹೇಳೋದು. ನಿನ್ನಪ್ಪ ಅಮ್ಮ ನಿಜವಾಗಿಯೂ ಅದೃಷ್ಟವಂತರು!" – ಅತ್ತೆ ಶಾಲ್ಮಲಿಯ ತಾಳ್ಮೆಯನ್ನು ಹದಿನೈದು ದಿನಗಳಿಂದ ಗಮನಿಸುತ್ತಾ ಬಂದಿದ್ದರು. ಬೇರೆ ಯಾರೇ ಆಗಿದ್ದರೂ ಸಿಟ್ಟಿಗೆದ್ದು ಒಂದು ನಿಮಿಷದಲ್ಲಿ ಅವರನ್ನೆಲ್ಲಾ ಹೊರಗೆ ಹಾಕಿರುತ್ತಿದ್ದರು.

"ಸಾರಿ ಶಾಲೂ, ನಿನಗೆ ತುಂಬ ತೊಂದರೆ ಆಯಿತು. ನಾನು ಏನು ಹೇಳಲಿ ಈಗ?" ರಾತ್ರಿ ನರೇಶ್ ಶಾಲ್ಮಲಿಗೆ ಹೇಳಿದ.

"ಬೇರೆ ಬೇರೆ ರೀತಿ ಜನ ಇರ್ತಾರೆ – ಅದಕ್ಕೆ ನೀನ್ಯಾಕೆ ಕ್ಷಮೆ ಕೇಳಬೇಕು? ನಿನ್ನ ನೆಂಟರು ಹೇಗೋ ನನ್ನ ನೆಂಟರೂ ಹಾಗೆ. ನನ್ನ ನಿನ್ನ ಮಧ್ಯೆ ವ್ಯತ್ಯಾಸ ಬೇಡ. ನಾವಿಬ್ಬರೂ ಬೇರೆ ಬೇರೆ ಅಲ್ಲ. – ತನ್ನ ನೋವನ್ನು ನುಂಗಿಕೊಂಡು ಹೇಳಿದಳು, ಶಾಲ್ಮಲಿ.

"ದೊಡ್ಡ ಅತ್ತಿಗೆ...." ನರೇಶ್ ಏನನ್ನೋ ಹೇಳ ಬಯಸಿದ.

"ಬಿಡು ನರೇಶ್, ಆದದ್ದು ಆಗಿ ಹೋಯ್ತು. ಈಗ ಬೇರೆ ಏನಾದರೂ ಮಾತಾಡು." ಶಾಲ್ಮಲಿ ಹೇಳಿದಳು. ನರೇಶ್‌ನಿಗೆ ಏನೆಂದು ಹೇಳುವುದು. ಬೇಲಾ, ಕಿಶೋರಿಲಾಲ್ ಇಬ್ಬರ ಹತ್ತಿರವೂ ತಮ್ಮ ಮೇಲೆ ಚಾಡಿ ಹೇಳಿದ್ದಾರೆ, ದೊಡ್ಡ ಅತ್ತಿಗೆ ಬೇಲಾ ಮನೆಗೆ ಹೋಗಿ ತನ್ನ ಬಗ್ಗೆ ಕೆಟ್ಟ ಕೆಟ್ಟದಾಗಿ ಏನೆಲ್ಲ ಹೇಳಿದ್ದಾರೆ, ಬೇಲಾ ಅತ್ತೆ ಬಂದು ಕಾಲು ಹಿಡಿದು ಕ್ಷಮೆ ಕೇಳಿದ್ದಾಳೆ, – ಇವನ್ನೆಲ್ಲ ಹೇಗೆ ಹೇಳುವುದು? ಈ ಒಂದು ಆರು ವರ್ಷಗಳಿಂದ ಗಳಿಸಿದ ಮಾನ ಮರ್ಯಾದೆ, ಪ್ರತಿಷ್ಠೆಗಳು ಇವರಿಂದಾಗಿ ಚೂರಾಗಿದೆ ಅಂತ ನರೇಶ್‌ಗೆ ಹೇಳುವುದೇ? ಅವರು ನರೇಶ್‌ನ ಅಣ್ಣ ಅತ್ತಿಗೆಯವರೇ ಇರಬಹುದು ಆದರೆ ತನ್ನ ಅತ್ತೆ ಮನೆಯವರೂ ಹೌದಲ್ಲವೆ.

ಕೆಲವು ದಿನಗಳಿಂದ ಶಾಲ್ಮಲಿಗೆ ಹಳೆ ಚಟಗಳು ಮರಳಿದ್ದವು. ಮನಸ್ಸಿಗೆ ಕಸಿವಿಸಿಯಾದಾಗ ಅವಳು ಕವಿತೆಗಳಲ್ಲಿ ಜೀವನದ ಸ್ವಾರಸ್ಯವನ್ನು ಹುಡುಕುತ್ತಿದ್ದಳು. ಗುಣು ಗುಣಿಸುತ್ತಾ ಆತ್ಮದ ಕಳೆದ ರಸ ಕ್ಷಣಗಳನ್ನು ಮರಳಿ ಪಡೆಯಲು ಯತ್ನಿಸುತ್ತಿದ್ದಳು.

ಸುತ್ತಲೂ ಜಗತ್ತು ಅಸ್ಪಷ್ಟ ಕತ್ತಲೆಯಿಂದ ಆವೃತವಾದಂತೆ ಭಾಸವಾಯಿತು. ಅಸ್ಪಷ್ಟತೆಯೊಳಗೆ ಲೀನವಾದ ತನ್ನ ವ್ಯಕ್ತಿತ್ವ ಜಗತ್ತುಗಳನ್ನು ನೋಡಿ ವ್ಯಾಕುಲಗೊಂಡರೂ, ಇಡೀ ಪರಿಸರದೊಂದಿಗೆ ಬೇಸತ್ತಿದ್ದರೂ ಹೊರಗೆ ಲಾನ್ ಮೇಲೆ ಅಡ್ಡಾಡುತ್ತ ಕವಿತೆಯ ಸಾಲುಗಳನ್ನು ಗುಣಗುಣಿಸುತ್ತಿದ್ದಳು.

"ಶಾಲೂ!.......ಶಾಲೂ! – ಒಳಗಿನಿಂದ ನರೇಶ್‌ನ ಸ್ವರ ಕೇಳಿಸಿತು. ಅದನ್ನು ಕೇಳಿದ ಶಾಲ್ಮಲಿ ಒಂದು ಕ್ಷಣ ಬೆಚ್ಚಿದಳು, ಕ್ರಮೇಣ ಅವನೆಡೆಗೆ ನಡೆದಳು.

"ಕನಸಿನ ಲೋಕದಿಂದ ವಾಸ್ತವ ಜಗತ್ತಿಗೆ ಬಾ" – ಕಿಟಕಿಯಿಂದ ನರೇಶ್ ಶಾಲ್ಮಲಿಯ ಕಡೆ ಮುಖಮಾಡಿ ಹೇಳಿದ.

"ಹಾಂ!" ಮತ್ತೊಮ್ಮೆ ಬೆಚ್ಚಿದಂತಾಗಿ ಅವನ ಕಡೆ, ನರೇಶ್‌ನಿಂದ ಹೀಗೆ ಕಠೋರವಾದ ಮಾತನ್ನು ನಿರೀಕ್ಷಿಸಿರಲಿಲ್ಲವೆಂಬ ಭಾವ ತುಂಬಿದ ಕಣ್ಣುಗಳಿಂದ ನೋಡಿದಳು.

"ನನ್ನ ಷರ್ಟಿಗೆ ಗುಂಡಿಗಳಿಲ್ಲ. ನೀನು ನೋಡಿದರೆ ಎಲ್ಲೋ ಕಲ್ಪನೆಯಲ್ಲಿ ಇರುತ್ತೀ. ನನಗೆ ಹೊತ್ತಾಗುತ್ತಿದೆ." ಸಿಟ್ಟಿನಿಂದ ಹೇಳಿದ.

"ನಾನು ನಿನ್ನೇನೇ ಧೋಬಿ ಬಂದಾಗ, ಎಲ್ಲ ಸರಿಮಾಡಿ ಇರಿಸಿದ್ದೆ. ನೋಡ್ತೀನಿ." ಇಷ್ಟು ಹೇಳಿ ಶಾಲ್ಮಲಿ ನರೇಶ್‌ನ ಶರ್ಟ್ ಕಡೆ ಬೇಸರದಿಂದ ನೋಡಿ ಮುಂದೆ ಬಂದಳು.

"ಈಗ ಸೂಜಿ, ದಾರ ಹಿಡಿದು ಕೂತ್ಕೊಳ್ತೀಯೇನು?" ನರೇಶ್ ಗಡಿಯಾರ ನೋಡಿಕೊಂಡು ಕ್ರೋಧದಿಂದ ಹೇಳಿದ.

"ನೀನು ಮಾತು ಮಾತಿಗೂ ಕೋಪ ಮಾಡಿಕೊಳ್ತೀಯ" ಅವನ ಆತುರ ನೋಡಿ ಹೇಳಿದಳು, ಶಾಲ್ಮಲಿ.

"ಭಾಷಣ ಬಿಗಿಬೇಡ, ನಿನ್ನ ದಮ್ಮಯ್ಯ" ನರೇಶ್ ಅಲಮಾರಿನ ಬಾಗಿಲು ತೆಗೀಬೇಕು ಅಂದುಕೊಳ್ಳುವಷ್ಟರಲ್ಲಿ, –

"ಇಗೋ ಇಲ್ಲಿದೆ ನಿನ್ನ ಷರ್ಟ್. ಇದನ್ನು ಕಿಶೋರಿ ಲಾಲ್‌ಗೆ ಅಂತ ತೆಗೆದಿರಿಸಿದ್ದೆ. ಇದನ್ನು ಯಾಕೆ ತೆಗೆದೆ?" ಶಾಲ್ಮಲಿ ಎರಡನೇ ಸಲ ಅದನ್ನು ಮಡಿಚಿ ಸ್ಟೂಲ್ ಮೇಲೆ ಇಟ್ಟಳು.

"ನನಗೇನು ಗೊತ್ತಿತ್ತು?" ಹೇಳುತ್ತಾ ಷರ್ಟ್‌ಬಟನ್ ಹಾಕಿಕೊಂಡ.

"ನೀನಂತೂ......" ಶಾಲ್ಮಲಿ ಮೆಲ್ಲಗೆ ನಿಧಾನವಾಗಿ ಹೇಳಿದಳು.

"ಹೌದು. ನೀನು ದಾನಶೂರಳು. ಸದ್ಯ ನಮ್ಮನ್ನೂ ಒಂದು ದಿನ ಯಾರಿಗಾದರೂ ದಾನಮಾಡಿ ಬಿಟ್ಟೀಯ". ತಲೆ ಬಾಚಿಕೊಳ್ಳುತ್ತಾ ಹೇಳಿದ ನರೇಶ್.

"ತಮ್ಮನ್ನು ಯಾರೂ ದಾನವಾಗಿ ಕೊಡೊಲ್ಲ" ಎನ್ನುತ್ತಲೇ ನರೇಶ್ ಬಿಚ್ಚಿಟ್ಟ ಬಟ್ಟೆಗಳನ್ನು ಮಡಿಚಿಟ್ಟಳು.

"ಸ್ವಲ್ಪ ದುಡ್ಡಿದ್ದರೆ ಕೊಡ್ತೀಯ?" – ಸವಿ ತುಂಬಿಕೊಂಡು ಕೇಳಿದ.

"ಯಾಕೋ. ನೆನ್ನೇನೆ ಇನ್ನೂರು ರೂಪಾಯಿ ತಗೊಂಡಿದ್ದೆ!" ಗಾಭರಿಯಿಂದ ಕೇಳಿದಳು.

"ಖಾಲಿ ಆಗೋಯ್ತು. ಖರ್ಚು ಮಾಡಬಾರದೂಂತಲೇ ಇದ್ದೆ. ಆದರೆ ಖರ್ಚಾಗಿ ಹೋಯ್ತು." ಬೇಜಾರು ಮಾಡಿಕೊಂಡಂತೆ ಹೇಳಿದ.

"ಈಗ ಮನೇಲಿ ಐವತ್ತೋ ಅರವತ್ತೋ ಇರಬಹುದು. ನೆನ್ನೆ ಶನಿವಾರ, ಇವತ್ತು ಭಾನುವಾರ......." ಪ್ರಶ್ನಾರ್ಥಕವಾಗಿ ನೋಡಿದಳು.

"ಏನಾದರೂ ಮಾಡು ಶಾಲೂ, ಇಲ್ಲಾಂದ್ರೆ ನನ್ನ ಸಾಯಂಕಾಲದ ಪ್ರೋಗ್ರಾಮ್ ಎಲ್ಲಾ ಹಾಳಾಗುತ್ತೆ." ರಮಿಸುವ ದನಿಯಲ್ಲಿ ಹೇಳಿದ.

"ಹೋಗಲಿ ಬಿಡಿ". ತಣ್ಣಗೆ ಉತ್ತರಿಸಿದಳು ಮತ್ತು ಹಾಸಿಗೆ ಮೇಲೆ ಬಿದ್ದುಕೊಂಡು ಸಮಾಚಾರ ಪತ್ರವನ್ನು ಕೈಗೆತ್ತಿಕೊಂಡಳು.

"ನಿನ್ನ ಹತ್ತಿರ ಏನೂ ಬಚ್ಚಿಟ್ಟಿರೋದೋ ಮುಚ್ಚಿಟ್ಟಿರೋದೋ ಇಲ್ವೇನು?" ಕಡೆಯ ಪ್ರಯತ್ನವಾಗಿ ಕೇಳಿದ.

"ಬಚ್ಚಿಟ್ಟಿರೋದು? ಇಲ್ಲಿ ಯಾರಿಂದ ಬಚ್ಚಿಡಬೇಕಾಗಿದೆ?" – ಶಾಲ್ಮಲಿ ನಕ್ಕಳು.

"ಹೆಂಗಸರು ಕಷ್ಟಕ್ಕೆ ಇರಲಿ ಅಂತ ಮುಚ್ಚಿಟ್ಟಿರುತ್ತಾರೆ, ನನಗೆ ಈ ಸಮಯದಲ್ಲಿ ಅದು ಸಿಗಬಹುದು ಅಂದುಕೊಂಡೆ" – ಮುಗ್ಧನಂತೆ ಹೇಳಿದ.

"ನಾನು ಯಾವತ್ತೂ ಇದನ್ನು ಮಾಡೊಲ್ಲ" – ಸಂಕ್ಷಿಪ್ತವಾಗಿ ಉತ್ತರಿಸಿ ಮತ್ತೆ ಪತ್ರಿಕೆ ಓದತೊಡಗಿದಳು.

"ಇಷ್ಟೊಂದು ನಿರ್ದಯಳಾಗಬೇಡ". ನರೇಶ್ ಶಾಲ್ಮಲಿಯ ಬಳಿ ಬಂದು ನಿಂತ.

"ಯಾಕೆ ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಬರಲಿಲ್ಲ?" – ಕೋಪದಿಂದಲೇ ಹೇಳಿದಳು.

"ನಂಬಿಕೆಯೇನೋ ಇದೆ. ಆದರೆ......." ನರೇಶ್ ಬೇಸರದಿಂದ ಹೇಳಿದ.

"ಒಂದು ದಿನ ಹೋಗಲಿಲ್ಲ ಅಂದ್ರೆ, ತಲೇಮೇಲೆ ಆಕಾಶ ಬೀಳುತ್ತೇನು?" ಅಸಮಾಧಾನದಿಂದ ಹೇಳಿದಳು, ಶಾಲ್ಮಲಿ.

"ನಿನಗೆ ಯಾಕೆ ಅರ್ಥವಾಗೊಲ್ಲ?" ದಣಿದ ಸ್ವರದಲ್ಲಿ ಹೇಳಿದ.

"ಅರ್ಥವಾಗುತ್ತೆ" ಶಾಲ್ಮಲಿಗೆ ಕೋಪಬಂತು.

"ಎಲ್ಲ ಅರ್ಥವಾಗುತ್ತೇನು?" ನರೇಶ್ ಒರಟಾಗಿ ಹೇಳಿದ.

"ಅದು ನಿನಗೂ ಚೆನ್ನಾಗಿ ಗೊತ್ತಿದೆ." – ಶಾಲ್ಮಲಿ ನರೇಶ್‌ನ ಕಡೆ ಕ್ರೂರವಾಗಿ ನೋಡಿದಳು.

"ಏನು ಹೇಳಬೇಕೂಂತಿದ್ದೀಯ?" ಭಯ ಮಿಶ್ರಿತ ಕ್ರೋಧದಿಂದ ಹೇಳಿದ.

"ಅದನ್ನೂ ನಾನೇ ಹೇಳಬೇಕೇನು?" ಸಿಡಿಮಿಡಿಗೊಂಡು ಹೇಳಿದಳು, ಶಾಲ್ಮಲಿ.

"ಕಾಸು ಕೊಡ್ತೀಯೋ ಇಲ್ವೋ?" ನರೇಶ್ ಕೇಳಿದ.

"ಎಲ್ಲಿಂದ ಕೊಡಲಿ? ಇದ್ದರೆ ತಾನೇ ಕೊಡೋಕೆ?" – ವಿವಶಳಾಗಿ ಹೇಳಿದಳು.

"ಎಲ್ಲಿ ಹೋಗುತ್ತೆ ಬರುವ ದುಡ್ಡೆಲ್ಲ? ಇಬ್ಬರ ಸಂಪಾದನೆ ಇದೆ ಈ ಮನೇಲಿ..... ಅಂಥಾದರಲ್ಲಿ........" ಕೋಪದಿಂದ ಕಾಲನ್ನು ನೆಲಕ್ಕೆ ಅಪ್ಪಳಿಸಿದ.

"ಎರಡು ಮೂರು ದಿವಸಕ್ಕೊಮ್ಮೆ ನಿನ್ನ ಜೇಬು ಖರ್ಚಿಗೆ ಇನ್ನೂರು ಮುನ್ನೂರು ರೂಪಾಯಿ ಬೇಕಾಗ್ತಿರೋವಾಗ, ಇಬ್ಬರ ಸಂಪಾದನೇನೂ ಖರ್ಚಾಗೊಲ್ವೇನು? ಯಾವತ್ತಾದರೂ ಯೋಚನೆ ಮಾಡಿದ್ದೀಯೇನು?.....ಸಾಲದ್ದಕ್ಕೆ ಮಕ್ಕಳ ತರಹ ಹಠ ಬೇರೆ ಮಾಡ್ತೀಯ! – ಶಾಲ್ಮಲಿ ದುಃಖದಿಂದ ಹೇಳಿದಳು.

"ನಿನ್ನ ತರ್ಕ, ನಿನ್ನ ಉಪದೇಶ.....ಸಾಕಾಗಿದೆ" – ನರೇಶ್ ಹೇಳುತ್ತಾ ಹೊರಗೆ ನಡೆದ.

ನರೇಶ್ ಹೋಗುವುದನ್ನು ನೋಡುತ್ತಿದ್ದಳು. ಅವನ ಮಾತುಗಳು ಕಪಾಳಕ್ಕೆ ಹೊಡೆದಂತಿತ್ತು. ಬಲವಂತದಿಮದ ಕಂಬನಿಯನ್ನು ತಡೆದಳು. ಅವಮಾನ....... ಪದೇ ಪದೇ ಅವಮಾನ...... ಇದಕ್ಕೆ ಉತ್ತರ?.......ಗಂಡನಿಗೆ ತನ್ನ ಭಾವನೆಗಳನ್ನು ಅಭಿವ್ಯಕ್ತಿಸಲು ಎಷ್ಟು ಮಾರ್ಗಗಳಿವೆ. ಆದರೆ ಹೆಣ್ಣಿಗೆ......?

ನರೇಶ್ ತನ್ನವನೇ ಆಗಿಯೂ ಪರಕೀಯ. ಪ್ರತಿಸಲವೂ ಇವನ ಒಂದೊಂದು ಹೊಸ ಮುಖದ ಪರಿಚಯವಾಗುತ್ತೆ. ಎಂತಹ ಅಸಂಭಾವ್ಯ ಘಟನೆ ಎನಿಸುತ್ತೆ. ನನ್ನನ್ನು ಹಣ ಕೊಡೊ ಮರ ಅಂತ ತಿಳ್ಕೊಂಡಿದ್ದಾನಾ ಹೇಗೆ? ಕೇವಲ ದುಡ್ಡು ಕೊಡುವ ಯಂತ್ರ ಅಂತ ಭಾವಿಸಿದವನಿಗೆ ನನ್ನ ಬಗ್ಗೆ ಮನುಷ್ಯ ಸಹಜ ಭಾವನೆಗಳನ್ನು ಇರಿಸಿಕೊಳ್ಳುವುದು ಸಾಧ್ಯವೇ?" ಶಾಲ್ಮಲಿ ತನ್ನ ಹಣೆಯಲ್ಲಿ ಗಟ್ಟಿಯಾಗಿ ಅದುಮಿಕೊಂಡಳು.

* * *

ಆಫೀಸಿನಲ್ಲಿ ಫೈಲುಗಳು, ಮೀಟಿಂಗುಗಳು ತಲೆ ಎತ್ತಿ ನೋಡುವುದಕ್ಕೂ ಅವಕಾಶ ಕೊಡುತ್ತಿಲ್ಲ. ಸಂಜೆ ಹೊತ್ತು ಮನೆ, ಕ್ಲಬ್, ಸಿನಿಮಾ, ನಾಟಕ – ಎಲ್ಲ ಕಡೆಗೂ ಒಬ್ಬಳೇ ಹೋಗೋದೇ? ತನ್ನ ಜೀವನದಲ್ಲಿನ ನೀರಸತೆಯಿಂದ ಬೇಸತ್ತಿದ್ದಳು. ಮೇಲೆ ನೋಡುವುದಕ್ಕೆ ಬದಲಾಗಿ ಕೆಳಗೆ, ಇನ್ನೂ ಕೆಳಗೆ ನೋಡುತ್ತಾ ನೋಡುತ್ತಾ, ಇಳಿದು ಹೋಗುತ್ತಿದ್ದಳು. ಪಾತಾಳಕ್ಕೆ!

"ಹುಷಾರಾಗಿದ್ದೀಯ ಶಾಲ್ಮಲಿ?" ಒಂದು ದಿನ ಸರೋಜ್ ಕೇಳಿದಳು.

"ಹೂಂ" ಎಂದಳು. ಶಾಲ್ಮಲಿ.

"ಇಲ್ಲ ಏನನ್ನೋ ನಮ್ಮಿಂದ ಮರೆಮಾಚುತ್ತಿರುವೆ" – ಸರೋಜ್ ತೀಕ್ಷ್ಣವಾಗಿ ನೋಡಿ ಹೇಳಿದಳು.

"ಮರೆಮಾಚೋದು ಏನಿದೆ? ಏನೂ ಇಲ್ವೇ ಇಲ್ಲ ಅನ್ನುವಾಗ?" – ಶಾಲ್ಮಲಿ ನಕ್ಕು ಬಿಟ್ಟಳು.

"ನನ್ನ ಅರ್ಥ, ನಿನ್ನ ಅತ್ತೆ ಮನೆಯವರು, ನಿನ್ನ ಗಂಡ ಮಿ. ಕುಮಾರ್....?" ಅವಳನ್ನು ಪರೀಕ್ಷಿಸುವಂತೆ ನೋಡಿದಳು.

"ಹೇಳಿದೆನಲ್ಲ, ಬಹಳ ಒಳ್ಳೆಯವರು. ಎಲ್ಲರೂ ನನ್ನನ್ನು ಪ್ರೀತಿಸ್ತಾರೆ" ಹೇಳುತ್ತಾ ಶಾಲ್ಮಲಿ ಚಿಂತಾಗ್ರಸ್ತಳಾದಳು.

"ಹೇಳು ಶಾಲ್ಮಲಿ........ಹೇಳಿ ಬಿಡು. ಮನಸ್ಸಿಗೆ ಹಗುರ ಆಗುತ್ತೆ. ಇಲ್ಲಾಂದ್ರೆ ಈ ಮೌನವೇ ನಮಗೆ ಮುಂದೆ ಮೋಸಮಾಡುತ್ತೆ" – ಸರೋಜಳ ಧ್ವನಿ ತನ್ನ ಸ್ವಂತ ಅನುಭವದಿಂದ ಕೂಡಿರುವಂತೆ ಅನಿಸಿತು. ಶಾಲ್ಮಲಿಗೆ.

"ಸರೋಜ್ ನನಗೆ ಅನಿಸುತ್ತೆ, ನಾವು ಹೆಂಗಸರು ಸಂಬಂಧಿಗಳಿಗಾಗಿ ಬದುಕುತ್ತೇವೆ. ಅದಕ್ಕಾಗಿ ಏನು ಬೇಕಾದರೂ ಮಾಡ್ತೇವೆ. ನಮ್ಮ ಸೂಕ್ಷ್ಮತೆ, ಕೋಮಲತೆಗಳನ್ನು ನಮ್ಮ ದೌರ್ಬಲ್ಯವೆಂದು, ಸಂಬಂಧಗಳನ್ನು ಬಂಧನವೆಂದು ಪರಿಗಣಿಸಲಾಗುತ್ತಿದೆ, – ಹೀಗಾಗುವುದರಲ್ಲಿ ಯಾವ ನ್ಯಾಯ ಇದೆ? – ವೈಯಕ್ತಿಕ ವಿಚಾರದ ಎಡೆಯಲ್ಲಿ ಲೋಕದ ರೂಢಿಯ ಮಾತನ್ನು ಹೇಳಿದಳು. ನ್ಯಾಯ, ಅನ್ಯಾಯಗಳ ವಿಚಾರವಾಗಿ ತಲೆ ಕೆಡಿಸಿಕೊಳ್ಳಬೇಡ. ನ್ಯಾಯ ಅನ್ಯಾಯಗಳೆರಡೂ ಪ್ರತಿಸಂದರ್ಭದಲ್ಲಿಯೂ ತಮ್ಮ ಬಣ್ಣಗಳನ್ನು ಬದಲಾಯಿಸುತ್ತವೆ." – ಸರೋಜ್ ಕಹಿ ಅನುಭವದ ಮಾತನ್ನು ಹೇಳಿದಳು.

"ಆಗಾಗ ನನಗೆ ಗಂಡಸು ಒಂದು ಕುದುರೆ ಇದ್ದ ಹಾಗೆ ಅನಿಸುತ್ತೆ. ಅದಕ್ಕೆ ಓಡುವುದು ಒಂದೇ ಗೊತ್ತಿರೋದು. ಅದರ ಕಣ್ಣುಗಳಿಗೆ ಕಟ್ಟಿರುವ ಪಟ್ಟಿ, ಅದು ಓಡಬೇಕಾದ ಸಂಕೀರ್ಣ ದಾರಿಯಷ್ಟನ್ನು ಮಾತ್ರವೇ ತೋರಿಸುತ್ತದೆ. ಮಾನವೀಯ ಸಂಬಂಧಗಳ ಸೂಕ್ಷ್ಮತೆ, ವ್ಯಾಪಕತೆ, ವಿಸ್ತಾರಗಳು ಇವರ ಅರಿವಿಗೆ ಬರುವುದೇ ಇಲ್ಲ. ಈ ಭಾವನೆಗಳು, ಸಂವೇದನೆಗಳು ಬಲವಂತದಿಂದ, ಬಲ ಪ್ರಯೋಗದಿಂದ ಮೂಡಿಸಲು ಸಾಧ್ಯವಿಲ್ಲ." ಶಾಲ್ಮಲಿ ತಡೆತಡೆದು ವಾಕ್ಯಗಳನ್ನು ಪೂರೈಸಿದಳು.

"ಬಲದ ಮಾತಿರಲಿ. ನೀನು ಯಾವ ಶ್ರೇಷ್ಠ, ಉತ್ತಮ ಪುರುಷನ ಕಲ್ಪನೆಯಲ್ಲಿ ಇದ್ದೀಯ? ಇವರ ಹತ್ತಿರ ಬಲ ಎಲ್ಲಿದೆ? ಬಲದ ಮೇಲ್ಪದರ ಮಾತ್ರವೇ ಇದೆ. ಇವರೆಲ್ಲ ಕಾಗದದ ಕುದುರೆಗಳು ಇಲ್ಲ ಕೀಲು ಕುದುರೆಗಳು, ಬ್ಯಾಟರಿ ಇಲ್ಲದೆ ಮುಂದೆ ಸಾಗುವುದಿಲ್ಲ. ಹೆಣ್ಣು ಹೇಗೆ ಪೊರೆ ಕಳಚುತ್ತಿದ್ದಾಳೋ ಹಾಗೆಯೇ ಗಂಡು. ಇಬ್ಬರೂ ಬದಲಾಯಿಸಿದ್ದಾರೆ. ಆದರೆ ಈ ಬದಲಾವಣೆಯಲ್ಲಿ ಮೂಲಭೂತ ವ್ಯತ್ಯಾಸವೆಂದರೆ ಹೆಣ್ಣು ಬಹಳ ಗಂಭೀರವಾಗಿ ತೆಗೆದುಕೊಳ್ಳುತ್ತಿದ್ದಾಳೆ ಈ ಬದಲಾವಣೆಯನ್ನು. ಅವಳಲ್ಲಿನ ಈ ಬದಲಾವಣೆ, ಈ ಸಿಟ್ಟು....... ಶತಶತಮಾನಗಳಿಂದ ಬಿಗಿದ ಬೇಡಿಗಳನ್ನು ಕಿತ್ತೆಸೆಯಬೇಕೆನ್ನುವ ತುಡಿತ...... ಗಂಡಿನಲ್ಲಿ ಒಂದು ಬಗೆಯ ಭಯ, ಆತಂಕಗಳನ್ನು ಸೃಷ್ಟಿಸಿದೆ. ನೋಡ್ತಿದ್ದಿಯಲ್ಲ ಆಫೀಸಿನಲ್ಲಿ, ದಿನಾ ನಡೆಯೋದನ್ನ ನಮ್ಮ ಪ್ರಬುದ್ಧತೆ, ನಮ್ಮ ಪ್ರಗತಿಗಳು ಇವರಿಗೆ ಸಹಿಸಲಾಗುವುದಿಲ್ಲ. ಇವರು ಬಯಸುವುದು. ನಾವೆಷ್ಟೇ ಮುಂದುವರೆದಿದ್ದರೂ, ಮೇಲಿದ್ದರೂ, ಇವರ ಹಿಂದೆ ಮುಂದೆ ಬಾಲ ಆಡಿಸುತ್ತ ತಿರುಗುತ್ತಿರಬೇಕು. ಹೀಗೆ ಆಘಾತಗೊಂಡ ಗಂಡಸು. ಪತಿಯಾಗಿ ಸಹಜವಾಗಿ ಬಾಳ ಬಲ್ಲನೇ?"

ಫೋನ್ನಿನ ಕರೆಗೆ ಸರೋಜಳ ಮಾತು ಅಲ್ಲಿಗೇ ನಿಂತಿತು.

"ಹಲೋ!" ಶಾಲ್ಮಲಿ ರಿಸೀವರನ್ನೆತ್ತಿಕೊಂಡಳು. ಆ ಕಡೆಯಿಂದ ಮಾತು ಕೇಳಿಸಲಿಲ್ಲ. ಫೋನ್ ಕಟ್ ಆಯಿತು. ಶಾಲ್ಮಲಿ ಸಿಡಿಮಿಡಿಯಿಂದ ಹೇಳಿದಳು.

"ಬೆಳಗಿನಿಂದ ಹೀಗೇ ಆಗ್ತಿದೆ"

"ಯಾವುದೋ ನೊಂದ ಜೀವ ಇರಬೇಕು. ಬೇರೆಯವರ ನೋವಿನಲ್ಲಿ ಸುಖಪಡೀತೀರಬಹುದು. ಸರಿ, ನಾನು ಹೊರಟೆ. ಆಮೇಲೆ ನೋಡೋಣ" – ಸರೋಜ್ ಗಡಿಯಾರ ನೋಡಿ ಎದ್ದಳು.

ಸರೋಜ್ ಎದ್ದು ಹೋದ ಮೇಲೆ ಶಾಲ್ಮಲಿ ಸೀಟು ಬಿಟ್ಟೆದ್ದು ಕಿಟಕಿಯ ಬಳಿ ಬಂದು ನಿಂತಳು. ಎದುರುಗಡೆ ದಟ್ಟವಾದ ಮರಗಳ ನಡುವೆ ಕಟ್ಟಡಗಳ ಸಾಲು ಸಾಲು! ಇಷ್ಟು ಎತ್ತರದಿಂದ ನೋಡಿದರೆ ದಿಲ್ಲಿಯ, ಈ ಭಾಗ, ಯಾವಾಗಲೂ ಹೊಸದಾಗಿ, ಅಪರಿಚಿತರಾಗಿ ಕಾಣುತ್ತದೆ. ಇದೇ ರೀತಿ, ದಟ್ಟ ಜನಸಂದಣಿಯಂದ ಬೇಸತ್ತು, ರಾಷ್ಟ್ರಪತಿ ಭವನದ ಕಡೆಗೆ ಬಂದರೆ, ಸೌತ್ ಮತ್ತು ನಾರ್ತ್ ಬ್ಲಾಕ್‌ಗಳು ಎರಡೂ ದಿಲ್ಲಿಯ ಭಾಗವೇ! – ಎಂಬ ಭ್ರಮೆಗೆ ಒಳಗಾಗುತ್ತೇವೆ.

ಮತ್ತೆ ಫೋನಿನ ಗಂಟೆ ಬಾರಿಸಿತು. ಫೋನ್ ಎತ್ತಲಿಲ್ಲ ಶಾಲ್ಮಲಿ. ಕಿಟಕಿಯಿಮದ ಸರಿದು ತನ್ನ ಸೀಟ್‌ನಲ್ಲಿ ಕುಳಿತಳು. ಮುಂದಿದ್ದ ಫೈಲ್‌ಗಳನ್ನು ಮಗ್ನವಾಗಿ ಗಮನಿಸುತ್ತಿದ್ದಳು.

ನಾವು ಯಾರಾದರೂ ಹೆಂಗಸರು ಇಬ್ಬರೂ ಒಟ್ಟಿಗೆ ಸಿಕ್ಕಿದರೆ ಗಂಡಸಿನ ವ್ಯವಹಾರದ ಜಟಿಲತೆ, ಸಂಕೀರ್ಣತೆಗಳ ಬಗ್ಗೆ ಮಾತನಾಡಿದರೆ, ಇಬ್ಬರು ಗಂಡಸರು ಸಿಕ್ಕಾಗ ಮಾತನಾಡಿಕೊಳ್ಳುವುದು, ಹೆಣ್ಣಿನ ಕೆಲಸದ ಬಗ್ಗೆ, ಅವಳ ಸೌಂದರ್ಯದ ಬಗ್ಗೆ ಅವರಿಗೆ ಅವಳ ವ್ಯವಹಾರ, ನಡವಳಿಕೆ, ಮನಸ್ಸು, ಬುದ್ಧಿಶಕ್ತಿಗಳ ಬಗ್ಗೆ ಯೋಚನೆ ಮಾಡಬೇಕೂಂತ ಅನಿಸುವುದೇ ಇಲ್ಲ. ಈ ಕಡೆ ಹೆಣ್ಣು ಅವಳ ಬಾಳ ಸಂಗಾತಿಯ ವಿಚಾರಗಳನ್ನು, ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನದಲ್ಲಿರುತ್ತಾಳೆ. ವಿಚಾರ ಸಾಮರಸ್ಯ, ಭಾವ ಸಾಮರಸ್ಯ ಸಮಾನ ಹೃದಯ – ಇಲ್ಲದೆಯೇ ದೇಹಗಳು ಒಂದಾಗಬಲ್ಲವೇ? ಮನೆ, ಕುಟುಂಬಗಳು ಸಾಧ್ಯವೇ? ಎರಡು ಜೀವಗಳು ಒಟ್ಟಿಗೆ ಬದುಕುತ್ತಿದ್ದೂ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳಲು ಹಿಂಜರಿಯುವುದೇಕೆ. ತಮ್ಮ ತಮ್ಮ ಹಠ, ಬಲ ಪ್ರಯೋಗಗಳಿಂದ ಪರಸ್ಪರರ ಇಚ್ಛೆಗಳನ್ನು ಹೇರುವುದು, ನಿಯಂತ್ರಿಸುವುದು ಏತಕ್ಕಾಗಿ? ಪ್ರತಿಯೊಬ್ಬ ಮನುಷ್ಯನಿಗೂ ವೈಯಕ್ತಿಕ ಸ್ವಾತಂತ್ರ್ಯದ ಹಕ್ಕು ಇರುವುದಿಲ್ಲವೇ? ಅವನ ಅಳು, ನಗು, ಆಲೋಚನೆಗಳೆಲ್ಲಿದರಲ್ಲಿಯೂ ಇನ್ನೊಬ್ಬ ವ್ಯಕ್ತಿಯ ಗುರುತಿನ ಲೇಬಲ್ಲುಗಳನ್ನು ಕಾಣಬೇಕೆಂದು ಬಯಸುತ್ತಾನೇಕೆ? ಒಬ್ಬ ವ್ಯಕ್ತಿ ತನ್ನ ಪ್ರೀತಿಯನ್ನು, ಮನಸ್ಸು, ಬುದ್ಧಿ, ಸಮಾಜಗಳ ಬಂಧನದಲ್ಲಿರಿಸಿಯೇ ಅಭಿವ್ಯಕ್ತಿಸಬೇಕೆಂದು ಕೊಳ್ಳುವುದೇಕೆ? ಹೀಗೆಲ್ಲಾ ಯಾಕೆ? ನಾವು ಹೇಡಿಗಳೆಂದೇ? ದುರ್ಬಲರೆಂದೇ? – ಯೋಚಿಸುತ್ತಲೇ ಲಾನ್‌ನಲ್ಲಿ ಅಡ್ಡಾಡಿದಳು.

ಸೂರ್ಯ ಮುಳುಗಿದ್ದ. ಬೀಸುವ ಗಾಳಿಯಲ್ಲಿ ಹಿತವಾದ ತಂಪು ಇತ್ತು. ಮಾಲಿ ಗಿಡಗಳಿಗೆ ನೀರು ಹಾಕುತ್ತಿದ್ದ. ಒಣಗಿದ ಮಣ್ಣಿನ ಮೇಲೆ ನೀರು ಹರಿದು, ಅದು ತೊಯ್ದು, ಬಣ್ಣ ಬದಲಾಗಿ ಕಂಪನ್ನು ಚೆಲ್ಲುತ್ತಿದ್ದುದನ್ನು ನೋಡುತ್ತಾ, ಮೌನವಾಗಿ ಪಾತಿಗಳ ಅಂಚಿನಲ್ಲೇ ಹರಿಯುತ್ತಿದ್ದ ನೀರಿನ ಜೊತೆಗೇ ಹೆಜ್ಜೆ ಹಾಕಿದಳು.

ಪ್ರತಿಯೊಬ್ಬ ಮನುಷ್ಯನೂ ಸ್ವಲ್ಪ ಕಾಲದ ನಂತರ ಎರಡು ರೀತಿಯಿಂದ ಹೆಣಗಾಡುತ್ತಾನೆ. ಒಂದು ಒಳಗಿನ ಏಕಾಂಗಿತನ, ಇನ್ನೊಂದು ಹೊರಗಿನ ಸಾಂಸಾರಿಕ ಕೋಲಾಹಲದೊಂದಿಗೆ ಈ ಹೆಣಗಾಟಗಳ ನಡುವೆಯೇ ಬದುಕಬೇಕಾಗುತ್ತದೆ. ಬಹುಶಃ ಮನುಷ್ಯನಾಗಿರುವುದರ ಹಣೆಬರಹ ಇದಾಗಿರಬೇಕು? – ಯೋಚಿಸುತ್ತ ಶಾಲ್ಮಲಿ ಲಾನ್‌ನಲ್ಲಿದ್ದ ಕುರ್ಚಿಯಲ್ಲಿ ಕುಳಿತಳು.

ಬಂಗಲೆ, ಪೂರ್ತಿಯಾಗಿ ಕತ್ತಲಲ್ಲಿ ಮುಳುಗಿತು. ಫ್ಯೂಸ್ ಹೋದ ಹಾಗಿತ್ತು. ಇಡೀ ಕಾಲೊನಿಯಲ್ಲಿ. ಶಾಲ್ಮಲಿ ಕದಲದೆ ಅಲ್ಲಿಯೇ ಕತ್ತಲಿನಲ್ಲಿ ಕುಳಿತಿದ್ದಳು. ಮೇಣದ ಬತ್ತಿಯ ಮಂದ ಬೆಳಕು ಕಿಟಕಿಯಿಂದ ಹೊರಗೆ ಇಣುಕುತ್ತಿತ್ತು. ಒಳಗೆ ಬೇಲಾ ಮಾಜಿಯ ಕೋಣೆಯಲ್ಲಿ ಕುಳಿತು ಮಾತನಾಡುತ್ತಿದ್ದಳು. ಶಾಲ್ಮಲಿಯ ಮನಸ್ಸನ್ನು ಕವಿದಿದ್ದ ಕತ್ತಲು, ಕ್ಷಣಕ್ಷಣಕ್ಕೆ ಇನ್ನಷ್ಟು ದಟ್ಟವಾಗುತ್ತಿತ್ತು.

ಈ ವರ್ಷ ಮೊದಲ ಬಾರಿಗೆ ಶಾಲ್ಮಲಿಯಲ್ಲಿ ಹೂ ಬಿಟ್ಟಿತ್ತು. ಎಲ್ಲಿ ನೋಡಿದರೆ ಅರಳಿದ ರಕ್ತವರ್ಣದ ಹೂಗಳು. ಲಾನ್ನ ಬದಿಗಳಲ್ಲಿ ಎತ್ತರಕ್ಕೆ ನಿಂತ ಈ ಮರಗಳು ಎಂದೂ ಶಾಲ್ಮಲಿಯ ದೃಷ್ಟಿಯನ್ನು ಸೆಳೆದಿರಲಿಲ್ಲ. ಅವಳಿಗೆ ಮೆತ್ತನೆಯ ನವಿರಾದ ಹುಲ್ಲು ಮತ್ತು ಬಣ್ಣ ಬಣ್ಣದ ವಿದೇಶಿ ಜಾತಿಯ ಗುಲಾಬಿಗಳು ಮಾತ್ರವೇ ಆಕರ್ಷಣೀಯವೆನಿಸಿತ್ತು. ಅರೆಬಿರಿದ ಮೊಗ್ಗುಗಳನ್ನು ನರೇಶ್ ಎಂದಿಗೂ ಕೀಳುತ್ತಿರಲಿಲ್ಲ. ಮನಸ್ಸಿನ ಉಲ್ಲಾಸದ ಕ್ಷಣಗಳಲ್ಲಿ ಅಥವಾ ವಿಶ್ರಾಂತಿಯ ಸಮಯದಲ್ಲಿ ಅರಳಿದ ಗುಲಾಬಿಯನ್ನು ಕಿತ್ತು ಅವಳ ಮುಡಿಗೆ ಮುಡಿಸಿದ್ದುಂಟು.

ಮನುಷ್ಯ ಮಗುವಿನಿಂದ ದೊಡ್ಡವನಾಗುತ್ತಾನೆ. ಆಟಿಕೆಗಳನ್ನು ಬಿಟ್ಟು ಉಪಕರಣಗಳನ್ನು ಹಿಡಿದು ಜೀವನ ಜಂಜಾಟದಲ್ಲಿ ಹೆಣಗಿ ಸವೆಯುತ್ತಾನೆ. ಜೊತೆಗೆ ಮೇಲಿಂದ ಮೇಲೆ ಬೀಳುವ ಪ್ರಹಾರಗಳಿಂದ ಬದಲಾಗುವ ಋತುಗಳ ಹೊಡೆತದಿಂದ ಗಟ್ಟಿ ಮನುಷ್ಯನಂತೆ ಕಾಣಿಸಿಕೊಳ್ಳುತ್ತಾನೆ. ಆದರೆ ಅವನೊಳಗೆ ಅದೇ ಮುಗ್ಧ ಮಗುವೊಂದು ಕುಳಿತು ರೋದಿಸುತ್ತಿರುತ್ತದೆ. ತನ್ನನ್ನು ಯಾರಾದರೂ ಎತ್ತಿಕೊಂಡು ಎದೆಗಪ್ಪಿಕೊಂಡು ಸಮಾಧಾನ ಮಾಡಲೆಂದು ಪ್ರೀತಿಯಿಂದ ಕಂಬನಿಯೊರಸಿ, ತನ್ನನ್ನು ನಗಿಸಲೆಂದು ಹಾರೈಸುತ್ತಿರುತ್ತದೆ. ಮನುಷ್ಯನ ಸಣ್ಣ ಸಣ್ಣ ಬಯಕೆಗಳು, ಕನಸುಗಳು, ಭಾವನೆಗಳು ಅವನನ್ನು ಎಲ್ಲಿವರೆಗೆ ತಣಿಸಲಾರದೆ, ಅವನ ಪೂರ್ವಾಗ್ರಹಗಳಾಗಿ ಅವನ ಸ್ಥಿರವಾದ ಆಲೋಚನೆಗಳಲ್ಲಿ ಅಪೂರ್ವ ಆಕಾಂಕ್ಷೆಗಳಾಗಿ ಉಳಿಯಬಲ್ಲವು, ಎಂಬುದರ ಬಗ್ಗೆ ಶಾಲ್ಮಲಿಗೆ ಅರಿವಿದೆ. 'ಈ ಸಾಧಾರಣ ವಿಷಯಗಳೇ ಜೀವನ

ಸ್ಪಂದನವಾಗಿ ಆತ್ಮ ಸಂತೋಷಕ್ಕೆ ದಾರಿಯಾಗಿ ಅದರ ಬುನಾದಿಯನ್ನು ಭದ್ರವಾಗಿಸಿಡುತ್ತವೆ' ಎನ್ನುವ ನಂಬಿಕೆ ಶಾಲ್ಮಲಿಗಿದೆ. ಆದರೆ ಇವೆಲ್ಲವೂ ಏಕಪಕ್ಷೀಯವಾಗಿ ತನ್ನಲ್ಲಿಯೇ ಶೇಖರಿಸಿದರೆ?...... ಆಗ ಸಂಬಂಧಗಳ ಗೋಡೆಯೊಂದು ಗಟ್ಟಿಗೊಳ್ಳುತ್ತಾ ಎತ್ತರೆತ್ತರಕ್ಕೆ ಬೆಳೆಯುತ್ತಾ ಹೋಗುತ್ತದೆ, ಮತ್ತು...... ಎಂದು ಯೋಚಿಸಿದಳು.

"ಚಿಕ್ಕಮ್ಮಾವ್ರೆ ಕೆಲವು ಹೊಸ ಗಿಡಗಳನ್ನು ತಂದಿದ್ದೇನೆ" – ಮಾಲಿ ಬುಟ್ಟಿಯನ್ನು ಕೆಳಗಿರಿಸುತ್ತಾ ಹೇಳಿದ.

"ಒಳ್ಳೇದು!" ಶಾಲ್ಮಲಿಯ ವಿಚಾರ ಲಹರಿ ಅಲ್ಲಿಗೇ ಮುಗಿಯಿತು. ತಿರುಗಿ ಮಾಲಿ ತಂದಿದ್ದ ಗಿಡಗಳನ್ನು ನೋಡಿದಳು.

"ಇದು ದೊಡ್ಡಮ್ಮಾವ್ರು ಹೇಳಿದ 'ರಾತ್ರಿ ರಾಣಿ' ಗಿಡ". ಮಾಲಿ ಒಂದು ಗಿಡವನ್ನು ಬೇರೆಯಾಗಿ ಪಕ್ಕಕ್ಕೆ ಇರಿಸಿದ.

"ಮೊದಲು ಹೋಗಿ ಅಮ್ಮಾಜಿ ಕಿಟಕಿ ಕೆಳಗೆ ನೆಟ್ಟು ಬಾ. ಆಮೇಲೆ ಮಿಕ್ಕಿದ್ದೆಲ್ಲವನ್ನೂ ತೋರಿಸುವೆಯಂತೆ. ಬೇಲಾಗೆ ಚಹಾ ತರೋಕೆ ಹೇಳು" ಹೇಳುತ್ತಾ ಶಾಲ್ಮಲಿ ಗುಲಾಬಿ ಗಿಡಗಳ ಕಡೆ ನಡೆದಳು.

"ಇನ್ನೂ ಸೂರ್ಯಭಗವಂತ ಹೊಳೀತಿದ್ದಾನೆ!" ಹೇಳುತ್ತಾ, ಮಾಲಿ ಕುರುಪಿ ತೆಗೆದುಕೊಂಡು ಮುಂದೆ ಹೋದ. ಅವನ ಮಾತು ಕೇಳಿ ಅವನ ಕಡೆ ತಿರುಗಿ ನೋಡಿದಳು. ಐದು ವರ್ಷ ಆಯ್ತು. ಒಂದು ದಿನವಾದರೂ ರಾತ್ರಿ ಹೊತ್ತು ಗಿಡವನ್ನು ಹಾಕಿದ್ದಾಗಲೀ, ಕಿತ್ತದ್ದಾಗಲಿ ಮಾಡಿರಲಿಲ್ಲ. ಹಾಗೆ ಮಾಡುವುದು ಪಾಪವೆಂಬ ಭೀತಿಯಿಂದ ಸುಮ್ಮನಿದ್ದ. ಗಿಡಗಳು ಬೆಳಗಿನಿಂದ ದಣಿದು ರಾತ್ರಿ ನಿದ್ದೆ ಮಾಡುತ್ತವೆ ಎಂಬುದು ಅವನ ನಂಬಿಕೆ!

ಬೇಲಾ ಎರಡು ಲೋಟ ಚಹಾ ತಂದಳು. ಒಂದು ಮಾಲಿಗೆ ಮತ್ತೊಂದು ಅವಳಿಗೆ. ಶಾಲ್ಮಲಿಯ ಮಾತಿನಿಂದಲೇ ಶಾಲ್ಮಲಿಯ ಮನಸ್ಸನ್ನು, ಅವಳ ಇಶಾರೆಗಳನ್ನು ಬೇಲಾ ಅರ್ಥಮಾಡಿಕೊಂಡಿದ್ದಳು. ಅದಕ್ಕೆ ಒಂದು ಸಲ ಹೇಳಿದರೆ, ಶಾಲ್ಮಲಿ ಏನನ್ನು ನಿರೀಕ್ಷಿಸುತ್ತಾಳೆ ಎಂಬುದನ್ನು ತಿಳಿದು ಬಿಡುತ್ತಿದ್ದಳು.

"ಅಮ್ಮಾಜಿಯ ಪೂಜೆ ಮುಗಿದಿದ್ದರೆ, ಅವರನ್ನು ಬರೋಕೆ ಹೇಳು!" ಬಿಸಿ ಲೋಟವನ್ನು ಕೈಗೆತ್ತಿಕೊಳ್ಳುತ್ತಾ ಹೇಳಿದಳು.

ಗಗನ ಚುಂಬಿಯಾಗಿ ಎತ್ತರಕ್ಕೆ ನಿಂತು ಪ್ರತಿಕ್ಷಣವೂ ಹಣ್ಣೆಲೆಗಳನ್ನು ಉದುರಿಸುತ್ತ ಇದರ ಕೊಂಬೆಗಳು ಎಷ್ಟು ಎತ್ತರಕ್ಕೆ ಚಾಚಿಕೊಂಡಿವೆ! ಎಂತಹ ವಿಚಿತ್ರ ಸೃಷ್ಟಿ! ಶಾಲ್ಮಲಿ ಶಾಲ್ಮಲಿ! – ಮರವನ್ನು ಕತ್ತೆತ್ತಿ ನೋಡಿದಳು.

ಶಂಖಾಕಾರದ, ಮುಳ್ಳಿನಿಂದ ತುಂಬಿದ ಈ ಮರ ಹೂ ಬಿಟ್ಟಾಗಿನಿಂದ ಎಷ್ಟು ತರಹದ ಪಕ್ಷಿಗಳಿಂದ ತುಂಬಿ ಹೋಗಿದೆ. ಮೈನಾ, ಗಿಳಿ, ಕೋಗಿಲೆ, ಗೊರವಂಕ, ಚಾರವಾಕ – ಹೀಗೆ ಎಷ್ಟೋ ಪಕ್ಷಿಗಳು, ಒಂದಲ್ಲ ಒಂದು ಜಾತಿಯವು, ಕಡೆಗೆ ಕಾಗೆಗಳೂ ಕೂಡಾ ಈ ಹೂಬಟ್ಟಲುಗಳಿಂದ ರಸ ಹೀರುತ್ತವೆ! ಜೇನಿಗಾಗಿ ದುಂಬಿಗಳು ಝೇಂಕರಿಸುತ್ತಾ, ಪುಟ್ಟ ಪುಟ್ಟ ಇರುವೆಗಳು ತೆವಳುತ್ತಾ ಕೇವಲ ಹೂ ರಸಕ್ಕಾಗಿ ಐವತ್ತು ಅಡಿ ಎತ್ತರವನ್ನು ಏರುವ ಸಾಹಸ ಮಾಡುತ್ತಿವೆ! ಈ ಮರಗಳಿಂದಾಗಿ ತೋಟವೆಲ್ಲ ಒಂದು ಬಗೆಯ ಸಂಭ್ರಮ, ಗದ್ದಲ, ಉತ್ಸಾಹಗಳಿಂದ ತುಂಬಿ ತುಳುಕುತ್ತಿರುವಂತೆನಿಸಿತು. ಶಾಲ್ಮಲಿ ಮರದ ಬೊಡ್ಡೆಯನ್ನು ಸ್ಪರ್ಶಿಸುತ್ತಾಳೆ. ಉಗುರುಗಳಿಂದ ತೆಳುವಾಗಿ ಮೆತ್ತಿಕೊಂಡ ಮಣ್ಣಿನ ಬಣ್ಣದ ಜಿಗುಟನ್ನು ಗೀರಿ, ಗುರುತನ್ನು ಉಳಿಸುತ್ತಾಳೆ.

'ಅರೆ ಶಾಲ್ಮಲಿಯೇ! ಒಳಗೂ ಕೆಂಪಾಗಿರುವೆ! – ತೊಗಟೆಯ ಒಳಗಿನ ದಟ್ಟ ಕೆಂಪಿನ ದ್ರವ ರಕ್ತಧಾರೆಯ ಹಾಗೆ ಆ ಮರದ ಬೊಡ್ಡೆ (ಕಾಂಡ) ಯ ಮೇಲೆ ಹರಿಯಿತು. ಶಾಲ್ಮಲಿಯ ಜಿಜ್ಞಾಸು ಮನಸ್ಸು ಈ ಮರದ ಬಗ್ಗೆ ಇನ್ನಷ್ಟು ತಿಳಿದುಕೊಳ್ಳಬೇಕೆಂದು ಬಯಸಿ ಮಾಲಿ ಕಡೆ ತಿರುಗಿ ಕೇಳಿದಳು.-

"ಈ ಶಾಲ್ಮಲಿ ಮರದ ಬಗ್ಗೆ ನಿನಗೆ ಏನಾದರೂ ಗೊತ್ತೇನು?"

"ಇದರಿಂದ ಬಹಳ ಪ್ರಯೋಜನವಿದೆ ಅಮ್ಮಾವ್ರೆ. ಇದರ ಹೂವು, ಎಲೆ, ತೊಗಟೆ ಎಲ್ಲ ಪ್ರಯೋಜನಕ್ಕೆ ಬರುತ್ತೆ. ಹಸಿರಾಗಿರುವಾಗ ತರಕಾರಿ ಹಾಗೆ ಬಳಸ್ತಾರಂತೆ. ಒಣಗಿಸಿ ಕೂಡ ಇಟ್ಕೊಂಡು ಬೇಕಾದಾಗ ಉಪಯೋಗಿಸಿಕೊಳ್ತಾರೆ. ಔಷಧಿಯಾಗಿಯೂ ಇದನ್ನು ತುಂಬಾ ಜನ ಬಳಸ್ತಾರೆ. ಔಷಧಿಗಾಗಿ ಏನೇನೋ ಪ್ರಯೋಗಗಳನ್ನು ನಡೆಸುತ್ತಾರೆ. ಇದರ ಮುಳ್ಳುಗಳಿಂದ ಹಿಡಿದು ಎಲೆ, ಬೀಜ, ಕಾಯಿ, ತೊಗಟೆ, ಬೇರು, ಹೂವು ಪ್ರತಿಯೊಂದನ್ನೂ ಒಂದಲ್ಲ ಒಂದು ರೀತಿಯಲ್ಲಿ ಉಪಯೋಗಿಸುತ್ತಾರೆ. ಬೀಜಗಳಿಂದ ಎಣ್ಣೆ ತೆಗೀತಾರೆ. ಇದರಿಂದ ಸಾಬೂನು ಮಾಡ್ತಾರೆ. ಮತ್ತೆ ಪಶುಗಳಿಗೆ ಆಹಾರವಾಗಿ ಉಪಯೋಗಿಸ್ತಾರೆ. ಕಾಯಿಗಳನ್ನು ತರಕಾರಿಯಾಗಿ ಬಳಸ್ತಾರೆ. ತೊಗಟೆಯಿಂದ ಸೋರುವ ಅಂಟನ್ನು ಔಷಧಿಯಲ್ಲಿ ಉಪಯೋಗಿಸ್ತಾರೆ. ತಿಳಿದೋ ತಿಳಿಯದೆಯೋ ಇದರ ಪ್ರತಿಯೊಂದು ಭಾಗವೂ ಮನುಷ್ಯರಿಂದ ಪಶು ಪಕ್ಷಿಗಳವರೆಗೆ ಉಪಯೋಗಕ್ಕೆ ಬರುತ್ತೆ.

"ಬೇರೆ ಗಿಡ ತಂದಿದ್ದೀಯಲ್ಲ, ತೋರಿಸು!" ಶಾಲ್ಮಲಿ ಅವನ ಮಾತನ್ನು ಕೇಳಿ ಮುಗುಳ್ನಗುತ್ತಾ ಎದ್ದು ಗಿಡಗಳಿದ್ದ ಬುಟ್ಟಿಕಡೆ ಹೆಜ್ಜೆ ಹಾಕಿದಳು.

"ಕತ್ತಲಾಗಿ ಬಿಟ್ಟಿದೆ ಅಮ್ಮಾವ್ರೆ.... ಈಗ......" ಮಾಲಿ ರುಮಾಲನ್ನು ಬಿಚ್ಚಿ ಒದರಿ ಹೆಗಲ ಮೇಲೆ ಹಾಕಿಕೊಳ್ಳುತ್ತಾ, ಸಂಕೋಚದಿಂದ ಹೇಳಿದ.

"ಆಯ್ತು ನಾಳೆ ಬರ್ತೀಯಲ್ಲ, ನೋಡ್ತೀನಿ" ಶಾಲ್ಮಲಿ ಹೇಳಿ ಹೋಗಿ ಕುರ್ಚಿಯಲ್ಲಿ ಕುಳಿತಳು.

"ನಾಳೆ ಬೆಳಿಗ್ಗೆ ಬರ್ತೀನಿ. ನಮಸ್ಕಾರ ಅಮ್ಮಾವ್ರೆ!" ಹೇಳುತ್ತ ಮಾಲಿ ಬುಟ್ಟಿಯನ್ನು ಮರಗಳ ಮರೆಯಲ್ಲಿಟ್ಟು, ಕತ್ತಲೆಯಲ್ಲಿ ಮರೆಯಾದ.

"ಅಮ್ಮಾಜಿ ಸೂಪ್ ಇಲ್ಲಿಗೇ ತರಿಸಲೇ" ಶಾಲ್ಮಲಿ ಅತ್ತೆಗೆ ಕೇಳಿದಳು.

"ಇಲ್ಲಮ್ಮ! ಈಗ ನಾನು ಒಳಗೆ ಹೋಗ್ತೀನಿ. ಕೆಳಗೆ ಥಂಡಿ ಅಂತ ಅನ್ನಿಸ್ತಿದೆ" ಹೇಳುತ್ತಾ ಆಕೆ ಎದ್ದರು, ಅವರ ಹಿಂದಿನಿಂದ ಶಾಲ್ಮಲಿಯೂ ಹೊರಟಳು.

ಮಾರ್ಚ್‌ನ ಮೊದಲ ದಿನಗಳು ಏಪ್ರಿಲ್‌ನ ಕೊನೆ ದಿನಗಳು, ಈ ಎರಡು ತಿಂಗಳಲ್ಲಿ, ಹವಾ ಬಹಳ ಹಿತವಾಗಿರುತ್ತೆ. ಋತುಗಳ ಪರಿವರ್ತನೆ, ಹಿತವಾದ ದಿನಗಳಲ್ಲಿ ಓಡಾಡುವುದು ಯೋಚಿಸುವುದು, ಗಾಳಿಯಲ್ಲಿ ತೇಲಿಬರುವ ಅಸ್ಪಷ್ಟ ಗುಂಜಾರವವನ್ನು ಕೇಳುವುದು, ಶಾಲ್ಮಲಿಗೆ ಬಹಳ ಪ್ರಿಯವೆನಿಸುತ್ತದೆ. ಒಂದು ಋತು ಕೊನೆಯಾಗುತ್ತಿದ್ದಂತೆ ಇನ್ನೊಂದು ಋತುವಿನ ಬರವು ವಿಷಾದ ಮಿಶ್ರಿತ ಪ್ರಸನ್ನತೆ, ಅವಳಿಗೆ ಒಂದು ಬಗೆಯ ಸ್ಫೂರ್ತಿಯನ್ನು ನೀಡುತ್ತಿವೆ.

* * *

ಶಾಲ್ಮಲಿ ಒಂದು ವಾರದ ನಂತರ ಮನೆಗೆ ಮರಳಿದಳು. ದಣಿದು ಮನೆಗೆ ಬಂದರೆ ಬಾಕಿ ಇದ್ದ ಬಿಲ್ಲುಗಳು, ಕೆಲಸದವರ ಸಂಬಳ, ಮನೆಗೆ ಸಾಮಾನು – ಹೀಗೆ ಇವುಗಳನ್ನು ನೋಡಿಕೊಳ್ಳುವುದೇ ಆಯಿತು!

"ರೀ, ನಿಮ್ಮ ಸಂಬಳ ಈ ಬಾರಿ ಬ್ಯಾಂಕಿಗೆ ಕ್ರೆಡಿಟ್ ಆಗಲಿಲ್ಲವೇನು? – ಶಾಲ್ಮಲಿ ರಾತ್ರಿ ಲೆಕ್ಕದ ಡೈರಿಯನ್ನು ಮುಚ್ಚಿಡುತ್ತ ನರೇಶ್‌ನನ್ನು ಪ್ರಶ್ನಿಸಿದಳು.

"ಈ ಸಲ ಚೆಕ್ ಕ್ಯಾಶ್ ಮಾಡಿಸಿಕೊಂಡು ಬಿಟ್ಟೆ." – ಏನೂ ಆಗದವನಂತೆ ಹೇಳಿದ.

"ಯಾಕೆ?" – ಶಾಲ್ಮಲಿ ಬಾಯಿಂದ ಬಂತು.

"ನನ್ನ ಖರ್ಚಿಗಾಗಿ ಪ್ರತಿಸಲವೂ ನಿನ್ನ ಮುಂದೆ ಕೈಚಾಚುವುದು ನನಗೆ ಹಿಡಿಸೊದಿಲ್ಲ." ನರೇಶ್ ನೇರವಾಗಿ ಉತ್ತರಿಸಿದ.

"ನೀವು ಹೇಳೋದೇನೋ ಸರಿ. ಆದರೆ ಕಾರಿನ ಕಂತು, ಮನೆ, ಬಾಡಿಗೆ, ಎಲೆಕ್ಟ್ರಿಸಿಟಿ ಬಿಲ್, ಕೆಲಸದವರಿಗೆ ಸಂಬಳ, ಸಣ್ಣ ಪುಟ್ಟ ಪಾಲಿಸಿಗಳಿಗೆ ಪೇಮೆಂಟ್ – ಇವುಗಳಲ್ಲೇ ನನ್ನ ಸಂಬಳ ಎಲ್ಲ ಫಟಾಫಟ್! ಇನ್ನೂ ತಿಂಗಳು ಪೂರ್ತಿ ಬಿದ್ದಿದೆ." – ಶಾಲ್ಮಲಿ ದೀರ್ಘವಾಗಿ ನರಳಿದಳು.

"ಹಾಗಾದರೆ ನಾನು ಏನು ಮಾಡಲಿ?" ನರೇಶ್ ಸಿಟ್ಟಿನಿಂದ ಹೇಳಿದ.

"ನನಗೆ ಸ್ವಲ್ಪ ದುಡ್ಡು ಕೊಡು. ತಿಂಗಳು ಪೂರ್ತಿ ಬೇಕಾಗಿದೆ" – ಆಶ್ಚರ್ಯದಲ್ಲಿ ಮುಳುಗಿ ಕೇಳಿದಳು.

"ಇಲ್ಲ" – ನಿಷ್ಠುರವಾಗಿ ಹೇಳಿದ.

"ಇಲ್ಲ?" ಆಘಾತಗೊಂಡು ಕೇಳಿದಳು.

"ಹೇಳಿದೆನಲ್ಲ, ಇಲ್ಲಾಂತ!......ಗಂಡಸು ಅಂತ ತಿಳ್ಕೋಳ್ಳೋದಾದ್ರೆ, ಈ ಭಾರಾನೆಲ್ಲ ಹೊತ್ಕೊ." ಅಸಮಾಧಾನದ ದನಿಯಲ್ಲಿ ಹೇಳಿದ.

"ಸರಿ ಹಾಗಾದರೆ ನೀನು ಹೆಂಗಸಾಗಿ ಮನೇಲಿ ನನಗೆ ಸಹಾಯ ಮಾಡು." ಶಾಲ್ಮಲಿ ಮಾತಿನಲ್ಲಿನ ಕಹಿಯನ್ನು ತಮಾಶೆಯಾಗಿ ಪರಿವರ್ತಿಸುವ ಪ್ರಯತ್ನದಲ್ಲಿ, ನಕ್ಕಳು.

"ನನಗೆ ಹೆಂಗಸಾಗಬೇಕೂಂತ ಆಸೆಯೇನಿಲ್ಲ" ಏಟಿನಿಂದ ಹಿಂಜರಿದು ಹೇಳಿದ.

"ನನಗೆ ಮಾತ್ರ ಗಂಡಸಾಗೋದಕ್ಕೆ ಆಸೆಯೇ? – ಹುಬ್ಬುಗಂಟಿಕ್ಕಿದಳು.

"ನಿನ್ನನ್ನು ನೋಡಿದರೆ ಗೊತ್ತಾಗೊಲ್ವೆ? ನನ್ನ ಮೇಲೆ ಅಧಿಕಾರ ಮಾಡ್ಬೇಕೂಂತೀಯ? – ಸಿಂಹದ ಹಾಗೆ ಗರ್ಜಿಸಿದ.

"ಇಲ್ಲೇನಂಥ ಸಾಮ್ರಾಜ್ಯ ಇದೆ. ಸಿಂಹಾಸನ ಇದೇಂತ ನಾನು......." ಶಾಲ್ಮಲಿ ಮಾತನ್ನು ಉಲ್ಲಂಘಿಸುತ್ತ ಹೇಳಿದಳು.

"ಏನು ಹೇಳ್ಬೇಕೂಂತ ಇದ್ದೀಯ?" ನರೇಶ್ ಕಿರುಚಿದ.

"ಏನೂ ಇಲ್ಲ. ನೀನ್ಯಾಕೆ ಇಷ್ಟೊಂದು ಸಿಟ್ಟಾಗ್ತೀಯ?" ಶಾಲ್ಮಲಿ ಕ್ರೋಧದಲಾವಾವನ್ನೇ ನುಂಗಿಕೊಂಡಳು.

"ನಾನು ಸಂಪಾದನೆ ಮಾಡ್ತೀನಿ." ಅವಳು ಮೆತ್ತಗಾದ್ದರಿಂದ ಇನ್ನಷ್ಟು ಸಿಟ್ಟೇರಿದ.

"ನಾನೂ ಸಂಪಾದನೆ ಮಾಡ್ತೀನಿ." ಶಾಲ್ಮಲಿ ತೀಕ್ಷ್ಣ ಸ್ವರದಲ್ಲಿ ಹೇಳಿದಳು.

"ಈ ಸಂಪಾದನೆ ಇರೋದಿಕ್ಕೇ ಇಷ್ಟೊಂದು ಮೆರೀತೀಯ? ನೀನು, ಗ್ರೇಟ್, ನಾನು ನಿನಗಿಂತ ಪೊಸಿಷನ್‌ನಲ್ಲಿ ಕಡಿಮೇ ಅಂತ ಹೇಳೋದೇನೇ ನಿನ್ನ ಉದ್ದೇಶ?" ಜಿಗಿದು ಹಾಸಿಗೆ ಮೇಲೆ ಕುಳಿತು ನರೇಶ್ ಗರ್ಜಿಸಿದ್ದ.

"ಪ್ಲೀಸ್ ನರೇಶ್" – ನರೇಶ್‌ನ ಅವತಾರ ನೋಡಿ ಬೆಚ್ಚಿದಳು.

"ನನ್ನ ಅನ್ನೋಕೆ ಬರಬೇಡ. ಅರ್ಥ ಆಯ್ತಾ? ನನ್ನ ಹೊಟ್ಟೆ ಪಾಡಿಗೆ ಸಾಕಾಗುವಷ್ಟು ಸಂಪಾದನೆ ಮಾಡ್ತೀನಿ. ನಿನಗೂ ಅನ್ನ ಹಾಕ್ತಾ ಇದ್ದೀನಿ!" – ಸಿಟ್ಟಿನಿಂದ ನರೇಶ್ ದಿಂಬಿನ ಮೇಲೆ ಒಂದು ಗುದ್ದಿದ.

"ಏನ್ಮಾತಾಡ್ತೀಯ ನರೇಶ್! ನಾನಂತು ಯಾವತ್ತೂ ಹೀಗೆ ಯೋಚಿಸಿಲ್ಲ" ಶಾಲ್ಮಲಿ ನರೇಶ್‌ನ ಬಾಹುಗಳನ್ನು ಹಿಡಿದಳು.

"ಬಿಡು ನನ್ನ!" ಕೈಗಳನ್ನು ಬಿಡಿಸಿಕೊಂಡ.

"ಪ್ಲೀಸ್. ಇನ್ನೆಂದೂ ಈ ರೀತಿ ಮಾತಾಡಬೇಡ."

ಯಾವ ಮನೇಲಿ ಒಂದೊಂದು ಅಗಳಿನ ಲೆಕ್ಕಾಚಾರ ನಡೆಯತ್ತೋ ಅಲ್ಲಿ ಮಾನವೀಯ ಸಂಬಂಧಗಳು ಉಳಿಯುವುದಾದರೂ ಹೇಗೆ? ಇಡೀ ರಾತ್ರಿ ನೋವಿನಿಂದ ಚಡಪಡಿಸುತ್ತಾ ತನ್ನನ್ನೇ ಪ್ರಶ್ನಿಸಿಕೊಳ್ಳುತ್ತಿದ್ದಳು. ಅಮ್ಮ ಸಂಪಾದನೆ ಕೂಡಾ ಮಾಡುತ್ತಿರಲಿಲ್ಲ. ಆದರೂ ಅಮ್ಮನಿಗೆ ಅವಮಾನವಾಗುವಂತಹ ಒಂದು ಮಾತನ್ನು ಅಪ್ಪ ಆಡಿರಲಿಲ್ಲ. ಬದಲಾಗಿ ಎಷ್ಟೋ ಸಲ ಅಮ್ಮಾನೇ ಅಪ್ಪನ ವಿಚಾರದಲ್ಲಿ ನಿಷ್ಠುರವಾಗಿ ನಡೆದುಕೊಂಡದ್ದುಂಟು. ಆದರೆ ಇಲ್ಲಿ ಈ ಮನೆಯಲ್ಲಿ ಎಷ್ಟು ಸಲ, ಯಾವ ಯಾವುದಕ್ಕೆ ಅವಮಾನಿತಳಾಗಬೇಕಾಗಿ ಬಂದಿದೆ. ಯಾಕೆ? ಯಾಕೇ?

* * *

ಕೆಲವು ಸಭೆ, ಸಮಾರಂಭಗಳಿಗೆ ಶಾಲ್ಮಲಿ ಹೋಗಲೇಬೇಕಾದ ಅನಿವಾರ್ಯತೆ ಇರುತ್ತಿತ್ತು. ಮೊದಮೊದಲು ನರೇಶನೂ ಜೊತೆಗೆ ಹೋಗುತ್ತಿದ್ದ. ಯಾರಾದರೂ ಸ್ನೇಹಿತರು, ಸಹೋದ್ಯೋಗಿಗಳು ಪರಿಚಯ ಮಾಡಿಕೊಳ್ಳುವಾಗ ಶಾಲ್ಮಲಿಯನ್ನು ಅದರ ಗೌರವಗಳಿಂದ ಮಾತನಾಡಿಸುವುದನ್ನು ನೋಡಿದಾಗ ನರೇಶನಿಗೆ ಹೆಮ್ಮೆ ಎನಿಸುತ್ತಿತ್ತು. ಕ್ರಮೇಣ ಅವನಿಗೆ ಅದೆಲ್ಲ ಮನಸ್ಸಿನ ಒಳಗೆ ಏನೋ ಒಂದು ಬಗೆಯ ಅನುಮಾನಕ್ಕೆ ದಾರಿ ಮಾಡಿತು. ಅದು ಅವನ ಭ್ರಮೆಯೋ, ನಿಜವೋ! ಆದರೆ ಅವನ ಸ್ನೇಹಿತರು ಅವನಿಗೆ ಎಚ್ಚರಿಕೆ ನೀಡಿದ್ದರು. ಅದಕ್ಕಾಗಿ ರಾತ್ರಿ ಹೊತ್ತು ನಿಶ್ಚಿತ ವೇಳೆಗೆ ಹೋಗಿ ಶಾಲ್ಮಲಿಯನ್ನು ಕರೆದುಕೊಂಡು ಬರುತ್ತಿದ್ದ. ಆದರೆ ಅವನಲ್ಲಿ ಒಂದು ಕೀಳು ಭಾವನೆ, ಕಾಡತೊಡಗಿತು. ಶಾಲ್ಮಲಿಯ ಬಾಕಿ ಆಫೀಸರುಗಳ ಕಾರಿನಲ್ಲಿ ಕುಳಿತು ಡ್ರೈವರ್‌ನ ರೀತಿಯಲ್ಲಿ ಶಾಲ್ಮಲಿಗಾಗಿ ರಸ್ತೆ ಬದಿಯಲ್ಲಿ ಕಾಯುವುದೇ? – ಎನಿಸಿ ಅಂದಿನಿಂದ ಅವಳನ್ನು ಕರೆತರಲು ಹೋಗುವುದನ್ನೂ ಬಿಟ್ಟು ಬಿಟ್ಟ.

ರಾತ್ರಿ ಶಾಲ್ಮಲಿ ಮನೆಗೆ ಬಂದಾಗ ಹತ್ತು ಗಂಟೆ. ಬೇಲಾ ಅಡುಗೆಯೆಲ್ಲ ಸರಿಮಾಡಿ ಅಮ್ಮಾಜಿ ಬಳಿ ಕುಳಿತಿದ್ದಳು. ಕಿಶೋರಿಲಾಲ್ ಮನೆಗೆ ಹೊರಟು ಹೋಗಿದ್ದ.

"ಯಜಮಾನ್ರು ಊಟ ಮಾಡಿದರಾ?" ಶಾಲ್ಮಲಿ ಬೇಲಾಳನ್ನು ವಿಚಾರಿಸಿ, ತಿರುಗಿ ಬಾಗಿಲು ಮುಚ್ಚಿದಳು.

"ಯಜಮಾನ್ರು ಇನ್ನೂ ಬಂದಿಲ್ಲ. ಅವರ ಊಟಾನ ಹಾಟ್‌ಕೇಸ್‌ನಲ್ಲಿ ಇರಿಸಿದ್ದೇನೆ." ಬೇಲಾ ಹೇಳಿದಳು.

"ಆಯ್ತು" ಎಂದು ಹೇಳುತ್ತ ಅತ್ತೆಯ ಕೋಣೆಯನ್ನು ಹೊಕ್ಕಳು.

"ಬಂದು ಬಿಟ್ಟಿಯಾ ಮಗಳೇ" ನಿರಾಳವಾದಂತೆ ಕೇಳಿದಳು.

"ಹೌದು ಬಂದು ಬಿಟ್ಟೆ." ಅತ್ತೆ ವಿಚಾರಿಸಿದ್ದನ್ನು ಕೇಳಿ ಮನಸ್ಸಿಗೆ ಹಗುರವೆನಿಸಿತು.

"ಕಾಫಿ ಮಾಡಲೇ ಅಮ್ಮಾವ್ರೆ?" ಬೇಲಾ ಕೇಳಿದಳು.

"ಒಳ್ಳೆ ಕಾಫಿ ಮಾಡು?" ಎಂದು ಹೇಳಿ ಅತ್ತೆ ಮಂಚದಲ್ಲಿ ಅವರ ಹತ್ತಿರ ಸರಿದು ಕುಳಿತಳು.

"ಸಂಜೆ ಗುಡಿಗೆ ಹೋಗಿದ್ದಾಗ ನಿನ್ನ ಅಪ್ಪ-ಅಮ್ಮನ್ನ ನೋಡಿದ್ದೆ! ನಾಳೆ ಸಂಜೆ ಬರೋಕೆ ಹೇಳಿದರು." ಅತ್ತೆ ಕಲ್ಲಂಗಡಿ ಹಣ್ಣಿನ ಬೀಜ ಸುಲಿಯುತ್ತ ಹೇಳಿದಳು.

"ನಾಳೆ ಆಫೀಸಿಂದ ಬೇಗ ಬರೋಕೆ ಪ್ರಯತ್ನಿಸ್ತೀನಿ." ಶಾಲ್ಮಲಿ ಹೇಳಿದಳು.

"ತಗೋ ಬೇಲಾ. ಇದನ್ನು ಎತ್ತಿ ಇಡು" ಬಿಡಿಸಿದ ಬೀಜಗಳನ್ನು ಡಬ್ಬಕ್ಕೆ ಹಾಕುತ್ತಾ ಹೇಳಿದರು.

"ನಿಮ್ಮ ಕೈ ನೋಯೋದಿಲ್ವೆ ಅಮ್ಮ?" – ಕಾಫಿ ಹೀರುತ್ತ ಹೇಳಿದಳು ಶಾಲ್ಮಲಿ.

"ನನಗೆ ಸಂತೋಷ ಸಿಗುತ್ತೆ ಮಗು. ಇದಕ್ಕಿಂತ ನಿನಗಾಗಿ ನನ್ನ ಕೈಲಿ ಏನು ಮಾಡೋಕೆ ಸಾಧ್ಯ" ಅಮ್ಮಾಜಿ ನಿಧಾನವಾಗಿ ಹೇಳಿದರು.

ಶಾಲ್ಮಲಿ ಸುಮ್ಮನಾದಳು. ಅವಳಿಗೆ ಗೊತ್ತಿತ್ತು. ದುಡ್ಡು ಕೊಟ್ಟರೆ ಸಿಗುತ್ತೆ. ಆದರೆ ಅತ್ತೆಗೆ ಅದರಲ್ಲಿಯೇ ಏನೋ ತೃಪ್ತಿ. ಮನೇಲೇ ಬೀಜ ಬಿಡಿಸಿ, ತಂಪು ಪಾನೀಯ ಮಾಡಿಕೊಟ್ಟರೆ ಮಗ, ಸೊಸೆ ತಲೆ ತಂಪಾಗಿರುತ್ತದೆ ಅಂತ ಅವರ ಆಸೆ. ಓದೋದು ಬರೆಯೋದು, ಆಫೀಸ್ ಕೆಲಸ ಒಂದೇ ಸಮನೆ ದುಡಿತ. ಉಷ್ಣ ಹೆಚ್ಚಾಗಿ ಕಣ್ಣು ಕೆಂಪಗಾಗುತ್ತೆ. ಅದಕ್ಕಾಗಿ ಮನೇಲಿ ಈ ಥರದ್ದೆಲ್ಲ ಮಾಡಿ ತಂಪು ಮಾಡಿಕೊಳ್ಳಬೇಕಾಗುತ್ತೆ.

'ನಾನು ಹೊರಟೆ' ಎಂದು ಹೇಳುತ್ತಾ ಖಾಲಿ ಬಟ್ಟಲನ್ನು ತೆಗೆದುಕೊಂಡು ಬೇಲಾ ಅಲ್ಲಿಂದ ಹೋದಳು.

"ಇಡೀ ರಾತ್ರಿ ನರೇಶ್ ಎಲ್ಲಿರ್‍ತಾನೆ. ಮಗು? ಅವನನ್ನು ನೀನು, ಬೇಡಾಂತ ಹೇಳೋದಿಲ್ವೆ?" ಅಮ್ಮಾಜಿ ಇಷ್ಟು ದಿನಗಳ ಮೇಲೆ ಕಾಡುತ್ತಿದ್ದ ವಿಚಾರವನ್ನು ಎತ್ತಿದರು. ಅವಳೇ ಖುದ್ದಾಗಿ ತನ್ನ ಮಗನ ವ್ಯವಹಾರವನ್ನು ಗಮನಿಸುತ್ತಿದ್ದಳು, ಕೇಳಿಸಿಕೊಳ್ಳುತ್ತಿದ್ದಳು. ಯಾವಾಗಲಾದರೂ ಇಂತಹ ಮಾತು ಸೊಸೆ ಹತ್ತಿರ ಹೇಳಿ ಮನಸ್ಸನ್ನು ಆವರಿಸಿದ್ದ

ದುಃಖದ ಕಾರ್ಮೋಡಗಳು ಮಳೆಗರೆವ ಹಾಗೆ ಮಾಡುತ್ತಿದ್ದುದುಂಟು. ಆದರೆ ಈ ಸೊಸೆ ಯಾವ ಶಿಲೆಯಿಂದ ಆಗಿದ್ದಳೋ! ಮಳೆ ಸುರಿಸುತ್ತಿರಲಿಲ್ಲ ಮೌನವಾಗಿದ್ದುಕೊಂಡೇ ಎಲ್ಲವನ್ನೂ ಹೇಳುತ್ತಿದ್ದಳು.

"ನೀನು ಏನೂ ಹೇಳೋಕೆ ಆಗೋದಿಲ್ಲ ಅನ್ನೋ ವಿಚಾರ ಬೇರೆ ನನ್ನ ಹತ್ತಿರ ಹೇಳಿಕೊಳ್ಳಲು ನಿನಗೆ ಯಾಕೆ ಸಂಕೋಚ ಆಗಬೇಕು? ನಮ್ಮಲ್ಲಿನ ಗಂಡಸರೇ ಹೀಗೆ! ಹೆಂಗಸು ಅಂದ್ರೆ ಮರ್ಯಾದೆ, ಗೌರವಗಳಿಂದ ನೋಡಿಕೊಳ್ಳೋಕೂ ಗೊತ್ತಿಲ್ಲ...... ನನಗೆ ಈ ಮನೇಲಿ, ಸುತ್ತಮುತ್ತ ಏನೇನು ನಡೀತಿದೆ ಅನ್ನೋದೆಲ್ಲ ಕಾಣಿಸ್ತಿದೆ; ಕೇಳಿಸ್ತಿದೆ, ಆದರೆ....." ಅಮ್ಮಾಜಿಯ ಮಾತು ಅರ್ಧಕ್ಕೆ ನಿಂತಿತು.

ಅಷ್ಟು ಹೊತ್ತಿಗೆ ಯಾರೋ ಬಾಗಿಲು ತಟ್ಟಿದರು. ಶಾಲ್ಮಲಿ ಎದ್ದು ಓಡಿದಳು. ನರೇಶ್ ಕುಡಿದು ತೂರಾಡುತ್ತಾ, ಬಡಬಡಿಸುತ್ತಾ ಬರುತ್ತಿದ್ದ. ಅಮ್ಮಾಜಿ ನೋಡಿದರೆ ನೊಂದುಕೊಳ್ಳುತ್ತಾರೆಂದು, ದಿಢೀರನೆ ಬಾಗಿಲ ಬಳಿಗೆ ಹೋಗಿ ಅವನಿಗೆ ಕೈ ಆಸರೆ ಕೊಟ್ಟು ಕರೆದೊಯ್ದಳು. ಈ ರಹಸ್ಯ ತಮ್ಮಿಬ್ಬರ ಮಧ್ಯೆ ಇರಬೇಕಾದ್ದು. ಮೂರನೆಯವರಿಗೆ ತಿಳಿಯಬಾರದು. ಅಮ್ಮಾಜಿ ನೋಡಿ ಮನಸ್ಸಿಗೆ ಬೇಸರ ಪಟ್ಟುಕೊಂಡರೆ ತನಗೇ ಅದು ಅವಮಾನ. ತಾನೇ ಅಪರಾಧಿ!

* * *

ಶಾಲ್ಮಲಿಯ ಡಿಪಾರ್ಟ್‌ಮೆಂಟ್ ಬೇರೆಯಾಯ್ತು. ಈಗ ಸಿಕ್ಕ ಪ್ರಾಜೆಕ್ಟ್ ಕೆಲಸ ವಿಪರೀತವಾಗಿತ್ತು. ಮನೆ ತಾಪತ್ರಯಗಳನ್ನು ಮರೆತು ಹೊಸ ಜಾಗಕ್ಕೆ ಹೊಂದಿಕೊಳ್ಳುವ, ಅರ್ಥ ಮಾಡಿಕೊಳ್ಳುವ, ಫೈಲುಗಳಲ್ಲಿ ತೊಡಗುವ, ಮೀಟಿಂಗ್‌ಗಳಲ್ಲಿ ಹಾಜರಾಗುವ ಕೆಲಸಗಳಲ್ಲೇ ತನ್ನನ್ನು ಮುಳುಗಿಸಿದಳು. ಈಗಿನ ಅವಳ ಹೊಸ, ಪಿ.ಎ.ಸ್ವರೂಪ್ ಆಸ್ಥಾನ್ ರಿಟೈರ್ ಆಗುವುದಕ್ಕೆ ಒಂದೆರಡು ವರ್ಷ ಬಾಕಿ ಇತ್ತು. ಅದಕ್ಕೇ ಆತನಿಂದ ಹೆಚ್ಚಿನ ಕೆಲಸ, ಉತ್ಸಾಹ ಚುರುಕುತನಗಳನ್ನು ನಿರೀಕ್ಷಿಸುವುದು ಶಾಲ್ಮಲಿಗೆ ಸಾಧ್ಯವಿರಲಿಲ್ಲ. ಆತನಿಂದ ಕೆಲಸಗಳು ಬಹಳ ನಿಧಾನವಾಗಿ, ಸಿಟ್ಟು ಬರುವಂತಾಗುತ್ತಿತ್ತು. ಆದರೂ ಶಾಲ್ಮಲಿ ಅವರಿಗೆ, ಆ ವಯಸ್ಸಿನ ವ್ಯಕ್ತಿಗೆ ಏನು ಹೇಳುವುದೆಂದು ಸುಮ್ಮನಿರುತ್ತಿದ್ದಳು.

ಮಧ್ಯಾಹ್ನದವರೆಗೆ ಸಂದರ್ಶನಕ್ಕಾಗಿ ಬಂದವರು ಸಾಲು ಸಾಲಾಗಿ ಇರುತ್ತಿದ್ದರು. ಫೋನಿನಲ್ಲಿ ವ್ಯವಹಾರದ ಮಾತುಕತೆ ಬೇರೆ! ಪತ್ರಗಳಿಗೆ ಉತ್ತರ, ಫೈಲುಗಳಿಗೆ ಕೆಲಸಗಳ ಸಾಧ್ಯತೆ – ಇವೇ ತಲೆತುಂಬ. ಸಂಜೆ ಮನೆಗೆ ಬಂದಾಗ ಸೋತು ತಣ್ಣಗಾಗಿರುತ್ತಿದ್ದಳು. ಜೊತೆಗೆ ಅಮ್ಮನ ಆರೋಗ್ಯ ಸರಿ ಇರಲಿಲ್ಲ. ಅವರನ್ನು ನೋಡಲು ಹೋಗುವುದಕ್ಕೆ ಆಗುತ್ತಿರಲಿಲ್ಲ. ಈ ನೋವು ಅವಳನ್ನು ಕಾಡುತ್ತಲೇ ಇತ್ತು. ಹೃದಯ ಭಾರವೆನಿಸಿತು. ಅವಳಿಗೆ ಅನಿಸಿತು. 'ಸಮಯ ತನ್ನನ್ನು ಅಗ್ನಿ ಪರೀಕ್ಷೆ ಮಾಡಲು ಹೊರಟಿದೆ'.

ಬೆಳಗ್ಗೆ ಆಫೀಸಿಗೆ ಹೋಗುವಾಗ ಅಪ್ಪ ಕಾಣಿಸಿದರು. ನೇರವಾಗಿ ಕಾರನ್ನು ಎಡಕ್ಕೆ ತಿರುಗಿಸಿ, ಅಪ್ಪನ ಬಳಿಗೆ ನಿಲ್ಲಿಸಿದಳು. ಅವರು ಗಾಭರಿಯಿಂದ ಬೆಚ್ಚಿದರು.

"ಅಪ್ಪಾ, ಬನ್ನಿ!" ಎಂದು ಹೇಳುತ್ತಾ ಕಾರಿನ ಬಾಗಿಲನ್ನು ತೆರೆದಳು.

"ಶಾಲೂ......ಇದು?" ಅಪ್ಪ ಗಾಭರಿಯಾದರು.

"ಎಲ್ಲಿಗೆ ಹೋಗಬೇಕಿತ್ತು ಅಪ್ಪ?" ಶಾಲೂ ಕುತೂಹಲದಿಂದ ವಿಚಾರಿಸಿದಳು.

"ಎಲ್ಲೂ ಇಲ್ಲ.....ಇಲ್ಲೇ ಸಫದರ್‌ಜಂಗ್ ಹೋಗಿ ಬರೋಣಾಂತ ಇದ್ದೆ" ಅಪ್ಪ ಹೇಳಿದರು.

"ಬನ್ನಿ. ನಾನು ಅಲ್ಲೀವರೆಗೆ ಬಿಡ್ತೀನಿ." ಶಾಲ್ಮಲಿ ಹೇಳಿದಳು.

"ನೀ ಹೋಗು ಮಗಳೆ. ಈ ಮುದುಕನಿಗೆಂಥ ಕಾರು? ನಾನು ಬಸ್ ಹಿಡಿದು ಹೋಗ್ತೇನೆ. ನೀ ಹೋಗು!" – ಹೇಳುತ್ತಾ ಅಪ್ಪ ಕಾರಿನ ತೆರೆದ ಬಾಗಿಲನ್ನು ಮುಚ್ಚಿದರು. ಕೈ ಬೀಸುತ್ತಾ ಮುಂದೆ ಹೋದರು.

"ಅಪ್ಪ!" – ಎಂದಷ್ಟೇ ಹೇಳಿದಳು.

"ಸಮಯ ಸಿಕ್ಕರೆ ಅಮ್ಮನನ್ನು ನೋಡಲು ಬಾ. ತುಂಬ ನಿನ್ನನ್ನ ನೆನಸ್ಕೋತಾಳೆ. ವಾರ್ಡ್ ನಂಬರ್ ಮೂರು. ಬೆಡ್ ನಂಬರ್ ನಾಲ್ಕು" – ಹೇಳುತ್ತಾ ಅಪ್ಪ ಉದ್ದುದ್ದ ಹೆಜ್ಜೆ ಹಾಕುತ್ತಾ ಮುಂದೆ ಹೋದರು.

"ಅಪ್ಪ, ನೀವೂ....?" ಇಷ್ಟು ಮಾತ್ರ ಹೇಳಲು ಸಾಧ್ಯವಾಯಿತು. ಅವಳಿಗೆ ಗಂಟಲು ತುಂಬಿ ಬಂತು. ಕಾರು ಹಿಂದಕ್ಕೆ ತಿರುಗಿ ತನ್ನ ದಾರಿ ಹಿಡಿಯಿತು. ಇದೇ ಕೊನೇ ಸಲ! ಇನ್ನೆಂದೂ ಕಣ್ಣೀರು ಹರಿಯುವುದಿಲ್ಲ. ಗಲ್ಲಿಯ ಒಂದು ಪಕ್ಕಕ್ಕೆ ಕಾರನ್ನು ನಿಲ್ಲಿಸಿ ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅತ್ತು ಬಿತ್ತಳು.

* * *

"ಯಾಕೆ ಮಗು. ಹೀಗೆ ಸೊರಗಿ ಹೋಗಿದ್ದೀಯ. ಮನಸ್ಸಿಗೆ ನೋವಿಲ್ಲ ತಾನೇ?" ಅವಳ ತಲೆ ಮೇಲೆ ಕೈ ಇರಿಸಿ ನೇವರಿಸಿದರು ಅಮ್ಮ.

"ಬೇಗ ಚೆನ್ನಾಗಿ ಆಗು. ನಿನ್ನ ಶಾಲೂಗೆ ಏನಾಯ್ತು ಅಂತ ಆಮೇಲೆ ಹೇಳ್ತೀನಿ." ಕಂಬನಿ ಒರೆಸಿಕೊಂಡು ಕೃತಕವಾಗಿ ನಕ್ಕಳು.

"ನಾನಂತು ಆಸ್ಪತ್ರೆಗೆ ಸೇರಿದ ದಿನದಿಂದ ಹೇಳ್ತಾನೆ ಇದ್ದೀನಿ, ಫೋನ್ ಮಾಡಿ ತಿಳಿಸಿ ಶಾಲೂಗೆ ಅಂತ. ಕೇಳಿದಾಗೆಲ್ಲ, 'ಶಾಲೂ ಮೇಲೆ ನಮಗೆ ಇನ್ನು ಏನು ಅಧಿಕಾರ ಇದೆ?' ಅಂತ ಪ್ರಶ್ನಿಸಿ ಬಾಯಿ ಮುಚ್ಚಿಸುತ್ತಿದ್ದರು." ತನಗೆ ತಾನೇ ಹೇಳಿಕೊಂಡಂತೆ ಹೇಳಿದಳು.

"ತಗೋಮ್ಮಾ ಈ ಸೇಬುಹಣ್ಣು ತಿನ್ನು" ಶಾಲ್ಮಲಿ ತನ್ನ ಮನಸ್ಸಿನ ಮೇಲೆ ಆದ ಆಘಾತಗಳನ್ನು ಮರೆತು ಅಮ್ಮನ ಮುಂದೆ ತಟ್ಟೆಯನ್ನಿಟ್ಟಳು.

"ನೀನೂ ತಿನ್ನು" ಪ್ರೀತಿಯಿಂದ ಕೇಳಿಕೊಂಡಳು ಅಮ್ಮ.

"ತಿಂತಾ ಇದ್ದೀನಿ" ಶಾಲ್ಮಲಿ ನಿಧಾನವಾಗಿ ಹೇಳಿದಳು. "ಅಳಿಯಂದಿರು ಹೇಗಿದ್ದಾರೆ? ಯಾವಾಗಲಾದರೂ ನಿಂಜೊತೆ ಬರಹೇಳು." ಅಮ್ಮ ಚಿಂತೆಯಿಂದ ಹೇಳಿದಳು.

"ಕೆಲಸದಲ್ಲಿ ಬಿಡುವು ಇರೋದಿಲ್ಲಮ್ಮ" – ಶಾಲ್ಮಲಿ ದೀರ್ಘವಾಗಿ ಉಸಿರೆಳೆದಳು.

"ಅದಂತೂ ಇದ್ದದ್ದೇ! ಈ ದಿಲ್ಲಿಯ ಓಟವೇ ಓಟ! ನಾವು ನೋಡ ನೋಡ್ತಾನೆ, ದಿಲ್ಲಿ ಹೇಗಿದ್ದದ್ದು ಹೇಗಾಗಿದೆ! ಇದಕ್ಕೆ ದಿಕ್ಕು ದೆಸೆ ಏನೂ ಇಲ್ಲ! ಒಂದು ಬೀದಿ ಇನ್ನೊಂದು ಬೀದಿಯಿಂದ ಎಷ್ಟೊಂದು ದೂರ ಹೋಗ್ಬಿಟ್ಟಿದೆ! ಅಮ್ಮ ಟವೆಲಿನಿಂದ ಬಾಯಿ ಒರೆಸಿಕೊಂಡಳು.

"ರಿಪೋರ್ಟ್ ಬಂತೇನು, ಅಮ್ಮ?" ಶಾಲ್ಮಲಿ ಕೇಳಿದಳು.

"ಇನ್ನೂ ಇಲ್ಲ. ಇನ್ನೊಂದೆರಡು ಟೆಸ್ಟುಗಳಾಗಬೇಕು. ಆಗ ಮಾತ್ರ ಈ ನರಕದಿಂದ ನನಗೆ ಬಿಡುಗಡೆ ಸಿಗುತ್ತೆ. ಮನೇಲಿ ಚೆನ್ನಾಗಿದ್ದೆ. ಇಲ್ಲಿಗೆ ಬಂದು ರೋಗಿಗಳ ಅಯ್ಯೋ! ಅಯ್ಯೋ ಅನ್ನೋದು ಕೇಳಿ ನನಗನಿಸುತ್ತೆ, ಪ್ರಪಂಚದ ಪ್ರತಿ ಮನುಷ್ಯ ಮರಣಾವಸ್ಥೆಯನ್ನು ತಲುಪಿರಬೇಕು ಅಂತ" – ಅಮ್ಮ ಬೇಸರದ ದನಿಯಲ್ಲಿ ಹೇಳಿದಳು.

"ನಾನು ಹೋಗಿ ಡಾಕ್ಟರ್ ಹತಿರ ಮಾತಾಡ್ತೀನಿ." – ಶಾಲ್ಮಲಿ ತಂದಿದ್ದ ಹಣ್ಣುಗಳನ್ನು ಅಲ್ಲಿಯೇ ಮೇಜಿನ ಮೇಲಿರಿಸಿದಳು. ಮತ್ತು ಪ್ರೀತಿಯಿಂದ ಅಮ್ಮನ ಕಾಲುಗಳನ್ನು ನೇವರಿಸಿದಳು. ಒತ್ತಿ ಬರುತ್ತಿದ್ದ ಕಂಬನಿಯನ್ನು ಬಲವಂತದಿಂದ ನುಂಗಿಕೊಂಡಳು.

ಶಾಲ್ಮಲಿಗೆ ಜೀವನದಲ್ಲಿ ಸ್ವಾರಸ್ಯವೇ ಇಲ್ಲವೆನಿಸಿತು. ಪ್ರತಿಯೊಂದು ಕೆಲಸ ವ್ಯರ್ಥ ಎಂದುಕೊಂಡಳು. ಅವಳಿಗೆ ಬದುಕುವ ಉತ್ಸಾಹವೇ ಇಲ್ಲವಾಯಿತು. ಅಂತರಂಗದಲ್ಲಿ ಹೆಚ್ಚುತ್ತಿದ್ದ ಕೆಸರಿನಲ್ಲಿ ಉತ್ಸಾಹ ಉಡುಗಿ ಹೋದಂತೆನಿಸಿತು. ಕೆಸರಿನಿಂದ ಎತ್ತಿ ಪಾರಾಗಿಸುವ ಯಾವ ಸಹಾಯ ಹಸ್ತವೂ ಅವಳ ದೃಷ್ಟಿಗೆ ಬೀಳಲಿಲ್ಲ. ಮನೆ ಒಡೆಯುತ್ತಿತ್ತು. ಸಂಬಂಧಗಳ ಸೆಲ್ ಬತ್ತಿ ಹೋಗಿತ್ತು. ಸಮಾಜದ ದಿಕ್ಕು ಬದಲಿಸಿತ್ತು. ಹೋರಾಟ? ಯಾರಿಗಾಗಿ ಹೋರಾಟ? ತನ್ನ ಅಗತ್ಯ ಯಾರಿಗಿದೆ?

ಪ್ರಶ್ನೆಗಳ ಚಾವಟಿಯಿಂದ ತನ್ನ ಬೆನ್ನ ಮೇಲೆ ತಾನೇ ಹೊಡೆದುಕೊಳ್ಳುತ್ತಾ, ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಾ ಸಮಾಧಾನ ದೊರೆಯದೆ ಕತ್ತಲಲ್ಲಿ ಕರಗಿ ಹೋಗುತ್ತಿದ್ದಳು. ಮತ್ತೆ ಕವಿತೆಗಳ ಮೂಲಕ ಎಚ್ಚೆತ್ತ ಮೋಹ ಪ್ರಕೃತಿಯೊಂದಿಗಿನ

ವಾತ್ಸಲ್ಯಗಳು ನೆಲದಂತರಾಳದಲ್ಲಿ ಹೋಗಿ ಮಲಗಿ ಬಿಟ್ಟಿತು. ಅವುಗಳ ಎಡೆಯಲ್ಲಿ ಒಂದು ಆಕ್ರೋಶ ಮೂಡುತ್ತಿತ್ತು. ಯಾವ ಆಕ್ರೋಶದಲ್ಲಿ ಅಸಹಾಯಕತೆ, ಸೀಮಿತತೆಯ ಸಂಕೀರ್ಣತೆಯ ನೋವಿರುತ್ತದೆಯೋ, ಆ ಆಕ್ರೋಶ ಜರ್ಝರಗೊಳ್ಳುತ್ತಿದ್ದ ದೇಹವನ್ನು ಹಿಂಡಿ ಬಿಡುತ್ತಿತ್ತು. ಒಳಗೆ ಉಕ್ಕುತ್ತಿದ್ದ ಲಾವಾ ಅವಳನ್ನು ಹುಚ್ಚಿಯಾಗಿಸಿ ಚೀರುವಂತೆ ಮಾಡುತ್ತಿತ್ತು. ತಲೆಯನ್ನು ಗೋಡೆಗೆ ಗಟ್ಟಿಸಿಕೊಳ್ಳುವಂತೆ ಮಾಡುತ್ತಿತ್ತು. ಆದರೆ ಹಾಗೆಲ್ಲ ಮಾಡುವುದಕ್ಕೂ ಅವಳಿಗೆ ಎಡೆಯಿರಲಿಲ್ಲ. ಯಾವುದೊ ಪ್ರತಿಬಂಧ, ಯಾವುದೋ ಶಿಸ್ತು ಅದಕ್ಕೆಲ್ಲ ಅಡ್ಡಿ ಬರುತ್ತಿತ್ತು. ಅವಳಿಗೆ ಏನು ಮಾಡಲೂ, ಏನನ್ನೂ ಬದಲಾಯಿಸಲೂ ಕಿತ್ತೆಸೆಯಲೂ ಆಗುತ್ತಿಲ್ಲ. ಈ ಅಸಹಾಯಕತೆಯ ಪರಿಣಾಮವಾಗಿ ಮೂಡಿದ ಆಕ್ರೋಶವೂ ದೌರ್ಬಲ್ಯವಾಗಿ ಕರಗಿ ಹೋಗುತ್ತಿದೆ.

ಒಮ್ಮೊಮ್ಮೆ ದೇವರಲ್ಲಿ ತನಗೇಕೆ ಬುದ್ಧಿಯನ್ನು, ಆಲೋಚನಾ ಶಕ್ತಿಯನ್ನು ಕೊಟ್ಟೆ, ಇದೇ ನನ್ನ ಶತ್ರುವಾಗಿ ನನ್ನ ಸುಖಕ್ಕೆ ಬೆಂಕಿ ಇಡುವಂತಾಗಿದೆ – ಎಂದು ಪ್ರಶ್ನಿಸುತ್ತಾಳೆ. ಹುಚ್ಚಿಯನ್ನಾಗಿ ಏಕೆ ಮಾಡದೆ ಹೋದೆ? ಎಲ್ಲಿಯೋ ಮೂಲೆಯಲ್ಲಿ ನಿಸ್ಪಂದವಾಗಿ ಪ್ರಜ್ಞಾಶೂನ್ಯವಾಗಿ ಬಿದ್ದುಕೊಂಡು, ಯಾವ ನೋವೂ ಇಲ್ಲದೆ ಕಾಲ್ಪನಿಕ ಸುಖದಲ್ಲಿ ಇರಬಹುದಾಗಿತ್ತು. ಯಾವ ಆಕಾಂಕ್ಷೆಗಳು ಇಲ್ಲದೆ, ಕೇವಲ ಸಂತೋಷವೇ ಇರುತ್ತಿತ್ತು – ಎಂದೆಲ್ಲ ಯೋಚಿಸಿ ದುಃಖತಪ್ತಳಾಗಿ ಪಾತಾಳಕ್ಕೆ ಇಳಿದು ಹೋಗುತ್ತಿದ್ದಳು.

ಅಮ್ಮನ ದುರ್ಬಲ ದೇಹ, ಕಣ್ಣಲ್ಲಿ ಇಣುಕುತ್ತಿದ್ದ ಅಸಹಾಯಕತೆ, ಎದ್ದರೆ ಕೂತರೆ ಶಾಲ್ಮಲಿಯನ್ನು ಕಾಡುತ್ತಿತ್ತು. ಅಪ್ಪ ಒಬ್ಬರೇ ಅಮ್ಮನ ಸೇವೆ ಮಾಡುತ್ತಿರಬೇಕೆಂಬ ಆಲೋಚನೆಯಿಂದ ಮನಸ್ಸಿಗೆ ಹಿಂಸೆಯಾಗುತ್ತಿತ್ತು. ಮನೆ, ಆಸ್ಪತ್ರೆ, ಮಾರ್ಕೆಟ್ಟು – ತ್ರಿಕೋಣದಲ್ಲಿ ಸಿಲುಕಿದ್ದ ಅಪ್ಪನಿಗೆ ಇದ್ದಕ್ಕಿದ್ದಂತೆ ಏನಾದರೂ ಆದರೆ?

'ಎಲೋ! ಅದೃಷ್ಟವಂತ! ಇದನ್ನೇ ಮಗ ಅಂತ ತಿಳ್ಕೋ., ಮಗಳೂಂತ ತಿಳ್ಕೋ.... ನಾನಂತೂ ಶಾಲೂನ ಮಗ ಅಂತಲೇ ಬೆಳೆಸ್ತೇನೆ ನೋಡ್ತಿರು, ಒಂದು ದಿನ ಇವಳು ಹುಡುಗರನ್ನೇ ಮೀರಿಸಿ ಬಿಡ್ತಾಳೆ. ಈ ಹುಡುಗಿ ನಿಜವಾಗಿಯೂ ನಮ್ಮನ್ನು ಸುಖವಾಗಿ ಇಡ್ತಾಳೆ. ನಮಗೆ ಕೀರ್ತಿ ತರ್ತಾಳೆ' ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದ.

ಬಾಲ್ಯದಲ್ಲಿ ಅಪ್ಪ ಹೇಳುತ್ತಿದ್ದ ಈ ಮಾತುಗಳು ಶಾಲ್ಮಲಿಯ ತಲೆಯಲ್ಲಿ ಸುಳಿದಾಡಿದವು. ಅಪ್ಪನ ಎಲ್ಲ ಆಸೆಗಳನ್ನು ಮಣ್ಣು ಮಾಡಿಬಿಟ್ಟೆ, ಬಿಡಿಸಿಕೊಳ್ಳಲಾಗದ, ಬದಲಾಯಿಸಲಾಗದ ಪರಿಸ್ಥಿತಿಯಲ್ಲಿ ಸಿಲುಕಿ ಕೊಂಡಿದ್ದಾಳೆ. ಅವಳಿಗೆ ಚೆನ್ನಾಗಿ ಅರ್ಥವಾಗಿ ಹೋಗಿದೆ. ಈ ಮನೆಯ ಅಡಿಪಾಯ ಸಡಿಲವಾಗಿದೆ. ಅಮ್ಮನ ಅನಾರೋಗ್ಯದ ಕಾರಣವಾಗಿಯೇಒಂದು ರಾತ್ರಿ ಅಲ್ಲಿ ಉಳಿದರೂ ನರೇಶ್‌ನ ಸಾಹಸ ಹೆಚ್ಚಿ, ರಾತ್ರಿಹೊತ್ತು ಮನೆಗೆ ಬರುತ್ತಾನೋ ಇಲ್ಲವೋ? ಅವನಿಗೆ ಒಂದು ಭಯ ಇದೆ ಇನ್ನೂ. ಬಂಧನ, ಮರ್ಯಾದೆ! ಈಗ ಅವನಿಗೆ ಏನಾದರೂ ನೆಪ ಹುಡುಕೋಕೆ

ದಾರಿ ಸಿಗುತ್ತೆ. ಅದೇ ಈಗ ಮಾಡ್ತಿರೋ ಹಾಗೆ! ನಾಳೆಯ ಭವಿಷ್ಯ ಸ್ಪಷ್ಟವಾಗಿ ಗೋಚರವಾಗುತ್ತಿದೆ.

ಮೇಲು ನೋಟಕ್ಕೆ ಸುಖವಾದ ಜೀವನ ಅಂತ ಕಾಣಿಸಿಕೊಳ್ಳುತ್ತಿರುವುದು, ಒಳಗೆ ಎಷ್ಟೆಲ್ಲ ದುಃಖ ತುಂಬಿಕೊಂಡಿದೆಯೋ! ಅಪ್ಪ – ಅಮ್ಮನಿಗೂ ಸುಳಿವು ಸಿಕ್ಕಿಲ್ಲ. ಹೀಗಿರುವುದು ಒಳ್ಳೆಯದೇ! ಈ ವಯಸ್ಸಿನಲ್ಲಿ. ಇದೆಲ್ಲ ತಿಳಿದರೆ ಇನ್ನೆಷ್ಟು ನೊಂದುಕೊಳ್ಳುತ್ತಾರೋ! ಮಗನಾಗಿ ಅವರಿಗೆ ಈ ವಯಸ್ಸಿನಲ್ಲಿ ಊರುಗೋಲಾಗಿಯೂ ಉಳಿಯಲಿಲ್ಲ". ನಾನು ಯಾವುದಕ್ಕೂ ಪ್ರಯೋಜನವಿಲ್ಲದಂತಾದೆ. ಎಲ್ಲಿ ಏನಾದರೂ ಮಾಡುವ ಸಾಹಸಕ್ಕೆ ಹೋದರೆ, ಅಲ್ಲಿ ಅದನ್ನು ನಿಷೇಧಿಸಲಾಗುತ್ತದೆ.... ಶಾಲ್ಮಲಿ ಈ ಯೋಚನೆಯಲ್ಲಿಯೇ ಇಡೀ ರಾತ್ರಿ ಕಳೆದಳು.

* * *

ನಾನು ಎರಡನೆ ಹೆಂಡತಿ ಆಗುವುದರ ಪರಿಣಾಮಕ್ಕೆ ಹೆದರಿ ಮೊದಲನೆ ಹೆಂಡತಿ ಆದೆ. ಆದರೆ ಧರ್ಮಪತ್ನಿ ಆಗಿಯೂ ಕೂಡಾ ಇಂತಹ ತಿರಸ್ಕಾರ, ಅವಮಾನ, ಅಸಹ್ಯ, ಅಂಕುಶ!..... ಈ ಅನುಭವಗಳು, ಈ ಕಹಿಯನ್ನು ಅನುಭವಿಸಲು ಹಾರೈಸಿರಲಿಲ್ಲ. ಸಮಾಜದಲ್ಲಿ ಗೌರವದಿಂದ ತಲೆ ಎತ್ತಿಕೊಂಡು ಬಾಳಬೇಕೆಂಬ ಉದ್ದೇಶದಿಂದಲೇ ನಾನು ಎಲ್ಲವನ್ನು ಬಿಟ್ಟು ಬಂದೆ. ತಲೆ ಬಗ್ಗಿಸುವುದು ಎಂದಿಗೂ ನನ್ನಿಂದ ಸಾಧ್ಯವಿಲ್ಲ. ಸಾಮಾಜಿಕ ನಿಯಮಗಳನ್ನು ಸ್ವೀಕರಿಸಿ ಅದರಂತೆ ನಡೆದು ಅದರ ಮರ್ಯಾದೆಯನ್ನು ಕಾಪಾಡಿಕೊಂಡು ಬಂದದ್ದಕ್ಕೆ ನನಗೆ ಸಿಕ್ಕಿದ್ದೇನು? ಗೌರವ! ಮರ್ಯಾದೆ! ಶಾಲ್ಮಲಿ ಲಾನ್‌ನಲ್ಲಿ ಕುಳಿತು ಇಳಿಯುತ್ತಿದ್ದ ಬಿಸಿಲನ್ನು ನೋಡುತ್ತಿದ್ದಳು.

"ಚಹಾ ಇಲ್ಲಿಗೇ ತರಲೇ ಅಥವಾ ಒಳಗೆ ಬೆಡ್‌ರೂಂನಲ್ಲಿ ಕುಡೀತೀರಾ?" ಬೇಲಾ ಬಂದು ವಿಚಾರಿಸಿದಳು.

"ಯಜಮಾನ್ರ ಫೋನ್ ಏನಾದರೂ ಬಂದಿತ್ತಾ?" ಶಾಲ್ಮಲಿ ಶಾಲನ್ನು ಇನ್ನಷ್ಟು ಹೊದ್ದುಕೊಂಡು ಕೇಳಿದಳು.

"ಬಂದಿತ್ತು, ಹೇಳಿದರು, ರಾತ್ರಿ ಡಿನ್ನರ್ಗೆ ಬರೋದಿಲ್ವಂತೆ. ನೀವು ಅವರಿಗಾಗಿ ಕಾಯಬಾರದಂತೆ. ಹೊತ್ತಾಗಿ ಬರ್ತೀನೀಂತ ಹೇಳಿದರು."

"ಸರಿ, ಹಾಗಾದರೆ. ಚಹಾ ಇಲ್ಲಿಗೇ ತಗೊಂಡು ಬಾ." ಉಡುಗುತ್ತಿದ್ದ ಗಂಟಲನ್ನು ಸರಿಮಾಡಿಕೊಂಡು ಹೇಳಿದಳು.

"ನರೇಶ್‌ಗೆ ಏನಾಗುತ್ತಿದೆ?" ದೀರ್ಘವಾಗಿ ಉಸಿರೆಳೆದು ನಿಧಾನವಾಗಿ ಹೆಜ್ಜೆ ಹಾಕುತ್ತಾ ಗುಲಾಬಿ ಗಿಡಗಳ ಬಳಿ ಹೋಗಿ ನಿಂತಳು. ಗುಲಾಬಿಗಳು ನಳನಳಿಸುತ್ತಿದ್ದವು. ಹಳದಿ, ಬಿಳಿ, ಕೆಂಪು. ಒಂದು ಮೊಗ್ಗನ್ನು ಮುರಿದು ತಲೆಯಲ್ಲಿಟ್ಟುಕೊಂಡಳು. ಮತ್ತೆ

ಬಂದು ಕುರ್ಚಿಯಲ್ಲಿ ಕುಳಿತಳು. ಚಳಿ ಆಗುತ್ತಿತ್ತು. ಆದರೆ ಅವಳಿಗೆ ಅಲ್ಲಿಂದ ಏಳುವ ಮನಸ್ಸಾಗಲಿಲ್ಲ. ಒಂದೊಂದು ಸಲ ಬೇಲಾನ ಕರೆದು ಅಥವಾ ನಾನೇ ಕಿಚನ್‌ಗೆ ಹೋಗಿ ಚಹಾ ಇಲ್ಲಿಗೆ ತರೋದು ಬೇಡ, ಬೆಡ್‌ರೂಂಗೆ ತರೋಕೆ ಹೇಳೋಣ ಅನ್ನಿಸಿತು. ಆದರೂ ಏಳುವ ಮನಸ್ಸಾಗಲಿಲ್ಲ. ಚಳಿಯಿಂದ ಕಾಲುಗಳು ಸೆಡೆತುಕೊಂಡಂತೆ ಆಯಿತು. ಸಾಲದ್ದಕ್ಕೆ ನರೇಶ್‌ನ ಯೋಚನೆ ಬೇರೆ ಹಿಮದ ಹನಿಗಳಂತೆ ಅವಳ ಮೇಲೆ ಬಿದ್ದು ಬಿದ್ದು ಅವಳನ್ನು ಹಿಮಶಿಲೆಯಾಗಿ ಪರಿವರ್ತಿಸುತ್ತಿತ್ತು.

ಇವತ್ತೇ ಅಲ್ಲ. ಎಷ್ಟೋ ಸಲ ಶಾಲ್ಮಲಿ, ನರೇಶ್‌ನ ಜೊತೆ ಒಟ್ಟಿಗೆ ಕುಳಿತು ಚಹ ಕುಡಿಯುವ ಆಸೆಯಿಂದ ಬೇಗ ಬಂದು ಬಿಡುತ್ತಿದ್ದಳು. ಆದರೆ ಅವಳ ನಿರೀಕ್ಷೆ ಸುಳ್ಳಾಗುತ್ತಿತ್ತು. ಅವಳು ಬೇಗ ಮನೆಗೆ ಬಂದಾಗ ನರೇಶ್ ರಾತ್ರಿ ತಡವಾಗಿ ಮನೆಗೆ ಬರುತ್ತಿದ್ದ. ಅವಳು ಆಫೀಸಿನಿಂದ ಸುಸ್ತಾಗಿ ತಡವಾಗಿ ಮನೆಗೆ ಬಂದರೆ ನರೇಶ್ ಮುಖ ಊದಿಸಿಕೊಂಡು ಕುಳಿತಿರುತ್ತಿದ್ದ. ಸಮಾಧಾನ ಮಾಡುವ ಪ್ರಯತ್ನದಿಂದ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸುವುದು ತನ್ನ ಆಕ್ರೋಶವನ್ನು ತಾನೇ ವಿವಶಳಾಗಿ ನುಂಗಿಕೊಳ್ಳುತ್ತಿದ್ದಳು. ಬೇಡಿಕೊಳ್ಳುತ್ತಿದ್ದಳು. ನರೇಶ್ ಏನೂ ಮಾತಾಡದಿರಲಿ ಅಂತ. ಬಿರುಗಾಳಿ ಹೇಗೆ ಬಂತೋ ಹಾಗೇ ಹೊರಟು ಹೋಗಲಿ ಅಂತ ಪ್ರಾರ್ಥಿಸುತ್ತಿದ್ದಳು. ಮೊದಲಿನ ಶಕ್ತಿ ಉಳಿದಿರಲಿಲ್ಲ. ನರೇಶ್‌ನನ್ನು ನಿಲ್ಲಿಸಿ ಪ್ರತಿಭಟಿಸಿ, ತನ್ನನ್ನು ಈ ರೀತಿ ಉಪೇಕ್ಷೆ ಮಾಡುವುದನ್ನು ಕನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ.' ಅಂತ ಕೇಳುವುದಕ್ಕೂ ಅವಳಿಗೆ ಈಗ ಆಗುತ್ತಿರಲಿಲ್ಲ. ಮಾಡುವುದು ಮಾಡಲೇಬೇಕು. ಅರ್ಧದಲ್ಲಿ ಉಳಿಸೋದು ಅಂದ್ರೆ, ತನ್ನ ಗೈರು ಹಾಜರಿಗೆ ಸಮರ್ಥನೆ ಕೊಡಬೇಕು. ಆದರೆ ಇದು ಅವಳಿಗೆ ಸರಿಯೆನಿಸಲಿಲ್ಲ. ನರೇಶ್ ಮಾತ್ರ ಗಟ್ಟಿ ನಿರ್ಧಾರ ಮಾಡಿಬಿಟ್ಟಿದ್ದ. ಅವಳ ಪ್ರತಿಯೊಂದು ತರ್ಕ, ಕರ್ತವ್ಯಗಳನ್ನು ಅಧಿಕಾರದ ಕೊಡಲಿಯಿಂದ ಸೀಳಿ ಸೀಳಿ ಇಡಬೇಕು ಎಂದು ಹಗಲು ರಾತ್ರಿ ಅವನು ತನ್ನ ಗಂಡ ಎನ್ನುವ ಮಾತನ್ನು ಗಿಳಿ ಹಾಗೆ ಹೇಳುತ್ತಲೇ ಇದ್ದ. ಈಗ ಇದರಿಂದ ಅವಳಿಗೆ ಬೇಸರವಾಗಲಿಲ್ಲ. ಈ ಮಾತಿನ ಹಿಂದಿನ ಮನಃಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಳು. ಇದರಿಂದಾಗಿ ಅವನ ಮಾನಸಿಕ ಸಮಸ್ಯೆಗೆ ಒಂದು ಪರಿಹಾರವನ್ನು ಯೋಚಿಸಲು ಸಾಧ್ಯವಾದೀತು ಎಂದು. ಆದರೆ ನರೇಶ್‌ನನ್ನು ತಿದ್ದುವುದು, ಅವನ ಮನಸ್ಸನ್ನು ಪ್ರವೇಶಿಸುವುದು, ಅವನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವುದು, ಅಭಿಮನ್ಯು ಚಕ್ರವ್ಯೂಹವನ್ನು ಪ್ರವೇಶಿಸಿದ್ದಕ್ಕಿಂತ ಕಷ್ಟಕರವಾದ್ದು. ಈ ಚಕ್ರವ್ಯೂಹವನ್ನು ಭೇದಿಸಲೇಬೇಕು. ಎಂತಹ ಪರಿಸ್ಥಿತಿಯಲ್ಲಿಯೂ ಬಿಡಬಾರದು.

"ಅಮ್ಮಾವ್ರೆ ಚಹ?" ಬೇಲಾ ಹೇಳಿದಳು.

"ಆಯ್ತು ಮಾಡು" ಶಾಲ್ಮಲಿ ಅಡ್ಡಾಡುತ್ತಾ, ಶೀತಲತೆಯನ್ನು ತಲೆ ತುಂಬಿಸಿಕೊಳ್ಳುತ್ತಾ ಹೇಳಿದಳು.

"ಕಿಶೋರಿಯ ಅಮ್ಮ ತೀರಿಕೊಂಡರು. ಅಮ್ಮಾವ್ರೆ." ಬೇಲಾ ಚಹದ ಬಟ್ಟಲನ್ನು ಶಾಲ್ಮಲಿಯ ಕೈಗೆ ನೀಡುತ್ತಾ ಹೇಳಿದಳು.

"ಹೌದಾ...... ಯಾವಾಗ?" ಚಹ ಗುಟುಕರಿಸಿ ಕೇಳಿದಳು.

"ಮಧ್ಯಾಹ್ನ.......ಅದೇ ಆಸ್ಪತ್ರೇಲಿ" ಬೇಲಾ ಹೇಳಿದಳು.

"ಕಿಶೋರಿ ಬರುವುದಿಲ್ಲೇನು?" ಶಾಲ್ಮಲಿ ಪ್ರಶ್ನಿಸಿದಳು.

"ಇಲ್ಲ ಅಮ್ಮಾವ್ರೆ, ನಾಳಿದ್ದು ಬರ್ತೇನೆ ಅಂತ ಹೇಳಿ ಹೋಗಿದ್ದಾನೆ."

"ನಿನಗೆ ಅವನ ಮನೆ ಗೊತ್ತಿದೆಯೇನು?"

"ಗುರುತೇನೋ ಹೇಳಿದ್ದ.... ಆದರೆ ನೆನಪಿಲ್ಲ". ತಲೆ ಬಗ್ಗಿಸಿ ನಿಧಾನವಾಗಿ ಹೇಳಿದಳು, ಬೇಲಾ.

"ನೋಡು ನೆನಪಿರೋದಾದ್ರೆ ಇಬ್ಬರೂ ಹೋಗಿ ಬರೋಣ" – ಶಾಲ್ಮಲಿ ಯೋಚಿಸುತ್ತ ಹೇಳಿದಳು.

"ಅದೇನೋ ಅಡ್ರೆಸ್......" ನೆನಪಿಸಿಕೊಳ್ಳುತ್ತಾ ಸಂಕೋಚದಿಂದ ಹೇಳಿದಳು.

"ಹೋಗಲಿ ಬಿಡು" – ಶಾಲ್ಮಲಿ ಬಗ್ಗಿ ಇನ್ನೊಂದು ಕಪ್ ಚಹಾ ಮಾಡಿಕೊಳ್ಳತೊಡಗಿದಳು.

"ಅಡಿಗೆ ಏನು ಮಾಡಲಿ?" ಬೇಲಾ ಶಾಲ್ಮಲಿಯ ಯೋಚನೆಯಿಂದ ತುಂಬಿದ ಮುಖನೋಡುತ್ತಾ ಕೇಳಿದಳು.

"ಏನೂ ಬೇಡ. ಅಮ್ಮನ್ನ ನೋಡೋಕೆ ಹೋಗ್ತಿದ್ದೀನಿ. ಅಲ್ಲೇ ಊಟಮಾಡಿ ಬರ್ತೀನಿ." ಶಾಲ್ಮಲಿ ನಿಟ್ಟುಸಿರೆಳೆದು ನಿಧಾನವಾಗಿ ಹೇಳಿದಳು. ಬಟ್ಟಲನ್ನು ಎತ್ತಿಕೊಂಡು ಬೆಡ್‌ರೂಂ ಕಡೆಗೆ ನಡೆದಳು. ಬೇಲಾ ಟೀ ತೆಗೆದುಕೊಂಡು ಶಾಲ್ಮಲಿಯ ಹಿಂದೆ ನಡೆದಳು.

ಸೂರ್ಯ ಮುಳುಗಿದ್ದ. ಕತ್ತಲು ಕವಿಯತೊಡಗಿತ್ತು. ಚಳಿಗಾಲದ ಸಂಜೆ, ಎಲ್ಲೆಡೆ ನಿರುತ್ಸಾಹದ ವಾತಾವರಣ! ಎಲ್ಲವೂ ಶೂನ್ಯ! ಈ ಮನೆ ನೋಡಿದರೆ ಯಾರಿಗಾದರೂ ಈ ಭಾವನೆ ಬರುತ್ತಿತ್ತು. ಉತ್ಸಾಹ ಗದ್ದಲ ಸಂಭ್ರಮದ ಎಡೆಯಲ್ಲಿ ಒಂದು ಬಗೆಯ ಸ್ಮಶಾನ ಮೌನ ಕವಿದಿತ್ತು. ಮನೆಮಂದಿಗಿಂತ ಕೆಲಸದವರ ಸಂಖ್ಯೆಯೇ ಹೆಚ್ಚಾಗಿದ್ದರೂ, ಅವರಿಂದ ಮನೆಯನ್ನು ಸದ್ದುಗದ್ದಲಗಳಿಂದ ತುಂಬಲು ಸಾಧ್ಯವೇ?

ಅಲಮಾರಿ ತೆಗೆದು ಬಟ್ಟೆಗಳನ್ನು ಎತ್ತಿಕೊಳ್ಳುತ್ತಾ ಯೋಚಿಸಿದಳು – ಮದುವೆಯಾಗಿ ಎಂಟು ವರ್ಷವಾಯ್ತು.

ಅಮ್ಮನ ಮನೆಗೆ ಹೋಗಿದ್ದೀನಿ. ಪ್ರತಿಸಲದ ಹಾಗೆ ಅವಳಿಗೆ ಉಪದೇಶ ಕೊಡ್ತಾಳೆ, ಅಳ್ತಾಳೆ. ಆದರೆ ಏನು ತಾನೇ ಮಾಡಲು ಸಾಧ್ಯ? ಅಮ್ಮನ ಕಣ್ಣೀರಿಗಾಗಿ ಕರಗಿ ಹೋಗುತ್ತಾಳೆ. ಅವಳು ಅಮ್ಮನ ಮಾತುಗಳಿಂದ ಕುದಿಯುವುದಿಲ್ಲ. ಅದು ಅಮ್ಮನಿಗೆ ಚೆನ್ನಾಗಿ ಗೊತ್ತಿದೆ. ಅದಕ್ಕೆಂದೇ ಹೋದ ಸಲ ಏನನ್ನೂ ಹೇಳಲಿಲ್ಲ. ರೆಡಿಯಾಗುತ್ತಲೇ ಯೋಚಿಸುತ್ತಿದ್ದಳು. ಯೋಚಿಸಿದಷ್ಟೂ ಅವಳಿಗೆ ತಲೆ ಸಿಡಿಯುತ್ತಿತ್ತು.

"ಬೇಲಾ ಬಾಗಿಲು ಹಾಕಿಕೋ. ಭದ್ರ, ನಾನು ಹತ್ತುಗಂಟೆ ಒಳಗೆ ಬಂದು ಬಿಡ್ತೇನೆ." ಹೇಳುತ್ತಾ ಕಾರಿನ ಬಾಗಿಲನ್ನು ತೆಗೆದು ಸ್ಟಾರ್ಟ್ ಮಾಡಿದಳು.

ಕೆಲವರು ಕಾಲದೊಂದಿಗೆ ಬದಲಾಗುವುದೇ ಇಲ್ಲ. ಒಂದು ಬಂಡೆಗಲ್ಲಿನಂತೆ. ಮಳೆ, ಬಿರುಗಾಳಿ. ಅಪ್ಪಳಿಸಿ ಅಪ್ಪಳಿಸಿ ಸ್ವಲ್ಪ ಮಟ್ಟಿಗೆ ಆಕಾರ ಕೊಡುವುದಾದರೂ, ತನ್ನ ಜಾಗದಿಂದ ಕದಲುವುದಿಲ್ಲ, ಮೆತ್ತಗಾಗುವುದಿಲ್ಲ. ಎಷ್ಟೇ ವರ್ಷಗಳಾದರೂ ಪೂರ್ವಸ್ಥಿತಿಯಿಂದ ಬದಲಾಗುವುದಿಲ್ಲ. ಆದರೆ ಮನುಷ್ಯ ನೂರು ವರ್ಷ ಕೂಡಾ ಬದುಕಲಾರ! ಅಂಥಾದ್ದರಲ್ಲಿ ಬದಲಾಗುವುದಕ್ಕೆ ಸಾವಿರಾರು ವರ್ಷಗಳ ಆಯಸ್ಸನ್ನು ಎಲ್ಲಿಂದ ತರೋದು?" ಶಾಲ್ಮಲಿ ನಿಧಾನವಾಗಿ ಕಾರನ್ನು ನಡೆಸುತ್ತಿದ್ದಳು. ಅಮ್ಮನ ಮನೆ ಹೆಚ್ಚು ದೂರ ಇಲ್ಲ. ಮನೆ ತಲುಪುವುದಕ್ಕೆ ಮೊದಲೇ ಸ್ವಲ್ಪ ಸಾವರಿಸಿಕೊಳ್ಳಬೇಕು. ಮನಸ್ಸಿನ ಭಾವನೆಗಳು ಮುಖದಲ್ಲಿ ಕಾಣಿಸಿಕೊಳ್ಳಬಾರದು. ಅಪ್ಪ-ಅಮ್ಮನಿಗೆ ಯಾವುದೂ ತಿಳಿಯಬಾರದು.

"ಅಮ್ಮ ಏನು ಅಡಿಗೆ ಮಾಡ್ತಿದ್ದೀಯ?" ಮನೆ ಪ್ರವೇಶಿಸುತಿದ್ದಂತೆ ಚಿಲಿಪಿಲಿಸಿದಳು.

"ಬಂದು ಬಿಟ್ಟೆಯಾ ಮಗಳೆ, ಹೇಗಿದ್ದೀಯ?" ಅಮ್ಮನ ವಾತ್ಸಲ್ಯ ಪೂರ್ಣ ಸ್ವರ ಅವರ ನಗುವಿನಲ್ಲಿ ಮುಳುಗಿತು.

"ನಾನು ಊಟ ಮಾಡ್ತೀನಿ." ಅಮ್ಮನನ್ನು ಅಪ್ಪಿಕೊಂಡು ಹೇಳಿದಳು.

"ಯಾರು? ಶಾಲೂನೇ?" ಅಪ್ಪ ಹೊದ್ದಿದ್ದ ಕಂಬಳಿಯನ್ನು ಕಿತ್ತೆಸೆದು ಹಾಸಿಗೆ ಬಿಟ್ಟು ಏಳುತ್ತ ಹೇಳಿದರು.

"ನಮ್ಮ ಅಳಿಯಂದಿರನ್ನು ಎಲ್ಲಿ ಬಿಟ್ಟು ಬರ್‍ತೀಯ?" ಅಮ್ಮ ಟೀ ಸೋಸುತ್ತಾ ಹೇಳಿದಳು.

"ಒಂದು ದಿನದ ಮಟ್ಟಿಗೆ ಊರಿಗೆ ಹೋಗಿದ್ದಾರೆ. ರಾತ್ರಿ ಹೊತ್ತಿಗೆ ಬಂದು ಬಿಡ್ತಾರೆ. ಸಮರ್ಥನೆ ಕೊಡೋ ಮನಸ್ಸಿಲ್ಲದೆ ಜಾಣತನದಿಂದ ಅಲ್ಲಿಗೇ ಮುಗಿಸುತ್ತಿದ್ದಳು.

"ಹೌದು ಅವರನ್ನು ನೋಡಿ ತಿಂಗಳುಗಳೇ ಆಗಿಹೋದವು" – ಚಹದ ಬಟ್ಟಲನ್ನು ಅಮ್ಮನ ಕೈಯಿಂದ ತೆಗೆದುಕೊಳ್ಳುತ್ತಾ ಅಪ್ಪ ಹೇಳಿದರು.

'ಏನಪ್ಪ ಹೊಸ ಕನ್ನಡಕ ತೆಗೆದುಕೊಂಡಿರಾ?" ಜಗಿದು ಮೇಜಿನ ಮೇಲೆ ಇರಿಸಿದ್ದ ಚಿನ್ನದ ಬಣ್ಣದ ಫ್ರೇಮಿನ ಕನ್ನಡಕದ ಬಳಿಗೆ ಬಂದಳು.

"ನೆನ್ನೇನೆ ಮಾಡಿಸಿಕೊಂಡು ಬಂದೆ....... ಹಗುರವಾಗಿದೆ" – ಅಪ್ಪ ಮುಗುಳ್ನಕ್ಕರು.

"ಇವರಿಗೆ ಕನ್ನಡಕದ ಮೇಲೆ ಅದೆಷ್ಟು ಪ್ರೀತೀನೋ! ಒಳ್ಳೆ ಹೆಂಗಸರ ಆಭರಣದ ಹಾಗೆ. ಹಳೆದನ್ನ ಕೊಟ್ಟು ಹೊಸದನ್ನ ಮಾಡಿಸಿಕೊಳ್ತಾರೆ. ಇಲ್ಲ, ಹೊಸದನ್ನಾಗಿ ಮಾಡಿಸಿಕೊಂಡು ಬರ್ತಾರೆ; ಹೊಸ ಹೊಸ ಫ್ರೇಮುಗಳನ್ನು ತಗುಲಿಸಿಕೊಂಡು ಬರ್ತಾರೆ....." ಅಮ್ಮ ನಗುತ್ತಿದ್ದರು.

"ನಿನ್ನ ಕೆಲಸಕ್ಕೇನೋ ಅಡ್ಡಿ ಬರೋಲ್ಲವಲ್ಲ! ರೀಟಾಯರ್ ಆಗಿದ್ದೇನೆ. ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ! ಏನೋ ಮಾಡ್ತಿರಬೇಕು. ಇಲ್ಲಾಂದ್ರೆ ನೀನೇ ಅಂತೀಯ, ಈ ಮುದುಕ ಎಲ್ಲಿ ನನಗೆ ಗಂಟು ಬಿದ್ದ ಅಂತ!" – ಅಪ್ಪ ಮುಕ್ತವಾಗಿ ಮನಸ್ಸು ತುಂಬ ನಕ್ಕರು.

"ನಮ್ಮ ಮಧ್ಯೆ ಈ ರೀತಿಯ ಏನಾದರೂ ಮಾತುಕತೆ ಉಳಿದಿದೆಯೇ?" ಶಾಲ್ಮಲಿ ಯೋಚಿಸಿದಳು.

"ಯಾವಾಗಲೂ ಏನಾದರೂ ಯೋಚನೆ ಮಾಡ್ತಿರ್ತೀಯ ಯಾಕೆ?" ಅಮ್ಮ ತರಕಾರಿ ಹೆಚ್ಚುತ್ತಾ ಕೇಳಿದರು.

"ತಲೆ ಇರುವವರೇ ಯೋಚ್ನೆ ಮಾಡೋದು, ಗೊತ್ತಾ!" ಅಪ್ಪನು ಗಹಗಹಿಸಿದ ನಗು ಇಡೀ ಕೊಠಡಿಯಲ್ಲಿ ತುಂಬಿತು. ಅಮ್ಮ ಮುನಿಸಿಕೊಂಡು ತರಕಾರಿ ಬುಟ್ಟಿಯನ್ನು ಎತ್ತಿಕೊಂಡು ಅಡುಗೆ ಮನೆ ಕಡೆ ನಡೆದಳು.

'ನರೇಶ್ ಯಾವತ್ತೂ ಹೀಗೆ ಛೇಡಿಸಿದ್ದಿಲ್ಲ. ಬದಲಾಗಿ ನಾನೇ ಎಂದಾದರೂ ಕೀಟಲೆ ಮಾಡಿದರೆ ಸಿಟ್ಟು ಮಾಡಿಕೊಳ್ಳುತ್ತಿದ್ದ. ಎಲ್ಲಿಂದೆಲ್ಲಿಗೊ ಹೋಗಿ ಮನಸ್ತಾಪದಲ್ಲಿ ನನ್ನ ಅಪ್ಪ ಅಮ್ಮನ ನೆರಳನ್ನು ಹುಡುಕುತ್ತಿರಬೇಕು. ಹಾಗೇ ಅಪ್ರಜ್ಞಾಪೂರ್ವಕವಾಗಿ ನನ್ನಲ್ಲಿ ತನ್ನ ಅಪ್ಪ ಅಮ್ಮನನ್ನು ನರೇಶ್ ಕಾಣಬಯಸುತ್ತಿರಬೇಕು. ಆದರೆ ತಾನು ಮೊದಲಿನಿಂದಲೇ ಹಾಸ್ಟೆಲ್‌ನಲ್ಲಿ ಇದ್ದುದಾಗಿ ಹೇಳುತ್ತಿದ್ದ. ಬಹುಶಃ ಅದಕ್ಕಾಗಿಯೇ ಅವನು ಮನೆಯವರ ಜೊತೆಯಲ್ಲಿಯೂ ಸರಿಯಾಗಿ ಬದುಕೋಕೆ ಆಗ್ತಿಲ್ಲ. ಪರಸ್ಪರ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳೋದು, ಹಂಚಿಕೊಳ್ಳೋದು ಕಷ್ಟ ಸುಖ ಹೇಳಿಕೊಳ್ಳೋದು – ಯಾವುದಾದರೂ ಅವನಿಗೆ ಗೊತ್ತಿಲ್ಲ. ಶಾಲ್ಮಲಿ ಅನ್ಯಮನಸ್ಕಳಾಗಿ ನಿಟ್ಟುಸಿರೆಳೆದರು.

"ಏನಾಯ್ತು?" ಅಪ್ಪ ಕೇಳಿದರು.

"ಏನಿಲ್ಲ. ಅಮ್ಮನ ಹತ್ತಿರ ಹೋಗೋಣಾಂತ ಯೋಚ್ನೆ ಮಾಡ್ತಿದ್ದೆ" ಶಾಲ್ಮಲಿ ಹೇಗೋ ಮಾತು ಬದಲಿಸಿದಳು.

"ಸರಿ ನಡಿ ಹಾಗಾದರೆ ಇಬ್ಬರೂ ಹೋಗಿ ಅಮ್ಮನಿಗೆ ಸಹಾಯ ಮಾಡೋಣ." ಅಪ್ಪ ಹೊದಿಕೇನ ಪಕ್ಕಕ್ಕೆ ಸರಿಸಿದರು. ಅಷ್ಟು ಹೊತ್ತಿಗೆ ಬಾಗಿಲಗಂಟೆ ಒತ್ತಿದಂತಾಯಿತು.

"ಇಷ್ಟು ಹೊತ್ನಲ್ಲಿ ಯಾರಿರಬೇಕು!" ಅಪ್ಪ ಎದ್ದು ಬಾಗಿಲ ಕಡೆ ನಡೆದರು.

"ಅರೆ ಸರಸ್ವತಿ ಅಕ್ಕ!..... ನಮಸ್ಕಾರ!.....ಬನ್ನಿ.....ಏನೇ...... ಸರಸ್ವತಿ ಅಕ್ಕ ಬಂದಿದ್ದಾರೆ.

"ನೀವು ತೊಂದರೆ ತಗೋಬೇಡಿ ಅಣ್ಣ. ನಾನೇ ಹೋಗಿ ಶ್ಯಾಮಲ್ ಜೊತೆ ಮಾತಾಡ್ತೀನಿ." ಎಂದು ಹೇಳುತ್ತಾ ಪಕ್ಕದ ಮನೆಯಾಕೆ ಒಂದು ಹೆಜ್ಜೆ ನಡೆದ ಮೇಲೆ ಕುಳಿತಿದ್ದ ಶಾಲ್ಮಲಿಯನ್ನು ನೋಡಿದಳು.

"ನೀನು ಯಾವಾಗ ಬಂದೆ ಮಗು?" ಹೇಳುತ್ತಾ ನಿಂತರು.

"ನಮಸ್ಕಾರ ಆಂಟಿ ನಾನು ಈಗ ಸಾಯಂಕಾಲ ಬಂದೆ." ಹೇಳುತ್ತ ಅವರೊಂದಿಗೆ ಅಡುಗೆಮನೆ ಕಡೆ ನಡೆದಳು.

"ಇಲ್ಲೀವರೆಗೆ ಹುಡುಗನ ಕಡೆಯವರು ಬರೋ ಸಮಾಚಾರವೇ ಇಲ್ಲ." ಸರಸ್ವತಿ ಬಹೆನ್ ತಲೆ ಮೇಲೆ ಸೆರಗೆಳೆದುಕೊಂಡರು.

"ಹಾಳು ಬಿದ್ದು ಹೋಗಲಿ ಫ್ಯಾಮಿಲಿ ಪ್ಲಾನಿಂಗ್" ಅಮ್ಮ ಉರಿದು ಹೇಳಿದಳು.

"ನಾನಂತೂ ಶ್ಯಾಮಲ್, ಕಾಯಿಲ್ಲದ ಮರ, ಮಕ್ಕಳಿಲ್ಲದ ಹೆಂಗಸು ಚೆನ್ನಾಗಿರುತ್ತೆ ಅಂತ ಒಪ್ಪೋದಿಲ್ಲ." ಸರಸ್ವತಿ ಬಹನ್ ಈ ಮಾತು ಹೇಳಿ ಅಮ್ಮನ ಬಳಿ ಹೋಗಿ ಕುಳಿತು ಹೇಳಿದಳು.

"ಆಂಟಿ!" ಶಾಲ್ಮಲಿ ಗಟ್ಟಿಯಾಗಿ ನಕ್ಕಳು.

"ನಾಚಿಕೆ – ಮಾನ...." ಸಿಟ್ಟಿನಿಂದಲೇ ತರಕಾರಿಗೆ ಒಗ್ಗರಣೆ ಹಾಕುತ್ತಿದ್ದಳು, ಅಮ್ಮ.

"ಕೊಡು, ನಾನು ಸಲಾಡ್‌ಗೆ ಹೆಚ್ಚಿಕೊಡ್ತೀನಿ." ಶಾಲ್ಮಲಿ ಕುಳಿತುಕೊಳ್ಳುತ್ತಾ ಹೇಳಿದಳು.

"ನೀನು ಹೋಗು ಅಪ್ಪ ಒಬ್ಬರೇ ಇದ್ದಾರೆ" ಹೇಳುತ್ತಾ ತಟ್ಟೆಯಲ್ಲಿ ಹಿಟ್ಟನ್ನು ಹಾಕಿಕೊಳ್ಳತೊಡಗಿದಳು. ಎರಡು ನಿಮಿಷ ಕುಳಿತಳು. "ನರೇಶ್ ಬಂದರೆ ನಾನೇ ಎದ್ದು ಬಾಗಿಲು ತೆಗೀತೇನಿ ಎಂದುಕೊಂಡು ಮೇಲಿನ ರ್‍ಯಾಕ್‌ನಿಂದ ಒಂದು ಕಾದಂಬರಿಯನ್ನು ಎಳೆದುಕೊಂಡು ಪುಟಗಳನ್ನು ತಿರುವುತ್ತಾ ಕುಳಿತಳು.

ಅಮ್ಮ ಹೇಳ್ತಾಳೆ, ಅಮ್ಮನ ಹಾಗೆ ಪ್ರತಿಯೊಬ್ಬರೂ ಹೇಳುತ್ತಾರೆ. ನಾನು ತಾಯಿ ಆಗಬೇಕೂಂತ. ಮೊದಲು ನರೇಶ್‌ನಿಗೆ ಇಷ್ಟ ಆಗಲಿಲ್ಲ. ಅವನು ಭಾಷೇನೂ ತಗೊಂಡಿದ್ದ. ಆಮೇಲೆ ಟ್ರೈನಿಂಗ್ ಟ್ರಾನ್ಸ್‌ಫರ್ ಅದೂ ಇದೂಂತ ಎರಡು ವರ್ಷ ಕಳೆದುಹೋಯ್ತು. ಈ ಮಧ್ಯೆ ಮದುವೆಯಾದ ಐದು ವರ್ಷಕ್ಕೆ ಬಸಿರಾಗಿದ್ದಳು. ಅದಕ್ಕೆ ಮೊದಲೇ ನರೇಶ್, ಮೊದಲಿನ ನರೇಶ್ ಆಗಿರಲಿಲ್ಲ. ಅವರಿಬ್ಬರ ನಡುವೆ ಅಷ್ಟೊಂದು ಹೊಂದಾಣಿಕೆ ಇರಲಿಲ್ಲ. ಹಾಗಾಗಿ ತನ್ನ ಬಸಿರಿನ ವಿಷಯ ಅವನಿಗೆ ಹೇಳುವುದು ಸಣ್ಣತನ ಅನಿಸಿತು. ಬಿರುಕು ಬಿಟ್ಟ ಸಂಬಂಧಗಳನ್ನು ಬೆಸೆಯುವುದಕ್ಕೆ ಬರಲಿರುವ ಹೊಸ ಜೀವನ ಹೆಸರನ್ನು ಅಡ್ಡ ಇಟ್ಟಳು ಎನ್ನುವ ಅಪವಾದ ಅವಳಿಗೆ ಬೇಕಿರಲಿಲ್ಲ. ಈ ಜೀವದ ಸೇತುವೆಯ ಮೇಲೆ ನಡೆದು ನರೇಶ್‌ವರೆಗೆ ತಲುಪಬೇಕಾದ ಅಗತ್ಯ ಇರಲಿಲ್ಲ. ಎಲ್ಲಿಂದ ಬದುಕು ಶುರುವಾಯಿತೋ ಅದನ್ನೇ ಕೇಂದ್ರವಾಗಿಸಿಕೊಳ್ಳುವುದೇ ಹೊರತಾಗಿ ಮೂರನೆಯವರ ಆಗಮನ ಸಹಿಸಿಕೊಳ್ಳಲು ಅವಳಿಂದ ಸಾಧ್ಯವಿಲ್ಲ.

ಹೀಗೆ ಆಲೋಚಿಸಿದ ಶಾಲ್ಮಲಿ ನರ್ಸಿಂಗ್ ಹೋಂಗೆ ಹೋಗಿ ನರೇಶ್‌ನನ್ನು ಪಡೆಯುವುದಕ್ಕಾಗಿ, ಭ್ರೂಣವನ್ನು ಬಲಿಕೊಟ್ಟಿದ್ದಳು. ಅದು ಘಟನೆ ನಡೆದು ಮೂರು ವರ್ಷಗಳಾಗಿವೆ. ಈಗ ಅನಿಸುತ್ತೆ, ತಾನು ಮಾಡಿದ್ದು ಬಹಳ ಒಳ್ಳೇ ಕೆಲಸ. ಇಲ್ಲದೆ ಇದ್ದರೆ ಆ ಎಳೇ ಜೀವ ಇಟ್ಟುಕೊಂಡು ಅಬಲೆಯಾಗಿ ಕರುಣೆಯ ಮೂರ್ತಿಯಾಗಿ ಆ ಮಗುವಿನ ಅಪ್ಪನನ್ನು ಹುಡುಕುತ್ತಾ ಇರಬೇಕಾಗುತ್ತಿತ್ತು. ಈ ಸಮಸ್ಯೆಗಳನ್ನು ಈ ಸೂಕ್ಷ್ಮತೆಗಳನ್ನು ಅಮ್ಮ ಅರ್ಥಮಾಡಿಕೊಳ್ಳಲಾರಳು. ಹೆಣ್ಣಿನ ಬದುಕಿನ ಸಾರ್ಥಕತೆ ತಾಯಿಯಾಗುವುದರಿಂದ ಮಾತ್ರ ಸಾಧ್ಯ ಎಂದು ನಂಬಿದ್ದಾಳೆ. ಸಂಸಾರದ ಹೊರೆ ಹೊರುವುದೂ ಹೆಣ್ಣಿನ ಬದುಕಿಗೆ ಅರ್ಥವೆಂದು ಭಾವಿಸುತ್ತಾಳೆ. ಆದರೆ ಅವಳಿಗೆ ಸಂಗಾತಿ ದೈಹಿಕ – ಮಾನಸಿಕ ಸ್ತರಗಳೆರಡಕ್ಕೂ ಎಟುಕುವಂತಹವನು ಬೇಕಾಗಿದೆ ಎಂಬುದು ಗೊತ್ತಿಲ್ಲ. ಅದೇ ಸಾಧ್ಯವಾಗದೆ ಹೋದಾಗ ಮಗು, ಮನೆ, ಸಂಸಾರ – ಇವೆಲ್ಲ ಯಾತಕ್ಕೆ? ಅದನ್ನೆಲ್ಲ ಕಟ್ಟಿಕೊಂಡು ಏನಾಗಬೇಕಿದೆ? – ಯೋಚಿಸುತ್ತಾ ಯೋಚಿಸುತ್ತಾ ನಿದ್ದೆ ಹತ್ತಿತು.

* * *

ಸುಮಾರು ಬೆಳಗಿನ ಹೊತ್ತಿಗೆ ಕಿಟಕಿಯ ಗಾಜಿನ ಮೇಲೆ ಬಿದ್ದ ಖಟ ಖಟ ಶಬ್ದದಿಂದ ಶಾಲ್ಮಲಿ ಎಚ್ಚರಗೊಂಡಳು. ಬೆಡ್ ಲೈಟ್ ಸ್ವಿಚ್ಚನ್ನು ಒತ್ತಿದಳು. ಉರಿಯುತ್ತಿದ್ದ ಕಣ್ಣುಗಳಿಂದ ಗಡಿಯಾರ ನೋಡಿದಳು. ಐದುಗಂಟೆ ಆಗಿತ್ತು. ತಿರುಗಿ ನೋಡಿದಾಗ ಹಾಸಿಗೆ ಖಾಲಿ ಇತ್ತು. ಕುರ್ಚಿಯ ಕೈ ಮೇಲೆ ಬಿದ್ದಿದ್ದ ಶಾಲನ್ನು ಎಳೆದುಕೊಂಡು ಹೆಗಲ ಮೇಲೆ ಹಾಕಿಕೊಂಡು ಎದ್ದು ಹೋಗಿ ಬಾಗಿಲು ತೆಗೆದಳು. ನಡುಗುತ್ತಾ ನರೇಶ್ ಒಳಗೆ ಬಂದ. ಶಾಲ್ಮಲಿ ನಡೆದು ಬಾಗಿಲು ಹಾಕಿದಳು. ಹಾಸಿಗೆ ಮೇಲೆ ಕೂತಿದ್ದ ನರೇಶ್‌ಗೆ ಚಾದರವನ್ನು ಬಿಚ್ಚಿ ಹೊದಿಸಿದಳು. ಹಣೆ ಮೇಲೆ ಕೈ ಇಟ್ಟಳು.

ನಂತರ ಊಟದ ಮನೆ ಕಡೆ ಹೋದಳು. ಬ್ರಾಂದಿ ಬಾಟಲನ್ನು ತೆಗೆದು ಲೋಟಕ್ಕೆ ಬಗ್ಗಿಸಿ ನರೇಶನ ಬಳಿಗೆ ಬಂದಳು.

"ಒಂದು ತೊಟ್ಟು ಕುಡಿ ಚಳಿ ಕಡಿಮೆಯಾಗುತ್ತೆ". ಶಾಲ್ಮಲಿ ನರೇಶ್‌ನ ಬೆನ್ನಿನ ಕಡೆಯಿಂದ ಕೈ ಕೊಟ್ಟು ಜರುಗಿಸಿ ಆಸರೆ ನೀಡಿದಳು.

"ಸಾಯ್ತಿದ್ದೀನಿ!" ಹೇಳುತ್ತಾ ನರೇಶ್ ಬ್ರಾಂದಿಯನ್ನು ಕುಡಿದು ಗ್ಲಾಸ್ ವಾಪಸ್ ನೀಡಿದ.

"ನಾನು ಈಗಲೇ ಚಹಾ ಮಾಡಿಕೊಂಡು ಬರ್‍ತೀನಿ" ಶಾಲ್ಮಲಿ ಹೇಳುತ್ತಾ ತನ್ನ ಮೇಲಿದ್ದುದನ್ನೂ ನರೇಶನ ಮೈಮೇಲೆ ಎಸೆದು ಕಿಚನ್ ಕಡೆ ಓಡಿದಳು.

"ತಗೋ ಶುಂಠಿ ಹಾಕಿ ಮಾಡಿ ತಂದಿದ್ದೀನಿ. ಏಳು?" ಹೋದ ಕ್ಷಣದಲ್ಲೇ ಮಾಡಿ ತಂದಳು. ನರೇಶನ ಕೂದಲಿನಲ್ಲಿ ಕೈಯಾಡಿಸಿದಳು.

"ಉಸಿರಾಡೊಕೆ ಬಿಡು" ನಡುಗುತ್ತಾ ನರೇಶ ಹೇಳಿದ.

"ಏಳು ನಾನು ಹೀಟರ್ ಹಾಕಿದ್ದೇನೆ". ಶಾಲ್ಮಲಿಗೆ ನಗು ಬಂತು. "ಕೊಡು" ನರೇಶ್ ಎದ್ದು ಕುಳಿತು ಚಹದ ಬಟ್ಟಲ ಕಡೆಗೆ ಕೈ ಚಾಚಿದ.

ಮೌನವಾಗಿ ಇಬ್ಬರೂ ಚಹ ಕುಡಿದರು ಚಹ ಕುಡಿಯುವ ಹೊತ್ತಿಗೆ ನರೇಶ್ ಸಾಕಷ್ಟು ಸುಧಾರಿಸಿಕೊಂಡಿದ್ದ. ಅವನ ಕಡೆ ಧ್ಯಾನ ಕೊಟ್ಟು ನೋಡಿದಳು. ಕಣ್ಣಿ ರೆಪ್ಪೆಗಳು ಭಾರವಾಗಿದ್ದವು. ಕಂಠ ಪೂರ್ತಿ ಕುಡಿದಿದ್ದ. ಕಣ್ಣುಗಳೂ ಕೆಂಪಾಗಿದ್ದವು. ಅವನ ಬಾಯಿಂದ ವ್ಹಿಸ್ಕಿ ವಾಸನೆ ಹೊಡೀತಿತ್ತು.

"ಎಷ್ಟು ಸಲ ಹೇಳಿದ್ದೀನಿ, ಲಿಮಿಟ್ ಬಿಟ್ಟು ಕುಡೀಬೇಡಾಂತ! ಕುಡಿಯುವಾಗ ಕುಡಿದು ಬಿಟ್ಟು ಆಮೇಲೆ ಅದರ ಮಜಾನೆಲ್ಲ ಹಾಳು ಮಾಡಿಕೊಳ್ತಿ, ಒಂದು ಸಲ ವಾಂತಿ ಅಂತ! ಮತ್ತೊಂದು ಸಲ ತಲೆನೋವೂಂತ!" ಶಾಲ್ಮಲಿ ನಿಧಾನವಾಗಿ, ಮೆದುವಾಗಿ ತಿಳಿಯ ಹೇಳಿದಳು.

"ನೆನ್ನೆ ಜಾಸ್ತಿ ಕುಡಿದವರು ಯಾರು? ನಾನು ಹನ್ನೆರಡೂವರೆ ಗಂಟೆಗೇ ಬಂದು ಬಿಟ್ಟಿದ್ದೆ ಹೆಚ್ಚಿಗೇನೂ ನೆನಪಿಲ್ಲ. ತುಂಬಾ ಹೊತ್ತು ಬೆಲ್ ಹೊಡೆದೆ. ಬಾಗಿಲು ತೆಗೀಲಿಲ್ಲ. ಅದಕ್ಕೇ ವರಾಂಡಲ್ಲಿದ್ದ ಚೇರ್‌ನಲ್ಲಿ ಕೂತೇ ಮಲಗಿಬಿಟ್ಟೆ, ಬೆಳಗಿನ ಜಾವ ಚಳಿಯಿಂದ ಎಚ್ಚರವಾಯ್ತು ನೋಡ್ತೇನೆ, ನನ್ನ ಸ್ಥಿತಿ ಕೇಳಬೇಡ!" ನರೇಶ್ ನಾಚಿ ನಕ್ಕ.

"ಇಷ್ಟೆಲ್ಲಾ ಆಗಿರುವಾಗಲೂ ಹೆಚ್ಚು ಕುಡಿದಿಲ್ಲಾಂತೀಯ" – ಮನಸ್ಸು ಬಿಚ್ಚಿ ನಕ್ಕಳು ಶಾಲ್ಮಲಿ.

"ಚರ್ಚೆ ಮಾಡೋದರಿಂದ ಲಾಭ ಇದೆಯಾ?" ನರೇಶ್ ಕಿಲಕಿಲ ನಕ್ಕ. ಚಾದರವನ್ನು ಬಾಯಿ ತನಕ ಎಳೆದುಕೊಂಡ. ಸ್ವಲ್ಪ ಹೊತ್ತಿನಲ್ಲಿಯೇ ಗೊರಕೆಯ ಸದ್ದು ಮೊಳಗಿತು.

ಒಂದು ಕ್ಷಣ ಶಾಲ್ಮಲಿಯ ಮುಖ ಕಪ್ಪಿಟ್ಟಿತು. ಆದರೆ ಮತ್ತೆ ಎಲ್ಲಿಯೋ ಮರೆಯಾಯಿತು. ಎಂಜಲು ಲೋಟಗಳನ್ನು ಟ್ರೇನಲ್ಲಿಟ್ಟುಕೊಂಡು ಮರಳಿ ಕಿಚನ್ ಕಡೆಗೆ ನಡೆದಳು. ಸಿಂಕ್‌ನಲ್ಲಿ ಅವುಗಳನ್ನೆರಿಸಿ, ಬೇಲಾ ಬಂದದ್ದಕ್ಕೆ ಬಾಗಿಲು ತೆರೆದಳು. ಪತ್ರಿಕೆಯನ್ನು ಎತ್ತಿಕೊಂಡು ಹಾಸಿಗೆ ಮೇಲೆ ಕುಳಿತಳು.

ಪತ್ರಿಕೆಯನ್ನು ಮಡಿಚಿ ನರೇಶ್‌ನ ತಲೆ ಕಡೆಗೆ ಇಟ್ಟಳು. ನಂತರ ಬಾಹುಗಳನ್ನು ಮೊಣಕಾಲಿನ ಸುತ್ತ ಇರಿಸಿ ತಲೆಯನ್ನು ಅದರ ಮೇಲಿರಿಸಿದಳು. ನರೇಶನ ಗೊರಕೆಯ ಸದ್ದು ಮನೆಯಲ್ಲಿ ತುಂಬಿತು. ಮಸುಕು ಮಸುಕಾಗಿದ್ದ ಕಾರಣ ಕಿಟಕಿಯಾಚೆಯಿಂದ ಗುಲ್ ಮೊಹರ್ ಮರಗಳ ಬುಡ ಮಾತ್ರ ಕಾಣಿಸುತ್ತಿತ್ತು. ಮಿಕ್ಕೆಲ್ಲವೂ ಹಾಲು ಬಿಳುಪಿನಲ್ಲಿ ಕರಗಿ ಹೋದಂತಿತ್ತು.

"ಈ ಮನೆಯನ್ನು ಎಷ್ಟು ಮನಸ್ಸಿಟ್ಟು ಸಜ್ಜುಗೊಳಿಸಿದ್ದೇನೆ!

ಸುಖಕ್ಕಾಗಿ, ಅಗತ್ಯಕ್ಕಾಗಿ ಬೇಕಾದ ಒಂದೊಂದು ವಸ್ತುವನ್ನೂ ತಂದು ತುಂಬಿದ್ದೇನೆ. ಕಾಗದದ ಹೂಗಳ ಗುಚ್ಛದಂತೆ ಸುಂದರವಾಗಿರುವುದಾದರೂ ಸುಗಂಧ ರಹಿತವಾಗಿದೆ. ಅಗರ್ ಬತ್ತಿ ಧೂಪಗಳನ್ನು ಉರಿಸುವುದರಿಂದ ಈ ಮನೆಯ ಆತ್ಮಕ್ಕೆ ಗಂಧ ಹತ್ತುವುದೇನು? ಅದರ ಗುರುತೂ ಕೂಡಾ ಇಲ್ಲಿಲ್ಲ. ಆತ್ಮವೇ ಇಲ್ಲದಿದ್ದ ಮೇಲೆ ಪರಿಮಳ ಎಲ್ಲಿಂದ ಬರಲು ಸಾಧ್ಯ? ಶಾಲ್ಮಲಿ ಎದ್ದು ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಓಡಾಡಿದಳು. ಗೋಡೆಗಳ ಮೇಲೆ, ಅಲಮಾರಿನ ಮೇಲೆ ಇಟ್ಟಿದ್ದ ಅಲಂಕಾರದ ವಸ್ತುಗಳನ್ನು ಹಲವು ಕೋಣೆಗಳಿಂದ ನೋಡಿ ಯೋಚಿಸತೊಡಗಿದಳು.

ವಾಸ್ತವವಾಗಿ ಅಪ್ಪನ ಎಲ್ಲ ಸಂಘರ್ಷ, ಶ್ರಮ, ಎಲ್ಲ ಆಸೆಗಳು ನನ್ನ ಮೇಲೇ ನಿಂತಿತ್ತು. ಬಾಲ್ಯದಿಂದಲೂ ನನ್ನನ್ನು ರೂಪಿಸಿದವರು ಅವರೇ. ಇದಕ್ಕಿಂತ ಬೇರೆಯಾಗುವುದು ಸಾಧ್ಯವಿರಲಿಲ್ಲ. ನರೇಶ್ ನನ್ನನ್ನು ನೋಡಿದ್ದಷ್ಟೇ ಅಲ್ಲ. ಒಂದೆರಡು ಬಾರಿ ಇಬ್ಬರು ಭೇಟಿಯಾಗಿದ್ದಾಗ ನರೇಶ್‌ನಿಗೆ ನನ್ನ ಅಭಿರುಚಿಯೇನು, ನನ್ನ ಕನಸುಗಳು ಯಾವುವು. ನಾನು ಏನನ್ನು ಮಾಡಬೇಕೆಂದಿದ್ದೇನೆ ಎನ್ನುವುದರ ಬಗ್ಗೆ ಸಾಕಷ್ಟು ತಿಳಿಸಿಕೊಟ್ಟಿದ್ದ. ಅವನಿಂದ ಏನನ್ನೂ ಮರೆಮಾಚಿರಲಿಲ್ಲ. ಅವನ ಮರ್ಜಿಗೆ ವಿರೋಧವಾಗಿ, ಅವನ ಸಂತೋಷಕ್ಕಿಂತ ಬೇರೆಯಾಗಿ ಅವನಿಂದ ದೂರ ಉಳಿದಿದ್ದಿಲ್ಲ. ಆದರೂ ದಿನದಿನಕ್ಕೆ ಏಳುತ್ತಿರುವ ಗೋಡೆ, ಹೆಚ್ಚುತ್ತಿರುವ ಅಂತರ ದರಿದ್ರ ನೆರಳಾಗಿ

ಅವರನ್ನು ಹಿಂಬಾಲಿಸುತ್ತಿದೆಯೇ? ಶಾಲ್ಮಲಿ ಉಸಿರೆಳೆದು, ತನ್ನ ಬೆಡ್‌ರೂಂ ಕಡೆಗೆ ಮರಳಿದಳು. ಬೇಲಾ ಚಹ ಇಟ್ಟು ಹೋಗಿದ್ದಳು. ಮೌನವಾಗಿ ಚಹ ಬೆರಸಿ ಕುಡಿಯತೊಡಗಿದಳು.

ಹೊರಗೆ ರಸ್ತೇ ಮೇಲೆ ಟ್ರಾಫಿಕ್ ಪ್ರಾರಂಭವಾಗಿತ್ತು. ವಾಹನಗಳ ಓಡಾಟದ ಗದ್ದಲ ಮಂಜಿನ ಮುಸುಕನ್ನು ಸೀಳುತ್ತಿತ್ತು. ಅಡಿಗೆ ಮನೇಲಿ ಬೇಲಾಳು ಅಡಿಗೆ ಮಾಡುತ್ತಿರುವ ಸದ್ದು ಕೇಳಿಸುತ್ತಿತ್ತು. ಒಂಬತ್ತೂವರೆಗೆ ಮನೆಯಿಂದ ಹೊರಟು ಬಿಡುತ್ತಾಳೆ. ನರೇಶ್ ಆಫೀಸಿಗೆ ಹೋಗುವನೋ ಇಲ್ಲ ಮಲಗಿರುತ್ತಾನೋ ಗೊತ್ತಿಲ್ಲ. ಒಂದು ನಿಮಿಷ ಯೋಚನೆ ಮಾಡಿದ ಮೇಲೆ ನರೇಶ್‌ನ ಮುಖದ ಮೇಲಿಂದ ಚಾದರವನ್ನು ಸರಿಸಿದಳು. ನಂತರ ಅವನಿಗೆ ತೋಳು ಹಿಡಿದು ಅಲುಗಾಡಿಸಿ ಕೂಗಿದಳು, ನರೇಶ್! ನರೇಶ್" ಗೊರಕೆ ಬಿಟ್ಟರೆ ಬೇರೆ ಉತ್ತರವೇ ಇಲ್ಲ. ಸ್ನಾನ ಮಾಡೋಕೆ ಹೊರಟು ಹೋದಳು. ಆಫೀಸ್‌ಗೆ ಹೋಗೋಕೆ ಮೊದಲು ಬೇಲಾಗೆ ಏನೇನು ಮಾಡಬೇಕೂಂತ ತಿಳಿಸಿ, ಫೋನ್ ಮಾಡೋದಕ್ಕೆ ಹೇಳಿ ಫೈಲುಗಳನ್ನು ಜೋಡಿಸಿಕೊಂಡು ಕಾರಿನ ಕಡೆಗೆ ನಡೆದಳು.

ಆಫೀಸ್ ಸೇರಿದ ಕೂಡಲೇ ಫೋನ್ ಮಾಡಿದಳು. ಇನ್ನೂ ಮಲಗಿದ್ದಾನೆ ಅನ್ನೋ ವಿಷಯ ತಿಳಿಯಿತು. ಇದೇ ರೀತಿ ಮೂರು ನಾಲ್ಕು ಫೋನ್ ಮಾಡಿದಾಗಲೂ, ಒಂದೇ ಉತ್ತರ, ಮಲಗಿದ್ದಾನೆ, ಅಂತ. ಮನಸ್ಸಿಗೆ ಕಸಿವಿಸಿಯಾಯಿತು. ಹೃದಯ ಭಾರವೆನಿಸಿತು. ಮುಖ್ಯವಾದ ಮೀಟಿಂಗ್‌ಗಳು ಇಲ್ಲದಿದ್ದರೆ, ಯಾವಾಗಲೋ ಮನೆ ಸೇರಿರುತ್ತಿದ್ದಳು. ನರೇಶ್‌ನನ್ನು ಎಬ್ಬಿಸಿ ಅವನ ಊಟ ಉಪಚಾರ ನೋಡಿಕೊಂಡು ಆಫೀಸಿಗೆ ಹಿಂತಿರುಗಿ ಬರಬಹುದಾಗಿತ್ತು. ಆದರೆ ಇವತ್ತು ಅವಳಿಗೆ ಒಂದು ಕ್ಷಣವೂ ಜಾಗ ಬಿಟ್ಟು ಕದಲುವುದು ಅಸಂಭವವೆನಿಸಿತು.

ಸಂಜೆ ಆಫೀಸಿನಿಂದ ಮನೆ ತಲುಪಿದಾಗ, ನರೇಶ್ ಹೊರಟುಬಿಟ್ಟಿದ್ದ. ಬೇಲಾ ಹೇಳಿದಳು. ಯಾರೋ ಹೆಂಗಸು ಫೋನ್ ಮಾಡಿದ್ದಳು ಅಂತ. ಅವರೇನೇ ಬೇಲಾಳಿಗೆ ನರೇಶ್‌ನನ್ನು ಎಬ್ಬಿಸಲು ಹೇಳಿದ್ದರು, ಯಜಮಾನ್ರು ಎದ್ದು ಫೋನ್‌ನಲ್ಲಿ ಮಾತಾಡಿದರು. ಆಮೇಲೆ ಸ್ನಾನಗೀನ ಮಾಡಿ ಹೊರಟೇ ಬಿಟ್ಟರು. ಏನೂ ತಿನ್ನಲಿಲ್ಲ. ಕುಡಿಯಲಿಲ್ಲ. ಹೋಗುವಾಗ ಏನೂ ಹೇಳಲೂ ಇಲ್ಲ. ಬೇಲಾ ಕೇಳಿದರು ಉತ್ತರ ಕೊಡಲಿಲ್ಲ. ಅದಕ್ಕೆ ಮಾಡಿದ ಅಡುಗೇನ ಫ್ರಿಜ್‌ನಲ್ಲಿಟ್ಟು ಹೊರಟು ಹೋಗಿದ್ದಳು.

ಎಲ್ಲ ಕೇಳಿದ ಮೇಲೆ ಅವಮಾನಿತಳಾದಂತೆ ನಿಂತು ಬಿಟ್ಟಳು. ಒಂದು ಕ್ಷಣ, ತನ್ನ ವ್ಯಕ್ತಿತ್ವವೆಲ್ಲ ಕುಲುಮೆಯಲ್ಲಿ ಬಿದ್ದು ಬೇಯುತ್ತಿರುವಂತೆನಿಸಿತು. ಬಿಸಿ ಬಿಸಿ ಬೆಂಕಿಯಿಂದ ಅವಳ ಎರಡೂ ಕಪೋಲಗಳು ಉರಿಯತೊಡಗಿದಂತೆ, ಮುಖದಿಂದ ಬಿಸಿ ಆವಿ ಹೊಮ್ಮುತ್ತಿರುವಂತೆ ಭಾಸವಾಯಿತು. ಕಷ್ಟಪಟ್ಟು ತನ್ನನ್ನು ನಿಯಂತ್ರಿಸಿಕೊಂಡಳು. ಬೇಲಾ ವಿಷಯವನ್ನೆಲ್ಲ ತಿಳಿಸಿ ಅಡುಗೆ ಮನೆಗೆ ಹೊರಟು ಹೋಗಿದ್ದಳು. ಇಲ್ಲವಾದರೆ

ಯಜಮಾನತಿ ಕಣ್ಣಲ್ಲಿ ನೀರು ನೋಡಿ ಸ್ವಲ್ಪಾದರೂ ಅರ್ಥ ಮಾಡಿಕೊಂಡು ಬಿಡುತ್ತಿದ್ದಳು. ನೇರವಾಗಿ ಬಾತ್‌ರೂಂ ಹೊಕ್ಕಳು.

ರಾತ್ರಿ ಊಟ ಟಿ.ವಿ.ಯಲ್ಲಿನ ಸುದ್ದಿ ಸಮಾಚಾರಗಳನ್ನು ಕೇಳುತ್ತಾ ಅಲ್ಲಿಯೇ ಪಡಸಾಲೆಯಲ್ಲಿಯೇ ಮುಗಿಸಿದಳು. ಆಮೇಲೆ ಸಂತೋಷವಾಗಿಯೇ ಬೇಲಾಳ ಮನೆಯವರ ವಿಚಾರವನ್ನೆಲ್ಲ ಕೇಳಿದಳು. ನಂತರ ಅಲಮಾರಿನಿಂದ ಹೊಸದಾಗಿ ಕಾಣುತ್ತಿದ್ದ ಎರಡು ಹಳೆಯ ಸೀರೆಗಳನ್ನು ತೆಗೆದುಕೊಟ್ಟಳು ಬೇಲಾಗೆ. ಬೇಲಾ ಕೃತಜ್ಞತೆಯಿಂದ ನೋಡಿದಳು. ಗದ್ಗದ ಕಂಠಳಾಗಿ ಜರೀ ಹೂಗಳ ಮೇಲೆ ಕೈಯಾಡಿಸುತ್ತಾ ಸಂಕೋಚದಿಂದ ಮುಗುಳ್ನಗುತ್ತಿದ್ದಳು.

ನಮ್ಮ ಮನಸ್ಸಿನ ಭಾರವನ್ನು ನಾವೇ ಹಗುರ ಮಾಡಿಕೊಳ್ಳಬೇಕು. ಇಲ್ಲವಾದಲ್ಲಿ ನರಗಳು ಸಿಡಿಯುತ್ತವೆ' ಎಂದು ತನಗೆ ತಾನೇ ಹೇಳಿಕೊಂಡಳು. ನಂತರ ಸುಜಾತಾಗೆ ಫೋನ್ ಮಾಡಿ ಅದೂ ಇದೂ ಮಾತಾಡಿ ಗೆಲುವನ್ನು ತಂದುಕೊಂಡಳು.

ಚೌಕದಲ್ಲಿದ್ದ ಅಂಗಡಿಯಿಂದ ಪಾನ್ ತರಿಸಿ ತಿಂದಳು. ಧಿಮಾಕಿನಿಂದ ಕಾಲ ಮೇಲೆ ಕಾಲು ಹಾಕಿ ಕುಳಿತು ಪತ್ರಿಕೆಯ ಪುಟಗಳನ್ನು ತಿರುವಿ ಹಾಕತೊಡಗಿದಳು. ಪತ್ರಿಕೆಯ ಮೇಲೆ ಮನಸೇ ಇರಲಿಲ್ಲ. ಅದು ಅವಳ ಕಣ್ಣಿಗೆ ಕಾಣಿಸುತ್ತಲೂ ಇರಲಿಲ್ಲ! ಬರೀ ತೋರಿಕೆ ಅಷ್ಟೇ! ತಲೆ ತುಂಬ ತುಂಬಿಕೊಂಡಿದ್ದ ಆಲೋಚನೆಗಳಿಂದ ಅವಳಿಗೆ ಬಿಡುಗಡೆಯೇ ಇಲ್ಲವೆನಿಸುವಂತಿತ್ತು.

ಆಫೀಸಿಗೆ ಹೋದರೆ ಇಂಥವೇ ಸುದ್ದಿಗಳು! ಶಾಲ್ಮಲಿ ಯಾವುದಕ್ಕೂ ಕೇಳಿಸಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಸಹೋದ್ಯೋಗಿಗಳು ಎಂದ ಮೇಲೆ ಗಂಡಸರು ಹೆಂಗಸರು ಇದ್ದೇ ಇರುತ್ತಾರೆ. ಅವರೊಂದಿಗೆ ಮಾತುಕತೆ, ವ್ಯವಹಾರ ಸಾಮಾನ್ಯವಾದ್ದೇ! ಗಂಡು, ಹೆಣ್ಣು ಅನ್ನೋ ಭೇದ ಕೂಡ ಇಲ್ಲದೆ ಪರಸ್ಪರರು ನೋವು, ನಲಿವು ಸಮಸ್ಯೆ ಇತ್ಯಾದಿಗಳನ್ನು ಹಂಚಿಕೊಳ್ತಾರೆ. ಒಬ್ಬರಿಗೊಬ್ಬರು ಸಹಾಯ ಮಾಡ್ತಾರೆ..... ಇದೆಲ್ಲ ಮಾತ್ರವೇ ನೆನಪಿನಲ್ಲಿ ಉಳಿಯೋದು.....ಆದರೆ ಈ ರೀತಿ ಅಧಿಕಾರ!

ಶಾಲ್ಮಲಿ ಕಣ್ಣಿಗೆ ನಿದ್ದೆಹತ್ತಲಿಲ್ಲ. ಘೂರ್ಕಾನ ದೊಣ್ಣೆಯ ಸದ್ದು ಅವನ ಬೂಟಿನ ಸದ್ದು ಖಟ್..... ಖಟ್...... ಖಟ್ ಕೇಳಿಸುತ್ತಿತ್ತು.

ಅವಳ ತಲೇಲಿ ರೈಲುಗಾಡಿ ಓಡಿದ ಸದ್ದು! ಅವಳ ಮನಸ್ಸು ಶೂನ್ಯ ಬಯಲಿನಂತೆ ಹರಡಿ ಬಿದ್ದಿತ್ತು. ಹೊಗೆ ಚೆಲ್ಲುತ್ತಾ ವೇಗವಾಗಿ ಧಡ್...... ಧಡ್ ಸದ್ದಿನೊಂದಿಗೆ ಸಾಗುವ ರೈಲುಗಾಡಿ ಮಾತ್ರವೇ ಅಲ್ಲಿ ಹಾದು ಹೋಗುತ್ತಿತ್ತು..........

ನರೇಶ್, ರಾತ್ರಿ ಯಾವಾಗ ಬಂದ ಅಂತ ಕೇಳೋಕೆ ಹೋಗಲಿಲ್ಲ. ಬಾಗಿಲು ತೆಗೆದಿರಿಸಿದ್ದಳು. ಎಲ್ಲೋ ಬಂದು ಬಿದ್ದು ಕೊಂಡಿರಬೇಕು. ಅವನಿಗೆ ಜೀವನದಲ್ಲಿ ಯಾವುದೇ ನಿರ್ದಿಷ್ಟ ನೆಲೆ ಗುರಿ ಇಲ್ಲ. ಜೀವನಯಾತ್ರೆಯಲ್ಲಿ ಅವನೆಂಥ ಪ್ರಯಾಣಿಕ

ಅಂದರೆ, ಅವನಿಗೆ ಇಂಥ ಕಡೆ ಹೋಗಬೇಕು. ಈ ಗಾಡಿ ಹತ್ತಬೇಕು ಅನ್ನೋದು ಏನೂ ಇರೊಲ್ಲ. ಅವನ ಬದುಕು ಒಂದು ಬಂಜರುಭೂಮಿ. ಅಲ್ಲಿ ಅವನಿಗೆ ಏನು ಫಸಲು ತೆಗೀಬೇಕು. ಅನ್ನೋದು ಇರಲಿಲ್ಲ. ಸುಮ್ಮನೆ ಹೋಗ್ತಾ ಇರೋದು..... ತನ್ನ ಧರ್ಮ ಏನು, ತನ್ನ ಕರ್ತವ್ಯ ಏನು, ಹೆಂಡತಿ ಜೊತೆ ಹೇಗೆ ಬಾಳಬೇಕು...... ಯಾವುದೂ, ಗೊತ್ತಿಲ್ಲ. ಇದನ್ನೆಲ್ಲ ಹೇಳಿ ಕೊಡಬೇಕೆ? ಹೀಗೆ ನಡೆದುಕೊಳ್ಳೀಂತ ಸೆರಗೊಡ್ಡಿ ಬೇಡಿಕೊಳ್ಳಬೇಕೆ? ಬೇಡಿದರೆ ಸಿಗಬಹುದು, ಆದರೆ ಸಿಗುವುದು ದಯೆಯೇ ಹೊರತಾಗಿ ಪ್ರೀತಿ ಅಲ್ಲ. ಪ್ರೀತಿ ತಾನಾಗಿ ಬರಬೇಕು.

ಅವಳ ಬದುಕಿಗೆ ಗ್ರಹಣ ಕವಿದಿದೆ. ಮನಸ್ಸಿನ ಭಯ ಆತಂಕಗಳನ್ನು ಮರೆಮಾಚದೆ, ಇನ್ನು ಅಮ್ಮನಿಗೆ ಹೇಳಬೇಕು ಎಂದು ಒಂದು ದಿನ ಅಮ್ಮನ ಮುಂದೆ ತನ್ನ ದುಃಖವನ್ನು ಹೇಳಿಕೊಂಡಳು. ಎಲ್ಲ ಕೇಳಿದ ಅಮ್ಮ ಸ್ತಬ್ಧಳಾಗಿ ಇದ್ದುಬಿಟ್ಟಳು. ಮರುಕ್ಷಣದಲ್ಲಿಯೇ ಅಳುವುದಕ್ಕೆ ಪ್ರಾರಂಭಿಸಿ ಬಿಟ್ಟಳು. "ಶಾಲೂ ನಿನ್ನ ಹಣೆ ಬರಹವೇ ಹೀಗಿರುವಾಗ, ಏನು ಮಾಡಲು ಸಾಧ್ಯ? ಹೇಗೋ ಎಲ್ಲವನ್ನು ಸಹಿಸಿಕೊಂಡು ಬಾಳಬೇಕು. ಸಂಸಾರ, ಸಂಪ್ರದಾಯಗಳಿಂದ ಬೇರೆಯಾಗಿ ಬದುಕುವುದು ಯಾರಿಗೆ ಸಾಧ್ಯ? ಹುಚ್ಚಿ, ನಮ್ಮ ಮತ್ತು ಇತರರ ಕಷ್ಟಗಳನ್ನು ಸಹಿಸಿಕೊಳ್ಳುವುದೇ ಹೆಣ್ಣಿನ ಹಣೆ ಬರಹ! ಇದಕ್ಕಿಂತ ಬೇರೆಯಾಗಿ ಬಾಳುವುದಕ್ಕೆ ಹೇಗಾಗುತ್ತೆ?"

ಅಮ್ಮನ ಮಾತಿನಿಂದ ನೋವಿಗೆ ಬದಲಾಗಿ ಸಿಟ್ಟು ಬಂತು. ಅಮ್ಮನಿಂದ ಸಿಕ್ಕಿದ್ದು ಇದೇನಾ?......ಆವತ್ತಿನಿಂದ ಏನೇ ಆದರೂ ಅಪ್ಪ-ಅಮ್ಮನಿಗೆ ತಿಳಿಸುವುದಿಲ್ಲವೆಂದು ತೀರ್ಮಾನ ಮಾಡಿದಳು. ಹೇಳಿದರೂ ಸಿಗುವ ಪ್ರಯೋಜನ? ಬರೀ ಉಪದೇಶ ಇಲ್ಲ ತಾವಿಬ್ಬರೂ ಹೇಗೆ ಸಮಸ್ಯೆಗಳ ನಡುವೆಯೂ ಸುಖವಾಗಿದ್ದೀವಿ ಅಂತ ತೋರಿಸೋದು.

ಪ್ರತಿಯೊಬ್ಬರೂ ತಮ್ಮ ಹೋರಾಟವನ್ನು ತಾವೇ ಹೋರಾಡಬೇಕು. ಬದುಕಿನ ನಾವೆಗೆ ನಾವು ಹುಟ್ಟು ಹಾಕಬೇಕೇ ಹೊರತು ಬೇರೆಯವರನ್ನು ಕೇಳುವ ಅಗತ್ಯವೇನಿದೆ? ಅಲ್ಲದೆ ಒಬ್ಬರು ಇನ್ನೊಬ್ಬರ ನಾವೆಯನ್ನು ನಡೆಸುವುದೂ ಸಾಧ್ಯವಿಲ್ಲ. ಅವರಿಗೆ ತಲುಪಬೇಕಾದ ಗುರಿಯು ಅರಿವು ಇರುವುದಿಲ್ಲ. ಆದ್ದರಿಂದ ಇದನ್ನೆಲ್ಲ ಯೋಚಿಸಿದ ಶಾಲ್ಮಲಿ ತನ್ನ ಮತ್ತು ನರೇಶ್‌ನ ಸುತ್ತ ಲಕ್ಷ್ಮಣ ರೇಖೆಯನ್ನು ಎಳೆದುಕೊಂಡಿದ್ದಳು. ಹೊರಗೆ ಯಾರೂ ಹೋಗಬೇಕಿಲ್ಲ. ಒಳಗೆ ಯಾರೂ ಬರಬೇಕಿಲ್ಲ. ಸ್ವಸಹಾಯದಿಂದಲೇ ಮುರಿದು ಬೀಳುತ್ತಿರುವ ಗೋಡೆಯನ್ನು ಎಬ್ಬಿಸಿ ನಿಲ್ಲಿಸಬೇಕಿತ್ತು. ಈ ವಿಷವನ್ನು ತಾನೊಬ್ಬಳೇ ಕುಡಿಯಬೇಕಿತ್ತು.

ಮಲಗಿದ್ದ ನರೇಶ್ ಪಕ್ಕಕ್ಕೆ ತಿರುಗಿದ. ಶಾಲ್ಮಲಿ ಕೈ ಚಾಚಿ ಅವನ ಕೈ ಮೇಲೆ ಕೈ ಇಟ್ಟಳು. ನರೇಶ್ ಮಲಗಿದ್ದೇ ಕೈಯನ್ನು ಎಳೆದುಕೊಂಡ. ಘಾಸಿಗೊಂಡಳು ಶಾಲ್ಮಲಿ. "ಎಲ್ಲಿ ಉತ್ಸಾಹದ ದೀಪಗಳು ಮಿಣುಗುಟ್ಟುತ್ತಿದ್ದವೋ, ಅಲ್ಲಿ ಈಗ ಕೇವಲ ಅನುಮಾನ,

ಸಿಟ್ಟು, ಸಿಡಿಮಿಡಿ, ದೈನ್ಯತೆಗಳ ಕಿಡಿಗಳು ಸಿಡಿಯುತ್ತವೆ. ಪ್ರೀತಿ, ಪ್ರೇಮಗಳಿಂದ ಆರಂಭವಾದ ಜೀವನ ಇಂದು ಪ್ರಶ್ನೆಗಳ ಕಟಕಟೆಯಲ್ಲಿ ನಿಂತಿದೆ. ಒಮ್ಮೊಮ್ಮೆ ಅನಿಸುತ್ತೆ, ಆ ಪ್ರೇಮಕ್ಕೆ ಪ್ರೀತಿಗೆ ಮರಣದಂಡನೆಯನ್ನೇ ಕೊಡಿಸಬಹುದೇನೋ ಅಂತ" ಶಾಲ್ಮಲಿ ತನ್ನ ಮುಖವನ್ನು ದಿಂಬಿನಲ್ಲಿ ಹುದುಗಿಸಿ ಮರೆಮಾಚಿದಳು. ಬಹುಶಃ ತನ್ನ ಕಂಬನಿಗಳನ್ನು ಬಚ್ಚಿಡಲು? ಅಥವಾ ಎಲ್ಲವನ್ನೂ ಮರೆತು ಬಿಡಲು?

ಶಿಶಿರದ ದಿನಗಳು. ಒಣಗಿದ ಎಲೆಗಳಿಂದ ಫುಟ್ ಪಾತುಗಳು ತುಂಬಿದ್ದವು. ಹಳದಿ, ಕೆಂಪು ಎಲೆಗಳು ಗಾಳಿಯ ಜೊತೆಯಲ್ಲಿಯ ರೆಂಬೆ ಕೊಂಬೆಗಳಿಂದ ತಮ್ಮ ಯಾತ್ರೆಯನ್ನು ಪ್ರಾರಂಭಿಸಿ ಸಾವಿರಾರು ಪಲ್ಟಿಗಳನ್ನು ಹೊಡೆಯುತ್ತಾ ನೆಲದ ಮೇಲೆ ಬಿದ್ದು, ನಂತರ ವೇಗವಾಗಿ ಬರುವ ವಾಹನ ಚಕ್ರಗಳ ಅಡಿಗೋ, ಪಾದಚಾರಿಗಳ ಚಪ್ಪಲಿಗಳ ಅಡಿಗೋ ಸಿಕ್ಕು ಸಳ ಸಳ ಚೀತ್ಕಾರಗಳಿಮದ ಚೆಲ್ಲಾಪಿಲ್ಲಿಯಾಗುತ್ತಿದ್ದವು.

ಬಾಲ್ಯದಿಂದಲೇ ನೋಡುತ್ತಾ ಬಂದಿದ್ದ ಈ ಶಿಶಿರ ಋತುವಿನಲ್ಲಿ ಇಂದು, ಶಾಲ್ಮಲಿಗೆ ತನ್ನದೇ ನೆರಳು ಕಾಣಿಸಿತು. ಒಳಗಿನ ಬೇಸರ ಪ್ರತಿಯೊಂದು ಮರದಿಂದಲೂ ಪ್ರತಿಫಲಿಸುತ್ತಿದ್ದುದರಿಂದ ಅವಳಿಗೆ ನನ್ನ ಹಾಗೆ ಇನ್ನೂ ಬೇರೆ ಎಲ್ಲವೂ ಇದೆ! ಅವುಗಳೊಂದಿಗೆ ನನ್ನನ್ನು ನನ್ನ ನೆರಳನ್ನು ದಕ್ಕಿಸಿಕೊಳ್ಳಬಹುದು ಎಂದೆಲ್ಲ ಯೋಚಿಸುತ್ತಿದ್ದಳು. ಎಲೆಗಳನ್ನು ಉದುರಿಸುತ್ತಿದ್ದ ಮರಗಳ ನಡುವಿನಿಂದ ಕಾರನ್ನು ನಡೆಸಿಕೊಂಡು ಹೋಗುವಾಗಲೆಲ್ಲ ಪ್ರತಿಮರವೂ ಒಂದು ಕನ್ನಡಿಯಂತೆ ಭಾಸವಾಗುತ್ತಿತ್ತು.

ಈ ದಿನ ಆಫೀಸಿನಿಂದ ಬರುವ ಹೊತ್ತಿಗೆ ತಡವಾಗಿತ್ತು. ನರೇಶ್ ಮಧ್ಯಾಹ್ನವೇ ಬಂದು ಕಾರನ್ನು ತೆಗೆದುಕೊಂಡು ಹೋಗಿದ್ದ. ಮೀಟಿಂಗ್ ಮುಗಿದ ನಂತರ ನರೇಶನಿಗಾಗಿ ಸ್ವಲ್ಪ ಹೊತ್ತು ಕಾದಳು. ಗಂಟೆ ಆರೂವರೆ ಆಗಿತ್ತು. ಕುಳಿತಲ್ಲಿಂದ ಎದ್ದಳು. ಕೆಳಗೆ ಬಂದಾಗ ತಿಳಿಯಿತು. ಐದುಗಂಟೆ ಸುಮಾರಿ‍ಗೆ ವಿಪರೀತ ಗಾಳಿ. ಆಮೇಲೆ ಮಳೆ...... ಇನ್ನೂ ಮಳೆ ಹನಿಯುತ್ತಿತ್ತು. ಬಾಗಿಲಲ್ಲಿದ್ದ ಗೇಟ್ ಕೀಪರ್ ಜೊತೆ ಮಾತಾಡಿದ ಮೇಲೆ, ನಡೆದೇ ಮನೆಗೆ ಹೋಗಲು ತೀರ್ಮಾನಿಸಿದಳು. ರಸ್ತೆ ಬದಿಯಲ್ಲಿನ ಕಂಬಗಳು ಸುಟ್ಟು ಹೋಗಿದ್ದವು. ರಸ್ತೆ ಮೇಲೆ ಅಷ್ಟೊಂದು ಟ್ರಾಫೀಕ್ ಇರಲಿಲ್ಲ. ಲ್ಯಾಂಪ್ ಪೋಸ್ಟ್‌ನ ಹಳದಿ ಬೆಳಕಿನಲ್ಲಿ ಮಳೆಯಿಂದ ತೊಯ್ದು ಒಂದಕ್ಕೊಂದು ಅಪ್ಪಿಕೊಂಡು ಫುಟ್ ಪಾತಿನ ಮೇಲೆಲ್ಲ ಮೆತ್ತಿಕೊಂಡಿದ್ದ ಎಲೆಗಳು ಕಾಣಿಸಿದವು. ಮೇಲಿನಿಂದ ಕೊಂಬೆಗಳಿಂದ ತೊಟ ತೊಟಿಸುತ್ತಿದ್ದ ಮಳೆ ಹನಿಗಳಿಂದ ಕೆಳಗೆ ಬಿದ್ದ ಎಲೆಗಳು ಪುಲಕಿತವಾದಂತೆನಿಸಲಿಲ್ಲ. ಅವುಗಳ ಮೇಲೆ ಹೆಜ್ಜೆ ಇಡಲು ಮನಸ್ಸು ಬರಲಿಲ್ಲ. ಬಾಯಾರಿದ ಭೂಮಿಯಿಂದ ಆವಿಯ ರೂಪದಲ್ಲಿ ಎದ್ದು ತಂಪಿನ ಜೊತೆಗೆ ಬೆರೆತು ಗಾಳಿಗೊಂದು ವಿಚಿತ್ರ ಶೀತಲ ಗುಣವನ್ನು ನೀಡಿತ್ತು. ಈ ಶೀತಲತೆಯನ್ನು ಹೊತ್ತಗಾಳಿ ತಾಪಮಾನಕ್ಕೆ ಒಂದು ಬಗೆಯ ವಿಶೇಷತೆಯನ್ನು ನೀಡಿತ್ತು.

ಏಕಾಂಗಿಯಾಗಿ ಮರಗಳ ನೆರಳಿನಲ್ಲಿ ನಡೆಯುವ ಅವಕಾಶ ಬಹಳ ದಿನಗಳ ನಂತರ ಲಭಿಸಿತ್ತು. ಈ ಕ್ಷಣಗಳು ತನ್ನವು, ಈ ನೀರವತೆಯನ್ನು ಪೂರ್ತಿಯಾಗಿ ಅನುಭವಿಸಿ ತಾನು ಜೀವನವನ್ನು ಸಾರ್ಥಕಗೊಳಿಸಿಕೊಳ್ಳುತ್ತಿದ್ದೇನೆ' ಎನಿಸಿತು. ಮುಖ ಮೇಲೆ ಮಾಡಿ ಆಕಾಶದ ಕಡೆಗೆ ನೋಡಿದಳು. ನೀರನ್ನು ಹೊತ್ತ ಮೋಡಗಳು ವೇಗಬವಾಗಿ ಓಡುತ್ತಿದ್ದವು. ಮಳೆಯಲ್ಲಿ ತೊಯ್ದು, ಭಾರದಿಂದ ಬಾಗಿನಿಂತ ಮರಗಳು....!

"ಇದೇನಿದು, ಇವತ್ತು ನಡೆದೇ ಹೋಗುತ್ತಿದ್ದೀರಿ, ಶಾಲ್ಮಲಿಯವರೇ?" ಒಂದು ಕಾರು ಬಳಿ ಬಂದು ನಿಂತಿತು. ಮಿಶ್ರಾ ಕತ್ತನ್ನು ಹೊರ ಚಾಚಿ ಕೇಳಿದರು.

"ಓಹ್ ನೀವಾ!" ಶಾಲ್ಮಲಿ ಗಾಭರಿಗೊಂಡಳು.

"ಕಾರು ಏನಾಯ್ತು, ಹೀಗೆ ನಡ್ಕೊಂಡು ಹೊರಟಿರಿ?"

ಮಿಶ್ರಾ ಕೇಳಿದರು.

"ಗ್ಯಾರೇಜ್‌ನಲ್ಲಿದೆ, ತಾವು ಹೇಗಿದ್ದೀರಿ? ಹೋದಸಲದ ಮೀಟಿಂಗ್‌ಗೆ ತಾವು ಬರಲಿಲ್ಲ?" ಶಾಲ್ಮಲಿ ಉತ್ತರಿಸಿದಳು.

"ಎಲ್ಲೋ ಊರಿಗೆ ಹೋಗಿದ್ದೆ. ಬನ್ನಿ ನಾನು ನಿಮ್ಮನ್ನು ಮನೆ ಹತ್ತಿರ ಇಳಿಸ್ತೀನಿ". ಮಿಶ್ರಾ ಕಾರಿನ ಬಾಗಿಲನ್ನು ತೆರೆದರು.

"ತಮಗೆ ತೊಂದರೆ ಬೇಡ. ಎಷ್ಟೋ ದಿವಸದ ಮೇಲೆ ನಡ್ಕೊಂಡು ಹೋಗೋ ಅವಕಾಶ ಸಿಕ್ಕಿದೆ. ಅದನ್ನು ಕೈ ಬಿಡೋಕೆ ಇಷ್ಟವಿಲ್ಲ. ಧನ್ಯವಾದಗಳು?" ಶಾಲ್ಮಲಿ ಕೂಡಲೆ ಕೈ ಮುಗಿದಳು.

"ಒಳ್ಳೇ ತಮಾಶೆಯಾಗಿದೆ. ರಾತ್ರಿ ಹೊತ್ತಲ್ಲಿ ನೀವು, ಮಿಸ್ಟರ್ ಕುಮಾರ್ ನಮ್ಮನ್ನು ಮನೆತನಕ ತಲುಪಿಸಿ ಹೋಗ್ತೀರಿ, ಈಗ ನಾನು ನಿಮ್ಮನ್ನು, ಅದೂ ಇಂಥಾ ಹೊತ್ನಲ್ಲಿ ನಡ್ಕೊಂಡು ಹೋಗೋದಕ್ಕೆ ಬಿಡೋದೇ?" ಎಂದು ಮಿಶ್ರಾ ಗಂಭೀರವಾಗಿ ಹೇಳಿ ಕಾರಿನಿಂದ ಇಳಿದು ಕಾರಿನ ಇನ್ನೊಂದು ಕಡೆ ಬಾಗಿಲನ್ನು ತೆರೆದು ನಿಂತರು.

ಮನಸ್ಸಿಲ್ಲದ ಮನಸ್ಸಿನಿಂದ ಶಾಲ್ಮಲಿ ಕಾರಲ್ಲಿ ಕುಳಿತಳು. ಎಷ್ಟು ಸಲ ಸಭೆ, ಸಮಾರಂಭಗಳು ಮುಗಿದ ಮೇಲೆ ಮಿಶ್ರಾ ಮತ್ತು ಇತರ ಸಹೋದ್ಯೋಗಿಗಳಿಗೆ ತಾವಿಬ್ಬರೂ ಲಿಫ್ಟ್ ಕೊಟ್ಟಿರಲಿಲ್ಲ! ಆದರೆ ಪರಿಸ್ಥಿತಿ ಆಗಿನದೇ ಬೇರೆ, ಈಗಿನ ಪರಿಸ್ಥಿತೀಲಿ ಆಕಾಶ ಪಾತಾಳದ ಅಂತರ ಉಂಟಾಗಿದೆ. ಜೀವನದಲ್ಲಿನ ಅಂದಿನ ಮುಕ್ತ ಕ್ಷಣಗಳು ಶಾಪವಾಗಿ ಪರಿವರ್ತಿಸಿದೆ. ಇದನ್ನು ಯಾರಿಗೂ ಹೇಳುವ ಹಾಗಿಲ್ಲ. ಹೇಳಿದರೂ ನನ್ನ ಮಾತುಗಳನ್ನು ಇರುವುದಕ್ಕಿಂತ ಬೇರೆಯಾಗಿ ಅರ್ಥಮಾಡಿಕೊಳ್ಳಬಹುದು.

"ಮನೆಗೆ ಹೋಗೋಣ ಬನ್ನಿ. ರೇಖಾ ನಿಮ್ಮನ್ನು ವಿಚಾರಿಸ್ತಿರ್ತಾಳೆ". ಚೌಕ ತಲುಪಿದ ಮಿಶ್ರಾ ಹೇಳಿದರು. ಅಲ್ಲಿಂದ ಎಡಕ್ಕೆ ತಿರುಗಿದರೆ ಅವರ ಮನೆದಾರಿ ಸಿಗುತ್ತಿತ್ತು.

"ಇವತ್ತು ಬೇಡ. ಇವತ್ತು ನನ್ನ ತಂದೆ ತಾಯಿ ಮನೆಗೆ ಬರುವವರಿದ್ದಾರೆ" ಶಾಲ್ಮಲಿ ಹೇಳಿದಳು.

"ಮತ್ತೆ ಯಾವಾಗಾದರೂ ಸರಿ ಬನ್ನಿ" ಹೇಳುತ್ತಾ ಮಿಶ್ರಾ ನೇರವಾಗಿ ಕಾರನ್ನು ನಡೆಸಿದರು.

"ಇತ್ತೀಚೆಗೆ ರೇಖಾ ಏನ್ಮಾಡ್ತಿದ್ದಾರೆ?" ಶಾಲ್ಮಲಿ ಕೇಳಿದಳು. "ಮಾಡುವುದೇನಿದೆ ಮಗನ ಆರೋಗ್ಯ ಸರಿ ಹೋಗೋವರೆಗೆ ಏನು ಮಾಡುವುದೂ ಸಾಧ್ಯವಿಲ್ಲ". ಬೇಸರದಿಂದ ಮಿಶ್ರಾ ಹೇಳಿದರು.

"ಇಲ್ಲೇ ಇಳಿದು ಹೋಗ್ತೇನೆ" ಮನೆ ಬಂದು ಬಿಟ್ಟಿತ್ತು. ಅಲ್ಲದೆ ಈ ಹೊತ್ತಿನಲ್ಲಿ ಮಿಶ್ರಾ ಅವರನ್ನು ಒಳಗೆ ಬರಹೇಳಿ ಆತಿಥ್ಯ ನೀಡುವ ಮನಸ್ಸಾಗಲಿಲ್ಲ. ಶಾಲ್ಮಲಿಯ ಉದ್ದೇಶವನ್ನು ಮಿಶ್ರಾ ಗ್ರಹಿಸಿದರು. ಅವರಿಗೆ ಧನ್ಯವಾದಗಳನ್ನು ಹೇಳಿ ಅವಳು ಇಳಿದು ಹೋದಳು.

* * *

ಅತ್ತೆಯವರಿಗೆ ಸುಖವಾಗಿ ಬಾಳುವ ಅದೃಷ್ಟ ಇಲ್ಲ. ಅವರು ಮಾವನ ಹತ್ತಿರ ಹೊರಟು ಹೋದರು! ಊಟ ಮಾಡುವಾಗಲೋ, ರಸ ಕುಡಿಯುವಾಗಲೋ ಹಾಗೇ ತಡೆದು, ಕಷ್ಟದಿಂದ ಹೇಳುತ್ತಿದ್ದರು, "ಅವರು ಬದುಕಿದ್ದರೆ, ಬದುಕಿನ ಸುಖಾನ ನನ್ನ ಹಾಗೆ ಅನುಭವಿಸುತ್ತಿದ್ದರು? ಒಳ್ಳೆ ಊಟಾಂದ್ರೆ ಸಾಕು, ಪ್ರಾಣ ಬಿಡುತಿದ್ದರು. ಹಬ್ಬ ಹರಿದಿನ ಅಂದ್ರೆ ಸಾಕು! ಸಿಹಿ ತಿಂಡಿಗಳು ತುಂಬಿರುತ್ತಿದ್ದವು! ಇವತ್ತು ಎಲ್ಲಾ ಇದೆ. ಆದರೆ ಅವರಿಲ್ಲ". ಹೇಳುತ್ತಾ ಹೇಳುತ್ತಾ ಕಣ್ಣು ಒದ್ದೆಯಾಗುತ್ತಿತ್ತು. ತುತ್ತು ಗಂಟಲಲ್ಲಿ ಇಳೀತಿರಲಿಲ್ಲ.

ಅತ್ತೆಯ ಮಾತುಗಳು ಕಿವಿಯಲ್ಲಿ ಗುಂಯ್ ಗುಡುತ್ತಿದ್ದವು. ಅವರ ನೆನಪು, ಅವರ ಕೊರತೆ ಇನ್ನಷ್ಟು ಏಕಾಕಿತನವನ್ನು ಉಂಟು ಮಾಡುತ್ತಿತ್ತು. ಒಮ್ಮೊಮ್ಮೆ ಮರೆತು ಹೇಳುತ್ತಿದ್ದಳು, 'ಬೇಲಾ ಚಹಾನ ಅಮ್ಮಾಜಿ ಇರೋ ಕಡೇಗೆ ತಗೊಂಡು ಬಾ". ಆಮೇಲೆ ಅವರಿಲ್ಲದೆ ನೆನಪಾಗಿ ಮನಸ್ಸಿಗೆ ಹಿಂಸೆಯಾಗುತ್ತಿತ್ತು. ಬೇಲಾ ಕೂಡಾ ಮುಖ ಮುಚ್ಚಿಕೊಳ್ಳುತ್ತಿದ್ದಳು. ಅವರಿಗಾಗಿ ಈ ಮನೆಯಲ್ಲಿ ಅಳದೆ ಇರುವವರು, ಅವರನ್ನು ನೆನಪು ಮಾಡಿಕೊಳ್ಳದಿರುವವರು ಯಾರಿದ್ದಾರೆ! ಅಂತಿಮ ಸಂಸ್ಕಾರದ ದಿನ ಇಡೀ ಬಂಗಲೆ ತುಂಬಿ ಹೋಗಿತ್ತು. ಎಲ್ಲರೂ ಅವರನ್ನು ಶಾಲ್ಮಲಿಯ ತಾಯಿ ಅಂತಲೇ ತಿಳಿದುಕೊಂಡಿದ್ದರು. ಆಮೇಲೆ ಗೊತ್ತಾಯ್ತು, ಅವರು ಶಾಲ್ಮಲಿಯ ಅತ್ತೆ

ಅಂತ. ಅತ್ತೆಗೆ ಸಲ್ಲುತ್ತಿದ್ದ ಅಂತಿಮ ಗೌರವಗಳು ದೊಡ್ಡ ಸೊಸೆಗೆ ಸಹಿಸಲಾಗಲಿಲ್ಲ. ಅವಳಿಗೆ ಗೊತ್ತು. ಅತ್ತೆಗೆ ಸಲ್ಲುತ್ತಿರುವ ಗೌರವ ವಾಸ್ತವವಾಗಿ ಶಾಲ್ಮಲಿಗೇ ಸಲ್ಲುವಂಥಾದ್ದು.

"ಗಂಡಸರೂ ಸ್ನೇಹಿತರಿರ್ತಾರಾ? ಇವತ್ತೆ ನನಗೆ ತಿಳಿದಿದ್ದು." ದೊಡ್ಡವಳು ಆರೋಪದ ದನಿಯಲ್ಲಿ ಹೇಳಿದಳು.

"ನಮಗಂತೂ ಗೆಳತಿಯರು ಮಾತ್ರವೇ ಇದ್ದರು. ಕೇಳಬೇಕೂಂತಿದ್ದರೆ, ನಿನ್ನ ಆ ಚಿಕ್ಕ ವಾರಗಿತ್ತಿಯನ್ನೇ ಕೇಳು." ಮೂತಿ ತಿರುಗಿಸುತ್ತಾ ಹೇಳಿದಳು.

ಆಫೀಸಿನ ಜನ, ಬಂದ ಬೇರೆ ಜನ ಎಲ್ಲ ಹೊರಟು ಹೋದ ಮೇಲೆ ಅತ್ತೆಯ ಕೋಣೆಯನ್ನು ಪ್ರವೇಶಿಸುತ್ತಿದ್ದಂತೆ ಈ ಮಾತುಗಳು ಅವಳ ಮನಸ್ಸನ್ನು ಸೀಳಿತು. ಧೂಪಹಚ್ಚಿ ನೇರವಾಗಿ ಹಿಂತಿರುಗಿದಳು. ತನ್ನ ಕೋಣೆಗೆ ಹೋಗಿ ತೃಪ್ತಿ ಆಗುವವರೆಗೆ ಅತ್ತಳು. ಹೋದವಳು ಹಿಂತಿರುಗಿ ಬರುತ್ತಾರೇನು? ಶಾಲ್ಮಲಿ ಶೂನ್ಯ ಸಂಜೆಗಳನ್ನು ಒಬ್ಬಳೇ ಲಾನ್‌ನಲ್ಲಿ ಕಳೆಯುತ್ತಿದ್ದಳು. ಸೂಪು ಮಾಡುವುದು, ರಸ ತೆಗೆಯುವುದು, ಅಡಿಗೆ ಮಾಡುವುದು – ಇದೆಲ್ಲಾ ಈಗ ಯಾರಿಗಾಗಿ? ಅವಳಿಗೆ ಅಡುಗೆ ಮಾಡುವುದರಲ್ಲಿನ ಆಸಕ್ತಿಯೇ ಉಳಿಯಲಿಲ್ಲ. ಯಾರಿಗಾಗಿ ಅಡಿಗೆ ಬಡಿಸಬೇಕಾಗಿದೆ? ಊಟ ಮಾಡಲು ಯಾರು ತಾನೇ ಕಾದಿದ್ದಾರೆ?

ಈಗಂತೂ ಶಾಲ್ಮಲಿ ನರೇಶನನ್ನು ನೋಡುವುದು ರಾತ್ರಿಗಳಲ್ಲೆ! ಅದೂ ಅವಳು ಯಾವಾಗಲಾದರೂ ಹನ್ನೆರಡು ಗಂಟೆ, ಒಂದು ಗಂಟೆ ರಾತ್ರಿವರೆಗೆ ಎಚ್ಚರವಾಗಿದ್ದರೆ! ಇಲ್ಲ ಬೆಳಿಗ್ಗೆ ನಿದ್ದೆಯಲ್ಲಿ ಇರುವಾಗಲೇ ಅವನ ಮುಖ ದರ್ಶನ! ಅವನ ಆಸೆಗಳು ದೊಡ್ಡದಾಗಿ ಬೆಳೆದಿದ್ದವು. ಅವನು ಹೋಗಿ ಬರುತ್ತಿದ್ದ ಜಾಗಗಳು ವಿನಾಶಕ್ಕೆ ತೆರೆದುಕೊಂಡಂತಹವುಗಳು. ಕೆಲಸದಲ್ಲಿ ಇರುವವರು ಈ ಬಗೆಯ ಭೋಗ ವಿಲಾಸಗಳಿಗೆ ಬಿದ್ದರೆ ಅವರಿಗೆ ಬೇಕಾಗುವಷ್ಟು ಹಣವನ್ನು ಎಲ್ಲಿಂದ ತರುವುದು?.... ಆಗಲೇ ಹಣ ಪಡೆಯೋಕೆ ಕೆಟ್ಟ ಕೆಟ್ಟ ದಾರಿಗಳನ್ನು ಹಿಡಿಯುವುದಕ್ಕೆ ಶುರುವಾಗುತ್ತೆ....

ಶಾಲ್ಮಲಿ ಗಟ್ಟಿಯಾಗಿ ತಲೆ ಹಿಡಿದುಕೊಂಡು ಕುಳಿತು ಬಿಡುತ್ತಿದ್ದಳು. ಅತ್ತೆಯವರ ಭಯವೂ ಈಗ ಇಲ್ಲದೆ ಹೋಯಿತು. ಅದಕ್ಕೆ ಜೋರಾಗಿ ಗಂಟಲು ಸೀಳುವಂತೆ ಕಿರುಚಿಕೊಳ್ಳುತ್ತಿದ್ದ ಬೇಲಾಗೆ ಯಜಮಾನರ ವಿಚಾರದಲ್ಲಿ ಭಯವೆನಿಸಿತು. ಕುಡಿಕುಡಿದು ಕೆಂಪಾದ ಕಣ್ಣುಗಳು, ಅಮಲಿನಿಂದ ತೂರಾಡುತ್ತಾ ಬರುವ ಅವನ ರೀತಿ ನೋಡಿ ಕಂಪಿಸುತ್ತಿದ್ದಳು.

ಅಮ್ಮಾಜಿ (ಅತ್ತೆ)ಯ ಕಿಟಕಿ ಬಳಿ ಹಾಕಿಸಿದ್ದ ರಾತ್ರಿ ರಾಣಿ ಮರದಲ್ಲಿ ಮೊದಲ ಬಾರಿಗೆ ಹೂ ಬಿಟ್ಟಿತ್ತು. ಅದರ ಸುವಾಸನೆ ಮನೆಯಲ್ಲಿ ತುಂಬಿ ಅಮ್ಮಾಜಿಯಿಲ್ಲದ ಕೊರತೆ ಅವಳನ್ನು ಕಾಡುತ್ತಿತ್ತು. ಅವರನ್ನು ಶಾಲ್ಮಲಿ ತುಂಬ ಹಚ್ಚಿಕೊಂಡಿದ್ದಳು. ತಮ್ಮ ಮನಸ್ಸನ್ನು ಶಾಲ್ಮಲಿಯ ಮುಂದೆ ತೆರೆದಿಟ್ಟಾಗ, ಶಾಲ್ಮಲಿಗೆ ತನ್ನ ನೋವುಗಳಿಗೆ

ಅಭಿವ್ಯಕ್ತಿ ಸಿಕ್ಕಂತಾಯಿತು. ಶಾಲ್ಮಲಿಯ ಕಷ್ಟ ಅತ್ತೆಗೆ ಅರ್ಥವಾಗಿತ್ತು. ಅವರು ನರೇಶನ ತಾಯಿ. ಅವನು ಅವರ ದೇಹದ ಭಾಗ. ಅದಕ್ಕೆ ನರೇಶನನ್ನು ಅವರು ಅರ್ಥಮಾಡಿಕೊಳ್ಳಲು ಆಗುವುದಿಲ್ಲ.

ಅಮ್ಮಾಜಿ ಬಿಟ್ಟು ಬೇರೆ ಯಾರಿಗೂ ತನ್ನ ವಿಷಯ ತಿಳಿಯುವುದು ಇಷ್ಟವಾಗಲಿಲ್ಲ. ಅಪ್ಪ ಅಮ್ಮನ ಮುಂದೆ ಕೂಡಾ ಅವನನ್ನು ಬಿಟ್ಟು ಕೊಡೋದು ಅವಳ ಸ್ವಾಭಿಮಾನಕ್ಕೆ ಅಡ್ಡ ಬರುತ್ತಿತ್ತು. ನರೇಶನನ್ನು ಅವರ ಮುಂದೆ ಬಿಚ್ಚಿಡುವುದು, ಸಣ್ಣವನನ್ನಾಗಿ ಮಾಡಿ ನಿಲ್ಲಿಸುವುದು ಅವಳಿಗೆ ಬೆಂಕಿಯನ್ನು ನುಂಗಿದ ಹಾಗೆ.

ನರೇಶ್ ಇತ್ತೀಚೆಗೆ ಅವಳ ಜೊತೆ ಮಾತನ್ನು ನಿಲ್ಲಿಸಿಬಿಟ್ಟಿದ್ದ ಸಿಹಿಯೂ ಇಲ್ಲ, ಕಹಿಯೂ ಇಲ್ಲ. ಅವನಿಗೆ ಜವಾಬ್ದಾರಿಗಳನ್ನು ಹೊರುವುದು ಬೇಡವಾಗಿತ್ತು. ಆದರೆ ಶಾಲ್ಮಲಿಯ ಮೇಲೆ ಅಧಿಕಾರ ಚಲಾಯಿಸುವ, ನಿಯಂತ್ರಿಸುವ ವಿಷಯದಲ್ಲಿ ಮಾತ್ರ ಸದಾ ಎಚ್ಚರವಾಗಿರುತ್ತಿದ್ದ. ತನ್ನ ಹತೋಟಿಯಲ್ಲಿದ್ದಾಳೆಂಬ ಹೆಮ್ಮೆಯ ನಂಬಿಕೆ ಅವನದಾಗಿತ್ತು. ಅವಳು ಅವನ ಹೆಂಡತಿ. ಅವನ ಆಜ್ಞೆಯಿಲ್ಲದೆ ಉಸಿರಾಡಬಾರದು. "ಅವಳ ಸ್ನೇಹಿತರಿಗೆ, ತಿಳಿದವರಿಗೆ ಹೇಳುತ್ತೇನೆ, ನಾನು ಅವಳ ಸಂಪಾದನೆಯಿಂದ ಬದುಕುತ್ತಿಲ್ಲ. ಅವಳೇ ತನಗೆ ಸಿಕ್ಕ ಸ್ವಾತಂತ್ರ್ಯವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾಳೆ. ಹರಟೆ, ಅದೂ ಇದೂ, ಸುತ್ತಾಟ ಅಂತ ಏನೇನೋ ಹೇಳಿ ನೀತಿಗೆಟ್ಟ ರೀತೀಲಿ ನಡೆದುಕೊಳ್ಳುತ್ತಿದ್ದಾಳೆ ಎಂದುಕೊಂಡ.

ಅದಕ್ಕೇ ಅವಳನ್ನು ಹಿಡಿತದಲ್ಲಿ ಇಟ್ಟುಕೊಳ್ಳಬೇಕು. ಅವನು ಹೇಳಿದ ಹಾಗೆ ಅವಳು ಕುಣೀಬೇಕು. ಅವನ ಅಪ್ಪಣೆ ಇಲ್ಲದೆ ಎಲ್ಲಿಗೂ ಹೋಗಬಾರದು. ಕಡೆಗೆ ಆಫೀಸಿಗೆ ಹೋಗುವುದಕ್ಕೂ ಅವನನ್ನು ಕೇಳಬೇಕು. ಅವಳಾಗಿ ಒಂದು ಹೆಜ್ಜೇನೂ ಇಡಬಾರದು. ಅವಳನ್ನು ಬೆಳೆಸಿದ್ದು. ಸ್ವಾತಂತ್ರ್ಯ ಕೊಟ್ಟಿದ್ದು. ಈ ಎತ್ತರಕ್ಕೆ ತಲುಪಿಸಿದ್ದು. ಎಲ್ಲಾ ತಾನೆ!...... ಶಾಲ್ಮಲಿಯ ಗಂಡ...... ನರೇಶ್ ಕುಮಾರ್...... ಸೆಕ್ಷನ್ ಆಫೀಸರ್. ತಾನೂ ಬೆಳೆಯಬಹುದಿತ್ತು. ಸ್ವಲ್ಪ ಪ್ರಯತ್ನ ಪಟ್ಟಿದ್ದರೆ ಯಾವಾಗಲೋ ಡೆಪ್ಯೂಟಿ ಸೆಕ್ರೆಟರಿ ಆಗಬಹುದಿತ್ತು......... ಒಂದು ಕ್ಷಣದಲ್ಲಿ ಸಾಧ್ಯ ಆಗ್ತಿತ್ತು....... ಶಾಲ್ಮಲಿ ನೋಡ್ತಾ ನಿಂತುಬಿಡಬೇಕು. ಆದರೆ ತನಗೆ ಹಿತ್ತಿಲ ಬಾಗಿಲ ಪ್ರವೇಶ ಇಷ್ಟ ಇಲ್ಲ' ಎಂಬೆಲ್ಲ ವಿಚಾರಗಳಿಗೆ ಗಟ್ಟಿಯಾಗಿ ಜೋತು ಬಿದ್ದು ತನ್ನನ್ನು ನಂಬಿಸುತ್ತಿದ್ದ!

ಇಂತಹ ಮನಃಸ್ಥಿತಿಯಲ್ಲಿದ್ದ ನರೇಶ್ ಶಾಲ್ಮಲಿಯ ಜೊತೆಯಲ್ಲಿ ಬಿಗಿದುಕೊಂಡೇ ಇರುತ್ತಿದ್ದ. ಯಾವುದಕ್ಕೂ ಅವಳನ್ನು ಕೇಳಬಾರದೆಂದು ನಿಗ್ರಹದಿಂದ ಇರತೊಡಗಿದ. ಇತ್ತೀಚೆಗೆ ಕಾರನ್ನೂ ತೆಗೆದುಕೊಂಡು ಹೋಗದೆ ತನ್ನ ಸ್ಕೂಟರ್‌ನಲ್ಲೇ ಹೋಗುತ್ತಿದ್ದ. ಆದರೆ ಈ ನಿಗ್ರಹ ಬಹಳ ದಿನ ಇರಲಿಲ್ಲ. ಮತ್ತೆ ಹಳೇ ದಾರೀಗೇ ಬಂದ. ಕಾರನ್ನು ತೆಗೆದುಕೊಂಡು ಹೋಗುತ್ತಿದ್ದುದೇ ಅಲ್ಲದೆ, ಚೆನ್ನಾಗಿ ಕುಡಿದ ಅಮಲಿನಲಿ ಕಾರನ್ನು ಎಲ್ಲೆಲ್ಲಿಗೋ ಢಿಕ್ಕಿ ಹೊಡೆಸಿ ತರುತ್ತಿದ್ದ. ಶಾಲ್ಮಲಿಗೆ ಕಾರಿಗಿಂತ ಹೆಚ್ಚಾಗಿ ಅವನು

ಸುರಕ್ಷಿತವಾಗಿ ಮನೆಗೆ ಬರಲಿ ಎನ್ನುವುದೇ ಹೆಚ್ಚಿನ ಹಾರೈಕೆಯಾಗಿತ್ತು. ಅವನು ಬರುವವರೆಗೆ ಗಾಭರಿಯಿಂದಲೇ ಉಸಿರಾಡುತ್ತಿದ್ದಳು.

ತನ್ನ ಲೆಕ್ಕಾಚಾರವೆಲ್ಲ ತಪ್ಪಾಗಿದೆ. ಎನಿಸುತ್ತಿತ್ತು. ಅಳುವುದು ದುಃಖಿಸುವುದು ಹಿಡಿಸುತ್ತಿರಲಿಲ್ಲ. ರೂಢಿಯ ನಂಬಿಕೆಗಳ ಬಗ್ಗೆ ಮನಸ್ಸು ರೋಸಿ ಹೋಗಿತ್ತು. ವಿಧಿ, ಹಣೆಬರಹಗಳಲ್ಲಿ ನಂಬಿಕೆ ಇರಲಿಲ್ಲ. ಇಲ್ಲಿವರೆಗೆ ನಡೆದದ್ದೆಲ್ಲವನ್ನು ವಿಭಿನ್ನ ದೃಷ್ಟಿಗಳಿಂದ ವಿಶ್ಲೇಷಿಸುತ್ತ ತನ್ನ ಸ್ಥಿತಿಯು ಬಗ್ಗೆ ಆಲೋಚಿಸುತ್ತಿದ್ದಳು. ಸಂಬಂಧಗಳನ್ನು ನಿರ್ವಹಿಸುವುದರಲ್ಲಿ, ಅರ್ಥಮಾಡಿಕೊಳ್ಳುವುದರಲ್ಲಿ ತಾನೇ ಎಲ್ಲಿಯಾದರೂ ಎಡವಿರಬಹುದೇ! ಎಂದುಕೊಂಡಳು.

ವ್ಯಾಕುಲ ಮನಸ್ಸು ಘಟನೆಗಳನ್ನು ಮೆಲುಕು ಹಾಕುತ್ತ ಕಾರಣಗಳನ್ನು ಹೆಕ್ಕಿ ತೆಗೆಯುತ್ತಿದ್ದಳು. ಆದರೂ ಮತ್ತೆ ಮತ್ತೆ ವ್ಯಾಕುಲತೆ ಅವಳನ್ನು ಕಾಡುತ್ತಿತ್ತು. ಬದುಕನ್ನು ಬಹಳ ಗಂಭಿರವಾಗಿಯೇ ಪರಿಗಣಿಸಿದ್ದಳು. ಆದರೂ ಸಂಬಂಧಗಳ ಸಮತೋಲನ ತಪ್ಪಿದ್ದೇಕೆ? ಬುನಾದಿಯೇ ಅಲ್ಲಾಡುವಂತೆ ಆದದ್ದೇಕೆ?.... ಬಹುಶಃ ತನ್ನ ಬಾಲಿಶತನವೇನಾದರೂ, ಎಂದಾದರೂ ಕಾರಣವಿರಬಹುದೆ' ಎಂದು ಯೋಚಿಸುತ್ತಿದ್ದಳು.

ಶಾಲ್ಮಲಿಯ ಹೆದರಿಕೆ ನಿಜ ಆಯ್ತು. ಶಾಲ್ಮಲಿಯ ವಿಚಾರವಾಗಿ ನರೇಶ್ ಏನೇನೋ ಸುದ್ದಿ ಹಬ್ಬಿಸಿದ್ದ. ತನ್ನ ಸಹೋದ್ಯೋಗಿಗಳ ಸ್ನೇಹಿತರು ಎಂಥವರು ಅನ್ನೋ ವಿಚಾರ ಈಗ ಅವಳಿಗೆ ತಿಳಿಯಿತು. ತನ್ನನ್ನು ಮಿಶ್ರಾ ಅವರು ಮನೆತನಕ ಬಿಟ್ಟ ಸಣ್ಣ ವಿಷಯ ರೆಕ್ಕೆ-ಪುಕ್ಕ ಹಚ್ಚಿಕೊಂಡು ಏನೇನೋ ಆಗಿ ಹಬ್ಬಿತ್ತು. ನರೇಶ್ ಬೇಕೆಂದೇ ಸಣ್ಣದನ್ನು ದೊಡ್ಡದು ಮಾಡಿದ್ದ, ಶಾಲ್ಮಲಿಗೆ ರಾತ್ರಿಗಳನ್ನು ಕಳೆಯುವುದೇ ಕಷ್ಟವೆನಿಸಿತು. ತನ್ನ ನೋವನ್ನು ಅರ್ಥಮಾಡಿಕೊಂಡು, ಹತ್ತಿರಕ್ಕೆ ಸೆಳೆದುಕೊಂಡು ಪ್ರೀತಿಯಿಂದ ನೇವರಿಸಿ, ಅಳುಕುವ ಮನಸ್ಸಿಗೆ ಧೈರ್ಯ ಭರವಸೆಯನ್ನು ತುಂಬುವವರು ಯಾರು? ಈ ಮನೆಯಲ್ಲಿ?

ಶಾಲ್ಮಲಿಯ ಮನಸ್ಸು ತೂಗುಯ್ಯಾಲೆಯಾಯಿತು. ನರೇಶ್ ಕ್ಷಣ ಕ್ಷಣಕ್ಕೂ ಬದಲಾಗುತ್ತಿದ್ದ ಅವನೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದೇ ತಿಳಿಯುತ್ತಿರಲಿಲ್ಲ. ಮನೆಗೆ ಯಾವಾಗ ಬರುತ್ತಾನೆಂಬುದೇ ತಿಳಿಯುತ್ತಿರಲಿಲ್ಲ. ಮನೆಗೆ ಯಾವಾಗ ಬರುತ್ತಾನೆಂಬುದೇ ಊಹಿಸಲಾಗುತ್ತಿರಲಿಲ್ಲ. ಅಡಿಗೆ ಮಾಡಿ ಅವನಿಗಾಗಿ ಕಾದ ದಿನ, ಊಟಕ್ಕೆ ಮನೆಗೆ ಬರದೆ, ಹೊರಗೆಲ್ಲೋ ಉಂಡು ಬರುತ್ತಿದ್ದ. ಅಡಿಗೆ ಮಾಡಲು ಬೇಸರವಾಗಿ, ಮತ್ತು ಹಸಿವಿಲ್ಲದ ಕಾರಣಕ್ಕಾಗಿ ಅಡಿಗೆ ಮಾಡದ ದಿನ ರಾತ್ರಿ ಹತ್ತು ಗಂಟೆ ಹೊತ್ತಲ್ಲಿ, ತನ್ನ ಗೆಳೆಯನನ್ನೂ ಜೊತೆಗೆ ಕರೆದು ತಂದು, ಊಟ ಬಡಿಸಲು ಹೇಳುತ್ತಿದ್ದ.

ಎಲ್ಲಾದರೂ ಸುತ್ತಾಡಿ ಬಂದರೆ ಬದಲಾವಣೆ ಆಗಬಹುದೂಂತ ಒಂದು ಸಲ ನರೇಶನನ್ನು ಕೇಳಿದಳು –

"ನಾನು ಮೂರುದಿನಕ್ಕೆ ಷಿಲ್ಲಾಂಗ್ ಹೋಗಬೇಕಾಗಿದೆ. ಜಾಗ ತುಂಬ ಚೆನ್ನಾಗಿದೆಯಂತೂ ನೀನೂ ಜತೆಗೆ ಬಾ ಹೋಗೋಣ" ಪಲ್ಯ ಬಡಿಸುತ್ತಿದ್ದಳು.

"ನಾನು ಎಲ್ಲಿಗೂ ಬರುವುದಿಲ್ಲ. ಈ ದಿಲ್ಲೀನೇ ನನಗೆ ತುಂಬ ಚೆನ್ನಾಗಿದೆ. ಇದೇ ಸಾಕು". ನೇರವಾಗಿ ನಿರಾಕರಿಸಿದ ನರೇಶ್.

"ನಾನು ಶನಿವಾರದಷ್ಟು ಹೊತ್ತಿಗೆ ವಾಪಸ್ ಬಂದು ಬಿಡ್ತೀನಿ." ನರೇಶನ ಕಡೆಗೆ ಪಲ್ಯಾ ಚಪಾತಿಯನ್ನು ನೀಡುತ್ತ ಹೇಳಿದಳು, ಶಾಲ್ಮಲಿ.

"ನೀನು ಎಲ್ಲೂ ಹೋಗಬೇಕಿಲ್ಲ, ಶಾಲ್ಮಲಿ". ನರೇಶ್ ಶಾಸಿಸುವ ದನಿಯಲ್ಲಿ ಹೇಳಿದ.

"ಯಾಕೆ ಹೋಗಬಾರದು?" ಗಾಭರಿಯಿಂದ ಕೇಳಿದಳು.

"ನಾನು ಹೇಳಿದ್ದನ್ನು ನೀನು ಪಾಲಿಸಬೇಕು. ಅಷ್ಟೆ" – ಕಠೋರವಾಗಿ ಹೇಳಿದ.

"ಇದು ಕೆಲಸ. ನನ್ನ ವೃತ್ತಿ. ಕಾರಣ ಇಲ್ಲದೆ ಮನೆಯಲ್ಲಿ ಕುಳಿತುಕೊಳ್ಳೋಕೆ ಆಗೊಲ್ಲ." ಸಮಾಧಾನದಿಂದ ಉತ್ತರಿಸಿದಳು.

"ಕಾರಣ ಗೀರಣ ಏನೂ ಇಲ್ಲ. ನನ್ನ ಗಂಡನಿಗೆ ಇಷ್ಟ ಇಲ್ಲ. ಈ ರೀತಿ ಟೂರ್ ಗೀರ್ ಅಂತ ಹೋಗೋದಕ್ಕೆ ಬಿಡೊಲ್ಲ ಅಂತ ಹೇಳಿಬಿಡು. ಅರ್ಥವಾಯಿತಾ! ಮನೆ ನೋಡಿದರೆ ಹಾಳು ಬಿದ್ದಿದೆ" ನರೇಶ್ ಅಸಹನೆಯಿಂದ ಹೇಳಿದ.

"ಎಲ್ಲ ಹೆಂಗಸರು ಈ ಥರದ ಕಾರಣಗಳನ್ನು ಹೇಳ್ತಾ ಹೋದರೆ ಮುಗೀತು! ಇದು ಗಂಡನ ಕೆಲಸ ಅಲ್ಲ ಸರಕಾರಿ ಕೆಲಸ, ಅದನ್ನು ನಿರ್ಲಕ್ಷಿಸುವುದು....." ಶಾಲ್ಮಲಿ ಮಾತಾಡಲು ತೊಡಗಿದಳು.

"ಹೂಂ! ಹಾಗಾದರೆ ಬಹಳ ಸಲೀಸಾಗಿ ನನ್ನನ್ನು ಅವಹೇಳನ ಮಾಡಬಲ್ಲೆ. ನಾನು ಈ ಮನೇಲಿ ಎಲ್ಲರಿಗಿಂತ ಉಪೇಕ್ಷಿತವಸ್ತು! ಯಾರಿಗೂ ಬೇಕಿಲ್ಲ" ಮಧ್ಯದಲ್ಲಿಯೇ ಚೀರಿದ.

"ಎಂಥ ಮಾತಾಡ್ತೀ ನರೇಶ್?" ಶಾಲ್ಮಲಿ ದಿಗ್ಭ್ರಾಂತಳಾದಳು.

"ಗಂಡನ ಅಧಿಕಾರ ಏನೂಂತ ಕೇವಲ ಧರ್ಮಗ್ರಂಥಗಳಲ್ಲಿ ಮಾತ್ರ ಬರೆದಿಲ್ಲ. ನಿನ್ನ ಸಂವಿಧಾನದಲ್ಲೂ ಬರೆದಿದೆ. ನೀನು ಚಾಕರಿ ಮಾಡುತ್ತಿರುವ ಸರಕಾರದ ಮೂಲಕವೇ ಬರೆಯಲಾಗಿದೆ." ಕೈಯಲ್ಲಿ ಹಿಡಿದಿದ್ದ ತುತ್ತನ್ನು ಪ್ಲೇಟಿನಲ್ಲಿ ಎಸೆದ.

"ಧರ್ಮ; ಸಂವಿಧಾನವನ್ನು ಅಡ್ಡ ಇಟ್ಟುಕೊಳ್ಳದೆಯೇ ಮಾತಾಡುವ ಅಧಿಕಾರವನ್ನು ನಿನಗೆ ನಾನು ಕೊಟ್ಟಿದ್ದೇನೆ", ಭರವಸೆ ತುಂಬಿಸುವ ದೃಷ್ಟಿಯಿಂದ ಅವನ ಕಡೆ ನೋಡಿದಳು.

"ಆಯ್ತು ನಿನ್ನ ನಂಬಿಕೆ, ಭರವಸೆಗಳನ್ನು ನಿರಾಶೆಗೊಳಿಸುವುದಿಲ್ಲ. ಧರ್ಮ, ಸಂವಿಧಾನ ಬಿಟ್ಟು ಹೇಳ್ತಾ ಇದ್ದೀನಿ, 'ನನ್ನ ಆಜ್ಞೆಯಿಲ್ಲದೆ ನೀನು ಎಲ್ಲಿಯೂ ಹೋಗುವ ಹಾಗಿಲ್ಲ". ನರೇಶ್ ಕ್ರೋಧದಿಂದ ಹೇಳಿದ.

"ಅಂದ್ರೆ?" ಶಾಲ್ಮಲಿಗೆ ನರೇಶನ ಮಾತನ್ನು ಕೇಳಿ ಒಮ್ಮೆಲೇ ನಗು ಬಂತು. "ನಿನ್ನ ವಿಚಾರದಲ್ಲಿ ತೀರ್ಮಾನ ತಗೊಳ್ಳೋಕೆ ನೀನು ಯಾರು? ನನ್ನ ಇಷ್ಟ ಇಲ್ಲದೆ ನೀನು ನಿಮ್ಮ ಮನೆಗೂ ಹೋಗುವ ಹಾಗಿಲ್ಲ. ಊರು ಬಿಟ್ಟೂ ಹೋಗುವ ಹಾಗಿಲ್ಲ." ನರೇಶ ಜೋರಾಗಿ ಕುರ್ಚಿಯನ್ನು ಹಿಂದಕ್ಕೆ ಎಳೆದ.

"ಆಫೀಸಿಗೆ?" ಶಾಲ್ಮಲಿಯ ಧ್ವನಿ ತೀಕ್ಷ್ಣವಾಗಿತ್ತು.

"ಆಫೀಸಿನಿಂದ ಮನೆ, ಮನೆಯಿಂಧ ಆಫೀಸು, ಅಷ್ಟೆ! ತಿಳಿಯಿತಾ?" ಪ್ಲೇಟ್‌ನ ಮೇಲೆ ಚಮಚೆಯನ್ನು ಜೋರಾಗಿ ಕುಕ್ಕಿ ಕಿರುಚಿದ. ಬಿಸಿ ಬಿಸಿ ಫುಲ್ಕಾ ತಂದಿದ್ದ ಬೇಲಾ, ಬಂದವಳೇ ಹಿಂದುರುಗಿದಳು. ಪಾಯಸವನ್ನು ತರುತ್ತಿದ್ದ ಕಿಶೋರಿಲಾಲ್ ಹಿಂದಿನ ಬಾಗಿಲಿಂದ ಪಡಸಾಲೆಗೆ ಬಂದುಬಿಟ್ಟ.

"ಅಸಂಭವ". ಶಾಲ್ಮಲಿ ಅವಿಶ್ವಾಸದೊಂದಿಗೆ ಹೇಳಿದಳು.

"ಇದೇ ಈ ಮನೆಯಲ್ಲಿ ಸಂಭವ!" ನರೇಶನ ಧ್ವನಿ ಚೀರುವಂತಿತ್ತು. "ಓಹ್!" ಶಾಲ್ಮಲಿಯ ಮುಖ ದುಃಖ ಕೋಪಗಳಿಂದ ಕೆಂಪಾಯಿತು. ಬೆವರಿನ ಹನಿಗಳಿಂದ ತೊಯ್ದು ಹೋಯಿತು.

ಅವಮಾನದ ಪರಾಕಾಷ್ಠೆ!..... ಶಾಲ್ಮಲಿಯ ತಲೆ ತಿರುಗತೊಡಗಿತು.

"ನನ್ನ ಹೆಂಡತಿ ಅನ್ನೋದನ್ನು ಮರೀಬೇಡ!" ಭುಜ ಹಾರಿಸಿ ಕೋಣೆಯಿಂದ ಹೊರಟು ಹೋದ.

"ನಿನ್ನ ಅಧಿಕಾರದ ಅಕೌಂಟ್‌ನಲ್ಲಿ ಹೆಂಡತಿಯ ಅವಮಾನ, ತಿರಸ್ಕಾರಗಳಷ್ಟೇ ಉಳಿದಿರೋದು?"

ಶಾಲ್ಮಲಿಯ ಬಾಯಿಂದ ಹೊರಟಿತು.

ನರೇಶ್ ಹೊರಟು ಹೋಗಿದ್ದ. ಶಾಲ್ಮಲಿ ಕುರ್ಚಿಯಲ್ಲಿ ಜಡವಾಗಿ ಕುಳಿತಳು. ಇವತ್ತು ಕೆಲಸದವರ ಮುಂದೆ ಅವರಿಬ್ಬರ ನಡುವಿನ ಸಂಬಂಧದ ಪರದೆ ಜಾಳು ಜಾಳಾಗಿ ಹೋಗಿತ್ತು. ನರೇಶನ ಕಣ್ಣುಗಳಲ್ಲಿ ಕಂಬನಿ ಬತ್ತಿ ಹೋಗಿತ್ತು. ಅವನ ರಕ್ತ ಬಿಳಿಯಾಯಿತು. ಈ ಯುಗವನ್ನು ಶಿಲಾಯುಗದೊಂದಿಗೆ ತೂಗುತ್ತಾನೆ? ಪ್ರಪಂಚ ಎಲ್ಲಿಂದ ಎಲ್ಲಿಗೆ ತಲುಪಿದೆ. ಆದರೆ ಪುರುಷರ ಕಲ್ಪನೆಯಲ್ಲಿ ಬೇರು ಬಿಟ್ಟಿರುವ ನಾರಿಯ ಚಿತ್ರ ಎಳ್ಳಿನಷ್ಟಾದರೂ ಬದಲಾಗಿದೆಯೇ!

ಶಾಲ್ಮಲಿ ತುಂಬಿದ ಗ್ಲಾಸಿನ ನೀರನ್ನೆಲ್ಲ ಗಟಗಟನೆ ಕುಡಿದಳು. ತನ್ನನ್ನು ಸಂಯಮಿಸಿಕೊಂಡಳು. ಮನಸ್ಸಿನಲ್ಲಿಯೇ ಏನನ್ನೋ ನಿಶ್ಚಯಿಸಿ ಕುರ್ಚಿಯಿಂದ ಎದ್ದಳು. ಸಿಂಕ್ನಲ್ಲಿ ಹೋಗಿ ಕೈ ತೊಳೆದಳು. ಮಾಮೂಲಿನಂತೆ ಬೇಲಾಳನ್ನು ಕರೆದು ನಾಳೆ ಊಟಕ್ಕೆ ಬೇಕಾದುದೆಲ್ಲವನ್ನೂ ಹೇಳಿದಳು. ಮೇಜಿನ ಮೇಲಿಟ್ಟಿದ್ದ ಡಬ್ಬಿಯಿಂದ ಸೋಂಫನ್ನು ತೆಗೆದು ಬಾಯಿಗೆ ಹಾಕಿ ಕೊಂಡಳು. ಪಡಸಾಲೆಗೆ ಹೋಗಿ ಟಿ.ವಿ. ಹಾಕಿ ಕುಳಿತಳು.

ಬೇಲಾ ಹೊರಟು ಹೋದ ಮೇಲೆ, ಬಾಗಿಲು ಹಾಕಿಕೊಂಡು ಬಂದು ಬೆಡ್ ರೂಂ ಕಡೆಗೆ ನಡೆದಳು. ನರೇಶ್ ಫೈಲುಗಳಲ್ಲಿ ಏನನ್ನೋ ಹುಡುಕುತ್ತಿದ್ದ. ಪುಸ್ತಕಗಳು, ಡಬ್ಬಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಶಾಲ್ಮಲಿ ಏನನ್ನೂ ವಿಚಾರಿಸದೆ ಹೋಗಿ ಹಾಸಿಗೆ ಮೇಲೆ ಬಿದ್ದುಕೊಂಡಳು. ಪಕ್ಕಕ್ಕೆ ಹೊರಳಿ ಕಣ್ಣು ಮುಚ್ಚಿದಳು. ನರೇಶ್ ವಸ್ತುಗಳನ್ನು ಆ ಕಡೆ ಈ ಕಡೆ ಮಾಡುತ್ತ ಡಬ್ಬಿಗಳನ್ನು ತೆಗೆಯುತ್ತ ಮುಚ್ಚುತ್ತಾ ಕುಳಿತಿದ್ದ. ಉಸಿರು ಬಿಗಿ ಹಿಡಿದು ಮಲಗಿದ್ದಳು. ಯಾರೊಬ್ಬರೂ ಮಾತಾಡಲಿಲ್ಲ. ಸಾಕಷ್ಟು ಹೊತ್ತು ಮೌನವೇ ಹಬ್ಬಿತ್ತು.

"ಈ ಕಡೆ ತಿರುಗು!" ನರೇಶನ ಬೆರಳುಗಳು ಶಾಲ್ಮಲಿಯ ಬಾಹುಗಳನ್ನು ಸ್ಪರ್ಶಿಸಿತು.

"ನನಗೆ ಹೀಗೇ ಆರಾಮವಾಗಿದೆ." ಶಾಲ್ಮಲಿ ಸಹಜವಾಗಿಯೇ ಉತ್ತರಿಸಿದಳು. ತನ್ನ ಭುಜವನ್ನು ಹಿಂದಕ್ಕೆಳೆದುಕೊಂಡಳು. ನರೇಶನ ಸ್ಪರ್ಷವೂ ಅಸಹ್ಯವೆನಿಸಿತು.

"ಇಲ್ಲೂ ಕೂಡಾ ನಾನು ಅಧಿಕಾರ ಚಲಾಯಿಸಬಲ್ಲೆ. ಪ್ರೀತಿಯಿಂದಲೋ, ಬಲವಂತದಿಂದಲೋ, ನನಗೆ ಹೇಗೆ ಇಷ್ಟ ಆದರೆ ಹಾಗೆ. ನೀನು ಕೋಪ ಮಾಡ್ಕೋಳ್ಳೋದಾಗಲೀ, ಹಠ ಮಾಡೋದಾಗಲೀ ವ್ಯರ್ಥ". ನರೇಶ್ ವ್ಯಂಗ್ಯದಿಂದ ಹೇಳಿದ.

"ಬಿಡು!" ಶಾಲ್ಮಲಿ ಕೊಸರಿಕೊಂಡಳು. ಅವನಿಂದ ಜಾರಿಕೊಂಡು ಹಾಸಿಗೆ ಬಿಟ್ಟು ಎದ್ದಳು.

"ನಿನಗೆ ಗೊತ್ತಾಗಬೇಕೇನು, ಪುರುಷನ ದೃಷ್ಟಿಯಲ್ಲಿ ಸ್ತ್ರೀ ಏನೂಂತ?"

ಭೋಗದ ವಸ್ತು! ಅದೇ ಅವಳ ಗುರುತು. ಆದ್ದರಿಂದ ನೀನು ಹೆಣ್ಣು ಹೆಣ್ಣಿನ ಥರಾನೇ ಇರು. ಅದರಲ್ಲೇ ನಿನ್ನ ಉದ್ಧಾರ, ಮತ್ತು ಈ ಮನೆಯ ಸುಖ, ಕ್ಷೇಮಗಳು ಇರೋದು."

ನರೇಶನ ಮಾತುಗಳು ಶಾಲ್ಮಲಿಗೆ ತೀರಾ 'ಅಗ್ಗ' ಎನಿಸಿತು. ತನ್ನ ದೇಹಕ್ಕೆ ಯಾರೋ ಬೆಂಕಿ ಹಚ್ಚಿದಂತೆನಿಸಿತು. ಕೋಪದ ಲಾವಾ ಬೆಕ್ಕಿನ ಹಾಗೆ ಸರ್ರಂತ ತಿರುಗಿ

ತನ್ನ ಉಗುರು ಮತ್ತು ಹಲ್ಲುಗಳಿಂದ ನರೇಶನನ್ನು ಪರಚಿದಳು. ನರೇಶ ತನ್ನನ್ನು ರಕ್ಷಿಸಿಕೊಳ್ಳುತ್ತಿದ್ದಂತೆಯೇ ಅವನನ್ನು ಪಕ್ಕಕ್ಕೆ ದೂಡಿ ಒಂದೇ ನೆಗೆತಕ್ಕೆ ಬಾತ್ ರೂಂ ಒಳಗೆ ಸೇರಿ ಚಿಲಕ ಹಾಕಿಕೊಂಡಳು.

ಮೊಟ್ಟ ಮೊದಲ ಸಲ ಶಾಲ್ಮಲಿ ತನ್ನ ವಿವೇಕವನ್ನು ಕಳೆದುಕೊಂಡಿದ್ದಳು. ಎದೆಯಲ್ಲಿ ಹೊರಡುತ್ತಿದ್ದ ಚೀತ್ಕಾರವನ್ನು ಅದುಮಿಟ್ಟು, ಹುಚ್ಚಿಯ ರೀತಿಯಲ್ಲಿ ತನ್ನ ತಲೆಯನ್ನು ಬಾತ್ ರೂಂ ಗೋಡೆಗೆ ಗುದ್ದಿದಳು. ಅಸಹಾಯಕತೆಯಿಂದ ತತ್ತರಿಸುವ ಕೈಗಳನ್ನು ಬಿಸಾಡಿದಳು. ತನ್ನನ್ನು ಅಂದು ಸ್ತಿಮಿತದಲ್ಲಿ ಇರಿಸಿಕೊಳ್ಳದಿದ್ದರೆ, ಅಂದು ಏನಾದರೂ ಅನಾಹುತ ಸಂಭವಿಸುತ್ತಿತ್ತು. ಉಸಿರಾಟದ ನಡುವೆ ಸಂತೋಷದ ಅಲೆಯೊಂದು ಎದ್ದು ಹೊತ್ತಿಕೊಂಡು ಉರಿಯುತ್ತಿದ್ದ ನರಗಳ ಮೇಲೆ ನೀರೆರಚಿ ಹಾದುಹೋಯಿತು.

ಶಾಲ್ಮಲಿ......! ಬಾಗಿಲು ತೆಗಿ!..... ಒಂದು ಗಂಟೆಯಾದ ಮೇಲೆ ನರೇಶ್ ತನ್ನ ಮುಖ ಮತ್ತು ಕೈಗಳ ಮೇಲೆ ಆದ ಗಾಯಗಳಿಗೆ ಬ್ಯಾಂಡೇಜ್ ಹಾಕಿದ ಮೇಲೆ ನೆನಪಿಗೆ ಬಂತು. ಶಾಲ್ಮಲಿ ಬಾತ್ ರೂಂ ಒಳಗೆ ಸೇರಿ ಏನು ಮಾಡುತ್ತಿರಬಹುದೂಂತ?.... ಯೋಚಿಸಿದ.

ಸಾಕಷ್ಟು ಹೊತ್ತಾಯಿತು. ಒಳಗಿನಿಂದ ಯಾವ ಸದ್ದೂ ಬರಲಿಲ್ಲ. ನರೇಶ್‌ಗೆ ಗಾಭರಿಯಾಯಿತು. ಚಿಂತೆಯಿಂದ ಆ ರೂಮಿಂದ ಈ ರೂಮಿಗೆ ಈ ರೂಮಿಂದ ಆ ರೂಮಿಗೆ ಓಡಾಡಿದ. ಭಯಂಕರ ಆಲೋಚನೆಗಳು ಹೊಳೆದವು. ಸಂದೇಹದಿಂದ ಅವನ ಎದೆ ಡವಗುಟ್ಟತೊಡಗಿತು. ಹಣೆ ಮೇಲೆ ಬೆವರು ಮೂಡಿತು. ಒಮ್ಮೆಲೇ ಉತ್ತೇಜಿತನಾಗಿ ಎರಡೂ ಕೈಗಳಿಂದ ಬಾಗಿಲನ್ನು ಗುದ್ದಿ ಚೀರಿದ, ನೋಡು ಶಾಲೂ, ನೀನು ಬಾಗಿಲು ತೆಗೀದಿದ್ದರೆ, ಒದ್ದು ಒದ್ದು ಬಾಗಿಲು ಮುರೀತೀನಿ! ಶಾಲ್ಮಲಿ ನಿಶ್ಚಲಳಾಗಿ, ಚೇತನಾ ಶೂನ್ಯಳಾಗಿ ಮೊಣಕಾಲ ಮೇಲೆ ತಲೆಯಿಟ್ಟು ಕುಳಿತಿದ್ದಳು. ರೋಮ ರೋಮದಲ್ಲೂ ಜಿಗುಪ್ಸೆ ತೊಟ್ಟಿಡುತ್ತಿತ್ತು. ಬಾಯಿಂದ ಮಾತು ಹೊರಡಲಿಲ್ಲ. ದೇಹದ ಯಾವೊಂದು ಅಂಗವನ್ನೂ ಕದಲಿಸಲು ಮನಸ್ಸಾಗಲಿಲ್ಲ.

"ಈ ಹೆಂಗಸು ಏನಾದರೂ ಮಾಡಿಕೊಂಡಳೋ ಹೇಗೆ!"

ಅಯ್ಯೋ...... ಅಯ್ಯೋ.............ಸಿಕ್ಕಿ ಬಿದ್ದೆ....... ಸಿಕ್ಕಿ ಬಿದ್ದೆ" ಗಾಭರಿಯಿಂದ ಬಾಗಿಲು ಬಡಿಯುತ್ತಾ ಹೇಳಿದ.

ನಿಶ್ಚಲವಾಗಿ ಬಿದ್ದಿದ್ದ ಶಾಲ್ಮಲಿಯ ದೇಹದಲ್ಲಿ ವಿದ್ಯುತ್ ಸಂಚಾರವಾಯಿತು. ತಟ್ಟೆಂದು ಎದ್ದು ಬಾಗಿಲು ತೆರೆದು ತಿರಸ್ಕಾರವನ್ನು ಉಗುಳುತ್ತಾ ನರೇಶನನ್ನು ದುರುಗುಟ್ಟಿ ನೋಡಿದಳು.

"ನನ್ನನ್ನು, ಇಷ್ಟೊಂದು ಹೇಡಿ ಅಂತ ತಿಳ್ಕೊಂಡೆಯೇನು?"

"ಶಾಲೂ..... ನಾನು.............. ತಮಾಶೆ ಮಾಡ್ತಿದ್ದೆ. ನಾನು ನಿನ್ನ ಜೊತೆ ತಮಾಶೆ ಮಾಡೋದಕ್ಕೂ....." ಶಾಲ್ಮಲಿಗೆ ಏನೂ ಆಗದೆ ಸುರಕ್ಷಿತಳಾಗಿ ನಿಂತಿರುವುದನ್ನು ನೋಡಿದಾಗ ಸಂತೋಷದಿಂದ ಉಸಿರಾಡಿದ. ಮೃದುವಾದ ಧ್ವನಿಯಲ್ಲಿ ಮಾತನಾಡುತ್ತಾ, ಶಾಲ್ಮಲಿಯ ತೋಳನ್ನು ಎದೆಗಪ್ಪಿಕೊಳ್ಳುವಂತೆ ಹಿಡಿದ.

"ಕೈ ಹಾಕಬೇಡ ನನ್ನ ಮೇಲೆ" – ಗರ್ಜಿಸಿದಳು.

ಶಾಲ್ಮಲಿಯ ಈ ಉಗ್ರಾವತಾರ ನರೇಶನಿಗೆ ಹೊಸದಾಗಿತ್ತು. ಸಂಕೋಚದಿಂದ ಹಿಂದೆ ಸರಿದ. ಶಾಲ್ಮಲಿ ನೇರವಾಗಿ ಹೋಗಿ ಹಾಸಿಗೆ ಮೇಲೆ ಕುಳಿತಳು. ನರೇಶ್ ಅವಳ ಬಳಿಗೆ ಹೋಗಲಿಲ್ಲ. ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಕುಳಿತ. ಶಾಲ್ಮಲಿಯ ಹಣೆ ಉರಿಯುತ್ತಿತ್ತು.

ಇದೂ ಒಂದು ಜೀವನವೇ! ಪ್ರತಿಸಲವೂ ಸ್ಮಶಾನದವರೆಗೆ ಕೊಂಡೊಯ್ದು, ಜೀವ ಸುಟ್ಟು ಹೋಗುವುದಕ್ಕೆ ಮೊದಲೇ ಚಿತೆಯಿಂದ ಎಳೆದು ಕೆಳಗೆ ಹಾಕುವುದು, ಬಲವಂತ ಜೀವದಾನ ಮಾಡುವುದು ಪೂರ್ತಿ ಸಾಯೋಕೂ ಬಿಡೊಲ್ಲ ಬದುಕೋಕೂ ಬಿಡೊಲ್ಲ. ಬದುಕು ಮತ್ತು ಸಾವಿನ ನಡುವೆ, ಒಮ್ಮೊಮ್ಮೆ ಅಂತರ ಅಷ್ಟಾಗಿ ಇರುವುದೇ ಇಲ್ಲ! ಇವತ್ತು ಅವಳಿಗೆ ತಾನೇ ಒಂದು ಸ್ಮಶಾನದಂತೆ, ಅದರಲ್ಲಿ ಅವಳ ವಿಚಾರಗಳ, ಭಾವನೆಗಳ ದಹನ ಸಂಸ್ಕಾರ ನಡೆಯುತ್ತಿರುವಂತೆ ಅನಿಸತೊಡಗಿದೆ. ಶಾಲ್ಮಲಿ ಹಾಸಿಗೆ ಮೇಲೆ ಮಲಗಿ, ಚಾದರವನ್ನು ಮುಖದವರೆಗೆ ಎಳೆದುಕೊಂಡಳು. ಕಣ್ಣಲ್ಲಿ ನಿದ್ದೆ ಎಲ್ಲಿ!....... ಅಲ್ಲಿ ಭವಿಷ್ಯದ ಭಯಾನಕ ಕತ್ತಲು ಪಸರಿಸಿತ್ತು. ಆ ಕತ್ತಲಲ್ಲಿ ಮುಳುಗುತ್ತಿದ್ದ ಶಾಲ್ಮಲಿಯ ಅಸಹಾಯಕ ದೇಹದೊಳಗೆ ಕುಳಿತಿದ್ದ ಶಾಲ್ಮಲಿಗೆ ಈ ಸಮರ್ಪಣೆ ಅಸಹನೀಯವೆನಿಸಿತು. ಅದಕ್ಕೇ ಅವಳು ಮೂರ್ಛಿತಳಾಗಿ ಬಿದ್ದಿದ್ದ ಶಾಲ್ಮಲಿಯನ್ನು ಹುರಿದುಂಬಿಸುತ್ತಾ ಎಚ್ಚರಿಸತೊಡಗಿದಳು." ಏಳು ಶಾಲ್ಮಲಿ..... ಏಳು.... ಎದ್ದೇಳು? ಏಕೆ ಮಲಗಿರುವೆ? ಎಲ್ಲಿ ಅಡಗಿರುವೆ? ಇಷ್ಟೆಲ್ಲಾ ಅವಮಾನವನ್ನು ಸಹಿಸಿಕೊಂಡಿದ್ದಕ್ಕೆ ನಿನಗೆ ಸಿಗುತ್ತಿರುವುದೇನು? ಸಾಮಾಜಿಕ ಪ್ರತಿಷ್ಠೆ? ಸಂಬಂಧಗಳ ಗೌರವ? ಪರಿವಾರದ ಮರ್ಯಾದೆ? ಮೇಲೆ ಸೂರೇ ಇಲ್ಲದ ಮನೆಯಲ್ಲಿ ಗೋಡೆಗಳ ನಡುವೆ ಯಾವ ಭದ್ರತೆಯ ಭ್ರಮೆಯಲ್ಲಿ ಕುಳಿತಿರುವಿ?" ಮಲಗಿದ್ದ ಭಾವನೆಗಳನ್ನು ಬಡಿದೆಬ್ಬಿಸಿದಳು. ಮತ್ತೊಮ್ಮೆ ಉತ್ತೇಜನಗೊಂಡಳು. ಹೊದಿಕೆಯನ್ನು ಕಿತ್ತೆಸೆದು ವ್ಯಾಕುಲತೆಯಿಂದ ಎದ್ದು ಪಡಸಾಲೆಗೆ ಬಂದಳು. ದೀಪ ಹಚ್ಚಿದಳು. ಒಮ್ಮೆ ಸುತ್ತ ಕಣ್ಣಾಡಿಸಿದಳು. ಮತ್ತೆ ಚಿಂತೆಯಿಂದ ಅಡ್ಡಾಡತೊಡಗಿದಳು.

ಎಂಟು ವರ್ಷಗಳಲ್ಲಿ ನರೇಶ್ ಶಾಲ್ಮಲಿಯ ದೃಷ್ಟಿಯಲ್ಲಿ ಹಲವು ಬಾರಿ ಕೀಳೆನಿಸಿದ್ದ. ಆದರೆ ಪ್ರತಿಸಲವೂ ಶಾಲ್ಮಲಿ ಬಿದ್ದ ನರೇಶನನ್ನು ಮತ್ತೆ ಎತ್ತಿಕೊಂಡು ತನ್ನ ದೃಷ್ಟಿಯಲ್ಲಿ

ಅಲಂಕರಿಸಿ ಇಟ್ಟುಕೊಂಡಿದ್ದಳು. ಆದರೆ ಈ ದಿನ ನರೇಶ್ ಶಾಲ್ಮಲಿಯ ದೃಷ್ಟಿಯಲ್ಲಿ ಅಧಃ ಪಾತಾಳಕ್ಕೆ ಇಳಿದಿದ್ದ. ಅಲ್ಲಿಂದ ಅವನನ್ನು ಎಳೆದು ಕೊಳ್ಳುವುದು ಶಾಲ್ಮಲಿಗೆ ಒಪ್ಪಿಗೆಯಾಗಲಿಲ್ಲ. ಎಲ್ಲಿಬಿದ್ದ ಎಲ್ಲಿ ಹೋದ, ಅವಳಿಗೆ ಗೊತ್ತಿಲ್ಲ.

* * *

ಇಂಡಿಯಾ ಇಂಟರ್ ನ್ಯಾಷನಲ್ ಸೆಂಟರ್ ತಲುಪಿದಾಗ ಗಡಿಯಾರ ನೋಡಿಕೊಂಡಳು. ಒಂಬತ್ತು ಇಪ್ಪತ್ತೈದಾಗಿತ್ತು. ಬ್ಯಾಗ್ ಎತ್ತಿಕೊಂಡಳು ಕಾರ್ ಲಾಕ್ ಮಾಡಿ ಮುಂದೆ ಹೋದಳು. ಜೋರಾಗಿ ಗಾಳಿ ಬೀಸಿತು. ಸಂಪಿಗೆ ಹೂಗಳು ಗೊಂಚಲಿನಿಂದ ಕೆಳಗೆ ಬಿದ್ದವು. ಎತ್ತಿಟ್ಟ ಕಾಲನ್ನು ಹಿಂದಕ್ಕೆ ತೆಗೆದುಕೊಂಡಳು. ಒಂದು ಕ್ಷಣ ನಿಂತು ಬಿಟ್ಟಳು. ಇನ್ನೊಂದು ಕ್ಷಣ ತುಳಿದೇ ಬಿಡುತ್ತಿದ್ದೆ ಅಂದುಕೊಂಡಳು. ಅಷ್ಟರಲ್ಲಿ ಇನ್ನೊಮ್ಮೆ ಜೋರಾಗಿ ಗಾಳಿ ಬೀಸಿ ಚದುರಿಬಿದ್ದ ಹೂಗಳೆಲ್ಲ ಒಂದೆಡೆ ಒಟ್ಟಾದವು. ಮುಂದೆ ನಡೆದು ಬಾಗಿಲು ತೆಗೆದಳು. ಗುಂಪು ಸಭಾಂಗಣದ ಬಾಗಿಲು ಕಡೆ ಬರುತ್ತಿತ್ತು. ಭುಜದ ಮೇಲಿಂದ ಜಾರುತ್ತಿದ್ದ ಸೆರಗನ್ನು ಸರಿಪಡಿಸಿಕೊಂಡಳು. ಒಳಗೆ ಹೋಗುತ್ತಿದ್ದ ಜನರೊಂದಿಗೆ ಸೇರಿದಳು.

ಒಳಗೆ ಗುರುತು ಪರಿಚಯದ ಮುಖಗಳಿದ್ದವು. ಎಲ್ಲರಿಗೂ ನಮಸ್ಕಾರ ಹೇಳುತ್ತ ಪ್ರತಿ ನಮಸ್ಕಾರಗಳನ್ನೂ ಸ್ವೀಕರಿಸುತ್ತಾ ಸ್ಟೇಜ್ ಮೇಲೆ ಹೋಗಿ ಕುಳಿತುಕೊಂಡಳು. ಮಂತ್ರಿಗಳೂ ಸರಿಯಾದ ಸಮಯಕ್ಕೇ ಬಂದಿದ್ದರು. ಸೆಮಿನಾರ್‌ನ ಔಪಚಾರಿಕ ಚಟುವಟಿಕೆಗಳು ಆರಂಭವಾದವು. ಮಂತ್ರಿಗಳು ಸೆಮಿನಾರ್‌ನ ಉದ್ಘಾಟನೆ ಮಾಡಿದರು. "ಅರಣ್ಯ ಸಂಪತ್ತು ಮತ್ತು ಸಾಮಾಜಿಕ ವಿಕಾಸ"" ಎಂಬ ವಿಷಯದ ಮೇಲೆ ವಿಶ್ವ ವಿದ್ಯಾಲಯ ಮತ್ತು ಪರ್ಯಾವರಣ ವಿಭಾಗಗಳು ಸಂಯುಕ್ತವಾಗಿ ಈ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ಪ್ರಸ್ತುತ ಶಾಲ್ಮಲಿ ಈ ಪರ್ಯಾವರಣ ವಿಭಾಗದಲ್ಲಿ ಡೈರೆಕ್ಟರ್ ಪದವಿಯಲ್ಲಿದ್ದಳು ಮತ್ತು ಇದರಲ್ಲಿ ಅವಳ ಸಹಯೋಗ ವಿಶೇಷವಾಗಿತ್ತು. ಅದಕ್ಕಾಗಿಯೇ ಅವಳಿಗೆ ವಿಶೇಷ ಗೌರವ, ಮರ್ಯಾದೆ.

ಮಂತ್ರಿಗಳು ಉದ್ಘಾಟನೆಯಾದ ನಂತರ ಟೀ ಬ್ರೇಕ್‌ಗೆ ಮೊದಲೇ ಹೊರಟು ಹೋದರು. ಅವರಿಗೆ ಬೇರೆ ಎಲ್ಲೋ ಹೋಗಬೇಕಿತ್ತು. ಔಪಚಾರಿಕತೆಯ ವಾತಾವರಣದಿಂದ ಬಿಡುಗಡೆ ದೊರೆತು ಎಲ್ಲರೂ ಆರಾಮವಾಗಿ ಚಹ ಕುಡಿಯುತ್ತ ಮಾತುಗಳಲ್ಲಿ ತೊಡಗಿದರು. ಅಲ್ಲಿ ಶಾಲ್ಮಲಿಯ ಸಹೋದ್ಯೋಗಿಗಳು, ವಿಶ್ವವಿದ್ಯಾಲಯ ಅಧ್ಯಾಪಕರು, ನಗರದ ಪ್ರತಿಷ್ಠಿತ ಸಂಸ್ಥೆಗಳ ಅಧ್ಯಕ್ಷರುಗಳು, ಕಾರ್ಯದರ್ಶಿಗಳು, ಕಾರ್ಯ ಕರ್ತರು ಮೊದಲಾದವರಿದ್ದರು. ಕೆಲವು ಮುಖಗಳಂತೂ ಸೆಮಿನಾರ್‌ನ ಘನತೆಯನ್ನು ಹೆಚ್ಚಿಸುವಂತಹವುಗಳಾಗಿದ್ದವು. ಚರ್ಚೆಗೆ ಕಳೆ ಕಟ್ಟುವಂತಹವರಾಗಿದ್ದರು. ನಿತ್ಯನೂತನ ಚಹರೆಗಳಾದ ಇವರು ಮೌನವಾಗಿ ಸೂತ್ರಧಾರಿಕೆಯನ್ನು ನಿರ್ವಹಿಸುತ್ತಿದ್ದರು.

ಚಹದ ನಂತರ ಪ್ರಮುಖ ವಿಶೇಷಜ್ಞರ ಪ್ರಬಂಧಗಳನ್ನು ಮಂಡಿಸಿ ನಂತರ ಚರ್ಚೆಗೆ ಅವಕಾಶ ಮಾಡಲಾಗಿತ್ತು. ದಿನ ದಿನದ ಫೈಲುಗಳು, ಡಿಕ್ಟೇಶನ್ ಮೊದಲಾದ ನೀರಸ ಕೆಲಸಗಳಿಂದ ದೂರವಾಗಿಸುವ ಈ ವಾತಾವರಣ ಶಾಲ್ಮಲಿಗೆ ಬಹಳ ಹಿಡಿಸಿತು. ಸುಂದು ಹಿಡಿದ ಅಂಗಾಂಗಗಳಿಗೆ ಚೈತನ್ಯ ಬಂದಂತೆನಿಸಿತು. ಒಮ್ಮೊಮ್ಮೆ ಶಾಲ್ಮಲಿಗೆ ಕೆಲಸ ಮಾಡಿ ಮಾಡಿ ಬೇಸರವೆನಿಸಿದಾಗ, ಮನುಷ್ಯನಿಗೂ ಯಂತ್ರಕ್ಕೂ ವ್ಯತ್ಯಾಸವೇನಿದೆ?' ಎಂದು ಯೋಚಿಸುತ್ತಿದ್ದಳು. ತನ್ನನ್ನು ಒಂದು ದಿನ ಹಳೆ ಯಂತ್ರ, ಹಳೇ ಕುರ್ಚಿಯ ರೀತಿಯಲ್ಲಿ ಆಫೀಸಿನ ಯಾವುದೋ ಕೋಣೆಯಿಂದ ಎತ್ತಿ 'ಜಂಕ್‌ಯಾರ್ಡ್' ನಲ್ಲಿ ಬಿಸಾಡ ಬಹುದೇ? ಯೋಚನೆ ಬರುತ್ತಿದ್ದಂತೆ ಕಂಪಿಸಿದಳು. ಈ ಗೌರವ, ಮರ್ಯಾದೆಗಳು, ಈ ಸತ್ಕಾರಗಳು ಎಲ್ಲಾ ಕೇವಲ ಕುರ್ಚಿಯ ಬಲದಿಂದ, ಒಳಗೆ ಅಡಗಿ ಕುಳಿತಿರುವ ಮನುಷ್ಯನಿಂದಲ್ಲ. ಒಳಗಿನ ಮನುಷ್ಯನನ್ನು ಜೀವಂತವಾಗಿ ಉಳಿಸಿಕೊಳ್ಳಬೇಕೆಂದರೆ ತಾನೇನು ಮಾಡಬೇಕು?' ಎಂದೆಲ್ಲಾ ವಿಚಾರ ಮಾಡಿದಳು.

ಕಾನ್‌ಫರೆನ್ಸ್ ಹಾಲ್ ತುಂಬಿತ್ತು. ಚರ್ಚೆ ಪ್ರಾರಂಭವಾಗಿತ್ತು. ವಯಸ್ಸಾದ, ನುರಿತ ವಿಶೇಷಜ್ಞರು ಸರಕಾರದ ನೀತಿ, ಯೋಜನೆಗಳನ್ನು ಕುರಿತು ಕಟುವಾಗಿ ಟೀಕಿಸಿ, ಗಂಭೀರವಾದ ವಿಚಾರಗಳನ್ನು ಮುಂದಿಡುತ್ತಿದ್ದರು. ಒಬ್ಬರನ್ನೊಬ್ಬರು ವಿರೋಧಿಸುವ ಕೆಲಸವೂ ಜೊತೆ ಜೊತೆಗೇ ನಡೆಯುತ್ತಿತ್ತು. ಶಾಲ್ಮಲಿ ಗಂಭೀರವಾಗಿ ಇವುಗಳ ಬಗ್ಗೆ ಆಲೋಚಿಸುತ್ತಿದ್ದಳು. ರಾಜಕಾರಣಿಗಳು, ಬುದ್ಧಿಜೀವಿಗಳು ಮತ್ತು ಅಧಿಕಾರಿಗಳು, ಪ್ರತಿಯೊಬ್ಬರೂ ಸಮಸ್ಯೆಯನ್ನು ತಮ್ಮ ತಮ್ಮ ದೃಷ್ಟಿಕೋನಗಳಿಂದ ವಿಶ್ಲೇಷಿಸಿ, ಒಂದು ವರ್ಗ ಇನ್ನೊಂದು ವರ್ಗದ ಬಗ್ಗೆ ತೋರುವ ತಿರಸ್ಕಾರ, ಅವಹೇಳನಗಳೇ ಈ ದೇಶದ ವಸ್ತುಸ್ಥಿತಿಯಾಗಿದೆ' ಎಂದು ಭಾವಿಸಿದಳು.

ಇದಕ್ಕೆ ಕಾರಣವೂ ಇದೆ, ದೇಶದಲ್ಲಿ ಎಲ್ಲ ಸರಿಯಾದರೆ, ಸುಧಾರಣೆಯಾದರೆ, ಸರಕಾರಿ ಯೋಜನೆಗಳ ಮೇಲೆ ವ್ಯಯವಾಗುವ ಹಣ, ಬುದ್ಧಿ, ವ್ಯಾಪಾರದ ಸಾಧ್ಯತೆಗಳು ಹೆಚ್ಚು ಕಡಿಮೆಯಾಗುತ್ತವೆ........ ಯಾರೋ ಬಂದು ಅವಳ ಮುಂದೆ ಪೇಪರ್ ಇಟ್ಟರು. ಅವಳು ಅದರ ಕಡೆ ನೋಡಿದಳು. ಮತ್ತೆ ಹೇಳಿದಳು.

ಅರಣ್ಯಗಳು ರಾಷ್ಟ್ರೀಯ ಸಂಪತ್ತು. ಅದು 'ಹಸಿರು ಹೊನ್ನು' – ಈ ಕಲ್ಪನೆ ಒಂದು ಕಡೆ ಸರಿ ಅಂತ ಅನ್ನಿಸಿ ನಾವು ಅರಣ್ಯಗಳನ್ನು ಬೆಳೆಸುವ, ಉಳಿಸುವ ಚಳುವಳಿ ಮಾಡ್ತೇವೆ. ಇನ್ನೊಂದು ಕಡೆ ಕಾರ್ಖಾನೆಗಳಲ್ಲಿ ಹೆಚ್ಚು ಉತ್ಪಾದಿಸಬೇಕೆನ್ನುವ ಸ್ಪರ್ಧೆಯಲ್ಲಿ ಅರಣ್ಯಗಳನ್ನು ನಾಶ ಮಾಡುತ್ತೇವೆ. ನಮ್ಮ ಯೋಜನೆಗಳು ಸಮಸ್ಯೆಗಳಿಂದ ಕೂಡಿರುತ್ತವೆ ಎಂಬುದು ನನಗೆ ಗೊತ್ತಿದೆ. ಸಲಹೆಗಳು ಕಾಗದಗಳಲ್ಲಿಯೇ ಉಳಿಯದೆ ಕಾರ್ಯಗತವಾಗುವ ವೇಳೆಗೆ ಸಾಕಷ್ಟು ತಡವಾಗುತ್ತದೆ. ಇವತ್ತು ಯೋಜನೆ ರೂಪುಗೊಂಡರೆ, ನಾಳೆ ಗಿಡಗಳನ್ನು ಹಾಕಿ, ಎಲ್ಲ ಮಾಡುವ ವೇಳೆಗೆ ಆರು ತಿಂಗಳಾಗುತ್ತದೆ, ಎಂದು ಇಟ್ಟುಕೊಳ್ಳೋಣ, ಆದರೆ ಗಿಡಗಳು ಮರಗಳಾಗಬೇಕಾದರೆ

ವರ್ಷಾನುಗಟ್ಟಲೆ ಹಿಡಿಯುತ್ತೆ. ಈ ದೀರ್ಘ ಅವಧಿಯಲ್ಲಿ ಹಳೆಯ ಅಥವಾ ಹಿಂದಿನ ಮರಗಳೆಲ್ಲ, ಪೂರ್ತಿಯಾಗಿ ಕಣ್ಮರೆಯಾಗುತ್ತವೆ. ಇದರ ಬಗ್ಗೆ ನಾವು ಯೋಚನೆ ಮಾಡಬೇಕಿದೆ. ಅರಣ್ಯ ನಾಶ ಆಗದೆಯೇ ಉತ್ಪಾದನೆಯ ಪ್ರಮಾಣವನ್ನು ಹೆಚ್ಚಿಸುವುದು ಹೇಗೆ ಅನ್ನುವುದರ ಬಗ್ಗೆ ಯೋಚನೆ ಮಾಡಬೇಕೇ ಹೊರತು ವೈಯಕ್ತಿಕ ವಿರೋಧ ವ್ಯಂಗ್ಯ, ಟೀಕೆಗಳಿಂದ ಕರ್ತವ್ಯ ಮುಗಿಯುವುದಿಲ್ಲ.

"ಡೈರೆಕ್ಟರ್‌ರವರ ಮಾತನ್ನು ನಾನು ಅನುಮೋದಿಸುತ್ತೇನೆ.

ಈಗ ಕೆಲವು ವರ್ಷಗಳ ಹಿಂದೆ ನಾನು ಹರಿದ್ವಾರಕ್ಕೆ ಹೋಗಿದ್ದೆ. ಅಲ್ಲಿನ ಪ್ಲೈವುಡ್ ಕಾರ್ಖಾನೆಗೂ ಹೋಗಬೇಕಿತ್ತು. ನನಗೆ ಚೆನ್ನಾಗಿ ನೆನಪಿದೆ. ನನ್ನ ಅಂದಾಜು ಕೂಡಾ ಸರಿಯಾಗಿದೆ. ಹರಿದ್ವಾರ ಮತ್ತು ಅದರ ಸುತ್ತ ಮುತ್ತ ಬೂರುಗದ ಮರಗಳೇ ಎಲ್ಲೆಲ್ಲೂ ತುಂಬಿವೆ.

ಈ ಕಾರ್ಖಾನೆಯು ಉತ್ಪಾದನೆಯನ್ನು ಹೆಚ್ಚಿಸುವ ಮತ್ತು ಉದ್ಯೋಗ ಸಮಸ್ಯೆಯನ್ನು ಪೂರೈಸುವ ಮತ್ತು ಮಾರುಕಟ್ಟೆಯಲ್ಲಿನ ಬೇಡಿಕೆಗಳನ್ನು ಈಡೇರಿಸುವ ಭರದಲ್ಲಿ ಬೂರುಗುದ ಅಥವಾ ಶಾಲ್ಮಲಿ ಮರಗಳನ್ನು ಕತ್ತರಿಸಿ ಕತ್ತರಿಸಿ ಹಾಕಿದರು. ಶಾಲ್ಮಲಿ ಮರದ ಸೌದೆ ಬಹಳ ಕೋಮಲ, ಹಗುರ ಮತ್ತು ಸುಲಭವಾಗಿ ಹಾಳಾಗುತ್ತೆ. ಜೊತೆಗೆ ಬೇಗ ಬೆಳೆಯುತ್ತೆ ಕೂಡಾ. ಎಲ್ಲಿ ಬೇಕಾದರೂ ಇವುಗಳನ್ನು ಬೆಳೆಯಬಹುದು. ಆದ್ದರಿಂದಲೇ ಅದನ್ನು ಭಾರತದಲ್ಲಿ ಅತ್ಯಂತ ಮಹತ್ವಪೂರ್ಣ ಮತ್ತು ಅಗ್ಗದಲ್ಲಿ ಅಥವಾ ಸುಲಭದಲ್ಲಿ ಸಿಗುವ ಕಾಷ್ಠ ಅಂತ ಭಾವಿಸಲಾಗಿದೆ" ಪ್ರೊ॥ ಬಿಜಲಾನಿ ಗಂಭೀರವಾಗಿ ನುಡಿದರು. "ಈ ವಿಚಾರದಲ್ಲಿ, ನಾನೂ ಒಂದು ಮಾತು ಹೇಳೋಕೆ ಇಷ್ಟ ಪಡ್ತೀನಿ. ಇದರ ಮೇಲೆ ನಾನೂ ಸಾಕಷ್ಟು ಕೆಲಸ ಮಾಡಿದ್ದೀನಿ 'ಇಂಟರ್ ನ್ಯಾಷನಲ್ ಜರ್ನಲ್' ನಲ್ಲಿ ನನ್ನದು ಒಂದು ಸಂಶೋಧನೆ ಲೇಖನ ಕೂಡ ಪ್ರಕಟವಾಗಿದೆ, ಅದೂ ಇಪ್ಪತ್ತೈದು ವರ್ಷಗಳ ಹಿಂದೇನೇ!" ರಿಟೈರ್ ಆಗಿದ್ದ ಹಿರಿಯ ವರ್ಮಾ ಹೇಳಿದರು.

"ಹೌದು ವರ್ಮಾರವರೇ, ನಿಮ್ಮ ಕೆಲಸದ ಬಗ್ಗೆ ನಾನೂ ಬಹಳ ಕೇಳಿದ್ದೀನಿ" ಪ್ರೊ॥ ಬಿಜಲಾನಿ ಗೌರವದಿಂದ ಹೇಳಿದರು.

"ಹೌದು ವರ್ಮಾರವರೇ, ನಿಮ್ಮ ಕೆಲಸದ ಬಗ್ಗೆ ನಾನೂ ಬಹಳ ಕೇಳಿದ್ದೀನಿ" ಪ್ರೊ॥ ಬಿಜಲಾನಿ ಗೌರವದಿಂದ ಹೇಳಿದರು.

'ಆಧುನಿಕ ವಿದ್ವಾಂಸರು ಈ ಶಾಲ್ಮಲಿಯನ್ನು ಸಾಲ್ಮಾಲಿಯಾ ಮಲಬಾರಿಕಾ' ಅಂತ ಕರೀತಾರೆ. ಇದನ್ನು ಸಂಸ್ಕೃತದಲ್ಲಿ 'ಶಾಲ್ಮಲಿ ಅಂತಾರೆ. ಮಲಬಾರಿಕಾ' ದ ಅರ್ಥ 'ಮಲಬಾರ್' ಎಂದು ಇದಕ್ಕೆ ಬೊಂಬಾಕ್ಸ್ ಸೆಹಬಾಲಿನ್, 'ಬೊಂಬಾಕ್ಸ್ ಹೆಪ್ಟಾಫಿಲ್ ಜುಮ್' ಎಂಬ ಹೆಸರುಗಳೂ ಇವೆ. ಗ್ರೀಕ್ ಭಾಷೆಯಲ್ಲಿ ಇದರ ಅರ್ಥ

'ಸಪ್ತ ವರ್ಣ' ಎಂದು. ಶಾಲ್ಮಲಿ ಮರಗಳಲ್ಲಿ ಸಪ್ತಪರ್ಣಕಗಳು ಇರುತ್ತವೆ. ಅದಕ್ಕೆ ಇದರ ಹೆಸರು ಶಾಲ್ಮಲಿ ಅಂತ" – ವರ್ಮಾಜಿ ತಮ್ಮದೇ ಶೈಲಿಯಲ್ಲಿ ವಿವರಿಸುತ್ತಿದ್ದರು.

ಎಪ್ಪತ್ತರ ಪ್ರಾಯದ ಈ ವಿಜ್ಞಾನಿಯ ಮಾತುಗಳನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ. ಗಂಭೀರವಾಗಿ ಎಲ್ಲರೂ ಅವರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ ಕೆಮ್ಮುತ್ತ ಮಾತನ್ನು ಮುಂದುವರೆಸಿದರು – ಶಾಲ್ಮಲಿಯ ಸೌದೆ ಚೆನ್ನಾಗಿ ಉರಿಯುತ್ತೆ. ಬೇಸಿಗೆ ದಿನಗಳಲ್ಲಿ ಕಾಡಿಗೆ ಬೆಂಕಿ ಬಿದ್ದರೆ, ಈ ಮರಗಳಿಂದಾಗಿ ಬಹು ಬೇಗ ಬೆಂಕಿ ಹರಡುತ್ತೆ. ಈ ಮರಗಳನ್ನು ನೋಡಿಯೇ ಕಾಳಿದಾಸ ಹೀಗೆ ಯೋಚಿಸಿರಬೇಕು. ಗಾಳಿಯಿಂದ ಪ್ರಜ್ವಲಿಸಿದ ಬೆಂಕಿ ಆ ಎತ್ತರದ ಮರಗಳನ್ನು ವ್ಯಾಪಿಸಿದೆ. ಅವುಗಳ ಕೊಂಬೆಗಳಲ್ಲಿ ಕೆಂಪು ಹೂಗಳಾಗಿ ತೊನೆದಾಡಿವೆ. ಬೆಂಕಿ, ಬಿಸಿಲಿನಿಂದಾಗಿ ಹಳದಿ ಎಲೆಗಳು ಉರಿದು ಕೆಳಗೆಲ್ಲಾ ಬಿದ್ದಿವೆ" – ವರ್ಮಾಜಿಯ ಕಣ್ಣಲ್ಲಿ ಒಂದು ಬಗ್ಯೆಯ ಹೊಳಪು ಕಾಣಿಸಿಕೊಂಡಿತು.

"ಇದು ಕವಿಯ ವ್ಯಾಖ್ಯಾನವಾಗಿದೆ! ದಾವಾಗ್ನಿಯ ಅದ್ಭುತ ಚಿತ್ರಣ! ಎತ್ತರಕ್ಕೇರಿನಿಂತ ಕೆಂಪು ಹೂಗಳು, ಕೆಳಗೆ ತೂಗುತ್ತಿರುವ ಹಳದಿ ಎಲೆಗಳು! ಬೆಂಕಿಯ ಜ್ವಾಲೆಗಳ ಹಾಗೆ ಕಾಣುತ್ತೆ. ಬಹಳ ಚೆನ್ನಾಗಿದೆ ವರ್ಮಾರವರೇ!" ರಮೇಶ್ ಕೊಠಾರಿ ಹೇಳಿದರು. ಉಳಿದವರು ಇದು ಕೇವಲ ಸೌಂದರ್ಯ ಬೋಧೆಯ ಪುರಾಣದಲ್ಲಿಯೇ ಮುಗಿಯದಿರಲೆಂದು ವಿಷಯಾಂತರ ಮಾಡಿದರು. ಶಾಲ್ಮಲಿ ಗಡಿಯಾರದ ಕಡೆಗೆ ನೋಡಿದಳು. ಮತ್ತೆ ವರ್ಮಾರು ಕೆಮ್ಮಿದರು. ಅವಕಾಶ ಸಿಕ್ಕಿದ್ದೇ ಬಿಜಲಾನಿಯವರು ಮುಂದಿದ್ದ ಮೈಕ್‌ನ ಬಟನ್ ಒತ್ತಿದರು.

"ಹೌದು, ನಾನು ಹೇಳುತ್ತಾ ಇದ್ದದ್ದು ಇಷ್ಟೆ. ಈ ಮರವನ್ನು, ಹಣ್ಣುಗಳು, ಔಷಧಿಗಳು, ಎಣ್ಣೆ, ತರಕಾರಿ ಇತ್ಯಾದಿಗಳನ್ನು ಪ್ಯಾಕ್ ಮಾಡುವುದಕ್ಕಾಗಿ ಬಾಕ್ಸುಗಳು, ಪೆಟ್ಟಿಗೆಗಳು, ಪಾತ್ರೆಗಳು ಮತ್ತು ಮಕ್ಕಳ ಆಟಿಗೆಗಳು ಇವುಗಳ ತಯಾರಿಕೆಯಲ್ಲಿ ಧಾರಾಳವಾಗಿ ಬಳಸಲಾಗುತ್ತದೆ. ಬೆಂಕಿ ಪೆಟ್ಟಿಗೆ ತಯಾರಿಕೆಯಲ್ಲಿಯೂ ಇದನ್ನು ಬಳಸುತ್ತಾರೆ. ನಾನು ಹೇಳುವುದರ ಅರ್ಥ, ಇವೆಲ್ಲವೂ ದಿನ ಬಳಕೆಯ ವಸ್ತುಗಳು ಮತ್ತು ತೀರಾ ಅಗತ್ಯವಾದಂತಹವುಗಳು. ಇಷ್ಟೊಂದು ಅಗತ್ಯವಾದ ವಸ್ತುಗಳ ಹಿನ್ನೆಲೆಯಲ್ಲಿ ಈ ಮರಗಳನ್ನು ಯಾವ ಪ್ರಮಾಣದಲ್ಲಿ ಕಡಿಯುತ್ತಿರಬಹುದೆಂದು ಊಹಿಸಬಹುದು. ಈ ಮರದ ದಿಮ್ಮಿಯನ್ನು ಒಳಗಿಂದ ಟೊಳ್ಳುಮಾಡಿ ಶವಪೆಟ್ಟಿಗೆ, ಡೋಲಕ್‌ಗಳು ಮೊದಲಾದವುಗಳನ್ನು ಮಾಡುತ್ತಾರೆ. ನೀರನ್ನು ಹಾಯಿಸುವ ನಾಲೆಗಳಿಗೂ ಇದನ್ನು ಉಪಯೋಗಿಸುತ್ತಾರೆ. ಮೃದುವಾಗಿರುವುದೇ ಅಲ್ಲದೆ ನೀರಿನಿಂದ ಹಾಳಾಗದೆ ಇರುವ ಗುಣವೇ ನಾಲೆಗಳಲ್ಲಿ ಇದರ ಬಳಕೆ ಮಹತ್ವದ್ದಾಗಲು ಕಾರಣವಾಗಿದೆ. ಪ್ರೊ॥ ಬಿಜಲಾನಿಯವರು ಕನ್ನಡಕವನ್ನು ತೆಗೆದಿರಿಸುತ್ತಾ, ಹಿಂದಕ್ಕೆ ಒರಗಿ ಕುಳಿತುಕೊಳ್ಳುತ್ತಾ ತಮ್ಮ ಮಾತನ್ನು ಮುಗಿಸಿದರು.

"ಈಗ ನಮ್ಮ ಮುಂದಿರುವ ಪ್ರಶ್ನೆ, ಇಷ್ಟೊಂದು ರೀತಿಯಲ್ಲಿ ಉಪಯುಕ್ತವಾಗಿರುವ ಈ ಮರಗಳ ಬೇಡಿಕೆಯನ್ನು ಪೂರೈಸುವ ಬಗ್ಗೆ ಮತ್ತು ಇವುಗಳನ್ನು ರಕ್ಷಿಸುವುದು ಹೇಗೆ? ವರ್ಮಾ ಅವರು ನಮ್ಮ ಮುಂದೆ ಕೆಲವು ಸೂಚನೆಗಳನ್ನು ಇಟ್ಟಿದ್ದಾರೆ. ಅವುಗಳನ್ನು ಮುಖ್ಯವಾಗಿ ದೃಷ್ಟಿಯಲ್ಲಿಟ್ಟುಕೊಂಡು ಈ ಸಮಸ್ಯೆ ಬಗ್ಗೆ ವಿಚಾರ ಮಾಡಬಹುದು ಎನಿಸುತ್ತೆ" ಶಾಲ್ಮಲಿ ಹೇಳಿದಳು "ಮಿಕ್ಕ ವಿಷಯಗಳನ್ನು ಎರಡನೇ ಸೆಷನ್‌ನಲ್ಲಿ ಚರ್ಚೆ ಮಾಡೋಣ. ಈಗ ಊಟದ ವಿರಾಮ". ಸೆಮಿನಾರ್‌ನ ಸಂಯೋಜಕ ಅರೋರ ಗಡಿಯಾರ ನೋಡಿಕೊಳ್ಳುತ್ತಾ ಹೇಳಿದರು.

"ಈ ಸೆಷನ್ ಇಲ್ಲಿಗೆ ಮುಗೀತು. ಇಲ್ಲಿ ಬಂದಿರುವವರೆಲ್ಲರೂ ಊಟಕ್ಕೆ ದಯಮಾಡಿಸಬೇಕು." ಎಂದು ಹೇಳಿದ್ದೇ ಎಲ್ಲರೂ ಈ ಸೂಚನೆಯೊಂದಿಗೆ ಎದ್ದರು. ಕಾಗದಗಳ ಸರಸರ ಸಪ್ಪಳ, ನಗು, ಮಾತು – ಭಿನ್ನ ಭಿನ್ನ ಸ್ತರಗಳಲ್ಲಿ ಕೇಳಿಸುತ್ತಿತ್ತು.

ಶಾಲ್ಮಲಿಗೆ ತನ್ನ ಹೆಸರಿನ ಬಗ್ಗೆ ತಿಳಿದುಕೊಳ್ಳುವ ಅವಕಾಶ ಸಿಕ್ಕಿತು. ಅವಳಿಗೆ ಬಹಳ ಸಂತೋಷವೆನಿಸಿತು. ಹಾಗೆ ನೋಡಿದರೆ ಈ ವಿಷಯ ಅವಳ 'ಸ್ಪೆಷಲ್ ಸ್ಟಡೀನೂ ಆಗಿರಲಿಲ್ಲ. ಮತ್ತು ಅವಳಿಗೆ ನೇರವಾಗಿ ಇದರೊಂದಿಗೆ ಸಂಬಂಧವೂ ಇರಲಿಲ್ಲ. ಅವಳಿರುವುದು ಸರಕಾರಿ ಕೆಲಸದಲ್ಲಿ. ಅಲೆಮಾರಿಗಳಂತೆ ಟ್ರಾನ್ಸ್ ಫರ್ ಹೆಸರಿನಲ್ಲಿ ಅಲ್ಲಿ, ಇಲ್ಲಿ ಅಂತ ಓಡಾಡ್ತಾ ಇರಬೇಕು. ಹೊಸ ಜಾಗ, ಹೊಸ ಪರಿಸರ, ಹೊಸ ಹೊಸ ಸಮಸ್ಯೆಗಳು! – ಇವುಗಳ ಜೊತೆಗೆ ಇನ್ನೇನು ಹೊಂದಿಕೊಳ್ಳಬೇಕು, ಅನ್ನುವಷ್ಟರಲ್ಲಿ ಇನ್ನೊಂದು ಕಡೆಗೆ ಟ್ರಾನ್ಸ್ ಫರ್! ರಿಟೈರ್ ಆಗುವ ಹೊತ್ತಿಗೆ ದೇಶದ ಸಮಸ್ಯೆಗಳನ್ನು ಸ್ವಲ್ಪ ಮಟ್ಟಿಗಾದರೂ ತಿಳಿದುಕೊಳ್ಳೋದು, ಅರ್ಥ ಮಾಡಿಕೊಳ್ಳೋದು ತೀರಾ ಅಗತ್ಯ. ಅಂಥಾದ್ದರಲ್ಲಿ ಈಗ ಇಂತಹ ಸೆಮಿನಾರ್‌ಗಳಲ್ಲಿ ಅವಕಾಶ ಸಿಕ್ಕಿದೆ. ಅವುಗಳನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳೋದು ಸಾಮಾನ್ಯವೇ!!

* * *

ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಸಮ್ಮೇಳನಕ್ಕೆ ಹೋಗಲು ಒಂದು ವಾರ ಮಾತ್ರ ಉಳಿದಿತ್ತು. ಹೊಸ ದೇಶ, ಹೊಸ ಪರಿಸರದ ಬಗ್ಗೆ ಯೋಚನೆ ಮಾಡಿದಾಗ ಒಂದು ಬಗೆಯ ರೋಮಾಂಚನ! ಆ ಅನುಭವ ಹೇಗಿರಬಹುದು!...... ನರೇಶನೂ ಜೊತೆಗಿದ್ದರೆ!.....ಅವನೂ ತಾನೂ ಆ ಅಪರಿಚಿತ ದೇಶದ ನೆಲವನ್ನು ಸ್ಪರ್ಷಿಸುವುದು ಎಂತಹ ಥ್ರಿಲ್ ಆಗಬಹುದು! ಎಂದೆಲ್ಲ ಯೋಚಿಸಿದಳು. ಆದರೆ ಮನಸ್ಸಿನಲ್ಲಿ ಎಲ್ಲೋ ಅಳುಕು! ಇದರ ಪ್ರಸ್ತಾಪ ಮಾಡಿದರೆ ನರೇಶ್‌ನಿಂದ ಏನು ರಾದ್ಧಾಂತವಾಗಬಹುದೋ ಎಂದು ಹೆದರಿ ತನ್ನ ಆಸೆಯನ್ನು ಅವನ ಮುಂದೆ ಹೇಳದೆ ಸುಮ್ಮನಾದಳು.

ಇತ್ತೀಚೆಗೆ ಒಮ್ಮೆಲೇ ನರೇಶನಲ್ಲಿ ಎದ್ದು ಕಾಣುವ ಬದಲಾವಣೆಯಾಗಿತ್ತು. ಮಾತು ಮಾತಿಗೆ ಅವನು ತೋರುವ ವಿನಯ, ಸೌಜನ್ಯಗಳು ತೀರಾ ಕೃತಕವೆನಿಸುತ್ತಿತ್ತು.

ಇದರಿಂದ ತಮ್ಮಿಬ್ಬರ ನಡುವಿನ ಅಂತರ ಹೆಚ್ಚಿದಂತೆ ಎನಿಸುತಿತ್ತು. ಭಾವನೆಗಳಿಗೆ ಭಾಷೆ ಇರಲಿಲ್ಲ. ಸಂಕೇತಗಳಿಗೆ ಶಬ್ದಗಳು ಇರಲಿಲ್ಲ. ಅಭಿವ್ಯಕ್ತಿಗೆ ಧ್ವನಿ ಇರಲಿಲ್ಲ. ಅವನ ಮೌನ ಹೇಳುತ್ತಿದ್ದುದೆಲ್ಲವನ್ನು ಕಿವಿಗೊಟ್ಟು ಕೇಳಿಸಿಕೊಳ್ಳಬೇಕಾಗುತ್ತಿತ್ತು. ಅದು ಮುಂದೆ ಮುಂದೆ ಬರುವುದರ ಪೂರ್ವ ಸೂಚಕ ಸಂದೇಶ ವಾಹಕದಂತೆ ಶಾಲ್ಮಲಿಗೆ ಹೊಳೆಯುತ್ತಿತ್ತು. ಅವನಿಂದ ಇನ್ನು ತಾನು ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ ಎನಿಸಿತು.

"ನಿನ್ನ ಪಾಸ್‌ಪೋರ್ಟ್ ಮಾಡಿಸೋಣಾಂತ ಇದ್ದೀನಿ." ಒಂದು ದಿನ ಶಾಲ್ಮಲಿ ಮಾತನ್ನು ಆರಂಭಿಸಿದಳು. "ಪಾಸ್ ಫೋರ್ಟ್? ಯಾಕೆ? ಪಾಸ್‌ಫೋರ್ಟ್ ಮಾಡಿಸಿ ಎಲ್ಲಿಗೆ ಹೋಗಬೇಕಾಗಿದೆ?" ಶಾಲ್ಮಲಿಯ ಕಡೆ ಪ್ರಶ್ನಾರ್ಥಕವಾಗಿ ನೋಡಿ ಕೇಳಿದ.

"ಯಾವುದೋ ಒಂದು ಸಮ್ಮೇಳನಕ್ಕೆ ವಿದೇಶಕ್ಕೆ ಹೋಗಿ ಬರಬೇಕಾಗಬಹುದು. ವಿಷಯ ತಿಳಿಯಿತು. ನಾನೂ ನೀವೂ ಇಬ್ಬರೂ ಯಾಕೆ ಹೋಗಿ ಬರಬಾರದು?.....

ತುಂಬಾ ಚೆನ್ನಾಗಿರುತ್ತೆ, ನರೇಶ್" –ಶಾಲ್ಮಲಿ ಹೇಳಿದಳು.

"ಹನಿಮೂನ್?" ನರೇಶ್ ಪ್ರಶ್ನಿಸಿ, ಹೋಗಿ ಕುರ್ಚಿಯಲ್ಲಿ ಕುಳಿತ.

"ಹಾಂ! ಹೆಚ್ಚು ಕಡಿಮೆ ಅದೇ ಅನ್ನು!" ಶಾಲ್ಮಲಿಯ ದನಿಯಲ್ಲಿ ಉತ್ಸಾಹ ಇತ್ತು.

"ನನಗೆ ಬರೋಕೆ ಆಗೋದಿಲ್ಲ" ನರೇಶ್ ಹೇಳುತ್ತ ಕುರ್ಚಿಯಿಂದ ಎದ್ದು ಹೊರಗೆ ನಡೆದೇ ಬಿಟ್ಟ. ಶಾಲ್ಮಲಿಯ ಉತ್ಸಾಹವೆಲ್ಲ ಸರ್ರಂತ ಸೋರಿ ಹೋಯಿತು. ಹೋಗುವುದನ್ನು ತಪ್ಪಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಈ ಕಡೆ ನರೇಶನನ್ನು ಬಲವಂತ ಪಡಿಸುವುದಕ್ಕೂ ಆಗುವುದಿಲ್ಲ. ಸಂಬಂಧದ ಬಗ್ಗೆ ಇದ್ದ ವಿಶ್ವಾಸ, ನಂಬಿಕೆಗಳು ಮಣ್ಣಾದವು. ಭಾವನೆಗಳು ಬೇರೆ, ಸಂಬಂಧಗಳು ಬೇರೆ! ಅವೆರಡೂ ಒಟ್ಟಿಗೆ ಸಾಧ್ಯವಿಲ್ಲ. ಭಾವನೆಗಳ ಜೊತೆ ಸಂಬಂಧವನ್ನು ಎಳೆದು ತಂದು ನಿಲ್ಲಿಸಿದರೆ, ಸಂಬಂಧ ಸ್ವರೂಪವನ್ನು ಬಿಚ್ಚಿ ತೋರಿಸುತ್ತವೆ. ಅಲ್ಲಿ ಕಾಣುವುದು ನಮಗೆ ಜಿಗುಪ್ಸೆ, ವಂಚನೆ, ಇವುಗಳು ಮಾತ್ರವೇ! ಭಾವನೆಗಳು ಸಂಬಂಧದ ಜೊತೆಯಾದ ಮಾತ್ರಕ್ಕೇ ಭಾವನೆಯ ಸೆಲೆ ಬತ್ತಿ ಹೋಗಬೇಕೇ?

* * *

ಈ ವಿಭಾಗಕ್ಕೆ ಬಂದ ಮೇಲೆ ಶಾಲ್ಮಲಿಯ ಜವಾಬ್ದಾರಿಗಳು, ಕೆಲಸ ಕಾರ್ಯಗಳು ಹೆಚ್ಚಾದವು. ದಿನವೂ ಒಂದಲ್ಲ ಒಂದು ಸೆಮಿನಾರ್ ಇದ್ದೇ ಇರುತ್ತಿತ್ತು. ಜೊತೆಗೆ ಹೊಸ ಯೋಜನೆಗಳಿಗೆ ಸಂಬಂಧಿಸಿದಂತೆ ಮೀಟಿಂಗ್‌ಗಳು, ಪ್ರವಾಸಗಳು ಇದ್ದೇ ಇರುತ್ತಿದ್ದವು. ಹೊಸ ಮುಖಗಳು, ಹೊಸ ಜನ, ಹೊಸ ಹೊಸ ಅನುಭವ, ಅನುಭೂತಿಗಳು!

ಇವೆಲ್ಲಕ್ಕೂ ಹೊಂದಿಕೊಳ್ಳಬೇಕು!....... ಒಮ್ಮೊಮ್ಮೆ ಯೋಚನೆಯಾಗುತ್ತಿತ್ತು. ಸಮಾಧಾನ ಸಿಕ್ಕಾಗ ಇನ್ನೊಂದು ರೀತಿ ಅನಿಸುತ್ತಿತ್ತು.

ಶೂನ್ಯತೆ ಅವಳ ಮನಸ್ಸನ್ನು ಆವರಿಸಿತ್ತು. ಅದನ್ನು ದೂರ ಮಾಡಿಕೊಳ್ಳುವುದಕ್ಕಾಗಿ ತನ್ನ ಹಳೆಯ ಸ್ನೇಹಿತರಿಗೆ ಫೋನ್ ಮಾಡುತ್ತಿದ್ದಳು. ಅವರ ಯೋಗಕ್ಷೇಮ ವಿಚಾರಿಸುತ್ತಿದ್ದಳು..... ಅವಳಿಗೆ ಯಾವುದರಲ್ಲಿಯೂ ಆಸಕ್ತಿ ಇರಲಿಲ್ಲ. 'ಭಾವನೆಗಳ ಪಾತರಗಿತ್ತಿಗಳು ಎಲ್ಲಿ ಹೋದವು?' ಎಂದು ಆಲೋಚಿಸುತ್ತಿದ್ದಳು.

ಕೆಲವು ತಿಂಗಳುಗಳಿಂದ ಸರೋಜ್‌ಳನ್ನು ಕಾಣಬೇಕೆಂದು ತವಕಿಸುತ್ತಿದ್ದಳು. ಆದರೆ ಕೆಲಸ ಕಾರ್ಯಗಳಿಂದ ಬಿಡುವೇ ದೊರೆಯುತ್ತಿರಲಿಲ್ಲ. ಅವಳ ಹತ್ತಿರ ಹೋದಾಗಲೂ ಅವಳನ್ನು ಮಾತನಾಡಿಸಲು ಆಗಿರಲಿಲ್ಲ. ಒಮ್ಮೊಮ್ಮೆ ಆಫೀಸಿನಿಂದ ಬೇಗ ಹೊರಟು ಅಪ್ಪ, ಅಮ್ಮನನ್ನು ಮಾತಾಡಿಸಿಕೊಂಡು ಬರುತ್ತಿದ್ದಳು. ನರೇಶ್ ಬರಲಿ ಬಿಡಲಿ, ಅದು ಅವನ ಇಷ್ಟ. ಮಾವನ ಮನೆ ಬಗ್ಗೆ ಹೆಚ್ಚಿನ ಆಸಕ್ತಿಯನ್ನೇನೂ ಇಟ್ಟುಕೊಂಡಿರಲಿಲ್ಲ. ಪದೇ ಪದೇ ಅಲ್ಲಿಗೆ ಹೋಗೋದೂ ಅವನಿಗೆ ಹಿಡಿಸುವುದಿಲ್ಲ ಆದರೆ ತನಗೆ ಅದು ತವರು ಮನೆ. ಹೋಗಲೇಬೇಕು.

ಶಾಲ್ಮಲಿ ಪ್ರಪಂಚವನ್ನು, ಜನಗಳನ್ನು ನೋಡುತ್ತಿದ್ದಳು. ದೊಡ್ಡ ದೊಡ್ಡ ಡಿಗ್ರಿಗಳನ್ನು ಪಡೆದು ಸುರಕ್ಷಿತರೆನಿಸಿಕೊಂಡ ಎಷ್ಟೋ ಮಂದಿ ಆಲೋಚನೆಗಳಲ್ಲಿ, ವಿಚಾರಗಳಲ್ಲಿ ಬಹಳ ಹಿಂದುಳಿದವರಾಗಿದ್ದರು. ಇನ್ನೂ ಅವರು ತಾತ ಮುತ್ತಾತಂದಿರ ಕಾಲದ ನಂಬಿಕೆಗಳಿಗೆ ಅಂಟಿಕೊಂಡಿದ್ದರು. ಅವರ ದೃಷ್ಟಿಯಲ್ಲಿ ಶಿಕ್ಷಣಕ್ಕೂ ವಿಚಾರಗಳಿಗೂ ಸಂಬಂಧವೇ ಇಲ್ಲ. ಶಿಕ್ಷಣ ಶಿಕ್ಷಣಕ್ಕಾಗಿ ಮಾತ್ರವೇ ಎಂದು ಭಾವಿಸುತ್ತಿದ್ದರು. ಶಿಕ್ಷಣದ ಅರ್ಥವೇ ಅವರಿಗೆ ಸರಿಯಾಗಿ ಆದಂತಿರಲಿಲ್ಲ. ನಮ್ಮ ಆಲೋಚನೆಗಳನ್ನು ವಿಸ್ತರಿಸುವಂಥಾದ್ದೆ ನಿಜವಾದ ಶಿಕ್ಷಣ. ಆಲೋಚನೆ ಮತ್ತು ವ್ಯವಹಾರದಲ್ಲಿ ಸಮನ್ವಯ ಇವರುಗಳಿಂದ ಸಾಧ್ಯವೇ ಇಲ್ಲ' ಎನಿಸಿತು. ಈ ಗುಂಪಿಗೆ ಸೇರಿದವನೇ ನರೇಶ್. ನರೇಶನ ಕೆಲವು ನಿರ್ದಿಷ್ಟ ಚಟಗಳು, ವಿಚಾರಗಳು ಕೂಡಾ ಹಾಗೇ.... ಬದಲಾಯಿಸಲು ಸಾಧ್ಯವಿರಲಿಲ್ಲ. ಅದೆಲ್ಲವೂ ಅವರು ಬೆಳೆದು, ಪಡೆದು ಬಂದ ಸಂಸ್ಕಾರದಿಂದ ಮಾತ್ರವೇ ಲಭಿಸುತ್ತದೆ. ಆದರೆ ಇಂಥವರು ತಾನೇ ಏನು ಮಾಡಬಲ್ಲರು? ಇವರ ಬಗ್ಗೆ ಬೇಸರ ಪಡುವುದು, ನೋವನ್ನು ಅನುಭವಿಸುವುದು ವ್ಯರ್ಥ. ಆದರೆ ಹಾಗೆಂದು ಸುಮ್ಮನಿರಲೂ ಶಾಲ್ಮಲಿಯ ಮನಸ್ಸು ಒಪ್ಪಲಿಲ್ಲ. ಇದೂ ಅವಳ ಸಂಸ್ಕಾರದ ಪರಿಣಾಮವೇ!

ಮನಸ್ಸಿನ ಬೇಸರ ಒಮ್ಮೊಮ್ಮೆ ವ್ಯವಹಾರದಲ್ಲೂ ಕಾಣಿಸಿಕೊಂಡಿತು. 'ತನ್ನ ಕೈ ಕೆಳಗಿನವರ ಮೇಲೆ, ತನ್ನನ್ನು ಆಶ್ರಯಿಸಿರುವ ಬೇಲಾಳ ಮೇಲೆ, ಕಿಶೋರಿಲಾಲ್ ಮೇಲೆ ತನ್ನ ಕೋಪ ತಾಪಗಳನ್ನು ತೋರಿಸುವುದೇ? ಯಾರೂ ಸಿಗದಿದ್ದ ಪಕ್ಷದಲ್ಲಿ ನರೇಶನ ಮೇಲೆ ತೋರಿಸುವುದೇ? ತನ್ನ ಆಕ್ರೋಶವನ್ನು ಅವರಿವರ ಮೇಲೆ ಕಾರಿಕೊಂಡ

ಮಾತ್ರಕ್ಕೆ ಮನಸ್ಸು ಹಗುರವಾಗುವುದೆ?...... ಇಲ್ಲ ಇಲ್ಲ! ಇದರಿಂದ ಇರುವ ಸಂಬಂಧಗಳೂ ವಿಷಪೂರಿತವಾಗುತ್ತವೆ. ತನ್ನ ವ್ಯಕ್ತಿತ್ವ ವಿಕಾರವಾಗುತ್ತದೆ...... ಇದು ಯಾವುದಕ್ಕೂ ಅವಕಾಶ ಕೊಡಬಾರದು, ಎಂದು ತನಗೆ ತಾನೇ ಸಮಾಧಾನ ಮಾಡಿಕೊಂಡಳು. ಮನಸ್ಸಿನ ಬೇಗುದಿ, ಕಸಿವಿಸಿಗಳನ್ನು ಮರೆಯಲು ತನ್ನನ್ನು ತೋಟದ ಕೆಲಸಗಳಲ್ಲಿ ತೊಡಗಿಸಿಕೊಂಡಳು. ಅಗೆಯುವುದು, ಗಿಡಗಳಿಗೆ ನೀರು ಹಾಕುವುದು, ನೆಡುವುದು, ಗಿಡಗಳನ್ನು ಕತ್ತರಿಸುವುದು – ಇತ್ಯಾದಿ ಕೆಲಸಗಳಲ್ಲಿ ಮುಳುಗಿದಳು. ಗಿಡ ಕತ್ತರಿಸಿದಾಗ ಅವಳಿಗೆ ಅಯ್ಯೋ ಪಾಪ! ಎನಿಸುತ್ತಿತ್ತು. ಸಹಾನುಭೂತಿ ಮೂಡುತ್ತಿತ್ತು. ಗಿಡಗಳ ಜಾಗದಲ್ಲಿ ಮನುಷ್ಯನೇ ಇದ್ದಿದ್ದರೆ ಏಟಿಗೆ ಏಟು ತಪ್ಪುತ್ತಿರಲಿಲ್ಲ! ಆದರೆ ಇವು ಚಕಾರವನ್ನೇ ಎತ್ತಲಿಲ್ಲ. ಮನಸ್ಸಿನ ಭಾರವನ್ನು ಕಳೆದುಕೊಳ್ಳುವ ದಾರಿ ತಿಳಿದಿತ್ತು. ಆದರೂ ಒಮ್ಮೊಮ್ಮೆ ಏನೋ ಭಯ. ಮನಸ್ಸಿನ ಮೇಲೆ ಆಗುತ್ತಿರುವ ನಿರಂತರ ಆಘಾತದಿಂದ ತನ್ನಲ್ಲಿ ಸೇಡಿನ ಮನೋಭಾವ ಮೂಡಿದರೆ ಏನಾಗುವುದು? ತನಗಾದ ನಿರಾಶೆಗೆ ಸಮಾಜದ ಜೊತೆ ಪ್ರತೀಕಾರ ತೀರಿಸಿಕೊಂಡು ಸುಖವನ್ನು ದಕ್ಕಿಸಿಕೊಳ್ಳುವುದನ್ನು ಕಲಿತರೆ? – ಎಂದೆಲ್ಲ ಆಲೋಚಿಸುತ್ತಿದ್ದಳು. ಮತ್ತೊಮ್ಮೆ ತಾನು ಹೀಗಾಗಬಾರದು, ಎಂದು ತನ್ನ ವ್ಯಕ್ತಿತ್ವವನ್ನು ವಿಶ್ಲೇಷಿಸಿಕೊಳ್ಳುತ್ತಿದ್ದಳು. ಆತ್ಮಾನ್ವೇಷಣೆ ಮಾಡಿಕೊಳ್ಳುತ್ತಿದ್ದಳು. ತನ್ನ ತಪ್ಪುಗಳು ಕಣ್ಣಿಗೆ ಬಿದ್ದಲ್ಲಿ, ಅವುಗಳನ್ನು ಹಣ್ಣೆಲೆಗಳನ್ನು ಚಿವುಟಿ ಹಾಕುವಂತೆ ಚಿವುಟಿ ಹಾಕುತ್ತಿದ್ದಳು. ಹಣ್ಣೆಲೆಗಳ ಎಡೆಯಲ್ಲಿ ಹೊಸದು ಅಂಕುರಿಸಲಿ, ಹೊಸ ವಿಚಾರಗಳು ಮೂಡಿಬರಲಿ, ಎಂಬುದೇ ಅವಳ ಆಶಯವಾಗಿತ್ತು.

ಹರಡಿದ್ದ ಬಿಸಿಲಿನಲ್ಲಿ ಹಳದಿ ಹೂಗಳ ಮರಗಳ ನಡುವೆ ನಿಂತ ಗುಲ್ ಮೊಹರ್‌ನ ಕೆಂಪು ಬಣ್ಣದ ಅದ್ಭುತ ಕಾಂತಿ ಎಲ್ಲೆಡೆ ತುಂಬಿತ್ತು. ಶಾಲ್ಮಲಿಯ ಜೀವನದಲ್ಲಿಯೂ ಈ ಹಳದಿ ಹೂ ಮರದಲ್ಲಿ ಒಮ್ಮೆಲೇ ಹೂ ಬಿಟ್ಟಂತೆ, ವಸಂತ ಬಂದಿದ್ದ. ಆ ವಸಂತ ಬೇರೆ ಯಾರೂ ಅಲ್ಲ. ನರೇಶ್ ಆಗಿದ್ದ. ಕ್ಯಾಸಿಯಾ ಮರಗಳು ಹೂ ಬಿಟ್ಟಾಗಲೆಲ್ಲ, ಅವು ಲೋಲಕಗಳಂತೆ ಜೋತಾಡಿದಾಗಲೆಲ್ಲ ಮನಸ್ಸಿನಲ್ಲಿ ಮತ್ತೊಮ್ಮೆ ವಸಂತನ ಆಗಮನವಾಗುತ್ತಿತ್ತು. ಹಳದಿ ಅಂಗರಾಗದ ಪರಿಮಳ, ಕೆಂಪು ಕುಂಕುಮದ ಹೊಳಪು, ಬಳೆಗಳ ಸದ್ದು, ಮುಡಿದ ಹೂವಿನ ಗಂಧ – ಮತ್ತೊಮ್ಮೆ ಅವಳು ಮದುವಣಗಿತ್ತಿಯಂತೆ ರಾರಾಜಿಸುತ್ತಿದ್ದಳು. ಆ ಕ್ಷಣದಲ್ಲಿ ನರೇಶ್‌ನ ಬಗೆಗಿದ್ದ ಅಸಮಾಧಾನ, ಬೇಸರಗಳು ಮರೆಯಾಗುತ್ತಿದ್ದವು. ಮೊಟ್ಟ ಮೊದಲ ಸಲ ನರೇಶನನ್ನು ಬಿಟ್ಟರೆ ಬೇರೆ ಯಾರೂ ಅವಳಿಗೆ ಕಾಣಿಸುತ್ತಿರಲಿಲ್ಲ ಈ ದಿನವೂ ಅವಳಿಗೆ, ಅವಳು ಮದುವೆಯಾದ ವರ್ಷ ರಸ್ತೆಯ ಇಕ್ಕೆಲಗಳಲ್ಲಿ ನಿಂತ ಹೂ ತುಂಬಿದ ಮರಗಳು ಹೂವಿನ ಶಾಮಿಯಾನ ಹಾಕಿ ನಿಂತಿರುವಂತೆ ಕಾಣಿಸುತ್ತಿದೆ. ಆದರೆ ನರೇಶ್ ಮಾತ್ರ ಮಾಮೂಲಿನಂತೆ ಈ ದಿನವನ್ನೂ ಮರೆಯುತ್ತಾನೆ. ಒಳ್ಳೆಯ ದಿನಗಳನ್ನು ಪದೇ ಪದೇ ನೆನಪಿಸಿಕೊಳ್ಳುವುದು ಅವನಿಗೆ ಹಿಡಿಸುವುದಿಲ್ಲ. ಅವನಿಗೆ ಯಾವುದೇ ದಿನ, ಯಾವುದೇ ತಾರೀಖು ಮುಖ್ಯವೆನಿಸುವುದೇ ಇಲ್ಲ. ಯಾವುದನ್ನೂ ಯಾವ ದಿನ ಬೇಕಾದರೂ ಆಚರಿಸಬಹುದು.

ನರೇಶನ ಈ ತರ್ಕ ಶಾಲ್ಮಲಿಗೆ ಬೇಸರ ತರುತ್ತಿತ್ತು. ಆದರೂ ಅವಳು ಬಿಡಿಪೆ ನರೇಶ್‌ನನ್ನು ಆ ಸಂತೋಷದ ದಿನಗಳಲ್ಲಿ ಶಾಲ್ಮಲಿ ಮಾಡಿಕೊಳ್ಳುತ್ತಿದ್ದಳು. ಆಫೀಸಿನಿಂದ ಫೋನ್ ಮಾಡಿ, ನರೇಶ್‌ನನ್ನು ಸಂಜೆಗೆ ಬೇಗ ಮನೆಗೆ ಬರುವುದಕ್ಕೆ ಹೇಳಿದಳು. ನರೇಶ್ ಕೂಡಾ ಬೇರೆ ಸಂದರ್ಭಗಳಲ್ಲಿ ಶಾಲ್ಮಲಿಗೆ ಬೇಸರ ತರಿಸಿದರೂ, ಇಂಥ ದಿನಗಳಲ್ಲಿ ಅವಳ ಮಾತನ್ನು ತಳ್ಳಿ ಹಾಕದೆ, ಅವಳ ಮಾತಿನಂತೆ ಹಾಜರಾಗುತ್ತಿದ್ದ. ಬಹುಶಃ ಹೀಗೆ ಒಮ್ಮೊಮ್ಮೆಯಾದರೂ ಇಬ್ಬರೂ ಒಟ್ಟಿಗೆ ಸೇರುತ್ತಿದ್ದುದರಿಂದಲೇ, ಅವರ ಸಂಬಂಧ ಪೂರ್ತಿಯಾಗಿ ಕಡಿದು ಹೋಗದೆ ಒಂದು ಮಿತಿಯ ಅಂತರದಲ್ಲಿ ಇನ್ನೂ ಉಳಿದಿತ್ತು.

ಶಾಲ್ಮಲಿ ಆಫೀಸಿನಿಂದ ಹೊರಟಾಗ ಇನ್ನೂ ಬಿಸಿಲು ಇಳಿದಿರಲಿಲ್ಲ. ಗಾಳಿ ಇನ್ನೂ ಬಿಸಿಯಾಗಿತ್ತು. ನೀರಿನ ಗಾಡಿಯ ಸುತ್ತ ಜನ ತುಂಬಿದ್ದರು. ಬಿಸಿಲು, ಬಿಸಿ ಗಾಳಿಯಿಂದ ಶಾಲ್ಮಲಿಗೆ ಸೆಕೆ ತಡೆಯಲಾಗಲಿಲ್ಲ. ಕಾರಿನ ಬಾಗಿಲು ತೆಗೆದು ಒಳಗೆ ಕುಳಿತು ಕಾರನ್ನು ಸ್ಟಾರ್ಟ್ ಮಾಡಿ ಆಚೆ ಬಂದಳು. ಕ್ಷಣದ ತರುವಾಯ ಕಾರಿನೊಳಗೆ ಕುಳಿತು ಹಳದಿ ಹೂಗಳ ಮರಗಳ ನೆರಳಿನಲ್ಲಿಯೇ ಕಾರನ್ನು ನಡೆಸಿದಳು. ಕಾರಿನ ಟಾಪು ಹಳದಿ ಹೂಗಳಿಂದ ತುಂಬಿ ಹೋಗಿತ್ತು. ಪಾರಿಜಾತದ ಪುಟ್ಟ ಪುಟ್ಟ ಹೂಗಳನ್ನು ಆರಿಸುತ್ತಾ, ವಾಸನೆ ನೋಡುತ್ತಾ, ಹಳದಿ ಹೂಗಳನ್ನು ದಿಟ್ಟಿಸುತ್ತಾ ಪ್ರೀತಿಯ ದೋಣಿಯಲ್ಲಿ ಕುಳಿತು ರಸ್ತೆಯನ್ನು ದಾಟುತ್ತಿದ್ದಳು.

ಒಮ್ಮೊಮ್ಮೆ ನರೇಶ್ ತನ್ನ ಸಂಯಮವನ್ನು ಪರೀಕ್ಷಿಸುತಿರಬಹುದೇ ಎಂದು ಸಂದೇಹಿಸುತ್ತಿದ್ದಳು. ಅವನು ತುಂಟ ಹುಡುಗನಂತೆ ಚೇಷ್ಟೆ ಮಾಡುತ್ತ, ಜಗಳವಾಡುತ್ತ ಶಾಲ್ಮಲಿಯನ್ನು ಅಳುವಂತೆ ಮಾಡಿ, ಆಮೇಲೆ ಕಂಬನಿ ತುಂಬಿದ ಅವಳ ಮುಖವನ್ನು ತನ್ನೆದೆಗೆ ಅಪ್ಪಿಕೊಂಡು ಸಮಾಧಾನ ಪಡಿಸುವ ಬಯಕೆ. ಬಾಯಿ ಬಿಟ್ಟು, ಅವನು ಇದನ್ನು ಹೇಳದಿದ್ದರೂ, ಮನೆಯಲ್ಲಿ ಸಾಧಾರಣವಾಗಿ ನಡೆಯುತ್ತಿದ್ದುದೂ ಹೀಗೇ! ಸಂಬಂಧಗಳು ಮುರಿದು ಬೀಳುವ ಹಂತಕ್ಕೆ ಬಂದಾಗ ಅದನ್ನು ಹುಡುಗುತನ ತುಂಟತನ ಅಂದುಕೊಂಡು ಸಮಾಧಾನ ಪಡೆಯಬೇಕಿತ್ತು. ಈ ಭಾವನೆಯೊಂದೇ ತನ್ನನ್ನು ತಾನು ರಕ್ಷಿಸಿಕೊಳ್ಳುವುದಕ್ಕೆ ಇದ್ದ ಮಾರ್ಗ. ಆದರೆ ಪ್ರತಿಸಲವೂ ಬದುಕಿನ ಬೇರೆ ಬೇರೆ ರೂಪಗಳನ್ನು ನೋಡಬೇಕೆ? ಸಂಬಂಧಗಳಿಗೆ ಹೊಸ ಹೊಸ ಆಯಾಮಗಳನ್ನು ಕಲ್ಪಿಸಬೇಕೆ? ಹಾಗಾದರೆ ಜೀವನ ಒಂದು ಸುದೀರ್ಘಯಾತ್ರೆ. ಯಾತ್ರೆ ಮಾಡುವ ಸಾಹಸವನ್ನು ಒಪ್ಪಿಕೊಂಡವರಿಗೆ ನೋವು ದುಃಖ ಅನುಭವಿಸದೆ ವಿಧಿಯಿಲ್ಲ.

* * *

ವಿದೇಶಕ್ಕೆ ಹೋಗಲು ಕೇವಲ ಒಂದೇ ಒಂದು ದಿನ ಉಳಿದಿತ್ತು. ನರೇಶ್ ಸುಮ್ಮನಿದ್ದ. ಅವನನ್ನು ಅರ್ಥ ಮಾಡಿಕೊಳ್ಳೋದು ಶಾಲ್ಮಲಿಗೆ ಕಷ್ಟವೆನಿಸಿತ್ತು. ಇತ್ತೀಚೆಗೆ

ಮುಖವಾಡಗಳನ್ನು ಧರಿಸುವುದರಲ್ಲಿಯ ಬಹಳ ಜಾಣನಾಗಿ ಬಿಟ್ಟಿದ್ದ. ಆದರೆ ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಂಡು ತನ್ನ ಕೆಲಸಗಳನ್ನು ಬಿಡುವ ಹಾಗಿರಲಿಲ್ಲ. ತನ್ನ ಮುಖ ಚರ್ಯೆಗಳಿಂದಲೇ ನರೇಶನಿಗೆ ತಾನು ಏನು ಅನ್ನುವುದನ್ನು ಅರ್ಥಮಾಡಿಸಿ ಬಿಟ್ಟಿದ್ದಳು. ಅವಳ ಮುಖ ನೋಡಿದ ಕೂಡಲೇ, ಅವನಿಗೆ ಗೊತ್ತಾಗುತ್ತಿತ್ತು. ಕೆಲವು ವಿಚಾರಗಳಲ್ಲಿ ತನ್ನ ಬೇಳೆ ಬೇಯೋದಿಲ್ಲ ಅಂತ.

ಶಾಲ್ಮಲಿಯನ್ನು ಬೀಳ್ಕೊಡಲು ಶಾಲ್ಮಲಿಯ ಅಪ್ಪ ಅಮ್ಮ ನರೇಶ್ ಬಂದಿದ್ದರು. ಈಗ ಅವಳ ಮುಖದಲ್ಲಿ ಒಂದು ಬಗೆಯ ಸಂತೋಷವಿತ್ತು. ಬೇರೆ ಯಾವ ಭಾವನೆಗಳಿಗೂ ಅಲ್ಲಿ ಅವಕಾಶ ಇರಲಿಲ್ಲ. ಕಸ್ಟಮ್ಸ್ ತನಿಖೆ ಮುಗಿಸಿ ಮುಂದೆ ಹೋಗುತ್ತಿರುವಾಗ ಅಪ್ಪ ಅಮ್ಮನ ಮುಖ ನೋಡಿದಳು. ಅಮ್ಮನ ಕಣ್ಣಲ್ಲಿ ನೀರು! ತಂದೆಯ ಮುಖದ ಮೇಲೆ ಹೆಮ್ಮೆಯ ಮಂದಹಾಸ! ನರೇಶನ ಭಾವನೆಗಳನ್ನು ತಿಳಿಯಲಿಲ್ಲ, ಆಗಲಿಲ್ಲ! ಕೈ ಬೀಸುತ್ತಾ ಮುಂದೆ ನಡೆದು ಎಡಗಡೆಗೆ ತಿರುಗಿದಳು.

ವಸಂತ ಋತು, ವಿದೇಶದ ನೆಲ. ಶಾಲ್ಮಲಿಯ ಮನಸ್ಸು ಅರಳಿ, ಬಾಡಿ ಹೋಗುತ್ತಿತ್ತು. ಒಂದು ಬಗೆಯ ಬೇಸರ ಅವಳನ್ನು ಇಲ್ಲಿ ಕಾಡುತ್ತಿತ್ತು. ಇಡೀದಿನ ಕೆಲಸಗಳಲ್ಲಿ ಮಗ್ನಳಾಗಿದ್ದುದರಿಂದ ಅವಳಿಗೆ ಏನೂ ಅನಿಸುತ್ತಿರಲಿಲ್ಲ. ಆದರೆ ಸಂಜೆಗಳಲ್ಲಿ ಆ ಮಧುರ ಮಧುಮಾಸದಲ್ಲಿ ತಣ್ಣನೆಯ ಗಾಳಿ ಬೀಸುತ್ತಿರುವಾಗ ಇಡೀ ಪರಿಸರವೇ ಉನ್ಮತ್ತವಾಗಿಸುತ್ತಿರುವಾಗ ಏನೋ ಒಂದು ಯಾತನೆ. ಏಕಾಕಿತನ, ನರೇಶ್ ಯಾಕೆ ಬರದೆ ಹೋದ? ನೋವು ಕಾಣಿಸಿಕೊಳ್ಳುತ್ತಿತ್ತು. ಬಲವಂತವಾಗಿಯಾದರೂ ಎಳೆದು ತರಬೇಕಿತ್ತು. ಈ ಯೋಚನೆ ಮೂಡಿದ ಮರುಕ್ಷಣದಲ್ಲಿ ಬಲವಂತದಿಂದ ಪಡೆದ ಸಂತೋಷ ಮನಸ್ಸಿಗೆ ಸುಖ ನೆಮ್ಮದಿ ಕೊಡಲು ಸಾಧ್ಯವಿಲ್ಲ, ಎನ್ನುವ ಅರಿವಿನಿಂದ ಸುಮ್ಮನಾಗುತ್ತಿದ್ದಳು. ಇಲ್ಲಿಗೆ ಕರೆದು ತಂದಿದ್ದರೂ ಯಾವಾಗಲೂ ಸಿಟ್ಟಿನಿಂದ ಮುಖ ಊದಿಸಿಕೊಂಡಿದ್ದರೆ, ಈ ಸುಖ ಕೂಡಾ ನನ್ನ ಪಾಲಿಗೆ ಸುಟ್ಟು ಬೂದಿಯಾಗುತ್ತಿತ್ತು.

ಸಂಜೆಗಳಲ್ಲಿ ವಿಂಡೋ ಷಾಪಿಂಗ್ ಮಾಡುತ್ತಿದ್ದಳು. ಇಲ್ಲವೆ ಸ್ನೇಹಿತರ ಹೆಂಡತಿಯರಿಗೇಂತ ಏನಾದರೂ ಕೊಳ್ಳುತ್ತಿದ್ದಳು. ಒಂದು ದಿನ ಹತ್ತಿರವಿದ್ದ ಐತಿಹಾಸಿಕ ಸ್ಥಳಗಳನ್ನು ನೋಡಲು ಹೋಗಿದ್ದಳು. ಜನ ಅಲ್ಲಲ್ಲಿ ಗುಂಪು ಗುಂಪಾಗಿ ನಿಂತು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು, ಸುತ್ತಾಡುತ್ತಿದ್ದರು. ಮಾತಾಡೋಕೆ ಎಲ್ಲರ ಹತ್ತಿರ ಸಾಕಷ್ಟು ವಿಷಯ ಇತ್ತು.

ಒಂದು ಸಲ ಇದೇ ಗುಂಪಿನ ಒಬ್ಬ ವಿದೇಶಿ ಸದಸ್ಯ ತಮ್ಮ ಜೊತೆ ಕಳೆಯುವುದಕ್ಕೆ ಆಹ್ವಾನಿಸಿದ. ಆತ ಭಾರತದ ಬಗ್ಗೆ, ಶಾಲ್ಮಲಿಯಿಂದ ವಿಷಯ ತಿಳಿದುಕೊಳ್ಳಬೇಕೆಂದು ಆಸೆ ವ್ಯಕ್ತಪಡಿಸಿದ. ಆದರೆ ಅವಳಿಗೆ ಭಾರತ ವರ್ಷದ ಬಗ್ಗೆ ತಿಳಿದುಕೊಳ್ಳುವುದಕ್ಕಿಂತ ತನ್ನ ಗಂಡನನ್ನು ತಿಳಿದುಕೊಳ್ಳುವುದು ಮುಖ್ಯವಾಗಿತ್ತು. ತನಗೆ ತನ್ನ ಗಂಡನ ಬಗ್ಗೆ ತಿಳಿದುಕೊಳ್ಳುವ ಬಯಕೆ. ಆತನಿಗೆ ಭಾರತದ ಬಗ್ಗೆ ತಿಳಿದುಕೊಳ್ಳುವ ಆಸೆ, ಆತನ

ಆಸೆಗಳ ಪ್ರವಾಹದೊಂದಿಗೆ ತಾನು ನಡೆಯಲು ಸಾಧ್ಯವೇ? ಎರಡು ಬಾರಿ ಆತ ಕೇಳಿದಾಗಲೂ ಸೌಜನ್ಯದಿಂದಲೇ ಆತನೊಂದಿಗೆ ಕಾಲ ಕಳೆಯಲು ನಿರಾಕರಿಸಿದಳು. ಅಂಗಡಿಗಳನ್ನೆಲ್ಲಾ ಸುತ್ತಾಡಿ ನರೇಶ್‌ಗೆ ಇಷ್ಟವಾಗುವ ಬಣ್ಣಗಳ ಬಟ್ಟೆ ಖರೀದಿಸಿದಳು. ಅಮ್ಮ ಅಪ್ಪನಿಗೇಂತ ಉಡುಗೊರೆ ಕೊಂಡಳು. ಜೊತೆಗೆ ಸಣ್ಣ ಪುಟ್ಟ ವಸ್ತುಗಳನ್ನೆಲ್ಲ ಯಾರಿಗಾದರೂ ಕೊಡಬೇಕಾದರೆ, ಇರಲಿ ಅಂತ ಕೊಂಡುಕೊಂಡಳು. ನಾಳೆ ಭಾರತಕ್ಕೆ ಹೊರಡಬೇಕು. ಸಂಜೆಗೆ ಸಂತೋಷಕೂಟ, ದೊಡ್ಡ ಹಾಲ್‌ನಲ್ಲಿ ವ್ಯವಸ್ಥೆ ಮಾಡಿದೆ. ಕುಡಿತ, ಕುಣಿತ, ಮನೋರಂಜನೆ! ಇವರಿಗೆಲ್ಲ ಈ ಸಂತೋಷ ಎಲ್ಲಿಂದ ಬರುತ್ತೆ! ನಾಲ್ಕು ಸಲ ನಗಬೇಕಾದರೇನೇ ಬಾಯಿ ನೋಯುತ್ತೆ ಇಲ್ಲಿ, ನೆನ್ನೆ ತನಕ ಗಂಭೀರವಾಗಿ ಸಂಶೋಧನೆ ಚರ್ಚೆ ಅದೂ ಇದೂಂತ ಮುಳುಗಿದ್ದವರು ಇವತ್ತು, ಈಗ ಎಲ್ಲಾ ಮರೆತು ಹೀಗೆ ಉನ್ಮತ್ತರಾಗಿ ಕುಣಿಯುತ್ತಿದ್ದಾರೆ. ಹುಚ್ಚು ಸಂತೋಷ, ಸಂಭ್ರಮಕ್ಕೂ ಯಾವುದಾದರೂ ವಿಶೇಷವಾದ ಪ್ರವೇಶ ದ್ವಾರವಿದೆಯೇ?" ಇವರೆಲ್ಲ ಇಷ್ಟೊಂದು ಖುಷಿಯಾಗಿ ಕುಣಿಯುತ್ತಿದ್ದಾರೆ!

ಶಾಲ್ಮಲಿ ಇದರ ಬಗ್ಗೇನೇ ಯೋಚನೆ ಮಾಡುತ್ತಿರುವಾಗ ಡೆನ್ ಮಾರ್ಕ್‌ನಿಂದ ಬಂದಿದ್ದ ಮುದುಕರೊಬ್ಬರು ಬಿಕ್ಕಿ ಬಿಕ್ಕಿ ಅಳುತ್ತ ತಮ್ಮ ಭಾಷೆಯಲ್ಲಿ ಅವಳೊಂದಿಗೆ ಮಾತಾಡತೊಡಗಿದರು. ಆತನ ಬಳಿಗೆ ಬಂದು ಕುಳಿತು ಅಳುವವರ ಸಂಖ್ಯೆ ದೊಡ್ಡದಾಯಿತು. ಇನ್ನೊಂದು ಕಡೆ ಸೊಂಟಗಳನ್ನು ಬಳಸಿ ನರ್ತಿಸುವವರೂ ಹೆಚ್ಚುತ್ತಿದ್ದರು. ಮೈಮೇಲೆ ಎಚ್ಚರವಿಲ್ಲದೆ ಸಂಗೀತದ ಗತಿಗೆ ಹೆಜ್ಜೆ ಹಾಕುತ್ತಾ ಕುಣಿಯುತ್ತಿದ್ದರು. ಪ್ರತಿಯೊಬ್ಬರೂ ತಮ್ಮ ವ್ಯಕ್ತಿತ್ವದ ಚೌಕಟ್ಟಿನಿಂದ ಹೊರಗೆ ಬಂದು, ಸಂತೋಷದಿಂದಲೋ, ನಶೆಯಿಂದಲೋ ಕುಣಿಯುತ್ತಲೇ ಇದ್ದರು!

ಶಾಲ್ಮಲಿ ನಿಧಾನವಾಗಿ ಎದ್ದು ಹೊರಗೆ ನಡೆದಳು. ಎಡಗಡೆ ಅಂಗಡಿಗಳು ಇದ್ದವು. ಆ ಕಡೆ ತಿರುಗಿದಳು. ಗಡಿಯಾರಗಳು, ಬಗೆಬಗೆಯ ಸೆಂಟುಗಳು, ಬಟ್ಟೆಗಳು, ನೋಡಿ ನೋಡಿ ಕಾಲ ಕಳೆಯುತ್ತಿದ್ದಳು. ರಾತ್ರಿ ಹನ್ನೊಂದು ಗಂಟೆ ಮಾತ್ರವೇ ಆಗಿತ್ತು. ನಿದ್ದೆ ಬರುವ ಹಾಗಿರಲಿಲ್ಲ. ಹೋಟೆಲಿನಿಂದ ಹೊರಗೆ ಹೊರಟು ಸ್ವಲ್ಪ ಹೊತ್ತು ಹುಲ್ಲಿನ ಮೇಲೆ ಅಡ್ಡಾಡಿದಳು. ಆಮೇಲೆ ಟ್ಯಾಕ್ಸಿಯನ್ನು ಕರೆದು, ಹಾಸ್ಟೆಲ್‌ಗೆ ಹೊರಟಳು. ಬೇರೆಯವರಿಗೋಸ್ಕರ ಕಾಯುವುದು ಬೇಕೆನಿಸಲಿಲ್ಲ.

ದಾರಿ ಬಹಳ ದೂರ ಇತ್ತು. ರಸ್ತೆಗಳಲ್ಲಿನ ದೀಪಗಳ ಬೆಳಕು ಕಣ್ಣು ಕುಕ್ಕಿತು. ಬಿಯರ್‌ನ ಬಾಟಲಿಗಳು, ಡಬ್ಬಗಳು ಬೀದೀಲೆಲ್ಲ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಒಬ್ಬ ಮಧ್ಯ ವಯಸ್ಸಿನ ವ್ಯಕ್ತಿ ಅವುಗಳನ್ನು ಕಾಲಿನಿಂದ ಒದೆಯುತ್ತಾ, ಚೆಂಡಿನಂತೆ ಆಡುತ್ತ, ಸಿಳ್ಳು ಹೊಡೆಯುತ್ತಾ ಸಾಗುತ್ತಿದ್ದ. ಇಲ್ಲಿನ ಗತಿಶೀಲ ಸಮೃದ್ಧ ಬದುಕಿನ ನಡುವೆಯೂ ವ್ಯಕ್ತಿ ಏಕಾಕಿತನದಲ್ಲೇಕೆ ಜೀವಿಸುತ್ತಾನೆ?

ಮುಸಲಧಾರೆಯಾಗಿ ಬಿದ್ದ ಮಳೆಯಿಂದಾಗಿ ಮಾವಿನ ಮರದಲ್ಲಿನ ಮೊಗ್ಗುಗಳೆಲ್ಲ ಉಡಿದು ಒಂದನ್ನೊಂದು ಬೆಸೆದುಕೊಂಡಿದ್ದ ಕೊಂಬೆಗಳೆಲ್ಲ ಬೋಳು ಬೋಳಾದವು.

ಚೆಲ್ಲಾಪಿಲ್ಲಿಯಗಿ ಹರಡಿ ಬಿದ್ದಿದ್ದ ಮಾವಿನ ಮೊಗ್ಗುಗಳನ್ನು ಹಕ್ಕಿಗಳು ಕುಕ್ಕಿ ತಿನ್ನುತ್ತಿದ್ದವು. ಆದರೆ ಕೋಗಿಲೆಗಳಂತೆ ಕೂಗಲು ಮಾತ್ರ ಅವುಗಳಿಂದ ಆಗಲಿಲ್ಲ. ಸುತ್ತಲೂ ನೀರವ ಮೌನ ವ್ಯಾಪಿಸಿತು.

* * *

ಶಾಲ್ಮಲಿ ಪ್ರವಾಸದಿಂದ ದಣಿದು ಬೇಸತ್ತು ಮರಳಿದ್ದಳು. ಬೇಲಾ ಮಾಮೂಲಿನಂತೆ ಚಹದ ಜೊತೆಗೆ, ಬಂದಿದ್ದ ಕಾಗದಗಳೆಲ್ಲವನ್ನೂ ತಂದಿರಿಸಿದಳು. ಇಡೀ ವಾರದ ಸಂಗತಿಗಳನ್ನೆಲ್ಲ ವರದಿ ಒಪ್ಪಿಸಿದಳು. ಬೇಲಾಳಲ್ಲಿ ಯಾವುದೋ ಸಂದೇಹ ಮೂಡಿರುವುದು ಅವಳಿಗೆ ಆಶ್ಚರ್ಯವೆನಿಸಿತು! ಕುದಿವ ನೀರಿನಲ್ಲಿ ಬಿದ್ದು ಬೇಯುವ ನೋವಿನಿಂದ ಪ್ರಜ್ಞಾಶೂನ್ಯಳಾದಳು. ಅಂತರಾಳದೊಳಗಿಂದ ಎದ್ದ ತನ್ನದೇ ಚೀರಾಟದಿಂದ ಭಯಭೀತಳಾದಳು.

ಸಿಡಿಯುತ್ತಿದ್ದ ತಲೆಯನ್ನು ಬೆರಳುಗಳಿಂದ ಒತ್ತಿದಳು. ವಿಕ್ಷುಬ್ಧ ಮನಸ್ಸಿನಲ್ಲಿ ಲಾವಾರಸ ಕುದಿಯುತ್ತಿತ್ತು. ಯಾವುದು ಆಗಬಾರದೆಂದುಕೊಂಡಿದ್ದಳೋ, ಅದು ಆಗಿದೆ ಎಂಬ ಸತ್ಯವನ್ನು ಸ್ವೀಕರಿಸಲು ಪ್ರಯತ್ನಿಸುತ್ತಿದ್ದಳು. ನೋವಿನಿಂದ ಮೂಳೆ ಮುರಿಯುತ್ತಿದ್ದಂತೆನಿಸಿತು. ಕೋಪ, ಜಿಗುಪ್ಸೆಗಳು ಅವಳ ಅಂತರಂಗವನ್ನು ಕಲಕುತ್ತಿದ್ದವು ತನ್ನ ನಂಬಿಕೆ ಕುಸಿಯಿತು. ಅವಳ ಅಸ್ತಿತ್ವವೇ ಭೂಕಂಪದಿಂದ ಕುಸಿದು ನೆಲಸಮವಾಯಿತು. ಇಲ್ಲ ಸಲ್ಲದ ಕಟ್ಟುಕತೆಗಳೆಂದು ಭಾವಿಸಿ ಕಿವಿಮೇಲೆ ಹಾಕಿಕೊಳ್ಳಲೂ ಬಯಸದ ಶಾಲ್ಮಲಿಯ ಮುಂದೆ ಕಟ್ಟು ಕತೆಗಳೇ ಕಟು ಸತ್ಯವಾಗಿ ತನ್ನ ಬಾಗಿಲಲ್ಲಿ ನಿಂತಿದೆ. ತನ್ನ ಭ್ರಮೆ ಪ್ರತ್ಯಕ್ಷ ಪ್ರಮಾಣವಾಗಿದೆ. ಇದು ಹೇಗೆ ಸಾಧ್ಯವಾಯಿತು! ಇದೆಲ್ಲ ಮೋಸವೋ ಅಥವಾ ತನ್ನ ಕಣ್ಣಿನ ದೋಷವೋ! ಸತ್ಯ ಏನೆಂದು ನೋಡಲು ನಿರಾಕರಿಸಿದ್ದು ತಪ್ಪೋ ಅಥವಾ ನರೇಶನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲೇ ಇಲ್ಲವೋ?

ಎಲ್ಲೆಲ್ಲೂ ಅವನ ಉಸಿರು, ಅವನ ಮಾತು, ಅವನ ಸ್ಪರ್ಷ! ಸಂಬಂಧದ ಕನ್ನಡಿಯ ಮೇಲೆ ಅವನ ಬೆರಳುಗಳ ಅಸಹ್ಯ ಗುರುತುಗಳು, ಇಂತಹ ಸ್ಥಿತಿಯಲ್ಲಿ ತಾನು...? ಅವಮಾನದ ಬೆಂಕಿಯಲ್ಲಿ ಬೇಯುತ್ತಾ, ಕೆಂಡಗಳ ಮೇಲೆ ಹೆಜ್ಜೆಯಿಡುತ್ತಿದ್ದ ಶಾಲ್ಮಲಿ ಹಾಸಿಗೆಯ ಮೇಲೆ ಮಲಗಲಿಲ್ಲ, ಸೋಫಾದಲ್ಲಿ ಕುಳಿತುಕೊಳ್ಳಲಿಲ್ಲ. ಅವಳಿಗೆ ಅವೆಲ್ಲ ಅಸಹ್ಯವೆನಿಸಿತು. ಎದೆಯೊಳಗೆ ಬೆಂಕಿಯನ್ನು ತುಂಬಿಕೊಂಡೇ ಇದ್ದಳು.

ಬಂದ ದಿನದಿಂದ ನರೇಶನನ್ನು ಒಂದು ದಿನವಾದರೂ ಸರಿಯಾಗಿ ನೋಡಲಿಲ್ಲ. ನರೇಶನಿಗೆ ಶಾಲ್ಮಲಿಯ ಅವಮಾನ ತನ್ನ ಅವಮಾನ ಅಂತ ಅನಿಸಲಿಲ್ಲ. ಆದರೆ ಅವಳೂ ಹಾಗೆಯೇ ಅವನಿಗಾದ ಅವಮಾನವನ್ನು ತನಗಾದ ಅವಮಾನವೆಂದು ಭಾವಿಸದೆ ತನ್ನೆಲ್ಲ ಜಿಗುಪ್ಸೆಯನ್ನು ಅವನ ಮೇಲೆ ಕಾರಿಕೊಳ್ಳುವುದೆ? ನರೇಶನ

ಬಗೆಗಿನ ಪ್ರೀತಿಯನ್ನು ತಿರಸ್ಕರಿಸಬೇಕು ಎನ್ನುವುದಕ್ಕಿಂತ ತನ್ನೊಳಗೆ ಅಡಗಿದ್ದ ಹೆಣ್ಣಿನ ಅಭಿಮಾನವನ್ನು ಅವನು ತಿರಸ್ಕರಿಸಬೇಕು ಎನ್ನುವುದಕ್ಕಿಂತ ತನ್ನೊಳಗೆ ಅಡಗಿದ್ದ ಹೆಣ್ಣಿನ ಅಭಿಮಾನವನ್ನು ಅವನು ತಿರಸ್ಕರಿಸಬಾರದು, ಎನ್ನುವುದು ಅವಳ ಆಸೆ. ಆ ಹೆಣ್ಣು ಪ್ರೀತಿ, ಪ್ರೇಮಗಳಿಂದ ತನ್ನನ್ನು, ತನ್ನ ಸ್ವಾಭಿಮಾನವನ್ನು ಎಲ್ಲವನ್ನು ತನ್ನ ಜೊತೆಗಾರನಿಗೆ ಕೊಟ್ಟುಬಿಟ್ಟಿದ್ದಳು. ಇಂತಹವಳನ್ನು ನರೇಶ ತಿರಸ್ಕರಿಸುವುದೇ? ನನ್ನ ಅದೃಷ್ಟ ನನ್ನನ್ನೇಕೆ ಹೀಗೆ ಮೋಸ ಮಾಡಿದೆ? ಆಕಾಶ ಭೂಮಿ ಒಂದು ಮಾಡಿ, ನನ್ನೆಲ್ಲ ಶ್ರಮದ ಫಲವನ್ನು ನನ್ನ ಪ್ರಿಯನಿಗಾಗಿ ಎಂದು ಭಾವಿಸಿದ್ದೆ. ಆದರೆ ಈಗ ಅದೆಲ್ಲವನ್ನೂ ಮೂರನೆಯವರು ಯಾರೋ ಅನುಭವಿಸಬೇಕೇ? ಸಣ್ಣ ಪುಟ್ಟ ಮಾತು ಇಬ್ಬರ ನಡುವೆ ಬರುತ್ತೆ ಹೋಗುತ್ತೆ. ಅವನ ಎಷ್ಟೋ ವಿಷಯಗಳು ನನಗೆ ಹಿಡಿಸುತ್ತಿರಲಿಲ್ಲ ನಿಜ. ಅವನ ಕಿರಿಕಿರಿ ಇತ್ಯಾದಿ. ಆದರೆ ಅದಕ್ಕೇಂತ, ಹೀಗೆಲ್ಲ ಹೊರಗೆ ಹೋಗುವುದೇ? ಇವತ್ತು ನರೇಶ ಮಾಡಿದ ಕೆಲಸದ ಮುಂದೆ ಇಲ್ಲೀವರೆಗಿನ ಅವನ ಹಿಂಸೆ, ಕಿರಿಕಿರಿ, ಕೋಪ ಇವೆಲ್ಲ ಎಷ್ಟು ಕ್ಷುಲ್ಲಕ!...... ಅವನನ್ನು ಎಂತಹ ವಂಚಕನಾಗಿ ಮಾಡಿದೆ?

ನರೇಶಗೆ ಜೀವನೋತ್ಸಾಹ ಹೆಚ್ಚು ಅವನು ಬಯಸುವ ಪ್ರತಿಯೊಂದನ್ನೂ ಅದರ ಬೆನ್ನಟ್ಟಿ ದಕ್ಕಿಸಿಕೊಳ್ಳುತ್ತಾನೆ. ಅಲ್ಲಿವರೆಗೆ ಅವನ ಮನಸ್ಸಿಗೆ ನೆಮ್ಮದಿಯೇ ಇರುವುದಿಲ್ಲ. ಇದೆಲ್ಲವನ್ನೂ ಅವಳು ಕುತೂಹಲದಿಂದ ಗಮನಿಸುತ್ತಿದ್ದಳು. ಆದರೆ ಈ ದಿಕ್ಕಿಗೆ ಹೊರಳಬಹುದೆಂದು ಅನಿಸಿರಲಿಲ್ಲ. ಏನೇ ಮಾಡಿದರೂ ತನಗೆ ಮೋಸ ಮಾಡುವುದಿಲ್ಲ ಎಂಬ ನಂಬಿಕೆಯಲ್ಲಿದ್ದಳು. ಆದರೆ ಎಂತಹ ವಿಶ್ವಾಸಘಾತ!

ಶಾಲ್ಮಲಿಗೆ ಇನ್ನು ತಡೆಯುವುದು ಆಗಲಿಲ್ಲ. ಸಹನೆಗೂ ಒಂದು ಮಿತಿ ಇದೆ. ಮನಸ್ಸಿನಿಂದ ಎಷ್ಟೇ ಅಯ್ಯೋ ಅಂತ ಅನಿಸಿದರೂ, ತಡೆಯುವುದಕ್ಕೇ ಆಗದ ಸನ್ನಿವೇಶಗಳಲ್ಲಿ ಸಹನೆ ಮೀರಿ ಹುಚ್ಚಿಯಾಗುತ್ತಿದ್ದಳು. ನರೇಶ್ ಕುಡಿದು ತೂರಾಡುತ್ತಾ ಬಂದು ಹಾಸಿಗೆಯ ಮೇಲೆ ಬಿದ್ದುಕೊಂಡ ಕ್ಷಣಗಳಲ್ಲಿ ಅವಳಿಗೆ ತಡೆಯಲಾಗದ ಸಿಟ್ಟು ಬರುತ್ತಿತ್ತು. ಉಗ್ರ ರೂಪವನ್ನು ತಳೆದು ಬಿಡುತ್ತಿದ್ದಳು. ಕರುಣೆ, ದಯೆ ಎಲ್ಲಾ ಮಾಯವಾಗಿ, ಇವನೇನು ಮೃಗವೋ ಮನುಷ್ಯನೋ? ಎಂದು ಕೇಳಬೇಕೆನಿಸುತ್ತಿತ್ತು. ಹಾಗೆಯೇ ಅವನನ್ನು ಎತ್ತಿ ಆಚೆಗೆ ಎಸೆದು ಬಿಡಬೇಕೆಂತಲೂ ಯೋಚಿಸುತ್ತಿದ್ದಳು.

ಹಗಲೂ ರಾತ್ರಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಿದ್ದಳು. ಆಕ್ರೋಶದಿಂದ ಒಳಗೆ ಕುದಿಯುತ್ತಿದ್ದರೂ, ಅಳಬಾರದೆಂದುಕೊಂಡಳು. ನರೇಶನ ಮುಂದೆ ದೀನಳಾಗಬಾರದು. ಈ ಮನೆ ಅವನದು ಮಾತ್ರ ಅಲ್ಲ. ಅದಕ್ಕೆ ಮನೆ ಈ ಸ್ಥಿತಿಗೆ ಬಂದಿದ್ದರೂ ಅವನಿಗೆ ಯೋಚನೆಯಿಲ್ಲ. ಅವನಿಗೆ ತಿಳಿಸಬೇಕು. 'ಈ ಮನೆ ನಿನ್ನದು. ನಿನ್ನ ಜವಾಬ್ದಾರಿ ಇದೆ, ಅಂತ ಹೇಳಬೇಕು, ಎನಿಸಿದರೂ, ಅವನಿಗೆ ತಿಳಿಸಿ ಹೇಳೊದಕ್ಕೆ ನಾನು ಯಾರು! ಶ್ರದ್ಧೆ, ಪ್ರೀತಿ, ಪ್ರೇಮ, ಆಸಕ್ತಿಗಳು ತಿಳಿಸಿ ಹೇಳುವಂತಹವೇ? ಇಲ್ಲ ಬೇಡುವಂತಹ ವಸ್ತುಗಳೇ? ಮನುಷ್ಯನಲ್ಲಿ ಇವೆಲ್ಲ ಸ್ವಭಾವತಃ ಇರಬೇಕಾದ್ದು. ಇವೆಲ್ಲ ನರೇಶನಲ್ಲಿ

ಇಲ್ಲವಾದಲ್ಲಿ, ಚೇತನಾ ಶೂನ್ಯನಾಗಿರುವ ಪಕ್ಷದಲ್ಲಿ ನಾನೇ ಹೇಳಿ ಬಿಡುತ್ತೇನೆ. ನನ್ನ ನಿರ್ಣಯವನ್ನು ತಿಳಿಸಿ ಬಿಡುತ್ತೇನೆ. 'ಎಂತಹ ಪರಿಸ್ಥಿತಿಯಲ್ಲಿಯೇ ಆಗಲಿ ಅವನ ಈ ಸ್ವಚ್ಛಂದತೆಯನ್ನು ತಾನು ಸಹಿಸಿಕೊಳ್ಳುವುದಿಲ್ಲ' ಎಂದು.

ಶಾಲ್ಮಲಿ ಈ ಮಾನಸಿಕ ಯಾತನೆಯ ಪರಿಣಾಮವಾಗಿ ಖಾಯಿಲೆ ಬಿದ್ದಳು, ತನ್ನನ್ನು ನೋಡಿಕೊಳ್ಳಲು ತಾಯಿ ಇಲ್ಲಿಗೆ ಬಂದಳು. ತಾಯಿಗೆ ಇಲ್ಲಿನ ಪರಿಸ್ತಿತಿ ಎಲ್ಲಾ ಸ್ಪಷ್ಟವಾಗಿ ತಿಳಿಯಿತು. ಬರುತ್ತಿದ್ದಂತೆ ಅರ್ಥಮಾಡಿಕೊಂಡಳು. ಮನೆ ಅಸ್ತವ್ಯಸ್ತವಾಗಿದೆ. ನರೇಶನಿಗೆ ಲಕ್ಷ್ಯವೇ ಇಲ್ಲ. ಕೆಲಸದವರು ಏನು ಮಾಡಲು ದಿಕ್ಕು ತೋಚದಂತಿದ್ದಾರೆ. ಶಾಲ್ಮಲಿ ಹೀಗೆ ಸೊರಗಿ ಹೋಗಲು ಕಾರಣ ಇನ್ನೇನು ಬೇಕಾಗಿದೆ. ಇಡೀ ರಾತ್ರಿ ಅಪ್ಪ, ಅಮ್ಮ ಮಗಳ ತಲೆ ಹತ್ತಿರಾನೇ ಕುಳಿತು ಜ್ವರ ತಾಪದಿಂದ ಶಾಲ್ಮಲಿ ಬಡಬಡಿಸುವುದನ್ನು ಕೇಳಿಸಿಕೊಂಡರು. ಒಬ್ಬರನ್ನೊಬ್ಬರು ದಿಟ್ಟಿಸುತ್ತಾ, ತಣ್ಣೀರಿನ ಬಟ್ಟೆಯನ್ನು ಅವಳ ಹಣೆ ಮೇಲೆ ಹಾಕುತ್ತಾ ಕುಳಿತರು. ಎಷ್ಟೋ ರಾತ್ರಿಗಳು ಪಾಪ ನಿದ್ದೆಯಿಲ್ಲದೆ ಕಳೆದರು. ಒಂದು ದಿನ ರಾತ್ರಿ ಎದ್ದು ಬಾಗಿಲು ತೆಗೆದಾಗ ನರೇಶ್ ತೂರಾಡುತ್ತಾ ಒಳಗೆ ಪ್ರವೇಶ ಮಾಡಿದ್ದನ್ನು ಕಂಡರು. ಆವತ್ತಿನಿಂದ ಅವರ ಪಾಲಿಗೆ ನಿದ್ದೇ ಅನ್ನುವುದೇ ಹೊರಟು ಹೋಯಿತು!

ಶಾಲ್ಮಲಿಯ ಜ್ವರ ಕಡಿಮೆಯಾಯಿತು. ಬಲಹೀನತೆ ಇನ್ನೂ ಹಾಗೇ ಇತ್ತು. ಅಮ್ಮ ಮಗಳಿಂದ ಏನನ್ನೂ ವಿಚಾರಿಸಲಿಲ್ಲ. ಸ್ನೇಹಿತರ ಹಾಗಿದ್ದ ಅಪ್ಪ ಎಲ್ಲ ತಿಳಿದಿದ್ದರೂ ಸುಮ್ಮನಿದ್ದರು. ತನ್ನ ಕಣ್ಣಲ್ಲಿ ಕಾಣುತ್ತಿದ್ದ ನೋವಿನ ಅರಿವು ಶಾಲ್ಮಲಿಗೆ ಇರಲಿಲ್ಲ. ಆದರೆ ಅಮ್ಮ ಅಪ್ಪನ ಕಣ್ಣಲ್ಲಿ ಇಣುಕುತ್ತಿದ್ದ ನೋವನ್ನು ನೋಡಿದ ಶಾಲ್ಮಲಿಗೆ ತಡೆಯಲಾಗಲಿಲ್ಲ. ಮನಸ್ಸು ಬಿಚ್ಚಿ ಎಲ್ಲ ಅವರ ಮುಂದೆ ಹೇಳುವ ಮನಸ್ಸಾದರೂ, ಈ ವಯಸ್ಸಿನಲ್ಲಿ ಅವರಿಗೆ ನೋವುಂಟು ಮಾಡುವ ಇಚ್ಛೆಯಾಗಲಿಲ್ಲ. ಬದುಕಿರುವವರೆಗೆ, ನಾನು ಸುಖವಾಗಿದ್ದೇನೆ, ಸಂತೋಷವಾಗಿದ್ದೇನೆ, ಎನ್ನುವ ಭ್ರಮೆಯಲ್ಲಿಯೇ ಇರಲಿ, ಎಂದು ಆಲೋಚಿಸಿದಳು.

ಶಾಲ್ಮಲಿಯ ಬದುಕಿನ ತಂಬೂರಿಯ ತಂತಿಗಳೆಲ್ಲ ಕಿತ್ತು ಹೋಗಿ ಅಪಸ್ವರವನ್ನಷ್ಟೇ ಹೊರಡಿಸುತ್ತಿತ್ತು. ಬದುಕಿನ ಲಯ ಉಡುಗಿ ಹೋಗಿತ್ತು. ಗುಣುಗುಣಿಸುವುದಕ್ಕೆ ಯಾವ ರಾಗವೂ ನೆನಪಿಗೆ ಬರುತ್ತಿರಲಿಲ್ಲ. ಪ್ರಯತ್ನ ಪೂರ್ವಕವಾಗಿ ಉಡಿದ ತಂತಿಗಳನ್ನು ಮತ್ತೆ ಬಿಗಿದು ಸ್ವರ ಹೊರಡಿಸುವಾಗ, 'ನಾನು' ಎಂಬುದನ್ನು ಹುಡುಕುವ ಪ್ರಯತ್ನ ಮಾಡಿದರೆ ನರೇಶ್ ಅಡ್ಡವಾಗಿ ಬಂದು ನಿಲ್ಲುತ್ತಿದ್ದ. 'ನಾನು' ಎಂಬುದು ಅಸ್ತಿತ್ವದಲ್ಲಿ ಇಲ್ಲವೆನಿಸುತ್ತಿತ್ತು. ಆದರೆ ಅದರೊಂದಿಗೇ ಹೊಂದಿಕೊಂಡು ಹೊರಟಾಗ ಕೈಗೆ ದಕ್ಕುತ್ತಿದ್ದುದು ತನ್ನ ಅರ್ಧ ಭಾಗ ಮಾತ್ರ, ಇನ್ನರ್ಧವಾದ ನರೇಶನ ಜಾಗ ಖಾಲಿಯಾಗಿ ಇರುತ್ತಿತ್ತು. ತಾನು ಕಳೆದುಕೊಂಡ ತನ್ನದೇ ಆದ ಆ ಅರ್ಧಭಾಗವನ್ನು ಅರ್ಧ ದೇಹವನ್ನು ಹುಡುಕುತ್ತಾ ಕುಳಿತು ಬಿಡುತ್ತಿದ್ದಳು.

ಬದುಕಿನಲ್ಲಿನ ಈ ತಿರುವು ಎಷ್ಟು ವಿಚಿತ್ರ! ಕಣ್ಣೆದುರಿಗಿದ್ದರೂ ಸ್ಪರ್ಷಕ್ಕಿಲ್ಲ. ಸಂವೇದನೆಗಿಲ್ಲ. ಮನಸ್ಸಿನ ತಂತಿಗಳನ್ನು ಮಿಡಿಯುವುದಿಲ್ಲ. ಎಲ್ಲವೂ ನಿರ್ಜೀವವಾಗಿ ಶೂನ್ಯವಾಗಿ ಬಿದ್ದಿರುವಂತಿದೆ. ಅವಳ ಸಂವೇದನೆ, ಸೂಕ್ಷ್ಮತೆ, ತೀಕ್ಷ್ಣತೆ, ಚೈತನ್ಯ ಇಂದ್ರಿಯಗಳ ಪ್ರಖರತೆ – ಇವುಗಳಿಗೆಲ್ಲ ಏನಾಗಿದೆ? ಕ್ಷಣ ಕ್ಷಣಕ್ಕೂ ಚಿಮ್ಮುವ ಉತ್ಸಾಹದ ವ್ಯಕ್ತಿತ್ವ ಎಂದೂ ಹೀಗೆ ಸೊರಗಿ ಕೊರಗಿ ಕರಗಿ, ಸ್ಥಗಿತಗೊಳ್ಳುವುದು ಕನಸಿನಲ್ಲಿಯೂ ಸಾಧ್ಯವಿರಲಿಲ್ಲ. ಆದರೆ ಈಗ ಈ ಉತ್ಸಾಹ, ಹುಮ್ಮಸ್ಸಿನ ಚಿಲುಮೆ ಇದ್ದಕ್ಕಿದ್ದಂತೆ ಬತ್ತಿ ಹೋದಂತಿದೆ.

ಅವಳಿಗೆ ಜೀವನದಲ್ಲಿ ಪ್ರಾಪ್ತವಾದದ್ದು ಬಹಳ ದೊಡ್ಡದೇನೂ ಆಗಿರಲಿಲ್ಲ. ಮಹತ್ತಾದ್ದು? ಅತಿ ಸುಂದರವಾದ್ದು?.... ಯಾವುದೂ ಅಲ್ಲ! ಆದರೂ ಪ್ರಾಪ್ತವಾದುದರ ಬಗ್ಗೆ ತೃಪ್ತಿ ಇತ್ತು ಪ್ರೀತಿ ಇತ್ತು. ತನಗೆ ಸಿಕ್ಕಷ್ಟೇ ಸಂತೋಷವೆನಿಸಿತ್ತು.

ಆದರೆ ಒಂದನ್ನು ಮಾತ್ರ ಹಾರೈಸುತ್ತಿದ್ದಳು – 'ತನಗೆ ಸಿಕ್ಕದ್ದು ತನ್ನಿಂದ ದೂರವಾಗದಿರಲಿ. ಸದಾ ಅವನು ತನ್ನವನಾಗಿರಲಿ ಎಂದು. ನರೇಶ್ ತನ್ನವನಾಗಿ ಇರಬೇಕು ನಿಜ. ಆದರೆ ಅವನು ಆರಾಧನೆಗೆ ಯೋಗ್ಯವಾದ ಸ್ಥಾನದಲ್ಲಿ ಇರಲಿಲ್ಲ. ಈಗ ಜೀವನದಲ್ಲಿ ಬೇಡುವುದಾದರೆ, ಏನನ್ನು ಬೇಡುವುದು?

ಇಂತಹ ಆಲೋಚನೆಗಳಲ್ಲಿ ವಾರಗಳೇ ಕಳೆದು ಹೋದವು. ಶಾಲ್ಮಲಿ ಯಾವ ನಿರ್ಣಯವನ್ನೂ ತೆಗೆದುಕೊಳ್ಳಲಿಲ್ಲ. ನರೇಶನ ಜೊತೆ ಮಾತಾಡಿ. ಈ ಸಂಗತಿಯ ಬಗ್ಗೆ ನೇರವಾಗಿ ಪ್ರಶ್ನಿಸಿ ಆಮೇಲೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳುವುದು. ಇನ್ನೊಮ್ಮೆ ಎಚ್ಚರಿಸಿ ನೋಡುವುದು ಅದಕ್ಕೆ ಅವನ ಪ್ರತಿಕ್ರಿಯೆ ಏನೂಂತ ತಿಳಿದು ಮುಂದಿನ ಹೆಜ್ಜೆ ಇಡೋದು. ಯಾವನಿಗೆ ಸಂಬಂಧಗಳ ಬಗ್ಗೆ ಗೌರವ ಇಲ್ಲವೋ, ಅದು ಅವನ ದೃಷ್ಟಿಯಲ್ಲಿ ಇಲ್ಲವೋ, ಅಂಥವನಿಂದ ಇನ್ನೂ ಆಸೆ ಇರಿಸಿಕೊಳ್ಳುವುದು ವ್ಯರ್ಥವಲ್ಲವೇ? ಯಾವುದೋ ಭಯಂಕರ ಕನಸು ಕಂಡಂತೆನಿಸಿತು. ಅವಳ ಚೈತನ್ಯವನ್ನೇ ಉಡುಗಿಸಿ, ಭವಿಷ್ಯವನ್ನು ಕತ್ತಲಾಗಿಸಿತ್ತು. ವರ್ತಮಾನವೇ ಅಸ್ಪಷ್ಟವಾಗಿದೆ. ಯಾವುದೋ ಶೂನ್ಯದಲ್ಲಿ ಮುಳುಗಿ ಎದೆಯಾಳದ ನೋವನ್ನು ಅದುಮಿಟ್ಟುಕೊಂಡು ತನ್ನೊಳಗೆ ತಾನೇ ಪ್ರಶ್ನಿಸಿಕೊಳ್ಳುತ್ತಾಳೆ. ನರೇಶನ ಈ ವ್ಯವಹಾರವನ್ನು, ವರ್ತನೆಯನ್ನು ಮರೆತು ಕ್ಷಮಿಸಿ ಬಿಡಲು ಸಾಧ್ಯವೇ?

ಒಂದು ದಿನದ ಮಟ್ಟಿಗೆ ಶಾಲ್ಮಲಿ ಬೇರೆ ಊರಿಗೆ ಹೋಗಬೇಕಾಗಿದೆ. ಅವಳು ಹೋದ ಮೇಲೆ ಆಗ ಬಾರದ್ದೇನಾದರೂ ಆದರೆ ಸಹಿಸುವುದು ಕಷ್ಟವಾಗುತ್ತೆ. ಅದಕ್ಕಿಂತ ಹೋಗುವ ಮೊದಲು ನರೇಶನ ಜೊತೆ ನೇರವಾಗಿ ಮಾತಾಡಿದರೆ, ನಿರ್ಣಯ ತೆಗೆದು ಕೊಳ್ಳುವುದು ಇಬ್ಬರಿಗೂ ಸುಲಭವಾಗುತ್ತದೆ.

ಒಂದು ರಜೆ ದಿನ ಮಧ್ಯಾಹ್ನ ಊಟ ಆದ ಮೇಲೆ ಶಾಲ್ಮಲಿ ಹೊರಗಡೆ ಎರಡು ಕುರ್ಚಿಗಳನ್ನು ಹಾಕಿಸಿದಳು. ನರೇಶ್ ಸಿಗರೇಟ್ ಹಚ್ಚಿ ಹೊಗೆ ಸುರುಳಿಗಳನ್ನು

ನಿರ್ಮಿಸುತ್ತಾ ಆಟ ಆಡುತ್ತಿದ್ದ ಶಾಲ್ಮಲಿ ಸ್ವಲ್ಪ ಹೊತ್ತು ಅವನನ್ನೆ ದಿಟ್ಟಿಸುತ್ತಿದ್ದಳು. ನಂತರ ಗಂಭೀರವಾಗಿ ಹೇಳಿದಳು.

"ನರೇಶ್ ನೀನು ಏನ್ಮಾಡ್ತಿದ್ದೀಯಾ ಅನ್ನೋದರ ಪರಿವೆ ನಿನಗಿದೆಯೇನು?

"ನೀನು ಏನು ಹೇಳ್ಬೇಕೂಂತಿದ್ದೀಯ?"

"ಯಾಕೆ ನಿನಗೆ ಅನ್ನಿಸಿಲ್ಲವೇ, ನಾನು ನಿನ್ನ ಹತ್ತಿರ ಏನೋ ಮಾತಾಡ ಬೇಕೂಂತಿದ್ದೀನಿ, ಅಂತ?"

"ಮೊದಲು ಹಾಗೇನೂ ಅನಿಸಿರಲಿಲ್ಲ. ಈಗ ಅನ್ನಿಸ್ತಾ ಇದೆ"

"ಏನು ಅನ್ನಿಸಿದೆ?"

"ಪ್ಲೀಸ್, ಶಾಲ್ಮಲಿ, ನಿನ್ನ ತರ್ಕ, ಜಾಣತನದ ಪ್ರದರ್ಶನಕ್ಕೆ ನನ್ನ ಹತ್ತಿರ ಸಮಯ ಇಲ್ಲ. ನಿನಗೆ ಹೇಳ್ಬೇಕಾಗಿರೋದನ್ನು ಬೇಗ ಹೇಳಿ ಮುಗಿಸು! ಪೀಠಿಕೆ, ಗೀಟಿಕೆ ಅಂತ ಸಮಯ ಹಾಳು ಮಡಬೇಡ!"

"ಸಮಯ ಹಾಳು ಮಾಡೋದಲ್ಲ. ಹೇಗಾದರೂ ಸಮಯ ಮಾಡಿಕೊಳ್ಳಲೇಬೇಕು. ಯಾಕೆಂದರೆ ನಮ್ಮಿಬ್ಬರ ಬದುಕಿಗೆ ಸಂಬಂಧಿಸಿದ ಸಮಸ್ಯೆ. ಇದನ್ನು ನಿರ್ಲಕ್ಷಿಸುವ ಹಾಗಿಲ್ಲ".

"ನೇರವಾಗಿ ವಿಷಯಕ್ಕೆ ಬಾ".

"ಈ ಮನೆ ನಮ್ಮದು. ಇಲ್ಲಿ ಮೂರನೆಯವರು ಇರುವುದು ನನಗೆ ಆಗೊಲ್ಲ, ಆಗೊಲ್ಲ. ನಿನಗೂ ಇದು ಗೊತ್ತಿರಬೇಕಲ್ಲ?"

"ಈ ಮನೆ ನಮ್ಮದು ಅಲ್ಲ, ನಿನ್ನದು. ಸರಕಾರ ನಿನಗೆ ಇದನ್ನು ಕೊಟ್ಟಿದೆ. ಇದನ್ನೇ ನೆನಪು ಮಾಡಿಸಬೇಕೂಂತ ನಿನ್ನ ಇಷ್ಟ ಅಲ್ಲ?"

"ಈ ವ್ಯಂಗ್ಯದ ಮಾತೆಲ್ಲ ಬೇರೆ ಸಮಯಕ್ಕೆ ಇರಲಿ, ನರೇಶ್."

"ಮತ್ತೆ?"

"ಮನೆಯ ಮರ್ಯಾದೆ ಇಬ್ಬರಿಗೂ ಸಮಾನವಾಗಿ ಸೇರಿದೆ..... ಮೂರನೆಯ......"

"ನನ್ನ ಮೇಲೆ ಆರೋಪ ಮಾಡಬೇಕೂಂತ ಇದ್ದೀಯ?"

"ನಿನಗೆ ನಾಳೆ ಕೆಟ್ಟ ಹೆಸರು ಬರದೆ ಇರಲಿ ಅಂತ ಎಚ್ಚರಿಕೆ ನೀಡುತ್ತಿದ್ದೀನಿ."

"ಎಚ್ಚರಿಕೆ?"

"ಹೀಗೆ ನೀನು ಎಲ್ಲೆಲ್ಲೋ ಹೋಗೋದು......

"ಕಟ್ಟಿ ಹಾಕಬೇಕೂಂತಲೋ?"

"ಇಲ್ಲಿ ಯಾವತ್ತೂ ನಿನ್ನನ್ನು ಲಗಾಮು ಹಾಕಿ ನಿಯಂತ್ರಿಸ ಬೇಕೂಂತಲೂ ಬಯಸಲಿಲ್ಲ. ಈ ಮನೆಯ ನಾಲ್ಕೂ ಗೋಡೆಗಳ ಮಧ್ಯೆ ಬಂಧಿಸಬೇಕೂಂತಲೂ ಯೋಚಿಸಲಿಲ್ಲ. ಆದರೂ ಪ್ರತಿಯೊಬ್ಬರಿಗೂ ತಮ್ಮ ವೈಯಕ್ತಿಕ ಸ್ವಾತಂತ್ರ್ಯದ ಬಗ್ಗೆ ನಿಷ್ಠೆ ಇರುತ್ತದೆ. ಸ್ವತಂತ್ರವಾಗಿದ್ದೂ ಇನ್ನೊಬ್ಬರ ಜೊತೆ ಸಂಬಂಧ ಬೆಳೆಸುವುದಕ್ಕೆ ಒಂದು ಮಿತಿ ಇರುತ್ತದೆ.

"ಯಾರನ್ನೂ ನಾನು ನೋಡಬಾರದು?....ಇದು ಸಾಧ್ಯವಿಲ್ಲ"

'ನೋಡುವುದು ಅಪರಾಧವಲ್ಲ. ಆದರೆ ನೋಡಿ ಸಂಬಂಧ ಬೆಳೆಸುವುದರಲ್ಲಿ ಒಂದು ಮಿತಿ ಇಟ್ಕೊಳ್ಳೋದರಲ್ಲಿ ತಪ್ಪಿಲ್ಲವಲ್ಲ?"

"ಅಂದ್ರೆ"

"ನಿನ್ನ ನನ್ನ ಸಂಬಂಧ ಏನೂಂತ ಗೊತ್ತಿದೆಯಲ್ಲ? ಹಾಗಿದ್ದ ಮೇಲೆ ಈ ಅಲೆದಾಟ, ಇನ್ನೊಂದು ಕಡೆ ಸಂಸಾರ ಇದೆಲ್ಲ ಯಾಕೆ?"

"ಮನುಷ್ಯ ಮನುಷ್ಯರ ಸಂಬಂಧಗಳಿಗೆ ನಿರ್ಬಂಧ ಹಾಕ್ತಿಲ್ಲ. ದಿನಕ್ಕೊಬ್ಬೊಬ್ಬರ ಜೊತೆ ಹೊಸ ಹೊಸ ಹೆಸರಿನಲ್ಲಿ ಸಂಬಂಧಗಳು ಎಷ್ಟು ಸರಿ ಎಷ್ಟು ತಪ್ಪು ಅನ್ನೋದನ್ನು ತಿಳಿದುಕೊಳ್ಳೋ ಆಸೆ ಅಷ್ಟೇ!"

"ನಿನ್ನನ್ನು ನೀನು ಏನೂಂತ ತಿಳಿದು ಕೊಂಡಿದ್ದೀಯ?"

"ಕೋಪ ಬಿಟ್ಟಿಡು ನರೇಶ್! ಶಾಂತವಾಗು! ನನ್ನೊಳಗಿನ ಬಿರುಗಾಳೀನ ತಡೆದ ಹಾಗೇ ನೀನೂ.....!

"ನೀನು ಧರ್ಮಾತ್ಮಳು!...... ಮಹಾನ್ ಆತ್ಮ! ನಿನಗೂ ನನಗೂ ಎಲ್ಲಿಂದೆಲ್ಲಿಗೆ?"

ಬೇಡ ನರೇಶ್, ಬೇಡ ಈ ಸಮಸ್ಯೆಯನ್ನು ನಂದುನಿಂದು ಅಂತ ಹೇಳಬೇಡ. ನಮ್ಮಿಬ್ಬರದೂ!

"ಯಾವ ಸಮಸ್ಯೆ?"

"ಏಕಕಾಲದಲ್ಲಿ ಒಬ್ಬ ವ್ಯಕ್ತಿ ಎಷ್ಟು ಜನರ ಜೊತೆಗೆ ಭಾವನಾತ್ಮಕ ಸಂಬಂಧಗಳನ್ನು ಇರಿಸಿಕೊಂಡಿರಲು ಸಾಧ್ಯ?"

"ನಾನು ಗಂಡಸು ನನಗೆ ಸಾಧ್ಯ ಆಗುತ್ತೆ. ನನಗೆ ಇದಕ್ಕೆಲ್ಲ ಪೂರ್ಣ ಸ್ವಾತಂತ್ರ್ಯ ಇದೆ."

ಈ ಸ್ವಾತಂತ್ರ್ಯದ ವಿವರಣೆ ಯಾವ ಧರ್ಮಗ್ರಂಥದಲ್ಲಿ, ಮತ್ತು ಸಂವಿಧಾನದಲ್ಲಿ ಕೊಟ್ಟಿದ್ದಾರೆ. ಸ್ವಲ್ಪ ನನಗೆ ಹೇಳ್ತೀಯ?"

"ಧರ್ಮ ನಿಯಮಗಳು ಕೇವಲ ಕಾಗದದ ಮೇಲೆ ಇರೋಕೆ, ಇಲ್ಲ ನಿಮ್ಮಂತಹ ಹೆಂಗಸರಿಗಾಗಿ ಇರುತ್ತವೆ. ಇವೆರಡರಿಂದ ಬೇರೆಯಾದ ಕಾನೂನು ಅಂತ ಒಂದು ಇರುತ್ತೆ. ಅದು ನಮ್ಮಂತಹ ಗಂಡಸರ ಪ್ರಯೋಜನಕ್ಕೆ. ಅದಕ್ಕೆ ಅದರದೇ ಸಂವಿಧಾನ, ನಿಯಮ, ಧರ್ಮ ಅನ್ನೋದೆಲ್ಲ ಇರುತ್ತೆ. ಅದಕ್ಕೇ ಹೇಳ್ತಿದ್ದೀನಿ, ನಾನು ಮಾಡುತ್ತಿರುವುದೆಲ್ಲ ಆ ಕಾನೂನಿಗೆ ಬದ್ಧವಾಗಿಯೇ ಇದೆ. ಅರ್ಥ ಆಯಿತಾ."

"ಇದು ಕೇವಲ ನಿನ್ನೊಳಗಿನ ಮಾತು?"

"ಅಲ್ಲ, ಇದು ಸಮಸ್ತ ಪುರುಷ ವರ್ಗದ ಮಾತು."

"ನಿನ್ನ ದಮ್ಮಯ್ಯ ಎಲ್ಲ ಪುರುಷರನ್ನೂ ಇದರಲ್ಲಿ ಎಳೀ ಬೇಡ! ಯಾವುದೋ ಒಂದು ವರ್ಗದ ಪುರುಷರ ಮಾತು, ಅಂತ ಹೇಳು. ನೀನು ತಿಳಿದಿರೋ ಹಾಗೆ ಎಲ್ಲ ಪುರುಷರದೂ ಇದೇ ಮಾತು, ಇದೇ ಧೋರಣೆ ಆಗಿದ್ದರೆ, ಪ್ರಪಂಚವೇ ಮುಳುಗಿ ಹೋಗ್ತಿತ್ತು."

"ಸರಿ ಆಯ್ತು ಬಿಡು. ನೀನು ಹೇಳೋ ಹಾಗೇ ಒಂದು ವರ್ಗದ ಪುರುಷರು ಅಂತಲೇ ಇಟ್ಕೋ....... ಆಮೇಲೆ....!"

"ನಾನು ಒಂದು ಕೇಳ್ಬೇಕೂಂತ ನರೇಶ್..... ಹೇಳು ನೀನು ಎಷ್ಟು ಜನರ ಜೊತೆ ಪ್ರಾಮಾಣಿಕವಾಗಿದ್ದೀ, ಸೀರಿಯಸ್ಸಾಗಿದ್ದೀ?

"ಇಬ್ಬರ ಜೊತೆಗೂ....... ನೀನು ನನ್ನ ಧರ್ಮ ಪತ್ನಿ. ಮನೆಯ ಶೋಭೆ. ಮನೆಯಲ್ಲಿಯೇ ಇರು...... ಇನ್ನೊಬ್ಬಳು ಇಟ್ಟುಕೊಂಡವರು. ಯಾರು ಅವಳನ್ನು ಗಂಭೀರವಾಗಿ ತಗೋಳ್ತಾರೆ?"

"ಇದು ಪಾಪ! ಬಡಪಾಯಿ ಹೆಣ್ಣುಗಳಿಗೆ ಸುಳ್ಳು ಭರವಸೆಗಳನ್ನು ಕೊಟ್ಟು ಅವರನ್ನು ಹಾಳು ಮಾಡಬೇಡ ನರೇಶ್!"

"ಅವರೆಲ್ಲ ನಿನ್ನ ಅಕ್ಕ ತಂಗಿಯರು. ಅದಕ್ಕೇ ಅವರ ಬಗ್ಗೆ ನಿನಗೆ ಸಹಾನುಭೂತಿ. ಆದರೆ ನಿನ್ನ ಬಗ್ಗೆ ಅವರ್‍ಯಾರಿಗೂ ದಯೆ ಇಲ್ಲವಲ್ಲ. ಅಲ್ಲದೆ ನಿನ್ನನ್ನು ಪಕ್ಕಕ್ಕೆ ತಳ್ಳಿ, ನಿನ್ನ ಜಾಗವನ್ನು ಅವರು ಆಕ್ರಮಿಸಿಕೊಳ್ಳೋ ಪ್ರಯತ್ನದಲ್ಲಿದ್ದಾರೆ. ಆದರೆ ನಾನಿದ್ದೇನೆ ಬಿಡು. ಯಾವತ್ತೂ ಹೀಗೆ ಆಗೋದಕ್ಕೆ ಬಿಡೋದಿಲ್ಲ."

"ಅವರಿಗೆ ಬುದ್ಧಿ ಇಲ್ಲ. ನೀನು ಹೀಗೆಲ್ಲ ನಿನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಬೇಡ. ಹೆಣ್ಣಿನ ಅವಮಾನ ಮಾಡೋದರಿಂದ ನಿನಗೆ ಎಂಥ ಸುಖ ಸಿಗುತ್ತೆ ನರೇಶ್?"

"ಅದೇ! ನಮ್ಮ ಜೊತೆ ನೀವು ಸಮಾನರು ಅಂತ ಹೇಳಿ ಕೊಳ್ಳೋದರಿಂದ ನಿಮಗೆ ಎಂಥ ಸುಖ ಸಿಗುತ್ತೆ. ಅದೇ ಸುಖ ನನಗೂ! ಅದಕ್ಕೇ ಮುಖಾ ಮುಖಿಯಾಗಿ, ಸಮಾನತೆ ಕೊಟ್ಟು, ಸಮಾನವಾಗಿ ವ್ಯವಹರಿಸಿರುತ್ತೇವೆ."

"ನಾನೂ ಹೀಗೇ ಮಾಡಿದರೆ, ನಿನಗೆ ಹೇಗನ್ನಿಸಬಹುದು?"

"ನಮಗೆ? ಮಾಡಿನೋಡು. ಗುಂಡು ಹಾರಿಸಿಬಿಡ್ತೇನೆ."

"ನಾನೂ ಹಾಗೆ ಮಾಡಿ ತೋರಿಸಿದರೆ?"

"ಬಂದೂಕು ತಗೋಬಹುದು. ಆದರೆ ಗುಂಡು ಹಾರಿಸೋದು ನಿನಗೆ ಸಾಧ್ಯವಿಲ್ಲ. ಯಾಕೇಂದ್ರೆ ನಿಮಗೆ 'ಸುಮಂಗಲಿ' ಶಬ್ಧವೇ ನಿಮ್ಮ ಬಂಧನವಾಗಿದೆ. ನೀವು ಇಷ್ಟಪಟ್ಟರೂ ಅದರಿಂದ ಬಿಡುಗಡೆ ನಿಮಗೆ ಸಿಗೊಲ್ಲ."

"ನೋಡು ನರೇಶ್, ನಾವು ಮಾತಾಡಿದ್ದು ಜಾಸ್ತಿ ಆಯಿತು. ಇನ್ನು ನಾವು ಯಾವುದಾದರೂ ನಿರ್ಧಾರಕ್ಕೆ ಬರಬೇಕು. ಒಂದೇ ಕಾಲಕ್ಕೆ ಎರಡು ದೋಣಿಗಳಲ್ಲಿ ಸವಾರಿ ಮಾಡುವುದು ಆಗದ ಕೆಲಸ."

"ನಾನು, ಸವಾರಿ ಮಾಡಿ ತೋರಿಸ್ತಿದ್ದೀನಲ್ಲ! ನಿನಗೆ ಏನು ಕಡಿಮೆಯಾಗಿದೆ? ಸಿಕ್ಕಿರೋ ಬದುಕಿನ ಜೊತೆ ಒಪ್ಪಂದ ಮಾಡಿಕೊಂಡು, ಹೊಂದಿಕೊಂಡು ಬದುಕು. ಅವತ್ತು ರಾತ್ರಿ ನೀನು ನಡೆದುಕೊಂಡ ರೀತಿಯಿಂದ, ನೀನೇ ನನಗೆ ಈ ಅಧಿಕಾರ ಕೊಟ್ಟೆ ಅಂದುಕೊಂಡೆ.

"ನರೇಶ್, ಬಹಳ ಚೆನ್ನಾಗಿ ಸಮರ್ಥಿಸಿಕೊಳ್ಳುತ್ತೀ!"

"ನಿನಗೂ ಸಮರ್ಥಿಸಿಕೊಳ್ಳೋಕೆ ಹಕ್ಕಿದೆ."

"ಕೇಳು ನರೇಶ್ ಈಗ ನಮ್ಮಿಬ್ಬರಲ್ಲಿ ಯಾರನ್ನಾದರೂ ಒಬ್ಬರನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರ ಕೊಡ್ತೀನಿ. ಅವಳ ಜೊತೇಲಿ ಇದ್ದೇ ನಿನ್ನ ಬದುಕಿಗೆ ಸಾರ್ಥಕತೆ ಇದೆ ಅನ್ನಿಸಿದರೆ...... ಇದು ನನ್ನ ತೀರ್ಮಾನ ನಿನಗೆ ಬೇಕಾದ ಹಾಗೆ ನೀನಿರಬಹುದು!"

"ಒಮ್ಮೆಲೇ ದಾನಶೂರಳಾಗಿ ಬಿಟ್ಟಿದ್ದಿ ಇವತ್ತು?"

"ಧರ್ಮ ಗ್ರಂಥ, ಸಂವಿಧಾನಗಳ ಸಹಾಯ ಇಲ್ಲದೆಯೇ ನಿನಗೆ ಬಿಡುಗಡೆ ಕೊಡ್ತೀನಿ, ಇದು ಸತ್ಯ..

"ತಮಾಷೆ ಮಾಡ್ತಿಲ್ಲ ತಾನೇ?"

"ಮುಂದೆ ನಿನಗೇ ಗೊತ್ತಾಗುತ್ತೆ, ನನ್ನ ಧರ್ಮ, ನನ್ನ ಕಾನೂನು ಕೇವಲ ಮಾನವ ಅಧಿಕಾರ. ನಾವಿಬ್ಬರೂ ಒಟ್ಟಿಗೆ ಇರಲು ಆಗಲಿಲ್ಲ ಅನ್ನೋ ದುಃಖ ನನಗಿದೆ. ಆದರೆ ಹಾಗಂತ ನಿನ್ನ ಸಂತೋಷಕ್ಕೆ ಅಡ್ಡಿ ಬರೋದೂ ಸರಿ ಅಲ್ಲ. ನಿನ್ನ ಸಂತೋಷದಲ್ಲಿ ನನ್ನ ಸಂತೋಷ ಇದೆ. ನನ್ನ ಅಧಿಕಾರವನ್ನು ಯಾರಿಗೂ ಕೊಡೋದಿಲ್ಲ, ಹಾಗೆ ಬೇರೊಬ್ಬರ ಅಧಿಕಾರವನ್ನು ಕಸಿದುಕೊಳ್ಳೋದೂ ಇಲ್ಲ. ಇದೇ ನನ್ನ ಕಟ್ಟ ಕಡೆಯ ತೀರ್ಮಾನ."

ಇದಾದ ನಂತರ ಮೌನ ಕವಿಯಿತು. ಶಾಲ್ಮಲಿ ಹೇಳಬೇಕಾದ್ದನ್ನು ಹೇಳಿದಳು. ನರೇಶ್ ಎಚ್ಚೆತ್ತು ಕೊಂಡಿದ್ದ ಅನೇಕ ಸಲ ಈ ಲೋಹ ಎಂಥಾದ್ದು ಅನ್ನುವುದನ್ನು ಪರೀಕ್ಷಿಸಿದ್ದ ಅವಳ ಸ್ವಾಭಿಮಾನ ಎಂಥಾದ್ದು ಅನ್ನುವುದನ್ನೂ ತಿಳಿದುಕೊಂಡು ಬಿಟ್ಟಿದ್ದ. ತನ್ನ ಕತೆ ಮುಗೀತು. ತಪ್ಪಿಸಿಕೊಳ್ಳೋ ಮಾರ್ಗ ಇಲ್ಲ' ಅನ್ನೋದು ಮನದಟ್ಟಾಗಿತ್ತು. ತನ್ನ ಬಿಡುಗಡೆಯ ದಾರೀನೇ ಇಲ್ಲದೆ ಹೋದರೆ?.......ನರೇಶ್ ತನ್ನ ವ್ಯವಹಾರವನ್ನು ಬದಲಿಸಿಕೊಂಡ. ಅವನಿಗೆ ಗೊತ್ತಾಯಿತು. ಇವಳನ್ನು ಸುಲಭವಾಗಿ ಬಗ್ಗು ಬಡಿಯಲಾರೆನೆಂದು ಇನ್ನು ಅವಳ ತಂಟೆಗೆ ಹೋದರೆ ಅವಳಿಂದಲೇ ಒದೆ ತಿನ್ನಬೇಕಾದೀತು.

* * *

ದಿನಗಳೆಷ್ಟೋ ಕಳೆದವು. ನರೇಶ್ ತನ್ನ ನಿರ್ಣಯವನ್ನೇ ತಿಳಿಸಲಿಲ್ಲ. ಮಾಮೂಲಿನಂತೆ ನನ್ನಿಂದ ತಲೆ ತಪ್ಪಿಸಿಕೊಳ್ಳಲು ಏನೇನೋ ಚೇಷ್ಟೆಗಳನ್ನು ಮಾಡುತ್ತಿದ್ದ. ನಾನು ಅವನನ್ನು ಕರೆಯುವುದಿಲ್ಲ. ನನ್ನ ಆಕಾಂಕ್ಷೆಗಳನ್ನು ಮರೆತು ಕೆಲಸದಲ್ಲಿ ತೊಡಗುತ್ತೇನೆ. ಹಗಲೂ ರಾತ್ರಿ ವೇಗವಾದ ರೈಲುಗಾಡಿಯಂತೆ ಗಟ್ಟಿ ಮುಟ್ಟಾದ ಹಳಿಗಳ ಮೇಲೆ ಓಡುತ್ತಾ ಪ್ರಯಾಣಿಕರನ್ನು ತಮ್ಮ ತಮ್ಮ ಗುರಿ ಮುಟ್ಟಿಸಲು ಪ್ರಯತ್ನಿಸುತ್ತಾ ಕಾರ್ಯನಿರತಳಾಗಿರುತ್ತೇನೆ. ಬೇರೆಯವರ ಸಂತೋಷವೇ ನನ್ನ ಗುರಿ. ನಿರಂತರ ಓಡುತ್ತೇನೆ. ಓಡುತ್ತಿರುತ್ತೇನೆ. ನಿಲ್ಲುವುದೇ ನನಗೆ ಸಾವು' ಎಂದೆಲ್ಲ ತನ್ನಲ್ಲಿ ತಾನೇ ಹೇಳಿಕೊಂಡು ಮನಸ್ಸಿಗೆ ಶಾಂತಿ ತಂದುಕೊಳ್ಳುವ ಪ್ರಯತ್ನದಲ್ಲಿ ತೊಡಗಿದಳು.

ನಾನು ಸೋಲುವುದಿಲ್ಲ. ಧೈರ್ಯ ಗೆಡುವುದಿಲ್ಲ. ನರೇಶ್ ಇಲ್ಲದೆಯೇ ನಾನು ಇರಬಲ್ಲೆ. ಎಷ್ಟು ಜನ ಹೆಂಗಸರು ಒಂಟಿಯಾಗಿಲ್ಲ. ನರೇಶ್ ಮಾತಾಡದಿದ್ದರೆ ಏನು? ಹೇಗಿದ್ದರೂ ನಾನು ಉಳಿದ ಬದುಕನ್ನು ಒಂಟಿಯಾಗಿ ಕಳೆಯಲು ತೀರ್ಮಾನಿಸಿದ್ದೇನಲ್ಲ. ಪುರುಷನನ್ನು ಪಡೆದುಕೊಳ್ಳುವುದೇ ನನ್ನ ಜೀವನದ ಗುರಿ ಅಲ್ಲ. ಹಾಗಂತ ಅವನ ಹಿರಿಮೆಯನ್ನು ತಿಳಿದಿಲ್ಲಾಂತ ಅರ್ಥವಲ್ಲ. ಪುರುಷ ಸ್ತ್ರೀಯ ಪೂರಕತತ್ವ ಅವಳ ಜೀವನದಲ್ಲಿ ಆನಂದವನ್ನು ತುಂಬುತ್ತಾನೆ. ಅದರಲ್ಲಿಯೂ ನನ್ನಂತಹ ಸಂವೇದನಾ ಪೂರ್ಣ ಹೆಣ್ಣು ಪುರುಷನ ಸಹವಾಸವನ್ನೇಕೆ ಬೇಡವೆನ್ನುತ್ತಾಳೆ!...... ಆದರೆ ಪುರುಷ ಒಬ್ಬ ಸ್ನೇಹಿತನಂತೆ, ಮನುಷ್ಯನಂತೆ. ಜೀವನ ಸಂಗಾತಿಯಂತೆ ದೊರೆಯದೆ ಇದ್ದಾಗ,

ಸ್ತ್ರೀ ಪುರುಷರ ಸಂಬಂಧದ ಹಿರಿಮೆ ಗೊತ್ತಿದ್ದೂ, ಅವನಿಲ್ಲದೆಯೇ, ಕೇವಲ ಅವನ ನೆನಪಿನಲ್ಲಿಯೇ ಇಡೀ ಜೀವನವನ್ನು ಕಳೆಯಬಲ್ಲೆ. ಅವನಿರಬೇಕೆನ್ನುವುದು ಅಗತ್ಯವಿಲ್ಲ. ಇಡೀ ಜೀವನವನ್ನು ಒಂಟಿಯಾಗಿಯೇ ಕಳೆಯಬೇಕಾಗಿ ಬಂದರೂ ಸ್ತ್ರೀತ್ವವನ್ನೆಂದೂ ಪಣವಾಗಿ ಇಡುವುದಿಲ್ಲ.

ಶಾಲ್ಮಲಿ ಆಫೀಸಿಗೆ ಹೋಗಿ ಬಹಳ ದಿನವಾಯಿತು. ಯಾವುದರಲ್ಲೂ ಆಸಕ್ತಿ ಇಲ್ಲ. ಏನು ಮಾಡಲೂ ತೋಚುತ್ತಿಲ್ಲ. ಬಿರುಗಾಳಿಯ ಸುಳಿಯಲ್ಲಿ ಸಿಕ್ಕಂತಾಗಿದೆ.

ಎಚ್ಚರಿಕೆಯಿಂದ ಹೆಜ್ಜೆಯಿಡಬೇಕು. ಆದರೆ ಯಾವ ಕಡೆಗೆ ಅಂತ ಗೊತ್ತಿಲ್ಲ. ನರೇಶನ ಬಾಯಿಂದ ಬರಬಹುದಾದ ಶಬ್ದಗಳ ಪ್ರತೀಕ್ಷೆಯಲ್ಲಿ ಮತ್ತೆ ದಾರಿ ತಪ್ಪುತ್ತಾಳೆ. ನೀರವ ಕಣಿವೆಗಳಲ್ಲಿ 'ಕೂಗು' ಬೆಟ್ಟಗಳನ್ನು ಅಪ್ಪಳಿಸಿ ಹೇಗೆ ಪ್ರತಿಧ್ವನಿಸುತ್ತೆ! ಹಾಗೆಯೇ ಪ್ರೀತಿಯ ಸುಖವೂ ಕೂಡಾ ತನ್ನ 'ಕರೆ' ಪ್ರತಿಧ್ವನಿತವಾಗುವುದನ್ನು ಕೇಳುತ್ತಾ ಉಳಿಯಬೇಕೇ?"

"ಊಟ ಬಡಿಸಲೇ?" – ಬೇಲಾ ಬೇಸರದಿಂದ ಕೇಳಿದಳು.

"ಬೇಡ". ಶಾಲ್ಮಲಿ ನಿರಾಕರಿಸಿದಳು.

ಬೇರೆಯವರ ದುಃಖಕ್ಕೆ ಮರುಗುವ ಯಜಮಾನಿಯನ್ನು ಯಾವ ದುಃಖ ಕಾಡುತ್ತಿರಬೇಕು? ಎರಡು ದಿನಗಳಿಂದ ಒಂದು ಅಗುಳನ್ನು ಬಾಯಿಗೆ ಹಾಕಿಲ್ಲ.

ದಿನಗಳು ಸರಿಯುತ್ತಿದ್ದವು. ಎಲ್ಲ ದಿನಗಳೂ ಬರಡು! ಬರಡು! ಬರೀ ಬೇಸರ ನರೇಶನನ್ನು ಸಮೀಪಿಸಬೇಕೆಂದುಕೊಂಡು ಎರಡು ಹೆಜ್ಜೆ ಮುಂದೆ ಹೋಗುತ್ತಿದ್ದವಳು ಗಕ್ಕನೆ ನಿಂತು ಬಿಡುತ್ತಿದ್ದಳು. ಮನಸ್ಸು ಬಾಡಿದ ಹೂವಿನಂತೆ ಆಗುತ್ತಿತ್ತು. ಅವಳ ಚೈತನ್ಯ ನರೇಶನ ಪ್ರತೀಕ್ಷೆಯಲ್ಲಿ ಒಂದು ಬಿಂದುವಿನಲ್ಲಿ ನಿಶ್ಚಲವಾಗಿ ನಿಂತು ಬಿಡುತ್ತಿತ್ತು. ಅವಳ ಅಸ್ತಿತ್ವವೇ ಪ್ರತೀಕ್ಷೆಯ ಬೆಂಕಿಯಲ್ಲಿ ಉರಿಯುತ್ತಾ, ಅವಮಾನದ ಬೆಂಕಿಯಲ್ಲಿ ಬೆಂದು ಕರಗುತ್ತಾ ಹನಿಹನಿಯಾಗಿ ಕಂಬನಿಯ ರೂಪದಲ್ಲಿ ತೊಟ್ಟಿಡುತ್ತಿತ್ತು. ಒದ್ದೆ ಬಟ್ಟೆಯನ್ನು ಹಿಂಡಿದಂತೆನಿಸುತ್ತಿತ್ತು.

ಮನಸ್ಸಿಗೆ ಆದ ಗಾಯ ಎಂದಾದರೂ ಮಾಯುವುದೇ? ಗಾಯಮಾದರೂ ಗುರುತು ಹಾಗೆಯೇ ಉಳಿದಿರುತ್ತದೆ. ಗಾಯದ ಗುರುತುಗಳು ಜೀವಂತ ವ್ಯಕ್ತಿಗಳ ದೇಹದ ಮೇಲೆ ಇರುತ್ತವೆಯೋ ಅಥವಾ ಸತ್ತ ಶರೀರಗಳ ಮೇಲೋ? ಗಾಯಗಳೊಂದಿಗೇ ಜೀವಿಸಬಲ್ಲೆವಾದರೆ ಗಾಯಗಳ ಹಿರಿಮೆ ಹೆಚ್ಚೋ? ಅಥವಾ ತನ್ನ ಮನಸ್ಸಿನ ಮೇಲೆ ಗಾಯ ಮಾಡಿದ, ತನ್ನ ಸಮಸ್ತವೂ ಆಗಿದ್ದ ವ್ಯಕ್ತಿಯೇ ಹೆಚ್ಚೋ? ಅವನಿಂದಾದ ಇಷ್ಟೆಲ್ಲ ನೋವನ್ನು ನುಂಗಿಕೊಂಡು ಅವನೊಂದಿಗೇ ಬಾಳುವುದರಲ್ಲಿ ಬದುಕಿನ ಸಾರ್ಥಕತೆ ಇರುವುದೇ? ಅಥವಾ ಅವನಿಂದ ದೂರವಾಗಿದ್ದು ವಿರಹದ ಬೇಗೆಯಲ್ಲಿ ಬೇಯುವುದರಲ್ಲಿಯೇ ಮುಕ್ತಿಯಿದೆಯೋ? ಎರಡೂ ಸ್ಥಿತಿಗಳಲ್ಲಿ

ನೋವನ್ನು ಯಾತನೆಯನ್ನು ಸಹಿಸುವುದು ಅನಿವಾರ್ಯವೇ ಆಗಿರುವಾಗ ಯಾವ ಯಾತನಾ ಶಿಬಿರವನ್ನು ಆಯ್ದುಕೊಳ್ಳಲಿ?....... ಮತ್ತು ಯಾವಾಗ?..... ನರೇಶ ತನ್ನನ್ನು ಬಿಟ್ಟರೆ ಈ ಮನೆಯಲ್ಲಿ ಇರಲು ಸಾಧ್ಯವೇ? ಅವಳ ಹತ್ತಿರ ಮನೆ ಇದೆ, ದುಡ್ಡಿದೆ, ನರೇಶನ ನೆನಪು ಯಾಕೆ?..... ಭದ್ರತೆಗೆ? ಸಾಮಾಜಿಕ ಮರ್ಯಾದೆಗೆ? ಅಥವಾ ನೆಪಕ್ಕೆ? ಅವನ ಜೊತೆಗಿನ ಸಂಬಂಧದಿಂದ ಹುಟ್ಟುವ ಬದುಕಿಗೆ?..... ಅಲ್ಲ ಇದಾವುದಕ್ಕೂ ಅಲ್ಲ. ನರೇಶನ ಜೊತೆ ಅವಳದು ಭಾವನಾತ್ಮಕವಾದ ಸಂಬಂಧ. ಅವನನ್ನು ಅವಳು ಪ್ರೀತಿಸುತ್ತಾಳೆ. ಅವನಿಲ್ಲದೆ ಮನೆ ಶೂನ್ಯವೆನಿಸುತ್ತದೆ. ಮನಸ್ಸಿಗೆ ಬೇಸರವಾಗುತ್ತದೆ...... ಆದರೆ ತಾನು ಬಯಸುವ ಹಾಗೆ ಅವನು ಅವಳ ಜೊತೆಗಿದ್ದೂ ಮೌನವಾಗಿದ್ದರೆ? ಮಾತಿಲ್ಲದೆ ಉಳಿದರೆ?.... ಅವನಿಗೆ ತಿಳಿಸಿ ಹೇಳುವುದರಿಂದ ಪ್ರಯೋಜನವೇನು? ಅವನನ್ನು ಕ್ಷಮಿಸಿ ಇರಿಸುವುದಾದರೂ ಎಲ್ಲಿ? ಓಡುವ ಕಾಲಿಗೆ ಸಂಕೋಲೆಗಳನ್ನು ಹಾಕಿ ನಿಲ್ಲಿಸುವುದು ಸಾಧ್ಯವೇ? ಅವನು ನನ್ನಲ್ಲಿಗೆ ನನ್ನವನಾಗಿ ಬರಬೇಕೇ ಹೊರತು ಸಾಮಾಜಿಕ ಪ್ರತಿಷ್ಠೆ, ಗೌರವಗಳಿಗಾಗಿ ಅಥವಾ ವಿವಶತೆಯಿಂದಾಗಿ ಬರುವುದು ಬೇಡ..... ಖಂಡಿತ ಬೇಡ! ಕಾಯಿಲೆಯ ನಂತರ ಮಾನಸಿಕವಾಗಿಯೂ ಸ್ವಲ್ಪ ಚೇತರಿಸಿಕೊಂಡಳು. ಆದರೆ ಸ್ವಲ್ಪ ಮಟ್ಟಿಗೆ ನೋವು ಇದ್ದೇ ಇತ್ತು. ಬೇಸರದಿಂದ ಕೂಡಿದ ದುರ್ಬಲತೆ ಅವಳನ್ನು ಬಿಟ್ಟಿರಲಿಲ್ಲ. ತನ್ನಲ್ಲಿನ ಉತ್ಸಾಹ ಬತ್ತಿ ಹೋಗುತ್ತಿರುವುದರ ಅನುಭವವಾಗುತ್ತಿದೆ. ಮೊದಲಿನ ಹಾಗೆ ಇರಲಾಗುವುದಿಲ್ಲ. ಸಂತೋಷ, ಉತ್ಸಾಹಗಳಿಮದ ಚಿಮ್ಮುತ್ತಿದ್ದ ಆ ದಿನಗಳೆಲ್ಲ ಅವಳ ಪಾಲಿಗೆ ಕೇವಲ ಪಳೆಯುಳಿಕೆಗಳು! ಬಲವಂತವಾಗಿ ನಗುವಳು, ನಗುವ ಮುಖವೂ ಕೂಡಾ ತೀರ ಅಪರಿಚಿತ, ಎನಿಸುವುದು.

ಬದುಕು ಗಣಿತ ಅಲ್ಲ, ಸಂಬಂಧ ಮಕ್ಕಳು ಬರೆಯುವ ಅಕ್ಷರಗಳಲ್ಲ. ಪದೇ ಪದೇ ಬರೆದು ತಪ್ಪಾದುದನ್ನು ರಬ್ಬರ್‌ನಿಂದ ಅಳಿಸುವಂತೆ ಅಳಿಸಲಾಗುವುದಿಲ್ಲ. ಇಲ್ಲಿನ ಪ್ರಶ್ನೆ ಸಂಶೋಧನೆ, ಪ್ರಬಂಧಗಳಿಗೆ ಸಂಬಂಧಿಸಿದ್ದಲ್ಲ, ಭಾವನೆಗಳಿಗೆ ಸಂಬಂಧಿಸಿದ್ದು ಬದುಕಿನ ಮೇರುದಂಡದ ಚಿಪ್ಪುಗಳು! ದಂಡ ಮುರಿಯುವುದಿಲ್ಲ. ಆದರೆ ಚಿಪ್ಪುಗಳು ಸಿಡಿಯುತ್ತವೆ. ಬದುಕು ಚೆಲ್ಲಾಪಿಲ್ಲಿಯಾಗುತ್ತದೆ.

ಈ ಮನೆ ನಿಜವಾಗಿಯೂ ನನ್ನದೇನು? ಇದನ್ನು ಬಿಟ್ಟು ನಾನೆಲ್ಲಿಗೆ ಹೋಗಲಿ? ಈ ಮನೆಯ ಪ್ರತಿಯೊಂದು ವಸ್ತುವೂ ನನ್ನ ಸ್ವಂತ ಶ್ರಮದಿಂದ ಸಂಪಾದಿಸಿದ್ದು; ನನ್ನ ಅಪ್ಪ ಕೊಟ್ಟದ್ದು. ಈ ಮನೆಯನ್ನು ನೀರು ಹಾಯಿಸಿ ಪೋಷಿಸುವ ಒಂದು ಕೊಳ ನಾನು. ಅದರ ದಂಡೆಯಲ್ಲಿ ನಿಂತು ನರೇಶ್ ಸುಮ್ಮನೆ ನೋಡುತ್ತಿದ್ದ. ಸಂಬಂಧ ಮುರಿದು ಬಿದ್ದಾಗ ಈ ಮನೆಯಿಂದ ಹೊರಗೆ ಹೋಗುವ ಒಂದೇ ಒಂದು ವಸ್ತುವೆಂದರೆ, ನರೇಶ್! ಅವನಿಗೆ ಜೀವನದಲ್ಲಿ ಏನನ್ನೂ ಸಾಧಿಸಲಾಗಲಿಲ್ಲ. ಅಂಥವನನ್ನು ಹೊರಗೆ ಹಾಕಲು ತನ್ನ ಮನಸ್ಸು ಒಪ್ಪುವುದೇ? ತಾಯಿಯಾದವಳು ತನ್ನ ಮಗ ಹೀಗೆ ಮಾಡಿದರೆ ಎಂದಾದರೂ ಅವನನ್ನು ಹೊರಗೆ ಹಾಕಬಲ್ಲಳೇ?

ಅವಳೂ ಹಾಗೆ ಮಾಡಿದಲ್ಲಿ ತಾಯಿಂತಾಗಿ ಅವಳ ಕರ್ತವ್ಯ ಏನು? ಮಾತೃವಾತ್ಸಲ್ಯದಿಂದಾಗಿ ಅವನು ಏನು ಮಾಡಿದರೂ ಎಷ್ಟೇ ತಪ್ಪು ಮಾಡಿದರೂ ಅಪ್ಪಿಕೊಳ್ಳುವುದಿಲ್ಲವೇ? ಕರೆದುಕೊಂಡು ಕ್ಷಮಿಸುವುದಿಲ್ಲವೇ? ಆದರೆ ನರೇಶ, ಬೇರೆಯವರ ಮಗ ಅವನೊಂದಿಗೆ ಹಾಗೆ ಮಾಡಲು ಸಾಧ್ಯವಿಲ್ಲ ಯಾಕೆ?

ಹುಲ್ಲಿನ ಮೇಲೆ ಅಡ್ಡಾಡುತ್ತಾ ತನ್ನ ಮತ್ತು ನರೇಶನ ವಿಚಾರವಾಗಿಯೇ ಯೋಚಿಸುತ್ತಿದ್ದಳು. ಮಾನವೀಯ ಸಂಬಂಧಗಳ ಬಗ್ಗೆ ವಿಚಾರ ಮಾಡುತ್ತಲೇ ಬಂದು ಹಾಸಿಗೆಯ ಮೇಲೆ ಉರುಳಿದರು.

ನರೇಶ್ ಬಾಯಿಂದ ಏನೂ ಹೇಳದಿದ್ದರೂ, ಅವನ ಭಾವನೆಗಳೆಲ್ಲ ಕಣ್ಣಿಂದ ಇಣುಕುತ್ತಿದ್ದವು. ಅವನ ವರ್ತನೆಯಿಂದ, ಹಾವ ಭಾವಗಳಿಂದ ಮನದೊಳಗಿನ ಮಾತು ವ್ಯಕ್ತವಾಗುತ್ತಿತ್ತು., ಅವನ ಉದ್ಧಟತನ ಸ್ಪಷ್ಟವಾಗಿ ಹೇಳುತ್ತಿತ್ತು. ತನ್ನ ಷರತ್ತುಗಳ ಮೇಲೆ ಮಾತ್ರವೇ ಶಾಲ್ಮಲಿಗೆ ಬಿಡುಗಡೆ...... ಹಾಗಾದರೆ ಪರಸ್ಪರ ಸಮ್ಮತಿಯಿಂದ ಸಾಧ್ಯವಿಲ್ಲವೇ! ಬಿಚ್ಚು ಮನಸ್ಸಿನಿಂದ ಪರಸ್ಪರ ಒಪ್ಪಿಗೆಯಿಂದ ಪಡೆದ ಮುಕ್ತಿಯಿಂದ ಇಬ್ಬರು ಸುಖ ಸಂತೋಷ ನೆಮ್ಮದಿಗಳಿಂದ ಬಾಳಬಹುದು ಆದರೆ.....

ಶಾಲ್ಮಲಿಗೆ ಎಲ್ಲಿ ನೋಡಿದರೂ, ಯಾವ ಕಡೆ ಕಣ್ಣು ಹಾಯಿಸಿದರೂ ನೀರಿನಲ್ಲಿ ಮುಳುಗಿದಂತೆನಿಸುತ್ತಿತ್ತು. ಈಜಿಕೊಂಡು ದಡ ಮುಟ್ಟುವುದಾದರೆ, ಯಾವ ದಿಕ್ಕಿನ ದಡ ಸೇರುವಳೋ! ನೋಡಿದರೆ ಆಳವಾದ ಸಮುದ್ರ ಅಲ್ಲೋಲ ಕಲ್ಲೋಲವಾದಂತಿದೆ. ಆಶಾದ್ವೀಪವೇ ಕಣ್ಣಿಗೆ ಬೀಳುತ್ತಿಲ್ಲ. ಕಡೆಗೆ ಹುಲ್ಲು ಕಡ್ಡಿಯ ನೆರವೂ ಸಿಗುವಂತಿಲ್ಲ. ಮನೆಯೇ ಮುಳುಗುತ್ತಿರುವಾಗ, ನಾನು ಚಕ್ರ ಸುಳಿಯಲ್ಲಿ ಸಿಕ್ಕಿ ಸತ್ತರೆ ಬಂದ ನಷ್ಟವೇನು?

ಹೊರಗೆ ನನ್ನ ಕಾರ್ಯಕ್ಷೇತ್ರದಲ್ಲಿ ಇಷ್ಟೊಂದು ಕೀರ್ತಿ ಗೌರವ ಗಳಿಸಿದವಳಿಗೆ ಮನೆಯಲ್ಲಿ ಎಷ್ಟು ಆದರ, ಗೌರವ ಇರಬೇಕು! ಆದರೆ ಇಲ್ಲಿ ನನಗೆ ದೊರೆತದ್ದು ನೋವು, ಯಾತನೆ ಇವುಗಳಿಂದ ತಪ್ಪಿಸಿಕೊಳ್ಳುವುದು ಹೇಗೆ? ಇವನ ಬೇಟೆಯಿಂದ ರಕ್ಷಿಸಿಕೊಳ್ಳಲು ದಾರಿ ಇದೆಯೇ? ದಾರಿ........ ದಾರಿ............ ವಿಚ್ಛೇದನ.......... ಏಕಾಕಿತನದ ಜೀವನ – ಪೂರ್ಣ ಸ್ವಾವಲಂಬನ!! ಇದೆಲ್ಲದರಿಂದ ನಿಜವಾಗಿಯೂ ನನಗೆ ಸಂತೋಷ ಪ್ರಾಪ್ತವಾಗುವುದೇ? ನನ್ನಿಂದ ಒಮ್ಮೆಲೇ ಬಿಡುಗಡೆ ಪಡೆದ ಅವನಿಗೆ ನೋವಾಗುವುದೇ?

ತನ್ನ ಸ್ವಾಭಿಮಾನವನ್ನು ರಕ್ಷಿಸಿಕೊಳ್ಳಲು ಅವಳು ಇಟ್ಟ ಹೆಜ್ಜೆ ಸಮಾಜದಲ್ಲಿ ಯಾವ ಪ್ರತಿಕ್ರಿಯೆಯನ್ನುಂಟು ಮಾಡಬಹುದು? ತನ್ನ ನಿರ್ಧಾರ ಸರಿಯಾದ್ದೆಂಬ ಹೊಗಳಿಕೆಯೇ ಅಥವಾ ಅದೇ ಅಭಿಶಾಪವಾಗುವುದೇ? ಆರೋಪಗಳು, ಕಲಂಕಗಳು ವ್ಯಂಗ್ಯ ಮಾತುಗಳಿಂದ ತುಂಬಿದ ಅವಳ ವ್ಯಕ್ತಿತ್ವ ಅವಳ ನೋವಿಗೆ ಸಾಕ್ಷಿಯಾಗುವುದೇ?

ಇಲ್ಲ ಗಂಡನಿಂದ ತಿರಸ್ಕರಿಸಲ್ಪಟ್ಟ ಒಬ್ಬ ವ್ಯಭಿಚಾರಿಣಿ ಅನ್ನುವ ಪಟ್ಟ ತನ್ನದಾಗುವುದೆ? ಸಮಾಜ ತನ್ನನ್ನು ಆದರಿಸಿದ ಪಕ್ಷದಲ್ಲಿ ಸಮಾಜದಲ್ಲಿ ಇಲ್ಲಿವರೆಗೆ ತಾನು ಗಳಿಸಿದ ಕೀರ್ತಿಯನ್ನು ಮರೆತು, ತಲೆ ಎತ್ತಿಕೊಂಡು ತಿರುಗಾಡಲು ಸಾಧ್ಯವೇ? ಅವಳು ಗಳಿಸಿದ ಯಶಸ್ಸು ಕೀರ್ತಿಗಳಿಂದಾಗಿಯೇ ದೇಶ ವಿದೇಶಗಳನ್ನು ಸುತ್ತುವ ಅವಕಾಶ ದೊರೆತದ್ದು. ಈಗ ಇಂತಹ ಆರೋಪಗಳಿಂದ, ಸಮಾಜದಲ್ಲಿ ಕಳೆದುಕೊಂಡ ಗೌರವದಿಂದ, ಇನ್ನು ಮುಂದೆ ತನಗೆ ಮೊದಲಿನ ಹಾಗೆ ಬಾಳಲು ಆಗುವುದೇ? ತನ್ನ ಪ್ರಗತಿಪರ ಆಧುನಿಕ ವಿಚಾರಗಳ ಬಲದಿಂದ ಮುಂದೆ ಮುಂದೆ ಬೆಳೆಯಬೇಕೆಂಬ ಉದ್ದೇಶವೇ ಹೊರತಾಗಿ ಮನೆಯಲ್ಲಿ ಕುಳಿತು ಅಳುವ ಹಣೆ ಬರಹಕ್ಕಲ್ಲ. ಗಂಡನನ್ನು ಬಿಟ್ಟವಳು ಅನ್ನುವ ಕಾರಣಕ್ಕಾಗಿ ಜನ ತನ್ನನ್ನು ಕ್ಷುಲ್ಲಕವಾಗಿ ಕಾಣುವುದಿಲ್ಲವೇ? ತನ್ನ ಹಿಂದಿನಿಂದ ಏನೆಲ್ಲ ಜನ ಆಡಿಕೊಳ್ಳುತ್ತಾರೆ ಅದನ್ನು ಸಹಿಸಿಕೊಳ್ಳುವುದು ತನ್ನಿಂದಾಗುವುದೇ? ಎಷ್ಟು ಜನಕ್ಕೇಂತ ಸಮರ್ಥನೆ ಕೊಡುವುದಕ್ಕೆ ಆಗುತ್ತೆ. ತನ್ನ ಬದುಕು ತೆಳು ಹಗ್ಗದ ಮೇಲಿನ ಡೊಂಬರಾಟ. ತನ್ನ ಮನಸ್ಸಿನ ಮೇಲೆ ಆದ ಆಘಾತಗಳಿಂದಾಗಿ ಈ ನಿರ್ಣಯವನ್ನು ತಲುಪಿದ್ದೇನೆಂದು, ಯಾರು ಯಾರಿಗೇಂತ ವಿವರಿಸಿ ಹೇಳುವುದು? ಜನ ತನ್ನ ಮತ್ತು ಅವನ ಮುರಿದ ಸಂಬಂಧವನ್ನು ತಮಾಶೆಯಾಗಿ ಭಾವಿಸಿ ಸಂತೋಷಪಡುತ್ತಾರೆ. ಅಸಹಾಯಕ ಹೆಣ್ಣುಗಳ ಬದುಕಿನಲ್ಲಿ ಸರ್ವೇಸಾಮಾನ್ಯವಾದ ಸಂಗತಿಯ ಜೊತೆಗೇ ಇದನ್ನು ಸೇರಿಸುತ್ತಾರೆ. ನೋವು ಸಂಕಟಗಳಿಂದ ಬದುಕುವ ಹೆಣ್ಣುಗಳ ಬಗ್ಗೆ ಉದಾರವಾಗಿ, ಸಹಾನುಭೂತಿಯಿಂದ ನೋಡುತ್ತಾರೆ. ಗೌರವದಿಂದ ಕಾಣುತ್ತಾರೆ. ಆದರೆ ನೋವನ್ನು ಸಂಕಟವನ್ನು ಸಹಿಸಲು ವಿರೋಧ ತೋರಿವ ಹೆಣ್ಣುಗಳ ಬಗ್ಗೆ ತಿರಸ್ಕಾರ, ಅವಹೇಳನ ದೃಷ್ಟಿಯನ್ನು ಕಳೆಯುತ್ತಾರೆ. ಇದೆಂತಹ ವ್ಯಂಗ್ಯ? ಎಂತಹ ವಿಚಿತ್ರ ಜನ!! ದಿನಬೆಳಗಾದರೆ ಜಗಳಕ್ಕೆ ನೂರೆಂಟು ನೆಪಗಳನ್ನು ತೆಗೆಯುವುದು ಆಗದ ಕೆಲಸ. ಆದರೆ ತನ್ನನನ್ನು ಆಕ್ರಮಣದಿಂದ, ಒಪ್ಪಂದಗಳಿಂದ ರಕ್ಷಿಸಿಕೊಂಡು ತನ್ನ ಗುರಿಯನ್ನು ತಲುಪುವುದಕ್ಕಾಗಿ ಜೀವನದಲ್ಲಿ ಶಿಸ್ತಿನ ಅಗತ್ಯವಿದೆ ಮತ್ತು ವಿಚಾರಗಳನ್ನು ಅತ್ಯಂತ ಗೋಪ್ಯವಾಗಿ ಇರಿಸಬೇಕಾಗಿದೆ. ಎಂದೆಲ್ಲ ಯೋಚಿಸುತ್ತಾಳೆ.

ನರೇಶ್ ಸಿಳ್ಳು ಹೊಡೆಯುತ್ತ ಕನ್ನಡಿಯ ಮುಂದೆ ನಿಂತು ಮೇಲಿಂದ ಕೆಳಗಿನವರೆಗೆ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಾ, ಒಮ್ಮೆ ತಲೆಸರಿಮಾಡಿಕೊಳ್ಳುತ್ತಾ ಇಲ್ಲ ಕೈಯನ್ನು ಸರಿಪಡಿಸಿಕೊಳ್ಳುತ್ತಾ ನಿಂತಿದ್ದ.

"ಏನು ಬಹಳ ಸ್ಮಾರ್ಟ್ ಆಗಿ ತಯಾರಾಗುತ್ತಿರುವಿ." ಶಾಲ್ಮಲಿ ನಕ್ಕು ಹೇಳಿದಳು.

"ಓಹ್!" ನರೇಶ್‌ನಿಗೆ ಅವಳ ಮಾತಿನಲ್ಲಿ ವಿಶ್ವಾಸ ಮೂಡಿದಂತೆನಿಸಲಿಲ್ಲ. ಇಂತಹ ಮಾತನ್ನು ಕೇಳುವ ಭರವಸೆಯೇ ಅವನಿಗಿರಲಿಲ್ಲ.

"ಎಲ್ಲಿಗೋ ಹೊರಡುವ ತಯಾರಿ ನಡೆದಿದೆ?" ಶಾಲ್ಮಲಿ ಅದೇ ದಾಟಿಯಲ್ಲಿ ಹೇಳಿದಳು.

"ಹೇಳು ಎಲ್ಲಿಯಾದರೂ ಹೋಗಬೇಕಿದೆಯೇನು?" ನರೇಶ್ ಕೇಳಿದ.

"ನೀನು ಹೋಗ್ಲೇಬೇಕು ಅನ್ನೋದು ಇಲ್ಲದಿದ್ದರೆ ಒಂದು ನಾಟಕ ನೋಡಿಕೊಂಡು ಬರೋಣ. ಇವತ್ತಿನ ಪೇಪರ್‌ನಲ್ಲಿ ತುಂಬಾ ಒಳ್ಳೆ ರಿವ್ಯೂ ಬಂದಿದೆ." – ಶಾಲ್ಮಲಿ ಸಮಾಚಾರ ಪತ್ರಿಕೆಯನ್ನು ಮಡಚುತ್ತಾ ಹೇಳಿದಳು.

"ಮೊದಲೇ ಹೇಳಬಾರದಾಗಿತ್ತಾ, ಶಾಲ್ಮಲಿ..... ಒಳ್ಳೆ ಧರ್ಮ ಸಂಕಟದಲ್ಲಿ ಸಿಲುಕಿಸಿದ್ದೀ ರಾಕೇಶ್‌ನ ಮನೆಗೆ ಹೋಗಬೇಕಿದೆ. ಅವನ ಮಗಳ ಅಡ್ಮಿಷನ್ ವಿಚಾರದಲ್ಲಿ ಯಾರನ್ನೊ ಕಾಣಬೇಕಿದೆ. ನೀನು.........! ನರೇಶ್ ಬೇಸರಗೊಂಡು ಹೇಳಿದ.

"ಪರವಾಗಿಲ್ಲ ರಾಕೇಶನ ಕೆಲಸ ಬಹಳ ಮುಖ್ಯ. ಮಗಳ ವಿಚಾರ, ಸಾಧ್ಯ ಆದರೆ ದಾರೀಲಿ ಅವಳಿಗೊಂದು ಚಾಕಲೇಟ್ ಬಾಕ್ಸ್‌ಕೊಡಿಸಿ." ಹೇಳುತ್ತಾ ನೇರವಾಗಿ ಶಾಲ್ಮಲಿ ಬಾತ್ ರೂಂ ಕಡೆ ನಡೆದಳು.

ಇದನ್ನೇ ಹೇಳೋದು, ಮಾಡ್ತಿರೋದು ಕಳ್ಳತನ, ಮೇಲಿಂದ ಈ ನಾಟಕ ಬೇರೆ! ಅವನು ನಾಚಿಕೆ ಪಟ್ಕೋಬೇಕು! ಆದರೆ ಬದಲಾಗಿ ಇವಳು ನಾಚಿ ಸಾಯುತ್ತಾಳೆ. ಬೇರೆಯವರನ್ನು ಅಡ್ಡ ಇಟ್ಕೊಂಡು ಇಷ್ಟೊಂದು ಸುಳ್ಳು ಹೇಳ್ತಾನೆ. ಅವನಿಗೆ ಏನೆಂದು ಕೊಂಡಾರು ಅನ್ನುವ ಭಯ ಬೇಡವೇ?

ಇಷ್ಟೇ ಅವನ ಸಂಸ್ಕಾರ! ಹೆಂಡತಿಯ ಭಾವನೆಗಳನ್ನು ಗೌರವಿಸದೆ, ಅವುಗಳ ಕಡೆ ಲಕ್ಷ್ಯವನ್ನೇ ಕೊಡದೆ ಇರುವ ವ್ಯಕ್ತಿಗೆ ಬೇರೆಯವರು ಯಾವ ಲೆಕ್ಕ? ಕಡೆಯ ಪಕ್ಷ ಅವಳ ಮನಸ್ಸನ್ನು ಸಂತೋಷಪಡಿಸುವುದಕ್ಕಾಗಿಯಾದರೂ ತನ್ನ ಕೆಲಸವನ್ನು ಮುಂದೂಡಿದ್ದರೆ? ಅವಳಿಗೆ ಗೊತ್ತು ಅವನು ತಿರಸ್ಕರಿಸಿದ್ದು ಯಾವ ಕಾರಣಕ್ಕೇಂತ!!

"ನಾನು ನರೇಶನ ಗೆಳತಿಯರ ಎದುರು ನನ್ನನ್ನು ನಿಲ್ಲಿಸಿಕೊಂಡು ಯಾವುದೋ ಸ್ಪರ್ಧೆ ನಡೆಸಿ ಸೋಲು ಗೆಲುವಿನ ಆಟ ಆಡಿ ಖುಷಿ ಪಡುತ್ತಿಲ್ಲ. ನನಗೆ ಬೇಕಾಗಿರುವುದು, ನಾನೆಲ್ಲಿದ್ದೇನೆ, ಅನ್ನುವುದನ್ನು ಕಂಡುಕೊಳ್ಳುವುದು. ನರೇಶಗೆ ಸ್ವತಃ ತನ್ನ ಗುರಿ ಏನು ಅನ್ನುವುದೇ ಗೊತ್ತಿಲ್ಲ. ಆದರೆ ಅವನಿಗೆ ಗೊತ್ತು. ಹೆಣ್ಣುಗಳು ಈ ಭೂಮಿ ಮೇಲೆ ಎಷ್ಟು ವಿವಶರಾಗಿದ್ದಾರೇಂತ. ಈ ಪ್ರಪಂಚದಲ್ಲಿ ತಮ್ಮ ಹೆಸರು ಕೆಡದಿರುವ ಹಾಗೆ, ಹಿಡಿದ ಕೆಲಸ ಕಡೆ ತನಕ ನಿರ್ವಹಿಸುವ ಹಾಗೆ, ಬಹಳ ಎಚ್ಚರಿಕೆ ವಹಿಸುತ್ತಾರೆ. ಎದುರಾಗುವ ಸವಾಲುಗಳನ್ನು ಎದುರಿಸಬಲ್ಲರು. ಅದಕ್ಕಿಂತ ಹೆಚ್ಚಾಗಿ ಅವುಗಳನ್ನು ತುದಿ ಮುಟ್ಟಿಸಲು ಏನನ್ನಾದರೂ ಸಹಿಸಿಕೊಳ್ಳಬಲ್ಲರು. ಬಹುಶಃ ಇದನ್ನು ಪರೀಕ್ಷಿಸುವುದಕ್ಕಾಗಿಯೇ ಅವಳ ಮೇಲೆ ನರೇಶ್ ಅತ್ಯಾಚಾರ ಮಾಡುತ್ತಿರಬಹುದು!'

"ಹೆಂಗಸರು ಮನೆಯ ಪರದೆ ಇದ್ದ ಹಾಗೆ ಮಿಸೆಸ್‌ಕುಮಾರ್, ತಮ್ಮನ್ನು ಅಡ್ಡಗಟ್ಟಿ ಮನೆಯ ದೌರ್ಬಲ್ಯಗಳನ್ನೆಲ್ಲ, ಹುಳುಕುಗಳನ್ನೆಲ್ಲ ಮರೆ ಮಾಚಿ ಇಡುತ್ತಾರೆ. ಅವರಿಲ್ಲ ಅಂದರೆ ಈ ಗಂಡಸರ ಬಣ್ಣ ಬಯಲಾಗೋದು ಎಷ್ಟು ಹೊತ್ತು?" ಮೊದಲಿದ್ದ ಮನೆಯ ಯಜಮಾನಿ ಮಿಸೆಸ್ ಖನ್ನಾ ಒಮ್ಮೆ ಶಾಲ್ಮಲಿಯೊಂದಿಗೆ ಹೇಳಿದ್ದ ಮಾತು ನೆನಪಿಗೆ ಬಂತು.

ಮಿಸೆಸ್ ಖನ್ನಾ ಹೇಳಿದ್ದು ಸತ್ಯ.. ನಿಜವಾಗಿಯೂ ಹೆಂಗಸರು ಮನೆಯ ಬಾಗಿಲುಗಳು. ಮುಚ್ಚಿದ ಬಾಗಿಲ ಒಳಗೆ ಏನೆಲ್ಲವನ್ನು ನುಂಗಿಕೊಂಡು ಕೂರುತ್ತಾರೋ! ಬಾಗಿಲು ತೆಗೆದಿರಿಸಿದರೆ.....? ಹೆಂಗಸರು ನಿಜವಾಗಿಯೂ ಹಾಳು ಬಿದ್ದ ಮನೆಗಳ ಬೆಳಕಿದ್ದ ಹಾಗೆ. ಬೆಳಕಿನಿಂದಾಗಿ ಮನೆಯ ಕತ್ತಲು ದೂರವಾಗುತ್ತೆ. ಧಾರಾಳವಾಗಿ ತಾಜಾ ಗಾಳಿ ಒಳಗೆ ಬರುತ್ತೆ. ತಾಜಾ ಗಾಳಿ, ಬೆಳಕನ್ನು ಅನುಭವಿಸುತ್ತಿದ್ದರೂ ಅವರ ಅಸ್ತಿತ್ವವನ್ನೇ ಧಿಕ್ಕರಿಸುತ್ತಾರೆ.

ನರೇಶನನ್ನು ಶಾಲ್ಮಲಿಯೇ ತರಾಟೆಗೆ ತಗೊಂಡು ಬುದ್ಧಿ ಕಲಿಸಬೇಕೂಂತ ಟೊಂಕಕಟ್ಟಿ ನಿಂತರೆ, ನರೇಶ್ ಹಣ್ಣುಗಾಯಿ ನೀರುಗಾಯಿ ಆಗ್ತಾನೆ. ಬಾಯಿ ಮುಚ್ಚಿಕೊಂಡು ತೆಪ್ಪಗೆ ಅವಳ ಹತ್ತಿರ ಬರುತ್ತಾನೆ. ಅದು ಅವಳಿಗೆ ಗೊತ್ತು. ಆದರೆ ಅದರಲ್ಲಿ ಆತ್ಮ ಇರುವುದಿಲ್ಲ. ಮನಸ್ಸು ಇರುವುದಿಲ್ಲ. ಸಂವೇದನೆಗಳೂ ಇರುವುದಿಲ್ಲ. ಸಂಬಂಧವನ್ನು ಕಡಿದುಕೊಳ್ಳುವುದಕ್ಕೆ ಹೆಚ್ಚು ಕಾಲ ಹಿಡಿಯುವುದಿಲ್ಲ. ಆದರೆ ಅದು ಕಡಿದು ಹೋಗದಂತೆ ಕಾಪಾಡುವುದಕ್ಕೆ ಯುಗಗಳೇ ಬೇಕಾದೀತು!!

ಶಾಲ್ಮಲಿಗೆ ಬಾಲ್ಯದ ಒಂದು ಘಟನೆ ನೆನಪಾಯಿತು. ಪಕ್ಕದ ಮನೆಯ ನಿರ್ಮಲಾ ಆಂಟಿ ರಾತ್ರಿ ಆಯ್ತೂಂದ್ರೆ ಸೂರು ಹಾರಿ ಹೋಗುವ ಹಾಗೆ ಕಿರುಚುತ್ತಿದ್ದಳು. ಈ ಕಿರುಚಾಟ, ಚೀರಾಟಗಳ ನಡುವೆ ಆಂಟಿಯ ಯಜಮಾನರು ಹೆಂಡತಿ ಮುಂದೆ ಕೈ ಜೋಡಿಸಿ, ಅಂಗಲಾಚಿ ಕ್ಷಮೆ ಬೇಡುತ್ತಿದ್ದರು. ಇದಕ್ಕಾಗಿ ಪರಿಹಾರವಾಗಿ ಅವರು ಆಂಟಿಗೆ ಒಡವೇನೋ, ಸೀರೇನೋ ತಂದು ಕೊಡುತ್ತಿದ್ದರು. ಅದನ್ನು ತಂದು ಅಮ್ಮನಿಗೆ ತೋರಿಸಿ ಸಂತೋಷ ಪಡುವುದಕ್ಕೆ ಬದಲಾಗಿ ಅಳುತ್ತಾ ಹೇಳುತ್ತಿದ್ದಳು" ನಾನು ಹೀಗೆಲ್ಲ ಮಾಡದಿದ್ದರೆ, ಈ ಮುದಿ ವಯಸ್ಸಿನಲ್ಲಿಯೂ ಆ ನರ್ಸ್ ಮನೆ ಬಾಗಿಲಲ್ಲಿ ಸಾಯ್ತಾಬಿದ್ದಿರ್ತಾರೆ...... ಆದರೆ ನಾನು ಇಲ್ಲಿ ಕಾಸು ಕಾಸಿಗೂ ಪರದಾಡ್ತಾ ಇರುತ್ತೇನೆ."

ಇಂತಹ ಮೋಸಗಾರ ಗಂಡ!! ಅವನು ಹತ್ತಿರ ಬರುವುದರಿಂದ ಮಾನಸಿಕವಾಗಿ ನೆಮ್ಮದಿ ಸಿಗದೆ ಹೋಗಬಹುದು. ಆದರೆ ಭೌತಿಕ ರೂಪದಲ್ಲಿ ಏನಾದರೂ ಒಂದಿಷ್ಟು ಪಡೆಯುವುದರಿಂದ ಕಡೇ ಪಕ್ಷ ಎದೆಯಲ್ಲಿನ ಬೆಂಕಿ ಸ್ವಲ್ಪ ತಣ್ಣಗಾದೀತು.

ನರೇಶ್‌ನಿಂದ ಶಾಲ್ಮಲಿ ಇಂತಹ ಭೌತಿಕ ವಸ್ತುಗಳು. ಹಣ, ಒಡವೆ, ಬಟ್ಟೆ ಯಾವುದನ್ನೂ ಬೇಡಲಿಲ್ಲ. ಒಂದೆರಡು ಮಾತುಗಳನ್ನು; ಬೆಲೆಕಟ್ಟಲಾಗದ ವಸ್ತುಗಳನ್ನು!

ಇವುಗಳನ್ನು ಕೊಟ್ಟಷ್ಟೂ ಕೊಂಡಷ್ಟೂ ನಿಲ್ಲುವುದಿಲ್ಲ. ಆದರೆ ಇಂತಹ ನಿಧಿ ನರೇಶನಿಂದ ತನಗೆ ಸಿಗಬೇಕು! ಸಂಬಂಧಗಳನ್ನು ಬೆಸೆದುಕೊಂಡು ಬಾಳುವುದು ತನ್ನ ಸುಖಕ್ಕಾಗಿಯೇ ಹೊರತು ಬೇರೆಯವರಿಗೆ ಹಂಚುವುದಕ್ಕಲ್ಲ, ನಿಜ. ಆದರೆ ಇನ್ನೊಬ್ಬರೊಂದಿಗೆ ಸಂಬಂಧ ಬೆಳೆಸಿ ಪರೀಕ್ಷಿಸಿ ನೋಡುವುದಕ್ಕೆ ಅವಕಾಶವಾದರೂ ಎಲ್ಲಿದೆ?

"ನನಗೆ ನೀನು ಒಮ್ಮೊಮ್ಮೆ ನನ್ನ ಕೈಗೆ ಎಟುಕಲಾರದ ಎತ್ತರಕ್ಕೆ ಬೆಳೆದಿದ್ದೀ ಅನಿಸುತ್ತೆ. ನನ್ನನ್ನು ಕಂಡರೆ ನನಗೆ ಏನೋ ಭಯವಾಗುತ್ತೆ. ಯಾಕೆ ಅನ್ನೋದು ನನಗೇ ಗೊತ್ತಿಲ್ಲ. ಆದರೂ ನೀನು ನನ್ನಿಂದ ಕಾರಣ ತಿಳಿದುಕೊಳ್ಳಬೇಕೂಂತಿಯಾ."

ಅನೇಕ ವರ್ಷಗಳ ಹಿಂದೆ ನರೇಶ್ ಹೇಳಿದ ಈ ಮಾತುಗಳು ನೆನಪಾಗಿ ಆಲೋಚಿಸತೊಡಗಿದಳು. ಸಂಬಂಧಗಳಲ್ಲಿಯೇ ವಿಶ್ವಾಸ ಇಟ್ಟು ಬದುಕ ಬಯಸುವ ಹೆಣ್ಣಿನಿಂದ ಬೆದರುವಂಥಾದ್ದೇನಿದೆ? ಬಹುಶಃ ತಾನು ಅವನಿಂದ ಅತಿಯಾದ್ದನ್ನು ಅವನ ಶಕ್ತಿಗೆ ಮೀರಿದ್ದನ್ನು ಅಪೇಕ್ಷಿಸುತ್ತಿರಬಹುದೇ?..... ತಾನು ಅಪೇಕ್ಷಿಸುತ್ತಿರುವುದು ಅವನಲ್ಲಿ ಇಲ್ಲದೆ ಇರಬಹುದು.

ಹಾಗಾದರೆ ಶಾಲ್ಮಲಿ ಏನು ಮಾಡಬೇಕು? ತನ್ನ ಜೀವನ ಸಂಗಾತಿಯನ್ನು ಕೈ ಹಿಡಿದು ನಡೆಸುವುದನ್ನು ಕಲಿಸಬೇಕೆ? ಹೀಗೆ ಮಾಡುವಲ್ಲಿ ಉಳಿದ ಸಂಗಾತಿಗಳು ಹಿಂದುಳಿದರೆ, ಅವರಿಗಾಗಿ ನಿಲ್ಲುವುದು ಅಥವಾ ಹಿಂದಿರುಗುವುದು ಮಾಡಬೇಕಾದರೆ ಶಾಲ್ಮಲಿ ತಪ್ಪಾಗಿ ತಿಳಿಯಬಾರದು ಎಂದುಕೊಳ್ಳುತ್ತಲೇ ಕಡೆಗೆ ಈ ತೀರ್ಮಾನದ ಹಂತವನ್ನು ಬಂದು ತಲುಪಿದಳು.

ಕೆಲಸ ಸಿಕ್ಕಿದ ಕೆಲವು ದಿನಗಳ ಮೇಲೆ ನರೇಶ್ ತನ್ನ ಸ್ನೇಹಿತರ ಮುಂದೆ ಶಾಲ್ಮಲಿಯ ವಿಚಾರವಾಗಿ ಹೆಮ್ಮೆಯಿಂದ ಸಂತೋಷದಿಂದ ಹೇಳಿಕೊಳ್ಳುತ್ತಿದ್ದ. ಅದೇ ನರೇಶ್ ಮನೆಯಲ್ಲಿ ಶಾಲ್ಮಲಿಯ ಪ್ರತಿಮಾತಿಗೂ ಸಿಡುಕುತ್ತಿದ್ದ. ಹೊರಗಡೆ ಹೆಮ್ಮೆಯ ಸಂಗಾತಿ! ಮನೆ ಒಳಗೆ ಮೂಕಳಾಗಿ, ಕೆಲವೊಮ್ಮೆ ಕಿವುಡಿಯಾಗಿ ಇರಬೇಕಾಗುತ್ತಿತ್ತು. ಹಾಗಿದ್ದ ಮೇಲೆ ತನ್ನಂತಹ ಸುಶಿಕ್ಷಿತ ಹೆಣ್ಣನ್ನು ಬಯಸಿ ಮದುವೆಯಾದದ್ದೇಕೆ? ಅವನಿಗೆ ಬೇಕಾಗಿದ್ದುದು, ಬಾಯಿಲ್ಲದ, ಕೇವಲ ಅಲಂಕಾರ ವಸ್ತುವಾಗಿರುವ, ಕೀಲಿಯಿಂದ ಕೈಕಾಲು ಆಡಿಸುವ ರಬ್ಬರ್ ಗೊಂಬೆಯಂತಹ ಹೆಂಡತಿ. ಆದರೆ ತಾನು?.... ಗಾಳಿ ಬೀಸಿದರೂ ಮಿಡಿಯುವ, ಸಂವೇದನಾಶೀಲ ಹೆಣ್ಣು ಅವನು ಬಯಸಿದರೂ ಮೂರ್ಖಳಾಗಿ ಇರಲಾಗದು. ತನ್ನ ಈ ಎಲ್ಲ ಗುಣಗಳಿಗಾಗಿಯೇ ಮದುವೆಯಾದವನು, ಈಗೇಕೆ ಇವುಗಳನ್ನು ತಿರಸ್ಕರಿಸುತ್ತಾನೆ? ಅವನಿಗದರಿಂದೇನು ಲಾಭ? ನರೇಶ್ ಮತ್ತು ತನ್ನ ಸಂಬಂಧ ಕುರಿತು ಆಲೋಚಿಸಿದಷ್ಟೂ ಸಮಸ್ಯೆ ಆಳವಾಗುತ್ತಿತ್ತು. ತಾನು ಇನ್ನಷ್ಟು ಅವನಿಗೆ ಅರ್ಪಿಸಿಕೊಳ್ಳುತ್ತಿದ್ದೇನೆ, ಎನಿಸುತ್ತಿತ್ತು.

* * *

ಮತ್ತೊಮ್ಮೆ ಮನೆ ತುಂಬ ಅತಿಥಿಗಳ ಆಗಮನವಾಯಿತು. ನರೇಶನ ಅಣ್ಣಂದಿರು, ಅವರ ಕುಟುಂಬ, ಮಕ್ಕಳು ಮನೆ ಕಿಕ್ಕಿರಿದು ತುಂಬಿತ್ತು. ಎಲ್ಲಿ ನೋಡಿದರೂ, ಬಟ್ಟೆ, ಹಾಸಿಗೆ, ಆಟದ ಸಾಮಾನು. ಬೇಲಾ, ಕಿಶೋರಿ ಲಾಲ್ ಅವುಗಳನ್ನೆಲ್ಲ ಎತ್ತಿ ನೆಟ್ಟಗೆ ಮಾಡಿ ಇಡಲು ಸಿದ್ಧವಾಗಿದ್ದರೂ ಶಾಲ್ಮಲಿ ಅವರನ್ನು ಬೇಡವೆಂದು ತಡೆದಿದ್ದಳು. ಆದರೂ ಇಬ್ಬರೂ ಗಾಣದೆತ್ತುಗಳ ಹಾಗೆ ದುಡಿಯುತ್ತಲೇ ಇದ್ದರು. 'ಟೀ ಮಾಡು, ತಿಂಡಿ ಮಾಡು, ಪಕೋಡ ಮಾಡು, ಸಿಹಿ ಮಾಡು. ಹೀಗೆ ಮಾಡಿ ಮಾಡಿ ಉಣ ಬಡಿಸುವುದರಲ್ಲೇ ಅವರಿಗೆ ಸಾಕಾಗಿ ಹೋಗಿತ್ತು. ಆದರೂ ಬಾಯಿ ಬಿಡಲಿಲ್ಲ. ಯಜಮಾನರ ಕಡೆ ನೆಂಟರಲ್ಲವೇ?

ಹಿಂದಿನ ಅನುಭವಗಳಿಂದ ಅವಳು ಪಾಠ ಕಲಿತಿದ್ದಳು. ಅಮೂಲ್ಯವಾದ ವಸ್ತು, ಒಡವೆ ಎಲ್ಲಾ ಭದ್ರವಾಗಿ ಸೇಫ್‌ನಲ್ಲಿರಿಸಿ ಬೀಗ ಹಾಕಿದಳು. ಅಲಂಕಾರಿಕ ವಸ್ತುಗಳನ್ನೆಲ್ಲ ತೆಗೆದು ಅಲಮಾರಿನಲ್ಲಿರಿಸಿದಳು. ಲಾನ್‌ನಲ್ಲಿ ಆಡಿಕೊಳ್ಳಲು ಎಷ್ಟು ಹೇಳಿದರೂ ಮಕ್ಕಳು ಕೇಳದೆ ಪಡಸಾಲೆಯಲ್ಲಿಯೇ ಚೆಂಡಾಟ ಶುರುಮಾಡಿದರು. ಶಾಲ್ಮಲಿಗೆ ಟಿ.ವಿ. ಮತ್ತು ಇತರೆ ವಸ್ತುಗಳ ಬಗ್ಗೆ ಚಿಂತೆಯಾಯಿತು.

ನರೇಶ್ ಮೊದ ಮೊದಲು ಏನೂ ಹೇಳಲಿಲ್ಲ. ಮನೆಯ ದುಃಸ್ಥಿತಿಯನ್ನು ನೋಡಿ, ಸುಮ್ಮನಿರಲಾಗದೆ ಚೆನ್ನಾಗಿ ಮಕ್ಕಳಿಗೆ ಬುದ್ಧಿ ಹೇಳಿದ. ಮಕ್ಕಳು ಹೋಗಿ ಅಮ್ಮನಲ್ಲಿ ಚಿಕ್ಕಪ್ಪನ ಬಗ್ಗೆ ದೂರಿದರು. ಒಂದು ದಿನ ದೊಡ್ಡತ್ತಿಗೆ ಹೊಟ್ಟೆ ಉರಿಯಿಂದ ಹೇಳಿದಳು – ಅಯ್ಯೋ ನಮ್ಮ ಮೈದುನನಿಗೆ ಮಕ್ಕಳಾಟ, ಹುಡುಗಾಟಗಳ ಸುಖ ಎಲ್ಲಿಂದ ಗೊತ್ತಾಗಬೇಕು? ಈ ಮಕ್ಕಳ ನಗೂ ಕೂಡಾ ಇವರಿಗೆ ಗಲಾಟೆ ಹಾಗೆ ಕೇಳಿಸುತ್ತೆ. ವರ್ಷಗಳೇ ಆದವು ಹೆಂಡತಿ ಹೊಟ್ಟೇಲಿ ಒಂದು ಇಲಿ ಕೂಡಾ ಹುಟ್ಟಲಿಲ್ಲ."

"ಮುಖ ನೋಡಿದರೆ ಗೊತ್ತಾಗುವುದಿಲ್ಲವೇ. ಒಣಗಿದ ಕಡ್ಡಿ ಆದ ಹಾಗೆ! ಕಾಂತಿ ಇರಬೇಕಾದ ಕಡೆ ಬಂಜೆತನ ಎದ್ದು ಕಾಣುತ್ತಿದೆ" ಚಿಕ್ಕವಳು ನಕ್ಕಳು.

"ಅಬ್ಸರ್ಡ್" – ನರೇಶ್ ಸಿಡಿಮಿಡಿಗೊಂಡ.

"ಮೈದುನರೇ, ನಮ್ಮ ಹತ್ತಿರ ಇಂಗ್ಲೀಷ್ ಗಿಂಗ್ಲೀಷ್ ಹೊಡೀಬೇಡಿ! ಈ ಭಾಷೆಯಲ್ಲಿ ಏನಾದರೂ ಹೇಳ್ಬೇಕೂಂತ ಇದ್ದರೆ ನಿಮ್ಮ ಹೆಂಡತಿ ಹತ್ತಿರ ಹೇಳಿ". ದೊಡ್ಡತ್ತಿಗೆ ತಮಾಶೆ ಮಾಡ್ತಾ ಹೇಳಿದಳು."

"ಹೇಳೋದಂತೂ ಇರಲಿ. ಕಡೆಗೆ ನಗುವುದಕ್ಕೂ ಆಗೊಲ್ಲ." – ಬಡಬಡಿಸುತ್ತಾ ನರೇಶ್ ಎಲ್ಲರ ನಡುವಿನಿಂದ ಎದ್ದ.

"ಇವಳನ್ನು ಡಾಕ್ಟರ್ ಹತ್ತಿರ ಕರ್ಕೊಂಡು ಹೋಗಿ ನಾಪಿಬ್ಬರೂ ಬೇಕಾದರೆ ತಂಗೀನ ಡಾಕ್ಟರಿಗೆ ತೋರಿಸ್ತೀವಿ." ಪತ್ತಿರ ಕುಳಿತಿದ್ದ ಗಂಡನನ್ನು ಮೊಣ ಕೈಯಿಂದ ತಿವಿಯುತ್ತ ಅತ್ತಿಗೆ ನಕ್ಕಳು.

"ಡಿಸ್‌ಗಸ್ಟಿಂಗ್!" ಎಂದು ಕೋಪದಿಂದ ಸಿಡಿಸಿಡಿ ಎನ್ನುತ್ತ ರೂಮಿನೊಳಗೆ ಬಂದ, ಶಾಲ್ಮಲಿ ಯಾವುದೊ ಪತ್ರಿಕೆಯ ಪುಟಗಳನ್ನು ತಿರುವಿ ಹಾಕುತ್ತಿದ್ದಳು. ಈ ಚುಚ್ಚು ಮಾತುಗಳು ಅವಳ ಕಿವಿಗೂ ಬಿದ್ದಿತ್ತು. ಆದರೆ ಅದನ್ನು ಹಾಗೆಯೇ ನುಂಗಿಕೊಂಡಿದ್ದಳು......!

"ಈ ಜನಕ್ಕೆ ಮಾತಾಡೋಕೂ ಗೊತ್ತಿಲ್ಲ. ಅನಾಗರಿಕರು......ಅಸಭ್ಯರು.....ಅಕ್ಷರ ಜ್ಞಾನ ಇಲ್ಲದ ಹೆಂಗಸರು! ನರೇಶನ ಕೋಪ ಮಿತಿ ಮೀರಿತ್ತು. ಶಾಲ್ಮಲಿಯ ನಿರ್ವಿಕಾರ ಮುಖವನ್ನು ನೋಡುತ್ತಿದ್ದು, ಮತ್ತೆ ಬಾತ್ ರೂಂ ಕಡೆ ನಡೆದುಬಿಟ್ಟ.

ಅಕ್ಷರ ಕಲಿಯದೆ ಇರುವವರು, ನಡವಳಿಕೆ ಗೊತ್ತಿಲ್ಲದೆ ಇರುವವರು ಹೆಂಡತಿಯಾಗಿ ಬಂದರೆ, ಬೇಸರಪಟ್ಟುಕೊಂಡು ದೂರ ಓಡ್ತಾರೆ. ವಿದ್ಯವಂತಳೂ, ತೀಕ್ಷ್ಣಮತಿಯವಳೂ ಹೆಂಡತಿಯಾಗಿ ಬಂದರೆ ಒಂದು ಬಗೆಯ ಗಾಭರಿಯಿಂದ ಅವರಿಂದ ದೂರ ಓಡಿ ಮೂರನೇ ಜಾತಿ ಹೆಂಗಸರಿಂದ ಆಕರ್ಷಿತರಾಗುತ್ತಾರೆ. ಹಾಗಾದರೆ ಇವರಿಗೆ ಯಾವ ಜಾತಿಯ ಹೆಂಡತಿಯರು ಬೇಕಾಗಿದೆ ಅನ್ನೋದನ್ನು ಅವರಾದರೂ ತಿಳಿದಿದ್ದಾರೆಯೇ? ದೀರ್ಘವಾಗಿ ಉಸಿರೆಳೆದು ನರೇಶನ ಬಟ್ಟೆಗಳನ್ನು ಅಲಮಾರಿಯಿಂದ ತೆಗೆದು ಬಾತ್ ರೂಂ ಬಳಿ ಹ್ಯಾಂಗರ್‌ಗೆ ತಗುಲಿಸಿದಳು.

ಒಮ್ಮೊಮ್ಮೆ ನರೇಶನ ಗೆಳತಿಯರನ್ನು ಭೇಟಿಯಾಗಿ, ಅವರ ಜೊತೆ ಮುಕ್ತವಾಗಿ ಮಾತಾಡಬೇಕು ಅವರಿಗೆ ಹೇಳಬೇಕು. ವಿವಾಹಿತ ಗಂಡುಗಳು ನಿಮ್ಮ ಅಕ್ಕ ತಂಗಿಯರ ಸ್ವತ್ತು. ದಯವಿಟ್ಟು ಅದಕ್ಕೆ ಕೈ ಹಾಕಬೇಡಿ!' ಒಂದೊಂದು ಸಲ ನಿಮ್ಮ ಪ್ರೇಮಿಗಳೆಲ್ಲ ಸಾಕಷ್ಟು ಮಂದಿ ಮರಳಿ ಹೋಗಲೂಬಹುದು. ಆಗ ನಿಮ್ಮ ಪಾಲಿಗೆ ಉಳಿಯುವುದು ನಿಂದೆ, ಅವಮಾನ ಮತ್ತು ಏಕಾಕಿತನ ಮಾತ್ರ. ನಿಮಗೆ ಗೊತ್ತಿಲ್ಲ ಇವರೆಲ್ಲ ಎಂದೂ, ಯಾರ ಹತ್ತಿರವೂ ಸ್ಥಿರವಾಗಿ ಇರುವುದಿಲ್ಲ. ಹಾಗೆ ಯಾರಾದರೂ ಇದ್ದರೆ ಅಂಥವರನ್ನು ಸೆಳೆದುಕೊಳ್ಳೋದು ಬಹಳ ಕಷ್ಟ...... ಬಹಳ ಕಷ್ಟ! ಅವರು ಹೆಂಗಸರೂ ಆಗಿರೊಲ್ಲ ಗಂಡಸರೂ ಆಗಿರೊಲ್ಲ. ಅವರು ಕೇವಲ ಮನುಷ್ಯರಾಗಿರುತ್ತಾರೆ...... ಮನುಷ್ಯರು! ಅಂತಹ ವಿಶಿಷ್ಟ ವಿಚಿತ್ರ ಮನುಷ್ಯರು ಬಹಳ ಅಪರೂಪವಾಗಿ ಸಿಕ್ತಾರೆ' ಅಂತ.

ಶಾಲ್ಮಲಿ ಆಲೋಚಿಸುತ್ತಲೇ ರೂಮಿನಿಂದ ಹೊರಟು ಕಿಚನ್ ಕಡೆ ನಡೆದಳು. ದಾರೀಲೆ ಮೂರು ಜನ ನರೇಶನ ಅಣ್ಣಂದಿರ ಹೆಂಡತಿಯರು ರೆಡಿಯಾಗಿ ಕೂತಿದ್ದರು. ಅವರ ಕಡೆ ಪ್ರೀತಿಯಿಂದ ನೋಡುತ್ತಾ ಶಾಲ್ಮಲಿ ಬೇಲಾಗೆ ಸಹಾಯ ಮಾಡುತ್ತಾ ತಿಂಡಿ ನೀಡುತ್ತಿದ್ದಳು. ಈ ದಿನ ಆಫೀಸ್ನಿಂದ ರಜೆ ತಗೊಂಡು ಬೇಗ ಬಂದುಬಿಟ್ಟಳು. ಪಾಪ ಹಳ್ಳಿಯಿಂದ ಬಂದಿದ್ದಾರೆ. ಆ ಪುಟ್ಟ ಹುಡುಗಿಯರಿಗೆ ದಿಲ್ಲಿಯೆಲ್ಲ ತೋರಿಸಿಕೊಂಡು ಅವರಿಗೆ ಏನಾದರೂ ಕೊಂಡುಕೊಳ್ಳುವ ಮನಸ್ಸು. ತುಂಬಾ ಗೆಲುವಾಗಿದ್ದಳು. ಇವತ್ತಿಗೂ ಅವಳ ಮನಸ್ಸಿನಲ್ಲಿ ಆ ಹಳ್ಳಿಯ, ಹಳ್ಳಿಯಲ್ಲಿನ ಅವರೆಲ್ಲರ

ಪ್ರೀತಿ ಆದರಗಳು ಇನ್ನೂ ನೆನಪಿವೆ. ಆ ಮಧುರ ಸ್ಮೃತಿಗಳು ಈಗಲೂ ಅವಳ ಮುಖದಲ್ಲಿ, ಅವಳ ವ್ಯವಹಾರದಲ್ಲಿ ಪ್ರತಿಬಿಂಬಿಸಿವೆ.

ಸಂಜೆಗೆ ಶಾಲ್ಮಲಿ ಹಿಂದಿರುಗಿದ್ದಾಗ ತೋಟಕ್ಕಾದ ಸ್ಥಿತಿ ನೋಡಿ ಸ್ತಂಭಿಸಿ ನಿಂತು ಬಿಟ್ಟಳು. ಹೂವಿನ ಗಿಡಗಳನ್ನೆಲ್ಲ ತುಳಿದು ಹಾಕಿದ್ದರು. ಹೂಗಳನ್ನೆಲ್ಲ ಕಿತ್ತು ಚೆಲ್ಲಾಪಿಲ್ಲಿಯಾಗಿ ದಳಗಳನ್ನೆಲ್ಲ ಹರಡಿದ್ದರು. ಕ್ಯಾಸಿಯಾ ಮತ್ತು ಸಾಲ್ಮಾಲಿಯಾ (ಬೂರುಗ) ಮರಗಳ ಕೊಂಬೆಗಳೆಲ್ಲ ಕಿತ್ತು ಬಿದ್ದಿದ್ದವು. ತೊಗಟೆ ಮೇಲೆಲ್ಲ ಹೆಸರುಗಳನ್ನು ಕೊರೆತು ಫಜೀತಿ ಮಾಡಿದ್ದರು.

"ನಮಸ್ಕಾರ ಅಮ್ಮಾವ್ರೆ!" ತಲೆ ಬಗ್ಗಿಸಿಕೊಂಡು ಅಸಹಾಯಕನಾಗಿ ಮಾಲಿ ಶಾಲ್ಮಲಿಯನ್ನು ನೋಡಿ ಒಮ್ಮೆಲೇ ಎದ್ದು ನಿಂತ.

"ಎಲ್ಲ ಸರಿ ಹೋಗುತ್ತೆ. ನೀನೇನು ಚಿಂತೆ ಮಾಡಬೇಡ....!"

ಶಾಲ್ಮಲಿ ಸ್ವಲ್ಪ ಗಾಬರಿಯ ದನಿಯಲ್ಲಿ ರೂಮನ್ನು ಪ್ರವೇಶಿಸಿದಳು ಅವಳು ವಿಚಿತ್ರ ಸ್ಥಿತಿಯಲ್ಲಿದ್ದಳು. ಅವಳಿಗಾದ ಸಂಕಟದಿಂದ ಮೂಕಳಾಗಿದ್ದಳು.

"ನಾನೆಷ್ಟೋ ಹೇಳಿದೆ ಅಮ್ಮಾವ್ರೆ. ಆದರೆ ದೊಡ್ಡಮ್ಮಾವ್ರು ಉಲ್ಟಾ ನನಗೇ ಬೈಯ್ಯಲು ಶುರುಮಾಡಿದರು". ಬೇಲಾ ಸಂಕೋಚದಿಂದ ಶಾಲ್ಮಲಿಯ ಮುಂದೆ ನಿಂತಳು.

"ಪರವಾಗಿಲ್ಲ ಬಿಡು, ಬೇಲಾ! ಮಕ್ಕಳಲ್ಲವೇ! ಮರೆತು ಬಿಡು!" ಬೇಲಾಗೆ ಸಮಾಧಾನದ ಮಾತುಗಳಾಡಿದರೂ ಅದರಲ್ಲಿ ತನ್ನನ್ನು ತಾನೇ ಸಮಾಧಾನ ಮಾಡಿಕೊಳ್ಳುತ್ತಿರುವ ಧ್ವನಿ ಇತ್ತು.

ಆ ಕಡೆ ಆ ಹೆಣ್ಣು ಮಕ್ಕಳು ತಾವು ಕೊಂಡು ಕೊಂಡ ವಸ್ತುಗಳನ್ನೆಲ್ಲ ನೋಡಿ ನೋಡಿ ಖುಷಿ ಪಡುತ್ತಿದ್ದರು. ಶಾಲ್ಮಲಿ ಮುಖ ತೊಳೆದುಕೊಂಡು ರೂಮಿನೊಳಗೇ ಚಹತರಿಸಿಕೊಂಡಳು. ಅವಳ ಮನಸ್ಸು ಭಾರವಾಗಿತ್ತು. ಯಾರೊಂದಿಗೂ ಮಾತನಾಡುವ, ಅಥವಾ ಮಾತು ಕೇಳಿಸಿಕೊಳ್ಳುವ ಮನಃಸ್ಥಿತಿಯಲ್ಲಿ ಅವಳಿರಲಿಲ್ಲ. ಹೊರಗಡೆಯಿಂದ ನರೇಶನ ಧ್ವನಿ ಕೇಳಿಸಿತು. ಬಹುಶಃ ಲಾನ್‌ಗೆ ಒದಗಿದ ಸ್ಥಿತಿ ನೋಡಿ ದಿಗ್ಭ್ರಾಂತನಾಗಿರಬೇಕು. ನೇರವಾಗಿ ಶಾಲ್ಮಲಿಯು ಹತ್ತಿರ ಬಂದ. ಅವಳು ಶಾಂತವಾಗಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಚಹ ತರಲು ಹೇಳು ಮುಖ ತೊಳೆಯಲು ಹೊರಟ ಟವಲ್ಲಿನಿಂದ ಮುಖ ಒರೆಸಿಕೊಳ್ಳುತ್ತಾ ಯೋಚಿಸಿದ. ಶಾಲ್ಮಲಿಯ ಮೌನ ಮಾತಿಗಿಂತ ಹೆಚ್ಚಾಗಿ ನನ್ನ ಮೇಲೆ ಪ್ರಭಾವ ಬೀರುತ್ತಿದೆ. ಅವಳ ಈ ತರದ ಮೌನ ನನಗೆ ಒಮ್ಮೊಮ್ಮೆ ಅಸಹನೀಯವಾಗುತ್ತದೆ'. ನರೇಶ್ ಕುರ್ಚಿಮೇಲೆ ಕುಳಿತು ಚಹ ಗುಟುಕರಿಸತೊಡಗಿದ.

ಶಾಲ್ಮಲಿಗೆ ಇತ್ತೀಚೆಗೆ ತನ್ನಲ್ಲಿನ ಈ ವಿನೀತ ಸ್ವಭಾವದ ಬಗ್ಗೆ ತನಗೇ ಸಿಟ್ಟು ಬರುತ್ತಿತ್ತು. ಬೇರೆಯವರ ಪ್ರತಿಷ್ಠೆ ಉಳಿಸುವುದಕ್ಕಾಗಿ ವಿನೀತಳಾಗಿ ಅಕಾರಣವಾಗಿ ಅವಮಾನಕ್ಕೆ ಗುರಿಯಾಗುತ್ತಾಳೆ. ಪ್ರಪಂಚ ಜ್ಞಾನವಾಗಲೀ, ಆಧ್ಯಾತ್ಮಿಕ ಅರಿವಾಗಲಿ ಇಲ್ಲದೆ ಇರುವ ಮನುಷ್ಯ ಬೇರೆಯೊಬ್ಬರ ಒಳ್ಳೆತನವನ್ನು ದುರುಪಯೋಗ ಪಡಿಸಿಕೊಳ್ಳುತ್ತಾನೆ. ಬುದ್ಧಿವಂತರ ಜೊತೆ ಬುದ್ಧಿವಂತಿಕೆ ತೋರಿಸಿದರೆ ಅರ್ಥ ಇದೆ. ಆದರೆ ಒಬ್ಬ ಒಳ್ಳೆ ಮನುಷ್ಯನ ಜೊತೆ ಕಾದಾಟ ಮಾಡುವುದರಿಂದ ಸಿಗುವ ಲಾಭ ಏನು?

'ಪ್ರತಿಯೊಬ್ಬ ಮನುಷ್ಯನ ಬೌದ್ಧಿಕ ಕ್ಷಮತೆಗೆ ಒಂದು ಮಿತಿ ಇರುತ್ತದೆ. ಇದೇ ಅವನ ತೀರಾ ಖಾಸಗಿಯಾದ ಸಂಪತ್ತು. ವ್ಯವಹಾರದಲ್ಲಿನ ಒಳಿತು ಕೆಡುಕುಗಳು ಪರಸ್ಪರರ ಮೇಲೆ ಪ್ರಭಾವ ಬೀರಬಹುದಾದರೂ, ಬೌದ್ಧಿಕವಾಗಿ ಈ ಪ್ರಭಾವವನ್ನು ಬೀರಲು ಸಾಧ್ಯವಿಲ್ಲ. ತನ್ನ ನಿರೀಕ್ಷೆಯ ಮಟ್ಟಕ್ಕೆ ನರೇಶ್ ಬೌದ್ಧಿಕವಾಗಿ ಬೆಳೆದು ಮಹತ್ವದ್ದು ಏನನ್ನಾದರೂ ಸಾಧಿಸಲಿ ಎಂದು ಹಾರೈಸುವುದು ಸರಿಯಲ್ಲ. ಆದರೆ ಅವನ ಉದ್ಧಟತನವನ್ನಾದರೂ ನಿಯಂತ್ರಿಸಬಹುದಲ್ಲ. ಶಾಲ್ಮಲಿಗೆ ದುಡಿದು ದುಡಿದು ಸಾಕಾಗಿತ್ತು. ಶಾಲ್ಮಲಿ ಒಬ್ಬಳೇ ಎಲ್ಲವನ್ನು ನಿಭಾಯಿಸುವ ಸಂಕಲ್ಪ ಮಾಡುವುದರಿಂದ ವ್ಯತ್ಯಾಸವೇನೂ ಆಗುತ್ತಿರಲಿಲ್ಲ. ಶಾಲ್ಮಲಿಯ ಪ್ರತಿಯೊಂದು ಇಚ್ಛೆಯನ್ನು, ಅವಳ ಪ್ರತಿಯೊಂದು ಮಾತನ್ನು ಧಿಕ್ಕರಿಸುತ್ತ ಅವಳಿಗೆ ನೋವು, ಹಿಂಸೆ, ಯಾತನೆಗೆ ಕಾರಣವಾಗಬಹುದಾದುವೆಲ್ಲವನ್ನೂ ಮಾಡಿ, ನರೇಶ್ ತನ್ನ ಗೆಲುವನ್ನು ಸ್ಥಾಪಿಸಬೇಕೆಂದಿದ್ದ. ಒಂದು ಸಲ ಒಬ್ಬ ಗೆಳೆಯನ ಮನೆಯಲ್ಲಿ ಮಾತಿನ ಮಧ್ಯೆ ಹೇಳಿದ್ದ. "ಪುರುಷ ಸ್ತ್ರೀಗೆ ಎಲ್ಲ ಸುಖವನ್ನು ಕೊಡುವುದಕ್ಕೆ ಸಿದ್ಧನಾಗಿದ್ದಾನೆ. ಆದರೆ ಅವಳೇ ಅವುಗಳನ್ನು ನಿರಾಕರಿಸಿದರೆ?.....ಮೊದಲು ಅವಳು ತಾನು ಪುರುಷನಾಗಬೇಕೆ? ಅಥವಾ ಸ್ತ್ರೀಯಾಗಿಯೆ ಉಳಿಯಬೇಕೇ?' ಎನ್ನುವುದನ್ನು ನಿರ್ಧರಿಸಬೇಕು....

ಎಷ್ಟು ಸಲ, ಎಷ್ಟು ರೀತಿಯಲ್ಲಿ ನರೇಶ್‌ಗೆ ಹೇಳಬೇಕು. ತಾನು ಹೆಣ್ಣಾಗಿಯೇ ಇರಬೇಕೆಂದಾಗ, ಅಸಹಾಯಕಳಾಗಿ, ಅತ್ಯಾಚಾರಗಳನ್ನು ಸಹಿಸಿಕೊಳ್ಳುತ್ತಾ ನೋವಿನ ನಂಜನ್ನು ಕುಡಿಯುತ್ತಾ ಬದುಕಬೇಕೆಂದು ಅರ್ಥವಲ್ಲ. ಅವಳು ತಪ್ಪು ಮಾಡುವುದಲ್ಲ. ತನ್ನ ತಪ್ಪುಗಳನ್ನಾದರೂ ತಿಳಿದುಕೊಳ್ಳುವ ಅಧಿಕಾರ ಬೇಡವೇ? ಗಂಡು – ಹೆಣ್ಣಿಗೆ ಸಮಾನವಾಗಿ ಲಭ್ಯವಾಗಿರುವ ವಾಕ್ ಶಕ್ತಿಯ ಉಪಯೋಗವನ್ನು ಅವಳು ಮಾಡಬಾರದೇ? ಜನ್ಮಸಿದ್ಧ ಹಕ್ಕನ್ನು 'ಹೆಂಡತಿ' ಎಂದಾದ ಮಾತ್ರಕ್ಕೆ ಬಿಟ್ಟು ಕೊಡಬೇಕೆ? ಇಲ್ಲವಾದರೆ ಒಂದು ಕಾನೂನು ನಿಯಮ ಜಾರಿಗೆ ಬರಲಿ. 'ಮದುವೆಯಾದ ಹೆಣ್ಣು ತನ್ನ ನಾಲಿಗೆಯನ್ನು ಕತ್ತರಿಸಿಕೊಂಡಿರಬೇಕು' ಎಂಬ ಶಾಸನ ಸಿದ್ಧವಾಗಲಿ ಶಾಲ್ಮಲಿ ಯೋಚಿಸಿ ಆಕ್ರೋಶಕ್ಕೆ ಒಳಗಾಗುತ್ತಿದ್ದಳು. ಆದರೆ ಮರುಕ್ಷಣವೇ ಈ ವಾಕ್ ಸ್ವಾತಂತ್ರ್ಯದ ಬಗ್ಗೆ ತರ್ಕಿಸತೊಡಗಿದಳು. ಸಂಬಂಧಗಳನ್ನು ಬೆಸೆಯಲಾಗದ ಮಾತಿನ ಸ್ವಾತಂತ್ರ್ಯದಿಂದ

ಬರುವುದೇನು? ಮಾತಿಗೆ ಮಾತುಹತ್ತಿ ಬದುಕು ನರಕವಾಗುತ್ತದೆ ಅಷ್ಟೆ! ಇಂತಹ ಸ್ವಾತಂತ್ರ್ಯ ನಿಜವಾಗಿಯೂ ಬೇಕಾಗಿದೆಯೇ?

* * *

ಶಾಲ್ಮಲಿ ಮತ್ತು ನರೇಶ್‌ರ ಪ್ರತಿಭೆಯ ನಡುವೆ ಭೂಮಿ ಆಕಾಶದಷ್ಟು ಅಂತರ ಇದೆ ನಿಜ. ಆದರೆ ಈ ಮಧ್ಯೆ ಅವನ 'ಅಹಂ' ಯಾಕೆ ಅಡ್ಡ ಬರಬೇಕು? ನರೇಶ್ ತಾನು ಬಯಸುವ ಬದುಕನ್ನು ತನಗೆ ಕೊಡಲಿಲ್ಲವೆಂದ ಮಾತ್ರಕ್ಕೆ ತಾನೂ ಅವನೊಂದಿಗೆ ಹಾಗೆ ವರ್ತಿಸಿದರೆ, ಅವನಿಗೂ ತನಗೂ ವ್ಯತ್ಯಾಸ ಏನಿದೆ? ನರೇಶನಿಂದ ಬರುವ ತೀರ್ಮಾನಕ್ಕಾಗಿಯೇ ಈ ಮನೆಯನ್ನು ಇನ್ನೂ ನಿರ್ವಹಿಸುತ್ತಿದ್ದಾಳೆಯೇ ಅಥವಾ ಬೇರೆ ಇನ್ನಾವುದೋ ಕಾರಣವಿದೆಯೇ? – ತನ್ನನ್ನೇ ಪ್ರಶ್ನಿಸಿಕೊಂಡಳು.

'ಒಬ್ಬಳೇ ಇರುವುದರ ಕೆಟ್ಟ ಪರಿಣಾಮಗಳನ್ನು ಮತ್ತು ಅವುಗಳನ್ನು ಎದುರಿಸುವ ಸಾಹಸವನ್ನೂ ಒಪ್ಪಿಕೊಂಡಿದ್ದಾಳೆ. ಅವಳಿಗೆ ಗೊತ್ತು, ತನಗೇ ಹೊರೆ ಹೆಚ್ಚು ಅಂತ. ಆದರೂ ಇನ್ನು ಯಾಕೆ ತನ್ನನ್ನು ಬಿಗಿದ ಸರಪಳಿಯನ್ನು ಕಿತ್ತುಕೊಂಡು ಬಿಡುಗಡೆ ಹೊಂದುವುದಿಲ್ಲ? ಯಾಕೇ ಹೀಗೆ ಇನ್ನೂ ಆಸೆ ಇಟ್ಟುಕೊಂಡು ಉಳಿದಿದ್ದಾಳೆ?' – ಶಾಲ್ಮಲಿಗೆ ಆಲೋಚನೆಗಳಿಂದ ಬಿಡುವೇ ಇಲ್ಲ. ಒಂದಕ್ಕೆ ಹತ್ತು ಅರ್ಥಗಳನ್ನು ಊಹಿಸುತ್ತಾ, ತನ್ನ ಹಳೇ ಚಾಳಿಯನ್ನು ಹಾಗೆಯೇ ಉಳಿಸಿಕೊಂಡಿದ್ದಾಳೆ.

ಇವತ್ತು ಮಧ್ಯಾಹ್ನದ ಊಟಕ್ಕೆ ಸರೋಜ್ ಬಂದಳು. ಮೊದ ಮೊದಲು ಶಾಲ್ಮಲಿ ಸರೋಜಳನ್ನು ಮದುವೆಯಾಗೆಂದು ಒತ್ತಾಯಿಸುತ್ತಿದ್ದಳು. ಆದರೆ ಅವಳ ಸಂಸಾರಕ್ಕೆ ಗ್ರಹಣ ಹಿಡಿದ ಕ್ಷಣದಿಂದ ಆ ಮಾತು ಎತ್ತುವುದನ್ನೇ ನಿಲ್ಲಿಸಿಬಿಟ್ಟಳು. ಅಲ್ಲದೆ 'ವುಮನ್ ಲಿಬ್' ಅದೂ ಇದೂಂತ ಕೀಟಲೆ ಮಾಡುತ್ತಿದ್ದವಳು, ಈಗ ಅದರ ಬಗ್ಗೆ ತುಟಿ ಪಿಟಕ್ಕೆನ್ನಲಿಲ್ಲ. ಅವಳನ್ನು ಕೆಣುಕುವುದರ ಪರಿಣಾಮ ಅವಳಿಗೆ ಗೊತ್ತಿದೆ. ಅವಳಿಗಂತು ಆಶ್ಚರ್ಯ. ಯಾರಿಗಾದರೂ ಆಗಲಿ, ಒಬ್ಬರು ಒಬ್ಬರನ್ನು ನಿರಂತರವಾಗಿ ಇಷ್ಟೊಂದು ದ್ವೇಷಿಸಲು ಸಾಧ್ಯವೇ?.... ಸರೋಜ್ ಪುರುಷರನ್ನು ಹಾಗೆಯೇ ದ್ವೇಷಿಸುತ್ತಿದ್ದಳು!

"ಏನು ಡೈರೆಕ್ಟರ್ ಸಾಹೇಬರೇ, ಹೇಗಿದ್ದೀರಿ?"

ಸರೋಜ್ ಮೇಜಿನ ಮೇಲೆ ತನ್ನ ಪರ್ಸನ್ನು ಇರಿಸುತ್ತಾ ಹೇಳಿದಳು.

"ಚೆನ್ನಾಗಿದ್ದೀನಿ. ನೀನು ಹೇಳು. ನೆನ್ನೆ ಸೆಮಿನಾರ್ ಹೇಗಿತ್ತು? ನೆನ್ನೆ ಟಿ.ವಿ.ನಲ್ಲಿ ಶ್ರೀಮತಿ ಸರೋಜ್ ಪಟ್ನಾಯಕ್ ಅವರ ಭಾಷಣದ ಒಂದು ಇಣುಕು ನೋಟ ನೋಡಲು ಪ್ರಾಪ್ತವಾಗಿತ್ತು" ಶಾಲ್ಮಲಿ ನಗುತ್ತಾ ಹೇಳಿದಳು.

"ಪೂರ್ತಿ ಭಾಷಣ ಕೇಳಿದ್ದರೆ, ನಿನಗೆ ಗೊತ್ತಾಗ್ತಿತ್ತು. ಕೆಲಸಕ್ಕೆ ಬಾರದ ಯೋಚನೆಗಳಲ್ಲಿ ಸಾಯೋದು ಬಿಟ್ಟು, ಬಿಡುಗಡೆಯ ಆಲೋಚನೆ ಮಾಡ್ತಿದ್ದೆ". ಸರೋಜ್ ಸಿಟ್ಟಿನಿಂದ ಹೇಳಿದಳು.

"ಯೋಚನೆ ಮಾಡ್ತಿದ್ದೀನಿ". ಶಾಲ್ಮಲಿ ಹೇಳಿದಳು.

"ಏನು ಯೋಚನೆ ಮಾಡಿದೆ? ವಿಚ್ಛೇದನಕ್ಕೆ ಯಾವಾಗ ಅರ್ಜಿ ಕೊಡುತ್ತಿರುವಿ?"

"ಯಾವುದು ಕಡೆಯ ಪರಿಹಾರವಗುತ್ತೆ ನಿಮ್ಮಲ್ಲಿ? ಸಂಬಂಧಗಳಿಂದ ಬಿಡಿಸಿಕೊಂಡು ಬರುವುದು ನೀವು ತಿಳಿದಷ್ಟು ಸುಲಭವಲ್ಲ. ಸಮಾಜ ಬದಲಾಗುವುದಿಲ್ಲ ಅನ್ನುವುದು ಒಂದು ಸತ್ಯವಾದರೆ, ಹೆಣ್ಣು ಸ್ವತಃ ಸ್ವಭಾವದಿಂದ, ಒಳಗಿನಿಂದ ಬದಲಾಗುವುದಿಲ್ಲ ಅನ್ನುವುದು ಮತ್ತೊಂದು ಸತ್ಯ. ನನಗೆ ಒಂದಂತೂ ಅರ್ಥವಾಗೊಲ್ಲ! ನೀವು ಹೆಣ್ಣಿಗೆ ಮುಕ್ತಿ ದೊರಕಿಸುತ್ತೀರಿ. ಮುಕ್ತಿಯ ಪ್ರಮಾಣಪತ್ರ ಇಟ್ಟುಕೊಂಡ ಅವಳು ಹೋಗಬೇಕೆಲ್ಲಿಗೆ? ಮತ್ತೆ ಇದೇ ಸಂಪ್ರದಾಯವಾದಿ ಸಮಾಜದಲ್ಲಿ ಅಲೆದಾಡಬೇಕೆ? ಇವರಿಂದಾಗಿ ಮೊದಲಿಗಿಂತ ಹೆಚ್ಚಿನ ಶೋಷಣೆಗೆ ಆಘಾತಗಳಿಗೆ ಗುರಿಯಾಗಿ......?

"ನೀನು ಕೂತು ಕೂತು ಯೋಚ್ನೆ ಮಾಡುತ್ತಲೇ ಇರು. ಇದು ಜೀವನ, ನಿರ್ಣಯಗಳನ್ನು ಬೇಗ ತೆಗೆದುಕೊಳ್ಳಬೇಕು." ಸರೋಜ್ ಹೇಳಿದಳು.

"ಬೇಗ?.........ನೀನು ಸರಿಯಾಗಿ ಹೇಳಿದೆ, ಇದು ಜೀವನ. ಅದಕ್ಕೆ ನನಗೆ ಅನ್ನಿಸುತ್ತೆ ನಾನು ಇಲ್ಲಿ ಮಾನವೀಯ ಸಂಬಂಧಗಳ ಅನ್ವೇಷಣೆಯಲ್ಲಿ ತೊಡಗಿದ್ದೇನೆ. ಪ್ರತಿಯೊಂದು ಸಮಸ್ಯೆ, ಪ್ರತಿ ವ್ಯಕ್ತಿ, ಪ್ರತಿಯೊಂದು ಬದುಕು ಸಂಶೋಧನೆಗೆ ವಸ್ತುವಾಗಲಾರದು. ಒಂದೊಂದು ಯುಗದಲ್ಲಿಯೂ ಮಾನವ ವಿಕಾಸದ ಕತೆಯನ್ನು ಹೇಳುವ ಒಂದೊಂದು ಅಧ್ಯಾಯ ಈ ಸಂಶೋಧನೆಯ ಗ್ರಂಥದಲ್ಲಿ ಸೇರಿಕೊಳ್ಳುತ್ತಾ ಹೋಗುತ್ತದೆ. ಇದರ ಜೊತೆಗೆ ಹೊಸ ಹೊಸ ಚಿಂತನೆಯ ಆಯಾಮಗಳೂ ಇವುಗಳಿಗೆ ಲಭಿಸುತ್ತೆ. "ಶಾಲ್ಮಲಿ ಗಂಭೀರವಾಗಿ ಹೇಳಿದಳು.

"ಹಾಗಾದರೆ ನೀನು ಆಯುಧ ತಗೊಳೊಲ್ಲ". ಸಿಟ್ಟಿನಿಂದ ಸರೋಜ್ ಹೇಳಿದಳು.

"ಆಯುಧ ಬಾಲ್ಯದಿಂದಲೂ ಕೈಯಲ್ಲಿದೆ. ಆದರೆ ಅದನ್ನು ಉಪಯೋಗಿಸುವುದಿಲ್ಲ" ಭರವಸೆಯಿಂದ ಹೇಳಿದಳು ಶಾಲ್ಮಲಿ.

"ಶತ್ರುವಿಗೆ ಅವಕಾಶ ಕೊಡುತ್ತಲೇ ಇರು. ಅವನು ಇನ್ನಷ್ಟು ಬಲ ಪಡೆಯುತ್ತಾನೆ." ಸರೋಜ್ ರೊಚ್ಚಿನಿಂದ ಹೇಳಿದಳು. "ಹಾಗಾದರೆ ಆ ವಂಚಕನನ್ನು ಇನ್ನೂ ಸ್ನೇಹಿತ ಅಂತಲೇ ಭಾವಿಸುತ್ತೀ!" – ಸೆಮಿನಾರ್‌ನ ಗುಂಗು ಇನ್ನೂ ಸರೋಜ್‌ಳಲ್ಲಿ ಇತ್ತು.

"ಪ್ಲೀಸ್ ಸರೋಜ್!" – ನಿಧಾನವಾಗಿ ಹೇಳಿದಳು ಶಾಲ್ಮಲಿ.

"ಬೇರೆ ಏನಾದರೂ ಮಾತಾಡೋಣ." ಮಾತು ಬದಲಾಯಿಸಿದಳು ಸರೋಜ್.

"ಬೇಡ. ಇದೇ ಮಾತು ಆಡೋಣ. ಪಾಪದ ಬಗ್ಗೆ ಜಿಗುಪ್ಸೆ ಇರಬೇಕೇ ಹೊರತು ಪಾಪಿಯ ಬಗ್ಗೆ ಅಲ್ಲ. ಪ್ರತಿಯೊಬ್ಬರ ಮನೆಯಲ್ಲೀ ಯುದ್ಧ ನಡೀತಲೇ ಇರುತ್ತೆ. ವ್ಯಕ್ತಿಗತ ಎನಿಸಿದರೂ ಅವು ವ್ಯಕ್ತಿಗತವಾಗಿರುವುದಿಲ್ಲ. ಸಾಮಾನ್ಯವಾಗಿ ಎಲ್ಲರಿಗೂ ಅನ್ವಯವಾಗುವ ಹಾಗೇ ಮಾತಾಡೋಣ. ಇದರಲ್ಲಿ ಯಾವುದೇ ರಾಜಕೀಯ ಪಕ್ಷದ ಪರವಿರೋಧದ ಪ್ರಶ್ನೆ ಇಲ್ಲ. ನನಗೆ ಕಷ್ಟ ಬಂತು ನಾನು ಅನುಭವಿಸುತ್ತೇನೆ. ನನ್ನ ಸಮಸ್ಯೆ ಎಷ್ಟು ಗಂಭೀರವಾದ್ದು ಜಟಿಲವಾದ್ದು. ನನಗೆ ಗೊತ್ತಿದೆ. ಅದಕ್ಕೆ ಸಮಾಧಾನ ಕಂಡುಕೊಳ್ಳೋದು ಅಷ್ಟು ಸುಲಭದ ಕೆಲಸವಲ್ಲ. ಸಮಸ್ಯೆಗೆ ಸಮಾಧಾನ ಪರಿಹಾರಗಳು ಸಿಗುವುದು ತಡವಾಗುತ್ತೆ ಅಂತ. ಗೋಜಲಾಯಿತು ಅಂತ ದಾರಾನೇ ಕತ್ತರಿಸಿ ಹಾಕಿದರೆ ಅಲ್ಲಲ್ಲಿ ಜೋಡಿಸುವಾಗ ಬರೀ ಗಂಟುಗಳೇ ಇರುವ ಹಾಗೆ. ಇದೂ ಆಗುತ್ತೆ. ಇದರಿಂದ ಆಗುವ ಪ್ರಯೋಜನ?..... ನನ್ ವ್ಯವಹಾರದಿಂದ ನಿನ್ನೊಂದಿಗಿನ ಮಾತುಕತೆಗಳಿಂದ ಸಮಸ್ಯೆ ಪರಿಹಾರವಾಗುತ್ತೆ'? ನರೇಶ್ ಹಿಂತಿರುಗಿ ಬರುತ್ತಾನೆ. ಎನ್ನುವುದು ನನ್ನ ಮಾತಿನ ಅರ್ಥವಲ್ಲ. ಅವನಿಗೆ ಸಾಕಷ್ಟು ಅವಕಾಶ ಕೊಟ್ಟ ಹಾಗೆ ಆಗುತ್ತೆ ಅಷ್ಟೆ ಸಿಕ್ಕಿದ ಮೇಲೂ ಏನೂ ಪ್ರಯೋಜನ ಕಾಣಲಿಲ್ಲವಾದರೆ ನನಗೆ ಪಶ್ಚಾತ್ತಾಪವೂ ಇಲ್ಲ, ಆತ್ಮಗ್ಲಾನಿಯೂ ಇಲ್ಲ."

"ಸರಿಯಮ್ಮ, ನಿಂ ಜೊತೆ ಚರ್ಚೆ ಮಾಡೋಕೆ ಬಂದಿಲ್ಲ. ಜೊತೆಯಾಗಿ ಊಟ ಮಾಡೋಣ, ಎರಡುವಾರಗಳಿಂದ ಕೆಲಸ ಮಾಡಿ ಸಾಕಾಗಿದೆ ಏಳು!" ಎಂದು ಹೇಳುತ್ತಾ ಸರೋಜ್ ಎದ್ದು ನಿಂತಳು.

"ಇದೋ ಹೊರಟೆ". ಎನ್ನುತ್ತಾ ಹರಡಿಬಿದ್ದ ವಸ್ತುಗಳನ್ನು ಎತ್ತಿ ಜೋಡಿಸಿಟ್ಟು ವ್ಯಾನಿಟಿ ಬ್ಯಾಗ್ ಹೆಗಲಿಗೇರಿಸಿಕೊಂಡು ಸರೋಜ್ ಜೊತೆ ಹೊರಗೆ ನಡೆದಳು.

ಊಟಕ್ಕೆ ಆರ್ಡ್‌ರ್ ಕೊಟ್ಟು ಸಂಗೀತ ಕೇಳ್ತಾ ಅದೂ ಇದೂ ಮಾತಾಡ್ತಾ, ನಗುತ್ತಾ ಇದ್ದರು. ಶಾಲ್ಮಲಿಯ ಮನಸ್ಸಿನಲ್ಲಿದ್ದ ಒಂದು ವಿಚಾರವನ್ನು ಸರೋಜ್‌ಗೆ ಹೇಳಬೇಕೂಂತ ಗಂಟಲವರೆಗೂ ಬಂದು ಹಾಗೇ ನಿಂತುಬಿಡುತ್ತಿತ್ತು. ತಾನು ಹೇಳುವ ವಿಚಾರವನ್ನು ಸರೋಜ್ ತಾನು ಭಾವಿಸಿದಂತೆ, ಅರ್ಥ ಮಾಡಿಕೊಂಡಂತೆ, ಅದೇ ಸ್ತರದಲ್ಲಿ ತನ್ನ ಮಾತುಗಳನ್ನು ಗ್ರಹಿಸುತ್ತಾಳೆಯೇ ಎನ್ನುವ ಅಳುಕು.

"ಏನು ಯೋಚನೆ ಮಾಡ್ತಿದ್ದೀ?"

"ಏನೂ ಇಲ್ಲ."

"ನೀನು ಹೇಳದೆ ಇದ್ದರೂ ನಿನ್ನ ಕಣ್ಣುಗಳು ಹೇಳ್ತವೆ. ಆದರೂ....?" ಸರೋಜ್‌ಳ ಮಾತು, ಊಟ ಬಂದದ್ದರಿಂದ ಅರ್ಧಕ್ಕೆ ನಿಂತುಹೋಯಿತು.

"ಇಬ್ಬರೂ ಮಾತಿಲ್ಲದೆ ತಮ್ಮ ಪ್ಲೇಟುಗಳಲ್ಲಿನ ಊಟಕ್ಕೆ ಕೈ ಹಾಕಿದರು. ಊಟದ ಮಧ್ಯೆ ಮಾತು ಬೇಡಾಂತ ಸುಮ್ಮನಿದ್ದರು. ಊಟ ಆದ ಮೇಲೆ ಕಾಫಿ ಬಂತು.

ಶಾಲ್ಮಲಿ ತನ್ನನ್ನು ತಾನೇ ಸರಿಯಾಗಿ ಅರ್ಥಮಾಡಿಕೊಂಡಿದ್ದಾಳೆಯೇ? ತಾನೇ ಅರ್ಥಮಾಡಿಕೊಂಡಿದ್ದೇನೆಂದು ತಿಳಿದಿದ್ದಳೋ, ಆ ಭ್ರಮೆಯೂ ದೂರವಾಯಿತು. ಎಳೆ ವಯಸ್ಸಿನಲ್ಲಿ ಏನೇನೋ ಬಾಯಿಪಾಠ ಮಾಡಿದ್ದನ್ನು ಜೀವನದಲ್ಲಿ ಅಳವಡಿಸಿಕೊಳ್ಳೋಕೆ ಆಗುವುದಿಲ್ಲ ಬದುಕುವುದಕ್ಕೆ ಬೇಕಾಗಿರುವುದೇ ಬೇರೆ ವಿದ್ಯೆ.

ಈ ಸಮಸ್ಯೆಯ ಜೊತೆಗೆ ಇರುವ ಶಾಲ್ಮಲಿಯೇ ಬೇರೆ. ಅವಳಿಗೆ ಕೇವಲ ಹೌದು, ಇಲ್ಲ ಮಾತ್ರ ಗೊತ್ತಿತ್ತು. ಕೇವಲ 'ಹೌದು' 'ಇಲ್ಲ' ಗಳಿಂದ ಮನುಷ್ಯ ತನ್ನನ್ನು ಇತರರನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲ? ಯಾವುದರ ಬಗ್ಗೆ ಅನುಭವವೇ ಇಲ್ಲವೋ, ಅದನ್ನು ಅವನು ಹೇಗೆ ತಿಳಿದುಕೊಳ್ಳಲು ಸಾಧ್ಯ?

ಮಾನವ ಸಂಬಂಧಗಳ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಶಾಲ್ಮಲಿ ಪ್ರಪಂಚದ ದೊಡ್ಡ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಪ್ರಸಿದ್ಧ ಕಾದಂಬರಿಗಳನ್ನು ಓದಿದಳು. ಅವಳ ಪ್ರಶ್ನೆಗಳಿಗೆ ಉತ್ತರ ಒಂದು ಕಡೆ ಸಿಕ್ಕಿದರೆ, ಮತ್ತೊಂದು ಕಡೆ ಸಿಗುತ್ತಿರಲಿಲ್ಲ. ಒಂದಂತೂ ಅವಳಿಗೆ ಸ್ಪಷ್ಟವಾಯಿತು. ಪ್ರತಿಯೊಬ್ಬರಿಗೂ ತಮ್ಮದೇ ಆದ ಒಂದು ಅನುಭವ ಜಗತ್ತು ಇರುತ್ತದೆ. ಅದು ಒಬ್ಬರಿಂದ ಒಬ್ಬರದು ಬೇರೆಯಾಗಿರುತ್ತೆ. ಆದ್ದರಿಂದ ಯಾರ ವಿಚಾರದಿಂದ ಏನಾಗುತ್ತೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ತನ್ನ ಪ್ರತಿಭೆಯನ್ನು ಇನ್ನೊಬ್ಬರ ಮೇಲೆ ಹೊರಿಸಲೂ ಆಗುವುದಿಲ್ಲ ಅಥವಾ ತನ್ನ ಪ್ರತಿಭೆಯ ಮಾನದಂಡದಿಂದ ಇನ್ನೊಬ್ಬರನ್ನು ತಳ್ಳಿ ಬಿಡಲೂ ಸಾಧ್ಯವಿಲ್ಲ. ಭಾವನೆಗಳ ಸ್ತರದಲ್ಲಿ ಮನಸ್ಸಿಗೆ ಆದ ಸಣ್ಣ ಪುಟ್ಟ ಏಟುಗಳನ್ನು ತಾನೇ ಚಿಕಿತ್ಸೆ ಮಾಡಿಕೊಳ್ಳಬೇಕು. ತನಗೆ ದೊರೆಯದ್ದನ್ನು ಬೇರೆಯವರಿಗೆ ಕೊಡುವುದಕ್ಕೆ ಏನು ಅಡ್ಡಿ? ಬಹುಶಃ ಅದರಲ್ಲಿಯೇ ಶಾಂತಿ ಸಿಗಬಹುದು. ಈಗ ಅವಳು ತನ್ನ ಸುಖಕ್ಕಾಗಿ ಅಲ್ಲ. ಇತರರ ಸುಖಕ್ಕಾಗಿ ಬದುಕುತ್ತಾಳೆ. ತನ್ನ ಕೊನೆಯುಸಿರು ಇರುವವರೆಗೆ ಇತರರಿಗಾಗಿಯೇ ಬಾಳುತ್ತಾಳೆ.

ಬದುಕಿನ ಕಡಲನ್ನು ಬಯಸಿಯೂ ದಾಟಲಾರಳು. ಮೈಲಿಗಟ್ಟಲೆ ಈಜುತ್ತಾ ಒಮ್ಮೆ ಪ್ರೀತಿಯ ಕಡೆಗೆ, ಮತ್ತೊಮ್ಮೆ ಕ್ಷಮೆ, ದಯೆ, ಸುಧಾರಣೆ, ಪ್ರಗತಿ, ಸಂತೋಷ ಧೈರ್ಯ – ಹೀಗೆ ಹಲವಾರು ಪ್ರವಾಹಗಳ ದಿಕ್ಕುಗಳಲ್ಲಿ ಈಜುತ್ತಲೇ ಇರಬೇಕಾಯಿತು. ಆದರೆ ದಡ ಮಾತ್ರ ಎಲ್ಲೂ ಕಾಣಲಿಲ್ಲ. ಮನೆಯಂತೂ ಎಲ್ಲ ಕಡೆಯಿಂದಲೂ ನೀರಿನಲ್ಲಿ ಮುಳುಗಿ ಹೋಗಿತ್ತು. ಚಡಪಡಿಸುತ್ತಾ ಕೈ ಕಾಲು ಬಡಿಯುತ್ತಾ ಈಜುತ್ತಲೇ ಇದ್ದಳು. ಎಲ್ಲಿಯೂ ನಿಲುಗಡೆಯ ಭರವಸೆ ಇಲ್ಲದೆ ಹೋಯಿತು.

ಶಾಲ್ಮಲಿಯ ಮನಸ್ಸಿನೊಳಗೆ ಮೈಲಿಗಳವರೆಗೆ ಒಣ ಮರಗಳ ಸಾಲುಗಳೇ ತುಂಬಿದ್ದವು. ಬಿಸಿಲಿನ ಝಳ ನೆರಳಿನ ಸೂಚನೆಯೇ ಇಲ್ಲ. ದೂರದವರೆಗೆ ಕೆಳಗೆ ಒಣಗಿದ ಕಾಂಡಗಳು, ಮೇಲೆ ಆಕಾಶದ ಕಡೆಗೆ ಮುಖಮಾಡಿ ಹಬ್ಬಿರುವ ಒಣ ರೆಂಬೆಕೊಂಬೆಗಳ ಬಲೆಗಳು! ಅಮೃತವಾಗಲೀ, ಸಂಜೀವಿನಿಯಾಗಲಿ ದೊರೆಯಲಿಲ್ಲ. ಅಮೃತದಿಂದ ಸಿಂಚನ ಮಾಡಿ ಈ ಮರಗಳನ್ನೆಲ್ಲ ಚಿಗುರಿಸಬಹುದಿತ್ತು! ಈ ಒಣಮರಗಳ ನಡುವೆ ಮರೀಚಿಕೆಯಾಗಿ ಎಷ್ಟು ಕಾಲ ಅಲೆಯುತ್ತಿರಲು ಸಾಧ್ಯ?

ಜೀವನದ ಈ ಚೌ ರಸ್ತೆಯಲ್ಲಿ ತಂದು ನಿಲ್ಲಿಸಿದವನ ಸಹವಾಸವಂತೂ ಹೇಗೂ ದೊರೆಯುವುದಿಲ್ಲ. ಇನ್ನು ತನ್ನ ದಾರಿಯನ್ನು ತಾನೇ ಹುಡುಕಿಕೊಳ್ಳಬೇಕು. ಯಾತನಾಶಿಬಿರದಿಂದ ತನ್ನ ಆತ್ಮವನ್ನು ಬಿಡಿಸಬೇಕು. ಯಾರಿಗೆ ಇನ್ನೊಬ್ಬರ ಬಗ್ಗೆ ಕಾಳಜೀನೇ ಇಲ್ಲವೋ ಅವನು ಅವರ ಭವಿಷ್ಯದ ಬಗ್ಗೆ ಏನು ಮಾಡಬಲ್ಲ! ಪ್ರಪಂಚದಲ್ಲಿ ಎಷ್ಟೊಂದು ಜೀವಿಗಳು! ಯಾರ ಹಣೆಬರಹಕ್ಕೆ ಯಾರು ಹೊಣೆ! ಮನುಷ್ಯ ಪ್ರಪಂಚಕ್ಕೆ ಬಂದಿರುವುದು ಒಂಟಿಯಾಗಿ, ಒಂಟಿಯಾಗಿ ಬಂದವನು ಒಂಟಿಯಾಗಿಯೇ ಹೋಗುತ್ತಾನೆ. ಅಂಥಾದ್ದರಲ್ಲಿ ಜೀವನ ಸಂಗಾತಿಯ ಅಗತ್ಯವೇನಿದೆ. ಒಂದಲ್ಲ ಒಂದು ದಿನ ಈ ಜೀವ ಹೊರಟು ಹೋಗುತ್ತೆ. ಅದನ್ನು ಹಿಡಿದಿಡಿವ ಪ್ರಯತ್ನ ಯಾಕೆ?

ಮಾಮೂಲಿನಂತೆ, ಶಾಲ್ಮಲಿಯ ತರ್ಕ ಭಾವನೆಗಳ ಮುಂದೆ ಸೋಲನ್ನೊಪ್ಪಿಕೊಂಡಿತು. ಯಥಾರ್ಥತೆಯನ್ನು ಒಪ್ಪಿಕೊಳ್ಳುವ ಮನಸ್ಸಿನ ತೀವ್ರತೆ ಹೆಚ್ಚಿತು. ಸಮಸ್ಯೆಯನ್ನು ವ್ಯಕ್ತಿಯಿಂದ ಬೇರ್ಪಡಿಸಿ ನೋಡುವ ದೃಷ್ಟಿ ಮೂಡಿತು. ಪ್ರತಿಯೊಂದು ವಸ್ತುವನ್ನೂ ಅದರ ಸರಿಯಾದ ಜಾಗದಲ್ಲಿ ಇಡಬೇಕೆನ್ನುವ ಶಿಸ್ತು ಬೆಳೆಯಿತು. ತನ್ನನ್ನು ತಾನು ವಿಶ್ಲೇಷಿಸಿಕೊಳ್ಳುವುದು ಮತ್ತಷ್ಟು ತೀಕ್ಷ್ಣವಾಯಿತು. ನೋವು ಯಾತನೆಗಳು ತನ್ನನ್ನು ಸಾವಿನ ತನಕ ಎಳೆದೊಯ್ಯುವ ಮೊದಲೇ ತನ್ನನ್ನು ತಾನು ಸಂಬಾಳಿಸಿಕೊಂಡಳು.

ಮನಸ್ಸಿನ ಪೆಟ್ಟಿಗೆಯನ್ನು ತೆರೆದು ಧೈರ್ಯದಿಂದ ಇಚ್ಛೆಗಳನ್ನು ಒಂದೊಂದಾಗಿ ಮಡಿಚಿ, ಜೋಡಿಸಿ ಸಂತೋಷದಿಂದಲೇ ಪೆಟ್ಟಿಗೆಯ ಒಳಗೆ ಇರಿಸಿ ಬೀಗ ಹಾಕಿದಳು. ಭಾವುಕತೆ ಮತ್ತು ಬಯಕೆಗಳಿಂದ ಅವಳಿಗೆ ಬಿಡುಗಡೆ ದೊರೆಯಿತು. ಆಸೆ, ನಿರಾಸೆಗಳನ್ನು ಮೀರಿನಿಂತು ವರ್ತಮಾನ ಬದುಕಿನ ಜಟಿಲತೆಗಳಿಂದ ತಟಸ್ಥಳಾಗಿ, ಅರ್ಥಮಾಡಿಕೊಂಡು ಪರಿಹಾರ, ಸಮಾಧಾನಗಳನ್ನು ಅನ್ವೇಷಣೆಗೆ ತೊಡಗುವುದರ ಮೂಲಕ ಕಂಡುಕೊಳ್ಳಬಲ್ಲಳು.

ರಾತ್ರಿಯ ಕಡೆಯ ಜಾವ, ಕಣ್ಣು ಬಿಟ್ಟಾಗ, ಇಲ್ಲವೇ ಆಫೀಸಿನಲ್ಲಿ ಒಬ್ಬಳೇ ಇದ್ದಾಗ ಶಾಲ್ಮಲಿ ಯೋಚಿಸುತ್ತಾಳೆ. ನಾಲ್ಕೂ ದಿಕ್ಕಿನಲ್ಲಿ ಹರಡಿ ನಿಂತಿರುವ ಮನೆಗಳು, ಮನೆಗಳಲ್ಲಿನ ವ್ಯಕ್ತಿಗಳು ನಿಜವಾಗಿಯೂ ತಮ್ಮ ಇಚ್ಛೆಯಿಂದಲೇ ಜೀವಿಸುತ್ತಿದ್ದಾರೆಯೇ? ತಮ್ಮಿಚ್ಛೆಗೆ ವಿರೋಧವಾಗಿ ಜೀವಿಸುತ್ತಿರುವುದಾದರೆ, ಇನ್ನೂ ಏಕೆ ಒಬ್ಬರಿಂದೊಬ್ಬರು ಬೇರೆಯಾಗಲಿಲ್ಲ? ಕಷ್ಟಗಳನ್ನು ಅನುಭವಿಸುತ್ತಲೇ ಜೀವನ ಯಾತ್ರೆಯನ್ನು ಕಡೆ

ತನಕ ಮುಗಿಸಬೇಕು. ಇಲ್ಲವೇ ಮಧ್ಯದಲ್ಲಿ ಅರ್ಧಕ್ಕೇ ನಿಲ್ಲಿಸಬೇಕು. ಈ ಎರಡರ ಮಧ್ಯೆ ಬೇರೆ ದಾರಿ ಇಲ್ಲವೇ. ಗೂಟಕ್ಕೆ ಕಟ್ಟು ಬಿದ್ದು ಬದುಕುವ, ಇಲ್ಲವೇ ಅದರಿಂದ ಕಿತ್ತುಕೊಂಡು ಓಡುವ, – ಈ ಎರಡರ ಸಮನ್ವಯ.....!

* * *

"ಮೇಡಂ. ಈ ರಿಪೋರ್ಟ್ ಟೈಪಾಗಿದೆ. ಪಿ.ಎ. ಜಗದೀಶ್‌ಸಿಂಹರ ಧ್ವನಿ ಕೇಳಿ ಬೆಚ್ಚಿದಳು ಶಾಲ್ಮಲಿ.

"ಇಟ್ಟು ಬಿಡಿ ಜಗದೀಶ್‌ರವರೇ" ಮೃದುವಾಗಿ ಹೇಳಿದಳು ಮತ್ತು ಕ್ಷಿತಿಜದವರೆಗೂ ವ್ಯಾಪಿಸಿರುವ ಆ ಮನೆಗೆಲಸ ಕಡೆಗೇ ದೃಷ್ಟಿ ನೆಟ್ಟಳು.

"ಫೋನ್!" ಜಗದೀಶ್ ಫೋನಿನ ಸದ್ದು ಕೇಳಿ ರಿಸೀವರನ್ನು ಎತ್ತಿ ಶಾಲ್ಮಲಿಯ ಕಡೆಗೆ ನೀಡಿದ.

ಫೋನ್ ಸರೋಜಳಿಂದ ಬಂದಿತ್ತು. ಸಂಜೆ ನಾಲ್ಕು ಗಂಟೆಗೆ ಬರಬೇಕೆಂದಿದ್ದಾಳೆ. ಅವಳ ಫೋನ್ ಬಂದುದರಿಂದ ಮನಸ್ಸಿಗೆ ಸ್ವಲ್ಪ ಹಗುರ ಎನಿಸಿತು. ಯೋಚನೆಗಳ ದಿಕ್ಕೆ ಬದಲಾಯಿಸಿತು. ಮುಂದಿದ್ದ ಕಾಗದಗಳ ಮೇಲೆ ಸಹಿಮಾಡತೊಡಗಿದಳು.

ಸಂಜೆಗೆ ಬಂದಿದ್ದ ಸರೋಜ್ ಅದೂ ಇದೂ ಮಾತಾಡುತ್ತ ಶಾಲ್ಮಲಿಗೆ ಬುದ್ಧಿ ಹೇಳುವುದಕ್ಕೆ ಶುರು ಮಾಡಿದಳು. ಈ ನರಕದಿಂದ ದೂರ ಹೋಗಲು ಹೇಳಿದಳು. ಕೆಟ್ಟ ಅಭ್ಯಾಸಗಳನ್ನು ಬಿಡಿಸಬೇಕೇ ಹೊರತು ಅವು ತಾವಾಗಿ ಬಿಡುವುದಿಲ್ಲ. ಶಾಲ್ಮಲಿ ಸರೋಜ್‌ಳ ಮಾತನ್ನು ಕೇಳಿ ದಂಗು ಬಡಿದಂತಾದಳು. ಅವಳ ದೃಷ್ಟಿಯಲ್ಲಿ ತನ್ನ ಗಂಡ ಒಂದು ಅಭ್ಯಾಸ, ಚಟ ಅದರಲ್ಲಿ ಸಂವೇದನೆಗೆ ಸ್ಪಂದನಗಳಿಗೆ ಎಡೆಯೇ ಇಲ್ಲ. ಸರೋಜ್‌ಳ ಮುಂದೆ ತನ್ನ ಮನಸ್ಸನ್ನು ಪೂರ್ತಿಯಾಗಿ ಬಿಚ್ಚಿಡಲು ಆಗಲಿಲ್ಲ....... ಹೇಳಿದಳು.

"ಈ ಕೆಟ್ಟ ಚಟವನ್ನು ಬಿಟ್ಟು ಬಿಡುವುದರಿಂದ ನನ್ನಲ್ಲಿ ಬದಲಾವಣೆಯಾಗುವುದೆ?

"ಖಂಡಿತ. ಅವನ ಮುಂದೆ ವಿಶಾಲವಾದ ಜಗತ್ತಿದೆ. ನೀನು ಆ ಒಬ್ಬ ವ್ಯಕ್ತಿಗಾಗಿ ನಿನ್ನ ಜೀವದಾನ ನರಕ ಮಾಡಿಕೊಳ್ಳುತ್ತಿರುವಿ. ನಿನ್ನ ಬಗ್ಗೆ ಅವನಿಗೆ ಲಕ್ಷ್ಯವೇ ಇಲ್ಲ. ಜನರ ಜೊತೆಗೆ ಸ್ನೇಹ ಮಾಡು. ಅವರ ಜೊತೆ ಓಡಾಡು. ನಿನ್ನ ಬದುಕು ಮತ್ತೆ ನಿನಗೆ ಸಿಗುತ್ತೆ."

"ಈ ಜೀವನ ನನಗೆ ಪರಿಚಿತವಾದ್ದು. ಹೊಸ ಅನುಭವಗಳಿಗೇಂತ ಹೋದರೆ, ಎಲ್ಲಿ ತಲುಪುತ್ತೇನೋ! ಆ ವಿಶಾಲ ಜಗತ್ತು ಕೇವಲ ನನ್ನದಲ್ಲ. ಜಗತ್ತಿನಲ್ಲಿನ ಕೋಟ್ಯಾಂತರ ಜನಗಳ ಮಧ್ಯೆ ಒಂದು ತುಚ್ಛ ಜೀವಿ....... ಅದೇ ನನ್ನ ಸಂಸಾರ; ಜಗತ್ತು. ಅಲ್ಲಿ ನನ್ನ ಮತ್ತು ನನಗೆ ಬೇಕಾದ ಸಂತೋಷ, ಸುಖ ಸಿಗಲಿಲ್ಲ ಅಂತ

ಮನೆ ಮನೆ ತಿರುಗಿದರೆ, ನನಗೆ ಸಿಗುವುದು ಭಿಕ್ಷೆ ಮಾತ್ರ. ಪ್ರೇಮಾದರಗಳಲ್ಲ!" ಶಾಲ್ಮಲಿ ಚಹಾ ಮಾಡುತ್ತ ಹೇಳಿದಳು.

"ಅರೆ ನೆನಪಾಯಿತು. ನಾಳೆ ಪುರುಷೋತ್ತಮ್ ಅವರ ಮನೆಗೆ ಡಿನ್ನರ್‌ಗೆ ಬರುತ್ತೀ ತಾನೇ?" ಶಾಲ್ಮಲಿಗೆ ಸಿಟ್ಟು ಬರುತ್ತಿದ್ದುದನ್ನು ಗಮನಿಸಿ ಮಾತು ಬದಲಾಯಿಸಿದಳು.

"ಇಲ್ಲ. ಇತ್ತೀಚೆಗೆ ನನಗೆ ಎಲ್ಲಿ ಹೋಗಲೂ ಮನಸ್ಸಿಲ್ಲ. ಹಾಳಾದ್ದು ನಾನೊಂದು ಮಗುವಾಗಿದ್ದರೆ ಎಷ್ಟೋ ಚೆನ್ನಾಗಿತ್ತು. ಆಟದ ಸಾಮಾನು ಇಟ್ಟುಕೊಂಡು ಸ್ವಲ್ಪ ಹೊತ್ತು ಆಟ ಆಡಿ ಮನಸ್ಸಿಗೆ ಸಂತೋಷವನ್ನಾದರೂ ತಂದುಕೊಳ್ಳಬಹುದಿತ್ತು. ಪ್ರಬುದ್ಧರಾಗಿ ಬಿಟ್ಟರೆ, ಮನಸ್ಸಿಗೆ ನೆಮ್ಮದಿ ತಂದುಕೊಳ್ಳೋದೆ ಕಷ್ಟವಾಗುತ್ತೆ, ಸರೋಜ್."

"ನೀನು ಅವರನ್ನು ಅವರ ಇಷ್ಟದಂತೆ ಬಿಟ್ಟು ಬಿಟ್ಟಿದ್ದೀಯ ಅದಕ್ಕೇ!"

"ಹಾಗೇನಿಲ್ಲ"

"ಮತ್ತೇ?"

ನನಗನಿಸುತ್ತೆ ಈ ನಮ್ಮ ವಿದ್ಯಭ್ಯಾಸದಿಂದ ನಾವು ನಮ್ಮ ಸಹನಶಕ್ತಿಯನ್ನೇ ಕಳೆದುಕೊಳ್ಳುತ್ತಿದ್ದೇವೆ. ಒಂದು ಕಡೆ ದೊಡ್ಡ ದೊಡ್ಡ ಡಿಗ್ರಿಗಳು ದಪ್ಪನೆಯ ಸಂಶೋಧನೆಯ ಗ್ರಂಥಗಳು! ಮತ್ತೊಂದು ಕಡೆ ಮಾನವೀಯ ಸಂಬಂಧಗಳ ಹಿಡಿತದಿಂದಲೇ ಜಾರುತ್ತಿದ್ದೇವೆ. ಇದಕ್ಕೆ ನಮ್ಮ ಹತ್ತಿರ ಸಮಯವೇ ಇಲ್ಲ. ಆಫೀಸಿನಲ್ಲಿ ಆಗಲೀ ಮನೆಯಲ್ಲಿ ಆಗಲಿ, ಎಲ್ಲ ಕಡೆಗಳಲ್ಲಿ ಬೇರೆಯವರನ್ನು ಅಥವಾ ಎದುರಿಗೆ ಇರುವವರನ್ನು ಅರ್ಥಮಾಡಿಕೊಳ್ಳುವುದಕ್ಕೆ ಬದಲಾಗಿ, ನಮ್ಮ ಮೇಲೆ ನಾವು ಹೆಚ್ಚಿನ ಜವಾಬ್ದಾರಿ ಹೊರೆಸಿಕೊಳ್ಳುತ್ತೇವೆ. ಬೇರೆಯವರು ನಮಗೆ ಕನ್ನಡಿ ಆಗಿದ್ದಾರೇಂತ ಭಾವಿಸಿ ಬಿಡುತ್ತೇವೆ. ನಮ್ಮ ನೆರಳು ಅದರಲ್ಲಿ ಕಾಣಿಸಿದರೆ ಸರಿ, ಇಲ್ಲವಾದರೆ ಕನ್ನಡಿಯನ್ನೇ ನೆಲಕ್ಕೆ ಅಪ್ಪಳಿಸಿ ಬಿಡುತ್ತೇವೆ. ಭಾವನೆಯ ಎಡೆಯಲ್ಲಿ ವ್ಯವಹಾರ, ವ್ಯವಹಾರದ ಎಡೆಯಲ್ಲಿ ಭಾವನೆಗಳನ್ನು ತರುತ್ತೇವೆ!"

"ಪ್ರೇಮದ ಇನ್ನೊಂದು ಹೆಸರು, ಅಧಿಕಾರ."

"ತಮಾಶೆ ಬಿಡು ಸರೋಜ್. ನಾನು ನನ್ನ ಸುತ್ತ ಇರುವುದನ್ನು ತುಂಬಾ ಆಳವಾಗಿ ಗಮನಿಸುತ್ತೇನೆ. ಬಾಲ್ಯದಲ್ಲಿ, ಅಕ್ಕ ಪಕ್ಕದವರ ಮನೆಗಳಲ್ಲಿನ ದೃಶ್ಯಗಳನ್ನು ನೆನಪು ಮಾಡಿಕೊಳ್ಳುತ್ತೇನೆ. ನನಗೆ ನನ್ನಲ್ಲಿ ಒಂದು ನಂಬಿಕೆ ಮೂಡುತ್ತೆ. ಗಂಡು ಹೆಣ್ಣಿನ ನಡುವೆ ಎಲ್ಲ ಬಗೆಯ ಸಾಮಾಜಿಕ, ನೈತಿಕ, ಸಂಬಂಧಗಳಿರುತ್ತವೆ. ಜೊತೆಗೆ ಅನೈತಿಕ ಸಂಬಂಧಗಳೂ ಇದ್ದು ಅವೂ ಕೂಡಾ ಇವುಗಳಷ್ಟೇ ಆಪ್ತವಾಗಿ, ಗಾಢವಾಗಿ ಬೆಸೆದುಕೊಂಡಿರುತ್ತವೆ. ಭಾವನಾತ್ಮಕ ಸ್ತರದಲ್ಲಿ ಇಷ್ಟು ಆಳವಾಗಿ ಬೇರು ಬಿಟ್ಟಿದ್ದರೂ, ಮಾನವೀಯ ಸ್ತರದಲ್ಲೇಕೇ ಇವು ಉಳಿಯುವುದಿಲ್ಲ?

"ಏಕೆಂದರೆ ಪುರುಷ ಎಲ್ಲವನ್ನು ಪಡೆದುಕೊಂಡಿದ್ದರೂ ಸಂತುಷ್ಟನಾಗಿರುವುದಿಲ್ಲ. ಒಬ್ಬರ ಜೊತೆಗೆ ತನ್ನ ಅನ್ವೇಷಕ ಪ್ರವೃತ್ತಿಯನ್ನು ನಿಲ್ಲಿಸದೆ ಬೇರೆ ಬೇರೆ ವ್ಯಕ್ತಿಗಳೊಂದಿಗೆ ಹಂಚಿಕೊಳ್ಳುತ್ತಾ ಹೋಗುತ್ತಾನೆ. ಜೀವನದಲ್ಲಿ ಹೊಸ ಹೊಸ ಆಕರ್ಷಣೆಗಳ ಕಡೆಗೆ ಸೆಳೆಯಲ್ಪಡುತ್ತಾನೆ. ಅದು ಜೀವನದಲ್ಲಿ ಅನಿವಾರ್ಯವೆಂದುಕೊಳ್ಳುತ್ತಾನೆ. ಆದರೆ ಸ್ತ್ರೀ ಇದಕ್ಕೆ ವಿರುದ್ಧವಾಗಿ ಯಾವುದೋ ಒಂದು ಕೇಂದ್ರಕ್ಕೆ ಅಂಟಿಕೊಂಡು ಕೂರುತ್ತಾಳೆ. ಸಾಮಾಜಿಕ ಭಯ ಕೌಟುಂಬಿಕ ನಿಯಂತ್ರಣ, ವಿವಶತೆ ಅಥವಾ ಒಂದರಲ್ಲಿಯೇ ಸುಖ ಇದೆ ಎನ್ನುವ ನಂಬಿಕೆ – ಹೀಗೆ ಹಲವಾರು ಕಾರಣಗಳಿಂದ ತಾನು ನೆಚ್ಚಿಕೊಂಡ ವ್ಯಕ್ತಿಗೆ, ಕೇಂದ್ರಕ್ಕೇ ಗಂಟು ಬಿದ್ದಿರುತ್ತಾಳೆ. ಅಲ್ಲದೆ ಎರಡನೆಯ ಪುರುಷ ಮೊದಲಿನವನಿಗಿಂತ ಬೇರೆಯಾಗಿರುತ್ತಾನೆಂಬ ಭರವಸೆ ಏನಿದೆ?

'ಮೂಲಭೂತವಾಗಿ ಗಂಡು – ಹೆಣ್ಣಿನ ನಡುವಿನ ಘರ್ಷಣೆಗೆ ಅವರಲ್ಲಿನ ವ್ಯತ್ಯಾಸಗಳೇ ಕಾರಣ. ಆದರೆ ನನ್ನ ದೃಷ್ಟಿಯಲ್ಲಿ ಈ ಘರ್ಷಣೆ ಗಂಡು – ಹೆಣ್ಣಿಗಷ್ಟೇ ಸೀಮಿತವಲ್ಲ. ಇದರೆ ಆಚೆಗೂ ವಿಸ್ತರಿಸುತ್ತದೆ. ಮನುಷ್ಯ ಸ್ವಭಾವದಲ್ಲಿನ ಒಳಿತು – ಕೆಡುಕುಗಳ ನಡುವಿನ ಘರ್ಷಣೆಯಾಗಿಯೂ ಪರಿಣಮಿಸುತ್ತದೆ. ಗಾಜು ಮತ್ತು ವಜ್ರದ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಆದರೆ ನೋಡುವುದಕ್ಕೆ ಎರಡೂ ಒಂದೇ ಎಂಬಂತೆ ಕಾಣಿಸುತ್ತವೆ. ಎರಡೂ ಗಾಜಿನ ತುಂಡುಗಳೆಂಬ ಭಾವನೆ ಬರುತ್ತದೆ. ಮನುಷ್ಯ ಕೋಟಿಯ ಸ್ವಭಾವ ಮತ್ತು ಮನುಷ್ಯತ್ವದ ಪ್ರಮಾಣದಲ್ಲಿ ಪರಸ್ಪರ ಭಿನ್ನತೆಗಳಿರುತ್ತವೆ. ಕೇವಲ ಹೆಣ್ಣು-ಗಂಡುಗಳ ಪ್ರಶ್ನೆಗೆ ಸೀಮಿತವಾದುದಲ್ಲ. ಶೋಷಣೆ, ಅತ್ಯಾಚಾರಗಳು ಜಾತಿ ವರ್ಗಗಳಲ್ಲಿನ ವ್ಯತ್ಯಾಸಗಳಲ್ಲೂ ಅಡಕವಾಗಿವೆ. ಹೆಣ್ಣೇ ಹೆಣ್ಣಿನ ಮೇಲೆ ಅತ್ಯಾಚಾರ ನಡೆಸಬಹುದು. ಶೋಷಣೆ ಮಾಡಬಹುದು, ಹಾಗೆಯೇ ಒಳಗಾಗಲೂಬಹುದು. ಆದರೆ ಇಂತಹ ಸನ್ನಿವೇಶಗಳು ಅಪರೂಪವಾಗಿ ಕಣ್ಣಿಗೆ ಬೀಳುತ್ತವೆ. ಯಾಕೆಂದರೆ ಅವಳ ಕೈಗೆ ಅಧಿಕಾರ ಬರುವುದೇ ಎಂದೊ ಒಮ್ಮೊಮ್ಮೆ!

"ಅದಕ್ಕೇ ಅವಳು ಎಲ್ಲವನ್ನೂ ಸರಿಮಾಡಿಬಿಡುತ್ತಾಳೆ."

"ನಾವು ವಿಷಯ ಬಿಟ್ಟು ಎಲ್ಲೋ ಹೊರಟೆವು."

"ಹೌದು ನೀನು ಮಾನವೀಯ ಸಂಬಂಧಗಳ ಬಗ್ಗೆ ಮಾತನಾಡುತ್ತಿದ್ದೆ. ಅಣ್ಣ ತಂಗಿಯರ ಪರಸ್ಪರರ ಪ್ರೀತಿ, ತಾಯಿ – ಮಗನ ವಾತ್ಸಲ್ಯ. ಅಪ್ಪ-ಮಗಳ ಸ್ನೇಹ- ಇವುಗಳನ್ನು ಯಾರೂ ಪ್ರಶ್ನಿಸುವುದಿಲ್ಲ."

"ಆದರೆ ಪತಿ-ಪತ್ನಿ, ಪ್ರೇಯಸಿ-ಪ್ರಿಯ ಸಂಬಂಧಗಳ ಸ್ವರೂಪವೇ ಬೇರೆ. ನಿರ್ಮಲ, ನಿಶ್ಚಲ ಪ್ರೀತಿಯ ಕೊರತೆ ಮನಸ್ಸನ್ನು ಕಾಡುತ್ತದೆ. ಕೆಲವರು ಇದಕ್ಕೆ ಅಪವಾದವಾಗಿ ಇರಬಹುದು. ಆದರೆ ಯಾವುದೇ ಕಾರಣಕ್ಕೆ ಅವರ ಭಾವನಾತ್ಮಕ ಸಂಬಂಧ ಕಡಿದುಬಿದ್ದರೆ ಒಬ್ಬರನ್ನೊಬ್ಬರು ತುಳಿಯಲು, ನಾಶಮಾಡಲು. ಹೆಸರನ್ನು

ಕೆಡಿಸಲು ಸ್ಪರ್ಧಾತ್ಮಕ ನೆಲೆಯಲ್ಲಿ ನಿಲ್ಲುತ್ತಾರೆ. ಹೇಳ ಹೆಸರಿಲ್ಲದಂತೆ ಅಳಿಸಿಬಿಡಲು ಟೊಂಕಕಟ್ಟಿ ನಿಲ್ಲುತ್ತಾರೆ. ಈ ಸಂಬಂಧಗಳಲ್ಲಿ ಮಾತ್ರವೇ ಹೀಗೇಕೆ ಆಗುತ್ತದೆ?"

"ವಾಸ್ತವವಾಗಿ ಹೆಣ್ಣಿಗೆ ಮೋಸ ಮಾಡುವುದರಲ್ಲಿ ಗಂಡಿಗೆ ಒಂದು ರೀತಿಯ ಸುಖ ಸಿಗುತ್ತದೆ. ಪ್ರಾಮಾಣಿಕತನದಿಂದಲೂ ಪಡೆದುಕೊಳ್ಳಬಹುದಾದ ಪ್ರೇಮ ಅಥವಾ ಪ್ರೀತಿಯನ್ನು ಚಾಣಾಕ್ಷತನದಿಂದ, ಧೂರ್ತತನದಿಂದ ಪಡೆದುಕೊಳ್ಳುವುದರಲ್ಲಿ ಹೆಚ್ಚಿನ ಸಂತೋಷವನ್ನು ಅನುಭವಿಸುತ್ತಾನೆ. ಅವಕಾಶ ಸಿಕ್ಕಲ್ಲೆಲ್ಲ ಹೆಣ್ಣುಗಳನ್ನು ಬದಲಾಯಿಸಿಕೊಳ್ಳುತ್ತಾನೆ."

"ಪ್ಲೀಸ್ ಸರೋಜ್ ಯಾವಾಗಿನಿಂದ ಆತಂಕವಾದಿ ಪ್ರವೃತ್ತಿಯನ್ನು ಬೆಳೆಸಿಕೊಂಡೆ? ಗಂಡು ಹೆಣ್ಣನ್ನು ಹಿಂಸಿಸಿ ಸಂತೋಷಪಡ್ತಾನೆ. ನಾವು ಅವನನ್ನು ಹಿಂಸೆ ಮಾಡಿ ಸಂತೋಷ ಪಡೋಣ? ಇತಿಹಾಸದ ಉದ್ದಕ್ಕೂ ನಾವು ನೋಡುತ್ತಲೇ ಬಂದಿದ್ದೇವೆ, ಒಬ್ಬರನ್ನೊಬ್ಬರು ಮಾನವೀಯ ನೆಲೆಯಿಂದ ಪರಿಗಣಿಸುವುದೇ ಇಲ್ಲ. ರಕ್ತಕ್ಕೆ ರಕ್ತ. ಕೊಲೆಗೆ ಕೊಲೆ, ಇದಾದರೆ ಮನುಷ್ಯತ್ವ ಉಳಿದ ಹಾಗೆ! ಒಬ್ಬನ ಕೈ ಸೆರೆಯಾಗಿ ಉಳಿಯುವುದೇ ಮನುಷ್ಯನ ಹಣೆಬರಹವೇ ಸರೋಜ್?"

'ನಿಮ್ಮಿಬ್ಬರ ಮಗು ಒಂದಿದ್ದರೆ, ಈ ಮಂಜಿನ ತೆರೆ, ಹಿಮದ ಬೆಟ್ಟ, ಬಹುಶಃ ಕರಗುತ್ತಿತ್ತು. ಅಂತ ಅನಿಸುತ್ತೆ"

"ಒಳ್ಳೇದಾಯ್ತು ಸದ್ಯಕ್ಕೆ. ಒಂದು ವೇಳೆ ನೀನು ಹೇಳುವ ಆ ಮಗು ಇದ್ದಿದ್ದರೆ, ಆ ಪುಟ್ಟ ಜೀವವನ್ನೂ ಬೇಯಿಸುತ್ತಿದ್ದೆವು ಮತ್ತು ಇಷ್ಟ ಇಲ್ಲದಿದ್ದರೂ ಸಾಯುವ ತನಕ ಒಬ್ಬರನ್ನೊಬ್ಬರು ಸಹಿಸಿಕೊಳ್ಳುತ್ತಲೇ ಇರಬೇಕಾಗುತ್ತಿತ್ತು. ಹಾಗೆ ನೋಡಿದರೆ, ನರೇಶನನ್ನು ಪಡೆಯುವುದಕ್ಕೆ ಅವನವರೆಗೆ ತಲುಪುವುದಕ್ಕೆ ಯಾವುದೇ ಮೆಟ್ಟಿಲಾಗಲೀ, ಸೇತುವೆಯಾಗಲೀ ಅಗತ್ಯವಿಲ್ಲ. ನಾವಿಬ್ಬರೂ ಪರಸ್ಪರ ಒಂದಾಗಬೇಕಾದರೆ ಭಾವನೆಗಳು ಬಯಕೆಗಳು ಸೇತುವೆಯಾಗಬೇಕು."

"ನೀನೂ ಬಹಳ ವಿಚಿತ್ರ! ಒಂದು ಕಡೆ ಅವನಿಂದಾಗುವ ಅವಮಾನದಿಂದ, ಅವನ ಬಗ್ಗೆ ಜಿಗುಪ್ಸೆಯಿಂದ ಉರಿದೇಳುತ್ತೀ, ಇನ್ನೊಂದು ಕಡೆ ಅವನ ವಿಚಾರದಲ್ಲಿ ಎಷ್ಟೊಂದು ಪ್ರೀತಿ ತೋರಿಸುತ್ತೀ"

"ಸಂಬಂಧಗಳ ಈ ವ್ಯಾಪಕತೆಯನ್ನು ಅರ್ಥಮಾಡಿಕೊಳ್ಳಲು ನಿನಗೆ ಆಗಲಿಲ್ಲಾಂದ್ರೆ ಆಶ್ಚರ್ಯವಾಗುತ್ತೆ, ಸರೋಜ್. ಇವತ್ತಿಗೂ ನರೇಶನ ಬಗ್ಗೆ ನನ್ನ ಪ್ರೀತಿ ಚಿರಸ್ಥಾಯಿಯಾಗಿದೆ. ಅವಮಾನ, ಜಿಗುಪ್ಸೆಗಳು ಯಾವುದೇ ವಿಶಿಷ್ಟ ಕ್ಷಣಗಳಲ್ಲಿ ವಿಭಿನ್ನ ಸ್ಥಿತಿಗಳಲ್ಲಿ ಉದ್ಭವಿಸುತ್ತವೆ. ಆದರೆ ಇವುಗಳು ಶಾಶ್ವತವಲ್ಲ. ಮನುಷ್ಯನ ಸ್ವಾಭಿಮಾನಕ್ಕೆ, ಅವನ ಹೃದಯಕ್ಕೆ ಏಟುಬಿದ್ದಾಗ ಅವು ಸಿಡಿದೇಳುತ್ತವೆ. ಆದ್ದರಿಂದಲೇ ಒಂದು ಕ್ಷಣ ಇರುತ್ತವೆ. ಮರುಕ್ಷಣದಲ್ಲಿ ಮಾಯವಾಗುತ್ತವೆ. ಮನಸ್ಸಿಗೆ ಗಾಯ

ಮಾಡಿದ ವ್ಯಕ್ತಿಯೇ ಸಮಾಧಾನವನ್ನೂ ಮಾಡುವುದರಿಂದ ಪರಸ್ಪರರ ನಡುವಿನ ಮೂಲಭೂತ ನಂಬಿಕೆ, ವಿಶ್ವಾಸ ಪ್ರೀತಿಗಳು ಅವರ ಸಂಬಂಧಗಳನ್ನು ಅಷ್ಟು ಸುಲಭವಾಗಿ ಅಲುಗಾಡಿಸಲಾರವು."

"ನನಗೆ ಅರ್ಥವಾಗಲಿಲ್ಲ."

"ಆಕಾಶ ಒಂದು ಸತ್ಯ. ಸೂರ್ಯ ಒಂದು ಸತ್ಯ. ಆದರೆ ಅವುಗಳನ್ನು ಕವಿಯುವ ಮೋಡಗಳು ಗರ್ಜಿಸುತ್ತವೆ, ಮಳೆಗರೆಯುತ್ತವೆ, ಮತ್ತು ಚದುರಿಯೂ ಹೋಗುತ್ತವೆ ಭೂಮಿಯೂ ಒಂದು ಸತ್ಯ. ಇಲ್ಲಿನ ಪ್ರಶ್ನೆ. ಮಳೆ ಬಂಜರು ಭೂಮಿಯ ಮೇಲೆ ಬೀಳುವುದೋ ಇಲ್ಲ ಫಲವತ್ತಾದ ಭೂಮಿಯ ಮೇಲೋ ಎನ್ನುವುದು? ಇದರಲ್ಲಿ ಸ್ಥಾಯಿಯಾಗಿ ಪಡೆದುಕೊಂಡದ್ದು ಯಾವುದು? ಪಡೆದದ್ದನ್ನು ಹಿಂತಿರುಗಿಸಿದ್ದು ಯಾವುದು?"

"ಹಾಗಾದರೆ ನರೇಶನನ್ನು ನೀನು ಕ್ಷಮಿಸಿದ್ದೀಯ?"

"ಇಲ್ಲಿ ನನ್ನ ಸಮಸ್ಯೇನೆ ಬೇರೆ. ಯಾವುದು ಸ್ಥಾಯಿಯಾದ್ದಲ್ಲವೋ ಅದನ್ನೇ ನರೇಶ್ ಚಿರಸ್ಥಾಯಿಯಾಗಿ ಭಾವಿಸಿದ್ದಾನೆ. ಅಂಥದ್ದರಲ್ಲಿ ಕ್ಷಮೆ ಬೇಡುವುದಾಗಲೀ, ನೀಡುವುದಾಗಲೀ ಪ್ರಶ್ನೆಯಲ್ಲ. ಒಬ್ಬರ ಭಾವನೆಗಳಿಗೆ ಧಕ್ಕೆ ಬಾರದಂತೆ ಎಚ್ಚರಿಕೆಯಿಂದ ನಡೆದುಕೊಳ್ಳುವುದು ನರೇಶನ ದೃಷ್ಟಿಯಲ್ಲಿ ಕ್ಷುಲ್ಲಕ. ಅದು ಅವನಿಗೆ ಅಂತಹ ಮಹತ್ವದ ವಿಷಯವೇ ಅಲ್ಲ. ಆದ್ದರಿಂದ ಅವನು ಅವನಿಗೆ ಇಷ್ಟ ಬಂದ ರೀತಿಯಲ್ಲಿ ಬಾಳುವುದಕ್ಕೆ ಪೂರ್ಣ ಸ್ವತಂತ್ರ."

"ನೀನು ಏನು ಯೋಚನೆ ಮಾಡಿದ್ದೀ?"

"ನಾನು ಈಗ ಆ ವೃತ್ತದೊಳಗಿಂದ ಹೊರಗೆ ಬಂದಿದ್ದೀನಿ. ಸಮಸ್ಯೆಗೆ ಸಮಾಧಾನ ಕಂಡುಕೊಳ್ಳುವುದಾಗಲೀ, ಸಂಬಂಧಗಳನ್ನು ಪರೀಕ್ಷಿಸುವುದಾಗಲೀ ನನಗೆ ಮುಖ್ಯವಲ್ಲ. ನನ್ನೊಳಗಿನ ಮನುಷ್ಯತ್ವವನ್ನು ಉಳಿಸಿಕೊಂಡು ನರೇಶನಲ್ಲಿನ ಮನುಷ್ಯತ್ವವನ್ನೂ ಉಳಿಸಿಕೊಳ್ಳಲು ಅವನಿಗೆ ಸಹಾಯ ಮಾಡುವುದು, ನನ್ನ ಮೊದಲ ಕರ್ತವ್ಯ. ನನ್ನ ದೃಷ್ಟಿಯಲ್ಲಿ ಮಾನವ ಪ್ರಗತಿಯ ಇತಿಹಾಸದಲ್ಲಿ ಅತ್ಯಂತ ಮಹತ್ವದ ಅಧ್ಯಾಯವಾದೀತು. ಅಲ್ಲದೆ ಮುಂಬರುವ ಜನಾಂಗಕ್ಕೆ, ಮನುಷ್ಯ ಸಂಬಂಧಗಳನ್ನು ಕಾಯ್ದಿರಿಸಿಕೊಳ್ಳುವುದಕ್ಕೆ ಹೆಚ್ಚಿನ ಸಾಧ್ಯತೆಗಳನ್ನು ಕಲ್ಪಿಸಬಹುದು."

"ಅಂದರೆ ನೀನೂ ಕೂಡಾ ಒಬ್ಬ ಸಂಪ್ರದಾಯವಾದಿ ಹೆಣ್ಣಿನಂತೆ ಗೂಟಕ್ಕೆ ಕಟ್ಟು ಬಿದ್ದು ಬದುಕುವುದರಲ್ಲಿಯೇ ನಿನ್ನ ಭವಿಷ್ಯವನ್ನು ಕಾಣುತ್ತಿರುವಿ? ಪ್ರತಿದಿನ ಯಾವ ಹೆಂಗಸರು ತಮ್ಮ ಆತ್ಮವಿಶ್ವಾಸದ ಪರಿಚಯ ಮಾಡಿಕೊಡುತ್ತಿದ್ದಾರೋ ಅವರೆಲ್ಲ ಹೀಗೆ...... ಅವರನ್ನು ಬೇಡಾಂತ ಹೇಳಬೇಡ!"

"ನೀನು ಹೇಳ್ತಿರೋದು ಸರಿಯಾಗೇ ಇದೆ ಸರೋಜ್. ಸ್ವಲ್ಪ ಕಾಲ ನಾನು ಸಂಪ್ರದಾಯವಾದಿ ಪರಿಸರದಲ್ಲಿಯೇ ಬೆಳೆದು ಬಂದವಳು. ಸ್ವಾರ್ಥ ನನ್ನನ್ನು ಆವರಿಸಿತ್ತು. ಆದರೆ ಬಹಳ ಬೇಗ ಅದರಿಂದ ಹೊರಗೆ ಬಂದೆ.

"ಹೇಗೆ?"

"ಹೆಂಗಸರ ಮುಂದೆ ಇರುವುದು ಎರಡೇ ಎರಡು ಅಭಿವ್ಯಕ್ತಿಗಳು. ತಲೆ ಬಗ್ಗಿಸುವುದು, ಇಲ್ಲ ಸಮಸ್ಯೆಯನ್ನು ಅರ್ಧದಲ್ಲಿಯೇ ಬಿಟ್ಟು ತಲೆ ಕತ್ತರಿಸಿಕೊಳ್ಳುವುದು ಆದರೆ ನಾನು ಹಾಗಲ್ಲ. ಮನೆ ಬಿಡುವುದು, ಮನೆ ಮುರಿಯುವುದು, ಆತ್ಮಹತ್ಯೆ ಮಾಡಿಕೊಳ್ಳುವುದು ಅಥವಾ ಯಾರಿಗಾಗಿಯೋ ಸಾಯುವುದು – ಇವು ಯಾವುದರಲ್ಲಿಯೂ ನನಗೆ ನಂಬಿಕೆ ಇಲ್ಲ. ಹೆಣ್ಣಿನ ಅಧಿಕಾರ ಮನೆ ಜೊತೆಗೆ ಸಂಬಂಧಿಸಿದ್ದು, ಅನ್ನುವುದರಲ್ಲಿ ನನಗೆ ವಿಶ್ವಾಸ ಇದೆ. ಅಧಿಕಾರ ಪಡೆಯುವುದರ ಅರ್ಥ ಮನೆಯನ್ನು ಧಿಕ್ಕರಿಸುವದಲ್ಲ. ಮನೆ ಉಳಿಸುವುದರ ಅರ್ಥ ಮರ್ಯಾದೆಯನ್ನು ಬೀದಿಪಾಲು ಮಾಡುವುದಲ್ಲ. ಯಾವುದೂ ಅತಿಯಾಗಬಾರದು. ಅತಿಯಾದರೆ ಅದು ನಮಗೆ ವಿಷವಾಗಿ ಪರಿಣಮಿಸುತ್ತದೆ.

"ಸರಿ ಅತಿಯ ಭೂತದ ಭಯದಿಂದ ಸತಿಯಾಗುತ್ತೀರಿ."

"ನೀನು ಸಮಸ್ಯೆಯನ್ನು ಮೇಲಿನ ಪಾತಳಿಯ ನೆಲೆಯಲ್ಲಿಯೇ ಪರಿಹರಿಸಬೇಕೆಂದು ಆಸೆ ಪಡುತ್ತೀ, ಸರೋಜ್. ಸಮಸ್ಯೆಯ ಬೇರುಗಳು ಪ್ರಪಂಚ ಪ್ರಾರಂಭವಾದಾಗ ಮಾಡಿದ ಕಾನೂನು ಮತ್ತು ಹೆಣ್ಣಿನ ಜೊತೆಗೆ ಬಂಧಿಸಲ್ಪಟ್ಟಿವೆ. ಇಲ್ಲಿಯವರೆಗೆ ಅವುಗಳನ್ನು ಬದಲಾಯಿಸುವುದಕ್ಕೇ ಆಗಲಿಲ್ಲ. ಅಂಥಾದ್ದನ್ನು ನೀನು ನಿಂತ ಕಾಲಮೇಲೆ ಕಿತ್ತು ಬಿಸಾಡಬೇಕೆನ್ನುತ್ತೀ?"

"ನಿನಗೆ ನೆನಪಿದೆಯಾ, ಮೊಹೆಂಜೋದಾರೋದಲ್ಲಿ ಸಿಕ್ಕಿದ ಶಿಲಾ ಚಿತ್ರಗಳು. ಅವುಗಳನ್ನು ಗಮನವಿಟ್ಟು ನೋಡು, ಪ್ರತಿಯೊಂದು ಚಿತ್ರದಲ್ಲೂ ಹೆಣ್ಣನ್ನು ತಿರುಗು ಮುರುಗಾಗಿ ಚಿತ್ರಿಸಲಾಗಿದೆ.

ಜೊತೆಗೆ ಅವಳ ಗರ್ಭಾಶಯದ ಬಾಯಿಂದ ಗೋಧಿಯ ತೆನೆಯಂತಿರುವ ಗಿಡವೊಂದು ಬೆಳೆದು ಹೊರಟಂತೆ ತೋರಿಸಲಾಗಿದೆ. ಇದರ ಅರ್ಥ ಏನು ಗೊತ್ತಾ, ಗಂಡು ಹೆಣ್ಣನ್ನು ಕೇವಲ ದೇವತೆಯೆಂದು ಮಾತ್ರವೇ ಅಲ್ಲ. ಆಕೆಯನ್ನು ಸೃಷ್ಟಿಕರ್ತಳೆಂದು ನಂಬಿ ಹೆಚ್ಚಿನ ಮಹತ್ವವನ್ನು ನೀಡಿದ್ದ. ಸೃಷ್ಟಿ ಕ್ರಿಯೆಯಲ್ಲಿ ತಾನೂ ಸಮಾನಪಾಲುದಾರನೆಂಬ ಅರಿವು ಅವನಿಗಿದ್ದಂತಿಲ್ಲ. ಆಕೆಯನ್ನು ಜನನಿ ಎಂದು ತಿಳಿಯುವುದರ ಜೊತೆಗೆ ಸುತ್ತಮುತ್ತಲಿನ ನಿಸರ್ಗವನ್ನೂ ಬಲ್ಲಜ್ಞಾನಿಯೆಂದೇ ತಿಳಿದಿದ್ದ....."

"ನೀನು ನನಗೆ ಮಾನವವಿಕಾಸದ ಬಗ್ಗೆ ಹೇಳುತ್ತಿರುವಿ? ಬಹುಶಃ ಇದನ್ನೂ ನೀನು ಹೇಳಬಹುದು, ಗಂಡಸು ಬೇಟೆಗೇಂತ ಹೋದರೆ, ಹೆಂಗಸು ಅಥವಾ ಹೆಣ್ಣು

ತನ್ನ ಸುತ್ತಮುತ್ತಲಿರುವ ಬೀಜಗಳು ಮೊಳಕೆಯೊಡೆಯುವುದನ್ನು ನೋಡಿ ಮರಗಳು ಹೇಗೆ ಹುಟ್ಟುತ್ತವೆ ಅನ್ನುವುದನ್ನು ಅರಿತಳು. ವ್ಯವಸಾಯ ಮಾಡುವುದನ್ನೂ ಆರಂಭಿಸಿದಳು. ಗಂಡಸಿಗೆ ತಿಳಿಸಿಕೊಟ್ಟಳು. ಎಲ್ಲ ಒಪ್ಪಿಕೊಂಡೆ. ಈಗಿನ ಸ್ತ್ರೀ ಬೇಟೆಯನ್ನೂ ಆಡುತ್ತಾಳೆ, ವ್ಯವಸಾಯಾನೂ ಮಾಡುತ್ತಾಳೆ. ಅನ್ನ ಮತ್ತು ಹಣ ಎರಡನ್ನು ತೋರಿಸಿಕೊಟ್ಟವಳಾದರೂ ಅವರ ಸ್ಥಿತಿ ಅಧೋಗತಿಗೆ ಇಳಿದಿದೆ."

"ಹೆಂಗಸರು ತಮ್ಮ ಪರೀಕ್ಷಕ ದೃಷ್ಟಿಯಿಂದ ಬೀಜಗಳು ಮೊಳೆಯುವುದನ್ನು, ಬೆಳೆಯುವುದನ್ನು ಶಿಲಾಯುಗದಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಿತ್ತು. ಅದು ಅವರಲ್ಲಿನ ಗುಣ. ಆ ಗುಣವನ್ನು ಕಳೆದುಕೊಳ್ಳುವುದು ನನಗಿಷ್ಟವಿಲ್ಲ. ನನ್ನ ಸ್ಥಾನಕ್ಕೇ ನಾನು ಕಟ್ಟುಬಿದ್ದು ಆ ಗುಣದಲ್ಲಿ ಇನ್ನಷ್ಟು ಸೂಕ್ಷ್ಮತೆ ದಕ್ಷತೆಗಳನ್ನು ತರಲು ಬಯಸುತ್ತೇನೆ. ಆಗ ನನ್ನ ದೃಷ್ಟಿ ಒಬ್ಬ ಪುರುಷನಿಗೆ ಮಾತ್ರವೇ ಸೀಮಿತವಾಗದೆ ಸಮಗ್ರ ಸಮಾಜವನ್ನೂ ಒಳಗೊಳ್ಳುತ್ತದೆ. ಅದರಿಂದಾಗಿ ಆ ಸಮಾಜದಲ್ಲಿ ಎರಡೇ ಎರಡು ಜಾತಿಗಳು, ಒಂದು ಗಂಡು ಇನ್ನೊಂದು ಹೆಣ್ಣು ಮಾತ್ರವೇ ಉಳಿಯುತ್ತವೆ....."

"ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ನೀನು ಪುರುಷ ಸಮಾಜದ ದಾಸಿಯಾಗಿಯೇ ಬಾಳಬೇಕೆಂದು ಬಯಸುತ್ತಿರುವೆ?"

"ನಿನ್ನ ಆಲೋಚನೆಯೆಲ್ಲ ಕೇವಲ ಒಂದೇ ಒಂದು ಸಮಸ್ಯೆಗೆ ಬಂದು ನಿಂತು ಸ್ಥಗಿತಬಾಗಿದೆ. ನನ್ನ ಮಾತಿನ ಅರ್ಥ ಅದಲ್ಲ. ನಾನು ಎಷ್ಟೋ ಸಲ ಹೇಳಿದ್ದೀನಿ, ನನ್ನ ಮನಸ್ಸಿನಲ್ಲಿ ನನ್ನ ಆಲೋಚನೆಯಲ್ಲಿ ಒಂದು ಸಮಾಜದ ಕಲ್ಪನೆಯಿದೆ. ಇಲ್ಲಿ ಯಾರಿಗೆ ಯಾರೂ ದಾಸರಲ್ಲ. ಇನ್ನೊಮ್ಮೆ ನಿನಗೆ ಹೇಳ್ತಿದ್ದೀನಿ, ನಾನು ಪುರುಷವಿರೋಧಿಯಲ್ಲ; ಅತ್ಯಾಚಾರವಿರೋಧಿ ಮಾತ್ರ. ಅತ್ಯಾಚಾರಿಗೆ ಯಾವುದೇ ಹೆಸರು, ಕುಲ, ಗೋತ್ರ ಇರುವುದಿಲ್ಲ. ವೈಯಕ್ತಿಕ ನೆಲೆಯಲ್ಲಿ ಸಾಮೂಹಿಕ ನೆಲೆಯಲ್ಲಿ ನಮ್ಮೆದುರು ಇರುವ ಅತ್ಯಾಚಾರಿಯೊಂದಿಗೆ ನಾವು ಸೆಣಸಾಡಬೇಕು."

"ನಿನ್ನಂತಹ ಸುಶಿಕ್ಷಿತ ಹೆಂಗಸರೇ, ಹೆಂಗಸರ ಹೋರಾಟದ ಶತ್ರುಗಳಾಗಿ ವಿರೋಧಿಗಳಾಗಿ ಅವರ ಪ್ರಗತಿಯ ಹಾದಿಯಲ್ಲಿನ ಅಡಚಣೆಗಳಾಗಿದ್ದೀರಿ. ಒಂದಲ್ಲ ಒಂದು ದಿನ ನೀನು ಪಶ್ಚಾತ್ತಾಪ ಪಡುತ್ತೀ, ಶಾಲ್ಮಲಿ!"

"ಒಂದು ಮಾತು ಕೇಳಲೇ?"

"ಕೇಳು."

"ನೀನು ಅವಿವಾಹಿತಳಾಗಿ ಪುರುಷ ಸಮಾಜ, ಅವರ ಹೆಸರು, ಅವರ ಸ್ವರೂಪ ಕಲ್ಪನೆಯಿಂದ ಪೂರ್ತಿಯಾಗಿ ಮುಕ್ತಳಾಗಿದ್ದೀಯ?

"ಹೌದು.....ನಾನು ಎಂದೂ ದೌರ್ಬಲ್ಯಕ್ಕೆ ಒಳಗಾದ್ದಿಲ್ಲ..... ಯಾಕೆ?"

"ನಿನ್ನ ಸಮಸ್ಯೆ ಏನಿದ್ದರೂ 'ಗಂಡ' ಅನ್ನುವುದರಿಂದ ಬಿಡುಗಡೆಯಾಗುವುದು. ನನ್ನ ದೃಷ್ಟಿಯಲ್ಲಿ ಸ್ತ್ರೀ ಮುಕ್ತಿ ನಿಜವಾದ ಅರ್ಥದಲ್ಲಿ ಸಮಾಜದ ಆಲೋಚನೆಯ ಕ್ರಮದಲ್ಲಿ, ಸ್ತ್ರೀಯರ ಸ್ಥಿತಿಯಲ್ಲಿ ಬದಲಾವಣೆಯಾಗುವುದು! ಮನೆಯಲ್ಲಿರಲಿ, ಹೊರಗಡೆ ಇರಲಿ ನಾವು ಮುಖಾಮುಖಿಯಾಗುವುದು ಪುರುಷರೊಂದಿಗೇ! ತರಕಾರಿಯವನಾಗಿರಬಹುದು, ಪೇಪರ್ ಮಾರುವವನಿರಬಹುದು, ನಿನ್ನ ಬಾಸ್ ಇರಬಹುದು, ಇಲ್ಲಿ ನಿನ್ನ ಗಂಡನೇ ಇರಬಹುದು ಸಂಕ್ಷಿಪ್ತವಾಗಿ ಹೇಳಬೇಕಾದರೆ, ಪ್ರತಿ ಸನ್ನಿವೇಶದಲ್ಲಿಯೂ ಎದುರಾಗುವವನು ಪುರುಷ. ಗಂಡನಿಂದ ಬಿಡುಗಡೆ ಪಡೆಯಬಹುದು, ಆದರೆ ಇವರೆಲ್ಲರನ್ನು ನಿರಾಕರಿಸುತ್ತಾ ಹೋಗಬಲ್ಲೆಯಾ?"

"ನೀನು ಹೇಳುತ್ತಿರುವುದೇನೋ ಸರಿ ಆದರೆ...."

"ಆದರೆ ಅನ್ನುವುದರ ಮುಂದಿನದು ಅನುಭವಿಸಿದವರಿಗೆ ಮಾತ್ರವೇ ಅರ್ಥವಾಗುತ್ತದೆ. ಥಿಯರಿ ಮತ್ತು ಪ್ರಾಕ್ಟಿಕಲ್‌ಗಳ ನಡುವೆ ವ್ಯತ್ಯಾಸ ಇರುತ್ತೆ ಸರೋಜ್. ಬರೀ ಮಾತಾಡುವುದರಿಂದ ಅಥವಾ ಭಾವಿಸುವುದರಿಂದ ಜೀವನ ಆಗೊಲ್ಲ. ಅಂದರೆ ನಿನ್ನ ಪ್ರಕಾರ ಪೂರ್ಣ ಸ್ವಾವಲಂಬಿಯಾಗಿರುವ ಇವತ್ತಿನ ಹೆಣ್ಣಿ ತಗ್ಗಿ ಬಗ್ಗಿ ನಡೆದುಕೊಳ್ಳಬೇಕು ಅಥವಾ ಇಂದ್ರಿಯ ಸುಖಕ್ಕಾಗಿ ಪುರುಷನ ಎದುರು ತನ್ನನ್ನು ಪೂರ್ತಿಯಾಗಿ ಸಮರ್ಪಿಸಿಕೊಳ್ಳಬೇಕು?"

"ಸ್ವಾವಲಂಬಿಯ ಅರ್ಥ ಇದಲ್ಲ. ಕುಟುಂಬದಿಂದ ಕಿತ್ತುಕೊಂಡು ಅಗತ್ಯವಾದ ಭಾವನೆಗಳನ್ನು ಬಲಿಗೊಟ್ಟು ಇರುವುದಲ್ಲ. ಅನ್ನ ಮೊದಲ ಅಗತ್ಯ, ಒಪ್ಪಿಕೊಳ್ಳುತ್ತೇನೆ. ಸೆಕ್ಸ್ ಎರಡನೇ ಅಗತ್ಯ. ಅದರಿಂದ ದೂರ ಇರುವುದು ಅಷ್ಟು ಸುಲಭವಲ್ಲ. ಹೆಣ್ಣು ತನ್ನ ಸಹಜ, ಸ್ವಾಭಾವಿಕ ಪ್ರೀತಿಯನ್ನು ಗಂಡಸಿನ ಎದುರು ಮಾತ್ರವೇ ವ್ಯಕ್ತಪಡಿಸಲು ಸಾಧ್ಯ. ಆದರೆ ಹಾಗೆಂದು ಹಸಿವಾದಾಗ ಏನನ್ನಾದರೂ ತಿಂದು ತಣಿಸಿಕೊಳ್ಳುವ ಹಾಗೆ ಹೆಣ್ಣು ತನ್ನ ಕಾಮದ ಹಸಿವನ್ನು ತೀರಿಸಿಕೊಳ್ಳಲು ಯಾವ ಗಂಡಸಿನ ಮುಂದಾದರೂ ಹೋಗಿ ನಿಲ್ಲುತ್ತಾಳೆಂಬುದು ಅಸಾಧ್ಯ ಮಾತು. ಅವಳ ಅಭಿರುಚಿ, ಆಯ್ಕೆಗಳಲ್ಲೂ ವ್ಯತ್ಯಾಸ ತಲೆದೋರಿದೆ. ತಾನು ಬಯಸುವ ಉದ್ಯೋಗ, ತಾನು ಬಯಸುವ ಜೀವನ ಸಂಗಾತಿಯನ್ನು ಖುದ್ದಾಗಿ ಆರಿಸಿಕೊಳ್ಳುತ್ತಾಳೆ. ಅನ್ನ ಮತ್ತು ಸೆಕ್ಸ್‌ನಷ್ಟೇ ಮನಸ್ಸು ಮಹತ್ವಪೂರ್ಣ ಅಗತ್ಯದ ಅಂಶವಾಗಿದೆ. ಮೊದಲಿನ ಎರಡು ವಿಚಾರಗಳಿಗೆ ಸಂಬಂಧಿಸಿದಂತೆ ಈಗ ಸಾಕಷ್ಟು ಸ್ವತಂತ್ರಳಾಗಿದ್ದಾಳೆ, ಅವುಗಳನ್ನು ಗಳಿಸಿಕೊಂಡೂ ಇದ್ದಾಳೆ."

"ನೀನು ಹೇಳುತ್ತಿರುವ ಮಾತುಗಳು ಒಂದು ವಿಶಿಷ್ಟ ವರ್ಗದ ಸ್ತ್ರೀಯರಿಗೆ ಸಂಬಂಧಿಸಿದ್ದು, ಶಾಲ್ಮಲಿ. ಈ ದೇಶದಲ್ಲಿ......"

"ಸಮಸ್ಯೆಯನ್ನು ವರ್ಗಗಳಲ್ಲಿ ಹಂಚಬೇಡ ಸರೋಜ್. ಪ್ರತಿಯೊಬ್ಬ ಮನುಷ್ಯನ ಅವಶ್ಯಕತೆಗಳು ಬೇರೆ ಬೇರೆಯಾಗಿರುತ್ತವೆ. ನಾವು ಸ್ಥೂಲವಾಗಿ ಕೆಲವು ವಿಚಾರಗಳ ಬಗ್ಗೆ ಮಾತಾಡ್ತಿದ್ದೀವಿ. ಆದರೆ ಅದೇ ವ್ಯಾಪಕವಾಗಿ ಮಾನವನ ಅಗತ್ಯಗಳು, ಮಾನವ ಸ್ವಾತಂತ್ರ್ಯ ಇತ್ಯಾದಿಗಳಿಗೂ ಸಂಬಂಧಿಸಿವೆ."

"ಅದೇನೋ ಸರಿ. ನೀನೂ ಕೂಡಾ ಅದೇ ವಿಚಾರದ ಒಂದು ಭಾಗವಾಗಿದ್ದೀ"

"ಖಂಡಿತಾ!"

"ಮುಂದೆ ಏನು ಮಾಡಬೇಕೂಂತಿದ್ದೀಯ?"

"ಏನೂ ಇಲ್ಲ"

"ನರೇಶ್ ನನ್ನ ಗಂಡ"

"ಗಂಡ ಅಲ್ಲ. ಅತಿಥಿ."

"ಇದೇನ್ಮಾತು?"

"ನನಗೆ ಗಂಡ ಜೊತೆಗಿದ್ದಾನೆ ಅಂತ ಅನ್ನಿಸುತ್ತಿಲ್ಲ. ಗಂಡನ ಜೊತೆ ಇದ್ದೀನಿ ಅನ್ನುವ ಭಾವನೆಗಿಂತ ಅತಿಥಿ ಜೊತೆ ಇದ್ದೀನಿಂತಲೆ ನನಗೆ. ಅತಿಥಿಗಳು ನಮ್ಮ ಸಮಾಜದಲ್ಲಿ ಭಗವಂತನ ಸ್ವರೂಪ. ರಾಜನಾಗಿದ್ದೂ ಶ್ರೀಕೃಷ್ಣ ಸುದಾಮನ ಪಾದಗಳನ್ನು ತೊಳೆದಿರಲಿಲ್ಲವೇ? ಮನಸ್ಸನ್ನು ಕೊಂದು ಕೊಂಡಾದರೂ ಅವನಿಗೆ ಅತಿಥಿ ಸತ್ಕಾರ ಮಾಡಲೇಬೇಕಾಗಿದೆ, ತನ್ನ ಮನೆಯ ಸ್ಥಿತಿಯನ್ನು ಮುಚ್ಚಿಟ್ಟಾದರೂ ಸತ್ಕಾರ ಮಾಡುವುದೇ ನಮ್ಮ ಧರ್ಮ. ಇನ್ನು ಸೇವೆ, ಸತ್ಕಾರಗಳು ಧರ್ಮ ಅಂತ ಆದ ಮೇಲೆ ಅದಕ್ಕೆ ಬೆನ್ನು ಕೊಡುವುದೇಕೆ?"

"ಓಹ್ ಶಾಲ್ಮಲಿ ಈ ಸ್ಥಿತೀಲೂ ತಮಾಶೆ ಮಾಡೋದು ಬಿಡೋದಿಲ್ಲ?"

"ಸರೋಜ್ ಒಮ್ಮೆಲೇ ಗಹಗಹಿಸಿ ನಕ್ಕಳು. "ಅಯ್ಯೋ". ನಾನು ಅಂದುಕೊಂಡೆ, ನನ್ನ ಸ್ಥಿತೀನ ನೋಡಿ ನೀನು ಅಳುತ್ತೀ ಅಂತ" ಶಾಲ್ಮಲಿಯೂ ಕಿಲಕಿಲ ನಕ್ಕಳು.

"ನಿನ್ನನ್ನು ನೋಡಿದರೆ...... ಸರೋಜ್ ನಗುವ ಹುಚ್ಚು ಹಿಡಿದ ಹಾಗಿತ್ತು. ಮಾತು ಅರ್ಧಕ್ಕೆ ನಿಂತಿತು. ಶಾಲ್ಮಲಿಯೂ ನಗುತ್ತಾ ಬೇಲಾಳನ್ನು ಕರೆದು ಊಟಕ್ಕೆ ರೆಡಿಮಾಡುವಂತೆ ಹೇಳಲು ಅಲ್ಲಿಂದ ಎದ್ದಳು.

ನರೇಶ್ ಮನೆಗೆ ಹಿಂತಿರುಗಿದ್ದ ಸರೋಜ್ ಬಂದಿದ್ದನ್ನು ನೋಡಿ ರೂಂಗೆ ಬಂದು ಔಪಚಾರಿಕವಾಗಿ ಒಂದೆರಡು ಮಾತಾಡಿ ಮತ್ತೆ ಬೆಡ್‌ರೂಂ ಕಡೆಗೆ ನಡೆದ. ಮನೆಯ ವಾತಾವರಣದಲ್ಲಿನ ಬಿಗಿ ಸಡಿಲಿತ್ತು. ಸರೋಜ್ ಶಾಲ್ಮಲಿ ಇಬ್ಬರೂ ಮುಕ್ತವಾಗಿ

ಮನಬಿಚ್ಚಿ ಅದೂ ಇದೂ ಮಾತಾಡುತ್ತಾ ನಗುತ್ತಿದ್ದರು. ಒಳ್ಳೆ ಸಂತೋಷದಲ್ಲಿ ಇದ್ದರು. ಶಾಲ್ಮಲಿ ಮ್ಯೂಸಿಕ್ ಆನ್ ಮಾಡಿದ್ದಳು. ಊಟ ಬಡಿಸಿ ಆಗಿತ್ತು. ನರೇಶ್ ಸ್ನಾನಮಾಡಿ ಊಟದ ಜಾಗದಲ್ಲಿ ಯಾರಾದರೂ ಬೇರೆ ಹೆಂಗಸು ಇದ್ದಿದ್ದರೆ ಶ್ರೀಯುತರಿಗೆ ದೊಣ್ಣೆ ಹಿಡಿದು ಪಾಠ ಕಲಿಸುತ್ತಿದ್ದಳು. ನರೇಶ್ ಭಾಗ್ಯವಂತ ಶಾಲ್ಮಲಿಯಂತಹ ಹೆಂಡತಿ ಸಿಕ್ಕಿದ್ದಾಳೆ. ಎಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳುವ ಸುಶಿಕ್ಷಿತ, ಗಂಭೀರ ಪ್ರವೃತ್ತಿಯ ಸಹಚರಿ ಅವನ ಪಾಲಿಗೆ ಸಿಕ್ಕಿರುವುದು ನಿಜವಾಗಿಯೂ ಪುಣ್ಯ ಮಾಡಿರಬೇಕು. ಅವನ ಜಾಗದಲ್ಲಿ ಬೇರೆ ಯಾವ ಗಂಡಸಾದರೂ ಇದ್ದಿದ್ದರೆ ಅವಳ ಕಾಲು ತೊಳೆದು ತೀರ್ಥ ತೆಗೆದುಕೊಳ್ಳುತ್ತಿದ್ದರು. ಆದರೆ ಈ ಮನುಷ್ಯ ಅವಳ ಕರುಣೆ, ದಯೆ ಏನನ್ನೂ ಅರ್ಥಮಾಡಿಕೊಳ್ಳದೆ ಅವಳನ್ನು ಹುರಿದು ತಿನ್ನುತ್ತಾನೆ. ಅವಳು ಅಷ್ಟೆಲ್ಲಾ ಮಾಡಿದರೆ ಇವನು ಮಹಾರಾಜನ ಹಾಗೆ ಮಜಾ ಮಾಡ್ತಾನೆ. ಅದು ಹೇಗೆ ಇವನಿಗೆ ಅನ್ನ ಗಂಟಲಲ್ಲಿ ಇಳಿಯುತ್ತೆ?

ಸರೋಜ್ ಹೀಗೆ ಯೋಚನೆ ಮಾಡುತ್ತಲೇ ಮೇಲು ನೋಟಕ್ಕೆ ನರೇಶನ ಜೊತೆ ತಮಾಶೆಯಾಗಿ ಮಾತನಾಡುತ್ತ ನಗುತ್ತಾ ನಗಿಸುತ್ತಾ ಇದ್ದಳು. ಈ ಕ್ಷಣದಲ್ಲಿ ಕಾಣಿಸುತ್ತಿದ್ದ ದೃಶ್ಯ ನೋಡಿದರೆ ಯಾರಿಗೂ ಒಳಗೆ ಏನಾಗಿರಬಹುದೆಂಬ ಕಲ್ಪನೆ ಬರಲು ಸಾಧ್ಯವೇ ಇರಲಿಲ್ಲ.

ಸರೋಜ್‌ಗೆ ಪ್ರಶ್ನಿಸೋದು ಗೊತ್ತು ಅರ್ಥಮಾಡಿಕೊಳ್ಳೋದಲ್ಲ! ನನಗೂ ಏನು ಗೊತ್ತಿತ್ತು? ಸಂಬಂಧಗಳ ವ್ಯವಹಾರ ಶುರು ಆದಾಗ ನನಗೆ ಅರ್ಥವಾಯಿತು. ನರೇಶ್ ನನ್ನನ್ನು ಮಸೂರಿಗೆ ಹೋಗಲು ಬಿಡದೆ ಇದ್ದಿದ್ದರೆ, ಇವತ್ತು ಇಷ್ಟೊಂದು ವ್ಯವಸ್ಥಿತವಾಗಿ ತನ್ನೊಂದಿಗೆ, ಇತರರೊಂದಿಗೆ ಕಾದಾಡಲು ಸಾಧ್ಯವಾಗುತ್ತಿತ್ತೇ? ಆಗ ನರೇಶ ಬೇರೆಯೇ ನರೇಶ್ ಆಗಿದ್ದ. ಆ ನರೇಶನ ಸಂಬಂಧವೇ ನನಗೆ ಪದೇ ಪದೇ ನೆನಪಾಗುತ್ತದೆ. ಆ ಕಾರಣಕ್ಕಾಗಿಯೇ ನಾನು ನರೇಶನನ್ನು ಪಡೆದಂತೆ ಭಾವಿಸುತ್ತೇನೆ. ಅವನು ಅಂದು ಮಾಡಿದ ಉಪಕಾರ ಸ್ಮರಣೆಯೇ. ಮುರಿದು ಬೀಳುವ ಸಂಬಂಧಗಳನ್ನು ಮತ್ತೆ ಮತ್ತೆ ಜೋಡಿಸಿಕೊಳ್ಳುವುದಕ್ಕೆ ಪ್ರಚೋದನೆ ನೀಡುತ್ತದೆ. ಇದನ್ನು ನಾನು ನನ್ನ ದೌರ್ಬಲ್ಯ ಎಂದು ಭಾವಿಸುವುದಿಲ್ಲ. ಬದಲಾಗಿ ಅದೇ ನನಗೆ ಶಕ್ತಿಯನ್ನು ನೀಡುತ್ತದೆ ಎಂದುಕೊಳ್ಳುತ್ತೇನೆ. ಎಲ್ಲವನ್ನು ಕಳೆದುಕೊಂಡೂ ಇನ್ನೂ ಮನುಷ್ಯಳಾಗಿಯೇ ಉಳಿದಿರುವುದು ನೆನಪಿಸುತ್ತಿರುತ್ತದೆ.

'ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುತ್ತೇನೆ – ನನ್ನದೂಂತ ಈ ಮನೆಯಲ್ಲಿ ಏನಾದರೂ ಇದ್ದಿದ್ದರೆ ಒಬ್ಬ ಹುಚ್ಚು ಹೆಂಗಸಿನ ಹಾಗೆ ಮೋಹದ ಮೂಟೆಯನ್ನು ಅಪ್ಪಿಕೊಂಡು ದಾರೀಲಿ ಹೀಗೆ ಕುಳಿತುಕೊಳ್ಳುತ್ತಿರಲಿಲ್ಲ. ಒಂದು ವೇಳೆ ಮೂಟೆ ಒಳಗಿನದು ಬರೀ ಚಿಂದಿ. ಉಡುವುದಕ್ಕಾಗಲೀ ಹೊದ್ದುಕೊಳ್ಳುವುದಕ್ಕಾಗಲೀ ಪ್ರಯೋಜನಕ್ಕೆ ಬರುವುದಿಲ್ಲಂತ ಗೊತ್ತಾದರೂ ಸಂಬಂಧದ ಬಗೆಗಿನ ಮೋಹ ಹುಚ್ಚಿನ ಸ್ಥಿತಿಯಲ್ಲೂ ಹಾಗೇ

ಉಳಿದಿರುತ್ತದೆ. ನನ್ನೆಲ್ಲ ನೋವು ವ್ಯಾಕುಲತೆಗಳಿದ್ದಾಗಲೂ ಉತ್ಕಟದಾಹದಿಂದ ದಣಿದ ಬೇರುಗಳನ್ನು ಯಾವ ನೆಲದಲ್ಲಿಯೂ ಊರಲಾಗದೆ ಹೋದೆ.

ರಸ್ತೆಯಲ್ಲಿ ಜೊತೆ ಜೊತೆಯಾಗಿ ಹೋಗುವ ದಂಪತಿಗಳನ್ನು ನೋಡಿದಾಗ, ಇವರೂ ಸುಖವಾಗಿಲ್ಲ. ಮೇಲೆ ತೋರಿಸಿಕೊಳ್ಳುವುದಕ್ಕಷ್ಟೇ ಸಂತೋಷದಿಂದ ಇದ್ದಾರೆ' ಅನಿಸುತ್ತಿತ್ತು. ಈ ಹೆಂಗಸಿನ ಗಂಡ ಕೂಡಾ ಬೇರೆಲ್ಲಿಗೂ ತನಗೆ ಬೇಕಾದ ಖುಷಿ ಹುಡುಕಿಕೊಂಡು ಹೋಗುತ್ತಿರಬೇಕು. ತಾನು ಮಾಡುವ ಈ ಕೆಲಸವನ್ನು ತಾತ್ವಿಕ ದೃಷ್ಟಿಯಿಂದ ಸಮರ್ಥಿಸಿಕೊಳ್ಳುತ್ತಿರಬಹುದು. ಇದು ಮಾಡುವುದರಿಂದ ಏನು ಸಿಗುತ್ತೆ? ಯಾವುದಾದರೂ ಬೇರೆತರದ ಸುಖದ ಅನುಭೂತಿ ಲಭಿಸುತ್ತದೆಯೇ?

ಶಾಲ್ಮಲಿ ಬಾಯಿಬಿಟ್ಟು ಏನನ್ನೂ ಹೇಳದಿದ್ದರೂ, ಮನಸ್ಸಿನ ಕಹಿ ಭಾವನೆಗಳೆಲ್ಲ ಮುಖದ ಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದವು. ಅವಳ ನಂಬಿಕೆ, ಸಂತುಲಿತ ವ್ಯವಹಾರ, ನಡವಳಿಕೆ, ಭಯ ಮಿಶ್ರಿತ ಅಪನಂಬಿಕೆಯಾಗಿ ಮಾರ್ಪಟ್ಟಿತು. ಅವಳಿಗೆ ಅನಿಸತೊಡಗಿತ್ತು. ಮೇಲೆ ಕಾಣುವುದೆಲ್ಲ ಒಳಗೆ ಇರುವುದಕ್ಕಿಂತ ಬೇರೆಯೇ! – ಎಂದು. ಅವಳ ಕೆಲಸ ಕಾರ್ಯಗಳಲ್ಲಿ ಅವಳ ದ್ವಂದ್ವ ಸ್ಥಿತಿ ಸ್ಪಷ್ಟವಾಗಿ ಗೋಚರಿಸತೊಡಗಿತು. ಯಾವುದನ್ನು ಕ್ಷಣ ಮಾತ್ರದಲ್ಲಿ ನಿರ್ಧರಿಸುತ್ತಿದ್ದಳೋ ಅದನ್ನು ಈಗ ವಾರಗಟ್ಟಲೆ ಮುಂದೂಡುತ್ತಿದ್ದಳು. ಮೀಟಿಂಗುಗಳಲ್ಲೂ ಮೊದಲಿನ ಉತ್ಸಾಹ ಉಳಿಯಲಿಲ್ಲ. ಅನ್ಯಮನಸ್ಕತೆಯಿಂದ ಅಸಂಬದ್ಧ ಪ್ರಶ್ನೆಗಳನ್ನು ಎತ್ತುತ್ತಿದ್ದಳು. ತನ್ನ ಕೈ ಕೆಳಗಿನವರ ಜೊತೆಗೂ ಮೊದಲಿನ ಹಾಗೆ ಮುಕ್ತವಾಗಿ ಬೆರೆಯುತ್ತಿರಲಿಲ್ಲ. ಅವಳ ರೀತಿ ಎಲ್ಲರಿಗೂ ಆಶ್ಚರ್ಯವೆನಿಸಿತ್ತು. ಆದರೂ ಕೇಳುವುದಕ್ಕೆ ಡೈರೆಕ್ಟರ್ ಅನ್ನುವ ಭಯ.

ಎಲ್ಲರಿಗಿಂತ ಹೆಚ್ಚಿಗೆ ಜಗದೀಶ್‌ಗೆ ಚಿಂತೆಗಿಟ್ಟುಕೊಂಡಿತು. ಎರಡೂ ಕಡೆ ಜವಾಬು ಕೊಡಬೇಕಾಗಿದ್ದವನು ಅವನು. ಒಂದು ದಿವಸ ಧೈರ್ಯ ಮಾಡಿ ಕೇಳಿಯೇ ಬಿಟ್ಟ. "ಮೇಡಂ, ಮೊದಲು ನೀವು ಈ ಕಂಪನಿಗೆ ಆರ್ಡರ್ ಕೊಟಿದ್ದಿರಿ ಆದರೆ ಈಗ ಈ ಎರಡನೇ ಲೆಟರ್........?"

"ಇಷ್ಟು ದೊಡ್ಡ ಆರ್ಡರ್ ಕೊಡುವಾಗ ಎಲ್ಲ ಸರಿಯಾಗಿ ಯೋಚನೆ ಮಾಡಬೇಕು. ಆತುರದಲ್ಲಿ ಏನಾದರೂ ನಿರ್ಣಯ ತೆಗೆದುಕೊಂಡರೆ ಅನಾಹುತ ಆಗುತ್ತೆ." ಶಾಲ್ಮಲಿ ಪುಟ ತಿರುವುತ್ತಾ ಹೇಳಿದಳು. "ಅದು ಹೇಗೆ ಮೇಡಂ? ಎಲ್ಲ ಕೊಟೇಶನ್. ಬೆಲೆ, ರಿಯಾಯಿತು ಪ್ರಿಂಟ್ ಮಾಡಿರೋದೆ ತಮ್ಮ ಹತ್ತಿರ ಕಳಿಸಿದ್ದೇವೆ. ಮಾರ್ಕೆಟ್‌ನಲ್ಲಿ ಇದರ ಬಗ್ಗೆ ಎಷ್ಟು ಒಳ್ಳೆ ಅಭಿಪ್ರಾಯ ಇದೆ ಅನ್ನೋದು ಎಲ್ಲರಿಗೂ ಗೊತ್ತು." ಜಗದೀಶ್ ಆಶ್ಚರ್ಯದಿಂದ ಹೇಳಿದ.

"ಆದರೂ ಸ್ವಲ್ಪ ಎಚ್ಚರಿಕೆಯಿಂದ ಇದ್ದರೆ ಬರೋ ನಷ್ಟ ಏನು?" ಶಾಲ್ಮಲಿ ಹೇಳಿದಳು.

"ಅದೇ ಮೇಡಂ. ಮೊದಲು ಮೊದಲು ಈ ರೀತಿ ಉದ್ದುದ್ದ ಮಾತಾಡೋದು, ಉದ್ದುದ್ದ ಪತ್ರ ಬರೆಯೋದೂಂದ್ರೆ 'ಹಿಂಜರಿಯುತ್ತಿದ್ದಿರಿ ಆದರೆ ಈಗ......ಅದಕ್ಕೆ ಕೇಳಿದ್ದು," ಜಗದೀಶ್ ಸ್ವಲ್ಪ ಸಂಕೋಚದಿಂದ ನಿಧಾನವಾಗಿ ಹೇಳುತ್ತಾ ಫೈಲುಗಳನ್ನು ಎತ್ತಿಕೊಂಡು ಹೊರಗೆ ನಡೆದ.

ಅವನ ಮೆಲ್ಲನೆಯ ಧ್ವನಿಯೂ ಕೂಡಾ ರೈಲುಗಾಡಿಯ ಸಿಳ್ಳು ಕರೆಯುತ ಗಾಭರಿಗೊಳಿಸಿತು. ಕಿವಿಗಡಚಿಕ್ಕಿದಂತೆನಿಸಿತು. ಹಣೆಮೇಲೆ ತುಟಿಗಳ ಮೇಲೆ ಬೆವರಿನ ಹನಿಗಳು ಕಾಣಿಸಿಕೊಂಡವು. ಅವಾಕ್ಕಾಗಿ ಕುಳಿತವಳು ಕುಳಿತಂತೇ ಇದ್ದಳು!

ಜೀವನದ ಒಂದು ಅನುಭವ ಅವಳನ್ನು ಎಲ್ಲಿಂದ ಎಲ್ಲಿಗೆ ಕೊಂಡೊಯ್ದಿದೆ. ಅವಳ ನಂಬಿಕೆ, ಭರವಸೆಗಳು ಸಂದೇಹದ ಕುರುಡು ದಾರಿಗಳಲ್ಲಿ ಕಳೆದು ಹೋದವು?

ಹಲವಾರು ದಿನಗಳಿಂದ ಶಾಲ್ಮಲಿ ಯೋಚಿಸುತ್ತಲೇ ಇದ್ದಳು. ತನ್ನನ್ನು ವಿಶ್ಲೇಷಿಸುತ್ತಾ ತೂಗುತ್ತಾ, ಬೆಲೆಕಟ್ಟುತ್ತಾ ಕಡೆಗೆ ಒಂದು ನಿರ್ಣಯದ ನೆಲೆಗೆ ಬಂದಳು. ಜೀವನದಲ್ಲಿನ ಈ ಹತ್ತು ಹನ್ನೊಂದು ವರ್ಷಗಳ ಸಂತಾಪವನ್ನು ಮಹತ್ವದ ಸಮಸ್ಯೆಯನ್ನಾಗಿ ಮಾಡದೆ, ಅದರ ಬಗ್ಗೆ ನಿರ್ಲಿಪ್ತಳಾಗಬೇಕು. ಅದರಲ್ಲಿಯೇ ಅವಳ ಕ್ಷೇಮವಿದೆ. ಇಲ್ಲವಾದಲ್ಲಿ ಇಲ್ಲಿಯವರೆಗೆ ಕಾಯ್ದಿಟ್ಟುಕೊಂಡು ಬಂದ ಅವಳ ವ್ಯಕ್ತಿತ್ವದ ಸಮಗ್ರತೆ ತುಂಡು ತುಂಡಾಗಿ ಹೋಗುತ್ತದೆ. ದೃಢ ವ್ಯಕ್ತಿತ್ವ ಚಂಚಲತೆಯಿಂದಾಗಿ ಪರಿವರ್ತನೆಗೊಂಡು ತನ್ನ ಗುರಿಯನ್ನೇ ಕಳೆದುಕೊಳ್ಳುತ್ತದೆ.

ಪ್ರತಿಯೊಂದು ಸಮಸ್ಯೆಯೂ ಯಾವುದೋ ಒಂದು ವಿಶಿಷ್ಟ ಪರಿಸ್ಥಿತಿ, ಸನ್ನಿವೇಶಗಳ ಮಧ್ಯದಿಂದ ಉದ್ಭವಿಸುತ್ತದೆ. ಹಾಗೆಯೇ ಅಂಥಾದ್ದರಲ್ಲಿ ತಾನೇಕೆ ಹೀಗೆ ಅಸ್ವಸ್ಥಳಾಗಬೇಕು. ಸುಮ್ಮನೆ ಚಿಂತೆ ಮಾಡುವುದರಿಂದ ತಾನು ಕೆಡಬೇಕಾಗುತ್ತೆ. ತಾನು ಕೆಡುವುದರಿಂದ ತನಗೆ ತಿಳಿದೋ ತಿಳಿಯದೆಯೋ ಬೇರೆಯವರ ಮೇಲೂ ಪ್ರಭಾವ ಆಗುತ್ತೆ..... ಉಫ್!

ಆದ್ದರಿಂದ ಅವಳು ತನ್ನನ್ನು ಎಚ್ಚರಿಕೆಯಿಂದ ಸಾವರಿಸಿಕೊಂಡಳು. ಎಂದಿಗೂ ಸಂಕುಚಿತ ದೃಷ್ಟಿಗೆ ಎಡೆಕೊಡುವುದಿಲ್ಲ. ಮನಸ್ಸಿನ ನಿಶ್ಚಲತೆಯನ್ನು ಬಿಟ್ಟು ಕೊಡುವುದಿಲ್ಲ. ಕೆಲವು ನಿರ್ಣಯಗಳು ಜೀವನದಲ್ಲಿ ಮಹತ್ವಪೂರ್ಣವೆನಿಸುತ್ತವೆ. ಆದರೆ ನಂತರ ಅವು ಯಾಕೋ ಅಪೂರ್ಣವೆನಿಸತೊಡಗುತ್ತವೆ.

ಮನಸ್ಸು ಒಂದು ನಿಶ್ಚಿತ ನೆಲೆಗೆ ತಲುಪಿದಾಗ ಅವಳ ಮನಸ್ಸು ಸಂತೋಷದಿಂದ ಕೆನೆಯ ತೊಡಗಿತು.

ಕೆಲವು ದಿನಗಳಿಂದೀಚೆಗೆ ನರೇಶ್ ಆಫೀಸಿನಿಂದ ಬಂದವನು ಹೆಚ್ಚು ಕಡಿಮೆ ಮನೆಯಲ್ಲಿಯೇ ಇರುತ್ತಿದ್ದ ಕ್ಲಬ್‌ಗೆ ಹೋಗುವುದನ್ನು ಬಿಟ್ಟರಲಿಲ್ಲ. ಆದರೆ ಮೊದಲಿಗಿಂತ

ಕಡಿಮೆ ಮಾಡಿದ್ದ. ಗೆಳೆಯರ ಗುಂಪೂ ಅಪರೂಪಕ್ಕೆ ಎಂದಾದರೂ ಒಮ್ಮೆ ಸೇರುತ್ತಿತ್ತು. ಶಾಲ್ಮಲಿ ಇಲ್ಲದಿದ್ದಾಗ ನರೇಶ್ ಯಾರನ್ನೋ ಕರೆದು ತಂದಿದ್ದ ಸುದ್ದಿ ಬೇಲಾ ಕೊಡಲಿಲ್ಲ. ಅವನು ಅವಳನ್ನು ಭೇಟಿಯಾಗುತ್ತಿದ್ದಾನೋ ಇಲ್ಲವೋ ಅದೂ ಗೊತ್ತಿಲ್ಲ. ನರೇಶ್ ಮಾತಾಡುತ್ತಿರಲಿಲ್ಲ. ಶಾಲ್ಮಲಿ ಛೇಡಿಸುತ್ತಿರಲಿಲ್ಲ. ಇಬ್ಬರೂ ಅವರವರಿಗೆ ತೋಚಿದ ರೀತಿಯಲ್ಲಿ ಬದುಕುತ್ತಿದ್ದರು. ಇಬ್ಬರ ನಡುವೆಯೂ ಒಮ್ಮೊಮ್ಮೆ ಕವಿದಿರುತ್ತಿದ್ದ ನೀರವತೆಯನ್ನು ನೋಡಿದಾಗ, ಮತ್ತೆ ಶಾಲ್ಮಲಿ ಯೋಚನೆಗಳ ತೆಕ್ಕೆಗೆ ಬೀಳುತ್ತಿದ್ದಳು.

'ಇವತ್ತಿನ ಸಂದರ್ಭದಲ್ಲಿ ಕೇಳಿದ ಪ್ರಶ್ನೆಗೆ ನರೇಶನಿಂದ ಉತ್ತರ ಸಿಗುವ ಹೊತ್ತಿಗೆ ಪ್ರಶ್ನೆ ಪ್ರಶ್ನೆಯಾಗಿ ಉಳಿದಿರುವುದೇ? ಉಳಿದಿದ್ದರೆ ಅದರ ಜೊತೆಗೆ ಇನ್ನಷ್ಟು ಪ್ರಶ್ನೆಗಳು ಸೇರಿಕೊಳ್ಳುತ್ತವೆ? ಅವುಗಳಿಗೆ ಸಮಾಧಾನ ಕೇಳಿಸಿಕೊಳ್ಳುವ ಮನಸ್ಸು ಇರುತ್ತದೆನ್ನುವುದೂ ಅನುಮಾನವೇ ಸುದೀರ್ಘ ಜೀವನಯಾತ್ರೆಯಲ್ಲಿ! ಎಂದೆಂದೋ ಲಭಿಸುವ ಅನುಭವಗಳೇ ಪ್ರಶ್ನೆಗಳಿಗೆ ಸ್ವತಃ ಉತ್ತರಗಳಾಗಬಹುದು.

ಕ್ರಮೇಣ ಶಾಲ್ಮಲಿಯ ಬೇಸರ, ನಿರುತ್ಸಾಹಗಳು ಹಣ್ಣೆಲೆಗಳಂತೆ ಉದುರಿದವು. ಅಂತರಂಗದಾಳದಲ್ಲಿ ಹುದುಗಿದ್ದ ಜೀವನೋತ್ಸಾಹ ಮತ್ತೊಮ್ಮೆ ಚಿಗುರುವ ಆತುರದಲ್ಲಿತ್ತು. ಪ್ರಕೃತಿಯಲ್ಲಿ ಸ್ವಾಭಾವಿಕವಾದ ನಿಯಮಗಳಲ್ಲಿ ಆಗುವ ಪರಿವರ್ತನೆ ಹೇಗೆ, ಎಲ್ಲಿ ಎಂಬುದು ಋತುವಿನ ಆಗಮನದಿಂದ ಮಾತ್ರವೇ ನಿರ್ಧರಿತವಾಗುತ್ತದೆ. ಅಲ್ಲಿ ಯಾರ ಹಸ್ತಕ್ಷೇಪವೂ ಇಲ್ಲ. ಈ ನಿಸರ್ಗ ನಿಯಮದ ನಿಗೂಢತೆಯನ್ನು ಅರಿತಿದ್ದ ಶಾಲ್ಮಲಿ ತನ್ನ ಮನಃಸ್ಥಿತಿಯನ್ನು ಈ ನಿಯಮಕ್ಕೆ ಒಪ್ಪಿಸಿಬಿಟ್ಟಳು. ತನ್ನ ಬದುಕು, ತನ್ನದು ನಿಜ. ಆದರೆ ಬದುಕ ಬೇಕಾಗಿರುವುದು ಇತರರ ಜೊತೆಯಾಗಿ, ಏಕಾಕಿಯಾಗಿ ಈ ಜೀವನದಲ್ಲಿ ಮಾಡುವುದೇನಿದೆ? ಜೀವನವೆನ್ನುವುದು ತೆರೆದ ಬೀದಿಯಲ್ಲ, ರಸ್ತೆಯಲ್ಲ ಸುಲಭವಾಗಿ ದಾಟಿ ಬಿಡುತ್ತೇನೆ, ಎಂದುಕೊಳ್ಳುವುದಕ್ಕೆ.

ಬೇರೆ ಬೇರೆ ಕಾರ್ಯ ಕ್ಷೇತ್ರಗಳಲ್ಲಿ ಕೆಲಸ ಮಾಡಬೇಕಾದ ಅವಕಾಶಗಳು ಸಿಕ್ಕಾಗ, ಎಲ್ಲೆಲ್ಲೂ, ಪ್ರತಿ ಜಾಗದಲ್ಲೂ ಅವಳ ಕಣ್ಣಿಗೆ ಬೀಳುತ್ತಿದ್ದುದು ಒಂದೇ...... ಶೋಷಣೆ, ಅತ್ಯಾಚಾರ, ಮೋಸ, ವಂಚನೆ, ದ್ರೋಹ, ಕಡಿದು ಬೀಳುವ ಸಂಬಂಧಗಳು ಇವೇ! ಪ್ರತಿಯೊಂದೆಡೆಯೂ ಸ್ಪರ್ಧೆ, ಓಟ, ಅಸಂತೋಷಗಳೇ ವ್ಯಾಪಿಸಿವೆ. ಇದೆಲ್ಲದರ ಮೂಲದಲ್ಲಿ ಸಂಬಂಧಗಳ ಬಗೆಗಿನ ನಿಷ್ಠೆಯಲ್ಲಿನ ಕೊರತೆಯೇ ಎಂಬುದು ಶಾಲ್ಮಲಿಗೆ ವಿಚಾರ. ಎಲ್ಲರಲ್ಲೂ ವ್ಯಾಕುಲತೆ ಮಾಡಬಾರದ್ದನ್ನು ಮಾಡುವ ವಿವಶತೆ.

ಮತ್ತೊಮ್ಮೆ ಶಾಲ್ಮಲಿಯಲ್ಲಿ ಬಾಳುವ ಆಸೆ ಹೊತ್ತುಕೊಂಡಿತು. ಇದು ಅವಳಿಗೆ ಆಶ್ಚರ್ಯವನ್ನೂ ತರಲಿಲ್ಲ. ಭಯವನ್ನೂ ತರಲಿಲ್ಲ. ಆಗಬೇಕಾದ್ದು ಆಗಿಯೇ ಆಗುತ್ತೆ. ಋತುಗಳಲ್ಲಾಗುವ ಬದಲಾವಣೆಯ ರೀತಿ ಎಂದುಕೊಂಡಳು. ಚಿಗುರೆಲೆ ಚಿಗುರುತ್ತಿವೆ! ಹಣ್ಣೆಲೆ ಉದುರುತ್ತಿವೆ! ಅವುಗಳನ್ನು ಬೀಳ್ಕೊಟ್ಟು ಬರುವ ವಸಂತನನ್ನು ಬರಮಾಡಿಕೊಳ್ಳಬೇಕು. ನಾನು ಬೇಡವೆಂದರೂ ಪ್ರಕೃತಿ ತನ್ನ ಹನ್ನೊಂದು ವರ್ಷಗಳ

ಕಾಲಚಕ್ರದಿಂದ ಮುಕ್ತವಾಗುವುದೇ? ಋತುಗಳು ಬದಲಾದವು. ದಿನಗಳು ಸರಿದುವು; ಮರಗಳು ಹೂ ಬಿಟ್ಟವು; ಮಕ್ಕಳು ಹುಟ್ಟಿದುವು; ದೊಡ್ಡವರಾದರು. ಪ್ರಾಯ ಸವೆದು ಮುಪ್ಪು ಹೆಜ್ಜೆಯಿಟ್ಟಿತು..... ಪರಿವರ್ತನ ಚಕ್ರ ತಿರುಗುತ್ತಲೇ ಇತ್ತು. ಶಾಲ್ಮಲಿಯೂ ಗಡಿಯಾರದ ಮುಳ್ಳುಗಳ ಜೊತೆ ಬೆಳಗಿನಿಂದ ಸಂಜೆವರೆಗು ಯಂತ್ರದ ಹಾಗೆ ದುಡಿದು ದಣಿದು ಮನೆಗೆ ಹಿಂತಿರುಗುತ್ತಿದ್ದಳು.

ಮನೆ ಆಧುನಿಕ ಉಪಕರಣಗಳಿಂದ ಸುಸಜ್ಜಿತವಾಗಿದೆ. ಹೂಗಳಿಂದ ತುಂಬಿ ಪ್ರಶಾಂತವಾಗಿ ನಿರ್ಮಲವಾಗಿ ಇದೆ.

ತಾನು ಪಕ್ಷಿಯಲ್ಲ. ತನ್ನದೇ ಮೊಟ್ಟೆಗಳಿಂದ ಹೊರಟ ಮರಿಗಳನ್ನು ಮನುಷ್ಯ ಸ್ಪರ್ಷವಾದ ಕಾರಣ ಅವುಗಳನ್ನು ಬಿಟ್ಟು ಬಿಡುವಂತೆ ಮಾಡಲು! ಆದರೆ ತನ್ನ ಸ್ವಂತ ಮಗುವೇ ತನ್ನಿಂದ ಮುಖ ತಿರುಗಿಸಿದರೆ, ತಾನು ಏನು ಮಾಡಲು ಸಾಧ್ಯ?"

ಮನೆಯಲ್ಲಿ ಒಬ್ಬಳೇ ಮೌನವಾಗಿ ಅಡ್ಡಾಡುತ್ತಾಳೆ. ಒಂದೊಂದು ವಸ್ತುವನ್ನೂ ದಿಟ್ಟಿಸುತ್ತಾಳೆ. ಒಂದೊಂದು ಕೋಣೆಯನ್ನೂ ಹೊಕ್ಕು ಬರುತ್ತಾಳೆ. ನೀಳವಾದ ಉಸಿರೆಳೆದು ಅಸ್ಪಷ್ಟ ದನಿಯಲ್ಲಿ ಹೇಳಿಕೊಳ್ಳುತ್ತಾಳೆ, "ಈ ಮನೆಯಲ್ಲಿ ನನ್ನ ಶ್ರಮದ ವಾಸನೆಯಿದೆ, ಆದರೆ ಮನುಷ್ಯರ ಗಂಧವೇ ಇಲ್ಲ."

ಎಷ್ಟೋ ವರ್ಷಗಳ ಮೇಲೆ ಎರಡನೇ ಬಾರಿಗೇ ಶಾಲ್ಮಲಿ ಮೊದಲ ವರ್ಷಗಳಲ್ಲಿ ಹೂ ಬಿಟ್ಟಂತೆ, ಹೂ ಬಿಟ್ಟು ಜಗಜಗಿಸಿತು; ಸಾಯಂಕಾಲ ಚಹ ಕುಡಿಯುತ್ತಾ ಒಮ್ಮೊಮ್ಮೆ ಅತ್ತ ಕಡೆ ನೋಡುತ್ತಾಳೆ. ಹೋದ ಸಲ ಶಾಲ್ಮಲಿಯ ರೇಷಿಮೆಯಿಂದ ಜೇಲಾ ತನ್ನ ಮಗನಿಗೆ ಹಾಸಿಗೆ ದಿಂಬುಗಳನ್ನು ಮಾಡಿಸಿದಳು. ಈ ಸಲವೂ ರೇಷಿಮೆ ಹತ್ತಿಗಾಗಿ ಕಾತರತೆಯಿಂದ ಕಾದಿದ್ದಾಳೆ. ಮಾಲಿಗೂ ಹೇಳಿದ್ದಾಳೆ. ಪ್ರತಿದಿನ ಅದರ ಕೆಳಗೆ ನಿಂತು ಅದರ ಕಾಯಿಗಳ ಬದಲಾಗುವ ಬಣ್ಣವನ್ನು ಅದು ಒಡೆಯುವುದನ್ನು ಕಾಯುತ್ತಾ ನಿಲ್ಲುತ್ತಿದ್ದಳು.

ಕೆಲವು ದಿನಗಳಿಂದ ಬಿಸಿಲು ಜಾಸ್ತಿಯಾಗಿದೆ. ಬೆಂಕಿ ಹಾಗೆ ಬಿಸಿಲು ಸುಡುತ್ತಿರುವಂತೆನಿಸುತ್ತದೆ. ಈ ದಿನ ರಜೆ. ಕೂಲರ್ ಅನ್ನು ಆನ್ ಮಾಡಿದಳು. ಆದರೂ ಸೆಕೆ ತಡೆಯಲಾಗಲಿಲ್ಲ. ಶಾಲ್ಮಲಿ ಎದ್ದು ಕಿಟಕಿ ಬಾಗಿಲು ತೆರೆದಳು.

ಹೊರಗಡೆ ವಿಪರೀತ ಬಿಸಿಲು. ಈ ಬಿಸಿಲಿನಲ್ಲಿಯೇ ಶಾಲ್ಮಲಿ ವೇಗವಾಗಿ ಹೊರ ನಡೆದು ವರಾಂಡದಲ್ಲಿ ಬಂದು ನಿಂತಳು. ಎದುರುಗಡೆ ಶಾಲ್ಮಲಿ ಮರ ಬೆಳ್ಳನೆಯ ಹತ್ತಿ ಉಂಡೆಗಳನ್ನು ಹೊರ ಚೆಲ್ಲಿದೆ. ಬಿಸಿಲಿನ ಝಳಕ್ಕೆ ಕಾಯಿಗಳು ಸಿಡಿಯುತ್ತಿವೆ. ಮೇಲೆ ಕೆಳಗೆ ಎಲ್ಲಾ ಕಡೆ ಮೆತ್ತನೆಯ ದುಂಡು ದುಂಡಾದ ಉದ್ದನೆಯ ಎಳೆಗಳಿಂದ ತುಂಬಿ ಹೋಗಿತ್ತು.

"ಜೇಲಾ"......... ಶಾಲ್ಮಲಿ ಜೋರಾಗಿ ಕೂಗಿದಳು.

ದೊಡ್ಡದಾಗಿ ಗಾಳಿ ಬೀಸಿ ಎದ್ದ ಧೂಳು ಶಾಲ್ಮಲಿಯ ಕಣ್ಣಲ್ಲಿ ಹೊಕ್ಕಿತು. ಸೆರಗಿನಿಂದ ಮುಖ ಒರೆಸಿಕೊಂಡು ಎದುರುಗಡೆ ನೋಡಿದಳು. ಬಿಳಿಯ ಉಂಡೆಗಳೆಲ್ಲವನ್ನೂ ಗಾಳಿ ಹಾರಿಸಿಕೊಂಡು ಎಲ್ಲಿ ಹೋಯಿತು?

"ಬೇಗ ಬಾಗಿಲು ಮುಚ್ಚು......... ಮನೆಯಲ್ಲಿ ಕಸ ತುಂಬಿದೆ."

ನರೇಶನ ಮಾತಿನ ಜೊತೆಗೆ ಬಾಗಿಲು ಮುಚ್ಚಿದ ಸದ್ದೂ ಕೇಳಿಸಿತು.

ಗಾಳಿಯ ವೇಗ ತೀವ್ರವಾಯಿತು. ಶಾಲ್ಮಲಿ ಒಳಗೆ ಹೋಗಿ ಬಾಗಿಲು ಮುಚ್ಚಿಕೊಂಡಳು. ಅರ್ಧಕ್ಕೆ ನಿಲ್ಲಿಸಿದ ಪುಸ್ತಕವನ್ನು ಮತ್ತೆ ಕೈಗೆತ್ತಿಕೊಂಡಳು. ಕ್ಷಣದಲ್ಲಿ ಎಲ್ಲವನ್ನೂ ಮರೆತು ಪುಸ್ತಕದಲ್ಲಿ ಮಗ್ನಳಾದಳು. ಓದುತ್ತಲೇ ಕೂದಲಲ್ಲಿ ಬೆರಳಾಡಿಸಿದಳು. ಏನೋ ಸಿಕ್ಕಂತಾಯಿತು. ತೆಗೆದು ನೋಡಿದಳು. ಶಾಲ್ಮಲಿಯ ಹತ್ತಿ ಅರಳೆಯಾಗಿತ್ತು. ಅದನ್ನು ಕೈಗೆ ತೆಗೆದುಕೊಂಡು ಆಲೋಚಿಸಿದಳು.

"ಇವತ್ತು ಬಿರುಗಾಳಿಯೆದ್ದು ಇವುಗಳನ್ನು ಎಲ್ಲೆಲ್ಲಿಗೆ ಕೊಂಡೊಯ್ಯಿತೊ! ಇವುಗಳ ಬೀಜ ಎಲ್ಲೆಲ್ಲಿ ಬಿದ್ದರೆ ಅಲ್ಲೆಲ್ಲ ಶಾಲ್ಮಲಿ ಮರಗಳು ಹುಟ್ಟುತ್ತವೆ. ಎಷ್ಟೊಂದು ಸರಳ! ಯಾವುದೇ ಸಂವಾದಗಳಿಲ್ಲ, ನಿರ್ಣಯ ನಿರ್ಧಾರಗಳಿಲ್ಲ. ಮನುಷ್ಯ ಮನುಷ್ಯರ ಸಂಬಂಧ, ಸಂವಾದಗಳಿಗೆ ಕೊನೆ ಎಲ್ಲಿ! ಆ ಹತ್ತಿಯ ತುಂಡನ್ನು ಪುಟಗಳ ನಡುವೆ ಇಟ್ಟು ಓದಿನಲ್ಲಿ ಮಗ್ನಳಾದಳು.

# ಬುವಿಯಿಂದ ಬಾನಿಗೆ

## ಮುನ್ನುಡಿ

'ಬುವಿಯಿಂದ ಬಾನಿಗೆ' – ಈ ಕಾದಂಬರಿಗೆ ನಿಜವಾದ ಇತಿಹಾಸವಿದೆ. ಪ್ರತ್ಯಕ್ಷವಾಗಿ ನಾನು ಕಂಡ ವಾಸ್ತವಗಳ ಜೊತೆಗೆ ನನ್ನ ಕಲ್ಪನೆಯ ಎಳೆಗಳನ್ನು ಸುತ್ತಿ ಆದಷ್ಟೂ ಕಲಾತ್ಮಕವಾಗಿಸಲು ಪ್ರಯತ್ನಿಸಿದ್ದೇನೆ. ವಿಚಾರವಾದಿ ಸಮುದಾಯಕ್ಕೆ ಇಲ್ಲಿನ ಕತೆ ತೀರಾ ಬೊಗಳೆ ಎನಿಸಬಹುದು. ಇಂತಹ ಅದ್ಭುತಗಳು ಹುಸಿ ಎನಿಸಬಹುದು. ನನ್ನ ನಂಬಿಕೆಯೂ ಅದೇ ಆಗಿದ್ದರೂ ಪ್ರತ್ಯಕ್ಷವಾಗಿ ನನ್ನ ಕಣ್ಣಮುಂದೆಯೇ ನಾನು ಕಂಡ ಪವಾಡ ಸದೃಶವಾದ ವ್ಯಕ್ತಿ, ಸಂಗತಿಗಳನ್ನು ಸಾರಾಸಗಟಾಗಿ ತಿರಸ್ಕರಿಸುವುದು ಸಾಧ್ಯವೇ ಇಲ್ಲವೆನಿಸಿತು. ಮನಸ್ಸಿನ ತುಂಬಾ ಅರ್ಥವಾಗದ ಗೊಂದಲಗಳು! ಬದುಕಿ ಇದ್ದಾಗ ತನ್ನ ಪಾಡಿಗೆ ತಾನಿದ್ದ. ಯಾರನ್ನೂ ಮೋಸಗೊಳಿಸಲಿಲ್ಲ. ಸಾಮಾನ್ಯ, ದೀನ ವ್ಯಕ್ತಿಯಂತೆ ಬದುಕಿ ಸಾವಿನಾನಂತರ ಜನರ ದೃಷ್ಟಿಯಲ್ಲಿ ದೇವರಾಗಿ ಕುಳಿತದ್ದಂತು ಸತ್ಯ. ಖುದ್ದಾಗಿ ಕಂಡು ಮಾತನಾಡಿಸಿ, ಉಣಬಡಿಸಿದ ನನಗೆ ಆ ವ್ಯಕ್ತಿಯ ಸುತ್ತ ಮಹಿಮೆಯ ದೈವತ್ವದ ಪ್ರಭಾವಳಿಯನ್ನು ಧಿಕ್ಕರಿಸಲಾರದೆ ಹೋದೆ. ಏಸು, ಬುದ್ಧ, ಬಾಬಾ, ವಿವೇಕಾನಂದ, ಪರಮಹಂಸರ ವಿಚಾರದಲ್ಲಿ ಇಂಥವೆಲ್ಲವೂ ಸತ್ಯವೆಂದು ಒಪ್ಪಿಕೊಂಡಿರುವಾಗ ಯಾರೋ ಅನಾಮಧೇಯ ಅನಾಥವ್ಯಕ್ತಿಯಾಗಿ ಒಂದು ಊರಿಗೆ ಬಂದು ನೆಲಸಿ ದೈವವಾದದ್ದನ್ನು ಏಕೆ ಪ್ರಶ್ನಿಸಬೇಕು? ಎಂಬ ಪ್ರಶ್ನೆ ನನ್ನೆದೆಯಲ್ಲಿ ಹೆಡೆ ಎತ್ತಿತ್ತು. ಈ ಸಂಬಂಧವಾಗಿ ನನ್ನ ಬುದ್ಧಿ ಮನಸ್ಸುಗಳನ್ನು ಕಲಕಿದ ತರ್ಕ, ಕುತೂಹಲ ಜಿಜ್ಞಾಸೆ, ಜೊತೆಗೆ ನನ್ನಲ್ಲಿ ಉಂಟಾದ ರೋಮಾಂಚಗಳು ಒಟ್ಟಿಗೆ ಸೇರಿ ಈ ಕಾದಂಬರಿಯ ಹುಟ್ಟಿಗೆ ದಾರಿಯಾಗಿದೆ. ಇದನ್ನು ಬರೆದು ಹತ್ತಾರು ವರ್ಷಗಳೇ ಆದರೂ ಪ್ರಕಾಶನದ ಬೆಳಕು ಕಾಣಲು ತಡವಾಯಿತು. ಆದರೆ ಹೇಮಂತ ಪ್ರಕಾಶನದ ಶ್ರೀ ವೆಂಕಟೇಶ್ ಅವರು ದೊಡ್ಡ ಮನಸ್ಸಿನಿಂದ ಈಗ ಪ್ರಕಟಿಸಲು ಮುಂದಾಗಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಇದರ ಉತ್ತಮವಾದ ಡಿಟಿಪಿ ಮಾಡಿಕೊಟ್ಟ ಶ್ರೀ ಅವಿನಾಶಿ ಅವರಿಗೂ ನನ್ನ ಕೃತಜ್ಞತೆಗಳು.

ಇಪ್ಪತ್ತೊಂದನೇ ಶತಮಾನ, ಹೊಸ ಸಹಸ್ರಮಾನ ಕಂಪ್ಯೂಟರ್ ಪರಿಸರಗಳಲ್ಲಿ ಬದುಕುತ್ತಿರುವ ನಮಗೆ, ಇಂದಿಗೂ ಇಂತಹ ನಂಬಿಕೆಗಳು, ಪವಾಡಗಳು

ಅಪರಿಚಿತವೇನೂ ಅಲ್ಲ. ಇವೆಲ್ಲವೂ ಇಂದಿಗೂ ಜೀವಂತವಾಗಿವೆ. ದಿನ ನಿತ್ಯ ಪತ್ರಿಕೆಗಳಲ್ಲಿ ಪೂಜೆ, ಹೋಮ, ಜಾತ್ರೆ, ಪವಾಡಗಳ ಕುರಿತ ಸುದ್ದಿಗಳ ಹೊಸ ಹೊಸ ಭಕ್ತಿಯ ರೀತಿಗಳು ಸರ್ವೇಸಾಮಾನ್ಯವಾಗಿವೆ. ಇಂತಹ ಸಂದರ್ಭದಲ್ಲಿ ಈ ಕಾದಂಬರಿ ಅಪ್ರಸ್ತುತವೆನಿಸಲಾರದು ಎಂಬ ನಂಬಿಕೆ, ಭರವಸೆಗಳನ್ನು ಹೊಂದಿದ್ದೇನೆ. ಇಲ್ಲಿನ ಕತೆಗೆ, ಕತೆಯಲ್ಲಿ ಕಾಣುವ ನಂಬಿಕೆ, ಶ್ರದ್ಧೆಗಳಿಗೆ ಒತ್ತಾಸೆ ಕೊಡುತ್ತಿಲ್ಲ. ಕಂಡ ಸತ್ಯವನ್ನು ಕಡೆದಿರಿಸಿದ್ದೇನೆ ನಂಬುವುದೂ ಬಿಡುವುದೂ ಓದುಗರಿಗೆ ಬಿಟ್ಟದ್ದು. ನನ್ನಂತೆ ನೀವೂ ಈ ಕಾದಂಬರಿಯ ಕಥಾ ನಾಯಕನ ಬಗ್ಗೆ ಯೋಚಿಸುವಂತಾದರೆ ನನ್ನ ಶ್ರಮ ಸಾರ್ಥಕ.

ತಮ್ಮವಳು

**ಡಾ.ವಿಜಯಾ ಸುಬ್ಬರಾಜ್**

# ಶಾಲ್ಮಲಿ

## ನನ್ನ ನುಡಿ

ಕೆಲವು ವರ್ಷಗಳ ಹಿಂದೆ ಶಾಶ್ವತಿ ಪ್ರಶಸ್ತಿಗಾಗಿ ಹಿಂದಿ ಲೇಖಕಿಯರ ಕೆಲವು ಕೃತಿಗಳನ್ನು ಪರಿಶೀಲಿಸಬೇಕಾಗಿ ಬಂತು. ಹಾಗೆ ಪರಿಶೀಲಿಸುವಾಗ ನಾಸಿರಾಶರ್ಮಾರ ಈ ಕೃತಿ (ಶಾಲ್ಮಲಿ) ನನ್ನನ್ನು ಬಹುವಾಗಿ ಆಕರ್ಷಿಸಿತು. ಶಾಲ್ಮಲಿಯ ಜಾಗದಲ್ಲಿ ನನ್ನನ್ನು ಕಲ್ಪಿಸಿಕೊಳ್ಳುವಂತಾಯಿತು. ನರೇಶ್, ಶಾಲ್ಮಲಿ ಮುಖಾಮುಖಿಯಾಗುತ್ತಿದ್ದ ಹಲವಾರು ಸನ್ನಿವೇಶಗಳು, ನನ್ನ ಬದುಕಿನಲ್ಲಿನ ಸನ್ನಿವೇಶಗಳ ಪಡಿಯಚ್ಚುಗಳಾಗಿದ್ದುದು ನನಗೆ ದಿಗ್ಭ್ರಮೆಯುಂಟು ಮಾಡಿತು. ಮದುವೆಯಾದ ಎಲ್ಲ ಹೆಂಗಸರ ಜೀವನಾನುಭವಗಳು ಇವೇ ಆಗಿರಬಹುದೇ? ಎಂದು ಆಲೋಚಿಸುವಂತಾಯಿತು. ತುಂಬಾ ಆಪ್ತವಾಗಿ, ಗಂಭೀರವಾಗಿ ಮತ್ತು ಸ್ತ್ರೀ ಚಿಂತನೆಯ ಮತ್ತೊಂದು ಆಯಾಮವಾಗಿ ಕಂಡದ್ದು, ಈ ಕಾದಂಬರಿಯನ್ನು ಅತಿಯಾಗಿ ಮೆಚ್ಚಿಕೊಳ್ಳಲು ಕಾರಣವಾಯಿತು. ಇದನ್ನು ಕನ್ನಡಕ್ಕೆ ಅನುವಾದಿಸಲೇಬೇಕೆಂಬ ತೀವ್ರ ಪ್ರಚೋದನೆಯಾಗಿ, ನಾಸಿರಾಶರ್ಮಾರನ್ನು ಸಂಪರ್ಕಿಸಿ ಅನುಮತಿ ಕೋರಿದೆ. ಗೆಳತಿ ನಾಸಿರಾಶರ್ಮಾ ಪ್ರೀತಿಯಿಂದ ಒಪ್ಪಿಗೆ ತಿಳಿಸಿದರು. ಕೂಡಲೇ ಅನುವಾದಕ್ಕೆ ತೊಡಗಿ, ಮುಗಿಸಿದ ಮೇಲೆ, ಮೊದಲು ಪ್ರಜಾವಾಣಿ ಆಫೀಸಿಗೆ ಕಳಿಸಿದೆ. ಬಹಳ ವರ್ಷಗಳಾದರೂ ಹಸ್ತಪ್ರತಿ ಹಾಗೆಯೇ ಅಲ್ಲಿ ಉಳಿದಿತ್ತು. ಆದ್ದರಿಂದ ಅಲ್ಲಿಂದ ಅದನ್ನು ವಾಪಸ್ ಪಡೆದು ತರಂಗಕ್ಕೆ ಕಳಿಸಿದೆ. ಅಲ್ಲೊಂದೆರಡು ವರ್ಷ ಇದ್ದು ನಂತರ ಬೆಳಕು ಕಾಣುವ ಸುಯೋಗ ದೊರಕಿತು. ವ್ಯವಸ್ಥಾಪಕ ಸಂಪಾದಕರಾದ ಸಂಧ್ಯಾಪೈ ಮತ್ತು ತಿಲಕ್‌ನಾಥ ಮಂಜೇಶ್ವರರು 2003 ರಲ್ಲಿ 30 ಕಂತುಗಳಲ್ಲಿ ಧಾರಾವಾಹಿಯಾಗಿ ಪ್ರಕಟಿಸಿ. ಅಪಾರ ಸಂಖ್ಯೆಯ ಓದುಗರನ್ನು, ಓದುಗರ ಮೆಚ್ಚುಗೆಯನ್ನು ಗಳಿಸಿಕೊಟ್ಟರು. ಧಾರಾವಾಹಿಯಾಗಿ ಪ್ರಕಟಿಸಿ ಪ್ರೋತ್ಸಾಹಿಸಿದ 'ತರಂಗ' ಬಳಗಕ್ಕೆ, ಪ್ರತ್ಯೇಕವಾಗಿ ತಿಲಕ್‌ನಾಥ್ ಮಂಜೇಶ್ವರ್ ಮತ್ತು ಸಂಧ್ಯಾ ಎಸ್.ಪೈ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಧಾರಾವಾಹಿಯಾಗಿ ಬಂದ ಈ ಕಾದಂಬರಿಯನ್ನು ಈಗ ಪುಸ್ತಕರೂಪದಲ್ಲಿ ಹೊರತರುತ್ತಿರುವ ಸಿವಿಜಿ ಪ್ರಕಾಶನದ ಚಂದ್ರು ಅವರಿಗೆ ಮತ್ತು ಮುದ್ರಿಸಿ, ಅಂದವಾದ ಮುಖಪುಟವನ್ನು ಒದಗಿಸಿರುವ ಪ್ರಕಾಶನ ಬಳಗಕ್ಕೆ ನನ್ನ ಅನಂತಾನಂತ ಧನ್ಯವಾದಗಳು.

**ಡಾ. ವಿಜಯಾ ಸುಬ್ಬರಾಜ್**

# ಇದೇ ಲೇಖಕಿಯ ಇತರ ಕೃತಿಗಳು

## ಕವನ ಸಂಕಲನಗಳು

೧) ತ್ರಿಶಂಕು
೨) ಏನು ಹೇಳಲಿ ಗೆಳೆಯಾ
೩) ಹಾಡೇನ ಪಾಡೇನ
೪) ಈ ತೆರದ ನಿರೀಕ್ಷೆಯಲ್ಲಿ
೫) ವಸುಂಧರೆಯ ಪ್ರಾಯ
೬) ಸಖ ಬಾ ಸಂಚಾರಕೆ
೭) ಅಕ್ಕನ ವಚನಗಳು (ಇಂಗ್ಲಿಷಿಗೆ ಅನುವಾದ)
೮) ಅಂಬಿಗರ ಚೌಡಯ್ಯ (ಇಂಗ್ಲಿಷಿಗೆ ಅನುವಾದ)
೯) ಪರ್ಷಿಯನ್ ಕವಿತೆಗಳು (ಅಚ್ಚಿನಲ್ಲಿ)

## ಕಾದಂಬರಿಗಳು

೧) ಸೌರಭಸೇತು/ಬುವಿಯಿಂದ ಬಾನಿಗೆ
೨) ಹರಿದತ್ತ ಹರಿವ ಚಿತ್ತ
೩) ತಪ್ಪಿದ ಹೆಜ್ಜೆಗಳು
೪) ನಡುವಯಸ್ಸಿನಲ್ಲಿ (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಶಾಲ್ಮಲಿ (ಹಿಂದಿಯಿಂದ ಕನ್ನಡಕ್ಕೆ)
೬) ಸೂರ್ಯಕಾಂತಿಗಳ ಮಡಿಲಲ್ಲಿ (ಇಂಗ್ಲೀಷಿನಿಂದ)
೭) ಪ್ರಾಣಿಗಳ ಪ್ರಭುತ್ವ (ಇಂಗ್ಲೀಷಿನಿಂದ)

## ಕಥಾ ಸಂಕಲನಗಳು

೧) ಮಾ ನಿಷಾದ
೨) ಅದೇ ಮುಖ
೩) ಕಾಣದ ದಿಕ್ಕಿನತ್ತ
೪) ಲುಷುನ್‌ರ ಎರಡು ನೀಳ್ಗತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಹುಚ್ಚನ ದಿನಚರಿ ಮತ್ತು ಇತರ ಕತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೬) ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯ ನೆಲೆಗಳು
(ಕನ್ನಡ ಕಾವ್ಯಗಳಲ್ಲಿನ ಪ್ರೀತಿ ಸಂದರ್ಭಗಳ ಕಥಾರೂಪಗಳು)
೭) ಕಥಾಂತರಂಗ (ಸಮಗ್ರ ಕತೆಗಳು)

## ಜೀವನ ಚರಿತ್ರೆ

೧) ಮಹಾದೇವಿ ವರ್ಮಾ
೨) ಅಕ್ಕಮಹಾದೇವಿ (ಕನ್ನಡದಿಂದ ಇಂಗ್ಲಿಷ್‌ಗೆ)
೩) ಹರಿಹರನ ಕಾವ್ಯದಲ್ಲಿ ಬಸವಣ್ಣ
೪) ರಾಘವಾಂಕನ ಚಿತ್ರಿಸಿದ ಸಿದ್ಧರಾಮ
೫) ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮಪ್ರಭು
೬) ನಿಜಗುಣ ಶಿವಯೋಗಿ
೭) ಬಾಲಲೀಲಾ ಮಹಾಂತ ಶಿವಯೋಗಿ
೮) ಮಿನುಗಿ ನಲುಗಿದ ಕಲ್ಪನಾ
೯) ಪೊಟ್ಟಿ ಶ್ರೀರಾಮುಲು (ಇಂಗ್ಲಿಷಿನಲ್ಲಿ)

## ನಾಟಕಗಳು

೧) ಪಾಂಚಾಲಿ
೨) ಪಾದ್ರಿಯೊಬ್ಬನ ಕತೆ
೩) ನಗರ ವಧು ಸಾಲವತಿ
೪) ಮತ್ತೊಂದು ಮಹಾಭಾರತ
೫) ಮಿಲನ
೬) ದಂಗೆಯೆದ್ದವಳು
೭) ಪ್ರೇಮ ಸಮಾಧಿ
೮) ಕಟಕಟೆಯಲ್ಲಿ ನಿಂತು (ಅನುವಾದ)
೯) ರಂಗದಂಗಳ (ಸಮಗ್ರ ನಾಟಕಗಳು)

## ಪ್ರವಾಸ ಕಥನ

೧) ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

## ಸಂಶೋಧನೆ – ವಿಮರ್ಶೆ

೧) ಕನ್ನಡದಲ್ಲಿ ಗೀತನಾಟಕಗಳ ಅಧ್ಯಯನ (ಸಂಶೋಧನೆ)
೨) ಸ್ಪಂದನ
೩) ಸಮಾಲೋಚನ
೪) ಅಕ್ಕನ ವಚನಗಳಲ್ಲಿ ಪ್ರತಿಭಟನೆ ಮತ್ತು ಅನುಭಾವ
೫) ಪು.ತಿ.ನ. ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಳು
೬) ಮಂಥನ
೭) ಸಂಸ್ಕೃತಿ ದನಿಗಳು (ಅಂಕಣ ವಿಮರ್ಶೆ)

## ಮಕ್ಕಳ ಸಾಹಿತ್ಯ

೧) ರಾಮಾಯಣ – ಕನ್ನಡ
೨) ರಾಮಾಯಣ – ಕನ್ನಡದಿಂದ ಇಂಗ್ಲಿಷಿಗೆ
೩) ಮಹಾಭಾರತ – ಕನ್ನಡ
೪) ಮಹಾಭಾರತ – ಕನ್ನಡದಿಂದ ಇಂಗ್ಲಿಷಿಗೆ
೫) ಹನುಮಾನ್ (ಅಚ್ಚಿನಲ್ಲಿ)
೬) ಶ್ರೀಕೃಷ್ಣ (ಅಚ್ಚಿನಲ್ಲಿ)
೭) ಪೌರಾಣಿಕ ಏಕಾಂಕಗಳು (ಅಚ್ಚಿನಲ್ಲಿ)
೮) ಬಸವಣ್ಣ
೯) ಪಂಚತಂತ್ರ (ನಾಟಕ ರೂಪಾಂತರ) (ಕನ್ನಡದಲ್ಲಿ)
೧೦) ಪಂಚತಂತ್ರ (ನಾಟಕ ರೂಪಾಂತರ) (ಇಂಗ್ಲಿಷಿನಲ್ಲಿ)
೧೧) ಪುಣ್ಯಕೋಟಿ (ನಾಟಕ)
೧೨) ಕಿಂದರಿಜೋಗಿ (ನಾಟಕ)
೧೩) ಕಾಗಾಯಣ (ನಾಟಕ)

"ಗಂಡು-ಹೆಣ್ಣಿನ ನಡುವಿನ ಘರ್ಷಣೆಗೆ ಅವರಲ್ಲಿನ ವ್ಯತ್ಯಾಸಗಳೇ ಕಾರಣ. ಆದರೆ ಈ ಬಗೆಯ ಘರ್ಷಣೆ ಗಂಡು-ಹೆಣ್ಣಿಗಷ್ಟೇ ಸೀಮಿತವಾಗದೆ ಅದರ ಆಚೆಗೂ ವಿಸ್ತರಿಸುತ್ತದೆ. ಮನುಷ್ಯ ಸ್ವಭಾವದಲ್ಲಿನ ಒಳಿತು ಕೆಡುಕುಗಳ ನಡುವಿನ ಘರ್ಷಣೆಯಾಗಿಯೂ ಪರಿಣಮಿಸುತ್ತದೆ. ಗಾಜು ಮತ್ತು ವಜ್ರದ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಆದರೆ ನೋಡುವುದಕ್ಕೆ ಎರಡೂ ಒಂದೇ ಎಂಬಂತೆ ಕಾಣಿಸುತ್ತವೆ. ಎರಡೂ ಗಾಜಿನ ತುಂಡುಗಳೆಂಬ ಭಾವನೆ ಬರುತ್ತದೆ. ಮನುಷ್ಯ ಕೋಟಿಯ ಸ್ವಭಾವ ಮತ್ತು ಮನುಷ್ಯ ಪ್ರಮಾಣದಲ್ಲಿ ಪರಸ್ಪರ ಭಿನ್ನತೆಗಳಿರುತ್ತವೆ. ಕೇವಲ ಹೆಣ್ಣು-ಗಂಡುಗಳ ಪ್ರಶ್ನೆಗೆ ಸೀಮಿತವಾದುದಲ್ಲ. ಶೋಷಣೆ, ಅತ್ಯಾಚಾರಗಳು ಜಾತಿ, ವರ್ಗಗಳಲ್ಲಿನ ವ್ಯತ್ಯಾಸಗಳಲ್ಲೂ ಅಡಕವಾಗಿವೆ.

ಹೆಣ್ಣೇ ಹೆಣ್ಣಿನ ಮೇಲೆ ಅತ್ಯಾಚಾರ ನಡೆಸಬಹುದು, ಶೋಷಣೆ ಮಾಡಬಹುದು. ಹಾಗೆಯೇ ಒಳಗಾಗಲೂಬಹುದು. ಆದರೆ ಇಂತಹ ಸನ್ನಿವೇಶಗಳು ಅಪರೂಪವಾಗಿ ಕಣ್ಣಿಗೆ ಬೀಳುತ್ತವೆ. ಯಾಕೆಂದರೆ ಅವಳ ಕೈಗೆ ಅಧಿಕಾರ ಬರುವುದೇ ಎಂದೋ ಒಮ್ಮೊಮ್ಮೆ!"

(ಶಾಲ್ಮಲಿ - ಕಾದಂಬರಿ)


ISBN-978-81-921226-0-1

₹ 400/-



ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು